# ಸಾಧನ ದೀಪಿಕಾ



ಗುರುಸಾರ್ವಭೌಮ
ಶ್ರೀ ರಾಘವೇಂದ್ರತೀರ್ಥ ಪ್ರತಿಷ್ಠಾನಂ
ಧಾರವಾಡ



**ಶ್ರೀ ಸುಬುಧೇಂದ್ರತೀರ್ಥರು**

**ಶ್ರೀ ರಾಘವೇಂದ್ರಸ್ವಾಮಿ ಮಠ**



**ಶ್ರೀ ಸತ್ಯಾತ್ಮತೀರ್ಥರು**

**ಶ್ರೀ ಉತ್ತರಾದಿಮಠ**



**ಶ್ರೀ ವಿದ್ಯಾಸಾಗರ ಮಾಧವತೀರ್ಥರು**

**ಶ್ರೀ ಮಾಧವತೀ[illegible]ರ ಮಠ**



**ಶ್ರೀ ಸುಶಮೀಂದ್ರ ತೀರ್ಥರು**
ಶ್ರೀ ರಾಘವೇಂದ್ರಸ್ವಾಮಿ ಮಠ



**ಶ್ರೀ ವಿದ್ಯಾವಾಚಸ್ಪತಿ ತೀರ್ಥರು**
ಶ್ರೀ ವ್ಯಾಸರಾಜ ಮಠ



**ಶ್ರೀ ಸುವಿದ್ಯೇಂದ್ರತೀರ್ಥರು**
ಶ್ರೀ ರಾಘವೇಂದ್ರಸ್ವಾಮಿ ಮಠ



**ಶ್ರೀ ಸುಯತೀಂದ್ರತೀರ್ಥರು**
ಶ್ರೀ ರಾಘವೇಂದ್ರಸ್ವಾಮಿ ಮಠ



**ಶ್ರೀ ವಿಜ್ಞಾನನಿಧಿತೀರ್ಥರು**
ಶ್ರೀ ಶ್ರೀಪಾದರಾಜ ಮಠ



**ಶ್ರೀ ಕೇಶವನಿಧಿ ತೀರ್ಥರು**
ಶ್ರೀ ಶ್ರೀಪಾದರಾಜ ಮಠ



**ಶ್ರೀ ವಿದ್ಯಾಮಾನ್ಯತೀರ್ಥರು**
ಶ್ರೀ ಫಲಿಮಾರು ಹಾಗೂ ಶ್ರೀ ಭಂಡಾರಕೇರಿ ಮಠ



**ಶ್ರೀ ವಿಶ್ವೋತ್ತಮತೀರ್ಥರು**
ಶ್ರೀ ಸೋದೆ ವಾದಿರಾಜ ಮಠ



ವೈ.ವಾ.ತೀ.ರೂ. ವಿದ್ಯಾರತ್ನ ರಾಘವೇಂದ್ರಾಚಾರ್ಯ ಸ್ವಾ. ಪಂಚಮುಖಿ ಮತ್ತು
ವೈ.ವಾ.ಕುಂ.ಸೌ. ಮಾತೋಶ್ರೀ ಕಮಲಾಬಾಯಿ ರಾ. ಪಂಚಮುಖಿ



ವೈ.ವಾ. ಅನಂತಾಚಾರ್ಯ ವೆಂ. ಕಿನ್ನಾಳ ಮತ್ತು
ವೈ.ವಾ.ಕುಂ.ಸೌ. ಶಕುಂತಲಾಬಾಯಿ ಅ. ಕಿನ್ನಾಳ





**ಶ್ರೀ ಆನಂದತೀರ್ಥಾಚಾರ್ಯ ರಾ. ಪಂಚಮುಖಿ**

(ಸಾಧನದೀಪಿಕಾದ ಸಂಪಾದಕರು)

ಮತ್ತು

**ಶ್ರೀಮತಿ ಭಾಗ್ಯಲಕ್ಷ್ಮೀ ಆ. ಪಂಚಮುಖಿ**

॥ ಶ್ರೀ ॥

# ಮೊದಲ ನುಡಿ

**(ಸುಧಾರಿತ ದ್ವಿತೀಯ ಆವೃತ್ತಿಗೆ )**

ಪ್ರತಿಷ್ಠಿತ ಮನೆತನಗಳಲ್ಲಿ ಹಿರಿಯರು ಪ್ರತಿದಿನ ಅನ್ನುತ್ತಲಿರುವ ಪ್ರಾತಃ ಸ್ತೋತ್ರಗಳನ್ನು ಮತ್ತು ಹಾಡು ಸುಳಾದಿಗಳನ್ನು ಸಂಗ್ರಹಿಸಿ ಪ್ರಕಟಿಸಬೇಕೆಂದು ಬಹುದಿನಗಳ ಯೋಜನೆಯಾಗಿತ್ತು. ಹೀಗೆ ಒಂದೆಡೆ ಸೇರಿಸಿದ್ದನ್ನು ನೋಡಿದರೆ ನಮಗೂ ನಮ್ಮ ಮಕ್ಕಳಿಗೂ ಹಿಂದಿನ ಸತ್ಪರಂಪರೆಯ ಅರಿವಾಗುವುದು. ಆ ಸ್ತೋತ್ರಗಳನ್ನು ಹಾಗೂ ಹಾಡುಗಳನ್ನು ಯಥಾವಕಾಶ ಯೋಗ್ಯ ಸಮಯದಲ್ಲಿ ಪಠಿಸಿದರೆ ಹಿರಿಯರ ಸತ್ಪರಂಪರೆಯನ್ನು ವಿಚ್ಛೇದವಿಲ್ಲದೇ ಮುಂದುವರೆಸಿಕೊಂಡು ಹೋದ ಧನ್ಯತೆಗೂ ಹಾಗೂ ಹಿರಿಯರ ಕೃಪಾಶೀರ್ವಾದಗಳಿಗೂ ಪಾತ್ರರಾಗುತ್ತೇವೆ.

ಟಿ.ವ್ಹಿ. ಹಾಗೂ ವ್ಹಿ.ಸಿ.ಆರ್. ಗಳೆಂಬುವು ಈಗ ಎಲ್ಲ ಪ್ರತಿಷ್ಠಿತ ಮನೆಗಳಲ್ಲಿ ಅತ್ಯವಶ್ಯವಾದ ಅನಿವಾರ್ಯ ವಸ್ತುಗಳಾಗಿವೆ. ಕಲಿಯೇ ಈ ರೂಪದಿಂದ ಮನೆ ಮಠ ಮಂದಿರಗಳಲ್ಲಿ ಪ್ರವೇಶಿಸಿ ಜನರಂಜನೆ ಮನರಂಜನೆ ಮಾಡುತ್ತ ಆಚಾರ ವಿಚಾರಗಳನ್ನು ಕಲುಷಿತಗೊಳಿಸುತ್ತಲಿದ್ದಾನೆ. ಅನೂಚಾನವಾಗಿ ನಡೆಯುತ್ತಲಿದ್ದ ಅನುಷ್ಠಾನಗಳನ್ನು ವಿಚ್ಛೇದಗೊಳಿಸುತ್ತಲಿದ್ದಾನೆ. ಸಂಧ್ಯಾವಂದನೆ, ದೇವಪೂಜೆ, ಗೌರೀಪೂಜೆ, ಜಪತಪಾನುಷ್ಠಾನಗಳು ಏಕಾಗ್ರಚಿತ್ತದಿಂದ ನಡೆಯದಿರುವಂತೆ ಶತಪ್ರಯತ್ನ ಮಾಡುತ್ತಲಿದ್ದಾನೆ. ಟಿ.ವ್ಹಿ. ವೊದಲಾದವು ಇಲ್ಲದಿದ್ದ ಕಾಲಕ್ಕೆ ಮನೆಯಲ್ಲಿದ್ದ ರೇಡಿಯೋ ಹಾಡುಗಳನ್ನು ಕೇಳುವ ಮಾತ್ರದಿಂದಲೇ ವಿಚಲಿತವಾಗುತ್ತಲಿದ್ದ ಮನಸ್ಸಿನ ಮೇಲೆ ಈಗ ದೇವರ ಮನೆಯ ಹತ್ತಿರವೇ ಬಂದು ಕುಳಿತ ಟಿ.ವ್ಹಿ. ಯಲ್ಲಿಯ ಕಾರ್ಯಕ್ರಮಗಳಿಂದ ಅನುಷ್ಠಾನದ ಸಮಯದಲ್ಲಿ ವಿಶೇಷವಾದ ಆಘಾತಗಳುಂಟಾಗುತ್ತಿವೆ. ಹಿಂದಿನ ಕಾಲದ ಶಾಂತ ವಾತಾವರಣದಲ್ಲಿ ನಡೆಯುತ್ತಿದ್ದ ಸದಾಚಾರಾನುಷ್ಠಾನದ ಅನುಭವವೇ ಇಲ್ಲದ ನಮ್ಮ ಮಕ್ಕಳಿಗೆ ಟಿ.ವ್ಹಿ. ಕಾರ್ಯಕ್ರಮಗಳನ್ನು ತಪ್ಪದೇ ನೋಡುವುದೇ ಸದಾಚಾರವಾಗಿದೆ. ಇಂಥ ಒಂದು ಆತಂಕದ ಸಂಧಿಕಾಲದಲ್ಲಿ ನಮ್ಮ ಮಕ್ಕಳಿಗೆ ಹಿಂದಿನ ಸತ್ಪರಂಪರೆಯ ಅರಿವು ಮಾಡಿಕೊಡುವುದು ಮನೆಯಲ್ಲಿಯ ಹಿರಿಯರ ಆದ್ಯ ಕರ್ತವ್ಯವಾಗಿದೆ. ಮನರಂಜನೆಯ ಕಾರ್ಯಕ್ರಮಗಳಿಂದ , ವಿಹಿತವಾದ ಆಚಾರ ವಿಚಾರಗಳು ಲುಪ್ತವಾಗಿ ಮನಸ್ಸಿನ ಶಾಂತಿಯು ಕದಡುವದೆಂಬುದನ್ನೂ ಮತ್ತು ಸದಾಚಾರಗಳ ಅನುಷ್ಠಾನಗಳಿಂದ ಶಾಂತಿಯು ಸ್ಥಿರಗೊಳ್ಳುವದೆಂಬುದನ್ನೂ ನಮ್ಮ ಹಿರಿಯರು ಮಕ್ಕಳಿಗೆ ಅನುಭವ ವೇದ್ಯವಾಗುವಂತೆ ಮಾಡಬೇಕಾಗಿದೆ. ಇದಕ್ಕಾಗಿಯೇ ಹಿರಿಯರಿಂದ ಬಂದ ಸತ್ಪರಂಪರೆಯ ಕೆಲ ಭಾಗವನ್ನು ಇಲ್ಲಿ ಪ್ರಕಟಿಸಲಾಗಿದ್ದು ಇದನ್ನು ನಾವೆಲ್ಲರೂ ಅನುಷ್ಠಾನದಲ್ಲಿ ತರಬೇಕು. ಈ ದಿಶೆಯಲ್ಲಿ ನಡೆಸಿದ ಪ್ರಯತ್ನದ ಫಲವಾಗಿಯೇ ೧೯೯೧ ರಲ್ಲಿ ಸಾಧನ ದೀಪಿಕಾ ಮೊದಲು ಬೆಳಕಿಗೆ ಬಂದಿತು.

**'ಸಾಧನ ದೀಪಿಕಾ'** ದಲ್ಲಿ ಈಗ ಅನೇಕ ಉಪಯುಕ್ತ ವಿಷಯಗಳನ್ನು ಸೇರಿಸಿ ಸುಧಾರಿಸಲಾಗಿದೆ. ಈ ಸುಧಾರಿತ ಆವೃತ್ತಿಯಲ್ಲಿ **೧) ಆಹ್ನೀಕ ಪ್ರಕರಣ ೨) ನಿತ್ಯಸ್ತೋತ್ರ ಪ್ರಕರಣ ೩) ಸಾಪ್ತಾಹಿಕಸ್ತೋತ್ರ ಪ್ರಕರಣ ೪) ಪಾರಾಯಣ ಪ್ರಕರಣ ೫) ಮಾಸಧರ್ಮಪ್ರಕರಣ ೬) ಗುರೂಪದೇಶ ಪ್ರಕರಣ ೭) ಮಂಗಳ ಪ್ರಕರಣ** ಎಂದು ಒಟ್ಟು ಏಳು ಪ್ರಕರಣಗಳಿವೆ. ಕೆಲವು ಪ್ರಕರಣಗಳ ಪ್ರಾರಂಭದಲ್ಲಿ ಆ ಪ್ರಕರಣದ ಉದ್ದೇಶ ಹಾಗೂ ವಿಷಯ ಪರಿಚಯವನ್ನು ಸಂಕ್ಷೇಪದಲ್ಲಿ ಮಾಡಿಕೊಡಲಾಗಿದೆ.

ಸ್ತ್ರೀಯರಿಗೆ ಹೆಚ್ಚು ಉಪಯೋಗವಾಗುವಂತೆ ಇಲ್ಲಿ ವಿಷಯಗಳನ್ನು ಸಂಗ್ರಹಿಸಿಕೊಡಲಾಗಿದೆ. ಧಾರವಾಡ, ಬಳ್ಳಾರಿ, ಬೆಂಗಳೂರು, ಮುಂಬೈ, ರಾಯಚೂರು ಮುಂತಾದ ಊರುಗಳಿಗೆ ಹೋಗಿ

ಈ ಗ್ರಂಥದಲ್ಲಿಯ ವಿಷಯಗಳ ಸಂಗ್ರಹ, ಸಂಶೋಧನೆ ಹಾಗೂ ಮುದ್ರಣದಲ್ಲಿ ಸಹಕರಿಸಿದ, ಎಲ್ಲ ಹಿರಿ-ಕಿರಿಯರಿಗೆ ನಮ್ಮ ಕೃತಜ್ಞತೆಗಳು. ಗ್ರಂಥ ಪ್ರಕಾಶನ ರೂಪವಾದ ಹಿರಿಯರ ಸೇವೆಗೆ ಧನದಾನ ಮಾಡಿದವರು ಪುಣ್ಯ ಭಾಗಿಗಳಾಗಿರುವಲ್ಲಿ ಸಂದೇಹವಿಲ್ಲ. ಅವರೆಲ್ಲರಿಗೂ ಕೃತಜ್ಞತೆಗಳು.

ಈ ಕೃತಿಯಿಂದ ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಕುಲಸ್ವಾಮಿ ಶ್ರೀಲಕ್ಷ್ಮೀವೆಂಕಟೇಶ್ವರನು ಪ್ರಸನ್ನನಾಗಲಿ ಮತ್ತು ಆರ್ಯಜನರೆಲ್ಲರೂ ಪ್ರೀತರಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಧಾತೃ ಸಂವತ್ಸರ
ಜ್ಯೇಷ್ಠ ಶು. ೫
೨೨-೫-೧೯೯೬

ಆ.ರಾ. ಪಂಚಮುಖಿ
(ಸಂಗ್ರಾಹಕ ಹಾಗೂ ಸಂಶೋಧಕ)
ಕಾರ್ಯದರ್ಶಿ
ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥ ಪ್ರತಿಷ್ಠಾನಂ
ಧಾರವಾಡ.

## ವಿಷಯಾನುಕ್ರಮಣಿಕಾ

(ಕಂಸಿನಲ್ಲಿ ಪುಟ ಸಂಖ್ಯೆಯನ್ನು ಕೊಡಲಾಗಿದೆ.)

**೧. ಆಹ್ನೀಕ ಪ್ರಕರಣ (೧)**

ಹರಿಭಕ್ತಿಸಾರ (೧೬೩),ಶ್ರೀಧನ್ವಂತ್ರೀ ದೇವರ ಸ್ತೋತ್ರ (೧೭೩), ಶ್ರೀಕಪಿಲ ದೇವರ ಸ್ತೋತ್ರ (೧೭೪),ಶ್ರೀಹರಿಸ್ತೋತ್ರ ಸುಳಾದಿ (೧೭೫), ಗೋಪೀಗೀತಂ (೧೭೭),ಗೋಪಿಕಾಗೀತೆಗಳು (೧೭೮),ಶ್ರೀವಾದಿರಾಜಕೃತ ಕೃಷ್ಣಾಷ್ಟಕಂ (೧೭೯),

ಭಾಗ -೨ - ೧)ಶ್ರೀವಾದಿರಾಜ ಕೃತ ಸುಂದರಕಾಂಡ (೧೮೧), ೨) ಶ್ರೀಪ್ರಸನ್ನ ಶ್ರೀನಿವಾಸದಾಸ ಕೃತ ಸುಂದರ ಕಾಂಡ (೧೮೨), ೩)ಶ್ರೀಗುರುಗೋವಿಂದದಾಸ ಕೃತ ಸುಂದರಕಾಂಡ (೧೮೪), ೪) ಶ್ರೀವಿಜಯದಾಸಕೃತ ಶ್ರೀಸುಮಧ್ವ ವಿಜಯ ಸುಳಾದಿ (೧೮೮), ೫) ಕನ್ನಡ ಶ್ರೀಅಣುಮಧ್ವ ವಿಜಯ(೧೯೧), ೬) ಶ್ರೀಬಾದರಾಯಣ ವಿಠಲ ಕೃತ ಅವತಾರತ್ರಯ ಮುಖ್ಯಪ್ರಾಣ ಸ್ತುತಿ (೧೯೭), ೭) ಶ್ರೀಪ್ರಸನ್ನ ಶ್ರೀನಿವಾಸ ದಾಸಕೃತ ಶ್ರೀಗ್ರಂಥಮಾಲಿಕಾ ಮಧ್ವಸ್ತೋತ್ರ (೧೯೮), ೮) ಶ್ರೀ ವಾದಿರಾಜ ವಿರಚಿತ ಲಘು ವಾಯುಸ್ತುತಿ (೨೦೦), ಶ್ರೀಸೌಭಾಗ್ಯ ಸಪ್ತತ್ರಿಂಶತಿ (೨೦೧).

ಭಾಗ ೩ - ಶ್ರೀವೇದವ್ಯಾಸ ವಿರಚಿತ ನವಗ್ರಹ ಸ್ತೋತ್ರ (೨೦೪), ಶ್ರೀವಾದಿರಾಜ ವಿರಚಿತ ನವಗ್ರಹ ಸ್ತೋತ್ರ (೨೦೪), (ನವ) ಗ್ರಹ ಸ್ತೋತ್ರ (ತತ್ವ ಸುವ್ವಾಲಿ) (೨೦೫), ಸಂಧಿಮಾಲಾ ಸಂಧಿ (೨೦೬).

ಭಾಗ - ೪ - ಶ್ರೀ ವಾದಿರಾಜಕೃತ ರುಕ್ಮಿಣಿಯ ಓಲೆ (೨೦೭), ಶ್ರೀವಾದಿರಾಜ ಕೃತ ಶ್ರೀಶ್ರೀನಿವಾಸ ಕಲ್ಯಾಣ (೨೧೧),ಮಂಗಳ ಹಾಡುಗಳು (೨೧೨), ಶ್ರೀಪುರಂದರದಾಸ ಕೃತ ಶ್ರೀಶ್ರೀನಿವಾಸ ಕಲ್ಯಾಣ (೨೧೩), ಶ್ರೀಪ್ರಸನ್ನ ಶ್ರೀನಿವಾಸದಾಸಕೃತ ಶ್ರೀಶ್ರೀನಿವಾಸ ಕಲ್ಯಾಣ (೨೧೪), ಶ್ರೀಏರೀ ವೆಂಕಟೇಶದಾಸ ಕೃತ ಶ್ರೀನಿವಾಸ ಕಲ್ಯಾಣದ ಫಲಸ್ತುತಿ (೨೧೬), ಶ್ರೀವಾದಿರಾಜಕೃತ ಶ್ರೀಲಕ್ಷ್ಮೀಶೋಭಾನ ಹಾಡು (೨೧೭), ಉರುಟಣೆ ಹಾಡು (೨೨೩), ಶ್ರೀಗುರುಜಗನ್ನಾಥದಾಸ ಕೃತ ಶ್ರೀವೆಂಕಟೇಶ ಸ್ತವರಾಜ ಮತ್ತು ಶ್ರೀಲಕ್ಷ್ಮೀಹೃದಯ(೨೨೪), ಶ್ರೀಗುರುವಿಜಯದಾಸ ಕೃತ ವೈವಾಹ ಸುಳಾದಿ (೨೩೭), ಶ್ರೀವೇದವ್ಯಾಸರ ಕೀರ್ತನೆ (೨೪೨), ಮಂತ್ರಗಳು (೨೪೩), ಶ್ರೀವಿಜಯೀಂದ್ರತೀರ್ಥರ ಪಾಪವಿಮೋಚನಾಸ್ತೋತ್ರದ ಕನ್ನಡ ಪದ್ಯಾನುವಾದ (೨೪೫).

೫. ಮಾಸಧರ್ಮ ಮತ್ತು ವ್ರತ ಪ್ರಕರಣ (೨೪೮)

ಭಾಗ ಅ : ಮಾಸಧರ್ಮಗಳು - ಚೈತ್ರದಿಂದ ಫಾಲ್ಗುಣಮಾಸದ ವರೆಗಿನ ೧೨ ಮಾಸಗಳಲ್ಲಿ ಪ್ರತಿ ತಿಂಗಳು ಸ್ತ್ರೀ-ಪುರುಷರು ಆಚರಿಸಬೇಕಾದ ಧರ್ಮಗಳ ಪರಿಚಯ (೨೪೮).

ಭಾಗ ಆ : ವ್ರತಗಳು - ೧) ಏಕಾದಶೀ ವ್ರತ (೨೭೨). ೨) ಚಾತುರ್ಮಾಸ್ಯ ವ್ರತಗಳು - ದಾನ, ಸಂಕಲ್ಪ, ಸಮರ್ಪಣೆ ಹಾಗೂ ವಿಶೇಷ ಧರ್ಮಗಳು (೨೭೪). ೩) ಶ್ರೀಕೃಷ್ಣ ಜಯಂತೀ ವ್ರತ (೨೭೫), ಶ್ರೀಕೃಷ್ಣಾಷ್ಟೋತ್ತರ ಶತನಾಮಸ್ತೋತ್ರ (೨೭೭), ಶ್ರೀಕೃಷ್ಣ ಪ್ರಾರ್ಥನಾಮಂತ್ರ (೨೭೮). ೪) ಶ್ರೀವಿಷ್ಣುಪಂಚಕ ವ್ರತ ಮತ್ತು ಅರ್ಘ್ಯ (೨೭೯), ೫) ಧನುರ್ಮಾಸವ್ರತ (೨೮೧), ಭದ್ರಲಕ್ಷ್ಮೀಸ್ತೋತ್ರ(೨೮೧). ೬)ಅಧಿಕ ಮಾಸ ವ್ರತ (೨೮೩), ಅಧಿಕ ಮಾಸದ ಮುಖ್ಯ ಕರ್ತವ್ಯ (೨೮೩), ಅಪೂಪ ದಾನವನ್ನು ಕೊಡುವಾಗ ಹೇಳಬೇಕಾದ ಮಂತ್ರ (೨೮೪), ಅಪೂಪ ದಾನದಲ್ಲಿ

# ಪದಗಳ ಅನುಕ್ರಮಣಿಕಾ

## ಸುಳಾದಿಗಳ ಅನುಕ್ರಮಣಿಕಾ

## ಸಂಸ್ಕೃತ ಸ್ತೋತ್ರಗಳು

॥ ಶ್ರೀಃ ॥

# ಸಾಧನ ದೀಪಿಕಾ

## ೧. ಆಹ್ನೀಕ ಪ್ರಕರಣ

ಈ ಪ್ರಕರಣದಲ್ಲಿ, ಸ್ತ್ರೀಯರು ಬೆಳಿಗ್ಗೆ ಎದ್ದು ರಾತ್ರಿ ಮಲಗುವ ವರೆಗೆ ಮಾಡಬೇಕಾದ ನಿತ್ಯದ ೧೨ ಆಹ್ನಿಕ ಕರ್ಮಗಳ ಬಗ್ಗೆ ವಿವರಿಸಲಾಗಿದೆ. **"ಪ್ರಾತಃಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂತತಃ । ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥"** - ಅಂದರೆ "ಹೇ ಜಗನ್ನಾಥ ಶ್ರೀಹರೇ ! ಪ್ರಾತಃಕಾಲದಿಂದ ಪ್ರಾರಂಭಿಸಿ ರಾತ್ರಿಯ ವರೆಗೆ ಮತ್ತು ರಾತ್ರಿಯಿಂದ ಬೆಳಗಿನ ವರೆಗೆ ನಾನು ಮಾಡುವ ಕರ್ಮಗಳೆಲ್ಲವೂ ನಿನ್ನ ಪೂಜಾರೂಪವಾಗಿರಲಿ" ಎಂದು ಪ್ರಾರ್ಥಿಸುತ್ತಾ ಈ ಆಹ್ನಿಕ ಕರ್ಮಗಳನ್ನು ಆಚರಿಸಬೇಕು.

### ಆಹ್ನಿಕ ೧ - ಜಾಗರಣೆ, ವಿಷ್ಣುಸ್ಮರಣೆ, ಕರದರ್ಶನ.

ನಿತ್ಯಬೆಳಿಗ್ಗೆ ಬೇಕ್ಕೆ ಎದ್ದು ದೇವರಿಗೆ ಕೈಮುಗಿದು, **"ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥"** ಎಂದು ಎಂಟು ಸಲ ಹೇಳಿ ವಿಷ್ಣುವನ್ನು ಸ್ಮರಿಸಿ ನಂತರ ಕರದರ್ಶನ ಮಾಡುತ್ತ ಕರದರ್ಶನ ಮಂತ್ರವನ್ನು ಹೇಳಬೇಕು.

**ಕರದರ್ಶನ ಮಂತ್ರ :** **ಕರಾಗ್ರೇ ವಸತೇ ಲಕ್ಷ್ಮೀ : ಕರಮಧ್ಯೇ ಸರಸ್ವತೀ।**
**ಕರಮೂಲೇ ಸದಾ ಗೌರೀ ಪ್ರಭಾತೇ ಕರದರ್ಶನಮ್ ॥**

### ಆಹ್ನಿಕ ೨ - ಮುಖಪ್ರಕ್ಷಾಲನ, ದೀಪ ಹಚ್ಚುವದು.

ಕರದರ್ಶನದ ಅನಂತರ ಮುಖಪ್ರಕ್ಷಾಲನ ಮಾಡಿಕೊಂಡು ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ನಂತರ ದೀಪಮಂತ್ರವನ್ನು ಪಠಿಸುತ್ತ ದೇವರ ಮುಂದೆ ದೀಪವನ್ನು ಹಚ್ಚಬೇಕು.

ದೀಪಮಂತ್ರ : ಭೂದೇವಿಯರು ಪ್ರಣತಿಯೊಳಗೆ, ಲಕ್ಷ್ಮೀದೇವಿಯರು ಎಣ್ಣೆಯೊಳಗೆ, ಶೇಷದೇವರು ಬತ್ತಿಯೊಳಗೆ, ವಾಯುದೇವರು ಪ್ರಕಾಶದೊಳಗೆ. ರುದ್ರ ದೇವರು ಕಪ್ಪಿನೊಳಗೆ. ಶಚೀಪತಿ ಇಂದ್ರ ದೇವರು ದೀಪಕ್ಕೆ ಅಭಿಮಾನಿ. ಇದು ಅನಂತ ಕಲ್ಯಾಣ ಗುಣಪೂರ್ಣನಾದಂಥ ಅನಂತೋತ್ತಮನೂ ಬ್ರಹ್ಮಾಂಡೋತ್ಪಾದಕನೂ ಆದಂಥ ಶ್ರೀಲಕ್ಷ್ಮೀನಾರಾಯಣನ ದೀಪಾ. ಇಂಥಾ ದೀಪ ಹಚ್ಚಿದರೆ ಬೆಳಕು, ಹಚ್ಚದಿದ್ದರೆ ಕತ್ತಲೆ ಎಂಬುವಂಥಾದ್ದು ಇಲ್ಲ. ಲಕ್ಷ್ಮೀನಾರಾಯಣ ನೀನು ನಮ್ಮನ್ನು ನಿಮಿತ್ತ ಮಾತ್ರಕ್ಕಾಗಿ ಇಟ್ಟಿದ್ದಿ. ನಿಮ್ಮ ಬೆಳಕೇ ಬೆಳಕು.

ನಿಮ್ಮ ಪ್ರಕಾಶವೇ ಕೋಟಿ ಸೂರ್ಯ ಪ್ರಕಾಶ. ನಿಮ್ಮ ಕಾಂತಿಯೇ ಕಾಂತಿ. ಎನ್ನ ಹೃದಯದಲ್ಲಿ ಅಜ್ಞಾನವೆಂಬ ಅಂಧಕಾರ ತುಂಬಿದೆ. ಈ ಅಜ್ಞಾನಾಂಧಕಾರವನ್ನು ಕಳೆದು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕೊಟ್ಟು ರಕ್ಷಿಸಬೇಕೆಂದು ಹಚ್ಚುವಂಥಾ ದೀಪ. ಅಗ್ನ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಹರಿಣೀಪತಿ ಪರಶುರಾಮಾಯ ನಮಃ ॥

**॥ ಪತ್ಯಂತರ್ಗತ ಗುರ್ವಂತರ್ಗತ ಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥**

**ಆಹ್ನಿಕ ೩ - ದೇವರ ಧೂಳಿದರ್ಶನ :**

ದೀಪವನ್ನು ಹಚ್ಚಿದ ಮೇಲೆ ಧೂಳಿದರ್ಶನಸ್ತೋತ್ರವನ್ನು ಪಠಿಸುತ್ತ ದೇವರ ಧೂಳಿದರ್ಶನವನ್ನು ಮಾಡಿಕೊಳ್ಳಬೇಕು. ದೇವರ ಪ್ರತಿಮೆ ಅಥವಾ ಫೋಟೋದಲ್ಲಿ ದೇವರ ಪಾದಗಳಿಂದ ಶಿರದ ವರೆಗಿನ ಸರ್ವಾಂಗಗಳನ್ನು ನೋಡುತ್ತ ನಮಿಸಬೇಕು.

**ಧೂಳಿದರ್ಶನ ಸ್ತೋತ್ರ :** ಜಯವಿಜಯರೇ ಸನಕ ಸನಂದಾದಿಗಳೇ ವೈಕುಂಠದಲ್ಲಿದ್ದಂತಹ ನಾರಾಯಣ ಮೂರ್ತಿ ಅಲ್ಲಿದ್ದಂತಹ ವಾಸುದೇವ ಮೂರ್ತಿಯ ದರ್ಶನಕ್ಕೆ ಹೋಗತೀನಿ ಹಾದೀ ಬಿಡಿರಿ.

ಧೂಳಿದರ್ಶನಂ ದುಃಖನಾಶನಂ । ಪಾದದರ್ಶನಂ ಪಾಪನಾಶನಂ । ಕಟಿ- ದರ್ಶನಂ ಕಾಮನಾಶನಂ । ನಾಭಿದರ್ಶನಂ ನರಕನಾಶನಂ । ಹೃದಯದರ್ಶನಂ ಹೃದ್ರೋಗನಾಶನಂ । ಕಂಠದರ್ಶನಂ ವೈಕುಂಠಸಾಧನಂ । ಮುಖದರ್ಶನಂ ಮೋಕ್ಷಸಾಧನಂ । ಶಿರೋದರ್ಶನಂ ಅಮೃತಪ್ರಾಶನಂ । ಕಿರೀಟದರ್ಶನಂ ಪುನರ್ಜನ್ಮನಾಶನಂ । ಸರ್ವಾಂಗದರ್ಶನಂ ಪರಲೋಕಸಾಧನಂ ॥

**ಮಾತಾ ಚ ಕಮಲಾದೇವೀ ಪಿತಾ ದೇವೋ ಜನಾರ್ದನಃ ।**
**ಬಾಂಧವಾಃ ವಿಷ್ಣುಭಕ್ತಾಶ್ಚ ಸ್ವದೇಶೋ ಭುವನತ್ರಯಮ್ ॥**

ಭಾಗೀರಥೀ ಪಡೆದಂಥ ಪಾದಪದ್ಮವ ಕಂಡೆ । ಬ್ರಹ್ಮಾಂಡ ಧರಿಸಿದಂಥಾ ನಾಭಿಕಮಲವ ಕಂಡೆ । ಉಟ್ಟ ಪೀತಾಂಬರವ ಕಂಡೆ । ತೊಟ್ಟ ತೊಡಿಗೆಯ ಕಂಡೆ। ಶಂಖಚಕ್ರವ ಕಂಡೆ । ಗದಾಪದ್ಮವ ಕಂಡೆ । ಮುತ್ತಿನ ಹಾರವ ಕಂಡೆ । ಮುತ್ತಿನ ಗದ್ದುಗೆಯ ಮೇಲೆ ರುಕ್ಮಿಣಿ ಸತ್ಯಭಾಮೆಯರ ಸಹಿತ ಶ್ರೀಕೃಷ್ಣದೇವರು ಕೂತದ್ದು ಕಂಡೆ । ಶ್ರೀದೇವಿ ಭೂದೇವಿಯರು ಪಾದ ಒತ್ತುವದ ಕಂಡೆ । ಭಾರತೀ ಸರಸ್ವತೀದೇವಿಯರು ಚಾಮರ ಹಾಕುವದ ಕಂಡೆ । ಅಷ್ಟಮಹಿಷಿಯರು ಗೀತಾ ಪಠಿಸುವದ ಕಂಡೆ । ತುಂಬುರು ನಾರದರರು ವೀಣಾ ಮೀಟುವುದ ಕಂಡೆ । ಗಂಧರ್ವರು ಗಾಯನ ಮಾಡುವದ ಕಂಡೆ । ಮುನಿಗಳು ಸ್ತೋತ್ರ ಮಾಡುವುದ ಕಂಡೆ। ಶ್ರೀಮಧ್ವರಾಯರು ಪೂಜೆ ಮಾಡುವುದ ಕಂಡೆ । ಕಂಡೆ ನಾ ಕರುಣಾಕರನ ಕಂಡು ನಾ ಧನ್ಯಳಾದೆ **॥ ಇತಿ ಶ್ರೀಧೂಳಿದರ್ಶನಸ್ತೋತ್ರಂ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು ॥**

ಈ ರೀತಿ ಧೂಳಿದರ್ಶನ ಮಾಡಿಕೊಂಡು ದೇವರಿಗೆ ನಮಸ್ಕರಿಸಬೇಕು.

## ಆಹ್ನಿಕ ೪ - ಶೌಚಕರ್ಮ ಮತ್ತು ದಂತಧಾವನ

ದೇವರ ಧೂಳಿದರ್ಶನ ಮಾಡಿಕೊಂಡ ಮೇಲೆ ಶೌಚಕರ್ಮ, ದಂತ-ಧಾವನಗಳನ್ನು ವಿಧಿಪೂರ್ವಕ ಮುಗಿಸಬೇಕು. ದೇವರಿಗೆ ನಮಸ್ಕರಿಸಬೇಕು.

## ಆಹ್ನಿಕ ೫ - ಪ್ರಾತಃಕಾಲದ ಹಾಡುಗಳು

ಶೌಚಕರ್ಮ ಮತ್ತು ದಂತಧಾವನಾದಿಗಳ ನಂತರ ಅವರೋಹಣ ಕ್ರಮದಿಂದ ಉದಯರಾಗದಲ್ಲಿ ಕೆಳಗಿನ ಪ್ರಾತಃಕಾಲದ ಹಾಡುಗಳನ್ನು ಹೇಳಬೇಕು.

### ೧) ದೇವರ ಹಾಡುಗಳು

೧) ರಂಗನಾಯಕಸ್ವಾಮಿ ರಾಜೀವಲೋಚನ ಬೆಳಗಾಯಿತೇಳೆನ್ನುತ । ಅಂಗನೆ ಲಕುಮಿ ತಾ ಪತಿಯನ್ನೆಬ್ಬಿಸಿದಳು ಶೃಂಗಾರದ ನಿದ್ರೆ ಸಾಕೆನ್ನುತ ॥ ಪ॥ ಪಕ್ಷಿರಾಜನು ಬಂದು ಬಾಗಿಲೊಳಗೆ ನಿಂದು । ಅಕ್ಷಿತೆರೆದು ಬೇಗ ಈಕ್ಷಿಸೆಂಬ ॥ ಪಕ್ಷಿಜಾತಿಗಳೆಲ್ಲ ಚಿಲಿಪಿಲಿಗುಟ್ಟುತ । ಸೂಕ್ಷ್ಮದಲಿ ನಿನ್ನನು ಸ್ಮರಿಸುವುವೊ ಕೃಷ್ಣ ॥೧॥ ಸನಕ - ಸನಂದನ-ಸನತ್ಸುಜಾತರು ಬಂದು । ವಿನಯದಿ ಕೈಮುಗಿದು ಓಲೈಪರು ॥ ಘನ ಶುಕ - ಶೌನಕ - ವ್ಯಾಸ - ವಾಲ್ಮೀಕರು । ನೆನೆದು ಕೊಂಡಾಡುವರೊ ಹರಿಯೇ॥೨॥ ಸುರರು ಕಿನ್ನರರು ಕಿಂಪುರುಷರು ಉರಗರು । ಪರಿಪರಿಯಲಿ ನಿನ್ನ ಸ್ಮರಿಸುವರು ॥ ಅರುಣನು ಬಂದುದಯಾಚಲದಲಿ ನಿಂದ । ಕಿರಣ ತೋರುವ ಭಾಸ್ಕರನು ಶ್ರೀಹರಿಯೇ ॥ ೩॥ ಪದುಮನಾಭನೆ ನಿನ್ನ ನಾಮಾಮೃತವನು । ಪದುಮಾಕ್ಷಿಯರು ತಮ್ಮ ಮನೆಯೊಳಗೆ॥ ಉದಯದೊಳೆದ್ದು ಸವಿದಾಡುತ ಪಾಡುತ । ದಧಿಯ ಕಡೆವರೇಳು ಮಧುಸೂದನ ಕೃಷ್ಣ ॥೪॥ ಮುರಮಥನನೆ ನಿನ್ನ ಚರಣದ ಸೇವೆಯ । ಕರುಣಿಸಬೇಕೆಂದು ತರುಣಿಯರು ॥ ಪರಿಪರಿಯಿಂದಲಿ ಸ್ಮರಿಸಿ ಹಾರೈಪರು । ಪುರಂದರವಿಠಲ ನೀನೇಳೋ ಹರಿಯೇ॥೫॥

೨) ಏಳಯ್ಯ ಹರಿಯೇ ಬೇಗ । ಏಳು ನಾರಾಯಣ ಏಳು ಲಕ್ಷ್ಮೀರಮಣ ಏಳು ಶ್ರೀಗಿರಿಯೊಡೆಯ ಶ್ರೀವೆಂಕಟೇಶ । ಏಳಯ್ಯ ಬೆಳಗಾಯಿತು ॥ಪ॥ ಕಾಸಿದ್ದ ಹಾಲನ್ನು ಕಾವಡಿಯೊಳ್ ಹೆಪ್ಪಿಟ್ಟು । ಲೇಸಾಗಿ ಕಡೆದು ಹೊಸಬೆಣ್ಣೆ ಕೊಡುವೆ ॥ ಶೇಷಶಯನನೆ ಏಳು ಸಮುದ್ರಮಥನವ ಮಾಡು । ದೇಶ ಕೆಂಪಾಯಿತೇಳಯ್ಯ ಹರಿಯೇ ॥ ೧॥ ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ । ಸುರರು ತಂದಿದ್ದಾರೆ ಬಲು ಭಕುತಿಯಲಿ ॥ ಅರವಿಂದನಾಭ ಸಿರಿವಿಧಿಭವಾದಿಗಳೊಡೆಯ। ಪಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ ॥೨॥ ದಾಸರೆಲ್ಲರು ಬಂದು ಧೂಳಿದರ್ಶನಗೊಂಡು । ಲೇಸಾಗಿ ತಾಳ ದಂಡಿಗೆಯ ಪಿಡಿದು ॥ ಶ್ರೀಶನಲೆಯಾದಿ ಕೇಶವ ನಿಮ್ಮ ಪಾದವನು । ಲೇಸಾಗಿ ಸ್ಮರಿಸಿ ಪೊಗಳುವರು ಹರಿಯೇ ॥ ೩॥

೩) ಬ್ಯಾಗನೇ ಏಳೋ ಶ್ರೀಹರಿಯೇ ಕಾರ್ಯ-। ಸಾಗಲಾರದು ಮೂರು - ಲೋಕದ ದೊರೆಯೇ ॥ ಪ॥ ಮೊದಲಿಗೆ ಮಚ್ಛ ನೀನೇಳೋ ಸಿಂಧು । ಮುದದಿಂದ ಮಥಿಸಿದ ಕೂರ್ಮ ನೀನೇಳೋ ॥ ಕೆದರುವ ವರಹ ನೀ ಏಳೋ ನಮ್ಮನ್ । ಬೆದರಿಸುವಂಥ ನರಸಿಂಹ ನೀ

ಏಳೋ ॥ ೧॥ ಪುಟ್ಟ ವಾಮನನೇ ನೀ ಏಳೋ ಥಟ್ಟನೆ-। ಮಾತೆಯ ಶಿರ ಕಡಿವ ಭಾರ್ಗವ ಏಳೋ ॥ ಶ್ರೇಷ್ಠ ರಾಮಚಂದ್ರ ನೀ ಏಳೋ । ಸೃಷ್ಟಿಯ ಮಥಿಸಿದ ಶ್ರೀಕೃಷ್ಣ ನೀ ಏಳೋ॥೨॥ ಪತಿತ ಪಾವನ ನೀ ಏಳೋ ಗೌರೀ। ವ್ರತಭಂಗ ಮಾಡಿದ ಬೌದ್ಧ ನೀ ಏಳೋ॥ ಮತಿಕೊಡುವ ಕಲ್ಕಿ ನೀ ಏಳೋ । ಕ್ಷಿತಿಯೊಳು ಪುರಂದರ ವಿಠಲ ನೀ ಏಳೋ ॥ ೩॥

೪) ಬೆಳಗು ಝಾವದಿ ಬಾರೋ ಹರಿಯೇ ನಿನ್ನ । ಚರಣ ತೊಳೆದು ಜಲಪಾನ ಮಾಡುವೆನಾ ॥ಪ॥ ನೀರ ಒಳಗೆ ನಿಂತುಕೊಂಬೆ ಬೆನ್ನ । ಭಾರ ಪೊತ್ತರೆ ನಗುವಳು ನಿನ್ನ ರಂಭೆ ॥ ಮೋರೆ ತಗ್ಗಿಸಿದರೇನೆಂಬೆ ಜಗದಿ । ನಾರಸಿಂಹನಾಗಿ ಪೂಜೆಯಕೊಂಬೆ ॥ ೧॥ ಬಲಿಯ ದಾನವ ಬೇಡಿದ್ಯೆಲ್ಲೋ ಕ್ಷಾತ್ರ । ಕುಲವ ಸವರೆ ಕೊಡಲಿಯ ಪಿಡಿದ್ಯೆಲ್ಲೊ॥ ಬಲವಂತ ನಿನಗಿದಿರಿಲ್ಲೋ ನಿನ್ನ । ಲಲನೆಯ ತಂದು ರಾಜ್ಯವನಾಳಿದ್ಯೆಲ್ಲೋ ॥೨॥ ಗೋಕುಲದೊಳು ಇದ್ದೆಯಲ್ಲೊ ಲೋಕ। ಪಾಕು ಮಾಡಲು ಬುದ್ಧರೂಪನಾದ್ಯೆಲ್ಲೋ॥ ಏಕ ಹಯವನೇರಿದ್ಯಲ್ಲೋ ನಮ್ಮ । ಸಾಕುವ ಹಯವದನ ನೀನೇ ಬಲ್ಲೆಲ್ಲೊ ॥ ೩॥

೫) ಕೋಳಿ ಕೂಗಿತಲ್ಲಾ - ಲಕ್ಷ್ಮೀಲೋಲನಲ್ಲದೆ ಅನ್ಯರಾರಿಲ್ಲವೆಂದು ॥ಪ॥ ಮೊದಲ ಜಾವದಲ್ಲಿ ಮುಕುಂದನೆಂದು ಕೂಗಿ । ಎರಡರಲಿ ಶ್ರೀವೆಂಕಟಾದ್ರಿಯೆಂದು॥ ಉರಗಗಿರಿಯ ವಾಸ ಯಾದವ ಕುಲ ಗೊಲ್ಲ । ಚದುರ ಚಲ್ಲಿಪಿಲ್ಲಿ ರಾಯನಲ್ಲದಿಲ್ಲವೆಂದು ॥ ೧॥ ಮೂರು ಜಾವದಲಿ ಮುರಾರಿಯೆಂದು ಕೂಗಿ । ನಾಕರಲ್ಲಿ ನಾರಾಯಣ- ಯೆನಲು ॥ ಕ್ಷೀರಾಬ್ಧಿಯ ವಾಸ ಲಕ್ಷ್ಮೀಪತಿ ಕೋ-। ನೇರಿವಾಸ ವೆಂಕಟ ಕೃಷ್ಣರಾಯನೆಂದು ॥ ೨॥ ಪರಮ ಪುರುಷ ಮುಖ್ಯ ಆಧಾರ ಭೂತ । ಕರುಣದ ಪುಂಜನು ಜಗದಾದಿ ತಾ ॥ ಕಮಸಲಂಭವ ಮುಖ್ಯ ಕಾರುಣ್ಯಮೂರುತಿ । ವಿಮಲಕಾಪುರ ತಿಮ್ಮರಾಯನಲ್ಲದಿಲ್ಲವೆಂದು ॥ ೩॥ ರೆಕ್ಕೆಯ ಬಿಚ್ಚಿ ಪಸರಿಸಿ ಡಂಗುರ ಹೊಯ್ದು । ಕೊಕ್ಕನು ಮೇಲೆ ನೆಗಹಿಕೊಳುತ ॥ ಚಕ್ಕನೇ ಕೇರಿ ಕೇರಿಯ ಗುಂಟ ಸಾಗುತ। ಮುಕ್ಕುಂದನಲ್ಲದೆ ಅನ್ಯರಾರಿಲ್ಲವೆಂದು॥೪॥ ಐದು ಜಾವದಲಿ ಅನಂತನೆಂದು ಕೂಗಿ। ಆರರಲಿ ಅಳಗಾದ್ರೀಶಯೆಂದು । ಏಳರಲ್ಲಿ ಕಾಶಿಯ ಬಿಂದು ಮಾಧವ ಎಂಟಕೆ । ಪುರಂದರ ವಿಠಲರಾಯನೆಂದು ॥ ೫॥

## ೨) ಶ್ರೀಲಕ್ಷ್ಮೀದೇವೀ ಹಾಡುಗಳು

(೧) ಏಳು ರುಕ್ಮಿಣಿದೇವಿ ದ್ವಾರವತಿಗೆ । ಏಳು ಕಂಜೋದ್ಭೂತೆ ಏಳು ಕಮಲಜೆ ಮಾತೆ । ಏಳು ಜಗದೀಶನ ಪ್ರೀತಿಯ ನಾಥೆ ॥ಪ॥ ಮೂರು ಕಣ್ಣಿನ ಹರನು ಮುಂಭಾಗದಲಿ ನಿಂತು । ಭಾಮೆ ರುಕ್ಮಿಣಿಗೆರಗಿ ಭಾವಶುದ್ಧದಲಿ ॥ ಶ್ರೀಸತ್ರಜಿತನಳಿಯ ಸತ್ರಜಿತನಾ ಕುವರಿ । ಸೂರ್ಯಬಿಂಬದ ಕಾಂತಿ ಏಳು ದ್ವಾರಕೆಗೆ ॥ ಏಳು... ॥ ೧॥ ನಾಲ್ಕು ಮುಖದ ಬ್ರಹ್ಮ ಶ್ರೀರಂಗ ರುಕ್ಮಿಣಿಗೆ । ಅನೇಕ ಸಂಭ್ರಮದಿಂದ ವಂದನೆಯ ಮಾಡಿ ॥ ಗೋಕುಲದ ಪುರದೊಡೆಯ ಗೋವರ್ಧನೋದ್ಧಾರ। ಯಾದವ ಶಿರೋಮಣಿಯೇ ಏಳು ದ್ವಾರಕಿಗೆ ॥ ಏಳು ...॥ ೨ ॥ ತುಂಬುರರು ನಾರದರು ಗಂಧರ್ವ ಗಾಯನರು । ರಂಭೆ ಮೇನಕಿಯರು ಮಂದಿ ಭಟರು ॥ ಪಾಂಡುನಂದನ ಸುತರು ಪಾದಕೊಂದನೆ ಮಾಡಿ। ಇಂದಿರೇಶನ ಪಾಡಿ

ಬಂದರಂಗಳಕ ॥ ಏಳು... ॥೩॥ ಮುದ್ದು ರುಕ್ಮಿಣಿದೇವಿ ಹೆಜ್ಜೆಯಿಕ್ಕುತ ಬರಲು । ಎದ್ದು ದ್ರೌಪತಿ ಸುಭದ್ರೆ ನಸುನಗುತ॥ ಹೊದ್ದ ಪೀತಾಂಬರದ ಸೆರಗ್ಹಿಡಿದು ರುಕ್ಮಿಣಿಗೆ । ನಮ್ಮುದ್ದು ವಾಹನನ್ಹೆಸರು ಹೇಳಬೇಕೆನುತ ॥ ಏಳು... ॥ ೪॥ ನಾರಿ ನಿಮ್ಮಾಗ್ರಜನ ನಾಮ ಹೇಳುವೆ ಕೇಳು। ಸೋದರರ ಭಯಕಂಜಿ ಸರಿರಾತ್ರಿಯಲಿ ಜನಿಸಿ॥ ಧೀರ ಚೋರ ಸುರಗಂಭೀರ ಭೀಮಾರ್ಜುನರ । ತೇರನೆಳೆಸಿದನು ಭೀಮೇಶ ಶ್ರೀಕೃಷ್ಣ ॥ ಏಳು... ॥ ೫॥

(೨) ಈಗಲೇ ಬಂದಾಳು ಇಂದಿರಾದೇವಿ ಅನು- । ರಾಗದಿಂ ಪತಿಯೊಡನೆ ಸುಖನಿದ್ರೆಗೈದೆದ್ದು ॥ಪ॥ ಕಡೆಗಣ್ಣಿನ ಕಪ್ಪು ಅಂಗೈಯಿಂದೊರೆಸುತ್ತ । ಕಡಗ ಕಂಕಣ ಬಳೆ ಝಳಿರೆನ್ನುತ್ತಾ॥ ಮುಡಿದ ಮಲ್ಲಿಗೆ ಹೂವು ಎಡ ಬಲಕೆ ಸರಿಸುತ್ತ। ನಡುವಿನ ವಡ್ಯಾಣ ನಾರಿಮಣಿ ಇಡುತಾ ॥ ೧॥ ಘೋರ ಕುಚಭಾರ ಹಿಂಬೆರಳಿಂದ ನೂಕುತ್ತಾ॥ ವೋರೆಯು ಕಿರಿಬೆವರ ಶೆರಗಿನಿಂದೊರಸುತ್ತಾ॥ ನೆರದ ಮ್ಯಾಲಿನ ಗುಳ್ಳೆ ಜೋಕೆಯಿಂದೆಡವುತ್ತ । ಹಾರದ ತೊಡರುಗಳ ಬೆರಳಿಂದ ಬಿಡಿಸುತ್ತ ॥ ೨॥ ಕಕ್ಕಸದ ಕುಚ ನಡುವೆ ಕಸ್ತೂರಿಯನ್ನೊರಸುತ್ತ । ಥಕ್ಕನೆ ಕನ್ನಡಿಲಿ ಮುಖವ ನೋಡುತ್ತ ॥ ಸಕ್ಕರಿಯ ಬಾಯ ತಾಂಬೂಲ ಸವಿದುಗುಳುತ್ತ । ಚೊಕ್ಕ ಪುರಂದರ ವಿಠಲನ ನೋಡಿ ನಗುತ ॥ ೩॥

### ೩) ಶ್ರೀಹನುಮಂತದೇವರ ಹಾಡುಗಳು

(೧) ಏಳು ಹನುಮಂತ ಎಷ್ಟು ನಿದ್ರೆ ॥ ಪ ॥ ಮಾತನಾಡಲು ಬೇಕು ಮುದ್ರಿಕೆ ತರಲು ಬೇಕು। ಹರಿಕುಶಲ ಜಾನಕಿಗೆ ತಿಳಿಸಬೇಕು ॥ ವನವ ಕೀಳಲು ಬೇಕು ಚೂಡಾಮಣಿಯ ತರಲುಬೇಕು । ಹರಿ ಹರುಷದಿಂದಲಿ ಖ್ಯಾತಿ ಪಡೆಯಲು ಬೇಕು ॥೧॥ ಶರಧಿ ಲಂಘಿಸಬೇಕು ರಘುಪತಿಯ ಕೂಡಿರಬೇಕು। ದುರುಳ ಇಂದ್ರಜಿತನ್ನ ಗೆಲಿಯಬೇಕು । ಅನುಜ ಲಕ್ಷ್ಮಣಗೆ ಸಂಜೀವನ ತಂದು ಕೊಡಲುಬೇಕು । ಹನುಮಂತ ಬಲವಂತ ಎಂದೆನಿಸಬೇಕು ॥ ೨॥ ದುಷ್ಟರಕ್ಕಸರನೆಲ್ಲ ಕುಟ್ಟಿ ಕೆಡಹಲು ಬೇಕು । ಹತ್ತುತಲೆ ರಾವಣನ ಬಲವಿಳಿಸಬೇಕು ॥ ಭಕ್ತ ವಿಭೀಷಣಗೆ ಪಟ್ಟಗಟ್ಟಲುಬೇಕು । ಲಕ್ಷ್ಮೀಸಹಿತ ಅಯೋಧ್ಯೆಗೆ ತೆರಳಲು ಬೇಕು ॥ ೩॥ ಕುರುಕುಲದಲ್ಲಿ ಕುಂತಿಸುತನಾಗಿ ಜನಿಸಲು ಬೇಕು। ರಣದಲ್ಲಿ ಕೌರವರ ಗೆಲಿಯಬೇಕು ॥ ವನದೊಳಗೆ ಘನತೃಷೆಯ ಗಾಸಿಪಡಿಸಲು ಬೇಕು। ಮಡದಿಗೆ ಸೌಗಂಧಿಕ ತರಲುಬೇಕು॥೪॥ ಯತಿಯಾಗಿ ಬರಬೇಕು ಕುಮತ ಖಂಡಿಸಬೇಕು ಅ-। ದ್ವೈತವಾದಿಗಳ ಗೆಲಿಯಬೇಕು॥ ಮಧ್ವಶಾಸ್ತ್ರವ ಲೋಕಕ್ಕೆಲ್ಲ ಬೋಧಿಸಬೇಕು। ಮುದ್ದು ಪುರಂದರ ವಿಠಲನ ದೂತ ಎಂದೆನಿಸಬೇಕು॥೫॥

(೨) ಮುಂಜಾನೆ ಎದ್ದು ಸಂಜೀವನೆನ್ನಿ । ಎಂದೆಂದಿನ ದುರಿತ ಪೋದವೆನ್ನಿ ॥ಪ॥ ವಾಯುನಂದನನೆನ್ನಿ ವರವಜ್ರಕಾಯನೆನ್ನಿ । ರಾಯರಾಘವನ ಕಿಂಕರನೆನ್ನಿರೈ॥ ಛಾಯಾಗ್ರಿಯನ ಕೊಂದು ವನಕಿತ್ತಿದನೆನ್ನಿ । ಮಾಯಾದ ಲಂಕೆಯ ದಾಹಕನೆನ್ನಿರೈ ॥೧॥ ಪಾಂಡುಕುಮಾರನೆನ್ನಿ ಪಾಪಸಂಹಾರನೆನ್ನಿ। ಉಂಡು ವಿಷವ ತೇಗಿದಾನೆನ್ನಿರೈ ॥ ಚೆಂಡ ಹಿಡಿಂಬಕನ ಕೊಂದವನೆನ್ನಿ । ಚಂಡ ಕುರುವಂಶಹಂತಕನೆನ್ನಿರೈ॥೨॥ ಆನಂದತೀರ್ಥರೆನ್ನಿ ಅಮಿತ ಜೀವಾತ್ಮನೆನ್ನಿ । ಜ್ಞಾನಕ್ಕೆ

ಮೊದಲು ದೇವತೆ ಎನ್ನಿರೈ।। ಆನಂದಮಯನಾದ ವಿಜಯವಿಠ್ಠಲರಾಯನ । ಧೇನಿಪ ಜನರಿಗೆ ಕೈವಲ್ಯ- ಮಾರ್ಗವೆನ್ನಿ।। ೩।।

### ೪) ಶ್ರೀತುಳಸೀದೇವೀ ಹಾಡು

ಏಳಮ್ಮಾ ತುಳಸಿ ಕೋಮಲವೇಣಿ । ನೀಲವರ್ಣನ ರಾಣಿ ನಿತ್ಯ ಕಲ್ಯಾಣಿ ।।ಪ।। ಏಳುತಲೆದ್ದು ಶ್ರೀತುಳಸಿಗೆ ಕೈಮುಗಿದು । ಏಳು ಪ್ರದಕ್ಷಿಣೆ ಹಾಕುತಲಿ । ಏಳು ಜನ್ಮದ ಪಾಪ ಕಳೆವಂಥ ತಾಯೆ ನೀ ।।೧।। ಉಟ್ಟ ಪೀತಾಂಬರ ಹೃದಯದೊಳ್ ಕೌಸ್ತುಭ । ತೊಟ್ಟ ಮುತ್ತಿನ ಅಂಗಿ ತೋಳ ಬಾಪುರಿಯು । ಇಟ್ಟ ದ್ವಾದಶನಾಮ ನೊಸಲಲ್ಲೆ ತಿಲಕವು । ಲಕ್ಷ್ಮೀರಮಣನು ನಿನಗೊಪ್ಪಿದನಲ್ಲ ತುಳಸಿ ।।೨।। ಎಡದ ಕೈಯಲ್ಲಿ ಶಂಖ ಬಲದ ಕೈಯಲ್ಲಿ ಚಕ್ರ । ಎಡಬಲಕೊಪ್ಪುವ ಛತ್ರಚಾಮರವು । ಮುಡಿದ ಮಲ್ಲಿಗೆ ಹೂ ಮುಡಿಯಿಂದಲುದುರುತ । ಒಡೆಯ ಶ್ರೀಪುರಂದರವಿಠಲನ ರಾಣೀ ।। ೩।।

### ೫) ಕಾಮಧೇನುವಿನ ಹಾಡು

ಕಾಮಧೇನು ನೀ ಕರುಣಿಸ ಏಳು ನಿನ್ನ । ನಾಮವು ನೆನೆದರೆ ಧನ್ಯರಾಗುವೆವು। ಗೋಮಯ ಗೋಮೂತ್ರ, ಗೋಕ್ಷೀರ ದಧಿ, ಮಧು । ಗೋಮಯದೊಳಗೆ ಸಕಲ ಶುದ್ಧಿಯು ।। ಗೋವುಯೆಂಬ ಎರಡಕ್ಷರ ನುಡಿದರೆ। ಹಾವಳಿಗೊಂಡು ಹೋಗುವುದು ಅವರ ಪಾಪ ।।೧।। ಪಾಪ ವಿನಾಶಳೆ ಪಾವನ ಚರಿತಳೆ । ಸೋಪಾನವಾದೀತು ಸ್ವರ್ಗದವರೆಗೆ । ಅಪಾರ ಮಹಿಮಳೆ, ಅಖಿಳಾಂಕ ಚರಿತಳೆ । ಕಾಪಾಡು ಯೆನ್ನ ಕರುಣದಿ ನಿಜ ತಾಯೇ ।। ೨।। ಪುಣ್ಯದಾಯಳೆ ಉನ್ನತ ಚರಿತಳೆ ಧನ್ಯಳು ನೀನಹುದು ದಯವಂತಿಯೆ । ಚೆನ್ನಾಗಿ ಆದಿಕೇಶವನ ಕರೆದು ನೀ । ಉಣ್ಣಿಸಿ ಕರೆದು ಅಮೃತವ ನೀಡೆ ನಿಜ ತಾಯಿ ।। ೩।।

### ೬) ಶ್ರೀಸೂರ್ಯದೇವರ ಹಾಡು

ಸೂರ್ಯಾಂತರ್ಗತ ನಾರಾಯಣ । ಪಾಹಿ ಆರ್ಯ ಮೂರುತಿ ಪಂಚಪ್ರಾಣಾ ।।ಪ.।। ಭಾರ್ಯಳಿಂದೊಡಗೂಡಿ । ಸರ್ವ ಜೀವರೊಳಿದ್ದು ವೀರ್ಯ ಕೊಡುತಲಿರ್ದ। ಶರ್ವಾದಿ ವಂದ್ಯಾ ।। ಅ.ಪ.।। ದ್ರುಪದನ ಸುತೆ ನಿನ್ನ ಕರೆಯೇ ಅಂದು । ಕೃಪಣ ವತ್ಸಲ। ಸೀರೆಯಳೆಯೆ। ಅಪರಿಮಿತವುನೀರ ಸುರಿಯೇ ಸ್ವಾಮಿ । ಕುಪಿತ ದೈತ್ಯರ ಗರ್ವಮುರಿಯೇ ಜಪಿಸೋ ಜನರ ವಿಪತ್ತು ಕಳೆದೆ । ಈ ಪರಿಯ ದೇವರನೆಲ್ಲು ಕಾಣೆನೋ ! ತಪನ ಕೋಟಿ ಪ್ರಕಾಶ ಬಲವುಳ್ಳ। ಕಪಿಲ ರೂಪನೆ ಜ್ಞಾನದಾಯಕ।।೧।। ಹೃದಯಮಂಟಪದೊಳಗೆಲ್ಲ ಪ್ರಾಣ - । ದದ್ಭುತ ಮಹಿಮೆಯ ಬಲ್ಲ । ಸದಮಲನಾಗಿ ತಾನೆಲ್ಲ ಕಾರ್ಯ । ಮುದದಿ ಮಾಡಿಸುವ ಶ್ರೀನಲ್ಲ । ಹದುಳ ಕೊಡುತಲಿ ಬದಿಲಿ ತಾನಿದ್ದು । ಒದಗಿ ನಿನಗೆನ್ನ ಮದುವೆ ಮಾಡಿದ । ಪದುಮಜಾಂಡೋದರ ಈ । ಸುದತಿಯ ಮುದದಿ ರಮಿಸೆಂದು ಒದಗಿ ಬೇಡುವೆ ।।೨।। ಎನ್ನ ಬಿನ್ನಪವನ್ನು ಕೇಳೋ ನಾನು । ನಿನ್ನವಳಲ್ಲವೇನೋ ಹೇಳೋ । ನಿನ್ನ ಮನದನುಮಾನ ತಿಳಿಯಿತು। ಕನ್ಯಾವಸ್ಥೆಯು ಎನ್ನದೆನ್ನದೆ । ಚೆನ್ನ ಶ್ರೀನಿಧಿವಿಠಲ ಪ್ರಾಯದ । ಕನ್ಯೆ ಇವಳನು ದೇವ ಕೂಡಿಕೋ ।। ೩।।

## ೭) ಶ್ರೀಭಾಗೀರಥೀ ಹಾಡು

ಏಳು ಭಾಗೀರಥಿ ಕೃಷ್ಣವೇಣಿ ಸೃಷ್ಟಿ ಮ್ಯಾಲಿನ ಪಾಪ ಕಳೆವಂಥ ತಾಯೇ ॥ಪ॥ ಅರುಣೋದಯದಲೆದ್ದು ನದಿಯ ಸ್ನಾನವ ಮಾಡಿ ಭರದಿಂದಲೆ ಪೋಗಿ ಕೈಮುಗಿದು। ಅರಿಶಿನ ಕುಂಕುಮ ಹಚ್ಚಿ ಮರದ ಬಾಗಿಣ ಕೊಡುವೆ ಕರುಣದಿಂದಲಿ ನೋಡೆ ಎನ್ನ ಭಾಗಮ್ಮ ॥ ೧॥ ಹನ್ನೆರಡು ವರ್ಷಕ್ಕೆ ಧನ್ಯಳು ನೀ ಬರುವಿ ಕನ್ಯೆ ಕೃಷ್ಣಮ್ಮನ ಭೆಟ್ಟಿಗಾಗಿ। ಮುನ್ನ ನರರ ಪಾಪ ಕಳೆಯಬೇಕೆನುತಲಿ ಭರದಿಂದ ಬಂದೆ ನೀ ಬ್ರಹ್ಮಾಂಡ ಒಡೆದು॥೨॥ ಅಕ್ಕತಂಗೇರು ನೀವು ಅರ್ಥಿಯಿಂದಲಿ ಬಂದು ಹತ್ತೆಂಟುಗಾವುದ ಪರಸಿ ಬಂತಮ್ಮ । ಚೊಕ್ಕ ಪುರಂದರ ವಿಠ್ಠಲನ ದಯೆಯಿಂದ ಸ್ಮರಣೆ ಮಾಡುತ ಬಂದೆ ಮುಕ್ತಿಕೊಡು ಭಾಗಮ್ಮ ॥ ೩॥

## ೮) ಶ್ರೀರಾಯರ ಹಾಡು

ಏಳು ಶ್ರೀಗುರುರಾಯಾ ಬೆಳಗಾಯಿತಿಂದು । ಧೂಳಿ ದರುಶನ ಕೊಡಿರಿ ಈ ವೇಳೆ ಶಿಷ್ಯರಿಗೆ ॥ಪ॥ ಏಳು ಗುರುರಾಘವೇಂದ್ರ ಏಳು ದಯಾಗುಣಸಾಂದ್ರ। ಏಳು ವೈಷ್ಣವ ಕುಮುದ ಚಂದ್ರ ಶ್ರೀರಾಘವೇಂದ್ರ ॥ ಅ.ಪ.॥ ಅಶನ ವಸನಗಳಿಲ್ಲವೆಂಬ ವ್ಯಸನಗಳಿಲ್ಲ । ಮುಸುಕ್ಹಾಕಿ ಮೋಸದಲಿ ಮೋಹಿಸಿದೆನಲ್ಲ॥ ಅಸುರಾರಿಯ ಸ್ಮರಿಸದೆ ಪಶುವಿನೊಲು ಈ ದೇಹ । ವಸುಮತಿಯೊಳು ಬಹಳ ಹಸಗೆಟ್ಟಿತಲ್ಲ ॥ ೧॥ ನಾನು ನನ್ನದು ಎಂದು ಹೀನಮನಸಿಗೆ ತಂದು। ಏನು ಮಾಡಲು ಕರ್ಮ ನಾನೆ ಅಹುದೆಂದು ॥ ಸ್ವಾಮಿ ಕರ್ತೃತ್ವವನು ತಿಳಿಯಲಿಲ್ಲ ನಾನೊಂದು। ನೀನೇ ಉದ್ಧರಿಸಯ್ಯ ದೀನದಯಾಸಿಂಧು ॥ ೨॥ ಅನ್ಯರಾ ಕೈಯಲ್ಲಿ ನಿನ್ನವರನಿರಿಸುವದು । ಅನ್ಯಾಯವಾಯ್ತು ಪಾವನ್ನ ಗುರುರಾಯಾ ॥ ಎನ್ನ ಮಾತಲ್ಲವಿದು ನಿನ್ನ ಮಾತೇ ಸರಿ । ಮನ್ನಿಸಿ ಆಗು ಪ್ರಸನ್ನ ಗುರುರಾಯಾ॥೩॥ ವೇದ ಶಾಸ್ತ್ರಗಳನ್ನು ಓದಿ ಪೇಳ್ದವನಲ್ಲ । ಭೇದಾಭೇದವನು ತಿಳಿಯಲಿಲ್ಲ॥ ಸಾಧು ಸಜ್ಜನರ ಸಹವಾಸ ಮೊದಲೇ ಇಲ್ಲ। ಹೀಗಾಗಿ ಮಾನ ಮಾರಿಸಿದಿ ಉಳಿಸಲಿಲ್ಲ॥ ೪॥ ಆಸೆಗೊಳಗಾದೆನೋ ಹೇಸಿ ಮನುಜನು ನಾನು । ಕ್ಲೇಶ ಭವ ಸಾಗರದೊಳೀಸುತಿಹೆನೋ ॥ ಏಸು ಜನ್ಮದಿ ಎನ್ನ ಗಾಸಿ ಮಾಡಿದ ಮುನ್ನ । ದಾಸನಾಗುವೆ ತೋರೋ ಪ್ರಸನ್ನ ವೆಂಕಟನ ॥ ೫॥



ಶ್ರೀರಾಯರ ಮೂಲ ಪಾದುಕೆಗಳು

## ೯) ಶ್ರೀವಿಜಯರಾಯರ ಕವಚ

ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ । ದುರಿತ ತರಿದು ಪೊರೆವ ವಿಜಯ ಗುರುಗಳೆಂಬರಾ ॥ ಪ॥ ದಾಸರಾಯನಾ ದಯವ ಸೂಸಿ ಪಡೆದನಾ । ದೋಷರಹಿತನಾ ಸಂತೋಷಭರಿತನಾ ॥ ೧॥ ಜ್ಞಾನವಂತನಾ ಬಲು ನಿದಾನಿ ಶಾಂತನಾ । ಮಾನ್ಯವಂತನಾ ಮಹವದಾನ್ಯದಾಂತನಾ ॥ ೨॥ ಹರಿಯ ಭಜಿಸುವ ನರಹರಿಯ ಯಜಿಸುವ । ದುರಿತ ತ್ಯಜಿಸುವ ಮನಕೆ ಹರುಷ ಸುರಿಸುವ ॥ ೩॥ ಮೋದಭರಿತನಾ ಪಂಚಭೇದವರಿತನಾ । ಸಾಧುಚರಿತನಾ ಮನವಿಷಾದ ಮರೆತನಾ ॥ ೪ ॥ ಇವರ ನಂಬಿದಾ ಜನಕೆ ಭವವಿದೆಂಬುದು । ಹವಣವಾಗದೋ ನಮ್ಮವರ ಮತವಿದು ॥ ೫॥ ಪಾಪಕೋಟಿಯ ರಾಶಿಲೇಪವಾಗದೋ । ತಾಪ ಕಳೆವನೋ ಬಲುದಯಾಪಯೋನಿಧಿ ॥ ೬॥ ಕವಸರೂಪದೀ ಹರಿಯ ಸ್ತವನ ಮಾಡಿದಾ । ಭುವನ ಬೇಡಿದ ಮಾಧವನ ನೋಡಿದಾ ॥ ೭॥ ರಂಗನೆಂದನಾ ಭವವು ಹಿಂಗಿತೆಂದನಾ । ಮಂಗಳಾಂಗನಾ ಅಂತರಂಗವರಿತನಾ ॥ ೮॥ ಕಾಶಿ ನಗರದಲ್ಲಿದ್ದ ವ್ಯಾಸದೇವನಾ ದಯವ । ಸೂಸಿ ಪಡೆದನಾ ಉಲ್ಹಾಸತನದಲಿ ॥ ೯॥ ಚಿಂತೆ ಬ್ಯಾಡಿರೋ ನಿಶ್ಚಿಂತರಾಗಿರೋ । ಶಾಂತ ಗುರುಗಳಾ ಪಾದವಿಂತು ನಂಬಿರೋ ॥ ೧೦॥ ಖೇದವಾಗದೋ ನಿಮಗೆ ಮೋದವಾಹುದೋ । ಆದಿದೇವನಾ ಸುಪ್ರಸಾದ-ವಾಹುದೋ ॥ ೧೧॥ ತಾಪ ತಡಿವನೂ ಬಂದ ಪಾಪ ಕಡಿವನು । ಶ್ರೀಪತೀಶನ ಪದಸಮೀಪವಿಡುವನು ॥ ೧೨॥ ಗಂಗೆ ಮಿಂದರೆ ಮಲವು ಹಿಂಗಿತಲ್ಲದೇ । ರಂಗನೊಲಿಯನೋ ಭಕ್ತರ ಸಂಗ ದೊರಕದೇ ॥ ೧೩॥ ವೇದ ಓದಲು ಬರಿದೆ ವಾದ ಮಾಡಲೂ । ಹಾದಿಯಾಗದೋ ಬುಧರ ಪಾದ ನಂಬದೆ ॥ ೧೪॥ ಲೆಕ್ಕವಿಲ್ಲದಾ ದೇಶ ತುಕ್ಕಿ ಬಂದರೂ । ದುಃಖವಲ್ಲದೆ ಲೇಶ ಭಕುತಿ ದೊರೆಯದು ॥ ೧೫॥ ದಾನ ಮಾಡಲು ದಿವ್ಯಗಾನ ಪಾಡಲು । ಜ್ಞಾನ ದೊರೆಯದೋ ಇವರಾಧೀನವಾಗದೇ ॥ ೧೬॥ ನಿಷ್ಠೆ ಯಾತಕೆ ಕಂಡ ಕಷ್ಟವ್ಯಾತಕೇ । ಧಿಟ್ಟ ಗುರುಗಳಾ ಪಾದ ಮುಟ್ಟಿ ಭಜಿಸಿರೋ ॥ ೧೭॥ ಪೂಜೆ ಮಾಡಲೂ ಕಂಡ ಗೋಜು ಬೀಳಲೂ । ಬೀಜ ಮಾತಿನ ಫಲ ಸಹಜವಾಗದು ॥ ೧೮॥ ಸುರರು ಎಲ್ಲರೂ ಇವರ ಕರವ ಪಿಡಿವರೋ । ತರಳರಂದದಿ ಹಿಂದೆ ತಿರುಗುತಿಪ್ಪರೋ ॥ ೧೯॥ ಗ್ರಹಗಳೆಲ್ಲವೂ ಇವರ್ಗೆ ಸಹಾಯ ಮಾಡುತ । ಅಹೋ ರಾತ್ರಿಲಿ ಸುಖದ ನಿವಹ ಕೊಡುವವೂ ॥ ೨೦॥ ವ್ಯಾಧಿ ಬಾರದೋ ದೇಹಬಾಧೆ ತಟ್ಟದೋ । ಆದಿದೇವನ ಸುಪ್ರಸಾದವಾಹುದೋ ॥ ೨೧॥ ಪತಿತಪಾಮರಾ ಮಂದಮತಿಯು ನಾ ಬಲು । ತುತಿಸಲಾಪನೆ ಇವರ ಅತಿಶಯಂಗಳಾ ॥ ೨೨॥ ಕರುಣದಿಂದಲೀ ಎಮ್ಮ ಪೊರೆವನಲ್ಲದೇ । ದುರಿತ ಕೋಟಿಯಾ ಬ್ಯಾಗ ತರಿವ ದಯದಲೀ ॥ ೨೩॥ ಮಂದಮತಿಗಳೂ ಇವರ ಛಂದವರಿಯದೇ । ನಿಂದಿಸುವರೋ ಭವದ ಬಂಧ ತಪ್ಪದೋ ॥ ೨೪॥ ಇಂದಿರಾಪತೀ ಇವರ ಮುಂದೆ ಕುಣಿವನೋ । ಇವರಂದ ವಚನವಾ ನಿಜಕೆ ತಂದು ತೋರ್ಪನೋ ॥ ೨೫॥ ಉದಯಕಾಲದೀ ಈ ಪದವ ಪಠಿಸಲೂ । ಮದಡನಾದರೂ ಜ್ಞಾನ ಉದಯವಾಹುದು॥೨೬॥ ಸಟಿಯಿದಲ್ಲವೋ ವ್ಯಾಸವಿಠಲ ಬಲ್ಲನೋ । ಪಠಿಸಬಹುದಿದೂ ಕೇಳಿ ಕುಟಿಲರಹಿತರೂ॥೨೭॥ ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ । ದುರಿತ ತರಿದು ಪೊರೆವ ವಿಜಯ ಗುರುಗಳೆಂಬರಾ॥

## ೧೦) ಗಜೇಂದ್ರ ಮೋಕ್ಷ

ಹರಿಯೇ ನಾರಾಯಣ ನಮೋ । ನಾರಾಯಣಾಯ ನಮೋ ನಾಗೇಂದ್ರಶಯನಾಯ। ನಾರದಾದ್ಯಖಿಳ ಮುನಿನಮಿತ ಚರಣಾಂಭೋಜ । ಸಾರಿದರೆ ಪೊರೆವ ಕಂಸಾರಿ ರಕ್ಷಿಪುದೆನ್ನ ಕಾರುಣ್ಯದಿಂದೊಲಿದು । ಹರಿಯೆ ನಾರಾಯಣ ನಮೋ ॥ ಪ॥

ಪಾಂಡ್ಯ ದೇಶದೊಳಗೆ ಇಂದ್ರದ್ಯುಮ್ನನೆಂಬ ಭೂ । ಮಂಡಲಾಧಿಪನು ವೈರಾಗ್ಯದಲಿ ಹರಿಪಾದ । ಪುಂಡರೀಕ ಧ್ಯಾನಪರನಾಗಿ ತಪದೊಳಿರೆ ಚಂಡತಾಪಸನಗಸ್ತ್ಯ ॥ ಹಿಂಡು ಶಿಷ್ಯರು ವೆರಸಿ ಬರಲು ಸತ್ಕರಿಸದಿರೆ । ಕಂಡು ಗಜಯೋನಿಯಲಿ ಜನಿಸು ಪೋಗೆನುತಲು-। ದ್ದಂಡ ಶಾಪವನಿತ್ತು ಮುನಿ ಪೋಗುತಿರಲತ್ತ ॥ ಶುಂಡಾಲನಾದನರಸ॥ ಹರಿಯೇ ---- ॥ ೧॥

ಕ್ಷೀರಸಾಗರತಡಿಯಲಯುತ ಯೋಜನದಗಲ । ಮೇರುವರ ತ್ರಿಕೂಟ ಪರ್ವತ ಶೃಂಗತ್ರಯದಲ್ಲಿ। ರಾರಾಜಿಸುವರಮಳ ರಜತಕಾಂಚನದಮಲ ನಾರಾಯಣೇಶರಿಂದ ॥ ಪಾರಿಜಾತಾಂಭೋಜ ತುಳಸಿ ಮಲ್ಲಿಗೆ ಜಾಜೀ । ಸೌರಂಭದಶ್ವತ್ಥ ಪೂಗ ಪುನ್ನಾಗ ಜಂ - । ಬೀರಾದಿ ತರು ಗುಲ್ಮ ಖಗ ಮೃಗಗಳೆಸೆವಲ್ಲಿ ವಾರಣೇಂದ್ರನು ಮೆರೆದನು॥ ಹರಿಯೇ ---॥೨॥

ಆನೆ ಹೆಣ್ಣಾನೆ ಮರಿಯಾನೆಗಳು ಸಹಿತಲಾ । ಕಾನನದಿ ತೊಳಲುತ್ತ ಬೇಸಿಗೆಯ ಬಿಸಿಲಿಂದ। ತಾ ನೀರಡಿಸಿ ಬಂದುದೊಂದು ಸರಸಿಗೆ ಸಲಿಲ ಪಾನಾಭಿಲಾಷೆಯಿಂದ ॥ ನಾನಾ ಪ್ರಕಾರದಲಿ ಜಲಕ್ರೀಡೆಯಾಡುತಿರೆ । ಏನಿದೆತ್ತಣ ರಭಸಮೆಂದುಗ್ರ ಕೋಪದಿಂ। ದಾ ನೆಗಳೆ ಬಾಯ್ದೆರೆದು ನುಂಗಿತೋಂದಂಘ್ರಿಯನದೇನೆಂಬೆನಾಕ್ಷಣದೊಳು ॥ ಹರಿಯೇ ---॥ ೩॥

ಒತ್ತಿ ಪಿಡಿದೆಳೆವುತಿರಲೆತ್ತಣವಿದೇನೆನುತ । ಮತ್ತಗಜರಾಜ ನೌಡೆತ್ತಿ ಘೀಳಿಡುತಲೆಳೆ- । ದೊತ್ತಿ ದಂಡೆಗೆ ನಡುಮಡುವಿನೊಳಗೆತ್ತೆಳೆದುದಾ ನೆಗಳೆ ॥ ಇತ್ತಂಡವಿತ್ತು ಕಾದುತ್ತ ಸಾವಿರ ವರುಷ । ವಿಸ್ತರಿಸಿತೇನೆಂಬ ಮತ್ತಾ ಗಜೇಂದ್ರಂಗೆ। ಸತ್ವ ತಗ್ಗಿತು ತನ್ನ ಚಿತ್ತದಲಿ ಧ್ಯಾನಿಸುತ ಮತ್ತಾರು ತನಗೆನುತಲಿ। ಹರಿಯೇ --- ॥ ೪॥

ಬಂದುದಾ ಸಮಯದಲಿ ಹಿಂದೆ ಮಾಡಿದ ಪುಣ್ಯ । ದಿಂದ ದಿವ್ಯ ಜ್ಞಾನ ಕಂದೆರೆದು ಕೈಮುಗಿದು। ವಂದಿಸುತ ಮನದೊಳರವಿಂದನಾಭಾಚ್ಯುತ ಮುಕುಂದ ಮುನಿವೃಂದವಂದ್ಯ ॥ ಇಂದಿರಾರಮಣ ಗೋವಿಂದ ಕೇಶವ ಭಕ್ತ -। ಬಂಧು ಕರುಣಾಸಿಂಧು ತಂದೆ ನೀ ಸಲಹೆನ್ನ । ಇಂದು ಸಿಲುಕಿದೆನು ಬಲು ದಂದುಗದ ಮಾಯಾಪ್ರಬಂಧದಿಂ ನೆಗಳೆಯಿಂದ ॥ ಹರಿಯೇ---॥೫॥

ಪರಮಾತ್ಮ ಪರಮೇಶ ಪರಿಪೂರ್ಣ ಪರತತ್ವ । ಪರತರ ಪರಂಜ್ಯೋತಿ ಪರಮಪಾವನಮೂರ್ತಿ। ಉರುತರಪರಬ್ರಹ್ಮ ಆನಂದ ಪರಮೇಷ್ಠಿ ಪರಾತ್ಪರ ಪರಮಪುರುಷ॥ ನಿರುಪಮ ನಿಜಾನಂದ ನಿರ್ಭಯ ನಿರಾವರಣ । ನಿರವಧಿಕ ನಿರ್ಗುಣ ನಿರಂಜನ ನಿರಾಧಾರ । ನಿರವದ್ಯ ನಿಸ್ಸಂಗ ನಿಶ್ಚಿಂತ ನಿತ್ಯನೆ ನೋಯಿಸದೆ ಸಲಹೆನ್ನನಿಂದು ॥ ಹರಿಯೇ--- ॥ ೬॥

ಇಂತೆನುತ ಮೂರ್ಛೆಯಲಿ ಕಂಪಿತ ಕಂಠಧ್ವನಿಯೊ-। ಳಂತರಾತ್ಮಕನ ನೆನೆಯುತ್ತ - ಳುತ್ತಿರಲತ್ತ-। ನಂತಮಹಿಮನು ಕೇಳಿ ಕರುಣದಿಂದಾಕ್ಷಣಾನಂತಶಯನದಿಂದೆದ್ದನು ॥ ಸಂತಸದಿ

ಸಿರಿಸಹಿತ ಗರುಡವಾಹನನಾಗಿ । ಚಿಂತೆ ಬೇಡೇಳೆನುತ ಅಭಯ ಹಸ್ತವನಿತ್ತೇ - । ಕಾಂತಭಕ್ತನ ಬಳಿಗೆ ಬಂದೆರಡು ಕೈಗಳಿಂದ ದಂತಿರಾಜನನು ನೆಗಹಿದ ॥ ಹರಿಯೇ--- ॥ ೭॥

ನೆಗಳಿ ಬಾಯನು ಚಕ್ರದಲಿ ಸೀಳಿ ಕರಿವರನ । ಉಗುವ ಕರುಣದಲಿ ಮೈದಡಹಲ್ಕೆ ಗಜಜನ್ಮ। ತೆಗೆದುದಾಕ್ಷಣವೆ ಮಣಿ ಮುಕುಟಕುಂಡಲದಿಂದ ಮಿಗೆ ಶೋಭಿಸುತಲೆಸೆದನು ॥ ವಿಗಡ ದೇವಲಮುನಿಯ ಶಾಪದಲಿ ಬಂದು ಭೂ । ಮಿಗೆ ನಕ್ರವಾಗಿ ಹೂ ಹೂ ಎಂಬ ಗಂಧರ್ವ। ನಗಧರನ ಕಂಡು ನಿಜಗತಿಗೈದುದಮರರೊಳ್ಮಿಗೆ ಮೆರೆದುದೋಲೈಸುತ ॥ ಹರಿಯೇ--- ॥ ೮॥

ಮಣಿಮಯ ಕಿರೀಟಕುಂಡಲ ಹಾರ ಕೌಸ್ತುಭದಿ । ಮಿನುಗುತಿಹ ವೈಜಯಂತಿ ಭೂಷಣಾವಲಿಯ। ಫಣಿಯ ಕಸ್ತೂರಿತಿಲಕ ನಾಮದಿಂದೆಸೆವುತಿಹ ವರ ಶಂಖ ಚಕ್ರದಿಂದ ॥ ಝಣ ಝಣಿತ ನೂಪುರದ ದಂತಪಂಕ್ತಿಯ ಕೃಪೇ । ಕ್ಷಣದ ಸಿರಿವೊಗದ ಪೀತಾಂಬರಾಲಂಕೃತದಿ। ಮಣಿದು ಜಯ ಜಯವೆಂಬ ಸುರಸಿದ್ಧಸಾಧ್ಯಸಂದಣಿಯೊಳಗೆ ಹರಿ ಮೆರೆದನು ॥ ಹರಿಯೇ--- ॥ ೯॥

ಹರಿಯ ಸ್ತುತಿಗೈದಂಘ್ರಿಗೆರಗಲಾ ಭೂಪನಾ- । ದರದಿಂದ ಸತ್ಕರಿಸಿ ಶರಧಿ ಶ್ವೇತದ್ವೀಪ । ಗಿರಿಶೃಂಗ ವಾರಾಶಿ ತರು ಶೇಷ ವಾಲ್ಮೀಕಿ ಮುನಿ ಧರಣಿ ಧ್ರುವ ಲಕ್ಷ್ಮಿಯು॥ ಹರ-ಗಿರಿಜೆ - ವಿಧಿ-ವಾಣಿ -ನಾರದ - ಪ್ರಹ್ಲಾದ । ಗರುಡ-ಗೋ-ವಿಪ್ರ-ಋಷಿ-ಗಂಗಾರ್ಕ-ಚಂದ್ರಾಗ್ನಿ । ಸಿರಿ ವತ್ಸ ಶಂಖ ಚಕ್ರಾದ್ಯವತಾರಗಳ ಸ್ಮರಿಸುವವರ ಕಾಯ್ವೆನೆಂದಾ ॥ ಹರಿಯೇ --- ॥ ೧೦॥

ಆವನಿದನುದಯಕಾಲದೊಳೆದ್ದು ನಿಜಭಕ್ತಿ । ಭಾವಶುದ್ಧಿಗಳಿಂದ ಪೇಳಿ ಕೇಳ್ವನೋ ಅವನ । ಸಾವಿರಾರ್ಜನ್ಮಗಳ ಸಂಚಿತಘರಾಶಿಗಳು ತಾವೆ ಹತವಾದವೆಂದು॥ ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರ ಸಹಿ- । ತಾವಿಹಂಗಾಧಿಪನನೇರಿ ವೈಕುಂಠಕ್ಕೆ। ದೇವ ಬಿಜಯಂಗೈದ ಪುರಂದರವಿಠಲನ ಸೇವಕರಿಗಿದು ಚಿತ್ರಮೇ ॥ ಹರಿಯೇ --- ॥ ೧೧॥

**॥ ಗಜೇಂದ್ರಮೋಕ್ಷವು ಮುಗಿದುದು ॥**

## ೧೧) ದ್ರೌಪದೀಮಾನರಕ್ಷಣೆ

ವಾಸುದೇವಾಯ ನಮೋ ವಾಸುಕೀಶಯನಾಯ । ವಾಸವಾದ್ಯಖಿಳಸುರ ನಮಿತಪಾದಾಂಭೋಜ। ಭೂಸುರಪ್ರಿಯ ಭಜಕಪೋಷಕನೆ ರಕ್ಷಿಪುದು ಕೇಶವ ಅನಾಥ ಬಂಧೋ॥ ಪ॥ ಶುಂಡಾಲಪುರದೊಳಗೆ ದುರುಳದುರ್ಯೋಧನನು । ಪಾಂಡುನಂದನರೊಡನೆ ಕಪಟ ಜೂಜುಗಳಾಡಿ । ಗಂಡರೈವರ ಮುಂದೆ ದ್ರುಪದ ಸುತೆಯಳ ಸೆರಗ ಲಂಡ ದುಶ್ಶಾಸ ಪಿಡಿದು ॥ ಅಂಡಲೆದು ಸೀರೆಯನು ಸೆಳೆಯುತಿರೆ ಸುವ್ರತೆಯು। ಕಂಡು ಮನದಲಿ ಬೆದರಿ ಪರಮಾತ್ಮ ಪರಿಪೂರ್ಣ । ಪುಂಡರೀಕಾಕ್ಷ ರಕ್ಷಿಪುದೆನುತ ಮೊರೆಯಿಟ್ಟಳಂಡಜತುರಂಗಗಾಗ ॥೧॥

ಪತಿಗಳೈವರು ಸತ್ಯವ್ರತದಿ ಸುಮ್ಮನೆ ಇಹರು । ಅತಿಕ್ಲೇಶ ಬಡುತಿಹರು ವಿದುರ ಭೀಷ್ಮಾದಿಗಳು। ಸುತನ ಮೇಲಣ ಮೋಹ ಮಮತೆಯಲಿ ಸುಮ್ಮನಿಹ ಗತಲೋಚನದ

ಮಾವನು ॥ ಕೃತಕಪಟದಲ್ಲಿಹರು ಶಕುನಿ ಕರ್ಣಾದಿಗಳು । ಹಿತವ ಬಯಸುವರಾರ ಕಾಣೆ ನಾನಿವರೊಳಗೆ । ಗತಿಯಿಲ್ಲದರ್ಗೆ ಸದ್ಗತಿ ನೀನೆ ಯಾದುದಕೆ ರತಿಪತಿಯ ಪಿತನೆ ಸಲಹೊ ॥೨॥

ಪಾವಕನ ಉರಿಯೊಳಗೆ ಹೊಕ್ಕು ಹೊರಡಲಿ ಬಹುದು । ಹಾವುಗಳ ಹೆಡೆ ಪಿಡಿದು ಎಳೆದೆಳೆದು ತರಬಹುದು । ತೀವಿರ್ದ ಮಡು ಧುಮುಕಿ ಏಳಲಿಬಹುದು । ಗರಳವನು ಕುಡಿದು ಬದುಕಬಹುದು ॥ ಸಾವಿಗಂಜದೆ ಕೊರಳ ಕತ್ತರಿಸಿಕೊಳಬಹುದು। ಜೀವವಿದ್ದಂತೆ ಲಜ್ಜೆಯ ತೊರೆಯಲಾರೆನ್ನೈ । ಆವ ಪರಿಯಲಿ ನಿನ್ನ ನಂಬಿದಾನಾಥಳನು ದೇವಾಭಿಮಾನ ಕಾಯೋ ॥೩॥

ಅತ್ತೆಯಲ್ಲವೆ ಎನಗೆ ಗಾಂಧಾರಿ ದೇವಿಯರೆ । ಮೃತ್ಯುವಂತೆಳೆವನಿವನ ಬಿಡಿಸಬಾರದೆ ತಾಯೆ। ಉತ್ತಮಳೆ ನೀನು ಭಾನುಮತಿ ನೆಗೆಹೆಣ್ಣೆ ಇತ್ತ ದಯಮಾಡಿ ನೋಡೆ ॥ ಸುತ್ತ ನೆರೆದಿಹ ಸಭೆಯ ಪರಿವಾರದವರೆಲ್ಲ । ಪೆತ್ತುದಿಲ್ಲವೆ ಎನ್ನ ಪೋಲ್ವ ಪೆಮ್ಮಕ್ಕಳನು । ಹುತ್ತದೊಳು ಹುದುಗಿರ್ದ ಸರ್ಪ ಸಾಯಲಿ ಬಹುದೆ ತತ್ವಬಾಹಿರರಾದಿರಾ ॥೪॥

ಆರಿಗೊರಲಿದರೆನ್ನ ದೂರು ಕೇಳುವರಿಲ್ಲ । ಪಾರುಗಾಣಿಸುವರ ಕಾಣೆ ನಾನಿದರೊಳಗೆ। ಸಾರಿದರೆ ಪೊರೆವ ಕಂಸಾರಿ ನೀನಲ್ಲದಿನ್ನಾರು ಎನಗಾಪ್ತ ಬಂಧು॥ ಮಾರಿದರು ಧರ್ಮದೇವತೆಗೆನ್ನ ವಲ್ಲಭರು। ಭಾರ ನಿನ್ನದು ಎಂದು ನಂಬಿದ ಅನಾಥಳನು । ನೀರಿನೊಳಗದ್ದು ಕ್ಷೀರದೊಳಗದ್ದು ಗತಿ ನೀನೇ ನಾರಾಯಣಾ ರಕ್ಷಿಸೋ ॥೫॥

ಅಸುರ ಬೆನ್ನಟ್ಟಿ ಬರೆ ಪಶುಪತಿಯ ರಕ್ಷಿಸಿದೆ । ಋಷಿಶಾಪವನು ಧರಿಸಿದಂಬರೀಷನ ಕಾಯ್ದೆ। ವಸುಧಿಯೊಳು ಕಲ್ಲಾಗಿ ಬಿದ್ದಹಲ್ಯೆಯ ಪೊರೆದೆ ಶಿಶು ಪ್ರಹ್ಲಾದಗೊಲಿದೆ ॥ ಪಸುಳೆ ಧ್ರುವರಾಯಂಗೆ ಪೆಸರುಳ್ಳ ಪದವಿತ್ತೆ । ದಶಕಂಠನನುಜಂಗೆ ಸ್ಥಿರಪಟ್ಟವನು ಕೊಟ್ಟೆ। ಪೆಸರುಗೊಂಡರೆ ಮಗನ ಅಜಮಿಳನ ರಕ್ಷಿಸಿದೆ ವಸುದೇವ ಸುತನೆ ಸಲಹೋ ॥೬॥

ಲಕ್ಷ್ಮೀ ಮನೋಹರನೆ ಇಕ್ಷುಚಾಪನ ಪಿತನೆ । ಯಕ್ಷ ಗಂಧರ್ವ ಮುನಿ ಅಮರೇಂದ್ರ ವಂದಿತನೆ । ಅಕ್ಷಯನೆ ಆಟದೊಳು ಜಗವ ಮೋಹಿಪ ಸ್ಥೂಲ ಸೂಕ್ಷ್ಮದೊಳು ಪರಿಪೂರ್ಣನೆ॥ ಕುಕ್ಷಿಯೊಳು ಈರೇಳು ಜಗವ ಪಾಲಿಸುತಿಹನೆ । ಅಕ್ಷಯ ಸುರಾಂತಕಗೆ ಅಜಪದವನಿತ್ತವನೆ । ದಕ್ಷಸುತೆ ಪತಿ ಸಖನೆ ಪಕ್ಷಿವಾಹನ ದೇವ ರಕ್ಷಿಸೊ ಅನಾಥ ಬಂಧೋ ॥೭॥

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ । ಇಂದೆನ್ನ ಕುಲ ಸ್ವಾಮಿ ಗುರು ಪಿತಾಮಹ ನೀನೆ । ಎಂದು ನಂಬಿದೆನೆನ್ನ ಮಾನಾಭಿಮಾನವ ಮುಕುಂದ ನಿನಗೊಪ್ಪಿಸಿದೆನ್ನೈ ॥ ಸಂದೇಹವೇಕೆ ಕೊಂದರೆ ಒಳಿತು ಕಾಯ್ದರೆ ಒಳಿತು । ಎಂದು ಕಣ್ಗಳ ಮುಚ್ಚಿ ಕರತಲಂಗಳ ನೆಗಹಿ । ಇಂದು ಪ್ರಾಣವ ಬಿಡುವೆನೆಂದು ನಿಶ್ಚಯಿಸಿ ಗೋವಿಂದ ಎಂದಳು ಮೃಗಾಕ್ಷಿ ॥ ೮॥

ಇಂತೆನುತ ದ್ರೌಪದಿಯು ಮೊರೆಯಿಡುವುದಂ ಕೇಳಿ । ಅಂತರಾತ್ಮಕ ಕೃಷ್ಣ ದ್ವಾರಕಾಪುರದೊಳಗೆ। ಕಾಂತೆರುಕ್ಮಿಣಿ ಸತ್ಯಭಾಮೆಯರೊಡಗೂಡಿ ಏಕಾಂತ ಭವನದೊಳು ಕುಳಿತು ॥ ಕುಂತಿನಂದನರ ಸತಿ ಉಟ್ಟದಕ್ಷಯವಾಗಿ । ಸಂತೋಷಗೊಳಲೆಂದು ವರವಿತ್ತ ಶ್ರೀಕೃಷ್ಣ। ಎಂತುಂಟೋ ಹರಿಕೃಪೆಯು ನೆನೆವ ಭಕುತರ ಮೇಲೆ ಅನಂತ ವಸ್ತ್ರಗಳಾದುವೈ॥೯॥

ಸೆಳೆವುತಿರ್ದನು ಖಳನು ಬೆಳೆಯುತಿರ್ದವು ಸೀರೆ । ಬಿಳಿಯಪೊಂಬಟ್ಟೆ ನಾನಾ ವಿಚಿತ್ರದ ಬಣ್ಣ । ಹೊಳಲು ತುಂಬುವ ತೆರದೊಳೆಳೆದೆಳೆದು ಪಾಪಾತ್ಮ ಬಳಲಿ ಇಳೆಯೊಳು ಬಿದ್ದನು ॥ ಕಳೆಯು ಕುಂದಿತು ಮೋರೆ ಶಕುನಿ ದುರ್ಯೋಧನರ ॥ ಬಳಿಯೆ ನಿಂತಿದ್ದ ಭಟರನು ಕರೆದು ನೇಮಿಸುತ।ಇಳುಹುದೀ ವಸ್ತ್ರಗಳ ಕಳುಹು ಬೊಕ್ಕಸಕೆನಲು ನಳಿನಮುಖಿ ತಿಳಿದಳದನು ॥೧೦॥

ಸಿಟ್ಟಿನಲಿ ಸುವ್ರತೆಯು ಕಣ್ದೆರೆದು ನೋಡಿದಳು । ಬೆಟ್ಟದಂತೊಟ್ಟಿದ್ದ ವಸ್ತ್ರರಾಶಿಗಳೆಲ್ಲ। ಸುಟ್ಟಗ್ನಿ ಹೊರಸೂಸೆ ರಾಜಸಭೆ ಮನೆ ಕೆಲವು ಪಟ್ಟಣಾಹುತಿಗೊಂಡವ್ಯೆ । ಕೊಟ್ಟಳೈ ಶಾಪವನು ಕಮಲಮುಖಿ ಕುರುಪತಿಗೆ । ಕಟ್ಟಾಳು ಭೀಮಸೇನನು ರಣದಿ ಗದೆಯಿಂದ ॥ ಕುಟ್ಟಿಬಿಸುಡಲಿ ನಿನ್ನ ತೊಡೆಗಳೆರಡನು ಎಂದು ಇಟ್ಟ ನುಡಿ ತಪ್ಪಲುಂಟೆ ॥೧೧॥

ಮೂಡಿದವು ಪ್ರತಿಸೂರ್ಯ ಧೂಮಕೇತುಗಳು ಓ-। ಡಾಡಿದ್ದವು ಗಗನದೊಳು ಹದ್ದು ಕಾಗೆಗಳು ಕಾ- । ದಾಡಿದವು ಮೃಗಜಾತಿ ಚಲಿಸಿದವು ಶಿಲೆಪ್ರತಿಮೆ ರೂಢಿ ಗಡಗಡ ನಡುಗಿತು ॥ ಮೂಡಿದವು ನಕ್ಷತ್ರರಾಶಿಗಳು ದಿವದಿ ಮಾ - । ತಾಡಿದವು ಅಶರೀರ ವಾಕ್ಯಗಳು ಪುರಜನರು। ಕೇಡು ಕೌರವಗಾಗದಿರದೆಂದು ನಿಶ್ಚಯಿಸಿ ಓಡಿ ಮನೆಗಳ ಪೊಕ್ಕರು ॥೧೨॥

ಹರುಷಬಟ್ಟರು ಮನದಿ ವಿದುರ ಭೀಷ್ಮಾದಿಗಳು । ಸುರರು ನಾರದರು ಕೂಡಿ ನೆರೆದರಭ್ರದ ಮೇಲೆ । ಹರಸಿ ಜಯ ಜಯವೆಂದು ದ್ರೌಪದಿಯ ಸಿರಿ ಮುಡಿಗೆ । ಸುರಿಸಿದರು ಪೂಮಳೆಗಳ ॥ ಹರಿಯ ನಾಮಾವಳಿಯ ಪೊಗಳುತಲೆ ದಿವಿಜೇಂದ್ರ । ತಿರುಗಿ ಪೋದನು ತನ್ನ ಪಟ್ಟಣಕೆ ಧರೆ ಮೇಲೆ । ಹರಿನಾಮವನು ನೆನೆವರೇನು ಧನ್ಯರೋ ದ್ರೌಪದಿಯ ಹರಿನಾಮವೇ ಕಾಯಿತು ॥ ೧೩॥

ಆವನಿದನುದಯ ಕಾಲದೊಳು ನಿಜಭಕುತಿಯಲಿ । ಭಾವಶುದ್ಧಿಯಲಿ ಭಜನೆ ಮಾಡುವಂಥವನ । ಸಾವಿರ ಜನ್ಮದ ಸಂಚಿತದ ಪಾಪಗಳು ತಾವೇ ಹತವಾಹುವೆಂದು ॥ ಶ್ರೀವಾಸುದೇವನಾಜ್ಞಾಪಿಸಿದ ರುಕ್ಮಿಣಿಗೆ । ದೇವಿ ಕೇಳೆನ್ನ ಭಾಷೆಯ ಮುಂದೆ ಅರ್ಜುನಗೆ । ನಾವೆ ಸಾರಥಿಯಾಗಿ ಸಲಹುವೆವು ಅವರೆಮ್ಮ ಜೀವ ಪಾಂಡವರೆಂದನು ॥ ೧೪॥

ಮಂಗಳಂ ಝುಷಕೂರ್ಮ ಘೋರ ನರಹರಿ ವಟುಗೆ । ಮಂಗಳಂ ಭಾರ್ಗವಗೆ ರಾಮಕೃಷ್ಣ ಬುದ್ಧರಿಗೆ । ಮಂಗಳಂ ಕಲ್ಕಿಗೆ ಅನಂತ ಅವತಾರನಿಗೆ ಮಂಗಳಂ ಸಿರಿಯರಸಗೆ ॥ ಮಂಗಳಂ ಮುರಹರಗೆ ಮಂಗಳಂ ನಗಧರಗೆ । ಮಂಗಳಂ ದ್ರೌಪದಿಯ ಮಾನವನು ಕಾಯ್ದವಗೆ । ಮಂಗಳಂ ಜಗದೀಶ ಪುರಂದರ ವಿಠ್ಠಲಗೆ ಜಯಮಂಗಳಂ ನಿತ್ಯಶುಭ ಮಂಗಳಂ ॥ ೧೫॥

## ೧೨) ಮನೆವಾರ್ತಾ ಹಾಡು (ಶ್ರೀವಾದಿರಾಜತೀರ್ಥವಿರಚಿತ)

ಹೊತ್ತಾರೆ ಎದ್ದು ಶ್ರೀ ಕೃಷ್ಣನ್ನ ನೆನೆವೆನು । ಭಕ್ತವತ್ಸಲ ನಿನ್ನ ಅರಮನೆಯ ಕೆಲಸವ। ಭಕ್ತಿಯಿಂದಲಿ ಮಾಡತೊಡಗೂವೆ ॥ ೧॥ ಉದಯಕಾಲದಲೆದ್ದು ಪದುಮನಾಭನ ನೆನೆದು । ಗರುಡವಾಹನ ನಿಮ್ಮ ಅರಮನೆಯ ಕೆಲಸವ । ಮುದದಿಂದಲಿ ಮಾಡತೊಡಗೂವೆ ॥ ೨॥ ಅನಿರುದ್ಧ ಪ್ರದ್ಯುಮ್ನ ಸಂಕರುಷಣ ವಾಸು-। ದೇವರಾ ವಾಸದಾ ಅರಮನೆಯ ಕಸಗಳನು ।

ದಾಸಿಯಾಗಿದ್ದು ನಾ ಬಳಿಯೂವೆ ॥ ೩॥ ಉಪ್ಪರಿಗೆ ಸಾರಿಸಿ ಮತ್ತೆ ಸಾರಣೆಗೊಂಡು । ಅಚ್ಚಮುತ್ತಿನ ರಂಗವಲ್ಲಿಯನೆ ಹಾಕಿ ನಾ । ಅಚ್ಯುತನ ಚರಣಕ್ಕೆ ಎರಗೂವೆ ॥ ೪॥ ಪಂಕಜಾಕ್ಷನ ಮನೆಯ ಬಂಕ ಬೃಂದಾವನಕೆ। ಶಂಖಚಕ್ರಗದಾ ಪದ್ಮವನೆ ಇಟ್ಟು ನಾ । ಪಂಚವರ್ಣದ ಗಿಳಿಯ ರಚಿಸೂವೆ ॥ ೫॥ ನೂರೆಂಟು ಕೋಟಿ ಅರಮನೆಯ ಉಪಕರಣಗಳ । ತೊಳೆದು ಮನೆವಾರ್ತೆಯ ಹಾಡಿ । ನರಹರಿಯ ಚರಣಕ್ಕೆ ಎರಗೂವೆ ॥ ೬॥ ಕಂಚು ಕಲಾಯದ ಪಾತ್ರೆ ಪಂಚಲೋಹದ ಪಾತ್ರೆ । ಸಂಕರ್ಷಣಮೂರ್ತಿ ಸವಿಪಾಕದ ಪಾತ್ರೆ । ಸಂತೋಷದಿಂ ತೊಳೆದುಒಳಗಿಡೂವೆ ॥ ೭॥ ಗೋಕುಲಾದೊಳಗ್ಹುಟ್ಟಿ ಗೋವರ್ಧನಗಿರಿನೆತ್ತಿದ। ಗೋಪಾಲಕೃಷ್ಣನಿಗೆ ಶರಣೆಂದು ನಾನೀಗ । ಆಕಳಾ ಕರೆಯೂವೆ ಹರುಷದಲ್ಲಿ॥ ೮॥ ಯಾದವರಾಯನಿಗೆ ಮನೆಹಾಲು ಕಾಸಿಡುವೆ । ಮಾಧವರಾಯನಿಗೆ ಆರೋಗಣೆಯ ಮಾಡೆ । ಬೇಡಿದಿಷ್ಟಾರ್ಥ ಕೊಡುವ್ಹೋನೇ॥೯॥ ದಧಿಯ ಸಮುದ್ರನ್ನ ಹೃದಯದೊಳಗಿಂಬಿಟ್ಟು । ದಧಿಯ ವಾಮನನ ಮನದೊಳಗೆ ಪಾಡುತ್ತ । ದಧಿಯ ಕಡೆಯೂವೆ ಹರುಷದಲ್ಲಿ ॥ ೧೦॥ ಆದ ಬೆಣ್ಣೆಯ ಕಾಸಿ ಘೃತವ ಪಾತ್ರೆಗೆ ಹಾಕಿ। ದೇವರ ನೈವೇದ್ಯಕ್ಕಿಟ್ಟು ಮಿಕ್ಕಾದ್ದು ನಾ । ದೀವಿಗೆ ಹಚ್ಚಿಡುವೆ ನರಹರಿಗೆ ॥ ೧೧॥ ಗಂಗೆ ಉದಕವ ಕಾಸಿ ಕಂಪೆಣ್ಣೆಗಳ ಹಚ್ಚಿ । ಕಂದರಿಗೆ ನೀರೆರೆದು ಮೊಲೆ ಕೊಟ್ಟು ನಾನೀಗ। ಇಂದಿರಾಪತಿಗೆ ಎರಗೂವೆ ॥ ೧೨॥ ಉಂಡ ಕಂದರಿಗೆ ಎಂಜಲಾ ಕೈತೊಳೆದು । ಮುಂಜರಗ ತಕ್ಕೊಂಡು ಮೈ ಒರೆಸಿ ನಾನೀಗ । ಅಂಗಳಕೆ ಆಡ ಕಳಹೂವೆ ॥೧೩॥ ಗಂಗೆ ಗೋದಾವರಿ ಸಿಂಧು ಕಾವೇರಿಯಲಿ । ಮಿಂದು ಮೈತೊಳೆದು ಹಣೆಗಿಟ್ಟು ನಾನೀಗ। ಇಂದಿರಾಪತಿಗೆ ಎರಗೂವೆ ॥ ೧೪॥ ಹೊಳೆವ ಅರಿಶಿನ ಹಚ್ಚಿ ನದಿಯೊಳಗೆ ಮೈತೊಳೆದು । ಚೆಲುವ ಊರ್ಧ್ವಪುಂಡ್ರಗದೆ ಕುಂಕುಮಾ ಹಚ್ಚಿ । ನರಹರಿಯ ಚರಣಕ್ಕೆ ಎರಗೂವೆ ॥ ೧೫॥ ಗುರುಗಳೂ ಕೊಟ್ಟಂತೆ ಪರಮ ಮಂತ್ರವ ಜಪಿಸಿ । ಒಡನೆ ಪ್ರಾದಕ್ಷಿಣೆ ನಮಸ್ಕಾರವನೆ ಮಾಡಿ। ನರಹರಿಯ ಚರಣಕ್ಕೆ ಎರಗೂವೆ ॥ ೧೬॥ ಮಂಗಳಾ ಮಹಿಮನ ಉಂಗುಷ್ಠದಲಿ ಜನಿಸಿದ । ಗಂಗೆಯಾ ತಂದು ಶ್ರೀಹರಿಯ ನೈವೇದ್ಯಕ್ಕೆ । ಹಂಡೆ ಹಂಡೆಗಳಲ್ಲಿ ಇರಿಸೂವೆ ॥೧೭॥ ಆರತಿ ಕರ್ಪೂರ ನೀರಾಜನಗಳ ತುಂಬಿ । ಪರಿಪರಿಯ ಪುಷ್ಪಮಾಲಿಕೆಗಳನೆ ಕಟ್ಟಿ । ನರಹರಿಯ ಪೂಜೆಗೆ ಇರಿಸೂವೆ ॥ ೧೮॥ಹಾಗಲ್ಹೀರೆಕಾಯಿ ಬೇಗ ಬೆಂಡೇಕಾಯಿ । ಸಾಗರಾಶಯನನಾ ನೈವೇದ್ಯಕ್ಕಣಿ ಮಾಡಿ । ಶಾಕಗಳಾ ಹೆಚ್ಚಿ ಇರಿಸೂವೆ ॥ ೧೯॥ ಪಾಯಸಾ ಭಕ್ಷವೂ ಸೂಪ ಶಾಕಾನ್ನವೂ। ಆಯತವಾಗಿದ್ದ ಲವಣ ಶಾಕಾನ್ನವೂ । ದೇವರ ನೈವೇದ್ಯಕ್ಕಿಡುವೇನೇ ॥ ೨೦॥ ದೇವರ ನೈವೇದ್ಯಕ್ಕಿಟ್ಟು ಬೇಗ ವೈಶ್ವ - । ದೇವ ಗೋಗ್ರಾಸಕ್ಕೆ ತೆಗೆದು ನಾನೀಗ । ಹಸ್ತೋದಕಕ್ಕೆ ಇಡುವೇನೂ ॥ ೨೧॥ ಅಚ್ಚುತಾ ಶ್ರೀತುಳಸಿಗೆ ಭಕ್ತಿಯಿಂದೆರಗುತಾ ಪೂಜಿಸಿ । ಅಚ್ಚ ಶ್ರೀಗಂಧವನು ಕೊರಳಿಗೆ ಲೇಪಿಸಿ। ಮುತ್ತಿನಾರುತಿಯಾ ಬೆಳಗೂವೆ ॥ ೨೨॥ ಅಚ್ಚುತಾ ಶ್ರೀತುಳಸಿ ಕೊಟ್ಟ ಪ್ರಸಾದವನು। ಮುಡಿಯಲ್ಲಿ ಮುಡಕೊಂಡು ನಾನೀಗ । ಅಚ್ಚುತಾ ಶ್ರೀತುಳಸೀಗೆರಗೂವೆ ॥ ೨೩॥ ಹಿರಿಯರೂ ಗುರುಗಳೂ ನೆರೆದು ನಾರಾಯಣನ । ಪೊಗಳುವ ಪುರಾಣವನು ।ಕೇಳುವೆನು ಶ್ರೀಹರಿಯ ಕೃಪೆಯಿಂದ ॥ ೨೪॥ ಗೌರಿ ವೊಸರನ್ನವನು ಹರಿವಾಣದೊಳಗಿಟ್ಟು।

ಹರಿಯದಾಸರಿಗೆ ಉಣಲಿಟ್ಟು, ನಾನೀಗ । ನರಹರಿಯ ಚರಣಕ್ಕೆ ಎರಗೂವೆ ||೨೫|| ಅತ್ತೆಮಾವಂದಿರಿಗೆ ಪುತ್ರರಿಗೆ ಮಿತ್ರರಿಗೆ । ವಿಷ್ಣುದಾಸರಿಗೆ ಸುಗುಣಿ ಬಾಂಧವರಿಗೆ। ಅರ್ಥಿಯಿಂದಲಿ ಉಣಲು ಬಡಿಸೂವೆ || ೨೬|| ಉಂಡು ಕೈತೊಳೆದವರಿಗೆ ತಾಂಬೂಲಗಳ ಕೊಟ್ಟು । ಎಂಜಲಾ ಬಳಿದು ಪತಿ ಉಂಡ ಶೇಷವನು। ಭುಂಜಿಪೆನು ಶ್ರೀಹರಿಯ ಕೃಪೆಯಿಂದ || ೨೭|| ಸಂಜೆಯಾ ಹೊತ್ತಿನಲಿ ದೀಪವನು ಹಚ್ಚಿರಿಸಿ । ಗೋವುಗಳನೆ ಕರೆದು ಕ್ಷೀರವನು ಕಾಸಿ ನಾ । ದೇವರ ನೈವೇದ್ಯಕ್ಕಿಡುವೇನು ||೨೮|| ಸಂಜೆಯಾ ಕಸಬಳಿದು ಉಂಬುವರಿಗುಣಲಿಟ್ಟು। ಸಂಭ್ರಮಾದಿಂದ ಪಡಿಹಾಸಿ ಮಂಚವನು । ಇಂದಿರಾಪತಿಗೇ ಎರಗೂವೆ || ೨೯|| ಪತಿಯು ಅಂತರ್ಯಾಮಿ ಶ್ರೀಪತಿಯೆ ಗತಿಯೆಂದು । ಪತಿಯ ಪಾದವನೊತ್ತಿ ಹರುಷದಲಿ । ಕರ್ಪೂರವೀಳ್ಯಗಳ ಕೊಡುವೇನು || ೩೦|| ಕ್ಷೀರಸಾಗರದಲ್ಲಿ ಶೇಷನ್ಹಾಸಿಗೆಯಲಿ । ಶ್ರೀಲಕ್ಷ್ಮೀಸಹಿತಾಗಿ ಮಲಗಿರ್ಪ ಹರಿಯನ್ನು । ಧ್ಯಾನಿಸುತ ಪತಿಯ ಜೊತೆ ಮಲಗೂವೆ ||೩೧|| ಯೋಗೀಂದ್ರರಾಯರಾ ಪಾದಕ್ಕೆ ಶರಣೆಂಬೆ । ಈ ಧರೆಯೊಳಗೆ ಸಾಧು ಸಜ್ಜನರಿಗೆ। ಬೇಡಿದಿಷ್ಟಾರ್ಥಗಳ ಕೊಡುವೋನೇ || ೩೨|| ನಿತ್ಯ ಈ ಹಾಡು ತಪ್ಪದೇ ಹೇಳ್ವರಿಗೆ। ಮುತ್ತೈದೆತನವನ್ನು ಮುಕ್ತಿಯನ್ನೂ ಕೊಟ್ಟು । ರಕ್ಷಿಸುವ ನಮ್ಮ ಶ್ರೀಹಯವದನನು || ೩೩|| ಯಾವಾಗ ಈ ಹಾಡು ಪ್ರೇಮದೀ ಹೇಳಿ ಕೇ- । ಳಿದರೆ ಸಾವಿತ್ರಿತನವನ್ನು ಸಾಯುಜ್ಯ ಪದವಿಯನು ಕೊಟ್ಟು । ರಕ್ಷಿಸುವ ನಮ್ಮ ಶ್ರೀಹಯವದನನು || ೩೪||

**ಶ್ರೀಮದ್ವಾದಿರಾಜತೀರ್ಥರಿಂದ ರಚಿತವಾದ ಮನೆವಾರ್ತೆ ಪದ್ಯವು ಸಂಪೂರ್ಣವಾಯಿತು**

**|| ಶ್ರೀಕೃಷ್ಣಾರ್ಪಣಮಸ್ತು ||**

ಮೇಲಿನ ಹಾಡುಗಳನ್ನು ಅಂದಮೇಲೆ ಅಥವಾ ಅನ್ನುತ್ತಾ ಅರುಣೋದಯದ ಒಳಗೆ ದೇವರಮನೆ, ಒಳಗಿನ ಮನೆ, ಅಂಗಳ ಮುಂತಾದೆಡೆ ಕಸಗೂಡಿಸಿ, ಥಳಿ ಹಾಕಿ, ನೆಲವನ್ನು ಗೋಮಯ ನೀರಿನಿಂದ ಸಾರಿಸಿ ಅಥವಾ ನೀರಿನಿಂದ ಒರೆಸಿ ಸ್ವಚ್ಛಮಾಡಿ ರಂಗವಲ್ಲಿಗಳಿಂದ ಅಲಂಕರಿಸಬೇಕು. ಹೊರಗೆ ನಿಂತುಕೊಂಡು ಹೊಸ್ತಿಲಗಳನ್ನು ಸಾರಿಸಿ ಮೇಲೆ ೫-೫ ರಂಗವಲ್ಲಿ ಎಳೆಗಳನ್ನು ಮಧ್ಯದಲ್ಲಿ ಸ್ವಸ್ತಿಕ ಮತ್ತು ಮೂರುಸುತ್ತಿನ ಕೋಡಬೋಳೆಯಾಕಾರವನ್ನು ಹಾಕಬೇಕು( ವಿವರವನ್ನು ಬಲ್ಲವರಿಂದ ತಿಳಿದುಕೊಳ್ಳಬೇಕು). ನಂತರ ಅರಿಷಿಣ ಕುಂಕುಮ ಹಚ್ಚಬೇಕು.

**ಅರಿಷಿಣ ಕುಂಕುಮ ಹಚ್ಚುವಾಗಿನ ಮಂತ್ರ :**

ಅಸ್ಮದ್ಬಿಂಬಾಭಿನ್ನ ಪತಿಗೋಲಕ, ಭಾರತೀರಮಣಮುಖ್ಯಪ್ರಾಣಾಂತರ್ಗತ, ಶ್ರೀದೇವೀಪತಿ ಪುರುಷಾಯ ನಮಃ, ಭೂದೇವೀಪತಿ ತೈಜಸಾಯ ನಮಃ, ದುರ್ಗಾಪತಿ ಕಾಲಾಯ ನಮಃ ||

"ಹಿಂದಿನ ದಿನದಿಂದ ಇವತ್ತಿನ ವರೆಗೆ ಮಾಡಿದ ಪಾಪಗಳನ್ನು ಶ್ರೀಹರಿಯು ಕಳೆಯಲಿ" ಎಂಬ ಅನುಸಂಧಾನದಿಂದ ಮನೆಯ ಒಳಗೆ ಹಾಗೂ ಹೊರಗೆ ಥಳಿ ಹಾಕಿ ಸಾರಿಸಬೇಕು. ಇದರಿಂದ ಪಾಪಗಳ ನಿವಾರಣೆಯಾಗುವುದಲ್ಲದೆ ಮನೆಯ ಪರಿಸರದಲ್ಲಿರುವ ರೋಗ ಕ್ರಿಮಿಗಳು ನಾಶ ವಾಗುವವು. ದೇಹದಲ್ಲಿರುವ ರೋಗಗಳೂ ನಾಶವಾಗುವವು.

ಸಾರಿಸಿ ರಂಗವಲ್ಲಿಗಳನ್ನು ಹಾಕಿ ಅಲಂಕರಿಸುವದಾದಮೇಲೆ ಪೂಜಾ ಪಾತ್ರೆಗಳನ್ನು (ಉಪಕರಣಗಳು) ತೊಳೆದು, ಒರೆಸಿ ಇಟ್ಟುಕೊಳ್ಳಬೇಕು. ಮರುದಿನದ ಮಡಿ ಬಟ್ಟೆಗಳನ್ನು ಹಾಕಲು ಸಿದ್ಧಪಡಿಸಿ ಇಟ್ಟುಕೊಳ್ಳಬೇಕು. ಅಡಿಗೆ ಮಾಡಲು ಪಾತ್ರೆ ಪದಾರ್ಥಗಳನ್ನು ಸಿದ್ಧಪಡಿಸಿಕೊಂಡು ನಂತರ ಸ್ನಾನಕ್ಕೆ ಹೊರಡಬೇಕು.

## ಆಹ್ನಿಕ ೬ : ಸ್ನಾನ, ಸಂಕಲ್ಪ, ಅರ್ಘ್ಯ, ಭಾಗೀರಥೀ ಸ್ತೋತ್ರ :

ನದೀ ಮುಂತಾದ ಜಲಾಶಯಗಳಲ್ಲಿ ಸ್ನಾನ ಮಾಡುವಾಗ, ಅಥವಾ ಮನೆಯಲ್ಲೇ ಸ್ನಾನ ಮಾಡುವಾಗ ಗಂಗಾನದೀ ಜಲದಲ್ಲಿ ಸ್ನಾನ ಮಾಡುವುದಾಗಿ ಅನುಸಂಧಾನ ಮಾಡಿಕೊಂಡು ಸ್ನಾನಸಂಕಲ್ಪ ಪೂರ್ವಕ ಸ್ನಾನಮಾಡಬೇಕು. ಸ್ವಚ್ಛವಾದ 'ಗಂಗಾಲಯ' (ಗಂಗಾಳಂ = ಭಾಗೀರಥೀ ಬಕ್ಕೆಟ್ಟು)ದಲ್ಲಿ ಮೊದಲು ಒಂದು ತಂಬಿಗೆ ತಣ್ಣಗಿನ ನೀರನ್ನು ಹಾಕಿ ಅಲ್ಲಿ ಭಾಗೀರಥೀ ನದಿಯ ಅನುಸಂಧಾನ ಮಾಡಿಕೊಂಡು ನಂತರ ಅದರಲ್ಲಿ ತಣ್ಣೀರನ್ನು ಅಥವಾ ಬಿಸಿನೀರಿನ ಅಭ್ಯಾಸವಿದ್ದವರು ಬಿಸಿನೀರನ್ನು ಸೇರಿಸಿ ಸ್ನಾನಕ್ಕೆ ಸಿದ್ಧಪಡಿಸಿ ಇಟ್ಟುಕೊಳ್ಳಬೇಕು. ಸ್ನಾನ ಮಾಡಲು ಗಂಗಾನದಿಗೆ ಹೋಗುತ್ತಿರುವುದಾಗಿ ಭಾವಿಸಬೇಕು.

### ಸ್ನಾನ ಸಂಕಲ್ಪ

ಶ್ರೀವಿಷ್ಣು ವಿಷ್ಣು ಶ್ರೀಗೋವಿಂದ ಗೋವಿಂದ ಶ್ರೀಮದ್ಭಗವತೋ ಮಹಾಪುರುಷಸ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಚರಣೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ದೇಶೇ ಗೋದಾವರ್ಯಾಃ ದಕ್ಷಿಣೇ/ ಉತ್ತರೇ ತೀರೇ ಶಾಲಿವಾಹನ ಶಕೆ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ---- ಸಂವತ್ಸರೇ ----ಅಯನೇ ---- ಋತೌ---- ಮಾಸೇ---- ಪಕ್ಷೇ ---- ತಿಥೌ---- ವಾಸರೇ ಶುಭನಕ್ಷತ್ರ, ಶುಭಯೋಗ, ಶುಭಕರಣ, ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯತಿಥೌ ಶ್ರೀಮನ್ಮಧ್ವಾಚಾರ್ಯಾಣಾಂ ಅಂತರ್ಯಾಮಿ ರುಕ್ಮಿಣೀ ಸತ್ಯಭಾಮಾ ಸಹಿತ ಶ್ರೀಕೃಷ್ಣ ದ್ವಾರಕಾಪುರ ನಿವಾಸಿನ್, ಸರ್ವದೋಷ ಪರಿಹಾರಾರ್ಥಂ ಅಶ್ವತ್ಥನಾರಾಯಣತುಳಸಿಸನ್ನಿಧೌ, ತವ ಪ್ರೀತ್ಯರ್ಥಂ ಸ್ನಾನಮಹಂ ಕರಿಷ್ಯೇ (ನಲಿನಿ, ನಂದಿನಿ, ಭಾಗೀರಥಿ ನಮಃ ಎಂದು ನೀರಿನಲ್ಲಿ ಪ್ರದಕ್ಷಿಣಾಕಾರವಾಗಿ ಕೈಯಾಡಿಸಬೇಕು).

ಅರ್ಘ್ಯ : ನಮಸ್ತೇ ಕಮಲನಾಭಾಯ ನಮಸ್ತೇ ಜಲಶಾಯಿನೇ।
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

**ವರಾಹದಂಷ್ಟ್ರಸಂಭೂತೆ ತ್ರಿಶೂಲೀ ಸಂಗಗಾಮಿನಿ ।**
**ತುಂಗಭದ್ರೇ ತ್ರಿವಿಖ್ಯಾತೆ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

**ಬ್ರಹ್ಮಮಂಡಸಲಂಭೂತೆ ಪೂರ್ಣಚಂದ್ರನಿಭಾನನೆ।**
**ತ್ರೈಲೋಕ್ಯಪಾವನೆ ಗಂಗೆ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

ಎಂದು ಹೇಳಿ ನೀರಿನಿಂದ ಅರ್ಘ್ಯವನ್ನು ಕೊಡಬೇಕು.

**ಅನುಜ್ಞಾ ಪ್ರಾರ್ಥನೆ :** "ಕಣಕಾಲುದ್ದಾ ನೀರಾಗ ಶೇಷದೇವರ ಸನ್ನಿಧಾನ ॥ ಮೊಣಕಾಲುದ್ದಾ ನೀರು ಗರುಡದೇವರ ಸನ್ನಿಧಾನ ॥ ಎದೆ ಉದ್ದ ನೀರಾಗ ಲಕ್ಷ್ಮೀನಾರಾಯಣ ದೇವರ ಸನ್ನಿಧಾನ. ಇಂಥ ಸ್ಥಳದಲ್ಲಿ ಗಂಗಾದೇವಿ ಇರುತ್ತಾಳೆ ಅಂತಾ ಅನುಸಂಧಾನ ಮಾಡಿ ಮೈತೊಳಕೋಬೇಕು (ಸ್ನಾನಮಾಡಬೇಕು). ಮೂರ್ತಿ, ತೀರ್ಥಮೂರ್ತಿ, ವೈಕುಂಠಮೂರ್ತಿ, ವೈರಾಗ್ಯಮೂರ್ತಿಯ ಪಾದದಲ್ಲಿ ಹುಟ್ಟಿ ಸ್ವರ್ಗಲೋಕದಿಂದ ಇಳಿದು ಬಂದಂಥಾ ಭಾಗೀರಥೀದೇವಿ ಮೈ ತೊಳಕೊಳ್ಳಲು (ಸ್ನಾನ ಮಾಡಲು) ಆಜ್ಞಾ ಕೊಡು" ಎಂದು ಸ್ನಾನಕ್ಕೆ ಅನುಜ್ಞೆಯನ್ನು ಪಡೆದು ನಂತರ ಸ್ನಾನ ಮಾಡಬೇಕು. ಸ್ನಾನ ಮಾಡುತ್ತಿರುವಾಗ ೧) ನದೀಸ್ತೋತ್ರ ೨)ಭಾಗೀರಥೀ ಹಾಡು ಹಾಗೂ ಸ್ತೋತ್ರ ಇವುಗಳನ್ನು ಪಠಿಸಬೇಕು.

### ೧) ನದೀಸ್ತೋತ್ರ -

ನದೀಸ್ತೋತ್ರಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶನಂ। ಭಾಗೀರಥೀ ವಾರಣಾಸೀ ಯಮುನಾ ಚ ಸರಸ್ವತೀ। ಫಲ್ಗುನೀ ಶೋಣಭದ್ರಾ ಚ ನರ್ಮದಾ ಗಂಡಕೀ ತಥಾ ॥ ೧॥ ಮಣಿಕರ್ಣಿಕಾ ಗೋಮವತೀ ಪ್ರಯಾಗೀ ಚ ಪುನಃಪುನೀ । ಗೋದಾವರೀ ಸಿಂಧುನದೀ ಸರಯೂ ವರ್ಣಿನೀ ತಥಾ ॥ ೨॥ ಕೃಷ್ಣವೇಣೀ ಭೀಮರಥೀ ಕಾಗಿನೀ ಭವನಾಶಿನೀ । ತುಂಗಭದ್ರಾ ಮಲಹರೀ ವರದಾ ಚ ಕುಮುದ್ವತೀ ॥ ೩॥ ಕಾವೇರೀ ಕಪಿಲಾ ಕುಂತೀ ಹೇಮಾವತೀ ಹರಿದ್ವತೀ । ನೇತ್ರಾವತೀ ವೇದವತೀ ಸುದ್ಯೋತಿ ಕನಕಾವತೀ॥೪॥ ತಾಮ್ರಪರ್ಣೀ ಭರದ್ವಾಜಾ ಶ್ವೇತಾ ರಾಮೇಶ್ವರೀ ಕುಶಾ । ಮಂದರೀ ತಪತೀ ಕಾಲೀ ಕಾಲಿಂದೀ ಜಾಹ್ನವೀ ತಥಾ ॥ ೫॥ ಕೌಮೋದಕೀ ಕುರುಕ್ಷೇತ್ರಾ ಗೋವಿಂದಾ ದ್ವಾರಕೀ ಭವೇತ್ । ಬ್ರಾಹ್ಮೀ ಮಾಹೇಶ್ವರೀ ಮಾತ್ರಾ ಇಂದ್ರಾಣೀ ಅತ್ರಿಣೀ ತಥಾ ॥ ೬॥ ನಲಿನೀ ನಂದಿನೀ ಸೀತಾ ಮಾಲತೀ ಚ ಮಲಾಪಹಾ। ಸಂಭೂತಾ ವೈಷ್ಣವೀ ವೇಣೀ ತ್ರಿಪಥಾ ಭಗವತೀ ತಥಾ ॥ ೭॥ ಕಮಂಡಲು ಧನುಷ್ಕೋಟೀ ತಪನೀ ಗೌತಮೀ ತಥಾ । ನಾರದೀ ಚ ನದೀ ಪೂರ್ಣಾ ಸರ್ವನದ್ಯಃ ಪ್ರಕೀರ್ತಿತಾಃ ॥ ೮॥ ಪ್ರಾತಃಕಾಲೇ ಪಠೇನ್ನಿತ್ಯಂ ಸ್ನಾನಕಾಲೇ ವಿಶೇಷತಃ। ಕೋಟಿಜನ್ಮಾರ್ಜಿತಂ ಪಾಪಂ ಸ್ಮರಣೇನ ವಿನಶ್ಯತಿ ॥ ಇಹಲೋಕೇ ಸುಖೀ ಭೂತ್ವಾ ವಿಷ್ಣುಲೋಕಂ ಸ ಗಚ್ಛತಿ ॥ ೯॥

**॥ ಇತಿ ಶ್ರೀನಾರದೀಯ ಪುರಾಣೇ ನದೀಸ್ತೋತ್ರಂ ಸಂಪೂರ್ಣಂ ॥ಶ್ರೀಕೃಷ್ಣಾರ್ಪಣಮಸ್ತು॥**

### ೨) ತೀರ್ಥಕ್ಷೇತ್ರ ಅನುಕ್ರಮಣಿಕೆ. ರಾಗ - ಭೋಪಾಳಿ, ಝಂಪೆತಾಳ

ಸ್ಮರಿಸಿ ತೀರ್ಥಕ್ಷೇತ್ರ ಸಜ್ಜನರು ನಿರುತದಲಿ । ಅರುಣೋದಯದಲೆದ್ದು ಭಕ್ತಿಪೂರ್ವಕವಾಗಿ। ಕರಣತ್ರಯದಿ ಮಾಳ್ಪ ಪಾಪರಾಶಿಗಳ ಪರಿಹರಿಸಿ ಸಂತೈಸುವ ॥ ಪಲ್ಲ॥

ಭಾಗೀರಥೀ ಸರಸ್ವತಿ ಯಮುನ ವಾರುಣಾ । ಶ್ರೀಗೋದ ಫಲ್ಗುಣೀ ಶ್ರೋಣ ಭದ್ರಾ ನರ್ಮ- । ದಾ ಗಂಡಿಕಿ ಭೀಮರಥಿ ತುಂಗಭದ್ರಾ ಪ್ರಯಾಗ ತ್ರಿವೇಣಿ ಹೇಮಾ ॥ ವೇದವತಿ ಗಾಯತ್ರಿ ಕೌಸಿಕೀ ಮಣಿಕರಣಿ - । ಕಾ ಗೌತುಮೀ ವಿಯದ್ಗಂಗಾ ಕುಮುದ್ವತೀ । ಕಾಗಿನೀ ನೇತ್ರವತಿ ವೈತ್ರವತಿ ಹೈಮವತಿ ಸಿಂಧು ಪಾಪೌಘನಾಶೀ ॥ ೧॥ ಸರಯು ಜಯಮಂಗಳಾ ಜಮದಗ್ನಿ ವರತಾಮ್ರ- । ಪರಣಿ ಯೋಗಾನಂದ ಕೃತುಮಾಲ ಕುಹುಮಹೇ - । ಶ್ವರಿ ಶಂಖಚಕ್ರವತಿ ಭವನಾಶಿನೀ ಗದಾಧರ ಮೇನಕ ಸುನಾಸೀ ॥ ಗರುಡ ಮದಿರಾ ಮರುದ್ವತಿ ಸ್ವರ್ಣಮುಖರಿ ವಂ-। ಝರ ತಾಪಿನೀಕಾ ಸೌಪರಣಿ ದಕ್ಷಿಣೋ । ತ್ತರ ಪಿನಾಕಿನಿ ಕಪಿಲ ಸೀತಾಳಕಾನಂದ ತುರಗಮುಖ ಪ್ರಣವಸಿದ್ಧ ॥ ೨॥ ಕಾವೇರಿ ಸಿಂಧು ಮಾಲಿನೀ ಗಾರ್ಗಿಣೀ ಹರಿ - । ದ್ರಾವತೀ ಇಂದ್ರಾಣಿ ಕುಂದ ಕುಂಡಿನಿ ಶೈವ । ದೇವತತಿ ಪಾತಾಳಗಂಗಾ ಪುನಃ ಪುನಃ ನೀರಾಕುಮಾರಧಾರೀ ॥ ಧಾವಿತ್ರಿ ಧಾನ್ಯಮಾಲಾ ಪುಷ್ಪವತಿ ಲೋಕ - । ಪಾವನೀ ಮೌಳಿಮೌಕ್ತೀ ಸಿಂಧು ಧರ್ಮಾಕು। ಶಾವರ್ತಿನೀ ಚಕ್ರತೀರ್ಥ ಭಯನಾಶಿನೀ ವರದಾಮ ಉಪಹಾರೀ ॥ ೩॥ ಸ್ವಾಮಿ ಪುಷ್ಕರಣೀ ಮಾನಸಚಂದ್ರಪುಷ್ಕರಣಿ । ಭೂಮಂಡಲದೊಳುತ್ತಮ ತ್ರಿಪುಷ್ಕರಣಿ । ಶ್ರೀಮಧ್ವನಿತ್ಯಪುಷ್ಕರಣಿ ಸೀತಾಪದ್ಮಸರ ಸೀತಾಚಂದ್ರ- ಭಾಗತೀರ್ಥ ॥ ವಾಮನ ಮಯೂರ ಪಂಪಾಸರೋವರ ಪುಣ್ಯ - । ಧಾಮ ವ್ಯಾಸಸಮುದ್ರ ಧವಳಗಂಗಾ ಸುಸಾ - । ಧ್ಯಾಮೃತ ಸಮುದ್ರಗುರು ಭೀಮಸೇನತಟಾಕ ರೋಮಹರ್ಷಣತೀರ್ಥವ ॥ ೪॥ ದ್ವಾರಕಾನಗರ ಸಾಲಗ್ರಾಮ ಬದರಿ ನರ - । ನಾರಾಯಣಾಶ್ರಮ ಜಗನ್ನಾಥ ಶ್ರೀಮುಷ್ಣ । ಮೇರು ಪಾರಿಶ್ವಮಂದರ ಸುತ್ಪಾರಿಶ್ವ ಮೈನಾಕ ಕೈಲಾಸ ಕಾಂಚಿ ॥ ಶ್ರೀರಂಗನಾಥ ನೈಮಿಷದ್ವೈತ ಚಂಪಕಾ । ಅರಣ್ಯ ಕಾಶಿ ಪೊಂಪಾವಂತಿಕಾಪುರೀ । ಗೌರೀ ಮಯೂರಸಿಂಹಾದ್ರಿ ಪಾಟಲಿ ಹರಿದ್ವಾರ ಛಾಯಾ ಪಿಪ್ಪಲ ॥ ೫॥ ಕೇದಾರ ಸಗರ ಮಂದಾಕಿನೀ ಕುಸುಮಾವತಿ । ಸ್ವಾದಿ ಸುಬ್ರಹ್ಮಣ್ಯ ಕೋಟೀಶ್ವರಾ ನಂದಿ -। ಪಾದ ಕ್ರೌಂಚಾದ್ರಿ ಮಹನಂದಿ ಶಂಕರನಾಮ ನಾರಾಯಣಾನಿವರ್ತಿ ॥ ವೇದಪಾದ ಯಯಾತಗಿರಿ ಕಾಳಹಸ್ತಿ ಕೌ - । ಮೋದಕೀ ಪಾಂಡುರಂಗಕ್ಷೇತ್ರ ಶ್ರೀವಿಷ್ಣು - । ಪಾದ ಗಯಾ ಕಾಳೀಶ್ವರೀ ಹಸ್ತಿನಾಪುರಿ ಪಾಟಲೀ ಮಂತ್ರಾಲಯಾ ॥ ೬॥ ಗೋವರ್ಧನಾದ್ರಿ ಮೈನಾಕ ಮಂದರ ಮಲಯ । ಕೈವಲ್ಯನಾಥ ಕಾಶ್ಮೀರ ಜಾಂಬವತಿ ವೃಂ- । ದಾವನ ಧನುಷ್ಕೋಟಿ ವಾತಪುರಿ ಕನ್ಯಾಕುಮಾರಿ ಶ್ವೇತಾದ್ರಿ ವೃಷಭಾ ॥ ಶ್ರೀವಿರೂಪಾಕ್ಷ ಕುಂದರ ನಂದಪುರಿ ಮಾಯ। ಶ್ರೀವತ್ಸ ಗಂಧಮಾದನ ಚಿತ್ರಕೂಟ ದ್ವಾ - । ರಾವತೀ ವ್ಯಾಘ್ರಪುರಿ ಗೋಕುಲಾ ನಾರಾಚ ಸೌಭರೀ ಆದಿನಾಥ ॥ ೭॥ ಈ ಮಹೀಮಂಡಲದೊಳಿಪ್ಪ ತೀರ್ಥಕ್ಷೇತ್ರ । ನಾಮಗಳ ಕಾಲತ್ರಯಗಳಲ್ಲಿ ಸ್ಮರಿಸುತಿಹ । ಧೀಮಂತರಾಗಾಮಿ ಸಂಚಿತಾಘೌಘ ಪರಿಹರಿಸಿದಾ ನಂತರದಲಿ॥ ಸೋಮಾರ್ಕರುಳ್ಳನಕ ವಿವಿಧ ಭೋಗಗಳ ಸು । ತ್ರಾಮ ಲೋಕದೊಳುಣಿಸಿ ಕರುಣಾಳುಪ್ರಾಂತಕೆ। ಸ್ವ ಧಾಮ ಐದಿಸಿ ಮುಕ್ತರನ ಮಾಳ್ಪನಹುದೆಂದು ಸೂತ ಶೌನಕಗೆ ಪೇಳ್ದ ॥ ೮॥ ಈ ಭರತಖಂಡದೊಳಗುಳ್ಳ ಮಾತಾಪಿತೃಗಳ ಧನ । ಲೋಭದಿಂದಲಿ ಕೊಂದ ಪಾತಕವು ಪರಿಹರಿಸಿ । ಶ್ರೀಭೂರಮಣ ಜಗನ್ನಾಥ ವಿಠ್ಠಲ ಪೊರೆವ ಬೇಡಿದಿಷ್ಟಾರ್ಥವಿತ್ತು ॥೯॥

**೬) ನದೀ ತಾರತಮ್ಯಸ್ತೋತ್ರ . ರಾಗ - ಸಾವೇರಿ, ಆದಿತಾಳ**

ಸ್ಮರಿಸುವೆನನುದಿನ ಮುದದಿಂದ । ಈ ಧರಿಯಮ್ಯಾಲ್ಯುಳ್ಳ ಮಹ ನದಿಗಳ ॥ ಪ॥ ಗೌತುಮನಘ ಪರಿಹಾರ ಮಾಡಿದ ಗೋದ । ಮಾತೇ ಶ್ರೀಕೃಷ್ಣವೇಣಿ ಸರಸ್ವತೀ ॥ ಆ ತರುವಾಯ ಶ್ರೀ ಕಾವೇರಿಸರಯು ಶ್ರೀಯಮುನಾ । ಧೌತಪಾತಕೆ ಶ್ರೀ ನರ್ಮದತುಂಗಾ ॥ ೧॥ ಸಿಂಧು ಭವನಾಶನಿ ಕುಮುದ್ವತಿ ಶ್ರೀವಂರ್ಝಾರ । ಸುಂದರ ಭೀಮ ತಾಮ್ರಪರ್ಣಿಮಲಹಾ॥ ಮಿಂದರೆ ಪಾವನಮಾಡುವ ಬಹು ನದಿಗಳ । ಒಂದೇ ಮನಸಿಲಿಂದ ಪೊಗಳುವೆ ॥ ೨॥ ವಾರುಣೀ ಫಲ್ಗುಣೀ ಶ್ರೋಣ ಭದ್ರಾ ಗಂಡಿಕಿ ಹೇಮ । ಮೂರುವೇಣಿ ಗಾಯತ್ರೀ ವೇದವತೀ ॥ ಸೂರಿಗಮ್ಯ ಕೌಸಿಕ ಮಣಿಕರಣಿಕ ಗೌತುಮಿ ಭಾ - । ಗೀರಥಿ ಕಾಗಿನಿ ಶ್ರೀವೇತ್ರವತಿ ॥ ೩॥ ಹೇಮವತಿ ನೇತ್ರವತಿ ಪಾಪನಾಶೀ ಶ್ರೀ ಸೀತಾ । ಆ ಮಹಾಳಕನಂದಾ ಹಯಗ್ರೀವ। ಹೇಮ ಮುಖರ ತಾಪಿನಿ ಕಾಳಿ ಸೌಪರಣಿ ಪಿನಾಕೀ । ಶ್ರೀಮತ್ಕಪಿಲ ಜಮದಗ್ನಿ ಪ್ರಣವಸಿದ್ಧ ॥ ೪॥ ಮರುದ್ವತಿ ಮದಿರ ಮೇನುಕಾ ಸೂನಾಸಿ ಚಕ್ರವತಿ । ಗರುಡ ಶಂಖವತೀ ಕುಹು ಮಹೇಶ್ವರಿ । ಸರಯು ಜಯಮಂಗಳ ಯೋಗಕ್ರತುಮಾಲಾ ಗದಧರಿಮಾಲಿನಿ ಗಾರ್ಗಿಣೀ ದೇವವತಿ ॥ ೫॥ ಸಾವಿತ್ರಿ ಧನ್ಯಮಾಲ ಧರ್ಮ ಚಕ್ರತೀರ್ಥ ಹರಿ । ದ್ರಾವತಿ ಇಂದ್ರಾಣಿ ಪಾತಾಳಗಂಗಾ॥ ಶೈವಕುಂದಕುಂಡಿನಿ ನೀರ ಕುಮಾರಧಾರಿ ಕು । ಶಾವರ್ತಿ ಮೌಳೀ ಲೋಕ ಪಾವನೀ ॥ ೬॥ ಸ್ವಾಮಿಪುಷ್ಕರಣಿ ಚಂದ್ರಪುಷ್ಕರಣಿ ಮಾನಸಪುಷ್ಕರಣೀ । ಶ್ರೀಮಧ್ವಸರೋವರ ಪದ್ಮಸರಾ ॥ ಸೋವಭಾಗ ವ್ಯಾಸ ಸಿಂಧು ಶ್ರೀ ಪಂಪಾ ಸರೋವರ । ವಾಮನ ಶ್ರೀಮಯೂರ ಸರೋವರ ॥ ೭॥ ರೋಮಹರ್ಷಣ ತೀರ್ಥ ಸೀತಾ ಸರೋವರ ಪುಣ್ಯಧಾಮಾ ಶ್ರೀಕಪಿಲತೀರ್ಥ ಧವಳಗಂಗಾ॥ ಭೀಮಸೇನತಟಾಕ ಬ್ರಹ್ಮಜ್ಞಾನ ಕನ್ಯಹೃದಯ । ಶ್ರೀಮದ್ವಿಶಿಷ್ಟ- ತೀರ್ಥ ತಾರಾತೀರ್ಥ ॥೮॥ ಈ ತೀರ್ಥಗಳ ದಿವ್ಯನಾಮ ನಿತ್ಯ ಪಠಿಸಲು । ಯಾತಕ್ಯಾದರು ವಿಘ್ನಬಾರದು ॥ ಮಾತರಿಶ್ವಪ್ರಿಯ ಪ್ರಾಣೇಶ ವಿಠಲನು ಬಹು । ಪ್ರೀತನಾಗಿ ಬಿಡದೆ ಪೊರೆವನು ॥ ೯॥

**ಭಾಗೀರಥೀ ಹಾಡುಗಳು :**

೧) ಭಾಗೀರಥೀದೇವಿ ಭಯನಿವಾರಣ ಗಂಗೆ। ಸಾಗರನ ನಿಜರಾಣಿ ಸಕಲ ಕಲ್ಯಾಣಿ ॥ ಪ॥ ಒಮ್ಮೆ ಶ್ರೀಹರಿ ಪಾದಕಮಲದಿಂದುದುಭವಿಸಿ । ಬ್ರಹ್ಮ ಕರಪಾತ್ರಿಯಲಿ ನಿಂದು ಬಂದೆ॥ ಶ್ರೀಮನ್ನಾರಾಯಣನ ಪಾದ ತೀರ್ಥವಾಗಿ । ಬ್ರಹ್ಮಾಂಡವನು ಪಾವನ ಮಾಡಬಂದೆ ॥ ೧॥ ದೇವಿ ನೀ ವಿಷ್ಣು ಪಾದೋದಕವೆಂದೆನಿಸಿ । ದೇವತೆಗಳಿಗೆಲ್ಲ ಅಧಿಕವಾದೆ ॥ ದೇವರೆಲ್ಲರು ನೆರೆದು ತಲೆವಾಗಿದರು ಮಹ - । ದೇವನ ಶಿರದಿಂದ ಧರೆಗಿಳಿದು ಬಂದೆ ॥ ೨॥ ಜಹ್ನುವಿನ ಉದರದಲಿ ಪೊಕ್ಕ ಕಾರಣದಿಂದ । ಜಾನ್ಹವೀಯೆಂದು ನೀ ಎನಿಸಿಕೊಂಡು ॥ ಮುನ್ನೆ ನರಕಕ್ಕಿಳಿದ ಸಗರರಾಯನ ವಂಶ । ವನ್ನು ಪಾವನವಿನ್ನು ನೀ ಮಾಡಬಂದೆ ॥ ೩॥ ದಿಟ್ಟಿಸಲು ಮುನ್ನೂರು ಜನ್ಮದ ಪಾತಕವು । ನೀಟಿಸಲು ಮೂರು ಜನ್ಮದ ಮುಕುತಿಯು। ಮುಟ್ಟಿ ಮಾಡಿದರೊಂದು ಸ್ನಾನ ಮಾತ್ರದಲಿ । ಸುಟ್ಟು ಹೋಹುದು ಸಾಹಸ್ರ ಜನ್ಮದ ಪಾಪ ॥ ೪॥ ಹಲವು ಪರಿಯಲ್ಲಿ ಹರಿಸ್ಮರಣೆ ಯಿಲ್ಲದೆ ಭವ - । ದೊಳಗೆ ಶಿಲ್ಕಿ ಕಡುನೊಂದೆ ನಾನು ॥ ಹಲವು ಮಾತ್ಯಾಕೆ ಶ್ರೀಪುರಂದರ ವಿಠ್ಠಲನ । ಚಲುವ ಪದ ನಖದಿಳಿದೆ ವೊಲಿದು ದಯ ಮಾಡೆ ॥ ೫॥

೨) ಶ್ರೀಭಾಗೀರಥೀತಾಯೆ ಶೃಂಗಾರ ಶುಭಕಾಯೆ । ಶ್ರೀಭೂರಮಣ ತನಯೆ ॥ ಪಲ್ಲ॥ ನಿನ್ನ ಯಾತ್ರಿಗೋಸುಗ ಎನ್ನ । ಮನಸು ಪುಟ್ಟಿತು ಇನ್ನು ನೀ ಮರಿಸದೆ । ಪುಣ್ಯ ನರನ ಮಾಡೊ ಪೂತೋಭಾವವೆಂದು । ಧನ್ಯ ಜನಮಾನ್ಯೆ ಭಕ್ತಜನ ಪ್ರಸನ್ನೆ ॥ ೧॥ ಶಿವ ನಿನ್ನ ಶಿರದಲ್ಲಿ ಧರಿಸಿದ ಕಾರಣ । ಪವಿತ್ರಂಗನಾದನೆಂದು ॥ ಅವನಿಯೊಳಗೆ ಮಹಕವಿಜನ ಪೇಳಿದ। ಶ್ರವಣ ದಿಂದಲಿ ಭಕುತಿಯಿಂದಲಿ ನಿಂದೆ ॥ ೨॥ ದೂರದಿಂದಲಿ ನಿನ್ನ ಸ್ಮರಿಸಿದವರ ಪಾಪ। ಹಾರಿಪೋಗುವದು ಸಿದ್ಧ ॥ ಶ್ರೀರಮಣ ವಿಜಯವಿಠ್ಠಲರೇಯನ ಪಾದ । ವಾರಿಜ ಪೊಗಳುವಂತೆ ಬುದ್ಧಿ ಪಾಲಿಸುವದು ॥೩॥

## ಭಾಗೀರಥೀ ಸ್ತೋತ್ರ

ಜೈ ಜೈ ಭಾಗೀರಥಿಗೆ ಜೈ ಜೈ ಭೋಗಾಪತಿಗೆ ಜೈ ಜೈ ಜಾನ್ಹವಿಗೆ ಕೂಡಿದ ತ್ರಿವೇಣಿ ತಾಯಿಗೆ ಕರ್ಕಾಟಕ ಮಾಸದಲ್ಲಿ ಅರ್ಥಿಯಿಂದಲಿ ಭಾಗೀರಥಿ ವಸತಿ ಮಾಡಿದಳು ಗೋದಾವರೀ ಮಧ್ಯದಲ್ಲಿ । ಭೀಮರಥಿ ದಾಟಿ ಪ್ರೇಮದಿ ಕೃಷ್ಣೆಯ ದಾಟಿ ಹಂಪಿ ಕ್ಷೇತ್ರಕ್ಕೆ ಬಂದು ನಿಂತಳು. ತುಂಗಭದ್ರೆಯಲ್ಲಿ ನಿಂತ ಫಲ ಜನರಿಗೆಲ್ಲ ಪಾನಂಗಳನೆ ಮಾಡಿಸುತ ಅಜ ಬಂದಳು ಶ್ರೀ ಗಂಗೆ ನಿಜ ಬಂದಳು ಶ್ರೀಯಮುನೆ ಮದನ ಪಿತನ ಸುತೆ ಭಾಗೀರಥಿ ಬಂದಳೆಂದು ಭೂಸುರರೆಲ್ಲ ಗುಡಿ ತೋರಣ ಕಟ್ಟುವರು ಸಡಗರದಿಂದಲಿ । ಎದುರುಗೊಂಡರು ಗಂಗೆಯ. ಆಗರದ ಅಡಿಕೆ ಹೋಳು, ನಾಗಬಳ್ಳಿಯ ಎಲಿಯು ನಾರೆರೆಲ್ಲ ಮರದ ಬಾಗಿಣ ಕೊಡುವೋರು । ಅಷ್ಟ ಭ ೀಗದಿ ಅಡಕಿಹೋಳು ಉತ್ತರಬಳ್ಳಿಯ ಬಿಳಿ ಎಲೆಯು ಮಿತ್ರೆರೆಲ್ಲ ಮರದ ಬಾಗಿಣ ಕೊಡುವೋರು । ಒಂದು ದಿನ ಮಘ ಮಾಡಿದರೆ ಹಿಂಗಿತು ಸರ್ವಪಾಪಗಳು । ದಾರು ಬಲ್ಲರು ಮೂರು ದಿನ ಮಾಘದ ಫಲದೆಡೆಗಳನು ॥ ಮೂರು ದಿನ ಮಘ ಮಾಡಿದರ ಸಾಯುಜ್ಯ ಪದವುಂಟು. ದಾರು ಬಲ್ಲರು ಹತ್ತು ದಿನ ಮಾಘದ ಫಲದೆಡೆಗಳನು॥ ಹತ್ತು ದಿನ ಮಾಡಿದರ ಪುತ್ರೋತ್ಸವವಾಗುವದು। ದಾರು ಬಲ್ಲರು ತಿಂಗಳ ಮಾಘದ ಫಲದೆಡೆಗಳನು॥ ತಿಂಗಳ ಮಾಘ ಮಾಡಿದರ ಗೋವಿಂದನ ದಯವಾಹೋದು ॥ **ಭಾಗೀರಥೀ ಸ್ತೋತ್ರಂ ಸಂಪೂರ್ಣಂ॥**

### ಸ್ನಾನ ಮುಗಿಸಿ ಬರುವಾಗ ಅನ್ನಬೇಕಾದ ಮಂತ್ರ -

ಹತ್ತಿ ಬರುವಾಗ ಅಚ್ಯುತನ ಕಂಡೆ । ತಿರುಗಿ ನೋಡಿ ತ್ರಿವಿಕ್ರಮನ ಕಂಡೆ । ಹಿಂದೆ ನೋಡಿ ಬಿಂದುಮಾಧವನ ಕಂಡೆ । ಕಂಕಣ ಕೈಯಾಕಿನ್ನ ಕಂಡೆ । ಕುಂಕುಮ ಫಣಿಯಾಕಿನ್ನ ಕಂಡೆ। ಅರಿಷಿಣ-ಕುಂಕುಮ ಫಲಕೊಟ್ಟು ತಾಯಿ ನಮ್ಮವ್ವ ಗಂಗಾಭಾಗೀರಥೀ ನಿನ್ನ ಅನುಗ್ರಹ ಇರಲಿ ॥ ಎಂದು ಪ್ರಾರ್ಥಿಸಬೇಕು.

### ಆಹ್ನಿಕ ೭ : ಊರ್ಧ್ವಪುಂಡ್ರಧಾರಣ, ಗದಿಧಾರಣ, ಕುಂಕುಮ ಧಾರಣ, ಅಷ್ಟದಿಕ್ಪಾಲಕರಿಗೆ ನಮನ, ಗುರು ಮಂತ್ರಜಪ, ಶ್ರೀಕೃಷ್ಣಮಂತ್ರ ಜಪ

ಸ್ನಾನವಾದಮೇಲೆ ಒಣಗಿದ ಶುದ್ಧವಾದ ಬಟ್ಟೆಗಳನ್ನು ಉಟ್ಟುಕೊಂಡು, ಆಸನದ ಮೇಲೆ ಕುಳಿತು, ಹಣೆಯಲ್ಲಿ ಒಂದು ಬೊಟ್ಟು ಕುಂಕುಮ ಹಚ್ಚಿಕೊಳ್ಳಬೇಕು. ಅನಂತರ ಗೋಪೀಚಂದನದಿಂದಾಗಲೀ ಅಥವಾ ಶ್ರೀವೆಂಕಪ್ಪನ ನಾಮದಿಂದಾಗಲೀ ಹಣೆಯಲ್ಲಿ

ಊರ್ಧ್ವಪುಂಡ್ರವನ್ನು ಹಚ್ಚಿಕೊಂಡು ನಂತರ ಗದಿ ಮಂತ್ರವನ್ನು ಅನ್ನುತ್ತ ಗದಿಯನ್ನು ಧರಿಸಬೇಕು.

## ಗದೀ ಮಂತ್ರ

ಶ್ವೇತದ್ವೀಪ, ಅನಂತಾಸನ, ವೈಕುಂಠ ಇಂತಹ ಬೆಲೆ ಇಲ್ಲದ ಗದಿ ಎಲ್ಲಿರುವುದೆಂದರೆ ಶ್ರೀಮನ್ನಾರಾಯಣನ ಕೈಯಲ್ಲಿರುವದು. ಇತಿಸ್ತೋ ಇತಿಸ್ಥಾಪನ ತತಿಸ್ತೋ ತತಿಸ್ಥಾಪನ । ಗದಿಯನ್ನು ವಿಪ್ರರು ಹಚ್ಚಿಕೊಂಡರೆ ದ್ವಾರಪಾಲಕರಾಗುವರು, ಬ್ರಹ್ಮಚಾರಿಗಳು ಹಚ್ಚಿಕೊಂಡರೆ ಸನಕಾದಿಗಳಾಗುವರು. ಸನ್ಯಾಸಿಗಳು ಹಚ್ಚಿಕೊಂಡರೆ ಮೋಕ್ಷಕ್ಕೆ ಹೋಗುವರು. ಮುತ್ತೈದೆಯರು ಹಚ್ಚಿಕೊಂಡರೆ ಮೂರು ಕೋಟಿ ಪುಣ್ಯ ಬರುವುದು. ಕಾಶಿಗೆ ಹೋದಷ್ಟು ಪುಣ್ಯ. ಪ್ರಯಾಗದ ಸ್ನಾನ ಮಾಡಿದಷ್ಟು ಪುಣ್ಯ, ಬಿಂದು ಮಾಧವನ ನೋಡಿದಷ್ಟು ಪುಣ್ಯ। ಹತ್ತೀತು ಪುಣ್ಯ **ಹಾರೀತೋ ಪಾಪ॥ ॥ ಇತಿ ಶ್ರೀಗದೀಮಂತ್ರಂ ಸಂಪೂರ್ಣಂ ॥**

## ಗದನಾರಾಯಣ ಸ್ತೋತ್ರ

ಯತಿಗಳು ಹಚ್ಚಿಕೊಂಡರೆ ಮುಕ್ತಿಗೆ ಹೋಗೋರು, ವಿಪ್ರರು ಹಚ್ಚಿಕೊಂಡರೆ ವೇದಪಾಠೀಕರಾಗೋರು, ಬ್ರಹ್ಮಾಚಾರಿಗಳು ಹಚ್ಚಿಕೊಂಡರೆ ಸನಕಾದಿಗಳಾಗೋರು ಮುತ್ತೈದೆಯರು ಹಚ್ಚಿಕೊಂಡರೆ ಮುತ್ತೈದೆತನ ಶಾಶ್ವತವಾಗೋದು (ಎಂದು ಹೇಳಿಕೊಂಡು ಗದಿ ಹಚ್ಚಿಕೊಳ್ಳಬೇಕು).

ಗದಿ ಹಚ್ಚಿಕೊಂಡ ಮೇಲೆ ಅರಿಷಿಣ ಮತ್ತು ಹಣೆಯ ಮೇಲೆ ಚೆನ್ನಾಗಿ ತೀಡಿ ಕುಂಕುಮವನ್ನು ಹಚ್ಚಿಕೊಳ್ಳಬೇಕು.

## ಕುಂಕುಮ ಧಾರಣ ಸಂಕಲ್ಪ

ಕೇಶವಾಯ ಸ್ವಾಹಾ ಎಂದು ಮುಂತಾಗಿ ಆಚಮನ ಮಾಡಬೇಕು. ನಂತರ ಪ್ರಣವಸ್ಯ ಪರಬ್ರಹ್ಮ ಋಷಿಃ ಪರಮಾತ್ಮಾ ದೇವತಾ, ದೇವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ । ಅದ್ಯ ಪೂರ್ವೋಚ್ಚರಿತ ಶುಭಪುಣ್ಯತಿಥೌ ಮಮ ಪತ್ಯಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಮೇ ಪತ್ಯುರಾಯುಷ್ಯಾಭಿವೃದ್ಧ್ಯರ್ಥಂ ಶ್ರೀಲಕ್ಷ್ಮೀಸನ್ನಿಧಾನಪ್ರಾಪ್ತ್ಯರ್ಥಂ ಊರ್ಧ್ವ- ಪುಂಡ್ರಸಹಿತ ಕುಂಕುಮ ಧಾರಣಾಖ್ಯಂ ಕರ್ಮ ಕರಿಷ್ಯೇ - ಎಂದು ಸಂಕಲ್ಪ ಮಾಡಿ '**ರಮಾಂ ಅಪರ್ಣಾಂ ಸಾವಿತ್ರೀಂ ವೈದೇಹೀಂ ಅರುಂಧತೀಂ । ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಂ॥** ಎಂದು ಅನ್ನುತ್ತ ಅರಿಷಿಣ ಮತ್ತು ಕುಂಕುಮವನ್ನು ಹಚ್ಚಿಕೊಳ್ಳಬೇಕು.

"**ಊರ್ಧ್ವಪುಂಡ್ರಂ ಲಲಾಟೇ ತು ಭರ್ತುರಾಯುಷ್ಯವರ್ಧಕಂ । ಲಲಾಟೇ ಕುಂಕುಮಂ ಚೈವ ಸದಾ ಲಕ್ಷ್ಮೀನಿವಾಸಕಂ ॥**" - ಎಂಬ ಪ್ರಮಾಣದಂತೆ ಸುಮಂಗಲೆಯರು ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸುವುದರಿಂದ ಪತಿಯ ಆಯುಷ್ಯವು ವರ್ಧಿಸುವದು ಮತ್ತು

ಹಣೆಯಲ್ಲಿ ಕುಂಕುಮವನ್ನು ಧರಿಸುವುದರಿಂದ ಮನೆಯಲ್ಲಿ ಸದಾ ಲಕ್ಷ್ಮಿಯ ಸನ್ನಿಧಾನವಿರುವುದು, ಸಕಲ ಸಂಪತ್ತು ದೊರೆಯುವುದು.

## ಅಷ್ಟದಿಕ್ಪಾಲಕರ ಸ್ತೋತ್ರ

ಲಕ್ಷಗಾವುದ ಮೇರು ಪರ್ವತ, ಎಂಭತ್ತ- ನಾಲ್ಕು ಸಾವಿರ ಉದ್ದ ಹದಿನಾರು ಸಾವಿರ ಭೂಮಿಯಲ್ಲಿ ನೆಟ್ಟಿರುವುದು, ಮೂವತ್ತೆರಡು ಸಹಸ್ರ ಬೀದಿ ವಿಸ್ತಾರ, ಹತ್ತು ಸಹಸ್ರ ಬ್ರಹ್ಮದೇವರ ಸಭಾ, ಉಳಿದ ಭಾಗದಲ್ಲಿ ಅಷ್ಟದಿಕ್ಪಾಲಕರಿಗೆ ಸಮವಾಗಿ ಹಂಚಿ ಕೊಡುವುದು.

೧) (ಪೂರ್ವ ದಿಕ್ಕಿನಲ್ಲಿ ಅಮರಾವತಿ ಪಟ್ಟಣ, ಇಂದ್ರದೇವರು ಅರಸು, ಐರಾವತವನ್ನೇರಿಕೊಂಡು, ಶಚೀದೇವಿಯರನ್ನು ಕೂಡಿಕೊಂಡು ವಜ್ರಾಯುಧ ಹಿಡಿದುಕೊಂಡು, ಇಂದ್ರದೇವರಿದ್ದಾರೆ ಎಂತ ತಿಳಿಯಬೇಕು). ಇಂದ್ರದೇವರ ಅಂತರ್ಯಾಮಿ ಭಾರತೀಪತಿ ಮುಖ್ಯ ಪ್ರಾಣದೇವರ ಅಂತರ್ಯಾಮಿ, ಇಂದ್ರ ದೇವರಿಂದ ಪೂಜಾಸ್ವೀಕಾರ ಮಾಡುವಂಥ, ವಿದ್ಯಾಸಮೇತ ಉಪೇಂದ್ರ ಮೂರ್ತಿಗೆ ಮಾಡುವ ಅನಂತಾನಂತ ಪ್ರದಕ್ಷಿಣ ನಮಸ್ಕಾರ.

೨) (ಆಗ್ನೇಯ ಕೋಣೆಯಲ್ಲಿ ತೇಜೋವತಿ ಪಟ್ಟಣ, ಅಗ್ನಿದೇವರು ಅರಸು, ಟಗರು ವಾಹನ ಏರಿಕೊಂಡು ಸ್ವಾಹಾ ದೇವಿಯರನ್ನು ಕೂಡಿಕೊಂಡು, ಖಡ್ಗಾಯುಧ ಹಿಡಿದುಕೊಂಡು ಅಗ್ನಿದೇವರಿದ್ದಾರೆ ಎಂದು ತಿಳಿಯಬೇಕು). ಅಗ್ನ್ಯಂತರ್ಯಾಮಿ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ಅಗ್ನಿಯಿಂದ ಪೂಜಾಸ್ವೀಕಾರ ಮಾಡುವಂಥ ಭಾರ್ಗವೀ ಸಮೇತ ಪರಶುರಾಮ ದೇವರಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೩) (ದಕ್ಷಿಣ ದಿಕ್ಕಿನಲ್ಲಿ ಸಂಯಮಿನೀಪುರವೆಂಬ ಪಟ್ಟಣ, ಯಮರಾಜರೇ ಅರಸು, ಕೋಣವಾಹನ ಏರಿಕೊಂಡು ಯಮಪಾಶ ಹಿಡಿದುಕೊಂಡು ಶ್ಯಾಮಲಾ ದೇವಿಯರನ್ನು ಕೂಡಿಕೊಂಡು ಯಮದೇವರಿದ್ದಾರೆ ಎಂದು ತಿಳಿಯಬೇಕು). ಯಮಾಂತರ್ಗತ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ಯಮನಿಂದ ಪೂಜಾ ಸ್ವೀಕಾರ ಮಾಡುವಂಥ ಸೀತಾರಾಮಚಂದ್ರ ಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೪) (ನಿರ್ಋತಿ ಕೋಣೆಯಲ್ಲಿ ನೈರುತಿ ಎಂಬ ಪಟ್ಟಣ, ನಿರ್ಋತಿ ಅರಸು. ನರವಾಹನ ಏರಿಕೊಂಡು ವಜ್ರಾ ದೇವಿಯರನ್ನು ಕೂಡಿಕೊಂಡು ಮುದ್ಗರಾಯುಧ ಹಿಡಿದುಕೊಂಡು ನಿರ್ಋತಿ ದೇವರು ಇದ್ದಾರೆ ಎಂದು ತಿಳಿಯಬೇಕು). ನಿರ್ಋತ್ಯಂತರ್ಗತ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ನಿರ್ಋತಿಯಿಂದ ಪೂಜಾ ಸ್ವೀಕಾರ ಮಾಡುವಂಥ ಸುಶೀಲಾ ಸಮೇತ ಜನಾರ್ದನ ಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೫) (ಪಶ್ಚಿಮ ದಿಕ್ಕಿನಲ್ಲಿ ಹೈಮಾವತಿ ಪಟ್ಟಣ, ವರುಣ ದೇವರು ಅರಸು, ನೆಗಳೆ ವಾಹನ ಏರಿಕೊಂಡು ವರುಣ ಪಾಶ ಹಿಡಿದುಕೊಂಡು ಭಾಗೀರಥೀ ದೇವಿಯರನ್ನು ಕೂಡಿಕೊಂಡು ವರುಣ ದೇವರಿದ್ದಾರೆ ಎಂದು ತಿಳಿಯಬೇಕು). ವರುಣಾಂತರ್ಗತ ಭಾರತೀಪತಿ

ಮುಖ್ಯಪ್ರಾಣದೇವರ ಅಂತರ್ಯಾಮಿ, ವರುಣ ದೇವರಿಂದ ಪೂಜಾ ಸ್ವೀಕಾರ ಮಾಡುವಂಥ ವೇದಾ ಸಮೇತ ಮತ್ಸ್ಯ ಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೬) (ವಾಯುವ್ಯ ಕೋಣೆಯಲ್ಲಿ ವಿಭಾವತಿ ಎನ್ನುವ ಪಟ್ಟಣ, ಪ್ರವಹ ವಾಯುದೇವರು ಅರಸು, ಎರಳೆ ವಾಹನ ಏರಿಕೊಂಡು, ಪ್ರವಾಹಾದೇವಿಯರನ್ನು ಕೂಡಿಕೊಂಡು ಗದಾಯುಧ ಹಿಡಿದುಕೊಂಡು ವಾಯು ದೇವರಿದ್ದಾರೆ ಎಂದು ತಿಳಿಯಬೇಕು). ವಾಯ್ವಂತರ್ಯಾಮಿ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ವಾಯು ದೇವರಿಂದ ಪೂಜಾ ಸ್ವೀಕಾರ ಮಾಡುವಂಥ ಮಾಯಾ ಸಮೇತ ವಾಸುದೇವ ಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೭) (ಉತ್ತರ ದಿಕ್ಕಿನಲ್ಲಿ ಅಳಕಾವತಿ ಪಟ್ಟಣ, ಕುಬೇರ ದೇವರು ಅರಸು, ಕುದುರೆ ವಾಹನ ಏರಿಕೊಂಡು ಭದ್ರಾದೇವಿಯರನ್ನು ಕೂಡಿಕೊಂಡು ಖಡ್ಗಾಯುಧ ಹಿಡಿದುಕೊಂಡು, ಕುಬೇರ ದೇವರಿದ್ದಾರೆ ಎಂದು ತಿಳಿಯಬೇಕು). ಕುಬೇರ ಅಂತರ್ಯಾಮಿ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ಕುಬೇರನಿಂದ ಪೂಜಾ ಸ್ವೀಕಾರ ಮಾಡುವಂಥ ಆನಂದಾ ಸಮೇತ ಕಲ್ಕಿಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೮) (ಈಶಾನ್ಯ ಕೋಣೆಯಲ್ಲಿ ಕೈಲಾಸಪುರಿ ಎಂಬ ಪಟ್ಟಣ, ರುದ್ರದೇವರು ಅರಸು, ಪಾರ್ವತೀದೇವಿಯರನ್ನು ಕೂಡಿಕೊಂಡು, ತ್ರಿಶೂಲಾಯುಧ ಹಿಡಿದುಕೊಂಡು, ರುದ್ರದೇವರಿದ್ದಾರೆ ಎಂದು ತಿಳಿಯಬೇಕು). ರುದ್ರಾಂತರ್ಗತ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ರುದ್ರದೇವರಿಂದ ಪೂಜಾ ಸ್ವೀಕಾರ ಮಾಡುವಂಥ ಲಕ್ಷ್ಮೀಸಮೇತ ನರಸಿಂಹ ದೇವರಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

೯) (ಆಕಾಶಕ್ಕಭಿಮಾನಿ ಗಣಪತಿ, ಸಿದ್ಧಿ ಬುದ್ಧಿಯರನ್ನು ಕೂಡಿಕೊಂಡು ಮುಸುಲಾಯುಧ ಹಿಡಿದುಕೊಂಡು, ಗಣಪತಿ ಇದ್ದಾನೆ ಅಂತ ತಿಳಿಯಬೇಕು). ಗಣಪ- ತ್ಯಂತರ್ಗತ ಭಾರತೀಪತಿ ಮುಖ್ಯಪ್ರಾಣದೇವರ ಅಂತರ್ಯಾಮಿ, ಗಣಪತಿಯಿಂದ ಪೂಜಾ ಸ್ವೀಕಾರ ಮಾಡುವಂಥ ಲಕ್ಷ್ಮೀಸಮೇತ ವಿಶ್ವಂಭರಮೂರ್ತಿಗೆ ಅನಂತಾನಂತ ಪ್ರದಕ್ಷಿಣೆ ನಮಸ್ಕಾರಗಳು.

**॥ ಇತಿ ಅಷ್ಟದಿಕ್ಪಾಲಕ ಸ್ತೋತ್ರಂ ಸಂಪೂರ್ಣಂ ॥**

## ಗುರುಮಂತ್ರ

ಶ್ರೀಗುರುಭ್ಯೋ ನಮಃ । ದ್ವಿರಾಚಮ್ಯ (ಪೂರ್ವ ಅಥವಾ ಉತ್ತರಾಭಿ ಮುಖವಾಗಿ ಕುಳಿತು ಎರಡು ಸಲ ಆಚಮನ ಮಾಡಬೇಕು). ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ, ಮಾಧವಾಯ ಸ್ವಾಹಾ, ಗೋವಿಂದಾಯ ನಮಃ, ವಿಷ್ಣವೇ ನಮಃ, ಮಧುಸೂದನಾಯ ನಮಃ , ತ್ರಿವಿಕ್ರಮಾಯ ನಮಃ, ವಾಮನಾಯ ನಮಃ, ಶ್ರೀಧರಾಯ ನಮಃ, ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ, ದಾಮೋದರಾಯ ನಮಃ, ಸಂಕರ್ಷಣಾಯ ನಮಃ,

ವಾಸುದೇವಾಯ ನಮಃ, ಪ್ರದ್ಯುಮ್ನಾಯ ನಮಃ, ಅನಿರುದ್ಧಾಯ ನಮಃ, ಪುರುಷೋತ್ತಮಾಯ ನಮಃ, ಅಧೋಕ್ಷಜಾಯ ನಮಃ, ನಾರಸಿಂಹಾಯ ನಮಃ, ಅಚ್ಯುತಾಯ ನಮಃ, ಜನಾರ್ದನಾಯ ನಮಃ, ಉಪೇಂದ್ರಾಯ ನಮಃ, ಹರಯೇ ನಮಃ, ಶ್ರೀಕೃಷ್ಣಾಯ ನಮಃ (ಎಂದು ಹೇಳಿ ಕೈಮುಗಿಯಬೇಕು).

ಶುಭೇ ಶೋಭನಮುಹೂರ್ತೇ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ, ಶ್ರೀಶ್ವೇತವರಾಹ - ಕಲ್ಪೇ, ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಚರಣೇ ಗೋದಾವರ್ಯಾಃ ದಕ್ಷಿಣೇ/ ಉತ್ತರೇ ತೀರೇ, ಶಾಲಿವಾಹನಶಕೇ ಬೌದ್ಧಾವತಾರೇ, ರಾಮಕ್ಷೇತ್ರೇ, ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ, ಶ್ರೀ-------ನಾಮ ಸಂವತ್ಸರೇ ---- ಅಯನೇ ------ಋತೌ ------ಮಾಸೇ------- ಪಕ್ಷೇ------- ತಿಥೌ ------- ವಾಸರೇ ಶುಭ ನಕ್ಷತ್ರ ಶುಭಯೋಗ, ಶುಭಕರಣ, ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಗುರುಮಂತ್ರಜಪಂ ಕರಿಷ್ಯೇ.

**ಭೂತೋಚ್ಚಾಟನಂ -**

ಮಮ ಶರೀರಸ್ಯ ಅಂತರ್ಯಾಮಿ ಋಷಿಃ । ಸತ್ಯೋ ದೇವತಾ । ಪ್ರಕೃತಿ ಪುರುಷಶ್ಛಂದಃ। ಸಮಸ್ತ ಭೂತೋಚ್ಚಾಟನೇ ವಿನಿಯೋಗಃ॥

ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ । ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಾಯಾ ॥ ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವ ತು ರಾಕ್ಷಸಾಃ । ಯೇ ಚಾತ್ರ ನಿವಸಂತ್ಯತ್ರ ದೇವತಾ ಭುವಿ ಸಂತತಂ ॥ ತೇಷಾಮಪ್ಯವಿರೋಧೇನ ಬ್ರಹ್ಮ ಕರ್ಮ ಸಮಾರಭೇ॥ ಇತಿ ವಾಮಭಾಗೇ ಭೂತೋಚ್ಚಾಟನಂ ಕೃತ್ವಾ । ಈ ಮಂತ್ರವನ್ನು ಹೇಳಿ ನಮ್ಮ ಸಮೀಪದಲ್ಲಿರುವ ರಾಕ್ಷಸರು ಮೊದಲಾದವರನ್ನು ಒಂದು ಕೈ ಚಿಟಕಿಯಿಂದ ಓಡಿಸಬೇಕು.

**ಆಸನ ಶುದ್ಧಿ :**

ಪೃಥಿವ್ಯಾ ಮೇರುಪೃಷ್ಠ ಋಷಿಃ । ಕೂರ್ಮೋ ದೇವತಾ । ಸುತಲಂ ಛಂದಃ । ಆಸನೇ ವಿನಿಯೋಗಃ ॥ ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ । ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ ॥ ಮಾಂ ಚ ಪೂತಂ ಕುರು ಧರೇ ನತಾಸ್ಮಿ ತ್ವಾಂ ಸುರೇಶ್ವರಿ ॥ ಇತಿ ಪೃಥಿವೀಂ ಪ್ರಾರ್ಥಯಿತ್ವಾ (ಈ ಮಂತರವನ್ನು ಹೇಳಿ ಭೂದೇವಿಗೆ ನಮಸ್ಕಾರ ಮಾಡಬೇಕು.

ನಿರಸ್ತಃ ಪರಾವಸುಃ । ಇದಮಹಮರ್ವಾವಸೋಸ್ಸದನೇ ಸೀದಾಮಿ । ಆಸನೇ ಸೋಮಮಂಡಲೇ ಕೂರ್ಮಸ್ಕಂದೇ ಉಪವಿಷ್ಟಾಸ್ಮಿ (ಎಂದು ಆಸನದಲ್ಲಿ ಕೂಡಬೇಕು). ಭೂರ್ಭುವಸ್ಸುವಃ (ಎಂದು ಆಸನವನ್ನು ಮುಟ್ಟಬೇಕು). ಶ್ರೀಂ ಅಂ ಅನಂತಾಸನಾಯ ನಮಃ । ಶ್ರೀಂ ಮಂ ಮಂಡೂಕಾಯ ನಮಃ । ಶ್ರೀಂ ಕೂಂ ಕೂರ್ಮಾಯ ನಮಃ । ಶ್ರೀಂ ವಂ ವರಾಹಾಯ ನಮಃ । ಶ್ರೀಂ ಶಂ ಶೇಷಾಯ ನಮಃ, ಶ್ರೀಂ ಕಂ ಕಾಲಾಗ್ನಿರುದ್ರಾಯ ನಮಃ । ಶ್ರೀಂ ವಂ ವಜ್ರಾಯ ನಮಃ ।

**ದಿಗ್ಬಂಧನಂ :**

ಐಂದ್ರಾದಿ ದಿಶ್ಬುಬಧ್ನಾಮಿ ನಮಃ ॥ ನಮಃ ಚಕ್ರಾಯ ಸ್ವಾಹಾ। ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ॥ ಸುದರ್ಶನಾಯ ವಿದ್ಮಹೇ ಮಹಾಜ್ವಾಲಾಯ ಧೀಮಹಿ । ತನ್ನಶ್ಚಕ್ರಃ ಪ್ರಚೋದಯಾತ್ ॥ ಎಂದು ಹೇಳುತ್ತಾ ಜಪಕ್ಕೆ ತೊಂದರೆ ಮಾಡುವ ರಾಕ್ಷಸರು ಮೊದಲಾದವರು ಬಾರದಂತೆ ಬೊಟ್ಟನ್ನು ನಾಲ್ಕು ದಿಕ್ಕಿಗೂ ತೋರಿಸಿ ತನ್ನ ನಡುತಲೆಗಿಡಬೇಕು.

**ಕರಶುದ್ಧಿ :**

ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತಸಂಧಿಷು । ತತ್ಪೃಷ್ಠಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಾ । (ಎಂದು ಹೇಳುತ್ತಾ) ಶ್ರೀಂ ಯಂ ಶ್ರೀಂ ಎಂದು ಆರು ಸಲವೂ, ಶ್ರೀಂ ರಂ ಶ್ರೀಂ ಎಂದು ಸಲವೂ, ಶ್ರೀಂ ವಂ ಶ್ರೀಂ ಎಂದು ಸಲವೂ ಜಪಿಸುತ್ತಾ ಮುಂಗೈ ಮೊದಲು ಬೆಟ್ಟುಗಳ ಕೊನೆವರಿಗೆ ಎರಡು ಕೈಗಳ ಮೇಲೂ ಆರು ಸಲ ಸವರಬೇಕು.

**ಗುರು ನಮಸ್ಕಾರ :**

(ಅನಂತರ ಈ ಮುಂದೆ ಹೇಳುವ ೧೨ ಮಂದಿ ಗುರುಗಳಿಗೂ ನಮಸ್ಕಾರ ಮಾಡಬೇಕು.) ಶ್ರೀ ಗುರುಭ್ಯೋ ನಮಃ । ಪರಮ ಗುರುಭ್ಯೋ ನಮಃ । ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀವಾಯವೇ ನಮಃ । ಶ್ರೀ ಬ್ರಹ್ಮಣೇ ನಮಃ । ಶ್ರೀಲಕ್ಷ್ಮ್ಯೈ ನಮಃ । ಶ್ರೀನಾರಾಯಣಾಯ ನಮಃ । ಶ್ರೀಮಂತ್ರದೇವತಾಯೈ ನಮಃ । ಶ್ರೀವಾಸುದೇವಾಯ ನಮಃ ॥ ಶ್ರೀಂ । ಹೃತ್ಕಮಲಸ್ಥಿತ ಪರಮಾತ್ಮಾನಂ ಸುಷುಮ್ನಾಮಾರ್ಗೇಣ ಮೂರ್ಧ್ನಿ ವಿನ್ಯಸೇತ್ ।

ಅನಂತರ ಹೃದಯ ಕಮಲದಲ್ಲಿರುವ ನಾರಾಯಣ ದೇವರನ್ನು "ಸುಷುಮ್ನಾ" ಎಂಬ ನಾಡಿ ಮಾರ್ಗವಾಗಿ ಶಿರಸ್ಸಿಗೆ ತಂದು ನಿಲ್ಲಿಸಿದಂತೆ ಭಾವಿಸಬೇಕು.

**ಪಾಪಪುರುಷ ವಿಸರ್ಜನಂ :**

ವಾಮಕುಕ್ಷಿಂ ಸ್ಪೃಷ್ಟ್ವಾ (ಅನಂತರ ಎಡ ಬಗಲಿನ ಕೆಳಹೊಟ್ಟೆಯನ್ನು ಮುಟ್ಟಬೇಕು). ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಂ । ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಂ ॥ ತತ್ಸಂಯೋಗಪದದ್ವಂದ್ವಮಂಗಪ್ರತ್ಯಂಗಪಾತಕಂ । ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಂ ॥ ಅಧೋಮುಖಂ ಕೃಷ್ಣವರ್ಣಂ ಅಂಗುಷ್ಠ ಪರಿಮಾಣಕಂ । ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ॥ (ಎಂದು ಹೇಳಿ ಎಡ ಬಗಲಿನ ಕೆಳ ಭಾಗದಲ್ಲಿ ಪಾಪಪುರುಷನಿರುವಂತೆ ಚಿಂತಿಸಬೇಕು. ಅನಂತರ ಪಾಪಪುರುಷನು ಹೊಕ್ಕಳಿಗೆ ಬಂದಂತೆ ಭಾವಿಸಿ ಹೊಕ್ಕಳನ್ನು ಮುಟ್ಟಬೇಕು).

ನಾಭೌ ಷಟ್ಕೋಣಮಂಡಲಮಧ್ಯಸ್ಥೋ ನೀಲವರ್ಣೋ ವಾಯು ಬೀಜವಾಚ್ಯಃ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು । ಎಂದು ಹೇಳಿ "ಶ್ರೀಂ ಯಂ ಶ್ರೀಂ" ಎಂದು ೬ ಸಲ ಹೇಳಿ ಆ ಪಾಪಪುರುಷನನ್ನು ಒಣಗಿದಂತೆ ಭಾವಿಸಬೇಕು.

ತತಸ್ತಂ ಹೃದಯದೇಶಮಾನೀಯ ಹೃದಯೇ ತ್ರಿಕೋಣ ಮಂಡಲ ಮಧ್ಯಸ್ಥೋ ರಕ್ತವರ್ಣೋ ಅಗ್ನಿಸ್ಥಃ ಅಗ್ನಿಬೀಜವಾಚ್ಯಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ಅಗ್ನಿನಾ ನಿರ್ದಹತು । ಎಂದು ಹೇಳಿ ''ಶ್ರೀಂ ರಂ ಶ್ರೀಂ'' ಎಂದು ೧೨ ಸಲ ಜಪಿಸಿ ಆ ಪಾಪಪುರುಷನನ್ನು ಸುಟ್ಟುಹೋದಂತೆ ಭಾವಿಸಿ ಎಡದ ಮೂಗಿನಿಂದ ಶ್ವಾಸ ಬಿಟ್ಟು ಆ ಬೂದಿಯನ್ನು ಹೊರಗೆ ಹೋದಂತೆ ಭಾವಿಸಬೇಕು.

ಅನಂತರ ಶಿರಸ್ಸನ್ನು ಮುಟ್ಟಿ- ಶಿರಸಿ ವರ್ತುಲಮಂಡಲಮಧ್ಯಸ್ಥೋ ಶ್ವೇತವರ್ಣೋ ವರುಣಸ್ಥೋ ವರುಣಬೀಜ ವಾಚ್ಯಃ ಶ್ರೀವಾಸುದೇವೋ ಭಗವಾನ್ ಮಚ್ಛರೀರಂ ಆಪಾದಮಸ್ತಕಂ ಅಮೃತವೃಷ್ಟ್ಯಾ ಆಪ್ಲಾವಯತು । ಎಂದು ಹೇಳಿ ''ಶ್ರೀಂ ವಂ ಶ್ರೀಂ'' ಎಂದು ೨೪ ಸಲ ಜಪಿಸಬೇಕು. ಅನಂತರ ಶಿರಸ್ಸಿನಲ್ಲಿ ಕುಳಿತಿದ್ದ ಪರಮಾತ್ಮನನ್ನು ಹೃದಯಕ್ಕೆ ಹಿಂತಿರುಗಿ ಬಂದಂತೆ ಭಾವಿಸಬೇಕು.

**ಅಥ ಪುಣ್ಯಪುರುಷ ಧ್ಯಾನಂ :**

ದಕ್ಷಿಣಕುಕ್ಷಿಂ ಸ್ಪೃಷ್ಟ್ವಾ (ಹೊಟ್ಟೆಯ ಬಲಭಾಗವನ್ನು ಮುಟ್ಟಿ) - "ಅಶ್ವಮೇಧಶಿರಸ್ಕಂ ಚ ಮಹಾದಾನಭುಜದ್ವಯಂ। ಸೋಮಪಾನಹೃದಾ ಯುಕ್ತಂ ಬ್ರಹ್ಮಚರ್ಯಕಟಿದ್ವಯಂ ॥ ತತ್ಸಂಯೋಗ- ಪದದ್ವಂದ್ವಂ ಸಾಂಗೋಪಾಂಗಶುಭತ್ರಯಂ । ಸರ್ವವ್ರತಾಂಗರೋಮಾಣಂ ಗುರುಸೇವಾದಿಲೋಚನಂ ॥ ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟಿನಂ । ಗೀರ್ವಾಣನುತಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇ ॥" ಎಂದು ಪುಣ್ಯ ಪುರುಷನನ್ನು ಧ್ಯಾನಿಸಬೇಕು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಜಪಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥ ಮಂತ್ರಹೀನಾಂ ಕ್ರಿಯಾಹೀನಾಂ ಭಕ್ತಿಹೀನಾಂ ರಮಾಪತೇ । ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ಅನೇನ ಗುರುಮಂತ್ರ ಜಪೇನ ಅಸ್ಮತ್ಪತ್ಯಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀ ವೆಂಕಟೇಶಃ ಪ್ರೀಯತಾಂ ಪ್ರೀತೋ ವರದೋ ಭವತು ॥ ಶ್ರೀಕೃಷ್ಣಾರ್ಪಣಮಸ್ತು (ಎಂದು ಕೈಯಲ್ಲಿ ನೀರನ್ನು ಹಾಕಿಕೊಂಡು ಬಿಡಬೇಕು).

**ತತ್ವಾಭಿಮಾನಿ ದೇವತಾ ಪ್ರಾರ್ಥನೆ :**

ತತ್ವಾಭಿಮಾನಿಗಳಿರಾ ಉತ್ತರ ಲಾಲಿಪುದು । ಎತ್ತಿ ಕರವ ಮುಗಿವೆ ವಿನಯದಲ್ಲಿ । ಆತ್ಮದೊಳಗೆ ನಿಮ್ಮ ವ್ಯಾಪಾರ ಘನವಯ್ಯಾ । ತತ್ತತ್ ಸ್ಥಾನದಲ್ಲಿ ನಿತ್ಯವಾಗಿ ದೈತ್ಯರಿಗೆ ಸರ್ವದ ನಿಮ್ಮ ಪ್ರೇರಣೆ ಯುಂಟು । ಅತ್ತ ಎಳೆಸದಿರಿ ದುಸ್ಸಂಗಕ್ಕೆ । ಚಿತ್ತದಲ್ಲಿ ನೀವೆ ನಿಜ ವ್ಯಾಪಾರ ಮಾಡುವವರು । ಸತ್ಯಕ್ಕೆ ಎರಗುವ ಮಾರ್ಗವಿತ್ತು । ಉತ್ತಮ ಗುಣದಲ್ಲಿ ಮೊದಲೇ ನಿಮ್ಮ ಪೂಜಿಪ । ಅರ್ಥಿಯಾಗಲಿ ಆತರುವಾಯದಿ । ಉತ್ತಮ ಶ್ಲೋಕ ಸಿರಿ ವಿಜಯ ವಿಠ್ಠಲನ್ನ । ಸ್ತುತಿಸಿ ಆತನ್ನ ಚರಣ ನೋಳ್ಪದು ಮಾಡಿ ॥

## ಶ್ರೀಕೃಷ್ಣಷಡಕ್ಷರ ಮಂತ್ರ

ಶ್ರೀಂ ಕ್ಲೀಂ ಕೃಷ್ಣಾಯ ನಮಃ । (ಎಂದು ಮೂರು ಸಾರೆ, ಹೇಳಿ ಪ್ರಾಣಾಯಾಮ ಮಾಡಿಕೊಳ್ಳಬೇಕು).

**ಷಡಂಗನ್ಯಾಸ :**

ಶ್ರೀಪೂರ್ಣ ಜ್ಞಾನಾತ್ಮನೇ ಹೃದಯಾಯ ನಮಃ (ಎದೆಯನ್ನು ಮುಟ್ಟಬೇಕು)। ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ (ತಲೆಯನ್ನು ಮುಟ್ಟಬೇಕು)। ಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ (ತುರುಬನ್ನು ಮುಟ್ಟಬೇಕು) । ಪೂರ್ಣಾನಂದಾತ್ಮನೇ ಕವಚಾಯ ಹುಂ (ಒಂದೇ ಸಲ ಎಡಗೈಯಿಂದ ಬಲಭುಜವನ್ನೂ, ಬಲಗೈಯಿಂದ ಎಡಭುಜವನ್ನೂ ಮುಟ್ಟಬೇಕು)। ಪೂರ್ಣತೇಜಾತ್ಮನೇ ನೇತ್ರಾಭ್ಯಾಂ ವೌಷಟ್ (ಎರಡು ಕಣ್ಣುಗಳನ್ನೂ ಮಧ್ಯದ ಮತ್ತು ತರ್ಜನೀ ಬೆರಳುಗಳಿಂದ ಮುಟ್ಟಬೇಕು) ಪೂರ್ಣ ಶಕ್ತ್ಯಾತ್ಮನೇ ಅಸ್ತ್ರಾಯಫಟ್ (ಎರಡು ಕೈಯಿಂದಲೂ ಚಪ್ಪಾಳೆ ಮಾಡಬೇಕು) ಇತಿ ದಿಗ್ಬಂಧಃ ॥

ಅಸ್ಯ ಶ್ರೀಕೃಷ್ಣಷಡಕ್ಷರ ಮಹಾಮಂತ್ರಸ್ಯ ಬ್ರಹ್ಮಾ ಋಷಿಃ (ಶಿರಸಿ) ಗಾಯತ್ರೀ ಛಂಧಃ (ಮುಖೇ) ಶ್ರೀಕೃಷ್ಣೋ ದೇವತಾ (ಹೃದಯೇ) । ಶ್ರೀಕೃಷ್ಣಪ್ರೀತ್ಯರ್ಥೇ ಜಪೇ ವಿನಿಯೋಗಃ

**ಅಥ ಧ್ಯಾನಂ -**

(ಅನಂತರ ಮುಂದೆ ಹೇಳುವ ಶ್ಲೋಕದಿಂದ ಶ್ರೀಕೃಷ್ಣ ದೇವರನ್ನು ಧ್ಯಾನ ಮಾಡಬೇಕು)

**ಧ್ಯಾಯೇತ್ ಹರಿನ್ಮಣಿನಿಭಂ ಜಗದೇಕವಂದ್ಯಂ ।**
**ಸೌಂದರ್ಯಸಾರಮರಿಶಂಖವರಾಭಯಾನಿ ॥**
**ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ -।**
**ಸತ್ಯಾಸಮೇತಮಖಿಲ ಪ್ರದಮಿಂದಿರೇಶಂ ॥**

**ಅಥ ಜಪಃ -**

ಅಸ್ಮತ್ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣಪ್ರೇರಣಯಾ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಶ್ರೀಕೃಷ್ಣಷಡಕ್ಷರ ಮಹಾಮಂತ್ರಜಪತರ್ಪಣಮಹಂ ಕರಿಷ್ಯೇ । (ಉದ್ಧರಣೆಯಿಂದ ಕೈಯಲ್ಲಿ ನೀರು ಬಿಟ್ಟು ಸಂಕಲ್ಪಿಸಬೇಕು).

ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ ॥ (ಎಂದು ೧೦೮ ಸಲವಾದರೂ ಜಪಮಾಡಬೇಕು.

ಜಪವಾದ ಮೇಲೆ ಪುನಃ ಷಡಂಗನ್ಯಾಸ : ಶ್ರೀಪೂರ್ಣ ಜ್ಞಾನಾತ್ಮನೇ ಹೃದಯಾಯ ನಮಃ (ಎದೆಯನ್ನು ಮುಟ್ಟಬೇಕು) । ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ (ತಲೆಯನ್ನು ಮುಟ್ಟಬೇಕು) । ಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ (ತುರುಬನ್ನು ಮುಟ್ಟಬೇಕು) । ಪೂರ್ಣಾನಂದಾತ್ಮನೇ ಕವಚಾಯ ಹುಂ (ಒಂದೇ ಸಲ ಎಡಗೈಯಿಂದ ಬಲಭುಜವನ್ನೂ, ಬಲಗೈಯಿಂದ ಎಡಭುಜವನ್ನೂ ಮುಟ್ಟಬೇಕು) । ಪೂರ್ಣತೇಜಾತ್ಮನೇ ನೇತ್ರಾಭ್ಯಾಂ ವೌಷಟ್ (ಎರಡು ಕಣ್ಣುಗಳನ್ನೂ ಮಧ್ಯದ ಮತ್ತು ತರ್ಜನೀ ಬೆರಳುಗಳಿಂದ ಮುಟ್ಟಬೇಕು) ಪೂರ್ಣ ಶಕ್ತ್ಯಾತ್ಮನೇ ಅಸ್ತ್ರಾಯಫಟ್ (ಎರಡು ಕೈಯಿಂದಲೂ ಚಪ್ಪಾಳೆ ಮಾಡಬೇಕು) ಇತಿ ದಿಗ್ಬಂಧ॥

ಅಸ್ಯ ಶ್ರೀಕೃಷ್ಣಷಡಕ್ಷರ ಮಹಾಮಂತ್ರಸ್ಯ ಬ್ರಹ್ಮಾ ಋಷಿಃ (ಶಿರಸಿ) ಗಾಯತ್ರೀ ಛಂಧಃ (ಮುಖೇ) ಶ್ರೀಕೃಷ್ಣೋ ದೇವತಾ (ಹೃದಯೇ) । ಶ್ರೀಕೃಷ್ಣಪ್ರೀತ್ಯರ್ಥೇ ಜಪೋಪಸಂಹಾರೇ ವಿನಿಯೋಗಃ ।

**ಅಥ ಧ್ಯಾನಂ**

**ಧ್ಯಾಯೇತ್ ಹರಿನ್ಮಣಿನಿಭಂ ಜಗದೇಕವಂದ್ಯಂ ।**
**ಸೌಂದರ್ಯಸಾರಮರಿಶಂಖ ವರಾಭಯಾನಿ॥**
**ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ -।**
**ಸತ್ಯಾಸಮೇತಮಖಿಲಪ್ರದಮಿಂದಿರೇಶಂ ॥**

ಅನೇನ ಶ್ರೀಕೃಷ್ಣಪಡಕ್ಷರಮಹಾಮಂತ್ರೇಣ ಅಸ್ಮದ್‌ಪತ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣಃ ಪ್ರೀಯತಾಂ । ಪ್ರೀತೋ ವರದೋ ಭವತು । ಶ್ರೀಕೃಷ್ಣಾರ್ಪಣಮಸ್ತು ॥ (ಎಂದು ಕೈಯಲ್ಲಿ ನೀರನ್ನು ಹಾಕಿಕೊಂಡು ಬಿಡಬೇಕು).

**ಅರ್ಘ್ಯಂ : -**

ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ । ಇತಿ ಅರ್ಘ್ಯಂ ( ೧೦ ಜಪಕ್ಕೆ ೧ ಅರ್ಘ್ಯದಂತೆ ಜಪದ ಸಂಖ್ಯೆಯನ್ನನುಸರಿಸಿ ಅರ್ಘ್ಯವನ್ನು ಕೊಡಬೇಕು).

**॥ ಶ್ರೀ ಕೃಷ್ಣಷಡಕ್ಷರ ಮಂತ್ರವು ಸಮಾಪ್ತವಾಯಿತು ॥ ಶ್ರೀಕೃಷ್ಣಾರ್ಪಣಮಸ್ತು॥**

**ಪ್ರದಕ್ಷಿಣ ನಮಸ್ಕಾರ ಮಂತ್ರ :**

ಅಪರಾಧ ಸಹಸ್ರಾಣಿ ಕ್ರಿಯಂತೇ ಅಹರ್ನಿಶಂ ಮಯಾ । ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ॥ ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ। ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೆ ಪದೇ॥ ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ। ತ್ರಾಹಿ ಮಾಂ ಕೃಪಯಾ ಕೃಷ್ಣ ಶರಣಾಗತವತ್ಸಲ ॥ ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ । ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಜನಾರ್ದನ ॥ ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ । ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ ಶಾಠ್ಯೇನಾಪಿ ನಮಸ್ಕಾರಂ ಕುರು ತ್ವಂ ಶಾರ್ಙ್ಗಪಾಣಯೇ । ಶತಜನ್ಮಾರ್ಜಿತಂ ಪಾಪಂ ತತ್ ಕ್ಷಣಾದೇವ ನಶ್ಯತಿ ॥ ಮನಸಾ ಕರ್ಮಣಾ ವಾಚಾ ಯಾ ಚೇಷ್ಟಾ ಕ್ರಿಯತೇ ಮಯಾ । ಕೇಶವಾರಾಧನೇ ಸಾ ಸ್ಯಾತ್ ಜನ್ಮ ಜನ್ಮಾಂತರೇಷ್ವಪಿ ॥ (ಎಂದು ಹೇಳುತ್ತಾ ಸ್ತ್ರೀಯರು ಶಕ್ತಿಯಿದ್ದಷ್ಟು ದೇವರಿಗೆ ಪ್ರದಕ್ಷಿಣೆ ಹಾಗೂ **ಪಂಚಾಂಗ** ನಮಸ್ಕಾರಗಳನ್ನು ಮಾಡಬೇಕು).

## ಗುರುಮಂತ್ರ ಹಾಡು

ಪರಮಪುರುಷನ ಮೊದಲ ಭೂಮಿ ಚರಮ ಭೂಮಿ ದೈವತಂಗಳಿ-। ಗೆರಗುವೆನು ಕ್ರಮದಿಂದ ಕೂಡುತ ಧರಣಿ ತಳದಲ್ಲಿ ॥ ದರ್ಭ ಇಷ್ಟಾರಧಿಕ ಕಾಲಂಕ ಪದ್ಮ ಮೊದಲಾಸನದಿ ಪ್ರಾಙ್ಮುಖ ಇದ್ದರಾಸನ್ಮುಖ ಶ್ರದ್ಧೆ ಮಾಡುವದು ॥ ೧॥ ಆಸನದೊಳು ಇಂದು ಬಿಂಬದಿ

ವಾಸಮಾಡುತ ಕೂರ್ಮವಂಶದಿ । ಈಸು ಚಿಂತಿಸಬೇಕು ಎಂಬೋ ಬಾಷ್ಟಿ ಕೊಡುತಿಹದು ॥ ೨॥ ನಾಗಭೂಷಣಾಗ್ನಿಯಲಿ ಭೂತಗಳ್ಹೋಗಲೆಂದು ಮಂತ್ರ ಪಠಿಸುತ । ಯೋಗಿಗಳ ಪ್ರಾರ್ಥಿಸುತ ಸತತ ವಿಭಾಗ ಮಾಡುವುದು ॥ ೩॥ ಧಾರುಣಿ ಮಂತ್ರದಲಿ ಕೂಡ್ರುತ ನಾರಸಿಂಹ ಸುದರ್ಶನ ಹಸ್ತದಿ । ಆರು ವಿಧ ದಿಗ್ಬಂಧನವನ್ನು ಸೂರೆ ಮಾಡುವುದು ॥ ೪॥ ಹರಿಯ ಗುರುಗಳ ನಮನಗೋಸುಗ ಕರವ ಮಾನವ ಶೋಧಿಸುವದು । ಎರಡು ಬೀಜಾಕ್ಷರದಿ ನಾಲ್ವರು ಎರಡು ಸ್ಥಾನದಲಿ ॥ ೫॥ ಹರಿಗೆ ಪರಮ ಪರಮ ಗುರುವಿಗೆ ಎರಡು ವಿಧದ ಮೂಲ ಗುರುವಿಗೆ । ಸುರಗೆ ಮನುವಿಗೆ ವಾಸುದೇವಗೆ ಎರಗುವುದು ಸುಧೆಯು ॥ ೬॥ ಶೋಷ ನಾಭಿಲಿ ಪಾಪ ಪುರುಷನ ನಾಸ ಹೃದಯದಿ ಭಸ್ಮ ತ್ಯಜಿಸುತ । ತಾನು ಶಿರಸದಿ ಸಾಧದೃಷ್ಟಿಲೆ ಸೋಸುವುದು ಕಸವು ॥ ೭॥ ಬ್ರಹ್ಮಹತ್ಯಾಮಂತ್ರದಿಂದಲಿ ತಮ್ಮ ವಾಮಾಂಗವನೆ ಮುಟ್ಟುತಾ - । ಧರ್ಮ ಪುರುಷನ ಚಿಂತಿಸುವುದು ಧರ್ಮ ಶೃತಿಕರನು ॥ ೮॥ ತಾರತಮ್ಯ ಪಂಚಭೇದವು ಭೂರಿ ಭಕುತಿಲೆ ಭಜಿಪ ಕೃಷ್ಣನ । ಆರು ವರ್ಣವ ಪಠಿಸುತಲಿ ಉಚ್ಚಾರ ಮಾಡುವದು ॥ ೯॥ ರಾಮ ಮೊದಲಾದ ಹನುಮ ಮಂತ್ರವ ಕಾಮಿನಿಯರು ಜಪಿಸುತಲೆ ನಿಜ । ಕಾಮದಿಂದಲಿ ಯೋಗ್ಯ ತಾ ಮನ ನೇಮದಿಂದಿರಲು ॥ ೧೦॥ ನಾರಿಯರು ಗುರುಮಂತ್ರದೀಪರಿ ಪೂರ್ವದಲೆ ಶ್ರೀಕೃಷ್ಣರಾಯನ । ಚಾರುವರ್ಣವ ಪಠಿಸುತಲೆ ಗೃಹಕಾರ್ಯ ಮಾಡುವದು ॥ ೧೧॥ ಹೀಗೆ ನಿತ್ಯದಿ ಕಾಮಿನಿಯರು ಬಾಗಿ ಪತಿಯಲಿ ಕಾರ್ಯಮಾಡಲು । ನಾಗಶಯನನ ಪುರದಿ ನೆಲೆಸುತ ಭ ೀಗ ಪಡೆಯುವರು ॥ ೧೨॥ ವಾಸ ಮಾಡುತಲೆನ್ನ ಹೃದಯದಿ ಆಶುಭೋಗಕೆ ಸ್ತ್ರೀಜನಗಳಿ। ಗೀಶ ಮಾಡಿದ ನಿಜವನೆ ಇಂದಿರೇಶಗರ್ಪಿಸುವೆ ॥ ೧೩॥

## ಮಾನಸ ಪೂಜೆ

ಮಾನವಾತ್ಮರೆ ನಿಮ್ಮ ಮಾನಸ ಪೂಜೆಯಿಂ । ಮಾನವನಿಗೆ ಮೋಕ್ಷ ಸಾಧಿಸೀರಿ ॥ ಪ॥ ರತ್ನನಿರ್ಮಿತ ಸುಚರಿತ್ರ ಮಂಟಪವನ್ನು । ಸತ್ಯಭಾಮೆಯ ಪತಿಗಿತ್ತು ಪೂಜಿಸುವೆ ॥ ೧॥ ಆಸನ ನೀಡುವೆ ಶೇಷಶಯನನೆ ಇಲ್ಲಿ । ವಾಸ ಮಾಡಿ ಎನ್ನ ಸೇವೆ ಸ್ವೀಕರಿಸು ॥ ೨॥ ಧ್ಯಾನ ಮಾಡುವೆ ನಿನ್ನ ಗಾನ ಮಾಡುವೆ ನಿನ್ನ । ಜ್ಞಾನಭೂಷಣ ಶೋಭಿತಾನನಾಂಬುಜ ॥ ೩॥ ಧೃತ ವೇಣುಗೋಪಾಲ ಬಾರೋ ಮನಸಿಗೆ ತೋರೋ । ಮೂರುತಿ ನಿನ್ನಯ ಸಮೀರ ಸಂಸ್ತುತನೆ ॥೪॥ ಅರ್ಘ್ಯ ನೀಡುವೆ ನಾನು ಅನರ್ಘ್ಯ ವಸ್ತುಗಳಿಂದ । ಸ್ವರ್ಘ್ಯಗ್ರಹಣ ಮಾಡೋ ಭರ್ಗಸೇವಿತನೆ ॥ ೫॥ ಪಾದ್ಯ ನೀಡುವೆ ವೇದವೇದ್ಯಮಹಿಮನೇ ಮುನ್ನಾ- । ವದ್ಯ ಕಳೆದು ಭವದಿಂದ ಉದ್ಧರಿಸೆನ್ನ ॥ ೬॥ ಆಚಮನವ ನೀಡುವೆ ಹೇ ಚತುರಾನನೇಶ । ವಾಚಾಮಗೋಚರ ಮೋಚಕ ಹೇತು ॥ ಮಧುರೆಯರಸನೆ ಗೋಪಸುದತಿ ಮೋಹನ ತವ । ಮಧು ಪರ್ಕವನೀವೆ ಮುದದಿ ಸ್ವೀಕರಿಸು ॥೭॥ ಮತ್ತೇ ಆಚಮನವನಿತ್ತು ಪೂಜಿಪೆ ಕರ -। ವೆತ್ತಿ ಮುಗಿವೆ ಸರ್ವಭಕ್ತ ಪೋಷಕನೆ ॥ ೮॥ ಗಂಗೆ ಯಮುನೆ ಗೋದಾ ತುಂಗೆ ಜಲವ ತಂದಿಹೆ ಅ -। ನಂಗಜನಕ ಮಾಡೋ ಅಭ್ಯಂಗ ಸ್ನಾನ ॥ ೯॥ ನಿರಿಗಿಗಳನೆ ಹಾಕಿ ಜರದ ಪೀತಾಂಬರ। ಗರುಡವಾಹನ ನೀನು ಧರಿಸು ಮಧ್ಯದಲಿ ॥ ೧೦ ॥ ಹಾರ ಕಿರೀಟ ಕಾಂಚಿ ನೀರನೂಪುರ ಸುಕೇ। ಯೂರ

ನೂಪುರನೀವೆ ಧಾರುಣಿಪತಿಗೆ ॥ ೧೧॥ ಸ್ವರ್ಣರಚಿಸಿದ ಸೂತ್ರವನ್ನು ಕೊಡುವೆ ಲಕ್ಷ್ಮೀ । ರನ್ನ ಸೌರಭ ಗಂಧವನ್ನು ಸ್ವೀಕರಿಸು ॥ ೧೨॥ ವಾಸುದೇವನೆ ದಿವ್ಯ ನಾಸಿಕೇಂದ್ರಿಯದಿಂದ । ಈಸು ಧೂಪದ ಗಂಧವಾಸನೆ ಗ್ರಹಿಸೋ ॥ ೧೩॥ ಮರಗು ಮಲ್ಲಿಗೆ ಜಾಜಿ ಸುರಗಿ ಸೇವಂತಿಗಿ । ಸುಮಗಳ ಪರಿಮಳ ಧರಿಸೋ ಮಧ್ಯದಲಿ ॥ ೧೪॥ ಹತ್ತು ಅಂಗಗಳಿಂದ ಉತ್ತಮ ಸುಧೂಪವ। ಎತ್ತುವೆ ನಿನಗೆ ಸರ್ವೋತ್ತಮ ಹರಿಗೆ ॥ ೧೫॥ ಆಕಳ ಘೃತದ ಅನೇಕ ದೀಪಗಳ್ಹಚ್ಚಿ । ಶ್ರೀಕರ ತವ ಮುಖಾವಲೋಕಿಸುತ್ತಿಹೆನು ॥ ೧೬॥ ಏಕಾರತಿ ಗೋಪಿಪ್ರೀತನೆ ಬೆಳಗುವೆ । ನಾಕ ನಾಯಕ ಸುರಲೋಕ ಸೇವಿತನೆ ॥೧೭॥ ಆರು ವಿಧದ ಅನ್ನ ಸಾರು ಪಾಯಸ ಭಕ್ಷ್ಯ । ಭೂರಿ ಶಾಕಗಳೀವೆ ನೀರಜಾಂಬಕನೆ ॥೧೮॥ ಮಾರಜನಕನೆ ಮುತ್ತಿನಾರತಿ ಬೆಳಗುವೆ। ಶ್ರೀರಾಮನೆ ನಿನ್ನ ಮೋರೆಯ ತೋರೋ ॥ ೧೯॥ ಛತ್ರ ಚಾಮರ ವ್ಯಜನ ದರ್ಪಣ ಪರ್ಯಂಕ । ಕರ್ಪುರ ತಾಂಬೂಲವಿತ್ತು ಪೂಜಿಸುವೆ ॥ ೨೦॥ ಹತ್ತಾರು ಉಪಚಾರ ಚಿತ್ರ ಚರಿತನೆ ನಿನಗೆ। ಅರ್ಥಿಯಲಿ ಕೊಡುವೆನು ಮುಕ್ತಿ ನೀಡೆನಗೆ ॥ ೨೧॥ ಇಂದಿರೇಶನೆ ನಿನ್ನ ಮುಂದೆ ತುತಿಪೆನೆ ನಿಂತು । ನಂದಬಾಲನೆ ಕೃಪೆಯಿಂದ ನೋಡೆನ್ನ ॥ ೨೨॥

## ಗೌರೀಪೂಜೆ

### ಮಂಗಳಗೌರೀ (ಪಾರ್ವತಿ)ಯ ಸ್ತೋತ್ರ

ರಾಗ : ಆನಂದಭೈರವಿ ರೂಪಕ ತಾಳ

೧) ಬಾರೆ ಗೌರಿ ಪೂಜಿಸುವೆನು ಸಾರಸಾಂಬಕಿ । ಸಾರುವೆ ಸಂಸಾರದಿ ಸುಖದೋರೆ ವಿಧುಮುಖಿ ॥ ಪ॥ ಕುಂದಮಲ್ಲಿಗೆ ಜಾಜಿ ಕುಸುಮಗಂಧ ಪರಿಮಳ। ಚಂದದಿ ಸಮರ್ಪಿಸುವೆನು ಪುಷ್ಪಫಲಗಳ ॥ ೧॥ ಮಂಗಳೆಂದು ಪಾಡುತ ಬೆಳಗುವೆನು ಆರುತಿ । ಮಂಗಳಗೌರಿಯೆ ಕೊಡು ಸೌಭಾಗ್ಯ ಸಂತತಿ ॥ ೨॥ ಮಂಗಳಪ್ರದಾತೆ ಗಿರಿಸಂಭೂತೆ ಸುರನುತೆ । ಮಂಗಳಾಂಗಿ ಕುರು ಕರುಣಾಮಯಿ ನಮೋಽಸ್ತು ತೇ ॥ ೩॥ ಪತ್ಯಂತರ್ಗತ ಹರಿಯ ಸೇವೆ ನಿತ್ಯ ಮಾಡಿಸೆ । ಪುತ್ರಪೌತ್ರಾದಿ ಸಂಪದವಿತ್ತು ರಕ್ಷಿಸೆ ॥ ೪॥ ರತಿಯ ಪತಿಯ ಪಿತಗೆ ಸದಾ ಪ್ರತಿಮೆಯೆನಿಸುವ। ಅತಿಥಿಗಳನು ಸೇವಿಸುವ ಸುಮತಿಯ ಕೊಡು ಜವ ॥ ೫॥ ಸಡಗರದಿ ನಿಮ್ಮಡಿಯ ಸೇವೆ ಬಿಡದೆ ಮಾಡುವೆ । ಮೃಡನ ರಾಣಿ ಕೊಡು ವರಗಳ ಗಡನೆ ಬೇಡುವೆ ॥ ೬॥ ಶರಣು ಜನರ ಪೊರೆವ ಕಾರ್ಪರ ನಾರಸಿಂಹನ । ಚರಣ ಕಮಲಯುಗದಿ ಭಕುತಿ ಇರಲಿ ಅನುದಿನಾ ॥ ೭॥

೨) ಪಾಲಿಸೆ ಶ್ರೀಗೌರೀ ಎನ್ನನು ॥ಪ॥ ಪಾಲಿಸೆ ನಿನ್ನಯ ಪಾಲಿಗೆ ಬಂದೆನು। ಬೀಳುವೆ ಸರ್ವದ ಕಾಲಿಗೆ ಕರುಣದಿ ॥ ಅ.ಪ.॥ ಶರಣೆಂದವರನು ಪೊರೆವಳು ಎಂಬುವ । ಬಿರುದು ನಿನ್ನದು ಎಂದರಿದೆನು ತ್ವರದಿ ॥ ೧॥ ಸನ್ಮತ ಪುರುಷನ ಇನ್ನೆಲ್ಲಿ ಕಾಣೆನು । ಮನ್ಮಥನೆಂಬುವ ಬನ್ನ ಬಡಿಪ ಬಲು ॥ ೨॥ ಕಾಣೆನು ಶಾಂತಿಯ ಏನೆಂದ್ಹೇಳಲಿ । ಪ್ರಾಣೇಶ ವಿಠ್ಠಲನು ತಾನೆಯೇ ಬಲ್ಲನು ॥ ೩॥

೩) ಮಂಗಳಾರುತಿಯನೆತ್ತಿದಳು ಮುದ್ದು ಅಂಗನೆ ರುಕ್ಮಿಣಿ । ಮಂಗಳಗೌರಿಗೆ ॥ಪ॥ ತೋರ ಸೋಲಿಪ ಹಚ್ಚಿ ಬಟ್ಟು । ಕಂಬು ಕೊರಳ ಮಧ್ಯದಲಿ। ರಾಜಿಪೆನೆಂಬ ಗುಟ್ಟು ॥ ಹರಿಯ ಪಾದದಿ ಚಿತ್ತವಿಟ್ಟು । ಮುರಹರನ ವಲ್ಲಭೆಯ । ಪೂಜಿಪೆನೆಂಬ ಗುಟ್ಟು ॥ ೧॥ ಗಂಧ ಕುಂಕುಮ ಧೂಪ ದೀಪ । ಒಳ್ಳೆ ದುಂಡು ಮಲ್ಲಿಗೆಯ । ದಂಡೆ ಮುಡಿದಿಹಳು ॥ ಮಂಗಳಗೌರಿ ಪೂಜಿಪಳು । ಪಾಂಡುರಂಗನ ಮಾರ್ಗ । ನೋಡುತಲೆ ನಿಂತಿಹಳು ॥ ೨॥ ಈ ಪರಿ ಪೂಜೆಯ ಮಾಡೆ । ದೀನಳಾ ಪರಮಾತ್ಮ । ಬಂದನು ಭಕ್ತಿ ನೋಡಿ ॥ ಶ್ರೀಪತಿ ಗುಣವ ಕೊಂಡಾಡಿ ಮುದ್ದು। ಚಾಪಳಾಂಬಿಕೆ ತಾಯಿ । ವರವನ್ನೇ ಬೇಡಿ ॥ ೩॥ ವಕ್ಷಸ್ಥಳವನ್ನೆ ನೋಡಿದಳು। ನಿಮ್ಮ ದಾಕ್ಷಿಣ್ಯ ನೋಡಿ । ಧನ್ಯಳು ಆದೆನೆನಲು ॥ ಮತ್ಸ್ಯಲೋಚನೆಯು ನಾಚಿದಳು । ಪಾಂಡು ಪಕ್ಷ ಕೈಪಿಡಿದು । ರಥಕೆ ನಡೆತರಲು ॥ ೪॥ ಸಿರಿ ಸಹಿತ ರಥದ ಮೇಲೇರಲು । ಅಲ್ಲಿ ಸುರಮುನಿ ಪೂಮಳೆ । ಗರೆದು ರಾಜಿಸಲು ॥ ಹರಿಹರ ಬ್ರಹ್ಮಾದಿಗಳಿರಲು ಅಲ್ಲಿ । ಗಿರಿಜೆ ಭಾರತಿಯರು । ಆರತಿಯನ್ನೆತ್ತಿದರು. ॥ ೫॥

## ತುಳಸೀಪೂಜೆ

೧) ವೃಂದಾವನದೇವಿ ನಮೋ ನಮೋ ಚೆಲ್ವ । ಮಂದರ ಧರನ ಮನ ಪ್ರಿಯಳೇ॥ ವೃಂದಾವನದೇವಿ ನಮೋ ನಮೋ ॥ ಪ॥ ನಿನ್ನ ಸೇವಿಸಿ ಉದಕವ ನೆರೆಯಲು । ಮುನ್ನ ಮಾಡಿದ ಪಾಪ ಹೋಗುವದು ॥ ಎನ್ನ ಇಪ್ಪತ್ತೊಂದು ಕುಲದವರಿಗೆಲ್ಲ । ಉನ್ನಂತ ವೈಕುಂಠ ಪದವೀವಳೇ॥೧॥ ಒಂದೊಂದು ದಳದಲ್ಲಿ ಒಂದೊಂದು ಮೂರುತಿ । ಸಂದಣಿಸಿವೆ ಬಹು ಗುಪಿತದಲ್ಲಿ ॥ ಬಂದು ಕುಂಕುಮ ಶಂಖ ಚಕ್ರ ಧರಿಸಿದರೆ । ತಂದೆ ನಾರಾಯಣ ಕರೆದೊಯ್ಯುವಾ ॥ ೨॥ ಹರಿಗೆ ಸಮರ್ಪಿಸಿದ ತುಲಸಿ ನಿರ್ಮಾಲ್ಯವ । ಕೊರಳೊಳು ಧರಿಸಿ ಕರ್ಣದೊಳಿಟ್ಟರೆ ॥ ದುರಿತರಾಶಿಗಳೆಲ್ಲ ಅಂಜಿ ಓಡುತಲಿವೆ। ಹರಿಯು ತನ್ನವರೆಂದು ಕೈಯ್ಯಪಿಡಿವ ॥೩॥ ಹತ್ತು ಪ್ರದಕ್ಷಿಣೆ ಹತ್ತು ವಂದನೆ ಮಾಡೆ । ಉತ್ತಮ ವೈಕುಂಠ ಪದವೀವಳೆ॥ ಭಕ್ತಿಯಿಂದಲೆ ಬಂದು ಕೈ ಮುಗಿದವರನ್ನು । ಕರ್ತೃನಾರಾಯಣ ಕರೆದೊಯ್ವನು॥೪॥ ಆವಾವ ಪರಿಯಲ್ಲಿ ಸೇವೆಯ ಮಾಡಲು । ಪಾವನ ವೈಕುಂಠ ಪದವೀವಳೆ॥ ದೇವ ಶ್ರೀಪುರಂದರ ವಿಟ್ಠಲರಾಯನ । ದೇವಿ ನಿನ್ನ ಮುಟ್ಟಿ, ತ್ರಾಹಿ ಯೆಂಬೆ ॥೫॥

೨) ಕಲ್ಯಾಣಂ ತುಲಸಿ ಕಲ್ಯಾಣಂ । ಕಲ್ಯಾಣವೇ ನಮ್ಮ ಕೃಷ್ಣ(ಶ್ರೀತುಲಸಿಗೆ ಬಲ್ಲಿದ ಶ್ರೀವಾಸುದೇವನಿಗೆ ॥ಪ॥ ಅಂಗಳದೊಳಗೆಲ್ಲ ತುಲಸಿಯ ವನ ಮಾಡಿ । ಶೃಂಗಾರವ ಮಾಡಿ ಶೀಘ್ರದಿಂದ॥ ಕಂಗಳ ಪಾಪವ ಪರಿಹರಿಸುವ ಮುದ್ದು।ರಂಗ ಬಂದಲ್ಲಿ ತಾ ನೆಲಸಿದನು ॥ ೧॥ ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು। ತಂದ ಶ್ರೀಗಂಧಾಕ್ಷತೆಗಳಿಂದ ॥ ಯದುನಂದನನ ವೃಂದಾವನದಿ ಪೂಜಿಸೆ । ಕುಂದದ ಭಾಗ್ಯವ ಕೊಡುತಿಹಳು ॥ ೨॥ ಭಕ್ಷ್ಯಭೋಜ್ಯಂಗಳ ನೈವೇದ್ಯವಿತ್ತು। ಲಕ್ಷಬತ್ತಿಯ ದೀಪವ ಹಚ್ಚಿ ಅ - ॥ ಧೋಕ್ಷಜ ಸಹಿತ ವೃಂದಾವನ ಪೂಜಿಸೆ

। ಸಾಕ್ಷಾತ್ ಮೋಕ್ಷವ ಕೊಡುತಿಹಳು ॥ ೩॥ ಉತ್ಥಾನ ದ್ವಾದಶಿ ದಿವಸದಲಿ ಕೃಷ್ಣ। ಉತ್ತಮ ತುಲಸಿಗೆ ವಿವಾಹವ ॥ ಚಿತ್ತ ನಿರ್ಮಲರಾಗಿ ಮಾಡಿದವರಿಗೆ । ಉತ್ತಮಗತಿ ಈವ ಪುರಂದರ ವಿಠಲ॥ ೪॥

೩) ಬೃಂದಾವನಿ ಜನನಿ ವಂದಿಸುವೆ ಸತತ ಜಲಂಧರನ ರಾಣಿ ಕಲ್ಯಾಣಿ | ಕಲ್ಯಾಣಿ ತುಳಸಿ ನಿಜಮಂದಿರೆ ಎನಗೆ ದಯವಾಗೆ ||೧|| ಜಲಜಾಕ್ಷನಮಲಕಜ್ಜಲಬಿಂದು ಪೀಯೂಷಕಲಶದಲಿ ಬೀಳೆ ಜನಿಸಿದಿ | ಜನಿಸಿ ಹರಿಯಿಂದ ಶ್ರೀತುಲಸಿ ನೀನೆಂದು ಕರೆಸಿದಿ||೨|| ಶ್ರೀತರುಣಿವಲ್ಲಭನ ಪ್ರೀತಿ ವಿಷಯಳೆ ನಿನ್ನ ನಾ ತುತಿಸಿ ಕೈಯ ಮುಗಿವೆನು | ಮುಗಿವೆ ಎನ್ನಯ ಮಹಾಪಾತಕವ ಕಳೆದು ಪೊರೆಯಮ್ಮ ||೩|| ತುಲಸಿ ನಿನ್ನಡಿಗೆ ನಾ ತಲೆಬಾಗಿ ಬಿನ್ನೈಪೆ ಕಲುಷಕರ್ಮಗಳ ಎಣಿಸದೆ | ಎಣಿಸದೆ ಸಂಸಾರ ಜಲಧಿಯಿಂದೆಮ್ಮ ಕಡೆಹಾಯ್ಸು ||೪|| ನೋಡಿದವ ದುರಿತ ಈಡ್ಯಾಡಿದವ ನಿನ್ನ ಕೊಂಡಾಡಿದವ ನಿತ್ಯ ಹರಿಪಾದ | ಹರಿಪಾದಕಮಲಗಳ ಕೂಡಿದವ ಸತ್ಯ ಎಂದೆಂದು ||೫|| ನಿಂದಿಸಿದವರೆಲ್ಲ ನಿಂದ್ಯರಾಗುವರು ಅಭಿವಂದಿಸಿದ ಜನರು ಸುರರಿಂದ | ಸುರರಿಂದ ನರರಿಂದ ವಂದ್ಯರಾಗುವರು ಜಗದೊಳು ||೬|| ಕಲುಷವರ್ಜಿತೆ ನಿನ್ನ ದಳಗಳಿಂದಲಿ ಲಕ್ಷ್ಮಿನಿಲಯನಂಘ್ರಿಗಳ ಪೂಜಿಪ | ಪೂಜಿಪರಿಗೆ ಪರಮಮಂಗಲದ ಪದವಿತ್ತುಸಲಹುವಿ ||೭|| ಶ್ರೀ ತುಳಸಿದೇವಿ ಮನ್ಮಾತ ಲಾಲಿಸು ಜಗನ್ನಾಥವಿಠಲನ ಚರಣಾಬ್ಜ| ಚರಣಾಬ್ಜ ಎನ್ನ ಹೃತ್ಪದ್ಮದಲಿ ನೀ ತೋರೆ ಕೃಪೆಯಿಂದ ||೮||

**ಆಹ್ನೀಕ ೮ :** ಅನಂತರ ನೈವೇದ್ಯಕ್ಕೆ ವಿವಿಧ ಪದಾರ್ಥಗಳನ್ನು ಸಿದ್ಧಪಡಿಸಬೇಕು. ಅಡಿಗೆ ಮಾಡುವಾಗ "ಅಕ್ಷಯಪಾತ್ರೆ" ಹಾಡನ್ನು ಹೇಳಬೇಕು. ನಂತರ ಇತರ ಹಾಡು ಹಾಗೂ ಸುಳಾದಿಗಳನ್ನು ಹೇಳುತ್ತಿರಬೇಕು.

## ಅಕ್ಷಯ ಪಾತ್ರೆ ಹಾಡು

ಸಮಸ್ತರಾ ಋಷಿಗಳ ಕೂಡ ರಾಯ ಉಪವಾಸದಲೆ ತೆರಳಿದನು । ತನ್ನ ಮೈತ್ರೇಯನ ಬಂದು ನೋಡಿದನು ರಾಯ ಆದಿತ್ಯನ್ನ ಧ್ಯಾನ ಮಾಡೆಂದ । ಮೈತ್ರೇಯ ನುಡಿಯ ಕೇಳುತಲೆ ರಾಯ ದಿನಕರನ ಭಜಿಸಿದನು । ದಿನಕರಾ ತಾನಿಳಿದು ಬಂದು । ಧರ್ಮರಾಯನ ಬದಿಲೆ ನಿಂತು । ಅಕ್ಷಯ ಪಾತ್ರೆಯ ತಂದು। ಶ್ರೀಕೃಷ್ಣಾರ್ಪಿತವೆಂತೆಂದು । ಧರ್ಮನ ಕೈಯಲ್ಲಿ ಕೊಟ್ಟ। ಧರ್ಮ ದಿನಕರಗೆ ಅರ್ಘ್ಯವ ಬಿಟ್ಟ । ಅರ್ಘ್ಯದ ಫಲವ ತಕ್ಕೊಂಡು ರಾಯ ಐವರಿಗೆ ಅಭಯ ಹಸ್ತವನಿತ್ತು ದ್ರೌಪದಿಯ ಮುಡಿಯನ್ನೆ ಒರೆಸಿ ದಿನಕರಾ ತನ್ನ ಮಂಡಲಕೆ ನಡೆದಾನು । ಆರು ಮಂದಿ ತಾವು ಕೂಡಿ ಸಹಿತ ದ್ವೈತವನಕ್ಕಾಗಿ ಬಂದು । ಮುಂದೆ ಜಯ ಉಂಟು ಕಾರ್ಯ ನಮಗೆಂದು । ನುಡಿದನು ಧರ್ಮ ತಾ ಬಂದು। ವನವಾಸಕ್ಕೆ ಹೋದಲ್ಲಿ ದ್ರೌಪದಿ ಪರಮಾನ್ನ ಭಕ್ಷ್ಯಗಳ ಬಡಿಸಿದಳು । ಋಷಿಗಳು ಉಂಡು ದಣಿದರು। ದುರ್ಯೋಧನನ ಪರಿಚಾರಕರು ಬಂದು ನೋಡಿದರು । ಹೋಗಿ ರಾಯಗ ಹೇಳಿದರು ಅಲ್ಲಿ ಪಾಂಡವರ ಧರ್ಮ ಕೇಳೆಂದು ಅನ್ನ ಛತ್ರಗಳು ಬಹಳೆಂದು ತ್ರಿಭುವನದೊಳಗೆ ಸರಿಗಾಣೆ । ಬ್ಯಾಗ ಸೋದರರ ಮಾತು ಕೇಳಿ

ರಾಯ ಅಗ್ನಿಯ ತುಳಿದಂತಾಗಿ ಭೀಷ್ಮ ದ್ರೋಣರ ಕರೆಸಿದನು । ಮುಂದಾಲೋಚನೆಯ ಮಾಡಿದನು । ಕಪಟ ನಿನ್ನಲ್ಲಿ ಬೇಡೆಂದಾ ಬಹಳ ಸಾಹಸ ಬಡಲಿ ಬ್ಯಾಡೆಂದಾ ಅವರ ಧರ್ಮ ಅವರಿಗೆ ಕಾಯೋದೆ ಅಂದಾ । ಅವರಿಗೆ ಶ್ರೀಕೃಷ್ಣ ಸಾರಥಿ ಹಾನೆಂದಾ । ಅರಗಿನ ಮನೆಯ ಹೊಗಿಸಿದಿರಿ। ಅವರಿಗೆ ವಿಷದ ಲಡ್ಡಿಗೆಯ ನಿಕ್ಕಿದಿರಿ ಜೂಜಾಡಿ ರಾಜ್ಯ ಗೆಲಿದಿರಿ । ಅವರ ದ್ರೌಪದಿಯ ಸಭೆಗೆ ಎಳೆಸಿದಿರಿ । ಮುಡಿಬಿಟ್ಟು ನೆಲಕ ಅಲೆವಾಗ । ದುಃಶ್ಯಾಸನ ವಸ್ತ್ರ ಸೆಳೆವಾಗ ಸಭೆಯಲ್ಲಿ ನೋಡುತ್ತಿದ್ದಾಗ। ಶ್ರೀಹರಿಯು ಕಾಯ್ದು ನೋಡಾಗ । ಅಭಿಮಾನವ ಕೊಂಬಾಗ ದ್ರೌಪದಿ ವಸ್ತ್ರದ ದಿಂಡ ತಂದಿದ್ದಳ । ಇಷ್ಟರ ಮ್ಯಾಲೆ ತಿಳಿಯದ ದ್ರೌಪದಿಯ ಅಭಿಮಾನ ಕಾಯ್ದವರು ದಾರು ? ವನವಾಸಕ್ಕೆ ಹೋದಲ್ಲಿ ಅಲ್ಲಿ ಧರ್ಮರಿಗೆ ಏನಾಗುವದೆಂದು ತಿಳಿದೀತು ಮುಂದ ನಿಮಗೆಂದು ತಿರುಗಿದ ದ್ರೋಣ ಹಾಗೆಂದು। ದ್ರೋಣನಾ ನುಡಿಯ ಕೇಳುತಲೆ ರಾಯ ಕಡುಕೋಪ ಮನದಲ್ಲೆ ತಾಳಿ ತನ್ನಾಯುಧವ ನೆಲಕ ನಿಲಿಸಿದನು ತಲೆ ಕುಗ್ಗಿ ನೆಲಕ ಬಾಗಿದನು। ಸೂರ್ಯನಂದನನ ಕರೆದೆಂದ ರಾಯ ಕ್ಷತ್ರಿಯರಿಗೆ ಇದು ಧರ್ಮವಲ್ಲ ಅವರು ಯುದ್ಧವ ಹೂಡಿದರ । ಅವರ ಕೂಡ ಯುದ್ಧವ ಮಾಡಬೇಕೆಂದಾ । ಕರ್ಣ ಶಕುನಿಯ ಕರೆದೆಂದ ರಾಯ ಏನ ಮಾತನೆ ಕೇಳೆಂದಾ । ಅವರ ಪ್ರಾಣದ ಜೀವ ನಾನೆಂದಾ ರಾಯಗ ತಿಳಿದ ಬುದ್ಧಿಗಳ ಹೇಳಿದನು। ಪಾಂಡವರು ಮೈಮರೆತಿಹರು ಅವರಿಗೆ ಹರಿಯಾ ಮಾಯವು ತಿಳಿಯದು ಥಾಲಿಯ ಕೇಳುವರು ದಾರು ಕೃಷ್ಣ ಸುದರ್ಶನ ವನದಲ್ಲೆ ತಿರುಗುವನು ಸ್ವರ್ಗ ಮರ್ತ್ಯ ಪಾತಾಳ ಋಷಿಗಳಿಗೆ ಅನ್ನವ ಕೊಟ್ಟವರುಂಟು ಶ್ರೀಕೃಷ್ಣ ಸಾರಥಿ ಇದ್ದರೇನು ಪಾಂಡವರ ವ್ರತವ ಹಾನಿ ಮಾಡೆಂದಾ। ಪಾಂಡವರು ಮೈಮರೆತಿಹರು ನಾವು ದಂಪಕ್ಕ ಹೋಗಿ ಮುತ್ತುವದು । ಚಿಂತಿಸಬ್ಯಾಡ ನೀನೆಂದು ನುಡಿದನು ಶಕುನಿ ತಾ ಬಂದು । ಶಕುನಿಯ ಮಾತನೆ ಕೇಳಿ ರಾಯ ಅತ್ಯಂತ ಸಂಭ್ರಮ ಪಟ್ಟು, ನಿನ್ನ ಮಾತಿಗೆ ಸರಿಗಾಣೆನೆಂದಾ । ಮಾವ ಏನು ಬೇಡತಿ ಬೇಡೆಂದಾ । ಏನು ಬೇಡಲಿ ನಾನೆಂದಾ। ನನ್ನ ಮನದ ವಾಕ್ಯಗಳ ಕೇಳೆಂದಾ ದೂರ್ವಾಸ ಋಷೇಶ್ವರನ ಕರೆಸಿ ಪಾದ ಪ್ರಕ್ಷಾಲನೆಯ ಮಾಡಿದನು ಮುನಿಗೆ ಶೋಡಶೋಪಚಾರವನೆ ಮಾಡಿದನು । ಶ್ರೀಗಂಧ ಕಸ್ತೂರಿ ತೆಗೆದು ಮುನಿಗೆ ಅವಲೇಪನವ ಮಾಡಿದನು । ಪಾದಕ್ಕೆ ಬಂದೆರಗಿದನು । ಕೈಯ ಮುಗಿದು ಬಿನ್ನಪವ ಮಾಡಿದನು । ಮಾಡಿದ ಭಕ್ತಿಗೆ ಒಲಿದು ರಾಯ ಏನು ಬೇಡತಿ ಬೇಡೆಂದಾ । ಏನು ಬೇಡಲಿ ನಾನೆಂದಾ । ನನ್ನ ಮನದ ವಾಕ್ಯಗಳ ಕೇಳೆಂದಾ । ಅಸ್ತಮಯದ ವೇಳೆಯಲಿ ದ್ರೌಪದಿ ಉಂಡು ಥಾಲಿಯ ತೊಳೆದಿಡಲು ನೀವು ಹೋಗಿ ಅನ್ನವ ಬೇಡಬೇಕೆಂದಾ ಕೊಡಲಿದ್ರೆ ಶಾಪವ ಕೊಟ್ಟು ಬಾ ಎಂದಾ । ಏನು ಆಡಿದ್ಯೊ ರಾಯ ನೀನು । ಇದು ಧರ್ಮರಿಗೆ ತಕ್ಕ ಮಾತಲ್ಲ । ಒಂದು ಉತ್ತರವ ಕೊಟ್ಟು ಸಿಲುಕಿದೆನು ಹಾಗೆಂದು ಋಷೇಶ್ವರ ನುಡಿದಾ । ಹತ್ತು ಸಹಸ್ರ ಮಂದಿ ಶಿಷ್ಯರ ಸಹಿತ ದ್ವೈತ ವನಕ್ಕಾಗಿ ಬಂದ । ತನ್ನ ಶಿಷ್ಯರ ಮುಂದೆ ಕಳುಹಿದನು ಋಷಿದಂಪಕ್ಕ ತಾನಾಗಿ ಬಂದ । ಋಷಿಗಳು ಬಂದದ್ದು ನೋಡಿ ಭೀಮ ಪಾದಕ್ಕೆ ಬಂದೆರಗಿದನು । ಮೂರುಪವಾಸವು ನಮಗೆನಲು ನಮಗಿಷ್ಟು ಅನ್ನವ ಕೊಡಿಸಬೇಕೆಂದಾ। ಋಷಿಗಳು ಬಂದದ್ದು ನೋಡಿ ಧರ್ಮ ಪಾದಕ್ಕೆ ಬಂದೆರಗಿದನು । ನೀವು ಪಾಂಡವರು ಧರ್ಮರು ಎಂದು ನಿಮ್ಮ

ಕೀರ್ತಿಗಳ ಕೇಳಿ ನಾವು ಬಂದೆವು । ಆಡಿದಾ ಮಾತನೆ ಕೇಳಿ ರಾಯ ಅತ್ಯಂತ ಸಂಭ್ರಮ ಪಟ್ಟ । ತನ್ನ ಸತಿಯಳ ಕರೆದು ಕೇಳಿದನು ಋಷಿಗಳ ಭೋಜನದ ಬಗೆಯು ಹೇಗೆಂದು । ಇಂದಿನ ಪರ್ಯಂತರದಲಿ ನಾವು ಕಷ್ಟವ ಪಟ್ಟಿದ್ದಿಲ್ಲವೆಂದು ನಮ್ಮ ವ್ರತವ ದಾರು ಕಾಯುವರೆಂದು ಲಕ್ಷ್ಮೀರಮಣನೆ ಕಾಯ್ದರೆ ಕಾಯ್ವ । ಭಾಮೆ ದ್ರೌಪದಿ ತಾ ಬಂದು ಋಷಿಗಳಿಗೆ ಸ್ನಾನಕ್ಕೆ ಆಜ್ಞೆಯ ಕೊಡಿರೆಂದು ಆ ಮಾತು ಕೇಳುತಲೆ ಧರ್ಮ ಋಷಿಗಳ ಬಳಲಿಗೆ ಬಂದ । ಋಷಿಗಳ ಜಲಧಿಗೆ ಕಳುಹಿ ಧರ್ಮ ಧ್ಯಾನಿಸುತ ಮನದಲ್ಲಿ ನಿಂತ । ತನ್ನ ಸತಿಯಳ ಕರೆದು ಕೇಳಿದನು ಮುಂದಾಲೋಚನೆಯ ಮಾಡಿದನು । ಭಾಮೆ ದ್ರೌಪದಿ ತಾ ಬಂದು ತನ್ನೈವರಿಗೆ ಅಭಯ ಹಸ್ತವ ಮುಗಿದು ವೃಂದಾವನದ ಮುಂದೆ ಕುಳಿತು ತನ್ನನುಜ ಕೃಷ್ಣನ್ನ ನೆನೆದಾಳು । ಶಂಖಾಸುರನು ದುರ್ವಾಸ, ಸ್ವಾಮಿ ಸಮುದ್ರನಂತೆ ದುರ್ಯೋಧನ ವೇದವೆಂಬಾಕೆ ನಾನೇ ಸ್ವಾಮಿ ಮಚ್ಛವತಾರನಾಗು ನೀನು । ಮಂದರಗಿರಿ ಯನೆತ್ತಿದಿ ಸ್ವಾಮಿ ಛಂದುಳ್ಳ ಕೂರ್ಮನಾದಿ ಸುರರಿಗೆ ಅಮೃತವ ನೆರೆದಿ ಸ್ವಾಮಿ ಕೂರ್ಮಾವತಾರನಾದ್ಯೋ ನೀನು । ಸುರಳಿ ಸುತ್ತಿದ ಭೂಮಿ ಸ್ವಾಮಿ ಎರಡು ದಾಡಿಂದ ತಂದಿ ಸ್ವಾಮಿ ಹರಿ ಹಿರಣ್ಯಾಕ್ಷಕನ ಕೊಂದಿ ಸ್ವಾಮಿ ವರಹಾವತಾರನಾದ್ಯೋ ನೀನು । ಕಂಬ ಎಂಬುವ ನರಸಿಂಹ ಸ್ವಾಮಿ ಹಿರಣ್ಯಕನೆಂಬ ದುರ್ಯೋಧನ ಪ್ರಲ್ಹಾದನೆಂಬಾಕೆ ನಾನೇ ಸ್ವಾಮಿ ನರಸಿಂಹಾವತಾರನಾದ್ಯೋ ನೀನು। ಬಲಿಯ ದಾನವ ಬೇಡಿ ಬಂದಿ ಸ್ವಾಮಿ ನೆಲನ ಮೂರಡಿಯನ್ನೆ ಮಾಡ್ದಿ ಬಲಿಯ ಪಾತಾಳಕ್ಕೆ ತುಳಿದಿ ಸ್ವಾಮಿ ವಾಮನಾವತಾರನಾದ್ಯೋ ನೀನು । ಉಕ್ಕಿನ ಕೊಡಲಿಯ ಪಿಡಿದಿ ಸ್ವಾಮಿ ಕ್ಷತ್ರಿಯರನೆ ಗೆದ್ದು ಬಂದಿ। ಹೆತ್ತ ತಾಯಿಯ ಶಿರವ ಕಡಿದಿ ಸ್ವಾಮಿ ಭಾರ್ಗವತಾರನಾದ್ಯೋ ನೀನು । ಮಾತಾಪಿತಾಜ್ಞೆಯ ಮೀರದಲೆ ಸ್ವಾಮಿ ವನವಾಸವಾಚರಿಸಿ ಬಂದಿ । ಧೂರ್ತ ರಾವಣನನ್ನ ಕೊಂದಿ ಸ್ವಾಮಿ ಸೀತಾರಾಮನಾದ್ಯೋ ನೀನು । ಗೋಕುಲದಲ್ಲಿ ನೀ ಪುಟ್ಟಿದಿ ಸ್ವಾಮಿ ಗೊಲ್ಲರ ಎಂಜಲ ಮೆದ್ದಿ । ಕಾಳಿಂಗಗಭಯವನಿತ್ತಿ ಸ್ವಾಮಿ ಕೃಷ್ಣಾವತಾರನಾದ್ಯೋ ನೀನು । ತ್ರಿಪುರರ ಸತಿಯರ ವ್ರತಭಂಗವನೆ ಮಾಡ್ದಿ । ತ್ರಿಭುವನದ ಚೌಕನ್ನ ಪಿಡಿದಿ ಸ್ವಾಮಿ ಬೌದ್ಧಾವತಾರನಾದ್ಯೋ ನೀನು । ಉತ್ತಮ ಹಯವನ್ನೆ ಏರ್ದಿ ಸ್ವಾಮಿ ಕ್ಷತ್ರಿಯರನೆ ಗೆದ್ದು ಬಂದಿ ಬತ್ತಲೆ ಕುದುರೆಯನೇರ್ದಿ ಸ್ವಾಮಿ ಕಲ್ಕ್ಯಾವತಾರ ನಾದ್ಯೋ ನೀನು। ಹತ್ತಾವತಾರಗಳಿಂದ ಸ್ವಾಮಿ ವಿಸ್ತರಿಸಿದೆ ನಿಮ್ಮ ನಾಮ ಭಕ್ತವತ್ಸಲ್ಯಾಮಿ ನಮ್ಮ ಕಷ್ಟವ ಪರಿಹಾರ ಮಾಡು । ಉದ್ಧವ ಅಕ್ರೂರ ಕೂಡ ನಿಮ್ಮ ಪಾದಸೇವೆಯನೆ ಮಾಡುವರು ನಾರದ ಮುನಿಯು ತಾ ಬಂದು ಗಾಯನವ ಮಾಡಿದನೆಂದು ।

ತೂಗುಮಂಚದ ಮ್ಯಾಲೆ ಲಕ್ಷ್ಮೀನಾರಾಯಣ ಮಲಗಿರಲು ದ್ರೌಪದಿ ಲಕ್ಷ್ಮೀರಮಣನೇ ಎಂದು ಕರೆಯಲು ಸ್ವಾಮಿ ಕಂಗೆಟ್ಟು ಎಚ್ಚೆತ್ತನಾಗ । ಬಾಗಿಲ ಮುಂದ ಹರಿಯಿರಲು ಜನನಿ ದೇವಕಿದೇವಿ ತಾ ಕಂಡು ತ್ರಿಭುವನದ ಮಾಯಾ ಬಲ್ಲೆಂದು ಸ್ವಾಮಿ ನಿನ್ನ ಮುಖವು ಯಾಕ ಬಾಡೇದ ಇಂದು । ಪಂಚಪಾಂಡವರೈವರಿಗಿಂದು ಆಪತ್ತುಗಳು ಬಂದವೆಂದು ನಾನು ದ್ವೈತವನಕ್ಕೆ ಹೋಗುವೆನೆಂದು ಹೇಳಿದನು ಶ್ರೀಕೃಷ್ಣ ಬಂದು । ಪೀತಾಂಬರ ಬಿಗಿದುಟ್ಟ ಸ್ವಾಮಿ ಶಂಖಚಕ್ರವ ಧರಿಸಿ ನಿಂತ ಕೌಸ್ತುಭ ಮಾಲೆ ಹಾಕಿದಳು ಸ್ವಾಮಿ ಗರುಡನ್ನ ಬೇಗ ಕರೆಸಿದನು ಪಕ್ಷಿ ಪಾದಕ್ಕೆ

ಬಂದೆರಗಿದನು । ಎಲ್ಲಿ ಆಗಮನವಿದೆ ಯೆಂದು ಕೇಳಿದನು ಗರುಡ ತಾ ಬಂದು ನಾನು ದ್ವೈತವನಕ್ಕೆ ಹೋಗುವೆನೆಂದು ಹೇಳಿದನು ಶ್ರೀಕೃಷ್ಣನಂದು । ಮಕರ ಕುಂಡಲವನ್ನೆ ಧರಿಸಿದನು ಸ್ವಾಮಿ ಗರುಡನ್ನ ಹೆಗಲನೇರಿದನು ಗರುಡನ್ನ ಹೇಗಲನೇರಿ ಸ್ವಾಮಿ ಗರುಡನ್ನ ಸಹಿತ ದ್ವೈತವನಕ್ಕಾಗಿ ಬಂದ । ಶಂಖ ಚಕ್ರಗಳು ಹೊಳೆದವೆಂದು ನೋಡುತಲೆ ಪಾಂಡವರು ಬಂದು ಚರಣಕ್ಕ ಮೈಯನಿಕ್ಕುತಲಿ ನಮ್ಮ ಹರಿ ರಕ್ಷಿಸೆಂದು ನುಡಿದರು। ನೀವು ಹಿರಿಯರು ಎಂದು ನಮಸ್ಕಾರಗಳು ಬೇಡೆಂದು ಕರ ಹಿಡಿದು ಹಿಡಿದೆತ್ತಿ ನಿಲಿಸಿ ಅವರ ಪೊಡೆಗಂಗಳ ನೀರ ಒರೆಸಿ । ಸಿಂಹಾಸನ ಮೇಲೆ ಕುಳ್ಳಿರಿ ಎಂದು ನುಡಿದರು ಪಾಂಡವರು ಬಂದು ನಾನಿಲ್ಲಿ ಕುಳ್ಳಿರಲಾಗದೆಂದು ನಾನು ದ್ರೌಪದಿಯ ಬಳಿಗೆ ಹೋಗುವೆನು । ಪಂಚಪಾಂಡವರು ನಮ್ಮ ಬಿಟ್ಟು ನೀವು ದ್ರೌಪದಿಯ ಬಳಿಗೆ ಹೋಗುವಿರಾ ಅಣ್ಣತಂಗೇರಿಗಿಂತಹ ಅಣಕದ ಮಾತನಾಡುವಿರಾ ? ತೀರ್ಥಯಾತ್ರಾ ತಿರುಗಿದಿರಿ ನಿಮ್ಮ ಮಹಾಲಕ್ಷ್ಮೀ ಹಾಗೆಂದು ಯಾತಕ್ಕ ಕರೆದಿ ನೀನೆಂದು ತಂಗಿ ಕಂಗೆಟ್ಟು ನಾ ಬೇಗ ಬಂದೆ । ಏನು ಕಾರಣ ಎಂತೆನಲು ಸ್ವಾಮಿ ನೀವು ಅರಿಯದ ಮಾಯ ಉಂಟೆ। ಶೇಷನ್ನ ಹಾಸಿಗೆ ಮೇಲೆ ತಂಗಿ ಶಯನವ ಮಾಡಿ ನಾನಿದ್ದೆ. ಮಹಾಲಕ್ಷ್ಮೀ ಪಾದ ಒತ್ತುವಾಗ ತಂಗಿ ನಿನ್ನ ಸ್ತುತಿಗಳ ಕೇಳಿದೆನು। ಛಪ್ಪನ್ನ ಕೋಟಿಯಾದವರ ಕೂಡ ತಂಗಿ ಚಕ್ಕಂದ ವಾಡುತ್ತಲಿದ್ದೆ । ಪ್ರಾಣವಲ್ಲಭೆಯರ ಕೂಡ ತಂಗಿ ಜಲಕ್ರೀಡೆ ಯಾಡುತಲಿದ್ದೆ ತುಂಬಿದ ಎಡೆಗಳ ಬಿಟ್ಟು ತಂಗಿ ತುತ್ತು ಇಡದೆ ನಾನು ಬಂದೆ । ಹಸ್ತು ಕಂಗೆಟ್ಟು ನಾ ಬಂದೆ । ಸ್ವಾಮಿ ಎನ್ನ ಕೂಡ ಅಣಕದ ಮಾತನಾಡುವಿರಾ ಥಾಲಿಯ ಕೊಟ್ಟಿದ್ದಿರೆಂದು ಎನ್ನ ನೀವು ಮರೆಯುವಿರಾ ? ಥಾಲಿಯ ಕೊಂಡು ಬಾ ಎಂದು ಹೇಳಿದನು ಶ್ರೀಕೃಷ್ಣ ಬಂದು । ಅನುಜನ ನುಡಿಯ ಕೇಳುತಲೆ ಒಳಕ್ಕೆ ಹೋದಳು ಬೇಗ ದೇವರ ನೆನೆಯುತಲಾಗ ಥಾಲಿಯ ತಂದಳು ಬೇಗ । ತಂದು ಥಾಲಿಯ ತೊಳೆದಿಡಲು ಒಂದು ಶಾಖಾದಳವ ನಿರ್ಮಿಸಿದಾ ಮಾಯವ ಮಾಡಿ ತೋರಿದನು ಅಲ್ಲೆ ಅನ್ನ ಅಕ್ಷಯವ ಮಾಡಿದನು ।

ನಕುಲ ಸಹದೇವರು ಪಾರ್ಥ ಅಲ್ಲೆ ಪತ್ರಾವಳಿಗಳ ಹಾಕುವರು ಮಿತ್ರೆಯರೆಲ್ಲರು ಬಂದು ಉಪ್ಪುಕಾಯಿಗಳ ಬಡಿಸುವರು । ಉಪ್ಪು ಉಪ್ಪಿನಕಾಯಿ ಅಲ್ಲೆ ಹಪ್ಪಳ ಸಂಡಿಗೆಗಳ ಬಡಿಸುವರು ಒದಗಿದ ಬ್ರಾಹ್ಮಣರು ಬಂದು ಚಟ್ನಿ ಕೋಸಂಬ್ರಿ ಗಳ ಬಡಿಸುವರು । ಅಲ್ಲಿ ಮಾಗಿದ ಮೆಣಸಿನಕಾಯಿ ಅಲ್ಲಿ ಹೇರಳೆ ನಿಂಬೆಕಾಯಿ ಮಾವು ದ್ರಾಕ್ಷಿ ನೆಲ್ಲಿಕಾಯಿ ಅಲ್ಲೆ ಚಳ್ಳೇಕಾಯಿಗಳ ಬಡಿಸುವರು । ಸಾಳೀ ವಾಗರ ತವ್ವಿಅಲ್ಲೆ ಸಾರು ಸಾಂಬಾರ ಬಡಿಸುವರು ಒದಗಿದ ಬ್ರಾಹ್ಮಣರು ಬಂದು ಅಲ್ಲೆ ಚಿತ್ರಾನ್ನಗಳ ಬಡಿಸಿದರು । ಚಕ್ಕುಲಿ ಚೇರುಂಡೆ ದೋಸೆಗಳು ಅಲ್ಲೆ ಹಪ್ಪಳ ಸಂಡಿಗೆಗಳ ಬಡಿಸುವರು । ಅಂಬೋಡಿ ಗಿಲಗಂಚಿಗಳನು ಅಲ್ಲೆ ಕರಿದ ಭಕ್ಷ್ಯಗಳ ಬಡಿಸುವರು । ಎಣ್ಣೊರಿಗೆ ಹೆತ್ತ ತುಪ್ಪಾ ಅಲ್ಲಿ ಫೇಣಿ ಗುಳ್ಳೋರಿಗೆಗಳ ಬಡಿಸುವರು। ಒದಗಿದ ಬ್ರಾಹ್ಮಣರು ಬಂದು ಹೂರಣದ ಭಕ್ಷ್ಯ ಬಡಿಸುವರು । ಮಾವಿನ ಹಣ್ಣು ಹಿಂಡುವರು ಅಲ್ಲೆ ಬಾಳೆಯ ಹಣ್ಣು ಕಲೆಸುವರು । ಕರಬೂಜ ಶೀಕರಣೆಗಳನು ಅಲ್ಲೆ ಬಿಳಿಯ ಭಕ್ಷ್ಯಗಳ ಬಡಿಸುವರು। ಭಾಮೆ ದ್ರೌಪದಿ ತಾ ಬಂದು ಐದು ಪರಮಾನ್ನಗಳ ಬಡಿಸಿದಳು ಭೀಮಸೇನ

ತಾನಾಗಲೇ ಬಂದು ಷಡುರಸನ್ನಗಳನೆ ಬಡಿಸಿದನು । ಪಾರ್ಥ ತಾನಾಗಲೇ ಬಂದು ತೂರಿ ತುಪ್ಪಗಳ ಬಡಿಸಿದನು । ಚತುರ್ಮುಖ ಬ್ರಹ್ಮ ತಾ ಬಂದು ಮಸರು ಹಾಲುಗಳ ಬಡಿಸಿದನು ಶ್ರೀಕೃಷ್ಣ ತಾನಾಗಲೇ ಬಂದು ಬಿಳಿಯ ಸಕ್ಕರಿಯ ಬಡಿಸಿದನು ಬಾಳದ ಬೇರು ಹಾಕಿದ್ದ ಝೂರಿಲೆ ಉದಕ ಬಡಿಸಿದರು । ಧರ್ಮರಾಯ ತಾನಾಗಲೇ ಬಂದು ಏಕೋಷ್ಣವ ಬಿಟ್ಟನಾಗ । ಉಂಡು ಕೈತೊಳೆದರು ಬೇಗ ತಾಂಬೂಲ ಕೊಂಡರು ಆಗ ಮಂತ್ರಾಕ್ಷತೆಯ ಕೊಡುವಾಗ ಧರ್ಮರಾಯ ತಾ ಸೆರಗ ಹಿಡಿದಿದ್ದಾನು । ಪರಿ ಪರಿ ಭ ೀಜನವ ಮಾಡಿದರು ಅವರು ನದಿಯ ತೀರದಲೆ ಹೊರಳಿದರು ಶ್ರೀಕೃಷ್ಣ ತಾನಾಗಲೇ ಬಂದು ಅವರ ಹೊಟ್ಟೆಯ ಮೇಲೆ ಹಸ್ತ ಎಳೆದಾ । ಭಾಮೆ ದ್ರೌಪದಿ ತಾ ಬಂದು ಋಷಿಗಳಿಗೆ ಭ ೀಜನಕ್ಕೆ ಕರೆದು ಬನ್ನೆಂದು ಆ ಮಾತು ಕೇಳುತಲೆ ಭೀಮ ಸರೋವರಕ್ಕಾಗಿ ತಾ ಬಂದ । ಛಲವ ಮಾಡಿ ಕರೆಯುತಿಹನು ಭೀಮ ಮರವ ಕಿತ್ತಿ ನಿಂತಿಹನು ನಡಿ ಬೇಗ ಮುಂದತ್ತಲೆನಲು ನೀವು ನಮ್ಮನ್ನ ಕೊಲ್ಲುವಿರಿ ಎಂದು ನುಡಿದರು । ತಗ್ಗಿತ ಮುಗ್ಗುತಲಿಹರು ಕಸಿವಿಸಿ ಬಡುತಲಿಹರು ಭೀಮಗ ಕೈಯ ಮುಗಿಯುತಲಿ ಧರ್ಮರಾಯನ ಮುಂದ ಹೇಳೆಂದು । ಆಡಿದಾ ಮಾತನೆ ಕೇಳಿ ಧರ್ಮ ಸರೋವರಕ್ಕಾಗಿ ತಾ ಬಂದು । ನಾವೀಗ ಭೋಜನವ ಮಾಡಿದೆವು ದ್ರೌಪದಿ ಪರಮಾನ್ನ ಭಕ್ಷಗಳ ಬಡಿಸಿದಳು ಋಷಿಗಳು ಉಂಡು ದಣಿದರು ಸವುಗೆ ಭೋೀಜನದ ಬಗೆಯು ಬೇಡೆಂದು ನೀವು ಪಾಂಡವರೈವರಿಗೆ ಜಯವಾಗಲೆಂದು ಋಷಿಗಳು ತಮ್ಮ ಗ್ರಾಮಕ ನಡೆದಾರು । ಅಲ್ಲಿ ಕಂಡೆವು ಕೃಷ್ಣ ಎನಲು ಇಲ್ಲಿ ಕಂಡೆವು ಕೃಷ್ಣ ಎನಲು ಮಾಯವ ಮಾಡಿ ತೋರಿದನು ಅಲ್ಲೆ ಅನ್ನ ಅಕ್ಷಯವ ಮಾಡಿದನು । ಅರ್ಕೀ ನದಿಯಲ್ಲೆ ಮಿಂದು ಅಲ್ಲೆ ಬದರೀ ನಾರಾಯಣನ ಕಂಡು ನರಹರಿ ನೀನೆ ಗತಿಯೆಂದು ವಿಜಯ ವಿಠ್ಠಲ ಕೃಷ್ಣ ಇಂದು.

॥ ಶ್ರೀಕೃಷ್ಣಾರ್ಪಣಮಸ್ತು॥

## ದೇವಪೂಜಾ ಸಮಯದ ಹಾಡುಗಳು

**ರಾಗ : ಮಧ್ಯಮಾವತಿ** **ಏಕತಾಳ**

೧) ಕರ್ತಾ ಕೃಷ್ಣಯ್ಯ ನೀ ಬಾರಯ್ಯ । ಎನ್ನಾರ್ತಧ್ವನಿಗೊಲಿದು ನೀ ಬಾರಯ್ಯ ॥ಪ॥ ಸುಗುಣದ ಖಣಿಯೆ ನೀ ಬಾರಯ್ಯ । ಎಮ್ಮಘವನೋಡಿಸಲು ನೀ ಬಾರಯ್ಯ । ಧಗೆಯೇರಿತು ತಾಪ ನೀ ಬಾರಯ್ಯ ಸದಾ । ಮುಗುಳ್ನಗೆಯ ಮಳೆಗರಿಯ ನೀ ಬಾರಯ್ಯ ॥ ೧॥ ವೈರಿವರ್ಗದಿ ನೊಂದೆ ನೀ ಬಾರಯ್ಯ । ಮತ್ಯಾರು ಗೆಳೆಯರಿಲ್ಲ ನೀ ಬಾರಯ್ಯ ॥ ಸೇರಿದೆ ನಿನ್ನಯ ಕರುಣೆಗೆ ಬಾರಯ್ಯ । ಒಳ್ಳೇ ದಾರಿಯ ತೋರಲು ನೀ ಬಾರಯ್ಯ ॥ ೨॥ ವೈರಾಗ್ಯಭಾಗ್ಯವ ಕೊಡಬಾರಯ್ಯ। ನಾನಾ ರೋಗದ ಭೇಷಜ ನೀ ಬಾರಯ್ಯ। ಜಾರುತದಾಯು ಬೇಗ ಬಾರಯ್ಯ । ಉದಾರ ಪ್ರಸನ್ವೇಂಕಟ ನೀ ಬಾರಯ್ಯ ॥ ೩॥

**ರಾಗ : ಜೈಜೈವಂತಿ** **ತ್ರಿತಾಳ**

೨) ಬಂದು ನಿಂದ ಕಣ್ಣ ಮುಂದೆ ॥ಪ॥ ಬಂದು ನಿಂದನಿಂದು ಭಾಗವತರ ಪ್ರಿಯ । ಕಂದರ್ಪ ಜನಕ ಶ್ರೀಕರುಣ ಸಾಗರ ಮೂರ್ತಿ ॥ಅ.ಪ.॥ ಕುಟಿಲ ಕುಂತಳದೇವ

ವಟುವೇಷದಿಂದಲಿ ॥ ನಟನೆ ಮಾಡುತ ದಿವ್ಯ ಪಟುತರದಲಿ ತಾನು ॥ ೧॥ ಮುರಳೀಯನೂದುತ ಮರುಳುಗೊಳಿಸಿ ಜನರ ॥ ಕೊರಳ ಪದಕ ಹಾರ ಧರಿಸಿ ತಾ ನಲಿಯುತ ॥ ೨॥ ಸುಜನರ ಪೊರೆಯುವ ಕುಜನರ ತರೆಯುವ॥ ವಿಜಯ ಸಾರಥಿ ನಮ್ಮ ವಿಜಯ ವಿಠ್ಠಲರೇಯ ॥ ೩॥

ರಾಗ : ಬಿಲಹರಿ ಅಟ್ಟತಾಳ

೩) ಹ್ಯಾಗೆ ಅರ್ಚಿಸಲಿ ಮೆಚ್ಚಿಸಲಿ ನಿನ್ನ । ನಾಗಶಯನನೆ ನಾರದವಂದ್ಯನೆ ದೇವಾ ॥ಪ॥ ಮಂಗಳಾಭಿಷೇಕಕ್ಕೆ ಉದಕ ತರುವೆನೆನೆ । ಗಂಗೆಯಂಗುಷ್ಠದಿ ಪಡೆದಿರುವೆ ॥ ಸಂಗೀತ ಕೀರ್ತನೆ ಪಾಡುವೆನೆಂದರೆ । ತುಂಬುರ ನಾರದರು ಪಾಡುತಿಹರು ದೇವ ॥ ೧॥ ಪುಷ್ಪಹಾರವ ತಂದು ಅರ್ಪಿಸುವೆನೆಂದರೆ । ಪುಷ್ಪಪಲ್ಲವಿಸಿದೆ ಪೊಕ್ಕಳೊಳು ॥ ಇಪ್ಪತ್ತೆತ್ತಿಸಕೋಟಿ ದೇವರ್ಕಳೆಲ್ಲರೂ। ಸೂಕ್ಷ್ಮನೈವೇದ್ಯ ನೀಡಲು ನಿತ್ಯತೃಪ್ತನು ॥ ೨॥ ಕೋಟಿ ಸೂರ್ಯರ ಪ್ರಭೆ ಮಿಗಿಲಾದಾತನಿಗೊಂದು । ದೀಪವನು ಹಚ್ಚಿದರೆ ಬೆಳಕಾಗ್ವದೇ ॥ ಸಾಟಿ ಕಾಣದ ಲಕುಮಿ ಉರಸ್ಥಳವಾಗಿರೆ । ಲೋಷ್ಠ ಕಾಸುಗಳೆಂತು ನೀಡಲೋ ಹರಿಯೆ ॥ ೩॥ ಹಾಸಿಗೆಯನೆ ತಂದು ಹಾಸುವೆನೆಂದರೆ । ಶೇಷನಾ ಮೇಲೆ ನೀ ಪವಡಿಸಿರ್ಪೆ ॥ ಬೀಸಣಿಕೆಯ ತಂದು ಬೀಸುವೆನೆಂದರೆ। ಬೀಸುತಿಹನು ಖಗ ತನ್ನ ಪಕ್ಕದಲಿ ॥ ೪॥ ನಿತ್ಯ ಗುಣಾರ್ಣವ ನಿಜಗುಣಪರಿಪೂರ್ಣ । ಸಚ್ಚಿದಾನಂದ ಸನಕಾದಿವಂದ್ಯ ॥ ಭಕ್ತಿದಾಯಕ ನಮ್ಮ ಪುರಂದರವಿಠ್ಠಲನ । ಮುಕ್ತಿದಾಯಕನೆಂದು ಸ್ತುತಿಸಿ ಕೊಂಡಾಡುವೆನೋ ॥ ೫॥

೪) ಸಕಲವೂ ಹರಿಸೇವೆ ಎನ್ನಿ । ರುಕುಮಿಣಿಯ ರಮಣ ವಿಟ್ಠಲನಲ್ಲದಿಲ್ಲವೆನ್ನಿ ॥ಪ॥ ನುಡಿಗಳೆಲ್ಲವು ನಾರಾಯಣನ ಕೀರ್ತನೆಯೆನ್ನಿ । ನಡೆವುದೆಲ್ಲವು ಹರಿಯಾತ್ರೆಯೆನ್ನಿ ॥ ಕೊಡುವುದೆಲ್ಲವು ಕಾಮಜನಕಗರ್ಪಿತವೆನ್ನಿ । ಎಡೆಯ ಅನ್ನವು ಶ್ರೀಹರಿಯ ಪ್ರಸಾದವೆನ್ನಿ ॥ ೧॥ ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಪುಡೆಯೆನ್ನಿ । ಕುಸುಮ ಪರಿಮಳವು ಕಂಜನಾಭಗೆನ್ನಿ॥ ಎಸೆವಾಭರಣವು ಯಶೋದೆನಂದನಗೆನ್ನಿ । ಶಶಿಮುಖಿಯರ ಕೂಟ ಸೊಬಗು ಗೋವಳಗೆನ್ನಿ ॥ ೨॥ ಆಟಪಾಟಗಳೆಲ್ಲ ಅಂತರ್ಯಾಮಿಗೆ ಯೆನ್ನಿ । ನೋಟಬೇಟಗಳೆಲ್ಲ ನಾಟಕಧಾರಿಗೆನ್ನಿ ॥ ನೀಟಾದ ವಸ್ತುಗಳೆಲ್ಲ ಕೈಟಭಮರ್ದನಗೆನ್ನಿ । ಕೋಟಲೆ ಸಂಸಾರ ಕಪಟನಾಟಕಗೆನ್ನಿ ॥ ೩॥ ನಿದ್ರೆಜಾಗರವು ಸಮುದ್ರಶಯನಗೆನ್ನಿ । ಭದ್ರಗಜನಿಧಿ ವರದಗೆನ್ನಿ ॥ ರೌದ್ರದಾರಿದ್ರ್ಯವು ರಾಘವನ ಮಾಯೆಯೆನ್ನಿ ಶ್ರೀ-। ಮುದ್ರೆ ಧರಿಸಿದವ ಹರಿದಾಸನೆನ್ನಿ ॥೪॥ ಅಣು-ರೇಣು ತೃಣ-ಕಾಷ್ಠ ಪರಿಪೂರ್ಣನಹುದೆನ್ನಿ । ಎಣಿಸಬಾರದನಂತ- ಮಹಿಮನೆನ್ನಿ ॥ ಸೆಣಸುವ ರಕ್ಕಸರ ಶಿರವ ಚಂಡಾಡುವ । ಪ್ರಣವಗೋಚರ ಪುರಂದರವಿಠಲರಾಯನೆನ್ನಿ ॥ ೫॥

## ನೈವೇದ್ಯದ ಹಾಡುಗಳು

ರಾಗ :ಭೈರವಿ ತಾಳ : (ಮಿಶ್ರಛಾಪು)

೧) ಆರೋಗಣೆ ಮಾಡೊ ಆನಂದಮೂರುತಿ ॥ ಪ ॥ ರನ್ನದ ತಳಿಗೆಯನ್ನು ಶೋಭನವಾದ ಪೊನ್ನ ಬಟ್ಟಲುಗಳ ನೆರವಿ ಶ್ರೀಹರಿಗೆ । ನಿನ್ನರಸಿ ಆ ಲಕ್ಷ್ಮಿ ಸೊಸೆಯರ ಕೂಡಿ ಶಾಲ್ಯನ್ನ ಸವಿಶಾಖಗಳ ನೀಡಿದ ಕೈಯಿಂದ ॥ ೧ ॥ ತುಪ್ಪ ಮಧು ಚಿತ್ರಾನ್ನ ಪಾಯಸ ಕರಿಗಳ

ಲೇಪ ಸಾರಸ ಭಕ್ಷ್ಯಗಳ । ಗೋಪಾಲಕೃಷ್ಣಗೆ ದಧಿ ಪಕ್ವಫಲಂಗಳು ಆ ಪದ್ಮಮುಖಿ ಬಡಿಸಿದಳು ಲೇಹ್ಯಪೇಯವ ॥ ೨ ॥ ಎನ್ನ ಕುಂದುಗಳಾಮುನಿಗೆ ದಿವ್ಯ ಅನ್ನವೊ ಮನ್ನಿಸಿ ಕರೆದು ನಿನ್ನ ಕರಕಂಜದಿಂದ । ಪೂರ್ಣವ ಮಾಡು ಭುಜಿಸೊ ಹಯವದನ ಕೃಪಾಳು ಸಕಲ ಲೋಕಪಾಲ ಸುರರೊಡೆಯನೆ ॥ ೩ ॥

ರಾಗ : ಕಾಂಬೋದಿ ತಾಳ : ಝುಂಪೆತಾಳ

೨) ಆರೋಗಣೆಯ ಮಾಡು ಸಾರಸುಖದೊಡೆಯ ॥ ಪ ॥ ಸತ್ಯವಾದ ಜಗಕೆ ಕರ್ತುಕಾರಣ ನೀನೆ ಮುಕ್ತಿದಾಯಕ ನಿತ್ಯತೃಪ್ತನಹುದ್ಯೆ । ಸತ್ಯವಾದವತಾರ ಸಕಲಗುಣಪರಿಪೂರ್ಣ ಭಕ್ತಿದಾಯಕ ಸಿರಿ ಪರಮ ದಯಾಳು ॥ ೧ ॥ ಅಣುರೋಮಕೂಪದಲಿ ಅಂಡಜಾಂಡಗಳಿರಲು ಘನಕೃಪಾಂಬುಧಿ ನಿಮ್ಮ ಪೊಗಳಲಳವೆ । ಫಣಿಶಾಯಿಯಾಗಿದ್ದ ಭುವನವ್ಯಾಪಕ ಹರಿಯ ಘನಭಕುತಿಲ್ಯಜಭವರು ಪೂಜೆಮಾಡುವರು ॥ ೨ ॥ ಗಂಗೆ ಗೋದಾವರಿ ತುಂಗಭದ್ರೆ ಯಮುನೆ ರಂಗಸನ್ನಿಧಿಯಾದ ಕಾವೇರಿಯು । ಮಂಗಳ ಭೀಮರಥಿ ನಿಮಗೆ ಮಜ್ಜನಕೆ ಅಣಿಮಾಡಿ ಅಂಗಜನಯ್ಯ ಭಾಪೆಂದು ಪೊಗಳೆ ॥ ೩ ॥ ರನ್ನಮಯವಾಗಿರ್ದ ಹೊನ್ನಮಂಟಪದೊಳಗೆ ಸ್ವರ್ಣಪಾತ್ರೆಗಳಲ್ಲಿ ಸ್ವಯಂಪಾಕವು । ನಿನ್ನ ಸೊಸೆ ವಾಣಿ ಭಾರತಿದೇವಿ ಕಡುಜಾಣೆ ಚೆನ್ನಾಗಿ ನೈವೇದ್ಯವನ್ನೆ ಮಾಡುವರು ॥ ೪ ॥ ಗಂಧ ಕಸ್ತೂರಿ ಪುನುಗು (ಚಂದನ) ಜವ್ವಾಜಿ ಮುಂದೆ ಕುಂಕುಮದ ಕೇಸರಿಯ ಲೇಪ । ಚೆಂದದ ಕೇದಿಗೆ ಮುಡಿವಾಳ ಸಂಪಿಗೆ ಕಂದರ್ಪನಯ್ಯಗೊಪ್ಪಿತು ಮಲ್ಲಿಗೆ ॥ ೫ ॥ ದೆಸೆ ದೆಸೆಗೆ ಪರಿಮಳಿಪ ಕುಶಲದ ಚಿತ್ರಾನ್ನ ಬಿಸಿದೋಸೆಗೆ ಬೆಣ್ಣೆ ಲೇಹ್ಯಪೇಯ । ಬಸಿರೊಳಗೆ ಈರೇಳು ಜಗವನಿಂಬಿಟ್ಟವಗೆ ನಸುನಗುತ ಇಂದಿರಾದೇವಿ ಬಡಿಸೆ ॥ ೬ ॥ ನೂರು ಯೋಜನದಗಲ ಸರಸಿಜ ಬ್ರಹ್ಮಾಂಡ ಹದಿನಾರು ಬಣ್ಣದ ಚಿನ್ನದ್ಧರಿವಾಣವು । ಸಾರೆಯಲಿ ಪೊಂಬಟ್ಟಲೆಂಬ ಸಾಗರದೊಳಗೆ ಮೇರುಗಿರಿಯೆಂಬೊ ದೀಪಗಳು ಬೆಳಗೆ ॥ ೭॥ ಆ ಕಮಲೆ ಮಾಡಿದ್ದು ನಾಲ್ಕುಬಗೆ ಘೃತ ಸೂಪ ಲೋಕಪತಿಗನುವಾದ ದಿವ್ಯಾನ್ನವು । ಬೇಕಾದ ಪಂಚಭಕ್ಷ್ಯಗಳು ರಸಾಯನವ ಏಕಾಂತದಲಿ ನಿಮ್ಮ ದೇವಿ ಬಡಿಸೆ ॥ ೮॥ ಖಳರಕುಲವೈರಿಗೆ ತಿಳಿನೀರು ಮಜ್ಜಿಗೆ ಎಳನೀರು ಪಾನಕ ಸೀತಳುದಕ । ಬಳಲಿದಿರಿ ಬಳಲಿದಿರಿ ಎನುತ ಹಯವದನಗೆ ನಳಿನಾಕ್ಷಿ ಕರ್ಪೂರವೀಳ್ಯವನೆ ಕೊಡಲು ॥ ೯ ॥

ರಾಗ-ಆನಂದಭೈರವಿ ತಾಳ : ಆದಿ

೩) ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ ದಿವ್ಯ ಷಡುರಸಾನ್ನವನಿಟ್ಟೆನೊ॥ ಪ ॥ ಘಮಘಮಿಸುವ ಶಾಲ್ಯನ್ನ ಪಂಚಭಕ್ಷ್ಯ ಅಮೃತ ಕೂಡಿದ ದಿವ್ಯ ಪರಮಾನ್ನವು ॥ ರಮಾದೇವಿಯು ಸ್ವಹಸ್ತದಿ ಮಾಡಿದ ಪಾಕ ಭೂಮಿ ಮೊದಲಾದ ದೇವಿಯರ ಸಹಿತ ತಾನು ॥ ೧॥ ಅರುವತ್ತು ಶಾಕ ಲವಣಶಾಕ ಮೊದಲಾದ ಸರಸ ಮೊಸರುಬುತ್ತಿ ಚಿತ್ರಾನ್ನವ ॥ ಪರಮ ಮಂಗಳ ಅಪ್ಪಾಲು ಅತಿರಸಗಳ ಹರುಷದಿಂದಲಿ ಇಟ್ಟೆ ಹೊಸತುಪ್ಪವ ॥ ೨ ॥ ವಡೆಯಂಬೋಡಿಯು ದಧಿವಡೆಯ ತಿಂಥಿಣಿ ಒಡೆಯನೆ ಬಡಿಸಿದೆ ಅಧಿಕವಾಗಿ॥ ದೃಢವಾದ ಪಡಿಪದಾರ್ಥವನೆಲ್ಲ ಇಡಿಸಿದೆ ಒಡೆಯ ಶ್ರೀಪುರಂದರವಿಠಲ ನೀನುಣ್ಣೊ ॥ ೩ ॥

ರಾಗ : ಮುಖಾರಿ ತಾಳ : ಆಟ

೪) ಆರೋಗಣೆಯ ಮಾಡೇಳಯ್ಯ - ಶ್ರೀಮನ್ನಾರಾಯಣ ಭೋಗ ಸ್ವೀಕರಿಸಯ್ಯ ॥ಅ.ಪ॥ ಸರಸಿಜಭವಾಂಡದ ಮೇರುಮಂಟಪದಿ ದಿನಕರಕರದೀಪ್ತ ಜ್ಯೋತಿಶ್ಚಕ್ರವು ॥ ತರಣಿಮಂಡಲ ಪೋಲುವ ರತುನದ ಹೊನ್ನ ಹರಿವಾಣದಲಿ ದೇವಿ ಬಡಿಸಿಹಳಯ್ಯ ॥ ೧ ॥ ಅಲ್ಲ ಹೇರೀಳೆ ಲಿಂಬೆ ಯಾಲಕ್ಕಿ ಮೆಣಸು ಕಾಯನೆಲ್ಲೆ ಅಂಬಟೆಕಾಯಿ ಚೆಲ್ವ ಮಾಂಗಾಯಿ ॥ ಬೇಲ ಮಂಗರೋಳಿ ಹುಣಿಸೆ ಪಾಪಟೆಕಾಯಿ ಎಲ್ಲ ಧರಾದೇವಿ ಅಣಿಗೊಳಿಸಿಹಳಯ್ಯ ॥ ೨ ॥ ಹಪ್ಪಳ ಸಂಡಿಗೆ ವಿವಿಧ ಶಾಕಂಗಳು ತುಪ್ಪ ಸಕ್ಕರೆ ಹಣ್ಣು-ಹಂಪಲವು ॥ ಕರ್ಪೂರ ಕಸ್ತೂರಿ ಬೆರಸಿದ ಸೀಖರಿಣಿ ಒಪ್ಪದಿ ಶ್ರೀದೇವಿ ಬಡಿಸಿಹಳಯ್ಯ ॥ ೩ ॥ ಎಣ್ಣೊರಿಗತಿರಸ ಚೆನ್ನಾದ ಮಂಡಿಗೆ ಅನ್ನ ಕ್ಷೀರಾನ್ನ ಪರಮಾನ್ನಗಳು ॥ ಸಣ್ಣ ಸೇವಗೆ ಶಾಲ್ಯನ್ನವ ನಿಮಿಷದಿ ಚೆನ್ನೆ ದುರ್ಗಾದೇವಿ ಬಡಿಸಿಹಳಯ್ಯ ॥ ೪ ॥ ನೀ ನಿತ್ಯತೃಪ್ತನಹುದು ನಿನ್ನ ಉದರದೊಳು ನಾನಾ ಜನರು ಬಂದು ಉಣ್ಣಬೇಕೋ ॥ ಶ್ರೀನಾಥ ಗದುಗಿನ ವೀರನಾರಾಯಣ ಅನಾಥಬಂಧು ಶ್ರೀಪುರಂದರವಿಠಲಾ ॥ ೫ ॥

ರಾಗ : ಆನಂದ ಭೈರವಿ ತಾಳ : ಆಟ

೫) ಫಲಾಹಾರವನು ಮಾಡೊ ಪರಮಪುರುಷ ಭೂಬಲನೆ ಲಕ್ಷ್ಮೀ ಕಂದರ್ಪರ ಸಹಿತ ॥ ಪ ॥ ಕದಳಿ ಕೆಂಬಾಳೆ ಕಿತ್ತಳೆ ಕಂಚಿಫಲಗಳು ಬದರಿ ಬೆಳುವಲ ಜಂಬೀರ ದ್ರಾಕ್ಷೆಗಳು ॥ ಮಧುರದ ಮಾದಾಳ ಮಾವಿನ ಹಣ್ಗಳು ತುದಿಮೊದಲಿಲ್ಲದ ಪರಿಪರಿ ಫಲಗಳ ॥ ೧ ॥ ಉತ್ತತ್ತಿ ಜಂಬು ನಾರಂಗ ದಾಳಿಂಬವು ಮುತ್ತಾದೌದುಂಬರ ಕಾರಿಯು ಕವಳಿ ॥ ಕತ್ತರಿಸಿದ ಕಬ್ಬು ಫಲಸು ತೆಂಗಿನಕಾಯಿ ಒತ್ತಿದ ಬೇಳೆ ನೆಲಗಡಲೆ ಖಿಜ್ಜೂರ ಹಣ್ಣ ॥ ೨ ॥ ಹಾಲು ಸಕ್ಕರೆ ಜೇನುತುಪ್ಪ ಸೀಕರಣೆಯು ಹಾಲು ರಸಾಯನ ಬೆಣ್ಣೆ ಸೀಯಾಳು ॥ ಮೂಲೋಕದೊಡೆಯ ಶ್ರೀಪುರಂದರವಿಠಲನೆ ಪಾಲಿಸೋ ನಿನ್ನಯ ಕರಕಂಜದಿಂದಲಿ ॥ ೩ ॥

ರಾಗ : ತೋಡಿ ಆಟ ತಾಳ

೬) ಫಲಹಾರವನೆ ಮಾಡೊ ಪರಮಪುರುಷನೆ ಲಲನೆ ಲಕ್ಷ್ಮೀಸಹ ಸಕಲ ಸುರರೊಡೆಯ ॥ ಪ ॥ ಕಬ್ಬು ಕದಳಿಫಲ ಕೊಬ್ಬರಿ ಖರ್ಜೂರ ಕೊಬ್ಬಿದ ದ್ರಾಕ್ಷಿ ಹಲಸು ತೆಂಗು ॥ ಶುಭ್ರ ಸಕ್ಕರೆ ಲಿಂಬೆ ಮಾವು ಕಿತ್ತಳೆಗಳು ಇಬ್ಬದಿಯಲಿ ಇಟ್ಟ ಶೇಷ ಫಲಂಗಳ ॥ ೧ ॥ ನೆನೆಗಡಲಿಬೇಳೆ ಲಡ್ಡಿಗೆ ಮೂಗದಾಳು ಪಾನಕ ಶುಂಠಿಬೆಲ್ಲ ಯಾಲಕ್ಕಿಯು ॥ ಗೊನೆಬಾಳೆಹಣ್ಣು ಘೃತವು ನೊರೆಹಾಲು ಕನಕಪಾತ್ರೆಯೊಳಿಟ್ಟು ಸಕಲ ಪದಾರ್ಥವ ॥೨॥ ಧ್ಯಾನಪೂರ್ವಕದಿಂದ ಮಾನಸಪೂಜೆಯ ಪನ್ನೀರನೆ ಭಕುತವತ್ಸಲಗೆ ॥ ಜಾನಕಿರಮಣಗೆ ಷೋಡಶೋಪಚಾರ ದಾನವಾಂತಕ ಸಿರಿಪುರಂದರವಿಠಲ ॥ ೩ ॥

# ನೈವೇದ್ಯ ಫಲಹಾರಾದಿ ಪ್ರಮೇಯ

**ರಾಗ : ಪಾಡಿ** **ತ್ರಿವಿಡಿ ತಾಳ**

೭) ಸವಿದುಣ್ಣಬಾರಯ್ಯಾ ಸಾರಭೋಕ್ತಾ । ಪವನಾಂತರ್ಗತ ಕಪಿಲಾತ್ಮ ನರಸಿಂಗಾ ॥ಪಲ್ಲ॥ ಉಪ್ಪು ಉಪ್ಪಿನಕಾಯಿ ಪತ್ರ ಶಾಖ ಸೂಪ । ಒಪ್ಪುವ ಸಂಡಿಗೆ ವ್ಯಂಜನಗಳು । ಇಪ್ಪವು ನಿರುಋುತಿ ಪ್ರಾಣ ಮಿತ್ರ ಶೇಷ । ಸರ್ಪವೈರಿ ದಕ್ಷಲೋಕೇಶನಲ್ಲಿಗೆ ॥ ೧ ॥ ಅನ್ನ ಮಂಡಿಗೆ ತೈಲ ಪಕ್ವಂಗಳು ಪರ । ಮಾನ್ನ ಭಕ್ಷ ತುಪ್ಪ ಹುಳಿ ಪದಾರ್ಥ । ಮುನ್ನೆ ಚಂದ್ರ ಬೊಮ್ಮ ಜಯಂತರೈ ಸೂರ್ಯ । ಕನ್ಯ ಲಕುಮಿದೇವಿ ಪರ್ವತಸುತಿ ಇರೆ ॥ ೨ ॥ ಕ್ಷೀರನವನೀತದಧಿಕಾರಣಾಮ್ಲ । ಚಾರು ಉದ್ದಿನ ಭಕ್ಷ ಕಟು ದ್ರವ್ಯ ಪಾ । ವಾರಿಜಾಸನ ರಾಣಿ ವಾಯು ಸೋಮ ಮಾರ । ವೈರಿ ಧರ್ಮ ಸ್ವಾಯಂಭುವಂಗಳು ಅಲ್ಲಿ ಹಾಕಿರೆ ॥ ೩ ॥ ಇಂಗು ಯಾಲಕ್ಕಿ ಸಾಸಿವೆಯಿಂದ ವೊಪ್ಪುತಾ । ಬಂಗಾರ ಪಾತ್ರಿಯೊಳಗೆ ತಂದಿಡೆ । ಪೊಂಗಳಸದಲ್ಲಿ ಸ್ವಾದೋದಕ ಇಡೆ । ಅಂಗಜಾ ದುರ್ಗಿಯು ಚಂದ್ರಮಸುತನಿರೆ ॥೪॥ ವೀಳ್ಯವ ಕೈಕೊಳ್ಳೊ ಗಂಗಾಜನಕ ಹರಿ । ಅಲ್ಲಲ್ಲಿಗೆ ನಿನ್ನ ರೂಪವುಂಟು । ಬಲ್ಲಿದಾ ವಿಜಯ ವಿಠ್ಠಲರೇಯ ಎನಗಿದೆ । ಸಲ್ಲೋದೆ ಸರಿ ಲೇಶವಾಪೇಕ್ಷದವನಲ್ಲ ॥ ೫॥

**ಭಾಮಿನಿಷಟ್ಪದಿ** **ರೂಪಕ ತಾಳ**

೮) ಶ್ರೀಪತಿಯ ನೈವೇದ್ಯ ಕೊಡುವದು। ಧೂಪದಾಂತರ ಭೂಮಿ ಶೋಧನ। ಆಪದಿಂ ಮಂಡಲವ ಮಾಡುತ ರಂಗವಲಿ ಹಾಕಿ ॥ ಸೂಪ ಅನ್ನವು ಅಗ್ನಿಕೋಣದಿ। ಆ ಪರಮ ಅನ್ನವನು ಈಶಾ। ನ್ಯಾಪೇಯಾಲೇಹಗಳ ನೈರುತದಲ್ಲಿ ಇಟ್ಟು ತಥಾ॥ ೧॥ ವಾಯುದಿಶದಲಿ ಉಪಸುಭ ೀಜ್ಯವು। ಪಾಯಸನ್ನದ ಮದ್ಧ್ಯ ಘೃತ ಸಂ- । ಸ್ತೂಯ ಮಾನನಿವೇದನವು ಈ ಕ್ರಮದಿ ಹೀಂಗಿಟ್ಟು॥ ಬಾಯಿಯಿಂದಲಿ ದ್ವಾದಶ ಸ್ತುತಿ। ಗಾಯನದಿ ನುಡಿಯುತಲಿ ಈ ಕಡೆ। ಆಯ ಅಭಿಮಾನಿಗಳು ದೇವತೆಗಳನು ಚಿಂತಿಸುತ॥೨॥ ಓದನಕ ಅಭಿಮಾನಿ ಶಶಿ ಪರ। ಮೋದನಕ ಅಭಿಮಾನಿ ಭಾರತಿ। ಆ ದಿವಾಕರ ಭಕ್ಷ ಕ್ಷೀರಾಬ್ಧೀಜೆ ಸರ್ಪಿಯಲಿ॥ ಸ್ವಾದುಕ್ಷೀರಕ ವಾಣಿ ಮಂಡಿಗೆ। ಲೀ ದ್ರುಹಿಣನವನೀತ ಪವನಾ। ದಾದಧಿಗೆ ಶಶಿ ವರುಣ ಸೂಪಕೆ ಗರುಡ ಅಭಿಮಾನಿ ॥೩॥ ಶಾಕದಲಿ ಶೇಷಾಮ್ಲ ಗಿರಿಜಾ। ನೇಕನಾಮ್ಲದಿ ರುದ್ರ ಸಿತದಲಿ। ಪಾಕಶಾಸನ ಶೇಷುಪಸ್ಕರದಲ್ಲಿ ವಾಕ್ಪತಿಯೂ॥ ಈ ಕಟು ಪದಾರ್ಥದಲಿ ಯಮ ಬಾ। ಲ್ಹೀಕ ತಂತುಭದಲ್ಲಿ ಮನ್ಮಥ। ನೇಕ ವ್ಯಂಜನ ತೈಲ ಪಕ್ವದಿ ಸೌಮ್ಯನಾಮಕನೂ ॥ ೪॥ ಕೂಷುಮಾಂಡದ ಸಂಡಿಗಿಲಿ ಕುಲ। ಮಾಷದಲಿ ದಕ್ಷಪ್ರಜಾಪತಿ । ಮಾಷ ಭಕ್ಷದಿ ಬ್ರಹ್ಮ ಪುತ್ರನು ಲವಣದಲಿ ನಿಋುತಿ॥ ಈ ಸುಫಲ ಷಡ್ರಸದಿ ಪ್ರಾಣ ವಿ । ಶೇಷ ತಾಂಬೂಲದಲಿ ಗಂಗಾ । ಆ ಸುಕರ್ಮಕೆ ಪುಷ್ಕರನು ಅಭಿಮಾನಿ ದೇವತೆಯೂ॥ ೫॥ ಸಕಲ ಭಕ್ಷಗಳಲ್ಲಿ ಉದಕದಿ । ಭುಕು ಪದಾರ್ಥಕೆ ವಿಶ್ವಮೂರುತಿ। ಮುಖದಲೀ ನುಡಿ ಅಂತಿಲೀ ಶ್ರೀಕೃಷ್ಣಮೂರುತಿಯ॥ ನಖ ಚತು ಪದಾರ್ಥದಲಿ ಆ ಸ । ಮ್ಯಕು ಚತುರ ವಿಂಶತಿ ಅಭಿಮಾ। ನಿಕರ ಚಿಂತಿಸಿ ಸರ್ಪಿ ಸಹ ಶ್ರೀತುಳಸಿಯನು ಹಾಕಿ

|| ೭|| ಕ್ಷೀರದಧಿಕರ್ಪೂರ ಸಾಕ । ಜಿ್ಣೀರ ಪನಸ ಕಪಿತ್ಥ ಪಣ್ಕದ । ಳೀರಸಾಲ ದ್ರಾಕ್ಷ ತಾಂಬೂಲದಲಿ ಚಿಂತನೆಯೂ|| ಪೂರ ಶಂಖದಿ ಉದಕ ಓಂ ನವೊ| ನಾರಯಣ ಅಷ್ಟಾಕ್ಷರವು ತನ| ಮೋರೆ ಮುಚ್ಚಿ ಶತಾಷ್ಟವರ್ತಿಲಿ ಮಂತರಿಸಿ ತೆರೆದೂ || ೭ || ಸೌರಭೀ ಮಂತ್ರದಲಿ ಪ್ರೋಕ್ಷಿಸಿ । ತೋರಿ ತೀವ್ರದಿ ಮುದ್ರಿ ನಿರ್ವಿಷ । ಮೂರೆರಡು ಮೊದಲಾಗಿ ಶಂಖವು ಅಂತಿಮಾಡಿ ತಥಾ || ಪೂರ್ವ ಆಪೋಶನವು ಹೇಳಿ ಅ-। ಪೂರ್ವ ನೈವೇದ್ಯವು ಸಮರ್ಪಿಸಿ| ಸಾರ್ವಭೌಮಗ ಉತ್ತರಾಪೋಶನವು ಹೇಳಿ ತಥಾ || ೮|| ಪೂಗ ಅರ್ಪಿಸಿದಂತರದಿ ಅತಿ । ಬ್ಯಾಗದಲಿ ಲಕ್ಷ್ಮ್ಯಾದಿ ನೈವೇ । ದ್ಯಾಗ ಅರ್ಪಿಸಿ ತಾರತಮ್ಯದಿ ಉಳಿದ ದೇವರಿಗೆ || ಸಾಗಿಸೀ ಶ್ರೀ ಹರಿಯ ಸಂಪುಟ । ದಾಗ ನಿಲ್ಲಿಸಿ ವೈಶ್ವದೇವವು । ಸಾಗಿಸೀ ಶ್ರೀ ವಿಜಯ ವಿಠಲನ ಧೇನಿಸುತ ಮುದದಿ || ೯||

ರಾಗ-ಭೈರವಿ ಧ್ರುವ ತಾಳ

೯) ನೈವೇದ್ಯ ಕೊಡುವ ವಿಚಾರವ ತಿಳಿವದು । ಶ್ರೀ ವಲ್ಲಭನ ಪ್ರತೀಕವೆ ನಿಲಿಸಿ । ಭಾವಜನ್ನಯ್ಯಗೆ ಬಗೆ ಬಗೆ ಅಲಂಕರಿಸಿ । ಪೂವು ಪರಿಮಳ ಗಂಧ ಧೂಪ ದೀಪ| ಪಾವನವಾದ ಭಕ್ತಿ ಭಾವದಿಂದಲಿ ತಿಳಿದು । ಕೋವಿದ ತನದಿಂದ ಡಂಭವ ತೊರೆದು । ಜೀವಾಂತರಿಯಾಮಿಯಾದ ಅಂತರಾತ್ಮ ಮೂರುತಿಯ । ದ್ವಿವಿಧ ರೂಪಾವೆಂದು ಚಿಂತೆ ಮಾಡಿ| ದೇವನ ದೇಹದೊಳು ತಂದು ಆತನೆ ಆತ್ಮ । ಈ ವಿಚಾರವ ಗ್ರಹಿಸಿ ಏಕೀ ಭೂತಾ । ಯಾವತ್ತೂ ಇಂದ್ರಿಯ ಒಳಗಿಪ್ಪ ಮೂರುತಿಯ| ವಿವೇಕದಲಿ ಸರ್ವ ಐಕ್ಯ ತಿಳಿದು । ಈವ ಪದಾರ್ಥದಲ್ಲಿ ಹರಿಯೆ ವ್ಯಾಪ್ತನೆಂದು । ತಾ ವೊಲಿದು ತಾನೆ ಮಾಳ್ಪಾನೆಂದು । ಈವವನಲ್ಲ ದೇವೇಶ ಒಳಗಿದ್ದು| ಕೋವಿದತನದಲ್ಲಿ ಲೀಲೆ ತೋರಿ| ನಾವೆಲ್ಲ ನಿಮಿತ್ಯ ಮಾತ್ರವೆಂದು ಹರಿಯು । ದೇವತೆಗಳ ಕೂಡ ಚೇಷ್ಟೆ ಮಾಳ್ಪಾ । ನಾವೊಂದು ತಿಳಿವುದು ಶಕ್ಯವಿಲ್ಲೆಂದು ತಿಳಿದು । ಶ್ರೀ ವಿಭುವಿಗೆ ಸಮರ್ಪಣೆಯ ಮಾಡಿ| ಶ್ರೀವಿಷ್ಣುವಿನ ಆಧೀನ ಚಿಂತೆಯ ಮಾಡಿ । ಶ್ರೀವಾತದೇವನಧಿಷ್ಠಾನದಲ್ಲಿ ಮಾವ ಮರ್ದನ ಹಯವದನ ವಿಠ್ಠಲರೇಯಗೆ । ತವಕದಲ್ಲೀ ಮಂತ್ರ ಪಠಿಸುತ ಈಯಬೇಕು ||೧||

ಮಟ್ಟತಾಳ

ಸ್ನಾನ ಮಾಡಿಸುವಳು ಶ್ರೀಲಕುಮಿದೇವಿ । ವೈನತೇಯನು ಪೀತಾಂಬರ ತಂದಿಪ್ಪ| ಶ್ರೀ ನಾಗನು ಪೀಠ ತಂದು ಹಾಕುವ ವಾಸ । ವನು ಕಲಶಗಳನು ತಂದು ಕೊಡುವ ಕಾ । ಮನು ಗೋಪಿ ಚಂದನವನು ತೇದಿಪ್ಪ । ಮೀನಕೇತನು ಇಂದ್ರ ಶಂಖ ಚಕ್ರಧರರು । ದ್ಯುನಾಥನು ಕನ್ನಡಿ ತೋರ್ಪಾ । ಮೈನಾಕಿ ರಮಣ ವೈಜಯಂತಿ ಈವ| ಶ್ರೀ ನಳಿನೋದರ ಕೌಸ್ತುಭ ಮಣಿ ಇಪ್ಪ । ಶ್ರೀ ನಾರಿ ತಾನು ವನಮಾಲಿಯ ನೀಯೆ । ಭಾನುತೇಜ ಪೋಲ್ವ ಕುಂಡಲ ಶೇಷನು । ದಾನವಾರಿಗೆ ನಿತ್ಯ ಸೇವೆ ಮಾಡುವರು । ಅನಂತ ಗುಣ ಹಯವದನ ವಿಟ್ಠಲರೇಯಾ । ತಾನಿಪ್ಪನು ಭಜಕ ಜನಗಳ ಹೃದಯದಲ್ಲಿ || ೨ ||

**ರೂಪಕತಾಳ**

ಮಂಡಲದಲಿ ಭೂಮಿ ವರಹ ದೇವನಿಪ್ಪ । ಅಂಡಿಯಲಿ ಸುತ್ತ ವಿಷ್ವಕ್ಸೇನ ಪುರುಷ। ಮಂಡಲ ಮೇಲಕ್ಕೆ ಗಣಪತಿ ಕುಮಾರ । ಕೆಂಡದ ಮೇಲೆ ಪಾವಕ ಪಾತ್ರಿ ವಾರುಣಿ । ಚಂಡ ವಿಕ್ರಮ ಆನಂದನಿಪ್ಪ । ಉಂಡ ಪಾತ್ರಿ ದುರ್ಗಾ ಸತ್ಯವೆಂಬೊ ದೇವ। ಕುಂಡಲಿ ವೈರಿಯ ಪತ್ನಿ ವ್ಯಜಿನದಲ್ಲಿ ಶೌಂಡ । ಮುನಿ ದತ್ತಾತ್ರಯನಿಪ್ಪ ಅಲ್ಲೆಲ್ಲಿ । ಮಂಡನಾದಿ ವಸ್ತ್ರಾ ಧರಿಸಿ ರಮಾದೇವಿ । ಮಂಡಲದೊಳು ತುಲಸಿ ಮತ್ತೆ ಸ್ವಯಂಪಾಕ। ಹಂಡೆ ಯಿದ್ದಲಿ ಕಪಿಲ ವಿಶ್ವಂಭರ। ಮಂಡಿತನಾಗಿ ಇರುತಿಪ್ಪ ಈಪರಿ। ಮೆಂಡು ದೈವದ ಗಂಡ ಹಯವದನದ ವಿಟ್ಠಲನ್ನ । ಪಂಡಿತರು ಈ ಪರಿ ತಿಳಿದು ಉಣಿಸುವದು ॥ ೩॥

**ಝುಂಪೆತಾಳ**

ಸರ್ವ ಶುದ್ಧಿಗೆ ಪುಷ್ಕರ ಹಂಸನಾಮಕ । ಸರ್ವ ಸ್ವಾದು ರಸಕೆ ರತಿ ವಿಶ್ವದೇವನು। ಪೂರ್ವಿಗೆ ಅಗ್ನಿ ಪರಶುರಾಮ ದೇವತಿ । ಚರ್ವ ಮಾಡೋದಕ್ಕೆ ಕಾಷ್ಟದಲ್ಲಿ । ಮಾರ್ವಲಿದು ವಸಂತ ವೃಷಭ ದೇವನಿದ್ದು । ಗರ್ವವನು ಬಿಟ್ಟು ಈ ಪರಿ ಮಾಳ್ಪರು । ಶರ್ವ ವಂದಿತ ಹಯವದನ ವಿಟ್ಠಲರೇಯ್ಯಾ । ಬೇರ್ವರಿಸಿ ತಾಪವನು ಕೀಳುವನು ತಿಳಿದವರಿಗೆ ॥ ೪ ॥

**ತ್ರಿವಿಡಿ ತಾಳ**

ಅನ್ನಕ್ಕೆ ಚಂದ್ರನು ಅಲ್ಲಿ ಕೇಶವ ಪರ । ಮಾನ್ನಕೆ ಭಾರತಿ ನಾರಾಯಣ । ಚನ್ನಾಗಿ ಭಕ್ಷ್ಯಕೆ ಸೂರ್ಯಮಾಧವ ಘೃತಕೆ । ವನದಿ ಸಂಭವೆ ಗೋವಿಂದನು । ಕನ್ಯ ಸರಸ್ವತಿ ವಿಷ್ಣು ಕ್ಷೀರದಲಿ ವಾಸಾ । ವನ್ನಜೋದ್ಭವ ಮಂಡಿಗಿಗೆ ಮಧುಸೂದನ। ಬೆಣ್ಣೆಗೆ ವಾಯು ತ್ರಿವಿಕ್ರಮ ಮೂರ್ತಿ ವ -। ರುಣ ಚಂದ್ರಮ ವಾಮನ ದಧಿಖಂಡಕ್ಕೆ । ಗುಣಿಸು ಸೂಪಕ್ಕೆ ಗರುಡದೇವನು ಅಲ್ಲಿ । ಚನ್ನಿಗ ಶ್ರೀಧರ ಮೂರ್ತಿಯನ್ನು । ಇನ್ನು ಪೇಳು ಪತ್ರಶಾಖಕ್ಕೆ ಮಿತ್ರರವಿ । ಎನ್ನು ತಿಳಿವದು ಅಲ್ಲಿ ಹೃಷಿಕೇಶನ । ಪನ್ನಗ ಫಲಶಾಕ ಅಲ್ಲಿ ಪದುಮನಾಭಾ। ಗಣ್ಯ ಮಾಡುವದು ಹುಳಿಯಲ್ಲಿ ಪಾರ್ವತಿ ದಾಮೋ -। ದ್ರನ್ನ ಈಪರಿ ವಾಸ ಹನ್ನೆರಡು ಸ್ಥಾನದಲಿ । ಚಿನ್ಮಯ ಮೂರ್ತಿ ಹಯವದನ ವಿಟ್ಠಲರೇಯಾ । ತನ್ನ ತಾನೆ ಬಲ್ಲ ಈ ಪರಿ ತಿಳಿಸುವಾ ॥ ೫ ॥

**ಅಟ್ಟ ತಾಳ**

ಮಧುರ ಪದಾರ್ಥಕ್ಕೆ ಶಿವ ಸಂಕರುಷಣ । ಒದಗಿ ತಿಳಿವದು ಸಕ್ಕರಿ ಗುಡದ್ರವ್ಯಕೆ। ಅದಿತಿ ಕುವರ ವಾಸುದೇವ ನಾಮಕ ಹರಿ । ಮುದದಿಂದ ತಿಳಿವದು ವ್ಯಂಜನದಲಿ ಬ್ರಹ್ಮಪ್ರದ್ಯುಮ್ನದೇವರು । ವಿಷ ದ್ರವ್ಯಗ ಧರ್ಮ ಅದರ ನಿಯಾಮಕ ಅನಿರುದ್ಧನು । ಮದನನು ಇಂಗು ಸಾಸಿವಿ ಶ್ರೀಖಂಡದಲ್ಲಿ । ಅದುಭೂತ ಪುರುಷೋತ್ತಮ ಅಲ್ಲಿ ಇಪ್ಪ। ಬದಿಯಲ್ಲಿಪ್ಪ ಚೌಷ್ಯಲೇಹ ತೈಲಪಾಕ । ಬುಧ ಅಧೋಕ್ಷಜ ಅಲ್ಲಿ ವಾಸವಯ್ಯಾ । ಮೆದುವ ಉದ್ದಿನ ದ್ರವ್ಯ ಸಂಡಿಗೆ ವಡೆಗಳು । ಮೊದಲಾದಲಿ ದಕ್ಷ ನರಸಿಂಹನು। ಮೊದಲ ಮನು

॥ ೬॥ ಕ್ಷೀರದಧಿಕರ್ಪೂರ ಸಾಕ । ಜ್ಹೀರ ಪನಸ ಕಪಿತ್ಥ ಪಣ್ಕದ । ಘೀರಸಾಲ ದ್ರಾಕ್ಷ ತಾಂಬೂಲದಲಿ ಚಿಂತನೆಯೂ॥ ಪೂರ ಶಂಖದಿ ಉದಕ ಓಂ ನವೊ। ನಾರಯಣ ಅಷ್ಟಾಕ್ಷರವು ತನ। ಮೋರೆ ಮುಚ್ಚಿ ಶತಾಷ್ಟವರ್ತಿಲಿ ಮಂತರಿಸಿ ತೆರೆದೂ ॥ ೭ ॥ ಸೌರಭೀ ಮಂತ್ರದಲಿ ಪ್ರೋಕ್ಷಿಸಿ । ತೋರಿ ತೀವ್ರದಿ ಮುದ್ರಿ ನಿರ್ವಿಷ । ಮೂರೆರಡು ಮೊದಲಾಗಿ ಶಂಖವು ಅಂತಿಮಾಡಿ ತಥಾ ॥ ಪೂರ್ವ ಆಪೋಶನವು ಹೇಳಿ ಅ-। ಪೂರ್ವ ನೈವೇದ್ಯವು ಸಮರ್ಪಿಸಿ। ಸಾರ್ವಭೌಮಗ ಉತ್ತರಾಪೋಶನವು ಹೇಳಿ ತಥಾ ॥ ೮॥ ಪೂಗ ಅರ್ಪಿಸಿದಂತರದಿ ಅತಿ । ಬ್ಯಾಗದಲಿ ಲಕ್ಷ್ಮ್ಯಾದಿ ನೈವೇ । ದ್ಯಾಗ ಅರ್ಪಿಸಿ ತಾರತಮ್ಯದಿ ಉಳಿದ ದೇವರಿಗೆ ॥ ಸಾಗಿಸೀ ಶ್ರೀ ಹರಿಯ ಸಂಪುಟ । ದಾಗ ನಿಲ್ಲಿಸಿ ವೈಶ್ವದೇವವು । ಸಾಗಿಸೀ ಶ್ರೀ ವಿಜಯ ವಿಠಲನ ಧೇನಿಸುತ ಮುದದಿ ॥ ೯॥

ರಾಗ-ಭೈರವಿ ಧ್ರುವ ತಾಳ

೯) ನೈವೇದ್ಯ ಕೊಡುವ ವಿಚಾರವ ತಿಳಿವದು । ಶ್ರೀ ವಲ್ಲಭನ ಪ್ರತೀಕವೆ ನಿಲಿಸಿ । ಭಾವಜನ್ನೈಯ್ಯಗೆ ಬಗೆ ಬಗೆ ಅಲಂಕರಿಸಿ । ಪೂವು ಪರಿಮಳ ಗಂಧ ಧೂಪ ದೀಪ। ಪಾವನವಾದ ಭಕ್ತಿ ಭಾವದಿಂದಲಿ ತಿಳಿದು । ಕೋವಿದ ತನದಿಂದ ಡಂಭವ ತೊರೆದು । ಜೀವಾಂತರಿಯಾಮಿಯಾದ ಅಂತರಾತ್ಮ ಮೂರುತಿಯ । ದ್ವಿವಿಧ ರೂಪಾವೆಂದು ಚಿಂತೆ ಮಾಡಿ। ದೇವನ ದೇಹದೊಳು ತಂದು ಆತನೆ ಆತ್ಮ । ಈ ವಿಚಾರವ ಗ್ರಹಿಸಿ ಏಕೀ ಭೂತಾ । ಯಾವತ್ತೂ ಇಂದ್ರಿಯ ಒಳಗಿಪ್ಪ ಮೂರುತಿಯ। ವಿವೇಕದಲಿ ಸರ್ವ ಐಕ್ಯ ತಿಳಿದು । ಈವ ಪದಾರ್ಥದಲ್ಲಿ ಹರಿಯೆ ವ್ಯಾಪ್ತನೆಂದು । ತಾ ವೊಲಿದು ತಾನೆ ಮಾಳ್ಪಾನೆಂದು । ಈವವನಲ್ಲ ದೇವೇಶ ಒಳಗಿದ್ದು। ಕೋವಿದತನದಲ್ಲಿ ಲೀಲೆ ತೋರಿ। ನಾವೆಲ್ಲ ನಿಮಿತ್ಯ ಮಾತ್ರವೆಂದು ಹರಿಯು । ದೇವತೆಗಳ ಕೂಡ ಚೇಷ್ಟೆ ಮಾಳ್ಪಾ । ನಾವೊಂದು ತಿಳಿವುದು ಶಕ್ಯವಿಲ್ಲೆಂದು ತಿಳಿದು । ಶ್ರೀ ವಿಭುವಿಗೆ ಸಮರ್ಪಣೆಯ ಮಾಡಿ। ಶ್ರೀವಿಷ್ಣುವಿನ ಆಧೀನ ಚಿಂತೆಯ ಮಾಡಿ । ಶ್ರೀವಾತದೇವನಧಿಷ್ಠಾನದಲ್ಲಿ ಮಾವ ಮರ್ದನ ಹಯವದನ ವಿಠ್ಠಲರೇಯಗೆ । ತವಕದಲ್ಲೀ ಮಂತ್ರ ಪಠಿಸುತ ಈಯಬೇಕು ॥ ೧ ॥

ಮಟ್ಟತಾಳ

ಸ್ನಾನ ಮಾಡಿಸುವಳು ಶ್ರೀಲಕುಮಿದೇವಿ । ವೈನತೇಯನು ಪೀತಾಂಬರ ತಂದಿಪ್ಪ। ಶ್ರೀ ನಾಗನು ಪೀಠ ತಂದು ಹಾಕುವ ವಾಸ । ವನು ಕಲಶಗಳನು ತಂದು ಕೊಡುವ ಕಾ । ಮನು ಗೋಪಿ ಚಂದನವನು ತೇದಿಪ್ಪ । ಮೀನಕೇತನು ಇಂದ್ರ ಶಂಖ ಚಕ್ರಧರರು । ದ್ಯುನಾಥನು ಕನ್ನಡಿ ತೋರ್ಪಾ । ಮೈನಾಕಿ ರಮಣ ವೈಜಯಂತಿ ಈವ। ಶ್ರೀ ನಳಿನೋದರ ಕೌಸ್ತುಭ ಮಣಿ ಇಪ್ಪ । ಶ್ರೀ ನಾರಿ ತಾನು ವನಮಾಲಿಯ ನೀಯೆ । ಭಾನುತೇಜ ಪೋಲ್ವ ಕುಂಡಲ ಶೇಷನು । ದಾನವಾರಿಗೆ ನಿತ್ಯ ಸೇವೆ ಮಾಡುವರು । ಅನಂತ ಗುಣ ಹಯವದನ ವಿಟ್ಠಲರೇಯಾ । ತಾನಿಪ್ಪನು ಭಜಕ ಜನಗಳ ಹೃದಯದಲ್ಲಿ ॥ ೨ ॥

**ರೂಪಕತಾಳ**

ಮಂಡಲದಲಿ ಭೂಮಿ ವರಹ ದೇವನಿಪ್ಪ । ಅಂಡಿಯಲಿ ಸುತ್ತ ವಿಷ್ವಕ್ಸೇನ ಪುರುಷ। ಮಂಡಲ ಮೇಲಕ್ಕೆ ಗಣಪತಿ ಕುಮಾರ । ಕೆಂಡದ ಮೇಲೆ ಪಾವಕ ಪಾತ್ರಿ ವಾರುಣಿ । ಚಂಡ ವಿಕ್ರಮ ಆನಂದನಿಪ್ಪ । ಉಂಡ ಪಾತ್ರಿ ದುರ್ಗಾ ಸತ್ಯವೆಂಬೊ ದೇವ। ಕುಂಡಲಿ ವೈರಿಯ ಪತ್ನಿ ವ್ಯಜಿನದಲ್ಲಿ ಶೌಂಡ । ಮುನಿ ದತ್ತಾತ್ರಯನಿಪ್ಪ ಅಲ್ಲೆಲ್ಲಿ । ಮಂಡನಾದಿ ವಸ್ತ್ರಾ ಧರಿಸಿ ರಮಾದೇವಿ । ಮಂಡಲದೊಳು ತುಲಸಿ ಮತ್ತೆ ಸ್ವಯಂಪಾಕ। ಹಂಡೆ ಯಿದ್ದಲಿ ಕಪಿಲ ವಿಶ್ವಂಭರ। ಮಂಡಿತನಾಗಿ ಇರುತಿಪ್ಪ ಈಪರಿ। ಮೆಂಡು ದೈವದ ಗಂಡ ಹಯವನದ ವಿಟ್ಠಲನ್ನ । ಪಂಡಿತರು ಈ ಪರಿ ತಿಳಿದು ಉಣಿಸುವದು ॥ ೩॥

**ಝುಂಪೆತಾಳ**

ಸರ್ವ ಶುದ್ಧಿಗೆ ಪುಷ್ಕರ ಹಂಸನಾಮಕ । ಸರ್ವ ಸ್ವಾದು ರಸಕೆ ರತಿ ವಿಶ್ವದೇವನು। ಪೂರ್ವಿಗೆ ಅಗ್ನಿ ಪರಶುರಾಮ ದೇವತಿ । ಚರ್ವ ಮಾಡೋದಕ್ಕೆ ಕಾಷ್ಟದಲ್ಲಿ । ಮಾರ್ವಲಿದು ವಸಂತ ವೃಷಭ ದೇವನಿದ್ದು । ಗರ್ವವನು ಬಿಟ್ಟು ಈ ಪರಿ ಮಾಳ್ಪರು । ಶರ್ವ ವಂದಿತ ಹಯವದನ ವಿಟ್ಠಲರೇಯ್ಯಾ । ಬೇರ್ವರಿಸಿ ತಾಪವನು ಕೀಳುವನು ತಿಳಿದವರಿಗೆ ॥ ೪ ॥

**ತ್ರಿವಿಡಿ ತಾಳ**

ಅನ್ನಕ್ಕೆ ಚಂದ್ರನು ಅಲ್ಲಿ ಕೇಶವ ಪರ । ಮಾನ್ನಕೆ ಭಾರತಿ ನಾರಾಯಣ । ಚನ್ನಾಗಿ ಭಕ್ಷಕೆ ಸೂರ್ಯಮಾಧವ ಘೃತಕೆ । ವನದಿ ಸಂಭವೆ ಗೋವಿಂದನು । ಕನ್ಯ ಸರಸ್ವತಿ ವಿಷ್ಣು ಕ್ಷೀರದಲಿ ವಾಸಾ । ವನ್ನಜೋದ್ಭವ ಮಂಡಿಗಿಗೆ ಮಧುಸೂದನ। ಬೆಣ್ಣಿಗೆ ವಾಯು ತ್ರಿವಿಕ್ರಮ ಮೂರ್ತಿ ವ -। ರುಣ ಚಂದ್ರಮ ವಾಮನ ದಧಿಖಂಡಕ್ಕೆ । ಗುಣಿಸು ಸೂಪಕ್ಕೆ ಗರುಡದೇವನು ಅಲ್ಲಿ । ಚನ್ನಿಗ ಶ್ರೀಧರ ಮೂರ್ತಿಯನ್ನು । ಇನ್ನು ಪೇಳು ಪತ್ರಶಾಖಕ್ಕೆ ಮಿತ್ರರವಿ । ಎನ್ನು ತಿಳಿವದು ಅಲ್ಲಿ ಹೃಷಿಕೇಶನ । ಪನ್ನಗ ಫಲಶಾಕ ಅಲ್ಲಿ ಪದುಮನಾಭಾ। ಗಣ್ಯ ಮಾಡುವದು ಹುಳಿಯಲ್ಲಿ ಪಾರ್ವತಿ ದಾಮೋ -। ದ್ರನ್ನ ಈಪರಿ ವಾಸ ಹನ್ನೆರಡು ಸ್ಥಾನದಲಿ । ಚಿನ್ಮಯ ಮೂರ್ತಿ ಹಯವದನ ವಿಟ್ಠಲರೇಯಾ । ತನ್ನ ತಾನೆ ಬಲ್ಲ ಈ ಪರಿ ತಿಳಿಸುವಾ ॥ ೫ ॥

**ಅಟ್ಟ ತಾಳ**

ಮಧುರ ಪದಾರ್ಥಕ್ಕೆ ಶಿವ ಸಂಕರುಷಣ । ಒದಗಿ ತಿಳಿವದು ಸಕ್ಕರಿ ಗುಡದ್ರವ್ಯಕೆ। ಅದಿತಿ ಕುವರ ವಾಸುದೇವ ನಾಮಕ ಹರಿ । ಮುದದಿಂದ ತಿಳಿವದು ವ್ಯಂಜನದಲಿ ಬ್ರಹ್ಮಪ್ರದ್ಯುಮ್ನದೇವರು । ವಿಷ ದ್ರವ್ಯಗ ಧರ್ಮ ಅದರ ನಿಯಾಮಕ ಅನಿರುದ್ಧನು । ಮದನನು ಇಂಗು ಸಾಸಿವಿ ಶ್ರೀಖಂಡದಲ್ಲಿ । ಅದುಭೂತ ಪುರುಷೋತ್ತಮ ಅಲ್ಲಿ ಇಪ್ಪ। ಬದಿಯಲ್ಲಿಪ್ಪ ಚೌಷ್ಯಲೇಹ ತೈಲಪಾಕ । ಬುಧ ಅಧೋಕ್ಷಜ ಅಲ್ಲಿ ವಾಸವಯ್ಯಾ । ಮೆದುವ ಉದ್ದಿನ ದ್ರವ್ಯ ಸಂಡಿಗೆ ವಡೆಗಳು । ಮೊದಲಾದಲಿ ದಕ್ಷ ನರಸಿಂಹನು। ಮೊದಲ ಮನು

ಹಪ್ಪಳ ವಡಿಯಲ್ಲಿಪ್ಪ । ತ್ರಿದಶ ವಂದಿತ ಅಚ್ಯುತನು ಅಲ್ಲಿ ಇಪ್ಪ । ಮದವಾದ ಲವಣದಿ ನಿರಋತಿ ಜನಾರ್ದನ । ವಿಧ ವಿಧ ಲವಣಶಾಕದಲಿ ಪ್ರಾಣ । ಕದಲದೆ ಇಪ್ಪನು ಅಲ್ಲಿ ಉಪೇಂದ್ರನು । ನದಿ ಇಪ್ಪಳು ತಾಂಬೂಲಕೆ ಹರಿಯೂ । ಬುಧನು ಸ್ವಾದೋದಕದಲಿ ಶ್ರೀ ಕೃಷ್ಣ । ಇದೆ ಪರಿ ಇಪ್ಪರು ತುಂಬಿಕೊಂಡು । ವಿಧಿ ಪಿತಾ ಹಯವದನ ವಿಟ್ಠಲರೇಯಾ । ತದಾಕಾರದಲಿಪ್ಪ ಅನಿತು ಪದಾರ್ಥದಿ ॥ ೬॥

**ಆದಿತಾಳ**

ಲವಣ ಪದಾರ್ಥ ಮೊದಲು ತಂದು ಇಟ್ಟು । ಲವಣ ಶಾಖವು ಮತ್ತೆ ಪಳಿದೆ ಸಾರು। ಹವಣದಿಂದಲಿ ಅನ್ನ ಮೊದಲಾದ ದ್ರವ್ಯವು । ಸುವಿವೇಕದಲಿ ಇಡುವ ಬಗೆಯನ್ನೆ ತಿಳಿವುದು। ಹವಿಮೂಲೆಯಲಿ ಭಕ್ಷ ಶಿವಮೂಲೆಗೆ ಪರಮಾನ್ನ। ಜವನ ತರುವಾಯ ಕೋಣೆಯಲ್ಲಿ । ಕವಿಗಳು ಲೇಹ್ಯಪೇಹ್ಯ ತಂದು ಇಡಲಿಬೇಕು । ಪವನ ಮೂಲೆಯಲ್ಲಿ ಉಪಭ ೀಜನಾ । ಸವಿಯಾದ ಉದಕ ಘೃತ ಪ್ರತ್ಯೇಕ ತಂದಿಟ್ಟು । ನವ ವಿಧ ಭಕುತಿಯಿಂದ ಸಮರ್ಪಣೆಯ ಮಾಡಿ । ಹವಣದಿಂದಲಿ ಇನಿತು ಅಭಿಮಾನ್ಯ(ದೇವರ) ದೇವತೆಗಳ । ತವಕದಿ ಹರಿಯಂಗ ಸೃಷ್ಟಿಪ್ರಕಾರದಂತೆ । ಕವಲಬುದ್ಧಿ ಇಲ್ಲದೆ ಏಕೀಭೂತ ಚಿಂತಿಸಿ । ತ್ರಿವಿಧ ಬಗೆ ಅಧ್ಯಾತ್ಮ ಅಧಿದೈವ ಆಧಿಭೂತ । ಅವಿರುದ್ಧ ಮನದಲ್ಲಿ ಐಕ್ಯಭಾವವೆ ತಿಳಿದು । ಭವದೂರ ಶ್ರೀಹಯವದನ ವಿಟ್ಠಲರೇಯಗೆ । ದಿವಸ ದಿವಸ ಇತ್ತು ಸುಖಬಡುವದು ಜನರು

॥ ಜತೆ ॥ ಈ ಪರಿಯಲಿ ಹರಿಗೆ ಉಣಿಸಿದ ಸುಜನರಿಗೆ । ಶ್ರೀಪತಿ ಹಯವದನ ವಿಟ್ಠಲ ಮುಕ್ತಿಯನೀವಾ ॥ ೮ ॥ **।। ಶ್ರೀ ಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ।।**

## ನೈವೇದ್ಯಸಮರ್ಪಣ ಸಂಧಿ
## (ಹರಿಕಥಾಮೃತಸಾರ - ೩೧ ನೆಯ ಸಂಧಿ)

೧೦) ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ । ಪರಮ ಭಗವದ್ಭಕ್ತರಿದನಾರದಿ ಕೇಳುವುದು ॥ ಲೆಕ್ಕಿಸದೆ ಲಕುಮಿಯನು ಬೊಮ್ಮನ। ಪೊಕ್ಕುಳಿಂದಲಿ ಪಡೆದ ಪೊಸ ಪೊಂ । ಬಕ್ಕಿದೇರನು ಪಡೆದವಯವಗಳಿಂದ ದಿವಿಜರನು ॥ ಮಕ್ಕಳಂದದಿ ಪೊರೆವ ಸರ್ವದ । ರಕ್ಕಸಾಂತಕ ರಣದೊಳಗೆ ನಿ । ದುಃಖ ಸುಖಮಯ ಕಾಯ್ದ ಪಾರ್ಥನ ಸೂತನೆಂದೆನಿಸಿ ॥ ೧॥ ದೋಷಗಂಧವಿದೂರ ನಾನಾ । ವೇಷಧಾರಿ ವಿಚಿತ್ರಕರ್ಮ ಮ । ನೀಷಿ ಮಾಯಾರಮಣ ಮಧ್ವಾಂತಃಕರಣರೂಢ ॥ ಶೇಷಶಾಯಿ ಶರಣ್ಯ ಕೌಸ್ತುಭ । ಭೂಷಣಸುಕಂಧರ ಸದಾ ಸಂ । ತೋಷ ಬಲ ಸೌಂದರ್ಯಸಾರನ ಮಹಿಮೆಗೇನೆಂಬೆ ॥ ೨॥ ಸಾಶನಾನಶನೇ ಅಭೀ ಎಂ । ಬೀ ಶ್ರುತಿಪ್ರತಿಪಾದ್ಯನೆನಿಸುವ। ಕೇಶವನ ರೂಪದ್ವಯವ ಚಿದ್ದೇಹದೊಳಹೊರಗೆ ॥ ಬೇಸರದೆ ಸದ್ಭಕ್ತಿಯಿಂದ ಉ । ಪಾಸನೆಯ ಗೈಯುತ್ತ ಬುಧರು ಹುತಾಶನನ ವೋಲಿಪ್ಪನೆಂದನವರತ ತುತಿಸುತಿರು ॥ ೩॥ ಸಕಲಸದ್ಗುಣಪೂರ್ಣ ಜನ್ಮಾ । ದ್ಯಖಿಳದೋಷವಿದೂರ ಪ್ರಕಟಾ । ಪ್ರಕಟ ಸದ್ವ್ಯಾಪಾರಿ ಗತಸಂಸಾರಿ ಕಂಸಾರಿ ॥ ನಕುಲ ನಾನಾ ರೂಪ ನೀಯಾ । ಮಕ ನಿಯಮ್ಯ ನಿರಾಮಯ ರವಿ । ಪ್ರಕರಸನ್ನಿಭ ಪ್ರಭು ಸದಾ

ಮಾಂ ಪಾಹಿ ಪರಮಾಪ್ತ ॥ ೪॥ ಚೇತನಾಚೇತನ ಜಗತ್ತಿನೊ । ಳಾತತನು ತಾನಾಗಿ ಲಕುಮೀ । ನಾಥ ಸರ್ವರೊಳಿಪ್ಪ ತದ್‌ತದ್ರೂಪಗಳ ಧರಿಸಿ ॥ ಜಾತಿಕಾರನ ತೆರದಿ ಎಲ್ಲರ । ಮಾತಿನೊಳಗಿದ್ದಖಿಳಕರ್ಮವ। ತಾ ತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತಿಪ್ಪ ॥ ೫॥ ವೀತಭಯ ವಿಜ್ಞಾನದಾಯಕ। ಭೂತಭವ್ಯಭವತ್ಪ್ರಭು ಖಳಾ । ರಾತಿ ಖಗವರವಹನ ಕಮಲಾಕಾಂತ ನಿಶ್ಚಿಂತ ॥ ಮಾತರಿಶ್ವಪ್ರಿಯ ಪುರಾತನ । ಪೂತನಾಪ್ರಾಣಾಪಹಾರಿ ವಿ ।ಧಾತೃ ಜನಕ ವಿಪಶ್ಚಿತರ ಪ್ರಿಯ ಸಲಹು ಸಲಹೆಮ್ಮ ॥ ೬॥ ದುಷ್ಟಜನಸಂಹಾರಿ ಸರ್ವೋ -। ತ್ಕೃಷ್ಟಮಹಿಮ ಸಮೀರನುತ ಸಕ -। ಲೇಷ್ಟದಾಯಕ ಸ್ವರತ ಸುಖಮಯ ಮಮ ಕುಸಲ್ವಾಮಿ॥ ಹೃಷ್ಟ ಪುಷ್ಟ ಕನಿಷ್ಠ ಸೃಷ್ಟ್ಯಾ । ದೃಷ್ಟಕರ್ತೃ ಕರೀಂದ್ರವರದ ಯ । ಥೇಷ್ಟದನು ಉನ್ನತ ಸುಕರ್ಮಾ ನಮಿಪೆನನವರತ ॥ ೭॥ ಪಾಕಶಾಸನ ಪೂಜ್ಯಚರಣ ಪಿ । ನಾಕಿಸನ್ನುತಮಹಿಮ ಸೀತಾ । ಶೋಕನಾಶನ ಸುಲಭ ಸುಮುಖ ಸುವರ್ಣವರ್ಣನಿಭ ॥ ಮಾಕಳತ್ರ ಮನೀಷಿ ಮಧುರಿಪು । ಏಕಮೇವಾದ್ವಿತಿಯರೂಪ ಪ್ರ । ತೀಕ ದೇವಗಣಾಂತರಾತ್ಮಕ ಪಾಲಿಸುವುದೆಮ್ಮ ॥೮॥ ಅಪ್ರಮೇಯೋನ್ನತ ಸ್ವರೂಪ ಸ। ದಾ ಪ್ರಸನ್ನಮುಖಾಬ್ಜ ಮುಕ್ತಿಸು । ಖಪ್ರದಾಯಕ ಸುಮನಸಾರಾಧಿತ ಪದಾಂಭೋಜ ॥ ಸ್ವಪ್ರಕಾಶ ಸ್ವತಂತ್ರ ಸರ್ವಗ। ಕ್ಷಿಪ್ರಫಲದಾಯಕ ಕ್ಷಿತೀಶ ಯ । ದುಪ್ರವೀರ ವಿತರ್ಕ್ಯ ವಿಶ್ವ ಸುತೈಜಸ ಪ್ರಾಜ್ಞ ॥ ೯॥ ಗಾಳಿ ನಡೆವಂದದಲಿ ನೀಲಘ। ನಾಳಿ ವರ್ತಿಸುವಂತೆ ಬ್ರಹ್ಮ ತ್ರಿ । ಶೂಲಧರ ಶಕ್ರಾರ್ಕ ಮೊದಲಾದಖಿಳ ದೇವಗಣ ॥ ಕಾಲ ಕರ್ಮ ಗುಣಾಭಿಮಾನಿ ಮ । ಹಾಲಕುಮಿಯನುಸರಿಸಿ ನಡೆವಳು । ಮೂಲಕಾರಣ ಮುಕ್ತಿದಾಯಕ ಹರಿಯೆನಿಸಿಕೊಂಬ ॥ ೧೦॥ ಮೋಡ ಕೈಬೀಸಣಿಗೆಯಿಂದಲಿ । ಓಡಿಸುವೆನೆಂಬನ ಪ್ರಯತ್ನವು । ಕೂಡುವುದೆ ಕಲ್ಪಾಂತಕಾದರು ಲಕುಮಿವಲ್ಲಭನು ॥ ಜೋಡುಕರ್ಮವ ಜೀವರೊಳು ತಾ । ಮಾಡಿ ಮಾಡಿಸಿ ಫಲಗಳುಣಿಸುವ । ಪ್ರೌಢರಾದವರಿವನ ಭಜಿಸಿ ಭವಾಬ್ಧಿ ದಾಟುವರು ॥ ೧೧॥ ಕ್ಲೇಶ ಮೋಹಾಜ್ಞಾನ ದೋಷ ವಿ । ನಾಶಕ ವಿರಿಂಚಾಂಡದೊಳಗಾ । ಕಾಶದೋಪಾದಿಯಲಿ ತುಂಬಿಹನೆಲ್ಲ ಕಾಲದಲಿ ॥ ಘಾಸಿಗೊಳಿಸದೆ ತನ್ನವರನಾ। ಯಾಸ ಸಂರಕ್ಷಿಸುವ ಮಹಾ ಕರು। ಣಾಸಮುದ್ರ ಪ್ರಸನ್ನವದನಾಂಭೋಜ ವೈರಾಜ ॥ ೧೨॥ ಕನ್ನಡಿಯ ಕೈಪಿಡಿದು ನೋಳ್ಪನ । ಕಣ್ಣುಗಳು ಕಂಡಲ್ಲಿ ಎರಗದೆ । ತನ್ನವೋಲ್ ಪ್ರತಿಬಿಂಬ ಕಾಂಬುವ ದರ್ಪಣವ ಬಿಟ್ಟು ॥ ಧನ್ಯರಿಳೆಯೊಳಗೆಲ್ಲ ಕಡೆಯಲಿ । ನಿನ್ನ ರೂಪವ ನೋಡಿ ಸುಖಿಸುತ । ಸನ್ನುತಿಸುತಾನಂದ ವಾರಿಧಿಯೊಳಗೆ ಮುಳುಗಿಹರು ॥ ೧೩॥ ಅನ್ನಮಾನಿ ಶಶಾಂಕನೊಳು ಕಾ । ರುಣ್ಯ ಸಾಗರ ಕೇಶವನು ಪರ । ಮಾನ್ನದೊಳು ಭಾರತಿಯು ನಾರಾಯಣನು ಭಕ್ಷ್ಯದೊಳು ॥ ಸೊನ್ನಗದಿರನು ಮಾಧವನು ಶ್ರುತಿ । ಸನ್ನುತ ಶ್ರೀಲಕ್ಷ್ಮೀ ಘೃತದೊಳು । ಮಾನ್ಯ ಗೋವಿಂದಾಭಿಧನು ಇರುತಿಪ್ಪನೆಂದೆಂದು ॥ ೧೪ ॥ ಕ್ಷೀರಮಾನಿ ಸರಸ್ವತಿ ಜಗ ।ತ್ಸಾರ ವಿಷ್ಣುವ ಚಿಂತಿಸುವುದು ಸ । ರೋರಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರಿ ॥ ಮಾರುತನು ನವನೀತದೊಳು ಸಂ । ಪ್ರೇರಕ ತ್ರಿವಿಕ್ರಮನು ದಧಿಯೊಳು । ವಾರಿನಿಧಿ ಚಂದ್ರಮರೊಳಗೆ

ಇರುತಿಪ್ಪ ವಾಮನನು ॥ ೧೫ ॥ ಗರುಡ ಸೂಪಕೆ ಮಾನಿ ಶ್ರೀ ಶ್ರೀ। ಧರನು ದೇವತೆ ಪತ್ರಶಾಕಕೆ। ವರನೆನಿಪ ಮಿತ್ರಾಖ್ಯಸೂರ್ಯ ಹೃಷೀಕಪನ ಮೂರ್ತಿ॥ ಉರಗರಾಜನು ಫಲಸುಶಾಕಕೆ। ವರನೆನಿಸುವನು ಪದ್ಮನಾಭನ । ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲ ಕಾಲದಲಿ ॥ ೧೬ ॥ ಗೌರಿ ಸರ್ವಾಮ್ಲಸ್ಥಳೆನಿಪಳು । ಶೌರಿ ದಾಮೋದರನ ತಿಳಿವುದು । ಗೌರಿಪಾನಾಮ್ಲಸ್ಥ ಸಂಕರುಷಣನ ಚಿಂತಿಪುದು ॥ ಸಾರಶರ್ಕರ ಗುಡದೊಳಗೆ ವೃ । ತ್ರಾರಿ ಇರುತಿಹ ವಾಸುದೇವನ। ಸೂರಿಗಳು ಧೇನಿಪರು ಪರಮಾದರದಿ ಸರ್ವತ್ರ ॥ ೧೭ ॥ ಸ್ಮರಿಸು ವಾಚಸ್ಪತಿಯ ಸೋಪ । ಸ್ಕರದೊಳಗೆ ಪ್ರದ್ಯುಮ್ನನಿಪ್ಪನು । ನಿರಯಪತಿ ಯಮಧರ್ಮ ಕಟುದ್ರವ್ಯ ದೊಳಗನಿರುದ್ಧ॥ ಸರಷಪ ಶ್ರೀರಾಮಠೇಳದಿ । ಸ್ಮರನ ಶ್ರೀಪುರುಷೋತ್ತಮನ ಕ । ರ್ಪೂರದಿ ಚಿಂತಿಸಿ ಪೂಜಿಸುತಲಿರು ಪರಮ ಭಕುತಿಯಲಿ ॥ ೧೮ ॥ ನಾಲಿಗಿಂದಲಿ ಸ್ವೀಕರಿಪ ರಸ । ಪಾಲು ಮೊದಲಾದುದರೊಳಗೆ ಘೃತ । ತೈಲಪಕ್ವ ಪದಾರ್ಥದೊಳಗಿಹ ಚಂದ್ರನಂದನನ ॥ ಪಾಲಿಸುವಧೋಕ್ಷಜನ ಚಿಂತಿಸು । ಸ್ಥೂಲಕೂಷ್ಮಾಂಡ ತಿಲ ಮಾಷಜ । ಈ ಲಲಿತ ಭಕ್ಷ್ಯದೊಳು ದಕ್ಷನು ಲಕ್ಷ್ಮೀನರಸಿಂಹ ॥ ೧೯ ॥ ಮನುವು ಮಾಷ ಸುಭಕ್ಷ್ಯದೊಳು ಚಿಂ । ತನೆಯ ಮಾಡಚ್ಯುತನ ನಿರಋತಿ। ಮನೆಯೆನಿಪ ಲವಣದೊಳು ಮರೆಯದೆ ಶ್ರೀಜನಾರ್ದನನ ॥ ನೆನೆವುತಿರು ಫಲರಸಗಳೊಳು ಪ್ರಾ । ಣನ ಉಪೇಂದ್ರನ ವೀಳ್ಯದೆಲೆಯೊಳು । ದ್ಯುನದಿ ಹರಿರೂಪವನೆ ಕೊಂಡಾಡುತಲಿ ಸುಖಿಸುತಿರು ॥ ೨೦ ॥ ವೇದವಿನುತೆಗೆ ಬುಧನು ಸುಸ್ವಾ- । ದೋದಕಾಧಿಪನೆನಿಸಿಕೊಂಬನು । ಶ್ರೀದ ಕೃಷ್ಣನ ತಿಳಿದು ಪೂಜಿಸುತಿರು ನಿರಂತರದಿ ॥ ಸಾಧುಕರ್ಮವ ಪುಷ್ಕರನು ಸುನಿ । ವೇದಿತ ಪದಾರ್ಥಗಳ ಶುದ್ಧಿಯ । ಗೈದಲೋಸುಗ ಹಂಸನಾಮಕಗರ್ಚಿಸುತಲಿಪ್ಪ ॥ ೨೧ ॥ ರತಿ ಸಕಲ ಸುಸ್ವಾದುರಸಗಳ । ಪತಿಯೆನಿಸುವಳು ಅಲ್ಲಿ ವಿಶ್ವನು । ಹುತವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು ॥ ಕ್ಷಿತಿಜ ಗೋಮಯಜಾದಿಯೊಳು ಸಂ । ಸ್ಥಿತ ವಸಂತನ ಋಷಭದೇವನ । ತುತಿಸುತಿರು ಸಂತತ ಸದಾ ಸದ್ಭಕ್ತಿಪೂರ್ವಕದಿ ॥೨೨ ॥ ಪಾಕಕರ್ತೃಗಳೊಳಗೆ ಚತುರ್ದಶ । ಲೋಕಮಾತೆ ಮಹಾಲಕುಮಿ ಗತ । ಶೋಕ ವಿಶ್ವಂಭರನ ತಿಳಿವುದು ಎಲ್ಲ ಕಾಲದಲಿ॥ ಚೌಕಶುದ್ಧ ಸುಮಂಡಲದಿ ಭೂ । ಸೂಕರಾಹ್ವಯ ಉಪರಿ ಚೈಲಪ । ಏಕದಂತ ಸನತ್ಕುಮಾರನ ಧೇನಿಪುದು ಬುಧರು ॥ ೨೩ ॥ ಶ್ರೀನಿವಾಸನ ಭೋಗ್ಯವಸ್ತುವ । ಕಾಣಗೊಡದಂದಲಿ ವಿಷ್ವಕ್ಸೇನ ಪರಿಖಾರೂಪನಾಗಿಹನಲ್ಲಿ ಪುರುಷಾಖ್ಯ ॥ ತಾನೆ ಪೂಜಕ ಪೂಜ್ಯನೆನಿಸಿ ನಿ । ಜಾನುಗರ ಸಂತೈಪ ಗುರುಪವ । ಮಾನವಂದಿತ ಸರ್ವಕಾಲಗಳಲ್ಲಿ ಸರ್ವೇಶ ॥ ೨೪॥ ನೂತನ ಸಮೀಚೀನ ಸುರಸೋ । ಪೇತ ಹೃದ್ಯ ಪದಾರ್ಥದೊಳು ವಿಧಿ । ಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ ॥ ಪ್ರೀತಿಪಡಿಸುತ ನಿತ್ಯದಿ ಜಗ । ನ್ನಾಥ ವಿಠಲನ ಕೂಡಿ ತಾ ನಿ । ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ॥೨೫॥ ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ । ಪರಮ ಭಗವದ್ಭಕ್ತರಿದನಾದರದಿ ಕೇಳುವುದು॥

## ನೈವೇದ್ಯ ಸಮರ್ಪಣೆಯ ಸಮಯದಲ್ಲಿ ಚಿಂತಿಸಬೇಕಾದ ಆಹಾರ ಪದಾರ್ಥಗಳಲ್ಲಿರುವ ದೇವತೆಗಳ ಹಾಗೂ ಭಗವಂತನ ರೂಪಗಳು

| ಭಗವದ್ರೂಪ | ದೇವತೆಗಳು | ಆಹಾರ ಪದಾರ್ಥಗಳು |
|---|---|---|
| ೧. ಕೇಶವ | ಚಂದ್ರ | ಅನ್ನ |
| ೨. ನಾರಾಯಣ | ಭಾರತಿ | ಪರಮಾನ್ನ |
| ೩. ಮಾಧವ | ಸೂರ್ಯ | ಭಕ್ಷ್ಯಗಳು |
| ೪. ಗೋವಿಂದ | ಲಕ್ಷ್ಮೀ | ತುಪ್ಪ |
| ೫. ವಿಷ್ಣು | ಸರಸ್ವತಿ | ಹಾಲು |
| ೬. ಮಧುಸೂದನ | ಬ್ರಹ್ಮ | ಮಂಡಿಗೆ |
| ೭. ತ್ರಿವಿಕ್ರಮ | ಮುಖ್ಯಪ್ರಾಣ | ಬೆಣ್ಣೆ |
| ೮. ವಾಮನ | ಚಂದ್ರ | ಮೊಸರು |
| ೯. ಶ್ರೀಧರ | ಗರುಡ | ತೊವ್ವೆ |
| ೧೦. ಹೃಷೀಕೇಶ | ಮಿತ್ರನಾಯಕ ಸೂರ್ಯ | ತೊಪ್ಪಲುಗಳಿಂದ ಮಾಡಿದ ಪಲ್ಯೆ |
| ೧೧. ಪದ್ಮನಾಭ | ಶೇಷದೇವರು | ಕಾಯಿಗಳಿಂದ ಮಾಡಿದ ಪಲ್ಯೆ |
| ೧೨. ದಾಮೋದರ | ಗೌರಿ | ಹುಳಿಪದಾರ್ಥಗಳು, ಚಿತ್ರಾನ್ನಾದಿಗಳು |
| ೧೩. ಸಂಕರ್ಷಣ | ರುದ್ರ | ಹುಳಿ ಇಲ್ಲದ ಪದಾರ್ಥಗಳು |
| ೧೪. ವಾಸುದೇವ | ಇಂದ್ರ | ಸಕ್ಕರೆ ಬೆಲ್ಲ |
| ೧೫. ಪ್ರದ್ಯುಮ್ನ | ಬ್ರಹ್ಮ ಬೃಹಸ್ಪತಿ | ಚಟ್ನಿ ಮುಂತಾದ ವ್ಯಂಜನಗಳು |
| ೧೬. ಅನಿರುದ್ಧ | ಯಮ | ಒಗರು ಪದಾರ್ಥಗಳು |
| ೧೭. ಪುರುಷೋತ್ತಮ | ಮನ್ಮಥ | ಸಾಸಿವೆ, ಇಂಗು, ಏಲಕ್ಕಿ, ಕೇಸರಿ, ಕರ್ಪೂರ, ಜೀರಗಿ ಮುಂತಾದ ಪರಿಮಳ ಪದಾರ್ಥಗಳು |
| ೧೮. ಅಧೋಕ್ಷಜ | ಜಯಂತ, ಬುಧ | ಎಣ್ಣೆ, ತುಪ್ಪಗಳಲ್ಲಿ ಕರೆದ ಪದಾರ್ಥಗಳು |
| ೧೯. ನಾರಸಿಂಹ | ದಕ್ಷ ಪ್ರಜೇಶ್ವರ | ಕುಂಬಳಕಾಯಿ, ಎಳ್ಳು, ಉದ್ದಿನಿಂದ ಮಾಡಿದ ಸಂಡಿಗೆ ಮುಂತಾದವುಗಳು |
| ೨೦. ಅಚ್ಯುತ | ಸ್ವಯಂಭುವ ಮನು | ಉದ್ದಿನ ಬೆಳೆಗಳಿಂದ ಮಾಡಿದ ವಡೆ ಮುಂತಾದವುಗಳು |
| ೨೧. ಜನಾರ್ದನ | ನಿರ್ಋತಿ | ಉದ್ದು |
| ೨೨. ಉಪೇಂದ್ರ | ದಾಸಪ್ರಾಣ | ಹಣ್ಣುಗಳಿಂದ ಮಾಡಿದ ರಸಗಳು |
| ೨೩. ಹರಿ | ಗಂಗಾ | ತಾಂಬೂಲ |
| ೨೪. ಶ್ರೀಕೃಷ್ಣ | ಬುಧ | ಕುಡಿಯುವ ನೀರು |
| ೨೫. ವಿಶ್ವ | ರತಿ | ಪಾನಕ |

**ಸೂಚನೆ :** ಪ್ರತಿಯೊಂದು ನಾಮವನ್ನು ಉಚ್ಚರಿಸುವ ಮೊದಲು ಭಾ.ರ.ಮು. ಎಂದು ಹೇಳಬೇಕು.

## ಮಂಗಳಾರುತಿ ಪದಗಳು

**ರಾಗ : ಭೈರವಿ** **ಝಂಪಿ ತಾಳ**

ಜಯ ಮಂಗಳಂ ನಿತ್ಯ ಶುಭ ಮಂಗಳಂ। ಹತ್ತಾವತಾರ ದೇವಗೆ । ಮಂಗಳಂ ಹತ್ತು ದಿಕ್ಕಿನ ಪೊಡಿಯಗೆ । ಮಂಗಳಂ ಹತ್ತಾವರ್ಣ ವ್ಯಾಪ್ತಿ ಶಕ್ತಗೆ ಮಂಗಳಂ ಹತ್ತರಲಿ ಇಪ್ಪ ಹರಿಗೆ ।।ಪಲ್ಲ।। ನೊಡುವಗೆ ಗಿರಿಯ ಕೆಳಗಾಡುವಗೆ । ತೋಡುವಗೆ ಮಹಾಧ್ವನಿ ಮಾಡುವವಗೆ।। ಬೇಡುವಗೆ ವೈರಿಗಳ ಕಾಡುವಗೆ । ಅಮೃತಾನ್ನ ನೀಡುವವಗೆ ಗೋಪಿಯರ ಕಾಡುವವಗೆ ।। ೧।। ಜಲದೊಳಗೆ ಪೊಳೆವವಗೆ । ಬೆಳೆವವಗೆ ಖಡ್ಗವನು ಶೆಳವವಗೆ । ಪಾತಾಳಕಿಳಿವವಗೆ ಮುಳುಗುವವಗೆ । ನಖವನ್ನು ತೊಳಿವವಗೆ । ಕ್ಷಿತಿಪನ್ನ ತುಳಿವವಗೆ । ತನ್ನ ಕುಲ ಹಳಿವವನಿಗೆ।।೨।। ಚರಿಸುವಗೆ ಪರ್ವತವ । ಧರಿಸುವಗೆ ವ್ರತ ಅಪಹರಿಸುವಗೆ । ತುರಗವನು ಹಾರಿಸುವಗೆ । ಸುರರ ಉದ್ಧರಿಸುವಗೆ । ಧರಿಯೆ ಪತಿಕರಸು ದಯದೃಷ್ಟಿ ಸುರಿಸವವಗೆ।।೩।। ಪಡವವಗೆ ಮಾತೆಯ ಕಡಿವವಗೆ ಕೊಂಡಾಡಿ ಹಿಡುವವಗೆ । ರಥವಂದು ಬಿಡುವವಗೆ । ಕಲಿತಾಪ ಸುಡುವವಗೆ । ಪಾದವಿಲ್ಲದೆ ನಡೆವವಗೆ ಅಮೃತವ ಕೊಡುವವಗೆ ।।೪।। ತಾಹನಿಗೆ ಕಂಭದಿಂದ ಬಾಹನಿಗೆ ಉದಕ ಅಹನಿಗೆ ಕ್ಷತ್ರಿಯರ ದ್ರೋಹನಿಗೆ ಹೋಹನಿಗೆ ಎರಡರಲಿ ಮೋಹನಿಗೆ । ಸುಜನರ ಸ್ನೇಹನಿಗೆ ವಿಜಯವಿಠ್ಠಲ ಹರಿಗೆ ।। ೫ ।।

**ರಾಗ** **ಅಟ್ಟ ತಾಳ**

ಸಾಮಜ ವರದಗೆ । ಮಾಮನೋಹರಗೆ । ಕಾಮನ ಪಿತ ಶಾಮ ವರ್ಣ ಶ್ರೀಹರಿಗೆ ।। ವಾಮ ದೇವನ ಸಖ ಸೋಮವದನ ಹರಿಗೆ । ಕಾಮಿನಿ ಸತ್ಯಭಾಮೆ ಪತಿಗೆ ಹೊಸ । ಹೇಮದಾರುತಿಯ ಬೆಳಗಿರೆ ।।೧।। ಲಕ್ಷ್ಮೀಯ ಅರಸಗೆ ಪಕ್ಷಿವಾಹನಗೆ । ಮೋಕ್ಷದಾಯಕ ಪಾಂಡವ ಪಕ್ಷ ಶ್ರೀಹರಿಗೆ । ವಕ್ಷಸ್ಥಳದಿ ಲಕ್ಷ್ಮೀಯ ಪೊರೆವ । ಕುಕ್ಷಿವಳಗೆ ಜಗವ ರಕ್ಷಿಸುವ ಹರಿಗೆ । ಲಕ್ಷ್ಯದಾರುತಿಯ ಬೆಳಗಿರೆ ।। ೨ ।। ಆಗಮವೇದ್ಯಗೆ ಭೋಗಿ ಶಯನಗೆ । ಬೇಗದಿಂದಲಿ ಭಕ್ತರ ಪೊರೆವಗೆ । ವಾಗೀಶ ವಂದ್ಯ ಶ್ರೀಗುರು ವಿಜಯವಿಠ್ಠಲ ಮಂಗಳ ಮಹಿಮ । ತುಂಗ ಚರಿತ ಹರಿಗೆ ಮಂಗಳಾರುತಿಯ ಬೆಳಗಿರೆ ।। ೩।।

**ದೇವಪೂಜೆಯ ನಂತರ ಲಕ್ಷ್ಮೀ, ತುಳಸೀ, ಗೌರೀ ಗಂಗೆಯರಿಗೆ ತೀರ್ಥವನ್ನು ಕೊಟ್ಟು ಗಂಧ ಪುಷ್ಪಾಕ್ಷತೆಗಳನ್ನು ಏರಿಸಿ ಪೂಜಿಸಬೇಕು. ನಂತರ ಆರುತಿ ಮಾಡಬೇಕು. ಪೂಜೆ ಮಾಡುವಾಗ ಅನ್ನಬೇಕಾದ ಹಾಡುಗಳು.**

### ಲಕ್ಷ್ಮೀಪೂಜೆ

ರಮಾ ಸಮುದ್ರನ ಕುಮಾರಿ ನಿನ್ನ ಸರಿಸಮಾನರಾರಮ್ಮ ।। ಪ।। ಉಮೇಶ ಮೊದಲಾದ ಅಮರರೆಲ್ಲರು । ನಮಿಸಿ ನಿನ್ನ ಪಾದಕಮಲ ಭಜಿಪರು ।।ಅ.ಪ.।। ಅಪಾರ ಮಹಿಮನ ವ್ಯಾಪಾರಗಳ ತಿಳಿದು । ಕಾಪಾಡು ಈ ಜಗವ । ಕೋಪ ರಹಿತಳಾಗಿ ಶ್ರೀಪತಿಯೊಳು ನಮ್ಮ । ತಾಪತ್ರಯವ ಪೇಳಿ ಕಾಪಾಡಬೇಕಮ್ಮ ।। ೧।। ಕರುಣವಾರಿಧಿಯೆಂದು ಶರಣ ಜನರು ನಿನ್ನ ।

ಸ್ಮರಣೆಯ ಮಾಡುವರೆ । ಹರಿಣಾಕ್ಷಿ ಕೇಳಮ್ಮ ಹರುಷದಿಂದಲಿ ಹರಿ । ಚರಣವ ತೋರಿ ಅಘಹರಣವ ಮಾಡಿಸೆ ॥ ೨॥ ವಾಸವೆನುತ ಸಿರಿ ಶೇಷ ವಿಠಲನಾ ವಾಸವಾ ಮಾಡುವಳೆ । ಘಾಸಿಗೊಳಿಸದಲೆ ಈ ಸಮಯದಲ್ಲಿ। ವಾಸುದೇವಗೆ ಪೇಳಿ ಪೋಷಿಸಬೇಕಮ್ಮಾ ॥ ೩॥

## ತುಳಸೀಪೂಜೆ

ಆರುತಿ ಬೆಳಗಿರೆ ನಾರಿ ತುಳಸಮ್ಮಗೆ । ಕೋರಿದಾ ವರಗಳ ಕೊಡುವಾಕೆಗೆ ॥ ಪ॥ ಬಂಟರಾ ಬಾಗಿಲಾ ಮುಂದೆ ತಾನಿರುವಳ ಮಂಟಪಾವನ ಕಟ್ಟಿಸಿಕೊಂಬಳೆ। ಗಂಟು ಗಂಟಿಗೆ ಎಂಟು ಪೆಂಡೆಗಳ ಒಡೆಯುವಳ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೧॥ ದೊಡ್ಡ ಹಂದರದೊಳಗೆ ತಾನಿರುವಳೆ ಬಡ್ಡಿ ಸಾಲವನು ಕಟ್ಟಿಸಿಕೊಂಬಳೆ । ದುಡ್ಡು ದುಡ್ಡಿಗೆ ಭಾರಿ ಬಡ್ಡಿಗಳ ಹೊಡೆಯುವಳೆ ಜಾಣೆ ಲಕ್ಷ್ಮಿಗೂ ನನಗೂ ಸರಿ ಬರುವದೆ ॥ ೨॥ ಅಡವಿಯಾ ಒಳಗೆಲ್ಲಾ ಗಿಡವಾಗಿ ಇರುವಳೆ ಹುಡುಗರಾ ಕೈಲಿ ಚೂಟಿಸಿಕೊಂಬಳೆ। ಒಡೆಯ ಕೃಷ್ಣಯ್ಯಗೆ ವನಮಾಲೆಯಾಗುವಳೆ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೩॥ ಕಾಸಿ ಕರಗಿಸಿ ತೂಗಿಸಿಕೊಂಬಳೆ ಝಾಡಿಸಿ ಪೆಟ್ಟನು ಹಾಕಿಸಿಕೊಂಬಳೆ। ರಾಯರಾಯರಿಗೆಲ್ಲ ಝಗಳವನೆ ಹಚ್ಚುವಳೆ ಜಾಣೆ ಲಕ್ಷ್ಮಿಗೂ ನನಗೂ ಸರಿ ಬರುವದೆ ॥ ೪॥ ಇಬ್ಬರಾ ಝಗಳವಾ ಕೇಳಿ ತಾ ಶ್ರೀಕೃಷ್ಣ ಪರಮ ಸಂತೋಷದಲಿ ನಸುನಕ್ಕನು । ಮುದ್ರೆಯುಂಗುರ ಕೊಟ್ಟು ಮುನಿಸನ್ನು ತೀರಿಸಿದಾ ಉದ್ಧಾರ ಮಾಡು ತುಳಸಮ್ಮ ನೀನು॥ ೫॥

### ಶ್ರೀತುಳಸಿ ಆರುತಿಯ ಹಾಡುಗಳು

೧. ಜಯ ಜಯ ಜಯ ಜನನಿ ತುಳಸಿಯೇ । ಜಯ ಶುಭಾಂಗಿ ಜಯ । ಜಯತು ಸಂಧಳೆ ॥ಪ॥ ಮಾರ ಜನನಿಯೇ ಭೂರಿ ಕರುಣೆಯೆ । ಸೇರಿದೆನು ನಿನ್ನ ಪಾದ ವಾರಿಜಾಕ್ಷಿಯೆ ॥೧॥ ಹರಿಯ ವಲ್ಲಭೇ ಹರಿಕರು ಪ್ರಭೆ । ಹರದೆ ತುಳಸಿ ಹರಿಪ್ರಿಯಳೆ । ಹರವರ ವರದೆ ॥೨॥ ಕೃಷ್ಣ ವಲ್ಲಭೆ ಸೃಷ್ಟಿಜಾತೆಯೆ । ಕಷ್ಟವನ್ನು ಪರಿಹರಿಸೆ ಕೃಷ್ಣವಲ್ಲಭೆ ॥೩॥

೨. ಆರುತಿ ಜಯ ತುಳಸಿ | ಕಾರ್ತಿಕ ದಾಮೋದರನರಸಿ | ಶ್ರೀ ತುಳಸಿ ದಾಮೋದರನರಸಿ ॥ಪ.॥ ನೀರನು ಎರೆದು ನೀರೆಯರ ಮನ್ನಿಸಿ | ಭಾರಿ ಸುಖವ । ಸುರಿಸಿ ಮೆರೆಯುವಿ ದಾಮೋದರನರಸಿ ॥೧॥ ಮನೆಯ ಹಿತ್ತಲದ ಅಂಗಳದೊಳ್‌ನೆಲೆಸಿ | ಸರ್ವಮಾನ್ಯಳೆನಿಸಿ ಮೆರೆಯುವಿ | ದಾಮೋದರನರಸಿ ॥೨॥ ರಾಧಾಮಾಧವ | ವೃಂದನಿವಾಸಿನಿ | ಇಂದಿರೇಶನ। ರಾಣಿ ಎನಿಸುವಿ ದಾಮೋದರನರಸಿ ॥೩॥

## ಗೌರೀಪೂಜೆ

ಭದ್ರಾಣಿ ದೇಹಿ ಮೇ ಗೌರಿ ಗೌರಿ । ಭದ್ರಾಣಿ ದೇಹಿ ಗೌರಿ ರುದ್ರಾಣಿ ಭೂರ್ಯಾಭರಣೆ ॥ಪ.॥ ಗರ್ವಾದಿ ನಿರ್ಮಿತಾನಿ ದುರ್ವಾಸ ಸುಖದಾಯಿನಿ । ಸರ್ವಾಣಿ ಪಾತಕಾನಿ ಶರ್ವಾಣಿ ಭಿಂದಿ ತಾನಿ ॥ ೧॥ ಅಂಭ ಛಜನಾಭ ಸಹಿತೆ ರಂಭ ಛರು ಶಂಭುದಯಿತೆ । ಗಾಂಭೀರ್ಯ ಸುಗುಣ ಸಹಿತೆ ಕುಂಭ ಛದ್ಭವಾದಿ ವಿನುತೆ ॥೨॥ ಇಂದೀವರಾಭನಯನೆ ವಂದಿತಹಯವದನೆ । ಕುಂದಕುಡ್ಮಲರದನೆ ಚಂದ್ರಸಹಸ್ರವದನೆ ॥ ೩॥

## ಮಂಗಳಾರುತಿ ಪದಗಳು

ರಾಗ : ಭೈರವಿ ಝಂಪಿ ತಾಳ

ಜಯ ಮಂಗಳಂ ನಿತ್ಯ ಶುಭ ಮಂಗಳಂ। ಹತ್ತಾವತಾರ ದೇವಗೆ । ಮಂಗಳಂ ಹತ್ತು ದಿಕ್ಕಿನ ಪೊಡಿಯಗೆ । ಮಂಗಳಂ ಹತ್ತಾವರ್ಣ ವ್ಯಾಪ್ತಿ ಶಕ್ತಗೆ ಮಂಗಳಂ ಹತ್ತರಲಿ ಇಪ್ಪ ಹರಿಗೆ ॥ಪಲ್ಲ॥ ನೊಡುವಗೆ ಗಿರಿಯ ಕೆಳಗಾಡುವಗೆ । ತೋಡುವಗೆ ಮಹಾಧ್ವನಿ ಮಾಡುವವಗೆ॥ ಬೇಡುವಗೆ ವೈರಿಗಳ ಕಾಡುವಗೆ । ಅಮೃತಾನ್ನ ನೀಡುವವಗೆ ಗೋಪಿಯರ ಕಾಡುವವಗೆ ॥ ೧॥ ಜಲದೊಳಗೆ ಪೊಳೆವವಗೆ । ಬೆಳೆವವಗೆ ಖಡ್ಗವನು ಶೆಳವವಗೆ । ಪಾತಾಳಕಿಳಿವವಗೆ ಮುಳುಗುವವಗೆ । ನಖವನ್ನು ತೊಳಿವವಗೆ । ಕ್ಷಿತಿಪನ್ನ ತುಳಿವವಗೆ । ತನ್ನ ಕುಲ ಹಳಿವವನಿಗೆ॥೨॥ ಚರಿಸುವಗೆ ಪರ್ವತವ । ಧರಿಸುವಗೆ ವ್ರತ ಅಪಹರಿಸುವಗೆ । ತುರಗವನು ಹಾರಿಸುವಗೆ । ಸುರರ ಉದ್ಧರಿಸುವಗೆ । ಧರಿಯೆ ಪತಿಕರಸು ದಯದೃಷ್ಟಿ ಸುರಿಸವವಗೆ॥೩॥ ಪಡವವಗೆ ಮಾತೆಯ ಕಡಿವವಗೆ ಕೊಂಡಾಡಿ ಹಿಡುವವಗೆ । ರಥವಂದು ಬಿಡುವವಗೆ । ಕಲಿತಾಪ ಸುಡುವವಗೆ । ಪಾದವಿಲ್ಲದೆ ನಡೆವವಗೆ ಅಮೃತವ ಕೊಡುವವಗೆ ॥೪॥ ತಾಹನಿಗೆ ಕಂಭದಿಂದ ಬಾಹನಿಗೆ ಉದಕ ಅಹನಿಗೆ ಕ್ಷತ್ರಿಯರ ದ್ರೋಹನಿಗೆ ಹೋಹನಿಗೆ ಎರಡರಲಿ ಮೋಹನಿಗೆ । ಸುಜನರ ಸ್ನೇಹನಿಗೆ ವಿಜಯವಿಠ್ಠಲ ಹರಿಗೆ ॥ ೫ ॥

ರಾಗ ಅಟ್ಟ ತಾಳ

ಸಾಮಜ ವರದಗೆ । ಮಾಮನೋಹರಗೆ । ಕಾಮನ ಪಿತ ಶಾಮ ವರ್ಣ ಶ್ರೀಹರಿಗೆ ॥ ವಾಮ ದೇವನ ಸಖ ಸೋಮವದನ ಹರಿಗೆ । ಕಾಮಿನಿ ಸತ್ಯಭಾಮೆ ಪತಿಗೆ ಹೊಸ । ಹೇಮದಾರುತಿಯ ಬೆಳಗಿರೆ ॥೧॥ ಲಕ್ಷ್ಮೀಯ ಅರಸಗೆ ಪಕ್ಷಿವಾಹನಗೆ । ಮೋಕ್ಷದಾಯಕ ಪಾಂಡವ ಪಕ್ಷ ಶ್ರೀಹರಿಗೆ । ವಕ್ಷಸ್ಥಳದಿ ಲಕ್ಷ್ಮೀಯ ಪೊರೆವ । ಕುಕ್ಷಿವಳಗೆ ಜಗವ ರಕ್ಷಿಸುವ ಹರಿಗೆ । ಲಕ್ಷ್ಯಾದಾರುತಿಯ ಬೆಳಗಿರೆ ॥ ೨ ॥ ಆಗಮವೇದ್ಯಗೆ ಭೋಗಿ ಶಯನಗೆ । ಬೇಗದಿಂದಲಿ ಭಕ್ತರ ಪೊರೆವಗೆ । ವಾಗೀಶ ವಂದ್ಯ ಶ್ರೀಗುರು ವಿಜಯವಿಠ್ಠಲ ಮಂಗಳ ಮಹಿಮ । ತುಂಗ ಚರಿತ ಹರಿಗೆ ಮಂಗಳಾರುತಿಯ ಬೆಳಗಿರೆ ॥ ೩॥

**ದೇವಪೂಜೆಯ ನಂತರ ಲಕ್ಷ್ಮೀ, ತುಳಸೀ, ಗೌರೀ ಗಂಗೆಯರಿಗೆ ತೀರ್ಥವನ್ನು ಕೊಟ್ಟು ಗಂಧ ಪುಷ್ಪಾಕ್ಷತೆಗಳನ್ನು ಏರಿಸಿ ಪೂಜಿಸಬೇಕು. ನಂತರ ಆರುತಿ ಮಾಡಬೇಕು. ಪೂಜೆ ಮಾಡುವಾಗ ಅನ್ನಬೇಕಾದ ಹಾಡುಗಳು.**

### ಲಕ್ಷ್ಮೀಪೂಜೆ

ರಮಾ ಸಮುದ್ರನ ಕುಮಾರಿ ನಿನ್ನ ಸರಿಸಮಾನರಾರಮ್ಮ ॥ ಪ॥ ಉಮೇಶ ಮೊದಲಾದ ಅಮರರೆಲ್ಲರು । ನಮಿಸಿ ನಿನ್ನ ಪಾದಕಮಲ ಭಜಿಪರು ॥ಅ.ಪ.॥ ಅಪಾರ ಮಹಿಮನ ವ್ಯಾಪಾರಗಳ ತಿಳಿದು । ಕಾಪಾಡು ಈ ಜಗವ । ಕೋಪ ರಹಿತಳಾಗಿ ಶ್ರೀಪತಿಯೊಳು ನಮ್ಮ । ತಾಪತ್ರಯವ ಪೇಳಿ ಕಾಪಾಡಬೇಕಮ್ಮ ॥ ೧॥ ಕರುಣವಾರಿಧಿಯೆಂದು ಶರಣ ಜನರು ನಿನ್ನ ।

ಸ್ಮರಣೆಯ ಮಾಡುವರೆ । ಹರಿಣಾಕ್ಷಿ ಕೇಳಮ್ಮ ಹರುಷದಿಂದಲಿ ಹರಿ । ಚರಣವ ತೋರಿ ಅಘಹರಣವ ಮಾಡಿಸೆ ॥ ೨॥ ವಾಸವೆನುತ ಸಿರಿ ಶೇಷ ವಿಠಲನಾ ವಾಸವಾ ಮಾಡುವಳೆ । ಘಾಸಿಗೊಳಿಸದಲೆ ಈ ಸಮಯದಲ್ಲಿ। ವಾಸುದೇವಗೆ ಪೇಳಿ ಪೋಷಿಸಬೇಕಮ್ಮಾ ॥ ೩॥

## ತುಳಸೀಪೂಜೆ

ಆರುತಿ ಬೆಳಗಿರೆ ನಾರಿ ತುಳಸಮ್ಮಗೆ । ಕೋರಿದಾ ವರಗಳ ಕೊಡುವಾಕೆಗೆ ॥ ಪ॥ ಬಂಟರಾ ಬಾಗಿಲಾ ಮುಂದೆ ತಾನಿರುವಳ ಮಂಟಪಾವನ ಕಟ್ಟಿಸಿಕೊಂಬಳ। ಗಂಟು ಗಂಟಿಗೆ ಎಂಟು ಪೆಂಡೆಗಳ ಒಡೆಯುವಳ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೧॥ ದೊಡ್ಡ ಹಂದರದೊಳಗೆ ತಾನಿರುವಳೆ ಬಡ್ಡಿ ಸಾಲವನು ಕಟ್ಟಿಸಿಕೊಂಬಳೆ । ದುಡ್ಡು ದುಡ್ಡಿಗೆ ಭಾರಿ ಬಡ್ಡಿಗಳ ಹೊಡೆಯುವಳೆ ಜಾಣೆ ಲಕ್ಷ್ಮಿಗೂ ನನಗೂ ಸರಿ ಬರುವದೆ ॥ ೨॥ ಅಡವಿಯಾ ಒಳಗೆಲ್ಲಾ ಗಿಡವಾಗಿ ಇರುವಳೆ ಹುಡುಗರಾ ಕೈಲಿ ಚೂಟಿಸಿಕೊಂಬಳೆ। ಒಡೆಯ ಕೃಷ್ಣಯ್ಯಗೆ ವನಮಾಲೆಯಾಗುವಳೆ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೩॥ ಕಾಸಿ ಕರಗಿಸಿ ತೂಗಿಸಿಕೊಂಬಳೆ ಝಾಡಿಸಿ ಪೆಟ್ಟನು ಹಾಕಿಸಿಕೊಂಬಳೆ। ರಾಯರಾಯರಿಗೆಲ್ಲ ಝಗಳವನೆ ಹಚ್ಚುವಳೆ ಜಾಣೆ ಲಕ್ಷ್ಮಿಗೂ ನನಗೂ ಸರಿ ಬರುವದೆ ॥ ೪॥ ಇಬ್ಬರಾ ಝಗಳವಾ ಕೇಳಿ ತಾ ಶ್ರೀಕೃಷ್ಣ ಪರಮ ಸಂತೋಷದಲಿ ನಸುನಕ್ಕನು । ಮುದ್ರೆಯುಂಗುರ ಕೊಟ್ಟು ಮುನಿಸನ್ನು ತೀರಿಸಿದಾ ಉದ್ಧಾರ ಮಾಡು ತುಳಸಮ್ಮ ನೀನು॥ ೫॥

### ಶ್ರೀತುಳಸಿ ಆರುತಿಯ ಹಾಡುಗಳು

೧. ಜಯ ಜಯ ಜಯ ಜನನಿ ತುಳಸಿಯೇ । ಜಯ ಶುಭಾಂಗಿ ಜಯ । ಜಯತು ಸಂಧಳೆ ॥ಪ॥ ಮಾರ ಜನನಿಯೇ ಭೂರಿ ಕರುಣೆಯೆ । ಸೇರಿದೆನು ನಿನ್ನ ಪಾದ ವಾರಿಜಾಕ್ಷಿಯೆ ॥೧॥ ಹರಿಯ ವಲ್ಲಭೇ ಹರಿಕರು ಪ್ರಭೆ । ಹರದೆ ತುಳಸಿ ಹರಿಪ್ರಿಯಳೆ । ಹರವರ ವರದೆ ॥೨॥ ಕೃಷ್ಣ ವಲ್ಲಭೆ ಸೃಷ್ಟಿಜಾತೆಯೆ । ಕಷ್ಟವನ್ನು ಪರಿಹರಿಸೆ ಕೃಷ್ಣವಲ್ಲಭೆ ॥೩॥

೨. ಆರುತಿ ಜಯ ತುಳಸಿ | ಕಾರ್ತಿಕ ದಾಮೋದರನರಸಿ | ಶ್ರೀ ತುಳಸಿ ದಾಮೋದರನರಸಿ ॥ಪ.॥ ನೀರನು ಎರೆದು ನೀರೆಯರ ಮನ್ನಿಸಿ | ಭಾರಿ ಸುಖವ । ಸುರಿಸಿ ಮೆರೆಯುವಿ ದಾಮೋದರನರಸಿ ॥೧॥ ಮನೆಯ ಹಿತ್ತಲದ ಅಂಗಳದೊಳ್‌ನೆಲೆಸಿ | ಸರ್ವಮಾನ್ಯಳೆನಿಸಿ ಮೆರೆಯುವಿ | ದಾಮೋದರನರಸಿ ॥೨॥ ರಾಧಾಮಾಧವ | ವೃಂದನಿವಾಸಿನಿ | ಇಂದಿರೇಶನ। ರಾಣಿ ಎನಿಸುವಿ ದಾಮೋದರನರಸಿ ॥೩॥

## ಗೌರೀಪೂಜೆ

ಭದ್ರಾಣಿ ದೇಹಿ ಮೇ ಗೌರಿ ಗೌರಿ । ಭದ್ರಾಣಿ ದೇಹಿ ಗೌರಿ ರುದ್ರಾಣಿ ಭೂರ್ಯಾಭರಣೆ ॥ಪ.॥ ಗರ್ವಾದಿ ನಿರ್ಮಿತಾನಿ ದುರ್ವಾಸ ಸುಖದಾಯಿನಿ । ಸರ್ವಾಣಿ ಪಾತಕಾನಿ ಶರ್ವಾಣಿ ಭಿಂದಿ ತಾನಿ ॥ ೧॥ ಅಂಭ ಀಜನಾಭ ಸಹಿತೆ ರಂಭ ಀರು ಶಂಭುದಯಿತೆ । ಗಾಂಭೀರ್ಯ ಸುಗುಣ ಸಹಿತೆ ಕುಂಭ ಀದ್ಭವಾದಿ ವಿನುತೆ ॥೨॥ ಇಂದೀವರಾಭನಯನೆ ವಂದಿತಹಯವದನೆ । ಕುಂದಕುಡ್ಮಲರದನೆ ಚಂದ್ರಸಹಸ್ರವದನೆ ॥ ೩॥

## ಗಂಗಾಪೂಜೆ

ಗಂಗೆ ಭಾಗೀರಥಿ ಮಂಗಳಾಂಗಿ ಅಳಕನಂದಳೇ ನೀ ಮಹಾ ಸುಂದರಾಂಗಿ। ಸಿಂಧುರಾಜನ ರಾಣಿ ಸಿರಿಯು ಸಂಪತ್ತು ಕೊಡು ಕಂಗಳಿಂದಲಿ ನೋಡಿ ಕರುಣಿಸೆನ್ನ ॥ ಪ॥ ಕಾಶಿ ಪಟ್ಟಣದಲ್ಲಿ ವಾಸವಾಗಿ ಸರ । ಸ್ವತಿಯನು ಕೂಡಿ ನೀ ಸರಸವಾಗಿ । ಸೋಸಿಲಿಂದಲಿ ಸೂರ್ಯಪುತ್ರಿ ಯಮುನೆಯ ಕೂಡಿ । ಉಲ್ಹಾಸದಿಂದ್ಹರಿದು ವಾರ್ಣಾಸಿಗ್ಹೋಗಿ ॥ ೧॥ ಹಾಲಿನಂತೆ ಹರಿವ್ಹೊ ಗಂಗೆ ನೀನು। ನೀಲದಂತಿದ್ದ ಯಮುನೆಯನು ಕೂಡಿ ॥ ಲೀಲೆಯಿಂದಲಿ ಸರಸ್ವತಿಯನು ಕೂಡಿ। ಓಲ್ಯಾಡುತ ಬಂದೆ ಒಯ್ಯಾರದಿಂದ ॥ ೨॥ ಭಗೀರಥನ ಹಿಂದೆ ನೀ ಬಂದೆ ಓಡಿ । ಸಗರನ ಸುತರ ಉದ್ಧಾರ ಮಾಡಿ ॥ ಜಗವ ಪಾವನ ಮಾಡೋ ಜಾಹ್ನವಿಯೆ ನೀ ಎನ್ನ । ಮಗುವೆಂದು ಮುಂದಕೆ ಕರೆಯೆ ತಾಯಿ ॥ ೩॥ ಬಿಂದು ಮಾಧವ ವೇಣುಮಾಧವನ್ನ ಆ - । ನಂದ ಭೈರವ ಕಾಳ ಭೈರವನ್ನ ॥ ಚಂದದಿಂದ್ವಿಶ್ವನಾಥನ್ನ ಗುಡಿಮುಂದೆ । ಹೊಂದಿ ಹರಿದ್ಹನುಮಂತ ಘಾಟಿನ್ಹಿಂದೆ ॥ ೪॥ ಧಡಧಡನೆ ಬಂದು ದಡಗಳನು ಕೊರೆದು । ಪೊಡವಿ ಮ್ಯಾಲಿಂಥ ಸಡಗರದಿ ಹರಿದು ॥ ಕಡಲಶಯನನ್ನ ಕಾಲುಂಗುಷ್ಠದ ಮಗಳು । ಕಡಲರಾಣಿಯೆ ಕಯ್ಯ ಪಿಡಿಯೆ ನೀನು ॥ ೫॥ ಮರದ ಬಾಗಿಣ ಕುಂಕುಮರಿಷಿಣವು ಗಂಧ । ಪರಿಪರಿಯಿಂದ ಪೂಜೆಯಗೊಂಬುವಿ ॥ ಸ್ಥಿರವಾದ ಮುತ್ತೈದೆತನ ಜನುಮ ಜನುಮಕ್ಕು । ವರವ ಕೊಟ್ಟು ವೈಕುಂಠವನು ತೋರಿಸೆ ॥ ೬॥ ಮಧ್ಯಾಹ್ನದಲಿ ಮಲಕರ್ಣಿಕೆಯ ಸ್ನಾನ । ಶುದ್ಧವಾಗಿ ಪಂಚಗಂಗೆಯಲ್ಲಿ ॥ ಅದ್ದಿದ ದೇಹ ಪವಿತ್ರವನು ಮಾಡಿ ಭವಸ- । ಮುದ್ರವನು ದಾಟಿಸೆ ಭಾಗೀರಥಿ ॥ ೭॥ ಎಷ್ಟು ಜನ್ಮ ಸುಕೃತ ಒದಗಿತೆಂದು ಗಂಗೆ । ಭೆಟ್ಟಿಯಾಗೊ ಪುಣ್ಯ ಬಂದಿತಿಂದು ॥ ಚಕ್ರತೀರ್ಥದ ಸ್ನಾನ ಸಂಕಲ್ಪದ ಫಲವ । ಕೊಟ್ಟು ರಕ್ಷಿಸು ತಾಯಿ ತರಂಗಿಣಿ ॥ ೮॥ ಸಾಸಿರ ಮುಖದಿ ಶರಧಿಯನು ಕೂಡಿ । ಹೋಗಿ ಬಾ ಊರಿಗೆ ಭಕ್ತಿ ನೀಡಿ ॥ ನೀನು ಭೀಮೇಶ ಕೃಷ್ಣನಲಿ ಹುಟ್ಟಿದ್ದ । ಪಾದವನು ತೋರೆನ್ನ ಪೊರೆಯಬೇಕೆ ॥ ೯॥

### ಹಸ್ತೋದಕ ಕೊಡುವ ಸಮಯಕ್ಕೆ ಅನ್ನಬೇಕಾದ ಹಾಡುಗಳು

## ಗುರುಪರಂಪರಾ ಪೀಳಿಗೆ

ಉದಯ ರಾಗ ಝಂಪೆ ತಾಳ

೧) ಸಂತರನ ಸ್ಮರಿಸಿ ಜನರು । ಸಂತರನ ಸ್ಮರಿಸಿ ಜನ ನಿಂತಲ್ಲಿ ಕುಳಿತಲ್ಲಿ । ಇಂತೆಂತು ಸದ್ಧರ್ಮಚರಿಸುವ ಕಾಲಕ್ಕೆ । ಅಂತರಂಗದಲಿದ್ದು(ಟ್ಟು) ಚಿಂತೆಯನು ಬಿಟ್ಟು ಸಿರಿ । ಕಂತುಪಿತನೊಲಿಮೆಯಿಂದ ॥ಪ॥ ವ್ಯಾಸಶಿಷ್ಯರಾದ ಗುರುಮಧ್ವಮುನಿರಾಯ । ಲೇಸು ಪಂಕಜನಾಭ ನರಹರಿ ಮಾಧವ ಮು । ನೇಶ ಅಕ್ಷೋಭ್ಯ ಜಯರಾಯ ವಿದ್ಯಾಧಿರಾಜ । ಪೋಷಿತ ಕವೀಂದ್ರತೀರ್ಥರಾ ॥ ನ್ಯಾಶಿ ವಾಗೀಶ ಯತಿ ರಾಮಚಂದ್ರ ನಂದ । ಭಾಸುರ ವಿದ್ಯಾನಿಧಿ ರಘುನಾಥ ರಘುವರ್ಯ ಭೂಷಣ ಮತಕೆ ರಘೋತ್ತಮನಿಧಿ ವೇದ । ವ್ಯಾಸ

ವಿದ್ಯಾಧೀಶರೂ ॥ ೧॥ ವೇದನಿಧಿ ಮುನಿ ಸತ್ಯವ್ರತ । ಸತ್ಯನಿಧಿ ರಾಯ । ಬೋಧ ಮೂರುತಿ ಸತ್ಯನಾಥ ಸತ್ಯಾಭಿನವ । ಕ್ರೋಧ ಜಯ ಸತ್ಯಪೂರ್ಣ ಸತ್ಯವಿಜಯ ವಿನೋದ ಸತ್ಯಪ್ರಿಯರೂ॥ ಭೇದಾರ್ಥ ಬಲ್ಲ ವಿಬುಧೇಂದ್ರ ರಘುತನಯ ಸ । ಮ್ಮೋದಜಿತಾಮಿತ್ರತೀರ್ಥ ಮುನಿಪ ಸುರೇಂದ್ರ । ವಾದಿ ಎದೆ ಶೂಲ ವಿಜಯೀಂದ್ರ ಸುಧೀಂದ್ರ ಹ । ಲ್ಲಾದ ರಾಘವೇಂದ್ರರು ॥ ೨॥ ಯೋಗೇಂದ್ರ ಭೂಸುರೇಂದ್ರ ಸುಮತೀಂದ್ರ ಉಪೇಂದ್ರ। ಯೋಗಿ ಶ್ರೀಪಾದರಾಯರ ಪೀಳಿಗೆಯ ಅತಿ । ಸಾಧನವು ವ್ಯಾಸರಾಯರ ಪಾರಂಪರಿಯವ ಲೇ । ಸಾಗಿ ಎಣಿಸಿ ಕೊಂಡಾಡಿ॥ ಆಗಮಾನುಕೂಲ ಮಧ್ವಶಾಸ್ತ್ರವನುಸರಿಸಿ । ವೇಗದಿಂದಲಿ ಮಹಸಂತರಿಗೆ ಶಿರವಾಗಿ ಭವದಿಂದ ಕಡೆ ಬಿದ್ದು ಮುಕ್ತಿಗೆ ಪೋದ । ಭಾಗವತ ಜನರ ನಿತ್ಯ ॥ ೩॥ ಕ್ಷೇತ್ರ ಸರೋವರ ನದಿ ಮಿಗಿಲಾದ ದೇಶದಲಿ । ಪಾತ್ರರಾಗಿದ್ದು ವರ್ಣೋಚಿತ ಧರ್ಮವನು ಗಾತ್ರ ದಂಡಿಸಿ । ಮಾಡಿ ಹರಿಯ ಮೆಚ್ಚಿಸುವ ಪಾ । ರ ತ್ರಯವನೇ ಬಯಸುವ ॥ ಪುತ್ರ ಪೌತ್ರರ ಕೂಡಿ ಜ್ಞಾನದಲಿ ಇಪ್ಪ ಚ । ರಿತ್ರರಾ ಮಹಿಮೆ ಕೊಂಡಾಡಿದವರ ವಿ । ಚಿತ್ರವನು ಪೊಗಳುವಾ ದಾಸದಾಸಿಯರ ಪದ ಸ್ತೋತ್ರ ಮಾಡಿರೋ ಆವಾಗ ॥ ೪॥ ಉದಯ ಕಾಲದಲೆದ್ದು ಸಂತರ ಮಾಲಿಕೆಯನ್ನು । ಮೃದುಪಂಚ ರತ್ನದಲಿ ನಿರ್ಮಿತವಾಗಿದೆ । ಸದಮಲರು ಪೇಳಿ ಸಂತೋಷದಲಿ ಕೇಳಿ । ಕೊರಳೊಳಗೆ । ಪದ ರೂಪದಲ್ಲಿ ಧರಿಸಿ ॥ ಮದ ಮತ್ಸರವು ಪೋಗಿ ವೈರಾಗ್ಯದಲಿ ಸಾರ । ಹೃದಯರ ಬಳಿ ಸೇರಿ ಜ್ಞಾನ ಸಂಪಾದಿಸಿ । ಪದೋಪದಿಗೆ ವಿಜಯವಿಠ್ಠಲನ ನಾಮಾಮೃತವ। ವದನದಿಂದಲಿ ಸವಿದುಂಬ ॥ ೫॥

**ರಾಗ - ಪಾಡಿ** **ಆದಿ ತಾಳ**

೨) ಗುರುವಂಶಕೆ ನಮೋ ಎಂಬೆ । ನಮ್ಮ । ಮರುತ ಮತಾಬ್ಧಿಗೆ ನಮೋ ಎಂಬೆ ॥ ಪ॥ ಶ್ರೀಮದಾನಂದತೀರ್ಥ ಪದ್ಮನಾಭರಿಗೆ । ರಾಮದೇವರ ತಂದ ನರಹರಿಗೆ। ಕಾಮಿತ ಫಲವೀವ ಮಾಧವಾಕ್ಷೋಭ್ಯರಿಗೆ । ಆ ಮಹ ಮಹಿಮ ಜಯತೀರ್ಥ ರಾಯರಿಗೆ ॥ ೧॥ ವಿದ್ಯಾಧಿರಾಜರಿಗೆ ವಿಜಯ ಕವೀಂದ್ರ ಸುಸದ್ಗುಣ ವಾಗೀಶ ರಾಮಚಂದ್ರರಿಗೆ । ವಿದ್ಯಾನಿಧಿ ರಘುನಾಥ ರಘುವರ್ಯತೀರ್ಥರಿಗೆ । ಅದ್ವೈತ ಮತಖಂಡ ರಘೋತ್ತಮ ರಾಯರಿಗೆ ॥ ೨॥ ವೇದವ್ಯಾಸ ವಿದ್ಯಾಧೀಶ ವೇದನಿಧಿ ಮುನಿಗೆ । ಸಾಧುಜನ ಪ್ರಿಯ ಸತ್ಯವ್ರತರಿಗೆ । ಮೇದಿನಿಯಲ್ಲಿ ಮೆರೆದ ಸತ್ಯನಿಧಿತೀರ್ಥರಿಗೆ । ವಾದಿಗಜಕೆ ಸಿಂಹ ಸತ್ಯನಾಥರಿಗೆ ॥ ೩॥ ಯತಿಶ್ರೇಷ್ಠ ಸತ್ಯಾಭಿನವತೀರ್ಥರಿಗೆ। ಸತತ ಸಜ್ಜನಪಾಲ ಸತ್ಯಪೂರ್ಣರಿಗೆ । ಅತಿಶಯವಾನಂದ ಸತ್ಯವಿಜಯರಿಗೆ । ಮತ ಉದ್ಧಾರಕ ಶ್ರೀಸತ್ಯಪ್ರಿಯರಿಗೆ ॥ ೪॥ ಇಂತು ಗುರುಗಳ ಸಂತತಿ ಕೊಂಡಾಡಿ । ಕಿಂತು ಸಂತಾಪವನರುಹಿ ಬಿಟ್ಟು । ಸಂತೋಷ ನಾನಾದೆ ವಿಜಯ ವಿಠ್ಠಲನ್ನ । ಚಿಂತಿಯ ಮಾಡುವೆ ದಾಸರಾ ದಯದಿಂದ ॥೫॥

೩) ಗುರುಗಳನನುದಿನ ನೆನೆಯುವೆ ನಾ । ದುರಿತ ದಟ್ಟುಳಿ ಸಾರಿ ಬಂದೀತಿನ್ನೇನಾ ॥ ಪಲ್ಲ॥ ಪಾರ್ಥರಕ್ಷಕನ ಸೇವಾರ್ಥ ಖಳರ ಕೊಂದು ॥ ಕೀರ್ತಿ ಪಡೆದ ಸುಖತೀರ್ಥರೆಂತೆಂಬಾ ॥೧॥ ನೀ ಪಾಲಿಸೆಂದೆನ । ಲಾ ಪತ್ತು ಬಿಡಿಸುವ। ಮಾಪತಿ ನಿಜ ದೂತ । ಶ್ರೀಪದ್ಮನಾಭಾ ॥ ೨॥ ಕರಿಪತಿ ಬಳಿಯಿಂದ । ಧರಿಜ ಪತಿಯ ತಂದು ॥ ಗುರುಗಳಿಗಿತ್ತಿಹ । ನರಹರಿ ತೀರ್ಥಾ ॥

೩।। ಬಾದರಾಯಣ ದಿವ್ಯ । ಪಾದ ಜಲಜ ಭೃಂಗ । ಭೂದೇವ ವಂದಿತ । ಮಾಧವ ತೀರ್ಥಾ ।। ೪।। ಇಕ್ಷುಚಾಪನ ಮ್ಯಾಳ । ಲಕ್ಷಿಯಿಲ್ಲದೆ ಬಲೂ ।। ಪೇಕ್ಷವ ಮಾಡಿದ । ಅಕ್ಷೋಭ್ಯ ಮುನಿಪ ।। ೫।। ದಯಮಾಡಿರೆಂದು ವಿ । ನಯ್ಯದಿಂದ ಭಜಿಪರ ।। ಬಯಕೀ ಪೂರೈಸುವ । ಜಯತೀರ್ಥರೆಂಬಾ ।।೬।। ಅದ್ವೈತ ಗಜಸಿಂಹ । ಮಧ್ವಮತೋದ್ಭವ। ಸದ್ವೈಷ್ಣವಪ್ರಿಯ। ವಿದ್ಯಾಧಿರಾಜ ।। ೭।। ಸಂದೇಹವಿಲ್ಲದೆ । ವಂದಿಪ ಜನರಾಸೆ। ತಂದುಕೊಡುವ ದಯ । ಸಿಂಧು ಕವೀಂದ್ರಾ ।। ೮।। ರಾಗಾದಿ ವರ್ಜಿತ ಭಾಗವತರ ಪಾಲ। ಯೋಗಿಶಿರೋಮಣಿ ವಾಗೀಶ ಮುನಿಪಾ ।। ೯।। ಸಾರಿದ ಭಕತರ । ಘೋರಿಪ ಅಘಗಳ ।। ದೂರ ಓಡಿಸುತಿಪ್ಪ ಶ್ರೀರಾಮಚಂದ್ರಾ ।। ೧೦।। ಕುಭವದೊಳಿರುವಾರ । ಸೊಬಗಿನಿಂದಲಿ ನೋಡಿ ।। ಅಭಯವ ಕೊಡುತಿಪ್ಪ । ವಿಬುಧೇಂದ್ರತೀರ್ಥಾ ।। ೧೧।। ಭ್ರಾಮಕ ಜನ ಶಿಕ್ಷ । ಧೀಮಂತ ಜನ ಪಕ್ಷ ।। ಹೇಮ ವರ್ಣಾಂಗ ಜಿ । ತಾಮಿತ್ರ ಮುನಿಪ ।। ೧೨।। ಬಗೆ ಬಗೆ ಭಜಿಸಲು । ಇಗಡ ಜನರನೊಲ್ಲ ।। ಒಗಿವನು ಸುಜನಾರ । ರಘುನಂದನಾರ್ಯ ।। ೧೩।। ಪೊಂದಿದವರ ನೋಯ । ದಂದದಿ ಸಲಹುವ ।। ಎಂದೆಂದು ಬಿಡದೆ ಶ್ರೀಸು । ರೇಂದ್ರಾಖ್ಯಮುನಿಪ ।। ೧೪।। ನಿಜ ಭಕ್ತಿಯಲಿ ಪಾದ । ಭಜಿಸೂವ ಅಗಣಿತ । ಸುಜನರ ಸಲಹುವ । ವಿಜಯೀಂದ್ರ ಮುನಿಪ ।। ೧೫।। ವೀಂದ್ರ ವಾಹನ ಯಾದವೇಂದ್ರಾಂಘ್ರಿ ಭಜಿಸುವ।। ಸಾಂದ್ರ ಭಕ್ತಿಯಲಿ ಸು । ಧೀಂದ್ರಾಖ್ಯ ಮುನಿಪಾ ।। ೧೬।। ಧಾರುಣಿಯೊಳಗತಿ । ಚಾರುವೃಂದಾವನ । ದೀ ರಾಜಿಸುತಿಪ್ಪ । ಶ್ರೀರಾಘವೇಂದ್ರಾ ।। ೧೭।। ಶ್ಲಾಘಿತ ಗುಣನಿಧಿ । ಮಾಗಧರಿಪುದಾಸ ।। ರಾಘವೇಂದ್ರರ ಪುತ್ರ। ಯೋಗೀಂದ್ರತೀರ್ಥಾ ।। ೧೮।। ವೈರಾಗ್ಯ ಗುಣದಿಂದ । ಮಾರಾರಿಯಂದದೀ ।। ತೋರುವರನುದೀನ । ಸೂರೀಂದ್ರತೀರ್ಥ ।। ೧೯।। ಕುಮತವೆಂಬಗಣಿತ । ತಿಮಿರ ಓಡಿಸುವಲ್ಲಿ।। ಕಮಲಾಪ್ತನಂತಿಹ । ಸುಮತೀಂದ್ರತೀರ್ಥ ।।೨೦।। ಸಲ್ಲಾದ ಸುಖಗಳ । ನೆಲ್ಲಾ ಜರಿದು ಶ್ರೀ ।। ನಲ್ಲಾನ ಭಜಿಸಾಲು । ಬಲ್ಲ ಉಪೇಂದ್ರಾ ।। ೨೧।। ಮೋದಮುನಿ ಮತ ಮ। ಹೋದಧಿ ಚಂದ್ರ ವಿ ।। ದ್ಯಾದಿ ದಾನಾಸಕ್ತ । ವಾದೀಂದ್ರ ತೀರ್ಥಾ ।। ೨೨।। ಬಿಸಜನಾಭನ ದೂತ। ವಸುಧಿಯೊಳಗೆ ಖ್ಯಾತ ।। ಕಿಸಲಯೋಪಮ ಪಾದ । ವಸುಧೇಂದ್ರತೀರ್ಥಾ ।। ೨೩।। ಪರಮ ತೋರುಗ ವೀಪ । ಕರುಣೆ ವಿಗತ ಕೋಪ ।। ವರವೀವ ಸುಕಲಾಪ । ವರದೇಂದ್ರ ಭೂಪಾ ।। ೨೪।। ಸುವಿವೇಕಿಗಳಿಗಿಷ್ಟ। ತವಕದಿಂದಲಿ ಈವ ।। ಕವಿಭಿರೀಡಿತ ಪಾದ । ಭುವನೇಂದ್ರತೀರ್ಥಾ ।।೨೫।। ಶಬರಿ ವಲ್ಲಭನಂಘ್ರಿ । ಅಬುಜಾಳಿ ಸೂರ್ಯ ಸ- । ನ್ನಿಭ ವಾದಿ ಗಜಸಿಂಹ । ಸುಬೋಧೇಂದ್ರತೀರ್ಥಾ।।೨೬।। ಪ್ರಾಣೇಶ ವಿಠ್ಠಲನ । ಕಾಣಬೇಕಾದರೆ ।। ಈ ನಮ್ಮ ಗುರುಗಳ। ಧ್ಯಾನದೊಳಿಹದೊ ।।೨೭।।

## ಹಸ್ತೋದಕ ಸುಳಾದಿ

ಇಚ್ಛಾರಾಗ ತಾಳ - ಧ್ರುವ

೪) ಹರಿಯು ಉಂಡನ್ನ ನಮ್ಮ ಗುರುರಾಘವೇಂದ್ರರಿಗೆ । ಪರಮಭಕುತಿಯಿಂದ ಅರುಪಿಸೊ ಬಗೆಯನು । ಅರಿತು ನಿತ್ಯಾದಲ್ಲಿ ಪರಮಭಕುತರು ನೀಡೆ । ಪರಮಾದರಾದಲ್ಲಿ

ಗುರು ಕೈಯ್ಯ ಕೊಂಬುವನು ॥ ವರಯತಿಗನ್ನೋದಕ ಗಿರಿ ಸಾಗರ ಸಮವು ।ಮರಳಿ ನೀಡೋದು ಜಲ ನಿರುತದಲ್ಲಿ। ವರಬ್ರಹ್ಮಚಾರಿಗಿಡೆ ಸರಿಯೆನಿಸುವೋದು ಫಲ । ವರಗೃಹಸ್ಥನಿಗಿತ್ತನ್ನ ಎರಡು ಎನಿಸುವೋದು । ವರವನಸ್ಥನಿಗೀಡೆ ವರಶತವೆನಿಸುವೋದು । ಪರಮಹಂಸರಿಗಿಡೆ ವರಅನಂತವಾಗುವದಯ್ಯ । ಅರಿತು ಈ ಪರಿಯಿಂದ ನಿರುತ ನೀಡುವೋದಯ್ಯ । ಗುರುಉಂಡ ಮನೆಯಲ್ಲಿ ಹರಿತಾನುಂಬುವೋನು । ಹರಿ ಉಂಡ ಸ್ಥಳದಲ್ಲಿ ವರಬ್ರಹ್ಮಾಂಡ ಉಂಬೋದು। ವರಶಾಸ್ತ್ರ ಸಿದ್ಧವಿದು ಗುರುವಂತರ್ಯಾಮಿ ನಮ್ಮ । ಗುರುಜಗನ್ನಾಥ ವಿಠಲ ಪರಮ ಹರುಷ ಬಡುವೋನು ॥ ೧॥ ಯತಿಹಸ್ತೇ ಜಲಂ ದದ್ಯಾತ್ಭೈಕ್ಷ್ಯಂ ದದ್ಯಾತ್ ಪುನರ್ಜಲಂ । ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್॥೧॥ ವಟೌ ದತ್ತಂ ಸಮಂ ತತ್ಸ್ಯಾತ್ ಗೃಹಸ್ಥೇ ದ್ವಿಗುಣಂ ಭವೇತ್ । ವಾನಪ್ರಸ್ಥೇ ಶತಗುಣಂ ಯತೌ ದತ್ತಮನಂತಕಮ್॥ ಯತಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಂ । ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ರಯಮ್ ॥

### ತಾಳ - ಅಟ್ಟ

ಅನ್ನ ಸಮಗ್ರದಲ್ಲಿ ಇಂದು ಕೇಶವ ಎನ್ನಿ । ಮುನ್ನೆ ಭಾರತಿ ಪರಮಾನ್ನ ನಾರಾಯಣ। ಇನ್ನು ಭಕ್ಷ್ಯಕೆ ಸೂರ್ಯ ರನ್ನ ಮಾಧವ ಘೃತಕೆ । ಚನ್ನೆಲಕುಮಿ ಗೋವಿಂದನು ಎನ್ನಿ । ಮುನ್ನ ಕ್ಷೀರಕ್ಕೆ ವಾಣೀ ಅನ್ನಿ ವಿಷ್ಣುದೇವ । ಘನ್ನಮಂಡಿಗ್ಗೆ ಬ್ರಹ್ಮ ಇನ್ನು ಮಧುಘಾತಿ। ಬೆಣ್ಣೆಯಲ್ಲಿ ವಾಯು ಚೆನ್ನ ತ್ರಿವಿಕ್ರಮ । ಮುನ್ನ ದಧೀಯಲ್ಲಿ ಸೋಮ ವರುಣ ವಾಮ - । ನನ್ನ ತಿಳಿ ಸೂಪ ಚೆನ್ನವೀಪ ಶ್ರೀಧರ । ಮುನ್ನೆ ಶಾಖಾಪತ್ರ ಸ್ವನ್ನಗದಿರ ಮಿತ್ರ । ಚೆನ್ನಹೃಷೀಕೇಶ ಇನ್ನು ಫಲಾದಲಿ। ಘನ್ನ ಶೇಷಾನಲ್ಲಿ ರನ್ನ ಪದುಮನಾಭ । ಮುನ್ನೆ ಆಮ್ಲಾದಲ್ಲಿ ಸ್ವನ್ನಗೌರೀ ಅಲ್ಲಿ। ಅನ್ನು ದಾಮೋದರ ಅನ್ನಾಮ್ಲ ಪತಿ ರುದ್ರ । ಚೆನ್ನ ಜಯಾಪತಿ ಮನ್ನೆ ಶರ್ಕರ ಶತ-। ಮನ್ಯು ವಾಸುದೇವ ಘನ್ನ ಮಹಿಮ ಗುರು ಜ - । ಗ ನ್ನಾಥವಿಠಲ ಪಾವನ್ನ ಪದಯುಗ । ಮನ್ನದೊಳಗೆ ನೆನಿಸುತಿರು॥ ೨ ॥

### ತಾಳ - ತ್ರಿವಿಡ

ಪರಿಪರಿ ಉಪಸ್ಕಾರ ಪರಮೇಷ್ಠಿ ಪ್ರದ್ಯುಮ್ನ । ಅರಿವೋದು ಕಟು ಯಮ ವರಅನಿರುದ್ಧನ್ನ । ವರ ಇಂಗು ಸಾಸಿವಿ ಏಲ ಮರೀಚಿ । ಜೀರಿಗಿಯಲ್ಲಿ ಕರ್ಪೂರ ಚಂದನ ಕೇ - । ಶರ ಬಗೆಬಗೆವಿಧ ಪರಿಮಳ ದ್ರವ್ಯಕ್ಕೆ । ಸ್ಮರನು ಪುರುಷೋತ್ತಮ ದೇವನಿಪ್ಪ। ವರರಸ ಇತ್ಯಾದಿ ಘೃತ ತೈಲ ಪಕ್ವದಿ । ಇರುತಿಹ ಜಯಂತನಧೋಕ್ಷಜ ಮೂರುತಿ । ಸ್ಮರಿಸು ಕೂಷ್ಮಾಂಡ -ತಿಲ -ಮಾಷ- ಸಂಡಿಗೆಯಲಿ । ವರದಕ್ಷನರಹರಿದೇವನ ನೆನಿಸು । ಇರುತಿಪ್ಪ ಮನು ಮಾಷಭಕ್ಷ ಅ - । ಧ್ವರ ಕಾರ್ಯಕಚ್ಯುತ ಮೂರುತಿಯೋ । ಸುರುಚಿ ಲವಣದಲ್ಲಿ ನಿರಋುತಿ ಜನಾರ್ದನ । ಇರುತಿಹ ಶಾಖ ಫಲರಸಕೆ ಪ್ರಾಣೋಪೇಂದ್ರ । ಪರಮಪುರುಷದೇವನಿಹನೆಂದು ತಿಳಿವೋದು । ವರತಾಂಬೂಲ ಗಂಗಾ ಹರಿನಾಮಾನಿರುವೋನು।

ವರಸ್ವಾದೋದಕದಲ್ಲಿ ಇರುತಿಪ್ಪ ಬುಧನಲ್ಲಿ। ಇರುತಿಹ ಕೃಷ್ಣದೇವ ಗುರುಜಗನ್ನಾಥ ವಿಠಲ-। ನರಿತು ನೀಡಲು ನಮ್ಮ ಗುರು ಕೈಯ್ಯ ಕೊಂಬೋನು।

ತಾಳ - ಅಟ್ಟ

ಒಂದೊಂದು ಕವಳ ಗೋವಿಂದನ್ನ ಸ್ಮರಿಸುತ್ತ। ಇಂದುನಿಭಾ ಭಕ್ಷ್ಯಕವಳಕ್ಕೆ ಅಚ್ಯುತ। ನೆಂದು ಶಾಖಕವಳ ಧನ್ವಂತ್ರಿ ಸ್ಮರಿಸುತ್ತ। ಮುಂದೆ ಪರಮಾನ್ನ ಒಂದೊಂದು ಕವಳಕ್ಕೆ । ಅಂದು ವಿಷ್ಣು ಪಾಂಡುರಂಗನ್ನ ಸ್ಮರಿಸುತ್ತ । ಕುಂದಿಲ್ಲದಾ ಬೆಣ್ಣೆ ಉಂಬುವೊ ಕಾಲದಲ್ಲಿ। ಸುಂದರಮೂರುತಿ ತಾಂಡವ ಕೃಷ್ಣನು । ಛಂದ ದಧ್ಯನ್ನಕವಳಕ್ಕೆ ಶ್ರೀನಿವಾಸಾ-। ನೆಂದು ಸುತೈಲಘೃತಪಕ್ವಕೆ ವೇಂಕಟ-। ನೆಂದು ಕದಲಿ ದ್ರಾಕ್ಷಿ ಖರ್ಜೂರ ದಾಡಿಮ। ಛಂದನಾರೀಕೇಳ ಚೂತ ಧಾತ್ರಿ ಜಂಬೂ । ಕಂದಮೂಲಫಲ ಭಕ್ಷಣಕಾಲಕ್ಕೆ। ನಂದನಂದನಬಾಲಕೃಷ್ಣನ ಸ್ಮರಿಸುತ್ತ-। ಲ್ಲಿಂದ ಜಲಪಾನದಲ್ಲಿ ವಿಷ್ಣುದೇವ । ನಿಂದ್ರಾದೆ ವರತಾಂಬೂಲ ಕವಳದಲ್ಲಿ । ಸುಂದರ ಪ್ರದ್ಯುಮ್ನದೇವನ ಸ್ಮರಿಸುತ್ತ -। ಲ್ಲಿಂದ ಆಪೋಶನದ್ವಯದಲ್ಲಿ ವಾಯುಸ್ಥ । ಇಂದಿರಾರಮಣ ಮುಕುಂದನ ಧೇನಿಸಿ । ನಂದಾದಿ ಈರೀತಿ ಚಿಂತಿಸಿ ನೀಡಲು । ಸುಂದರ ಗುರುರಾಘವೇಂದ್ರಾಂತರ್ಗತ ನಮ್ಮ । ಇಂದಿರಾಪತಿ ಗುರುಜಗನ್ನಾಥವಿಠಲ ತಾ । ನಂದಾದಿ ಕೈಕೊಂಡು ಮನ್ನಿಸಿ ಪೊರೆವೋನು ॥ ೪ ॥

ತಾಳ - ಆದಿ

ಅರಿತು ಈ ರೀತಿಂದ ನಿರುತ ಹಸ್ತೋದಕ । ಗುರುಗಳಿಗರ್ಪಿಸೆ ತ್ವರಿತದಿ ಕೈಗೊಂಡು। ಪರಮಸುಖವಿತ್ತು ಪರಿಪಾಲಿಪರಿಹ -। ಪರದಲ್ಲಿ ಇವರಿಗೆ ಬರುವ ದುರಿತ । ತರಿದು ಪೊರೆವರು ಇಲ್ಲವೋ ಇವರನ್ನು ಬಿಟ್ಟರೆ । ಹರಿಯು ಅಲ್ಲವೆ ಮತ್ತನ್ಯರು ಆರೈ । ಹರಿ ತಾ ಮುನಿಯೆ ಗುರುಗಳು ಕಾಯುವರು । ಗುರುಗಳು ಮುನಿಯೇ ಹರಿ ತಾ ಕಾಯನು। ವರಶಾಸ್ತ್ರ ಪುರಾಣವು ಪೇಳೋದು । ಗುರುವೆ ತಾಯಿ ತಂದೆ ಗುರುವೆ ಮಮ ದೈವ । ಗುರುವೆ ಪರೀವಾರ ಗುರುವೆ ಗತಿ ನಿತ್ಯ । ಗುರುವೆ ಪಾಲಿಸೆಂದು ಗುರುಗಳ ಭಜಿಸೆ । ಗುರುವು ದೊರೆತರೆ ಹರಿ ತಾ ದೊರೆವನು। ಗುರುವು ಮರೆತರೆ ಹರಿ ತಾ ಮರೆವನು । ಗುರುಗಳ ಪಾದಶಿರದ ಪರಿಯಂತ ಸ್ಮರಿಸಲು ಪಾಪ -। ಪರಿಹಾರವಾಗೋದು ಗುರುವಂತರ್ಗತ ನಮ್ಮ । ಗುರುಜಗನ್ನಾಥವಿಠಲ ಪರಮ ಹರುಷ ಬಡುವೋನು ।

॥ಜತೆ ॥ ಚಿಂತಿಸಿ ಪದಾರ್ಥ ಇಂತು ನೀಡಲು ಗುರು -। ವಂತರ್ಗತ ಗುರುಜಗನ್ನಾಥವಿಠಲ ಕೊಂಬ ॥

೫) ದೃಷ್ಟಿ ನಿನ್ನ ಪಾದದಲ್ಲಿ ನೆಡುವ ಹಾಗೆ ಧರೆಯ । ದುಷ್ಟಜನರ ಸಂಗಗಳನು ಬಿಡುವ ಹಾಗೆ ॥ ಪ॥ ಕೆಟ್ಟ ಮಾತ ಕಿವಿಯಿಂದ ಕೇಳದ ಹಾಗೆ - ಮನವ । ಕಟ್ಟು ಸದಾ ನಿನ್ನ ಧ್ಯಾನ ಬಿಡದ ಹಾಗೆ ॥ ಅ.ಪ.॥ ಧೃಷ್ಟನಾಗಿ ಕೈಯನೆತ್ತಿ ಕೊಡುವ ಹಾಗೆ ಶ್ರೀ । ಕೃಷ್ಣ ನಿನ್ನ ಪೂಜೆಯನ್ನು ಮಾಡುವ ಹಾಗೆ ॥ ಭ್ರಷ್ಟನಾಗಿ ನಾಲ್ವರೊಳು ತಿರುಗದ ಹಾಗೆ ಬಲು । ಶಿಷ್ಟ ಜನರ ಸೇವೆಯನು

ಮಾಡುವ ಹಾಗೆ ॥ ೧॥ ಪುಟ್ಟಿಸಿದ ತಾಯಿ - ತಂದೆಯಲ್ಲವೆ ನೀನು ಒಂದು । ಹೊಟ್ಟೆಗಾಗಿ ದೈನ್ಯಪಡಬೇಕೇ ನಾನು । ಪಟ್ಟೆ ಪಟ್ಟಾವಳಿ ಬೇಡಲಿಲ್ಲ ನಾನು ಎನ್ನ । ಗುಟ್ಟು ಅಭಿಮಾನಿಗಳ ಕಾಯೋ ನೀನು ॥೨॥ ನಟ್ಟನಡುನೀರೊಳೀಸಲಾರೆ ನಾನು ಎತ್ತಿ । ಕಟ್ಟೆಯ ಸೇರಿಸಬೇಕಯ್ಯ ನೀನು ॥ ಬೆಟ್ಟದಷ್ಟು ಪಾಪ ಹೊತ್ತಿರುವೆ ನಾನು ಅದನು । ಸುಟ್ಟುಬಿಡು ಪುರಂದರ ವಿಠ್ಠಲ ನೀನು ॥ ೩॥

೬) ಮಂಗಳಂ ಜಯ ಮಂಗಳಂ ॥ಪ॥ ವಾತಸುತ ಹನುಮನ ಒಡೆಯಗೆ ಮಂಗಳ । ದಾತ ರಘುಪತಿಗೆ ಮಂಗಳ । ಸೇತುವೆಗಟ್ಟಿದ ರಾಮಗೆ ಮಂಗಳ । ಸೀತಾ ರಮಣಗೆ ಶುಭ ಮಂಗಳ ॥ ೧॥ ಬಿಲ್ಲುಹಿಡಿದ ಬಲು ಬಿಂಕದ ದೈತ್ಯನ । ಹಲ್ಲು ಮುರಿದವಗೆ ಮಂಗಳ ॥ ಕಲ್ಲಾದವಳ ಉದ್ಧಾರ ಮಾಡಿದ । ಬಲ್ಲಿದ ದಾಶರಥಿಗೆ ಮಂಗಳ ॥ ೨॥ ಹರಧನು ಮುರಿದ ವಿನೋದಿಗೆ ಮಂಗಳ । ವರದ ತಿಮ್ಮಪ್ಪನಿಗೆ ಮಂಗಳ ॥ ಪುರಂದರ ವಿಠ್ಠಲರಾಯಗೆ ಮಂಗಳ। ಸರವೋತ್ತಮನಿಗೆ ಶುಭ ಮಂಗಳ ॥ ೩॥

### ಆಹ್ನೀಕ ೯ : ತೀರ್ಥಪ್ರಾಶನ, ಭೋಜನ, ನಾಮಸ್ಮರಣೆ

ದೇವಪೂಜೆ, ನೈವೇದ್ಯ, ಹಸ್ತೋದಕ ಸಮರ್ಪಣೆಗಳಾದ ಮೇಲೆ ಬಂದ ಅತಿಥಿ ಬ್ರಾಹ್ಮಣರಿಗೆ ತೀರ್ಥವನ್ನು ಕೊಟ್ಟ ನಂತರ ಯಜಮಾನರು ತೀರ್ಥವನ್ನು ತೆಗೆದುಕೊಂಡ ಮೇಲೆ ಅವರಿಂದ ಅವರ ಪತ್ನಿ ಹಾಗೂ ಚಿಕ್ಕವರು ತೀರ್ಥ ಪಾದೋಧಕಗಳನ್ನು ಸ್ವೀಕರಿಸಬೇಕು. ಮೂರು ಸಲ ತೀರ್ಥವನ್ನು ಕೊಡುವಾಗ/ತೆಗೆದುಕೊಳ್ಳುವಾಗ ಹೇಳುವ ಮಂತ್ರ:

**ಪ್ರಥಮಂ ಕಾಯಶುಧ್ಯರ್ಥಂ । ದ್ವಿತೀಯಂ ಧರ್ಮಸಾಧನಮ್ ।**
**ತೃತೀಯಂ ಮೋಕ್ಷದಂ ಪ್ರೋಕ್ತಂ । ಏವಂ ತೀರ್ಥಂ ತ್ರಿಧಾ ಪಿಬೇತ್ ॥**

ಅತಿಥಿ ಬ್ರಾಹ್ಮಣರ ಹಾಗೂ ಯಜಮಾನರ ಭೋಜನವಾದ ಮೇಲೆ ಮನೆಯ ಹೆಂಗಸರು ಊಟಕ್ಕೆ ಕುಳಿತುಕೊಳ್ಳಬೇಕು.

**ಭೋಜನಾನಂತರ ಹೇಳುವ ಮಂತ್ರ :**

**ಭೋಜನಾನಂತರಂ ವಿಷ್ಣೋರರ್ಪಿತಂ ತುಳಸೀದಳಂ ।**
**ಭಕ್ಷಣಾತ್ಫಲಮಾಪ್ನೋತಿ ಚಾಂದ್ರಾಯಣಶತಾಧಿಕಂ ।**
**ಭುಕ್ತಪೀತವಿಶುದ್ಧ್ಯರ್ಥಂ ಹರೇಃ ಪಾದೋದಕಂ ಪಿಬೇತ್ ॥**

ಎಂದು ಅನ್ನುತ್ತಾ ತೀರ್ಥವನ್ನು ತೆಗೆದುಕೊಂಡು ತುಳಸೀದಳವನ್ನು ಬಾಯಿಯಲ್ಲಿ ಹಾಕಿಕೊಳ್ಳಬೇಕು. ನಂತರ ನಾಮತ್ರಯ ಮಂತ್ರವಾದ "**ಅಚ್ಯುತಾನಂತ ಗೋವಿಂದ**" ಎಂಬ ಮಂತ್ರವನ್ನು ಯಥಾಶಕ್ತಿ ಯಥಾವಕಾಶ ಜಪಿಸಬೇಕು.

**ನಾಮತ್ರಯಮಂತ್ರ ಜಪವಿಧಿ :**

"ಅಸ್ಯ ಶ್ರೀನಾಮತ್ರಯರೂಪಮಂತ್ರಸ್ಯ ಕೌಶಿಕಋಷಿಃ ನಾಮತ್ರಯವಾಚ್ಯ ಪರಮಾತ್ಮಾ ದೇವತಾ ನಾಮತ್ರಯಮಂತ್ರಜಪೇ ವಿನಿಯೋಗಃ -

**ಧ್ಯಾನಂ :-** ಶಂಖಚಕ್ರಧರಂ ದೇವಂ ಚತುರ್ಬಾಹುಂ ಕಿರೀಟಿನಂ । ಸರ್ವಾಯುಧೈಕರೂಪಂ ತಂ ಗರುಡೋಪರಿ ಸಂಸ್ಥಿತಂ ॥ ಸನಕಾದಿ ಮುನೀಂದ್ರೈಶ್ಚ ಸರ್ವದೇವೈ-ರುಪಾಸಿತಂ। ಪ್ರಾತರ್ದಶಸಹಸ್ರಾಂಶು ಮಂಡಲೋಪಮ ಕುಂಡಲಂ ॥ ಸರ್ವಲೋಕಸ್ಯ ರಕ್ಷಾರ್ಥಂ ಅನಂತಂ ನಿತ್ಯಮೇವ ಹಿ । ಅಭಯಂ ವರದಂ ದೇವಂ ಪ್ರಯಚ್ಛಂತಂ ಮುದಾನ್ವಿತಂ ॥ ದೇವಂ ಧ್ಯಾತ್ವಾ ಜಪೇನ್ಮಂತ್ರಂ ನಾಮತ್ರಯಮಿದಂ ಶುಭಂ ॥

ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಪರಮಾತ್ಮ ಪ್ರೇರಣಯಾ ಶ್ರೀಪರಮಾತ್ಮ ಪ್ರೀತ್ಯರ್ಥಂ ಯಥಾಶಕ್ತಿ ನಾಮತ್ರಯ ರೂಪ ಮಂತ್ರಜಪಂ ತರ್ಪಣಂ ಚ ಕರಿಷ್ಯೇ ॥ **"ಅಚ್ಯುತಾನಂತ ಗೋವಿಂದ"** ಎಂದು ೧೦ ಸಲವಾದರೂ ಜಪಿಸಬೇಕು.

**ನಾಮತ್ರಯ ಮಂತ್ರಜಪ : -** ಮತಂಗ ಋಷಿಗಳು ಉಪದೇಶ ಮಾಡಿದ ಈ ಮಂತ್ರವನ್ನು ಶಬರಿಯು ನಿತ್ಯ ೩೦೦೦ ಸಲ ಜಪಿಸಿ ಶ್ರೀರಾಮಚಂದ್ರನನ್ನು ಪ್ರತ್ಯಕ್ಷ ಕಂಡಳೆಂದು ಪ್ರಸಿದ್ಧಿಯಿದೆ. ಈ ಮಂತ್ರ ಜಪದಿಂದ ಆಧಿಭೌತಿಕ, ಆಧ್ಯಾತ್ಮಿಕ ಹಾಗೂ ಆಧಿದೈವಿಕ ತಾಪತ್ರಯಗಳ ನಿವಾರಣೆಯಾಗುವದು. ಭ ೀಜನಕಾಲದಲ್ಲಿ ಘಟಿಸಿದ ಜ್ಞಾತಾಜ್ಞಾತ ಪಾಪಗಳ ನಿವಾರಣೆಯಾಗುವದು.

**ಆಹ್ನೀಕ ೧೦ :**

ಭೋಜನಾನಂತರ ಮಧ್ಯಾಹ್ನ ಸಮಯದಲ್ಲಿ ಕನ್ನಡದ ಹರಿಕಥಾಮೃತಸಾರ, ದಾಸರ ಪದಗಳು, ಸುಳಾದಿ, ಕನ್ನಡ ಭಾಗವತ, ಭಾರತ ಮೊದಲಾದ ಗ್ರಂಥಗಳ ಪಠಣ ಮತ್ತು ಪುರಾಣಶ್ರವಣ ಮಾಡಬೇಕು.

**ಆಹ್ನೀಕ ೧೧ : ಸಾಯಂಕಾಲ ಸೇವಾ, ಶ್ರೇಯಃ ಪ್ರಾರ್ಥನೆ**

ಪ್ರದೋಷಕಾಲಕ್ಕೆ ಶ್ರೀರುದ್ರದೇವರನ್ನು ಹಾಗೂ ಶ್ರೀ ತುಳಸಿಯನ್ನು ಸ್ಮರಿಸಬೇಕು. ತುಳಸಿಗೆ ಕುಂಕುಮ ಹಚ್ಚಿ ಮನೆಯಲ್ಲಿ ಹಿರಿಯರೆಲ್ಲರಿಗೂ ಹಾಗೂ ಪತಿಗೂ ನಮಸ್ಕರಿಸಬೇಕು. ದೀಪ ಮಂತ್ರವನ್ನು ಪಠಿಸುತ್ತಾ ದೇವರ ಮುಂದೆ ತುಳಸಿಯ ಮುಂದೆ ಮತ್ತು ಗೋಶಾಲೆ (ಗೋಷ್ಠಿಯಲ್ಲಿ) ದೀಪವನ್ನು ಹಚ್ಚಿಡಬೇಕು.

ದೀಪಮಂತ್ರ : ಸಂಜೆ ಆತು ಮೂರುಸಂಜೆ ಆತು. ಆಕಳ ಬಂತು ಆಕಳ ಕರ ಬಂತು. ಹೂವು ಬಂತು ಹೂವಿನ ಹೆಡಿಗೆ ಬಂತು. ಗೆಜ್ಜಿ ಕಾಲ ಮಗಾ ಎದ್ದು ಕೂತಾನ, ಗುಂಡು ಬಿಂದ್ಲಿ ಮಗಾ ತೊಟ್ಟಲದೊಳಗ ಆಡತಾನ. ಸಾಗರದಷ್ಟು ಬತ್ತಿ ಮಾಡಿ ಸಮುದ್ರದಷ್ಟು ಎಣ್ಣಿ ಹಾಕಿ ದೀಪಾ ಹಚ್ಚಿ ಕೈಮುಗಿಯತೀನಿ, ತಾಯಿ ಮಹಾಲಕ್ಷ್ಮೀ ನಮ್ಮ ಮನೆಗೆ ಬಾರಮ್ಮಾ.

ನಂತರ ತಾರತಮ್ಯದಿಂದ ಆರೋಹಣಕ್ರಮದಲ್ಲಿ, ಅಪರೋಕ್ಷ ಜ್ಞಾನಿಗಳಾದ ದಾಸರು ರಚಿಸಿದ ಕೀರ್ತನೆಗಳನ್ನು ಹೇಳಬೇಕು. ಗೋಪೀಗೀತಾ, ಕೃಷ್ಣಾಷ್ಟಕಗಳನ್ನು ಪಠಿಸಬೇಕು. ವಾರದ ಹಾಡು ಹಾಗೂ ಸುಳಾದಿಗಳನ್ನು ಅನ್ನಬೇಕು.

**ಸೂಚನೆ : ಹಾಡು, ಸುಳಾದಿ, ಸ್ತೋತ್ರಗಳಿಗಾಗಿ ೩ನೇಯ ಹಾಗೂ ಪಾರಾಯಣ ಪ್ರಕರಣಗಳನ್ನು ಅವಲೋಕಿಸಿರಿ.**

## ಶ್ರೇಯಃಪ್ರಾರ್ಥನೆ

ಶ್ರೀಪತಿಯು ನಮಗೆ ಸಂಪದವೀಯಲಿ । ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ ॥ ಪ॥ ವರವಿಬುಧರನು ಪೊರೆಯೆ ವಿಷವ ಕಂಠದಲಿಟ್ಟ। ಹರ ನಿತ್ಯ ನಮಗೆ ಸಹಾಯ ಮಾಡಲಿ ॥ ನರರೊಳುನ್ನತವಾದ ನಿತ್ಯ ಭ ೀಗಂಗಳನು । ಪುರುಹೂತ ಪೂರ್ಣ ಮಾಡಿಸಲಿ ನಮಗೆ ॥ ೧॥ ವಿನುತ ಸಿದ್ಧಿಪ್ರದ ವಿಘ್ನೇಶನ ದಯದಿಂದ । ನೆನೆದ ಕಾರ್ಯಗಳೆಲ್ಲಾ ನೆರವೇರಲಿ॥ ದಿನದಿನದಿ ಧನ್ವಂತ್ರಿ ಆಪತ್ತುಗಳ ಕಳೆದು । ಮನ ಹರುಷವಿತ್ತು ಮನ್ನಿಸಲಿ ಬಿಡದೆ ॥೨॥ ನಿರುತ ಸುಜ್ಞಾನವನು ಈವ ಮಧ್ವರಾಯ । ಗುರುಗಳಾಶೀರ್ವಾದ ನಮಗಾಗಲಿ । ಪುರಂದರ ವಿಠ್ಠಲನ ಕರುಣದಿಂದಲಿ ನಿತ್ಯ ಸುರರೊಲುಮೆ ನಮಗೆ ಸುಸ್ಥಿರವಾಗಲಿ ॥ ೩॥

## ಕೇಶವಾದಿ ಮೂರ್ತಿಗಳ ಜೋಗುಳ ಪದ

**ರಾಗ : ಶಂಕರಾಭರಣ** **ಅಟ್ಟ ತಾಳ**

ಜೋ ಜೋ ಹರಿ ಜಾಹ್ನವಿಜನಕ । ಮೂಜಗತ್ಪತಿ ಸುರಕುಲಸನಕಾ- । ದೀಜನ ಮನೋಹಾರ ಮಾಣಿಕ್ಯ ಕನಕಾ । ವೈಜಯಂತಿ ಹಾರ ಪಾವನ್ನ ಪದಕ ॥ ಜೋ ಜೋ ॥ ಪಲ್ಲ.॥ ಕೇಶಿಭಂಜನ ವ್ಯೋಮವಂದಿತ ಪಾದ । ಕ್ಲೇಶನಾಶನ ವಾತೇಶನ ಜನಕ । ಕೇಶರಿರುಹ ಮುಂಜಿ ಕೇಶನೆ ಕುಂಕುಮ । ಕೇಸರಿ ಭೂಷಣ ಕೇಶವ ಶೌರಿ । ಜೋ ಜೋ ॥ ೧॥ ವಾರುಣಿಪತಿನುತ ವಾರುಣನ ಭಯ ನಿ । ವಾರಣಾ ವಾರಣಾಶಿಪುರದರಸೆ ॥ ವಾರಣ ನಗರಿಯ ವಾರನಹತ ಪಲ್ಲ । ವಾರುಣಿ ಪಾಣಿಯೆ ನಾರಾಯಣನೆ । ಜೋ ಜೋ ॥ ೨ ॥ ಮಾದೇವಿ ರಮಣ ಭೂದೇವಿ ಉದ್ಧಾರ । ಮಾಧುರ್ಯ ವಚನ ಉಮಾದೇವಿವಿನುತಾ ॥ ಮಾಧಾರ ಮಹಶೂರ ಮತ್ಕುಲನೆ ಪ್ರೇ । ಮಾದವನನೆ ಹರಿ ಮಾಧವ ರಾಯಾ । ಜೋ ಜೋ ॥ ೩ ॥ ಗೋವಳಿ ಪರಿಪಾಲ ಗೋವಳೇರಾ ಪ್ರಿಯಾ । ಗೋವುಗಳ ಕಾಯಿದ ಗೋವಳರಾಯಾ । ಗೋವರ್ಧನುದ್ಧಾರ ಗೋವಿಪ್ರಸಂರಕ್ಷ । ಗೋವಿದಾಂಪತಿ ರಂಗ ಗೋವಿಂದ ನಂದ । ಜೋ ಜೋ ॥ ೪ ॥ ಇಷ್ಟಭಕ್ತರ ಕುಲ ಇಷ್ಟದೈವವೆ ಸರ್ವ । ಇಷ್ಟಾರ್ಥ ಕೊಡುವ ಬಲಿಷ್ಠನು ನಿನ್ನ ॥ ಇಷ್ಟ ಅಷ್ಟಯೆಂದು ತಿಳಿಯಲಿ ವಶವಲ್ಲ । ವಿಷ್ಣು ಸರ್ವೋತ್ತಮ ವಿಶ್ವನಾಟಕನೆ । ಜೋ ಜೋ ॥ ೫ ॥ ಮಧುಕೈಟಭಾಸುರ ಮದಗರ್ವ ಮರ್ದನ । ಮದನಜನಕ ನಿತ್ಯ ಮಧುರನ್ನ ಪಾನಾ ॥ ಮಧುರಾಪುರ ಪಾಲ ಮದಗಜ ಹರಣಾ ಶಾ । ಮದವರ್ನ ಶರೀರ ಮಧುಸೂದನನೆ। ಜೋ ಜೋ ॥ ೬ ॥ ಅಕ್ರಮದಲಿ ಸ್ವರ್ಗ ಆಕ್ರಮಿಸಿ ಬಲಿ । ವಿಕ್ರಮನಾಗಿ ಕಾಲಕ್ರಮಣೆ ಮಾಡೆ ॥ ಶಕ್ರಮರ್ಚಿಸೆ ಅನುಕ್ರಮನಾಗಿ ಪ । ರಾಕ್ರಮದಲಿ ಬೆಳದೆ ತ್ರಿವಿಕ್ರಮನೆ । ಜೋ ಜೋ ॥ ೭ ॥ ವಾಮಲೋಚನೆಯರ ವಾಮನ ಕೆಡಿಸಿದೆ । ವಾಮನವಾಶಿಷ್ಟವಾ ಮುನಿವಂದ್ಯ ॥ ವಾಮನದಲಿ ದಾನವಾಮನ್ಯಗಳರನ್ನು । ಅವಮಾನ ಮಾಡಿದೆ ಸಿರಿವಾಮನನೆ । ಜೋ ಜೋ ॥ ೮ ॥ ಶ್ರೀಧರ ರಮಣನೆ ಶೃಂಗಾರ ವಾರಿಧಿ । ಶ್ರೀಧನ ಸಂಪತ್ತಾಶ್ರಿತ ಜನರಿಗೆ ॥ ಶ್ರೀಧೇನು ನೀನಯ್ಯಾ ಶ್ರೀಕರುಣಾಕರ । ಶ್ರೀದೇವಿ ಉರಭೂಷಾ ಶ್ರೀಧರನಂತಾ । ಜೋ ಜೋ ॥ ೯॥ ಋಷ್ಯಕೇಶನ ತಾತ ಋಷಿಜನ ಸಂಪ್ರೀತ। ಋಷಿಕುಲೋದ್ಭವ ಪುರುಷ ರಾಮ

ಮಹಾ ॥ ಋಷಿ ನಾಮಧೇಯನೆ ಋಷಿಪತ್ನಿ ಪಾಲನೆ । ಋಷಿಗಳ ಒಡಿಯನೆ ಹೃಷಿಕೇಶ ದೇವ। ಜೋ ಜೋ ॥ ೧೦॥ ಪದುಮಜಾಂಡದಲ್ಲಿ ಪದುಮೆ ಮಾತನು ಕೇಳಿ । ಪದುಮನಾಭಿಯಲ್ಲಿ ಪದುಮಜನಪೆತ್ತ ॥ ಪದುಮಾಸ್ಯಾ ಪದುಮಾಕ್ಷ ಪದುಮಕರನೆ ಪಾದ। ಪದುಮಮಿಗಲು ಕಾಂತಿ ಪದುಮನಾಭನೆ । ಜೋ ಜೋ ॥ ೧೧ ॥ ಧಾಮ ನಿಧಿಕುಲನು ಧಾಮನೆ ನಿರುತ ತ್ರಿ । ಧಾಮನಿವಾಸ ಸುದಾಮನ ಮಿತ್ರ ॥ ಧಾಮ ಪುಣ್ಯಧಾಮ ಭಕ್ತಹೃದ್ವನಜ। ಧಾಮ ಮಧುಕರನೆ ದಾಮೋದರ ಧರ್ಮಾ । ಜೋ ಜೋ ॥ ೧೨ ॥ ಶಂಖಾಸುರಹರಾ ನಿಃ ಶಂಕ ಚರಿತ । ಶಂಖಪಾಣಿ ಶಶಾಂಕ ಸುವದನ ॥ ಸಂಖ್ಯೆಯಿಲ್ಲದೆ ತಾಯಿ ಸಂಕಲೆ ಹರಿಗಡಿದೆ । ಸಂಕರುಷಣಾನುಜ ಸಂಕರುಷಣನೆ । ಜೋ ಜೋ ॥ ೧೩ ॥ ವಾಸವಾನುಜ ಶ್ರೀನಿವಾಸ ಪುಂಡ್ರೀಕ। ವಾಸುದೇವನ ಶಮನಪುರದಲ್ಲಿ ॥ ವಾಸ ಮಾಡಿಸಿದಯ್ಯಾ ವಾಸವಾರ್ಚಿತ ಶ್ರೀ । ವಾಸುದೇವ ದೇವ ವಾಸುದೇವ । ಜೋ ಜೋ ॥ ೧೪॥ ಪ್ರದ್ಯೋತ ಶತತೇಜ ಪ್ರಧಾನ ಮೂರುತಿ । ಪ್ರದ್ಯೀಪವರ್ಣಾ ಸುಪ್ರದಾಯಕನೆ ॥ ಪ್ರದೇಶ ಪರಿಮಾಣ ವರಪ್ರದ ಸಿದ್ಧನೆ । ಪ್ರದ್ಯುಕ್ತ ಅವ್ಯಕ್ತ ಪ್ರದ್ಯುಮ್ನ ವಿಶ್ವ । ಜೋ ಜೋ ॥ ೧೫ ॥ ಅನುಗಾಲವು ನಿನ್ನ ಅನುಸರಿಸಿದೆ ನಾನು । ಅನುಕೂಲವಾಗಿ ಎನ್ನನು ಸಾಕುವದು ॥ ಅನುಮಾನವ್ಯಾತಕೆ ಅನಿಮಿತ್ತ ಬಂಧು । ಅನುಪಮ ಚರಿತನೆ ಅನಿರುದ್ಧ ಶ್ರೀಶಾ । ಜೋ ಜೋ ॥ ೧೬॥ ಪುರುಷ ಪುರುಷ ಶ್ರೇಷ್ಠ ಪುರುಷಾರ್ಥ ಕಾರಣ । ಪುರುಷೇಶ್ವರ ತತ್ಪುರುಷಾದಿ ಪುರುಷ ॥ ಪುರುಷ ಬೀಜ ವೇದಪುರುಷ ಪರಮ ಪುರುಷ । ಪುರುಷರು ಮೋಹಿಸುವ ಪುರುಷೋತ್ತಮನೆ । ಜೋ ಜೋ ॥ ೧೭ ॥ ಅಕ್ಷಯ ಬಲ ಸಹಸ್ರಾಕ್ಷ ರಕ್ಷಕ । ಅಕ್ಷರ ಪರಬ್ರಹ್ಮ ಗೀರ್ವಾಣಾಧ್ಯಕ್ಷ । ಅಕ್ಷಯ ಪಾತ್ರಿಯ ಶಾಖಾದಳವನ್ನು । ಅಕ್ಷಯ ಮಾಡಿದಧೋಕ್ಷಜ ಚಕ್ರಿ । ಜೋ ಜೋ ॥ ೧೮ ॥ ನರಸಖ ನರಹರಿ ನಾರಾಯಣ ವಾ । ನರದಳನಾಯಕ ನಾರದವಿನುತ ॥ ನರಕ ಉದ್ಧಾರಕ ನರಕಾಂತಕ ಕಿ । ನ್ನರ ಸುರನರೋರಗವೃಂದ ನರಸಿಂಹ । ಜೋ ಜೋ ॥ ೧೯ ॥ ಸಚ್ಚಿದಾನಂದಾತ್ಮ ಸಚಲ ವಿಗ್ರಹನೆ । ಸಚ್ಚರಾಚರದೊಳು ಗುಣಪರಿಪೂರ್ಣಾ ॥ ಸಚ್ಛಾಸ್ತ್ರದಲಿ ನಿನ್ನ ಸಾಮರ್ಥಿ ಪರಿಪೂರ್ತಿ। ಸಚ್ಚ್ಯೂತ ಚ್ಯುತಿದೂರ ಚಿನ್ಮಯರೂಪಾ । ಜೋ ಜೋ ॥ ೨೦॥ ಜನನಮರಣನಾಶ ಜನನಾದಿಕರ್ತಾ । ಜನಸುತಗತಿ ಪ್ರೇಮಾಂಜನ ಗಿರಿಧಾಮ ॥ ಜನಕವರದ ಸಜ್ಜನರಘದಹನ ದು। ರ್ಜನರ ಕುಲರಾತಿ ಜನಾರ್ದನನೆ । ಜೋ ಜೋ ॥ ೨೧॥ ವೀಂದ್ರವಾಹನ ಮಹೇಂದ್ರಧಾರನೆ ಗ। ಜೇಂದ್ರನ್ನ ಬಿಡಿಸಿ ನಕ್ರೇಂದ್ರನ ಶೀಳಿ ನಾ ॥ ಗೇಂದ್ರಶಯನ ಗುಣಸಾಂದ್ರಾ ಗೋಕುಲಚಂದ್ರ। ಇಂದ್ರಮಣಿನಿಭ ರಾಮಚಂದ್ರ ಉಪೇಂದ್ರಾ । ಜೋ ಜೋ ॥ ೨೨॥ ಹರಿ ಎನುತಾ ಹರ ಹರಿದು ಓಡಿ ಬರೆ । ಹರಿದು ಪೋಗಿ ಪರಿಹರಿಸಿದ ಖಳನ ॥ ಹರಿ ಹರಿಯು ನಲಿವನ ಹರಿರೂಪ ಪರಿ । ಹರಿನಾಮವೆ ಗತಿ ಹರಿ ಸರ್ವೋತ್ತಮಾ । ಜೋ ಜೋ ॥ ೨೩ ॥ ಕೃಷ್ಣದ್ವಯಪಾಯನ ಉತ್ಕೃಷ್ಟ ಮುನೇಶ। ಕೃಷ್ಣಿಗೆ ಬಂದ ಕಷ್ಟ ಓಡಿಸಿದೆ ॥ ಕೃಷ್ಣವರ್ತ್ಮನೆ ಸಂತುಷ್ಟಿಲಿ ಸುಖಬಡುವ। ಕೃಷ್ಣಾವತಾರದ ಕೃಷ್ಣ ಕಮಲೇಶ । ಜೋ ಜೋ ॥ ೨೪ ॥ ನಿನ್ನ ಮಹಿಮೆಯನ್ನು ಬಣ್ಣಿಸಲಳವಲ್ಲ । ನಿನ್ನೊಳಗೆ ನೀನು ಬೀಯ ಬೀಜ(ಜ್ಜ)ವನು ॥ ಎನ್ನ ಪಾಲಿಸುವದು ವಿಜಯ ವಿಠಲ ಪ್ರ - । ಸನ್ನ ಭಕ್ತರ ವರದ ಬಾಲ ಗೋಪಾಲ । ಜೋ ಜೋ ॥ ೨೫ ॥

## ಮಂಗಳ

ಮಂಗಳಂ ಮಂಗಳಂ ದಯಾನಿಧೆ ॥ ಪ॥ ನಂದನಂದನ ಶ್ಯಾಮ ಸುಂದರ ಶುಭಕಾಯ। ಇಂದೀವರಾಕ್ಷ ಮುಕುಂದ ಮುರಾರೇ ॥ ೧॥ ದೇವದೇವೇಶ ದೇಹಿ ಕಲ್ಯಾಣಂ । ಶ್ರೀಧರ ಶ್ರೀವರ ಶ್ರೀಶ್ರೀನಿವಾಸ ॥ ೨॥ ರಾಜಿತ ವರದ ಗೋಪಾಲ ವಿಠಲ ಮಹಾ । ರಾಜಾಧಿರಾಜ ಕಲ್ಪಭೂಜ ಸುತೇಜ ॥ ೩॥

## ಆಹ್ನೀಕ ೧೨ : ಸರ್ವಕರ್ಮ ಸಮರ್ಪಣೆ, ಶಯನಮಂತ್ರ

ರಾತ್ರಿ ಭೋಜನ/ಫಲಾಹಾರದ ನಂತರ ಉಳಿದ ಮನೆಗೆಲಸಗಳನ್ನು ಮಾಡಿ ಮುಗಿಸಿ, ಎಲ್ಲ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿ, ಪರಮಾತ್ಮನನ್ನು ಸ್ಮರಿಸುತ್ತ ಮಲಗಬೇಕು.

೧) ಸರಸಿಜಾಕ್ಷಿಯರೆಲ್ಲ ಹರುಷದಿ ಬೆಳಗಿರೆ । ಕರ್ಮಾಭಿಮಾನಿ ಪುಷ್ಕರನಿಗಾರುತಿಯಾ ॥ ಪ॥ ಮಾಡಿದ ಕರ್ಮವ ನೀಡಿ ಹರಿಗೆ ಲಿಂಗ - । ಗೂಡು ತಪ್ಪಿಸೋ ನಿನ್ನ ಪಾಡಿ ಪೊಗಳುವೆ॥೧॥ ಭಕ್ತಿಯಿಂದ ಕರ್ಮವ ನಿತ್ಯ ಮಾಡುತ ಹರಿ - । ಇಚ್ಛಿತ ಕರ್ಮವ ಪಥ್ಯ ಸಾಧಿಸಿದೆ ॥೨॥ ಏಸು ಜನುಮದಿ ನಾನು ಮೋಸ ಹೋದೆನೋ ಇಂದಿ - । ರೇಶಗರ್ಪಿಸೋ (ಪ್ರಭೋ ಈಸು) ಕೃಪಾಧೀಶ ಮರಿಯದೆ ॥ ೩॥

೨) ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಧ್ವೇಶಾರ್ಪಣಮಸ್ತು । ಶುದ್ಧ ಶ್ರುತಿ ಪದ್ಧತಿ ನಡೆಸುವೆ ಮಧ್ವೇಶಾರ್ಪಣಮಸ್ತು ॥ ೧॥ ವಂದಿಸುವೆನು ಗೋವಿಂದನ ಚರಣಕೆ ಮಧ್ವೇಶಾರ್ಪಣಮಸ್ತು । ನಿಂದು ಕರಂಗಳ ವಂದಿಸಿ ಪ್ರಾರ್ಥನೆ ಮಧ್ವೇಶಾರ್ಪಣಮಸ್ತು॥೨॥ ಅಂಬುಜನಾಭನ ನಿತಂಬಿನಿ ಕಮಲಕೆ ಮಧ್ವೇಶಾರ್ಪಣಮಸ್ತು ॥ ಡಿಂಗರಿಗನು ನಾ ಜಗದಂಬೆಯ ಪ್ರಾರ್ಥನೆ ಮಧ್ವೇಶಾರ್ಪಣಮಸ್ತು ॥ ೩॥ ಸಂಧ್ಯಾದೇವಿಗೆ ವಂದಿಸುತಿರುವೆನು ಮಧ್ವೇಶಾರ್ಪಣಮಸ್ತು ॥ ಒಂದಿನ ಬಿಡದೆ ತ್ರಿಕಾಲದಿ ಮಧ್ವೇಶಾರ್ಪಣಮಸ್ತು ॥ ೪॥ ಚಾಮರ ಹಾಕುವೆ ಶ್ರೀಮನೋಹರನಿಗೆ ಮಧ್ವೇಶಾರ್ಪಣಮಸ್ತು ॥ ಕೋಮಲ ಶಯನದಿ ಮಲಗಿಸುವೆನು ಮಧ್ವೇಶಾರ್ಪಣಮಸ್ತು ॥ ೫॥ ಕೃಷ್ಣನ ಮಲಗಿಸಿ ತೊಟ್ಟಿಲ ತೂಗುವೆ ಮಧ್ವೇಶಾರ್ಪಣಮಸ್ತು॥ ಬಿಟ್ಟು ಅಭಿಮತ ಘಟ್ಟಿಸಿ ಪಾಡುವೆ ಮಧ್ವೇಶಾರ್ಪಣಮಸ್ತು ॥ ೬॥ ಶ್ರೀಪತಿ ತೊಟ್ಟಿಲ ಈ ಪರಿ ತೂಗುವೆ ಮಧ್ವೇಶಾರ್ಪಣಮಸ್ತು ॥ ಗುರುಪುಷ್ಕರ ಮುನಿ ಸುರದ್ವಾರದಿ ಮಧ್ವೇಶಾರ್ಪಣಮಸ್ತು ॥ ೭॥ ಕರ್ಮವು ಸಿರಿಯೆಂದು ಹರಿಗರ್ಪಿಸುವೆ ಮಧ್ವೇಶಾರ್ಪಣಮಸ್ತು॥ ದಾಸರ ಚರಣಕೆ ಶಿರಬಾಗುವೆ ನಾ ಮಧ್ವೇಶಾರ್ಪಣಮಸ್ತು ॥ ೮॥ ದಾಸರ ಕೃತಿ ಇಂದಿರೇಶಗರ್ಪಿಸುವೆ ಮಧ್ವೇಶಾರ್ಪಣಮಸ್ತು ॥ ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಧ್ವೇಶಾರ್ಪಣಮಸ್ತು ॥ ೯॥

೩. ರಾಗ ಭೈರವಿ ಏಕತಾಳ

ಮಧುಹಾ ನಿನಗರ್ಪಿತವೋ ಸರ್ವಕರ್ಮ । ಉದಯಾದಿ ಶಯನಾಂತ ಕೃತಕರ್ಮದನುಭವವು ॥ಪ.॥ ಸ್ಮೃತಿ ವಿಸ್ಮೃತಿಯಲಿ ಕೃತ ಉತ್ತಮಾಧಮಕರ್ಮ । ಮತ್ತೆ ಅನುಭವಿಸಿದ ಸುಖ ದುಃಖಗಳಿಗೆ ॥ ಚಿತ್ತ ನಿನ್ನದು ಮೂಲ ಸರ್ವಸ್ಥಿತಿಗತಿ ಧರ್ಮ । ವೃತ್ತಿಗಳಿಗನವರತ ಸತ್ಯಸಂಕಲ್ಪನೇ ॥೧॥ ನೀನೆಮ್ಮನಿಟ್ಟ ಪರಿ ನಿನ್ನಿಷ್ಟವಾಗಿರಲು । ಎನ್ನಿಷ್ಟವೆನಲ್ಯಾಕೆ ಶ್ರೇಷ್ಠತಮನೆ ॥ ವಾಣೀಶ ಹರಸುರರು ನಿನ್ನ ಪ್ರೀತಿಗಾಗಿ । ಏನು ಕೊಟ್ಟದನುಂಡು ನಿನಗರ್ಪಿಸುವರೋ ॥೨॥ ಅಧಿಕಾರಿ ನಾನಲ್ಲ ಅದರಿಂದ ಬೆದರುವೆ । ಮದನನಯ್ಯನೇ ದಯದಿ ಮನ್ನಿಸೆನ್ನ ॥ ಉದಯಾದಿ ಶಯನಾಂತ ಜಯೇಶ ವಿಠ್ಠಲ । ಮುದ ಖೇದಗಳು ನಿನ್ನ ಪ್ರೀತಿಗೊದಗಲಿ ಸ್ವಾಮಿ ॥೩ ॥

೪. ರಾಗ ಭೈರವಿ ಧ್ರುವತಾಳ

ನಮೋ ನಮೋ ಸಮಸ್ತ ತತ್ವಾಭಿಮಾನಿಗಳಿರಾ । ನಿಮಗೆ ಹಸ್ತವ ಮುಗಿದು ಕೊಂಡಾಡುವೆ। ಕ್ರಮದಿಂದ ಬಿನ್ನಪವ ಲಾಲಿಸಿ ಕೇಳುವದು । ಅಮರನಿಮ್ನಗಮಜ್ಜನಗೋಸುಗ। ಅಮಲಮತಿ ಇತ್ತು ಜ್ಞಾನ ಭಕ್ತಿ ಇಂದ । ರಮೆಯರಸನ್ನ ನೋಳ್ಪ ಸಾಧನ ತೋರಿ । ಗಮನಾದಿ ವೊದಲಾದ ವ್ಯಾಪಾರ ನಿಮ್ಮಾಧೀನ । ಶ್ರಮ ಸಾಧ್ಯವಾಗದಂತೆ ಪೈಣವಿತ್ತು। ತವೊ ರಜೊಗುಣದವರ ಬಾಧಿಯ ತಪ್ಪಿಸಿ ಉ-। ತ್ತಮ ಯಾತ್ರಿ ಮಾಡಿಸುವದು ತ್ರಯಕ್ಷೇತ್ರದ । ಕುಮತ ಪೊಂದಿದ ನಿತ್ಯ ಕುಮತಿ ಜನರ ಸಂಗ । ನಿಮಿಷವಾದರೂ ಕೊಡದೆ ಪಾಲಿಸಬೇಕು । ಯಮ ನೇಮ ಮಿಗಿಲಾದ ಸತ್ಕರ್ಮಾಚಾರದಿಂದ । ಸಮಚಿತ್ತ ಭೇದದಿಂದ ಇರಲಿ ಎನಗೆ । ನಮೋ ನಮೋ ಸಮಸ್ತ ತತ್ವಾಭಿಮಾನಿಗಳಿರಾ । ಕುಮತಿಯ ಬಿಡಿಸುವದು ನಾನೆಂಬೊ ಮಾತಿನಲ್ಲಿ । ಭ್ರಮಣವಲ್ಲದೆ ಲೇಸು ಲೇಸು ಕಾಣೆ । ರಮೆಯರಸ ನಮ್ಮ ವಿಜಯವಿಠ್ಠಲನಂಘ್ರಿ। ಕಮಲ ಹೃತ್ಕಮಲದಲ್ಲಿ ಪೊಳೆವಂತೆ ಕೃಪೆಮಾಡಿ ॥೧॥

ಮಟ್ಟತಾಳ

ತನುವೆನ್ನದೆಂಬೆನೆ ತನುವೆನ್ನದಲ್ಲ । ಮನವೆನ್ನದೆಂಬೆನೆ ಮನವೆನ್ನದಲ್ಲ । ಧನವೆನ್ನದೆಂಬೆನೆ ಧನವೆನ್ನದಲ್ಲ । ಜನವೆನ್ನದೆಂಬೆನೆ ಜನವೆನ್ನದಲ್ಲ । ತನು ಮನ ಧನ ಜನವು ಅನುದಿನದಲಿ ನೋಡೆ । ವನಜಭವಾದಿಗಳೆ ಎಣಿಸೆ ಪೇಳುವದೇನು । ಕೊನೆ ಮೊದಲು ನಿಮ್ಮಾಧೀನವಯ್ಯಾ ಬಿಡದೆ । ಇನಿತು ಪೊಂದಿರಲಿಕ್ಕೆ ಮಣಿದು ಹೇಳುವ ಮಾ -। ತಿನ ಉಪಚಾರವ್ಯಾಕೆ ಘನಮೂರು - । ತಿ ನಮ್ಮ ವಿಜಯವಿಠ್ಠಲನ್ನ ಪ್ರೇ - । ರಣೆ ಇಂದಲಿ ನಿಮ್ಮ ಸಕಲ ಚೇಷ್ಟೆಪ್ರದವೊ ॥೨॥

ತ್ರಿವಿಡಿತಾಳ

ಭೀತಿಪ್ರದ ಜೀವ ಜಡಗಳೆಲ್ಲ ನಿಮ್ಮ । ಚಾತುರ್ಯ ಪ್ರೇರಣೆ ಸಿದ್ಧವಾಗಿರಲಿಕ್ಕೆ । ಭೂತಳದೊಳು ನಾನಾ ಯಾತ್ರಿ ಚರಿಸುವಾಗ । ಭೀತಿ ಬಡಲ್ಯಾಕೆ ತಾತ್ವಿಕರೆ । ದೈತ್ಯರ ಗಣದಿಂದ ಇಂತಾಗುವದಲ್ಲ । ಪ್ರೀತಿವಂತರು ನೀವು ನಾನನ್ಯನೇ । ಜಾತಕರ್ಮಾರಭ್ಯ ಅಂದಿನ ಪರಿಯಂತ । ಯಾತಕಾಲೋಚನೆ ಸರ್ವರಿರಲು । ಆತುಮದೊಳಗೆ ಸತ್ವರಾಜಸ ತಾಮಸ । ಗಾತುರ ಗೋಳಕ

ನಿಮ್ಮ ದೇಹ । ಈ ತೆರದಲಿ ಮೂರು ವಿಧವಾಗಿ ಸಮಸ್ತ। ಭೂತಳದೊಳಗೆ ನೀವು ಪೊಂದಿರಲು। ಭೀತಿ ಎನಗೆ ಉಂಟೆ ಎಲ್ಲಿದ್ದರು ಕೇಳಿ । ಮಾತ್ರಾಕಾಲವಾಗೆ ಬಲು ಸೌಖ್ಯವೆ । ಗೋತುರ ತರು ಗುಹ ವನಾರಣ್ಯ ಪೊದೆ ಮಿಕ್ಕ । ಭೀತಿಗಳಿರಲೇನು ನಿಮ್ಮ ಬಲವು । ಸ್ವಾತಂತ್ರ ಪುರುಷ ಶ್ರೀವಿಜಯ ವಿಠ್ಠಲರೇಯನ । ದೂತನಾದವನಿಗೆ ಭಯವಿಲ್ಲ ಭಯವಿಲ್ಲ ॥೩॥

**ಅಟ್ಟತಾಳ**

ದೇಶ ಕಾಲ ಕರ್ಮ ಗುಣ ವಿಚಾರಾಚಾರ । ಭಾಷೆ ರೂಪ ಕ್ರಿಯ ಭೇದವಾದರೇನು । ದೋಷದೂರರು ನಿವು ತತ್ತತ್ತ ಸ್ಥಾನದಲ್ಲಿ । ವಾಸವಾಗಿದ್ದು ನಂಬಿದ ಜನರ ಮನೋ । ಪಾಸನೆ ಪ್ರಕಾರದಲ್ಲಿಸುತಿರಲಿಕ್ಕೆ । ಏಸುಬಗೆಯಿಂದ ಚಿಂತಿಸೆ ಸಲ್ಲದು । ಈ ಶರೀರವೇ ನಿಮ್ಮ ಚರಣಕ್ಕೆ ಅರ್ಪಿಸಿ । ದಾಸ ದಾಸನೆಂದು ತಲೆವಾಗಿಕೊಂಡಿಪ್ಪೆ । ಲೇಸು ಹೊಲ್ಲೆಗಳೆಲ್ಲ ನೀವಿತ್ತದಹುದು । ದೇಶಕಾಲಾದಿಯ ಗೊಡಿವೆ ಎನಗೆ ಯಾಕೆ । ಭಾಸುರ ಕೀರ್ತಿ ಅಪಕೀರ್ತಿ ನಿಮ್ಮದೆ ಸರಿ । ಈಸು ದಿವಸ ನಾನು ಬದುಕಿದಕೆ ಎ । ನ್ನಾಶೆ ಸಿದ್ಧಿಸಲಿ ಉತ್ತಮರ ಸಂಗತಿಯಿಂದ। ಕೋಶ ಭಂಡಾರಾದಿ ಅಹಿಕ ಬೇಡುವದಿಲ್ಲ । ಸಾಸಿರಕೆ ನಿಮ್ಮ ಪ್ರಸಾದವಾಗಲಿ । ಸಾಸಿವಿಕಾಳಷ್ಟು ನಿಮ್ಮ ವಿನಾವಾಗಿ । ದ್ವೇಷ ದೂಷಣೆ ಸ್ನೇಹ ಮಾಡುವರೆ ಇಲ್ಲಾ । ಲೇಶಕಾಲದಿಂದ ಮಹಾಕಾಲ ಪರ್ಯಂತ ।ಈಶನೊಬ್ಬನು ಕಾಣೊ ಸರ್ವರ ಪ್ರೇರಕ । ಕಾಶಿಪುರಾಧೀಶ ವಿಜಯವಿಠ್ಠಲ ಸ-। ರ್ವೇಶನ ತೋರಿಸಿ ಕೊಡುವದು ಸರ್ವದಾ ॥೪॥

**ಆದಿತಾಳ**

ಶರಣು ಜಯಂತ ಮಿತ್ರ ಮನು ಪ್ರಾಣ । ಧರಣಿ ವರುಣ ಮರುತ ಬಾಂಧವ ವಾಯು ಗಣಪ ಪಂಚ । ಮರುತ ತರಣಿ ದಿಗ್ದೇವ ದಕ್ಷ ಅಶ್ವಿನಿಯರು ಇಂದ್ರ । ಹರ ಶೇಷ ಗರುಡ ವಾಯು ಬ್ರಹ್ಮ ಲಕುಮಿದೇವಿ । ಪರಮ ಕರುಣದಿಂದ ಪ್ರತಿ ಪ್ರತಿ ದಿನದಲ್ಲಿ । ಪೊರೆವುತ್ತ ಬರುವದು ಭಕ್ತಗೆ ಒಲಿದು ಎಲ್ಲ । ಚಿರಕಾಲದಲಿ ನಿಮ್ಮ ಸ್ಮರಣೆ ಪಾಲಿಸಿ ಪುಣ್ಯ । ಶರಧಿಯೊಳಿಡುವದು ಹರಿ ಮೆಚ್ಚುವಂತೆ ಎನ್ನ । ಕರಚರಣಾದಿಗಳಲ್ಲಿ ವ್ಯಾಪಾರ ನಿಮ್ಮದು । ಹಿರಿದಾಗಿ ಪೇಳುವದೇನು ತಾತ್ವಿಕ ಜನರೆ । ಮೊರೆಹೊಕ್ಕೆ ನಿಮ್ಮ ಪಾದ ಮನೋ ವಾಚಾ ಕಾಯದಲ್ಲಿ । ತ್ವರಿತದಲಿ ಎನ್ನ ಮನೋಽಭೀಷ್ಟೆಯಾಗಲಿ । ಪುರಂದರನುತ ನಮ್ಮ ವಿಜಯವಿಠ್ಠಲರೇಯನ । ಚರಣಕಾಣುವ ಯೋಗತೋರಿಸಿ ಕೊಡುವದು ॥೫॥

**ಜತೆ**

ಜಗತ್ತಿನ ವ್ಯಾಪಾರ ನಿಮ್ಮಿಂದಾಗುವದು ಪ - । ನ್ನಗಶಾಯಿ ವಿಜಯವಿಠ್ಠಲನಲ್ಲಿ ಮನವಿರಲಿ ॥೬॥

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್। ಕರೋಮಿ ಯದ್ಯದ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥**

**ಶಯನ ಮಂತ್ರ :**

ಪಚ್ಚ ನೀಲದಕಟ್ಟಿ ಕಟ್ಟಿ ಪಾರಿಜಾತದ ಗಿಡ ತಂದ್ಹಚ್ಚಿ । ಅಚ್ಯುತನಿಗೆ ಶರಣೆಂದು ಎಡಮಗ್ಗಲಾದೆ । ತನು ಹೋಗಿ ಕೇಶವನ ಕೂಡಲಿ, ಮನ ಹೋಗಿ ಮಾಧವನ ಕೂಡಲಿ ಜೀವ ಹೋಗಿ ಶಾಲಗ್ರಾಮ ಶಿಲದಾಗ ಲೋಲಾಡಲಿ ॥ ಅಂಗ ಮಂಟಪ ರಂಗ ಪ್ರೋಕ್ಷಣೆ ಸುಗ್ರೀವನ ಕಾವಲು ಹನುಮಂತದೇವರ ತಳವಾರಕೀ ಇವನ್ನ ಯಾರು ದಾಟಿ ಬರ್ತ್ಾರ ಅವರ ತಲೆ ಒಡದು ಸಹಸ್ರ ಹೋಳಾಗಲಿ । ಇಲಿಗೆ ವಿಘ್ನೇಶ್ವರನ ಆಣೆ ಝುರಿಗೆ ಸರಸ್ವತಿ ಆಣೆ ಮಿಗಿಲಾದ ಪ್ರಾಣಿಗಳಿಗೆ ಅಷ್ಟ ದಿಕ್ಪಾಲರ ಆಣೆ. ಆಗ ನಿದ್ರೆಕೊಡು ಭೋಗ ನಿದ್ರೆಕೊಡು ಸಂತೋಷದಾ ಬಳಗಾ ಕೊಡು. ಕಾಶೀವಾಸ ಕೊಡು. ಪ್ರಯಾಗ ಮರಣಾ ಕೊಡು। ಶ್ರೀಕೃಷ್ಣ ಪರಮಾತ್ಮಾ ಅಂತ್ಯಕಾಲಕ್ಕೆ ನಿನ್ನ ದರ್ಶನ ನಿನ್ನ ನಾಮಸ್ಮರಣೆ ಕೊಡಪಾ ॥ ಆಸ್ತೀಕ ಆಸ್ತೀಕ ಆಸ್ತೀಕ ಕಾಳಭೈರವ । ಶ್ರೀಕೃಷ್ಣ ಕೃಷ್ಣ ಕೃಷ್ಣ ॥

## ಆಪತ್ತುಪರಿಹಾರ ಪ್ರಾರ್ಥನಾ ಉಗಾಭೋಗ

ಒಂದು ಕೈಯಲಿ ಖಡ್ಗ ಒಂದು ಕೈಯಲಿ ಹಲಿಗೆ । ಅಂದವಾಗಿ ಪಿಡಿದುಕೊಂಡು ದಿವಾರಾತ್ರಿಯಲಿ। ಬಂದು ಬದಿಯಲಿ ನಿತ್ಯ ಬಾರಾಸನಾಗಿ ನಿಂದು ಹಿಂದು ಮುಂದುಪದ್ರವವಾಗದಂತೆ ಇಂದಿರೆರಮಣ ಕಾಯುತ್ತಲಿರೆ ಎನಗಾವ ಬಂಧಕಗಳು ಇಲ್ಲ । ಧನ್ಯ ಧನ್ಯ ಕಂದರ್ಪನಯ್ಯಾ ಸಿರಿ ವಿಜಯ ವಿಠ್ಠಲರಾಯ। ದೇವ ಆಪತ್ತು ಬರಲೀಯ ನೋಡಿ ॥ ॥ ಶ್ರೀಕೃಷ್ಣಾರ್ಪಣಮಸ್ತು ॥

## ಧಾರ್ಮಿಕ ಕಾರ್ಯಗಳಲ್ಲಿ ಭಗವತ್ ಚಿಂತನೆ

(ಎಲ್ಲದಕ್ಕೂ ಮೊದಲು "ಭಾರತೀರಮಣ ಮುಖ್ಯಪ್ರಾಣಾಂತರ್ಗತ" (ಭಾ. ರ. ಮು.) ಎನ್ನಬೇಕು)

೧. ಆಹ್ನೀಕಕ್ಕೆ ಕೂಡುವಾಗ (ಭಾ. ರ. ಮು.) ಶ್ರೀ ಕೃಷ್ಣಾಯ ನಮಃ
೨. ಗೋಪೀಚಂದನ ಹಚ್ಚುವಾಗ (ಭಾ. ರ. ಮು.) ಶ್ರೀ ಭೂವರಾಹಾಯ ನಮಃ
೩. ಚಕ್ರ ಮುದ್ರೆ ಧರಿಸುವಾಗ (ಭಾ. ರ. ಮು.) ಶ್ರೀ ಕೃದ್ಧೋಲ್ಕಾಯ ನಮಃ
೪. ಶಂಖ ಮುದ್ರೆ ಧರಿಸುವಾಗ (ಭಾ. ರ. ಮು.) ಶ್ರೀ ಮಹೋಲ್ಕಾಯ ನಮಃ
೫. ಗದಾ ಮುದ್ರೆ ಧರಿಸುವಾಗ (ಭಾ. ರ. ಮು.) ಶ್ರೀ ವೀರೋಲ್ಕಾಯ ನಮಃ
೬. ಪದ್ಮ ಮುದ್ರೆ ಧರಿಸುವಾಗ (ಭಾ. ರ. ಮು.) ಶ್ರೀ ದ್ಯುಲ್ಕಾಯ ನಮಃ
೭. ನಾರಾಯಣ ಮುದ್ರೆ ಧರಿಸುವಾಗ (ಭಾ. ರ. ಮು.) ಶ್ರೀ ಸಹಸ್ರೋಲ್ಕಾಯ ನಮಃ
೮. ನಿರ್ಮಾಲ್ಯ ತೆಗೆದುಕೊಳ್ಳುವಾಗ (ಭಾ. ರ. ಮು.) ಶ್ರೀ ವಿಶ್ವಾಯ ನಮಃ,
(ಭಾ. ರ. ಮು.) ಶ್ರೀ ತೈಜಸಾಯ ನಮಃ,
(ಭಾ. ರ. ಮು.) ಶ್ರೀ ಪ್ರಾಜ್ಞಾಯ ನಮಃ

೯. ನಿರ್ಮಾಲ್ಯ ಪ್ರೋಕ್ಷಿಸಿಕೊಳ್ಳುವಾಗ (ಭಾ. ರ. ಮು.) ಶ್ರೀ ತುರ್ಯಾಯ ನಮಃ
೧೦. ಸಂಧ್ಯಾವಂದನೆ ಮಾಡುವಾಗ (ಭಾ. ರ. ಮು.) ಶ್ರೀ ರಾಮಾಯ ನಮಃ
೧೧. ಯಜ್ಞೋಪವೀತ ಧಾರಣ ಮಾಡುವಾಗ (ಭಾ. ರ. ಮು.) ಶ್ರೀ ವಾಮನಾಯ ನಮಃ
೧೨. ದೇವರ ಪೂಜೆ ಮಾಡುವಾಗ (ಭಾ. ರ. ಮು.) ಶ್ರೀ ಕೃಷ್ಣಾಯ ನಮಃ
೧೩. ಭಜನೆ ಮಾಡುವಾಗ (ಭಾ. ರ. ಮು.) ಶ್ರೀ ಯೋಗೀಶ್ವರಾಯ ನಮಃ
೧೪. ಪ್ರದಕ್ಷಿಣೆ ಮಾಡುವಾಗ (ಭಾ. ರ. ಮು.) ಶ್ರೀ ಹರಯೇ ನಮಃ
೧೫. ಆಕಳಿಗೆ ನಮಿಸುವಾಗ (ಭಾ. ರ. ಮು.) ಶ್ರೀ ಉದ್ಗೀಥಾಯ ನಮಃ
೧೬. ತುಳಸಿಗೆ ನಮಿಸುವಾಗ (ಭಾ. ರ. ಮು.) ಶ್ರೀ ವಿಷ್ಣವೇ ನಮಃ
೧೭. ಶಂಖೋದಕ ಪ್ರೋಕ್ಷಿಸಿಕೊಳ್ಳುವಾಗ (ಭಾ. ರ. ಮು.) ಶ್ರೀ ಮುಕುಂದಾಯ ನಮಃ
೧೮. ತೀರ್ಥ ತೆಗೆದುಕೊಳ್ಳುವಾಗ (ಭಾ. ರ. ಮು.) ಶ್ರೀ ರಾಮಾಯ ನಮಃ,
ಶ್ರೀ ಕೃಷ್ಣಾಯ ನಮಃ,
ಶ್ರೀ ವೇದವ್ಯಾಸಾಯ ನಮಃ
೧೯. ತುಳಸಿ ಸೇವಿಸುವಾಗ (ಭಾ. ರ. ಮು.) ಶ್ರೀ ರಾಮಾಯ ನಮಃ
೨೦. ಹರಿಕಥೆ ಕೇಳುವಾಗ (ಭಾ. ರ. ಮು.) ಶ್ರೀ ವೇದವ್ಯಾಸಾಯ ನಮಃ

## ನಿತ್ಯ ಕರ್ಮಗಳಲ್ಲಿ ನೆನೆಯಬೇಕಾದ ಭಗವದ್ರೂಪಗಳು

೧. ಹಾಸಿಗೆಯಿಂದ ಏಳುವಾಗ (ಭಾ. ರ. ಮು.) ಶ್ರೀನಾರಾಯಣಾಯ ನಮಃ
೨. ಶೌಚಕಾಲದಲ್ಲಿ (ಭಾ. ರ. ಮು.) ಶ್ರೀ ಕೇಶವಾಯ ನಮಃ
೩. ಮೃತ್ತಿಕಾ ಶೌಚದಲ್ಲಿ (ಭಾ. ರ. ಮು.) ಶ್ರೀ ತ್ರಿವಿಕ್ರಮಾಯ ನಮಃ
೪. ಹಲ್ಲುಜ್ಜುವಾಗ (ಭಾ. ರ. ಮು.) ಶ್ರೀಹರಯೇ ನಮಃ
೫. ಮುಖ ತೊಳೆಯುವಾಗ (ಭಾ. ರ. ಮು.) ಶ್ರೀಮಾಧವಾಯ ನಮಃ
೬. ಹಾಲು ಹಿಂಡುವಾಗ (ಭಾ. ರ. ಮು.) ಶ್ರೀ ಗೋಪಾಲಕೃಷ್ಣಾಯ ನಮಃ
೭. ಸ್ನಾನ ಮಾಡುವಾಗ (ಭಾ. ರ. ಮು.) ಶ್ರೀ ಭೂವರಾಹಾಯ ನಮಃ
೮. ವಸ್ತ್ರವನ್ನುಡುವಾಗ (ಭಾ. ರ. ಮು.) ಶ್ರೀ ಉಪೇಂದ್ರಾಯ ನಮಃ
೯. ದಾನ ಮಾಡುವಾಗ (ಭಾ. ರ. ಮು.) ಶ್ರೀ ಪರಶುರಾಮಾಯ ನಮಃ
೧೦. ದಾನ ತೆಗೆದುಕೊಳ್ಳುವಾಗ (ಭಾ. ರ. ಮು.) ಶ್ರೀ ವಾಮನಾಯ ನಮಃ
೧೧. ಹಾದಿಲಿ ನಡೆವಾಗ (ಭಾ. ರ. ಮು.) ಶ್ರೀ ಭೂವರಾಹಾಯ ನಮಃ
೧೨. ನದಿ ನೀರು ದಾಟುವಾಗ (ಭಾ. ರ. ಮು.) ಶ್ರೀ ಮತ್ಸ್ಯಾಯ ನಮಃ
೧೩. ಅರಣ್ಯದಲ್ಲಿರುವಾಗ (ಭಾ. ರ. ಮು.) ಶ್ರೀ ನಾರಸಿಂಹಾಯನಮಃ
೧೪. ಆಕಾಶದಲ್ಲಿ ತಿರುಗುವಾಗ (ಭಾ. ರ. ಮು.) ಶ್ರೀ ತ್ರಿವಿಕ್ರಮಾಯ ನಮಃ
೧೫. ಪರ್ವತಗಳಲ್ಲಿ ನಡೆಯುವಾಗ (ಭಾ. ರ. ಮು.) ಶ್ರೀ ಪರಶುರಾಮಾಯ ನಮಃ
೧೬. ರೋಗಾದಿಗಳು ಬಂದಾಗ (ಭಾ. ರ. ಮು.) ಶ್ರೀ ಧನ್ವಂತರಯೇ ನಮಃ

| | | |
|---|---|---|
| ೧೭. ಔಷಧಿ ತೆಗೆದುಕೊಳ್ಳುವಾಗ | (ಭಾ. ರ. ಮು.) | ಶ್ರೀ ವೈದ್ಯರೂಪಿ ಶ್ರೀ ನಾರಾಯಣಾಯ ನಮಃ |
| ೧೮. ಕುಂಕುಮ ಹಚ್ಚಿಕೊಳ್ಳುವಾಗ | (ಭಾ. ರ. ಮು.) | ಶ್ರೀ ಲಕ್ಷ್ಮೀ ನಾರಾಯಣಾಯ ನಮಃ |
| ೧೯. ಹೂ ಮುಡಿಯುವಾಗ | (ಭಾ. ರ. ಮು.) | ಶ್ರೀ ರಾಮ ದತ್ತ ಕಪಿಲೇಭ್ಯೋ ನಮಃ |
| ೨೦. ಮಗುವನ್ನಾಡಿಸುವಾಗ | (ಭಾ. ರ. ಮು.) | ಶ್ರೀ ಕೃಷ್ಣಾಯ ನಮಃ |
| ೨೧. ಆನಂದದಲ್ಲಿರುವಾಗ | (ಭಾ. ರ. ಮು.) | ಶ್ರೀ ಹಯವದನಾಯ ನಮಃ |
| ೨೨. ತಾಂಬೂಲ ಮೆಲ್ಲುವಾಗ | (ಭಾ. ರ. ಮು.) | ಶ್ರೀ ಪ್ರದ್ಯುಮ್ನಾಯ ನಮಃ |
| ೨೩. ಆಟವಾಡುವಾಗ | (ಭಾ. ರ. ಮು.) | ಶ್ರೀ ಗೋವಿಂದಾಯ ನಮಃ |
| ೨೪. ಏಕಾಂತದಲ್ಲಿರುವಾಗ | (ಭಾ. ರ. ಮು.) | ಶ್ರೀ ಕೃಷ್ಣಾಯ ನಮಃ |
| ೨೫. ಮಲಗುವಾಗ | (ಭಾ. ರ. ಮು.) | ಶ್ರೀ ಪದ್ಮನಾಭಾಯ ನಮಃ |

**॥ ಇಲ್ಲಿಗೆ ಆಹ್ನಿಕ ಪ್ರಕರಣವು ಸಮಾಪ್ತವಾಯಿತು॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

**ರಾಗ :ಧನ್ಯಾಸಿ** **ತಾಳ : ರೂಪಕತಾಳ**

ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ ।ಪ।
ತೀರ್ಥಪಾದರ ಭಜಿಸಿ ಕೃತಾರ್ಥನಾಗದವನ ಜನ್ಮ ।ಅ.ಪ.।

ಅರುಣ ಉದಯದಲ್ಲಿ ಎದ್ದು ಸರಿತದಲಿ ಸ್ನಾನವ ಮಾಡಿ ।
ಅರಳು ಮಲ್ಲಿಗೆ ಮಾಲೆ ಹರಿಯ ಚರಣಕರ್ಪಿಸದವನ ಜನ್ಮ ॥೧॥

ಒಂದು ಶಂಖ ಉದಕ ತಂದು ಚಂದದಿಂದ ಹರಿಗೆ ಎರೆದು।
ಗಂಧ ಪುಷ್ಪದಿಂದ ಹರಿಯ ವಂದನೆ ಮಾಡದವನ ಜನ್ಮ ॥೨॥

ಮುಗುಳು ತೆನೆಯಲೆಸೆವ ತುಳಸಿದಳವ ತಂದು ಪ್ರೇಮದಿಂದ ।
ಜಗನ್ಮಯಗೆ ಅರ್ಪಿಸಿ ಕರವ ಮುಗಿದು ಸ್ತುತಿಸದವನ ಜನ್ಮ ॥೩॥

ಭೋಗಿಶಯನನ ದಿನದಿ ಸಕಲ ಭೋಗಗಳನು ತಾನು ತೊರೆದು ।
ಭಾಗವತರ ಮ್ಯಾಳದಿಂದ ಜಾಗರಣೆ ಮಾಡದವನ ಜನ್ಮ ॥೪॥

ಜಂಗಮರೊಳಗಧಿಕವೆನಿಪ ಭಂಗುರ ಮನುಷ್ಯದೇಹ ಪಡೆದು।
ರಂಗವಿಠಲನೆನಿಪ ಪಶ್ಚಿಮರಂಗಗರ್ಪಿಸದವನ ಜನ್ಮ ॥೫॥

# ೨. ನಿತ್ಯಸ್ತೋತ್ರ ಪ್ರಕರಣ

ಈ ಪ್ರಕರಣದಲ್ಲಿ ಪ್ರಾತಃಕಾಲ ತಾರತಮ್ಯದಿಂದ ಅನ್ನಬೇಕಾದ ಸ್ತೋತ್ರಗಳನ್ನು ಕೊಡಲಾಗಿದೆ. ಈ ಹಿಂದಿನ ಆಹ್ನೀಕ ಪ್ರಕರಣದಲ್ಲಿಯ ಆಹ್ನೀಕ - ೫ ರಲ್ಲಿರುವ ಪ್ರಾತಃಕಾಲದ ಪ್ರಬೋಧ ಹಾಡುಗಳನ್ನು ಅವರೋಹಣ ಕ್ರಮದಿಂದ ಹೇಳಲು **ಸಮಯಾವಕಾಶವಿಲ್ಲದಿದ್ದಾಗ** ಈ ಪ್ರಕರಣದಲ್ಲಿ ಕೊಟ್ಟಿರುವ ಪ್ರಾತಃಸ್ತೋತ್ರಗಳನ್ನು ಹೇಳಬಹುದು. ಪ್ರಬೋಧ ಹಾಡು ಹಾಗೂ ಸ್ತೋತ್ರಗಳೆರಡನ್ನೂ ಹೇಳಿದರೆ ಉತ್ತಮ.

ಪ್ರಾತಃಸ್ತೋತ್ರಗಳಲ್ಲದೇ ಸ್ನಾನವಾದ ಮೇಲೆ ಹೇಳಬೇಕಾದ ಶ್ರೀವಿಜಯದಾಸರ ಪಂಚರತ್ನ ಸುಳಾದಿ ಮುಂತಾದವುಗಳನ್ನು ಹಾಗೂ ಇತರ ಕೆಲವು ಹಾಡುಗಳನ್ನೂ ಈ ಪ್ರಕರಣದಲ್ಲಿ ಕೊಡಲಾಗಿದೆ. **ಯಥಾವಕಾಶ** ಇವುಗಳನ್ನು ಪಠಿಸಬೇಕು. ಶ್ರೀವಿಜಯದಾಸರ ಪಂಚರತ್ನಸುಳಾದಿಗಳು ಮತ್ತು ಕೇಶವಾದಿ ನಾಮಗಳು, ಸ್ತುತಿರತ್ನಮಾಲಾ, ಶ್ರೀಕೃಷ್ಣಸಾರಕಥಾ, ಶ್ರೀನರಸಿಂಹ ಪ್ರಾದುರ್ಭಾವ ಕಥಾ, ಶ್ರೀಹಯವದನ ಪ್ರಾರ್ಥನಾ, ರುಕ್ಮಿಣೀವಿಲಾಸ, ದೇವರ ಹಾಡುಗಳು, ಶ್ರೀ ಶ್ರೀಪಾದರಾಜರ ಶ್ರೀಮಧ್ವನಾಮ (ಅವತಾರತ್ರಯ) ಸುಳಾದಿ, ಶ್ರೀಪಂಚಮುಖಿ ಮಾರುತೀ ಸ್ತೋತ್ರ, ಶ್ರೀ ರಾಘವೇಂದ್ರ ಸುಳಾದಿ ಮುಂತಾದವುಗಳನ್ನು ಪಠಿಸಿ ಶ್ರೀಹರಿವಾಯುಗುರುಗಳ ಅನುಗ್ರಹವನ್ನು ಸಂಪಾದಿಸಿ ಸಾಧನ ಮಾರ್ಗದಲ್ಲಿ ಮುನ್ನಡೆಯಬೇಕು.

## ಪ್ರಾತಃ ಸ್ತೋತ್ರಗಳು

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ |
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ||

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ |
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ||

**ಮೊದಲು ಹರಿ ಸ್ಮರಣೆ**

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೆ ಹರೇ ॥

**ಶ್ರೀಹರಿಗೆ ಸುಪ್ರಭಾತ**

ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥

ಮಂಗಲಂ ಭಗವಾನ್ ವಿಷ್ಣುಃ ಮಂಗಲಂ ಮಧುಸೂದನಃ ।
ಮಂಗಲಂ ಪುಂಡರೀಕಾಕ್ಷಃ ಮಂಗಲಂ ಗರುಡಧ್ವಜಃ ।

**ಕರದರ್ಶನ**

ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ ।
ಕರಮೂಲೇ ಸದಾ ಗೌರೀ ಪ್ರಭಾತೇ ಕರದರ್ಶನಂ ॥

## ಶ್ರೀವಾದಿರಾಜರು ರಚಿಸಿದ ರಮೇಶಸ್ತುತಿ

ಪ್ರಾತಃ ಸ್ಮರಾಮಿ ವರಕುಂಡಲಶೋಭಿಗಂಡಂ ।
ಶೀತಾಂಶುಮಂಡಲಮುಖಂ ಸ್ಮಿತವಾರಿಜಾಕ್ಷಂ ॥
ಆತಾಮ್ರಕಮ್ರಮುದಿತಾಧರಬಿಂಬಜೃಂಭ ।
ಧ್ಯಾತೃಪ್ರಹರ್ಷಕರಹಾಸರಸಂ ರಮೇಶಂ ॥ ೧॥

ಪ್ರಾತರ್ಭಜಾಮಿ ಶುಭಕೌಸ್ತುಭಕಂಬುಕಂಠಂ ।
ಸ್ಫೀತಾತ್ಮವಕ್ಷಸಿ ವಿರಾಜಿತಭೂರಿಹಾರಂ ॥
ಭೀತಸ್ವಭಕ್ತಭಯಭಂಜನಪಾಣಿಪದ್ಮಂ ।
ಶಾತೋದರಾರ್ಪಿತಜಗದ್ಧರಮಬ್ಜನಾಭಂ ॥ ೨॥

ಪ್ರಾತರ್ನಮಾಮಿ ಶುಭಕಿಂಕಿಣಿಮೇಖಲಾಂಗಂ ।
ಪೀತಾಂಬರಂ ಕರಿಕರೋರುಮುದಾರಜಾನುಂ ॥
ಧ್ಯಾತಾಂಘ್ರಿಯುಗ್ಮರುಚಿರಂಜಿತಕಂಜಜಾತ - ।
ವಾತಾದಿದೇವವರಮೌಲಿಮಣಿಂ ಮುಕುಂದಂ ॥ ೩॥

ವಾದಿರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂ ಸದಾ ।
ಪ್ರಾತಃಕಾಲೇ ಪಠನ್ ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥

**ಪರಮಾತ್ಮನಿಗೆ ಮತ್ತೆ ನಮಸ್ಕಾರಗಳು**

ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ । ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿಯುಗಧಾರಿಣೇ ನಮಃ॥ ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ । ಅವಿಕಾರಿಣೇ ಸ್ಫುಟಮನಂತರೂಪಿಣೇ ಸುಖಚಿತ್ ಸಮಸ್ತತನವೇ ನಮೋ ನಮಃ ॥ ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ-ಹಿತಾಯ ಚ । ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

**ಜಗನ್ಮಾತೆಗೆ ನಮನ**

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

**ಭೂವಂದನೆ**

ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

**ಪರಿವಾರ ದೇವತೆಗಳ ಸಹಿತ ವಿಷ್ಣುವಿಗೆ ವಂದನೆ**

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ । ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ ॥ ದೇವೀಂ ವಂದೇ ಸುಪರ್ಣೀಂ ಅಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ। ಇಂದ್ರಾದೀನ್ ಕಾಮಮುಖ್ಯಾನ್ ಅಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥

**ತತ್ವಾಭಿಮಾನಿ ದೇವತೆಗಳನ್ನು ಕುರಿತು ಪ್ರಾರ್ಥನೆ**

ನಮೋ ವಸ್ತಾತ್ತ್ವಿಕಾ ದೇವಾಃ ವಿಷ್ಣುಭಕ್ತಿಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಸ್ಸರ್ವ ಏವ ಹಿ ॥

**ಗುರುಸ್ಮರಣೆ**

ಬ್ರಹ್ಮಾಂತಾ ಗುರವಃ ಸಾಕ್ಷಾದ್ ಇಷ್ಟಂ ದೈವಂ ಶ್ರಿಯಃಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥

**ಶ್ರೀಮದಾಚಾರ್ಯರಿಗೆ ವಂದನೆ**

ಯೋ ವಿಪ್ರಲಂಭವಿಪರೀತಮತಿಪ್ರಭೂತಾನ್ ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಂ। ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ ಆನಂದತೀರ್ಥಮುನಿವರ್ಯಮಹಂ ನಮಾಮಿ ॥

**ಟೀಕಾಚಾರ್ಯರಿಗೆ ವಂದನೆ**

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ ಹೃದಂಬರೇ ॥

**ವ್ಯಾಸರಾಜರಿಗೆ ನಮನ**

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದ್ ಅಸ್ಮದಿಷ್ಟಾರ್ಥಸಿದ್ಧಯೇ ॥

**ವಾದಿರಾಜರಿಗೆ ನಮನ**

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಂ ।
ವಾದಿರಾಜಗುರೂನ್ ವಂದೇ ಹಯಗ್ರೀವಪದಾಶ್ರಯಾನ್ ॥

**ಮಂತ್ರಾಲಯ ಪ್ರಭುಗಳಿಗೆ ವಂದನೆ**

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

**ದಾಸಚತುಷ್ಟಯಕ್ಕೆ ವಂದನೆ**

ಮನ್ಮನೋಽಭೀಷ್ಟವರದಂ ಸರ್ವಾಭೀಷ್ಟಫಲಪ್ರದಂ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ ॥

ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಂ ।
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ ॥

ಗೋಪಪ್ರಕರಸಂಕಾಶಂ ಗೋಪಾಲಾರ್ಚನತತ್ಪರಂ ।
ಗೋದೇವವಂದ್ಯಪಾದಾಬ್ಜಂ ಗೋಪಾಲಾಖ್ಯಗುರುಂ ಭಜೇ ॥

ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಂ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥

**(ಇಲ್ಲಿ ಇನ್ನೂ ಅನೇಕಾನೇಕ ಮಾಧ್ವ ಗುರುಗಳನ್ನು ಸ್ಮರಿಸಿ ಅವರವರ ವಂದನಾ ಶ್ಲೋಕಗಳನ್ನು ಹೇಳಬೇಕು)**

ಆಪಾದಮೌಲಿ ಪರ್ಯಂತಂ ಗುರೂಣಾಂ ಆಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

**ಸಮಸ್ತರಾದ ಸ್ವೋತ್ತಮ ವೈಷ್ಣವರಿಗೆ ಒಟ್ಟು ವಂದನೆ**

ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ।
ವೈಷ್ಣವಾಃ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ ಮಮ ॥

## ಮಂಗಳಾಷ್ಟಕ

**ಪರಮವೈಭವಶಾಲಿ ಶ್ರೀಹರಿಗೆ ವಂದನೆ**

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ ಹರಿರ್ಮಂಗಲಮ್ ॥ ೧॥

**ಹರಿಯ ಪರಿವಾರ ದೇವತೆಗಳಿಗೆ ವಂದನೆ**

ಬ್ರಹ್ಮಾವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರುಃ
ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ ।
ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೨॥

**ಋಷಿಗಳ ಸ್ಮರಣೆ**

ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ
ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।
ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ
ಶ್ರೀಮದ್ವಿಷ್ಣುಪದಾಂಬುಜೈಕಶರಣಾಃ ಕುರ್ವಂತು ನೋ ಮಂಗಲಮ್ ॥ ೩॥

**ರಾಜರ್ಷಿಗಳ ಸ್ಮರಣೆ**

ಮಾಂಧಾತಾ ನುಹುಷೋಽಂಬರೀಷಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮಸುತೋ ನಲೋ ದಶರಥೋ ರಾಮೋ ಯಯಾತಿರ್ಯದುಃ।
ಇಕ್ಷ್ವಾಕುಶ್ಚ ವಿಭೀಷಣಶ್ಚ ಭರತಶ್ಚೋತ್ತಾನಪಾದಧ್ರುವಾ-
ವಿತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥ ೪॥

**ಪರ್ವತಾಭಿಮಾನಿ ದೇವತೆಗಳ ಸ್ಮರಣೆ**

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಸಲ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ ।
ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕಾ-
ವಿತ್ಯಾದ್ಯಾ ಭುವಿ ಭೂಧರಾಶ್ಚ ಸತತಂ ಕುರ್ವಂತು ನೋ ಮಂಗಲಮ್ ॥ ೫॥

**ನದೀ ದೇವತೆಗಳ ಸ್ಮರಣೆ**

ಗಂಗಾ ಸಿಂಧು ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗು ಸರಯೂಃ ಶ್ರೀಗಂಡಕೀ ಗೋಮತೀ ।

ಕಾವೇರೀ ಕಪಿಲಾ ಪ್ರಯಾಗವಿನತಾ ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥ ೬॥

**ವೇದಾದಿ ಸಕಲ ಶಾಸ್ತ್ರಾಭಿಮಾನಿ ದೇವತೆಗಳ ಸ್ಮರಣೆ**

ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ ।
ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ
ಶ್ರೀವಿಷ್ಣೋರ್ಗುಣನಾಮಕೀರ್ತನಪರಾಃ ಕುರ್ವಂತು ನೋ ಮಂಗಲಂ ॥ ೭॥

**ನವಗ್ರಹಗಳು ಮತ್ತು ಕಾಲಾಭಿಮಾನಿ ದೇವತೆಗಳ ಸ್ಮರಣೆ**

ಆದಿತ್ಯಾದಿ ನವಗ್ರಹಾಃ ಶುಭಕರಾ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸಯೋಗಕಾಶ್ಚ ತಿಥಯಸ್ತದ್ದೇವತಾಸ್ತದ್ಗಣಾಃ ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೮॥

**ಫಲಸ್ತುತಿ**

ಇತ್ಯೇತದ್ವರಮಂಗಲಾಷ್ಟಕಮಿದಂ ಶ್ರೀರಾಜರಾಜೇಶ್ವರೇ-
ಣಾಖ್ಯಾತಂ ಭಜತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್ ।
ಮಾಂಗಲ್ಯಾದಿ ಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇದ್
ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥ ೯॥

**ಸಮಸ್ತ ಲೋಕಗಳಿಗೂ ಮಂಗಳವಾಗಲೆಂದು ಹಾರೈಕೆ**

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ॥
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥
ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತಃ ಸಜ್ಜನಾಃ ಸಂತು ನಿರ್ಭಯಾಃ ॥
ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ ।
ಅಧನಾಃ ಸಧನಾಃ ಸಂತು ಜೀವಂತು ಶರದಾಂ ಶತಂ ॥

**ದೈನಂದಿನ ಕಾರ್ಯಗಳಿಗಾಗಿ ಪವಿತ್ರ ಸಂಕಲ್ಪ**

ಪ್ರಾತಃಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂ ತಥಾ
ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥
ಪ್ರಾತಃ ಕಾಲಾದಿಕಂ ಕರ್ಮ ನಿತ್ಯನೈಮಿತ್ತಿಕಂ ತಥಾ ।
ಕೇಶವಾರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ॥

**ತುಲಸೀವಂದನೆ**

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ
ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಂ ||
ತುಲಸಿ ಶ್ರೀಸಖಿಶುಭೇ ಪಾಪಹಾರಿಣಿ ಪುಣ್ಯದೆ ।
ನಮಾಮಿ ನಾರದನುತೇ ನಾರಾಯಣಮನಃಪ್ರಿಯೇ ||

**ಗೋವಂದನೆ**

ಸರ್ವಕಾಮದುಘೆ ದೇವಿ ಸರ್ವತೀರ್ಥಾಭೀಷೇಚಿನಿ ।
ಪಾವನಿ ಸುರಭಿಶ್ರೇಷ್ಠೇ ದೇವಿ ತುಭ್ಯಂ ನಮೋ ನಮಃ ||

**ಪರಮಾತ್ಮನ ಅನುಗ್ರಹ ಪ್ರಾರ್ಥನೆ**

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ||

|| ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ||

## ಸ್ನಾನವಾದಮೇಲೆ ಹೇಳಬೇಕಾದ ಸುಳಾದಿಗಳು, ಸ್ತೋತ್ರಗಳು ಮತ್ತು ಹಾಡುಗಳು

### ೧) ಶ್ರೀವಿಜಯದಾಸರ ಪಂಚರತ್ನ ಸುಳಾದಿಗಳು

**(೧. ಶ್ರೀನರಸಿಂಹಸುಳಾದಿ, ೨. ಶ್ರೀಧನ್ವಂತರೀಸುಳಾದಿ, ೩. ಶ್ರೀಕಪಿಲ ದೇವರ ಸುಳಾದಿ, ೪. ಶ್ರೀದುರ್ಗಾದೇವೀ ಸುಳಾದಿ, ೫. ಶ್ರೀಮುಖ್ಯಪ್ರಾಣದೇವರ ಸುಳಾದಿ)**



ಶ್ರೀ ವಾದಿರಾಜರು ಪ್ರತಿಷ್ಠಾಪಿಸಿದ ಶ್ರೀ ಮಧ್ವಾಚಾರ್ಯರು -ಪಾಜಕ

## ೧) ಶ್ರೀನರಸಿಂಹದೇವರ ಸ್ತೋತ್ರ ಸುಳಾದಿ

ರಾಗ - ನಾಟಿ ಧ್ರುವತಾಳ

ವೀರ ಸಿಂಹನೆ ನಾರಸಿಂಹನೆ ದಯ ಪಾರಾ । ವಾರನೆ ಭಯ ನಿವಾರಣ ನಿರ್ಗುಣ। ಸಾರಿದವರ ಸಂಸಾರ ವೃಕ್ಷದ ಮೂಲ । ಬೇರರಿಸಿ ಕೀಳುವ ಬಿರಿದು ಭಯಂಕರ। ಘೋರವತಾರ ಕರಾಳವದನ ಅ। ಘೋರ ದುರಿತ ಸಂಹಾರ ಮಾಯಾಕಾರ । ಕ್ರೂರದೈತ್ಯರ ಶೋಕ ಕಾರಣ ಉದುಭವ । ಈರೇಳು ಭುವನ ಸಾಗರದೊಡೆಯ । ಅರೌದ್ರನಾಮಕ ವಿಜಯ ವಿಠ್ಠಲ ನರಸಿಂಗ। ವೀರರಸಾತುಂಗ ಕಾರುಣ್ಯಪಾಂಗ ॥೧॥

....ಮಟ್ಟತಾಳ....

ಮಗುವಿನ ರಕ್ಕಸನು ಹಗಲಿರುಳು ಬಿಡದೆ । ಹಗೆಯಿಂದಲಿ ಹೊಯ್ದು ನಗಪನ್ನಗ ವನಧಿ । ಗಗನ ಮಿಗಿಲಾದ ಅಗಣಿತ ಬಾಧಿಯಲಿ । ನೆಗೆದು ಒಗದು ಸಾವು ಬಗದು ಕೊಲ್ಲುತಿರಲು ಹೇ । ಜಗದ ವಲ್ಲಭನೇ ಸುಗುಣಾನಾದಿಗನೆ । ನಿಗಮಾ ವಂದಿತನೆ ಪೊಗಳಿದ ಭಕುತರ । ತಗಲಿ ತೊಲಗನೆಂದೂ ಮಿಗೆ ಕೂಗುತಲಿರಲು । ಯುಗ ಯುಗದೊಳು ದಯಾಳುಗಳ ದೇವರದೇವ। ಯುಗಾದಿ ಕೃತನಾಮಾ ವಿಜಯ ವಿಠ್ಠಲ ಹೋ ಹೋ । ಯುಗಳ ಕರವ ಮುಗಿದು ಮಗುವು ಮೊರೆ ಇಡಲು ॥೨॥

....ರೂಪಕತಾಳ....

ಕೇಳಿದಾಕ್ಷಣದಲಿ ಲಾಲಿಸಿ ಭಕ್ತನ್ನ ಮೌಳಿ ವೇಗದಲಿ ಪಾಲಿಸುವೆನೆಂದು । ತಾಳಿ ಸಂತೋಷವ ತೂಳಿ ತುಂಬಿದಂತೆ । ಮೂಲೋಕದ ಪತಿವಾಲಯದಿಂದ ಸು-। ಸ್ತೀಲ ದುರ್ಲಭ ನಾಮ ವಿಜಯ ವಿಠ್ಠಲ ಪಂಚ । ಮೌಳಿ ಮಾನವ ಕಂಭ ಸೀಳಿ ಮೂಡಿದ ದೇವ ॥೩॥

....ಝುಂಪೆತಾಳ....

ಲಟಲಟಾ ಲಟಲಟಾ ಲಟಕಟಿಸಿ ವನಜಾಂಡ । ಕಟಹ ಪಟ ಪಟ ಪುಟುತ್ಕಟದಿ ಬಿಚ್ಚುತಲಿರಲು । ಪುಟ ಪುಟ ಪುಟನೆಗೆದು ಚೀರಿಹಾರುತ್ತ ಪ । ಲ್ಕಟಕಟಾ ಕಟ ಕಡಿದು ರೋಷದಿಂದ । ಮಿಟಿ ಮಿಟಿ ಮಿಟನೆ ರಕ್ತಾಕ್ಷಿಯಲ್ಲಿ ನೋಡಿ । ತಟತ್ಕೋಟಿ ಊರ್ಭಟಗೆ ಅರ್ಭಟವಾಗಿರಲು । ಕುಟಿಲ ರಹಿತ ವ್ಯಕ್ತ ವಿಜಯ ವಿಠ್ಠಲ ಶಕ್ತ । ದಿಟ ನಿಟಿಲ ನೇತ್ರ ಸುರಕಟಕ ಪರಿಪಾಲಾ ॥೪॥

....ತ್ರಿವಿಡಿತಾಳ....

ಬೊಬ್ಬಿರಿಯೇ ವೀರ ಧ್ವನಿಯಿಂದ ತನಿಗಿಡಿ । ಹಬ್ಬಿ ಮುಂಚೋಣಿ ಉರಿ ಹೊರಗೆದ್ದು ಸುತ್ತೆ । ಉಬ್ಬಸ ರವಿಗಾಗೆ ಅಬ್ಜ ನಡುಗುತಿರೆ । ಅಬ್ಧಿಸಪುತ ಉಕ್ಕಿ ಹೊರಚೆಲ್ಲಿ ಬರುತಿರೆ । ಅಬುಜ ಭವಾದಿಗಳು ತಬ್ಬಬ್ಬಿ ಗೊಂಡಾರಿ । ಅಬ್ಬರವೇನೆನುತ ನಭದ ಗೂಳೆಯು ತಗ್ಗಿಯೆ । ಶಬ್ದ ತುಂಬಿತು ಅವ್ಯಾಕೃತಾಕಾಶ ಪರಿಯಂತ । ನಿಬ್ಬರ ತರುಗಿರಿ ಝುರಿ ಝುರಿಸಲು । ಒಬ್ಬರಿಗೊಶವಲ್ಲದ ನಮ್ಮಾ ವಿಜಯ ವಿಠ್ಠಲ । ಇಬ್ಬಗೆಯಾಗಿ ಕಂಭದಿಂದ ಪೊರಮಟ್ಟಾ॥೫॥

....ಅಟ್ಟತಾಳ....

ಘುಡಿ ಘುಡಿಸುತ ಕೋಟಿ ಸಿಡಿಲು ಗಿರಿಗೆ ಬಂದು । ಹೊಡೆದಂತೆ ಚೀರಿ ಬೊಬ್ಬಿಡುತಲಿ ಲಂಘಿಸಿ । ಹಿಡಿದು ರಕ್ಕಸನ್ನ ಕೆಡಹಿ ಮಡುಹಿ ತುಡುಕಿ । ತೊಡಿಯ ಮೇಲಿರಿಸಿ ಹೇರೊಡಲ ಕೂರುಗುರದಿಂದ । ಪಡುವಲ ಗಡಲ ತಡಿಯ ತರಣಿಯ ನೋಡಿ । ಕಡುಕೋಪದಲ್ಲಿ ಸದಬಡಿದು ರಕ್ಕಸನ ಕೆಡಹಿ । ನಿಡಿಗರಳನು ಕೊರಳೆಡಿಯಲ್ಲಿ ಧರಿಸಿದ ಸಡಗರದ ದೈವ । ಕಡುಗಲಿ ಭೂರ್ಭೂವ ವಿಜಯ ವಿಠ್ಠಲ । ಪಾಲ್ಗಡಲೊಡಿಯಾ ಶರಣರ ವಡೆವೆ ವಡನೊಡನೆ॥೬॥

....ಆದಿತಾಳ....

ಉರಿಮಸೆಗೆ ಚತುರ್ದಶ ಧರಣಿ ತಲ್ಲಣಿಸಲು । ಪರಮೇಷ್ಠಿ ಹರಸುರರು ಸಿರಿದೇವಿಗೆ ಮೊರೆಯಿಡಲು । ಕರುಣದಿಂದಲಿ ತನ್ನ ಶರಣನ್ನ ಸಹಿತ ನಿನ್ನ । ಚರಣಕ್ಕೆ ಎರಗಲು ಪರಮ ಶಾಂತನಾಗಿ। ಹರಹಿದೆ ದಯವನ್ನು ಸುರರು ಕುಸುಮ ವರುಷ । ಗರಿಯಲು ಭೇರಿ ವಾದ್ಯ ಮೊರೆ ಉತ್ತರರೆ ಎನುತ। ಪರಿಪರಿ ವಾಲಗ ವಿಸ್ತಾರದಿಂದ ಕೈಕೊಳ್ಳುತ್ತ । ಮೆರೆದು ಸುರರುಪದ್ರ ಹರಿಸಿ ಬಾಲಕನ ಕಾಯ್ದೆ । ಪರದೈವ ಗಂಭೀರಾತ್ಮ ವಿಜಯವಿಠ್ಠಲ ನಿಮ್ಮ । ಚರಿತೆ ದುಷ್ಟರಿಗೆ ಭೀಕರವೋ ಸಜ್ಜನ ಪಾಲ ॥ ೭॥

....ಜತೆ....

ಪ್ರಹ್ಲಾದವರದ ಪ್ರಸನ್ನ ಕ್ಲೇಶಭಂಜನ್ನ । ಮಹಹವಿಷೆ ವಿಜಯವಿಠ್ಠಲ ನರಮೃಗವೇಷಾ ॥ ೮॥

## ೨) ಶ್ರೀಧನ್ವಂತರಿ ಸ್ತೋತ್ರ ಸುಳಾದಿ

ರಾಗ - ಭೈರವಿ ಧ್ರುವತಾಳ

ಆಯುವೃದ್ಧಿಯಾಗೋದು ಶ್ರೇಯಸ್ಸು ಬರುವುದು । ಕಾಯಾ ನಿರ್ಮಲಿನಾ ಕಾರಣವಾಹದೊ। ಮಾಯಾ ಹಿಂದಾಗುವದು ನಾನಾ ರೋಗದ ಬೀಜ । ಬೇಯಿಸಿ ಕಳೆವದು ವೇಗದಿಂದ । ನಾಯಿ ವೊದಲಾದ ಕುತ್ಸಿತ ದೇಹ ನಿ । ಕಾಯವಾ ತೆತ್ತು ದುಷ್ಕರ್ಮದಿಂದ । ಕ್ರೀಯಮಾಣ ಸಂಚಿತ ಭರಿತವಾಗಿದ್ದ ದುಃಖ । ಹೇಯ ಸಾಗರದೊಳು ಬಿದ್ದು ಬಳಲೀ । ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ । ಬಾಯಲಿ ವೈದ್ಯಮೂರ್ತಿ ಶ್ರೀ ಧನ್ವಂತ್ರಿ । ರಾಯಾ ರಾಜೌಷಧಿ ನಿಯಾಮಕ ಕರ್ತ। ಶ್ರೀಯರಸನೆಂದು ತುತಿಸಲಾಗಿ । ತಾಯಿ ಒದಗಿ ಬಂದು ಬಾಲನ್ನ ಸಾಕಿದಂತೆ । ನೋಯಗೊಡದೆ ನಮ್ಮನ್ನು ಪಾಲಿಪಾ । ಧ್ಯೇಯಾ ದೇವಾದಿಗಳಿಗೆ ಧರ್ಮಜ ಗುಣಸಾಂದ್ರ । ಶ್ರೇಯಸ್ಸು ಕೊಡುವನು ಭಜಕರಿಗೆ । ಮಾಯಾ ಮಂತ್ರದಿಂದ ಜಗವೆಲ್ಲ ವ್ಯಾಪಿಸಿದ । ನ್ಯಾಯವಂತನಾಗಿ ಚೇಷ್ಟೆ ಮಾಳ್ಪಾ । ವಾಯುವಂದಿತ ನಿತ್ಯ ವಿಜಯ ವಿಠ್ಠಲರೇಯಾ । ಪ್ರೀಯನು ಕಾಣೋ ನಮಗೆ ಅನಾದಿ ರೋಗ ಕಳೆವಾ ॥ ೧॥

....ಮಟ್ಟತಾಳ....

ಧನ್ವಂತ್ರಿ ಶ್ರೀಧನ್ವಂತ್ರಿ ಎಂದು । ಸನ್ನುತಿಸಿ ಸತತ ಭಿನ್ನ ಜ್ಞಾನದಿಂದ । ನಿನ್ನವ ನಿನ್ನವನೊ ಘನ್ನತಿಯಲಿ ನೆನೆವ । ಮನ್ನುಜ ಭುವನದೊಳು ಧನ್ಯನು ಧನ್ಯ ನೆನ್ನಿ। ಚೆನ್ನಮೂರುತಿ ಸುಪ್ರಸನ್ನ ವಿಜಯ ವಿಠ್ಠಲನ್ನ । ಸತ್ಯವೆಂದು ಬಣ್ಣಿಸು ಬಹು ವಿಧದಿ ॥ ೨॥

....ತ್ರಿವಿಡಿತಾಳ....

ಶಶಿಕುಲೋದ್ಭವ ದೀರ್ಘತಮ ನಂದನದೇವಾ । ಶಶಿವರ್ಣ ಪ್ರಕಾಶ ಪ್ರಭುವೆ ವಿಭುವೆ। ಶಶಿಮಂಡಲ ಸಂಸ್ಥಿತ ಕಲಶ ಕಲಶಪಾಣಿ । ಬಿಸಜಲೋಚನ ಅಶ್ವಿನೇಯ ವಂದ್ಯಾ । ಶಶಿಗರ್ಭ ಭೂರುಹ ಲತೆ ಪೊದೆ ತಾಪ ಓ । ಡಿಸುವ ವೌಷಧಿ ತುಲಸಿ ಜನಕ। ಅಸುರ ನಿರ್ಜರ ತತಿನೆರೆದು ಗಿರಿಯ ತಂದು । ಮಿಸುಕದಲೆ ಮಹೋದಧಿ ಮರ್ದಿಸಲಾಗಿ । ನಸುನಗುತ ಪುಟ್ಟಿದೆ ಪೀಯೂಷ ಘಟ ಧರಿಸಿ । ಅಸಮ ದೈವನೆ ನಿನ್ನ ಮಹಿಮೆಗೆ ನಮೋ । ಬಿಸಜ ಸಂಭವ ರುದ್ರ ಮೊದಲಾದ ದೇವತಾ । ಋಷಿನಿಕರ ನಿನ್ನ ಕೊಂಡಾಡುವರೊ । ದಶದಿಶದೊಳು ಮೆರೆವ ವಿಜಯ ವಿಠ್ಠಲಭಿಷ್ಕಾ। ಅಸು ಇಂದ್ರಿಯಂಗಳ ರೋಗ ನಿವಾರಣ ॥ ೩॥

....ಅಟ್ಟತಾಳ....

ಶರಣು ಶರಣು ಧನ್ವಂತರಿ ತಮೋಗುಣನಾಶಾ । ಶರಣು ಆರ್ತಜನ ಪರಿಪಾಲಕ ದೇವಾ। ತರುವೆ ಭವ ತಾಪಹರಣ ದಿತಿಸುತ । ಹರಣ ಮೋಹಕ ಲೀಲಾ ಪರಮಪೂರ್ಣ ಬ್ರಹ್ಮ । ಬ್ರಹ್ಮ ಉದ್ಧಾರಕ ಉರುಪರಾಕ್ರಮ । ಉರುಪರಾಕ್ರಮ ಉರಗಶಾಯಿ । ವರಕಿರೀಟ ಮಹಾಮಣಿ ಕುಂಡಲಕರ್ಣ। ಮಿರುಗುವ ಹಸ್ತ ಕಂಕಣ ಹಾರಪದಕ ತಾಂ - । ಬರ ಕಾಂಚಿ ಪೀತಾಂಬರ ಚರಣಭೂಷಾ । ಸಿರಿವತ್ಸಲಾಂಛನ ವಿಜಯ ವಿಟ್ಠಲರೇಯಾ । ತರುಣಗಾತರ ಜ್ಞಾನ ಮುದ್ರಾಂಕಿತ ಹಸ್ತಾ ॥ ೪॥

....ಆದಿತಾಳ....

ಏಳುವಾಗಲಿ ಮತ್ತೆ ತಿರುಗಿ ತಿರುಗುತಲಿ । ಬೀಳುವಾಗಲಿ ನಿಂತು ಕುಳಿತಿರುವಾಗಲಿ। ಹೇಳುವಾಗಲಿ ಮಾತು ಕೇಳುವಾಗಲಿ ಕರೆದು । ಪೇಳುವಾಗಲಿ ಪೋಗಿ ಸತ್ಕರ್ಮ ಮಾಡುವಾಗ। ಬಾಳುವಾಗಲಿ ಭ ೀಜನ ನಾನಾ ಷಡ್ರಸ ಸಂ। ಮ್ಮೇಳವಾಗಲಿ ಮೇಲು ಪುತ್ರಾದಿ ಒಡೆಯೊಡನೆ। ಖೇಳವಾಗಿ ಮನುಜ ಮರ್ಯಾದೆ ನಿನ್ನಯ । ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು ಒಮ್ಮೆ। ಕಾಲ ಅಕಾಲದಲ್ಲಿ ಸ್ಮರಿಸಿದರೆ ಅವಗೆ । ವೇಳ್ಯ ವೇಳ್ಯಗೆ ಬಾಹ ಭವಬೀಜ ಪರಿಹಾರ । ನೀಲಮೇಘಶ್ಯಾಮ ವಿಜಯ ವಿಠ್ಠಲರೇಯಾ । ವಾಲಗ ಕೊಡುವನು ಮುಕ್ತರ ಸಂಗದಲ್ಲಿ॥೫॥

....ಜತೆ....

ಧಂ ಧನ್ವಂತರಿ ಎಂದು ಪ್ರಣವಪೂರ್ವಕದಿಂದ । ವಂದಿಸಿ ನೆನೆಯಲು ವಿಜಯವಿಠ್ಠಲ ವೊಲಿವಾ॥೬॥

## ೩) ಶ್ರೀಕಪಿಲದೇವರ ಸ್ತೋತ್ರ ಸುಳಾದಿ

**ರಾಗ - ತೋಡಿ** **ಧ್ರುವತಾಳ**

ಸಿದ್ಧಿದಾಯಕ ಶಿಷ್ಯಜನ ಪರಿಪಾಲ ಪರಮಾ । ಶುದ್ಧಾತ್ಮ ಸುಗುಣಸಾಂದ್ರ ಸುಖವಾರಿಧಿ। ನಿದ್ರಾರಹಿತ ನಿದ್ರಾರಮಣ ನಿರ್ವಿಕಾರ । ಚಿದ್ದೇಹ ಸರ್ವಕಾಲ ಸುಂದರಸಾರ । ಪದ್ಮಸಂಭವ ಬಲಿ ಪ್ರಕ್ಷಾಲಿತ ಪಾದ ಮಹಾ । ಹೃದ್ರೋಗನಾಶ ವೈಕುಂಠವಾಸ । ವಿದ್ಯಾತೀತ ವಿಶ್ವನಾಟಕ ನಾರಾಯಣ । ವಿದ್ಯ ಉದ್ಧಾರಕೆ ಉದಧಿ ಸದನಾ। ಸಿದ್ಧಾದಿ ವಿನುತ ಸಂತತ ಪಾತಾಳವಾಸಿ । ಬುದ್ಧಿ ವಿಶಾಲ ಮಹಿಮ ಪಾಪಹಾರಿ। ಖದ್ಯೋತವರ್ಣ ಸಕಲ ವ್ಯಾಪ್ತ ಆಕಾಶ ಅಮಿತ । ಬದ್ಧ ವಿಚ್ಛೇದ ನಾನಾ ರೂಪಾತ್ಮಕಾ। ಅದ್ವೈತಕಾಯಾ ಮಾಯಾರಮಣ ರಾಜೀವ ನೇತ್ರಾ । ಅದ್ವಯ ಅನಾದಿ ಪುರುಷ ಚಿತ್ರ। ಕರ್ದಮ ಮುನಿಸೂನು ವಿಜಯ ವಿಠ್ಠಲ ಕಪಿಲ। ನಿರ್ದೋಷಕರುಣಾಬ್ಧಿ ಸರ್ವರಾಧಾರಿ ॥೧॥

....ಮಟ್ಟತಾಳ....

ಆದಿಮನ್ವಂತರದಿ ಜನಿಸಿದ ಮಹದೈವ । ಆದಿಪೂರಬೊಮ್ಮ ಬೊಮ್ಮ ನಯ್ಯ ಜೀಯಾ। ಸಾಧು ಜನರ ಪ್ರಿಯಾ ಸಂತತ ಮುನಿತಿಲಕಾ । ಬೋಧ ಶರೀರ ಭಕುತರ ಮನೋಹರ ಹರಿ । ಮಾಧವ ಸಿರಿ ವಿಜಯ ವಿಠ್ಠಲ ವಿಮಲೇಶಾ । ಮೋದ ಮತಿಯ ಕೊಡುವ ಕಪಿಲ ಭಗವನ್ಮೂರ್ತಿ॥೨॥

....ತ್ರಿವಿಡಿತಾಳ....

ಘನಮಹಿಮ ಗೌಣಾಂಡದೊಳಗೆ ಲೀಲೆಯಿಂದ । ಜನಿಸಿ ಮೆರೆದೆ ಬಿಂದು ಸರೋವರದಲ್ಲಿ । ಮಿನುಗುವ ದ್ವಯ ಹಸ್ತ ಅಪ್ರಾಕೃತ ಕಾಯ । ಇನನಂತೆ ಒಪ್ಪುವ ಶಿರೋರುಹವೋ । ಕನಕ ಪುತ್ಥಳಿಯಂತೆ ಕಾಂತಿ ತ್ರಿಭುವನಕ್ಕೆ । ಅನವರತ ತುಂಬಿ ಸೂಸುತಲಿದಕೋ । ಜನನಿ ದೇವಹೂತಿಗೆ ಉಪದೇಶವನು ಮಾಡಿ । ಗುಣ ಮೊದಲಾದ ತತ್ವವ ತಿಳಿಸಿದೆ । ತನುವಿನೊಳಗೆ ನೀನೆ ತಿಳಿದು ತಿಳಿದೆ ನಿತ್ಯ । ಜನರನ್ನು ಪಾಲಿಸುವ ಕಪಿಲಾಖ್ಯನೆ। ಅನುದಿನ ನಿನ್ನ ಧ್ಯಾನವ ಮಾಡಿ ಮಣಿಯಿಂದ । ಎಣಿಸುವ ಸುಜನಕ್ಕೆ ಜ್ಞಾನ ಕೊಡುವೆ । ಎಣೆಗಾಣೆ ನಿನ್ನ ಲೋಚನದ ಶಕ್ತಿಗೆ ಸಗರ । ಜನಪ ನಂದನರನ್ನು ಭಂಗಿಸಿದೆ । ಅನುಮಾನವಿದಕಿಲ್ಲ ನಿನ್ನ ನಂಬಿದ ಮೂಢ । ಮನುಜನಿಗೆ ಮಹಪದವಿ ಬರುವದಯ್ಯ । ಮುನಿಕುಲೋತ್ತಮ ಕಪಿಲ ವಿಜಯ ವಿಠ್ಠಲರೇಯ । ಎನಗೆ ಯೋಗ ಮಾರ್ಗವನು ತೋರೊ ತವಕದಿಂದ ॥ ೩॥

....ಅಟ್ಟತಾಳ....

ಕಪಿಲ ಕಪಿಲಯೆಂದು ಪ್ರಾತಃಕಾಲದಲೆದ್ದು । ಸಪುತ ಸಾರಿಗೆಯಲಿ ನುಡಿದ ಮಾನವನಿಗೆ। ಅಪಜಯ ಮೊದಲಾದ ಕ್ಲೇಶಗಳೊಂದಿಲ್ಲಾ । ಅಪರಿಮಿತ ಸೌಖ್ಯ ಅವನ ಕುಲಕೋಟಿಗೆ । ಗುಪುತ ನಾಮವಿದು ಮನದೊಳಗಿಡುವುದು । ಕಪಟ ಜೀವರು ಈತನು ಒಬ್ಬ ಋಷಿಯೆಂದು। ತಪಿಸುವರು ಕಾಣೋ ನಿತ್ಯ ನರಕದಲ್ಲಿ। ಕೃಪಣ ವತ್ಸಲ ನಮ್ಮ ವಿಜಯ ವಿಠ್ಠಲರೇಯ । ಕಪಿಲಾವತಾರ ಬಲ್ಲವಗೆ ಬಲು ಸುಲಭ ॥ ೪॥

....ಆದಿತಾಳ....

ಬಲ ಹಸ್ತದಲ್ಲಿ ಯಜ್ಞಶಾಲೆಯಲ್ಲಿ ಕಂ । ಗಳ ಕಟ್ಟಿನಲ್ಲಿ ಹೃದಯಸ್ಥಾನ ನಾಭಿಯಲ್ಲಿ। ಜಲಧಿ ಗಂಗಾ ಸಂಗಮದಲ್ಲಿ ಗಮನದಲ್ಲಿ । ತುಲಸಿ ಪತ್ರದಲ್ಲಿ ತುರಗ ತುರುವಿನಲ್ಲಿ । ಮಲಗುವ ಮನೆಯಲ್ಲಿ ನೈವೇದ್ಯ ಸಮಯದಲ್ಲಿ । ಬಲು ಕರ್ಮ ಬಂಧಗಳು ಮೋಚಕವಾಗುವಲ್ಲಿ । ಚಲುವನಾದವನಲ್ಲಿ ವಿದ್ಯೆ ಪೇಳುವನಲ್ಲಿ । ಫಲದಲ್ಲಿ ಪ್ರತಿಕೂಲವಿಲ್ಲದ ಸ್ಥಳದಲ್ಲಿ । ಬೆಳೆದ ದರ್ಭಗಳಲ್ಲಿ ಅಗ್ನಿಯಲ್ಲಿ ಹರಿವ । ಜಲದಲ್ಲಿ ಜಾಂಬುದ ನದಿಯಲ್ಲಿ ಶ್ಲೋಕದಲ್ಲಿ । ಬಲಿಮುಖ ಬಳಗದಲ್ಲಿ ಆಚಾರಶೀಲನಲ್ಲಿ । ಘಳಿಗೆ ಆರಂಭದಲ್ಲಿ ಪಶ್ಚಿಮ ಭಾಗದಲ್ಲಿ । ಪೊಳೆವ ಮಿಂಚಿನಲ್ಲಿ ಬಂಗಾರದಲ್ಲಿ ಇನಿತು। ಕಾಲ ಕಾಲಕ್ಕೆ ಬಿಡದೆ ಸ್ಮರಿಸು ಕಪಿಲ ಪರಮಾತ್ಮನ್ನ । ಗೆಲವುಂಟು ನಿನಗೆಲವೊ ಸಂಸಾರದಿಂದ ವೇಗ । ಕಲಿಯುಗದೊಳಗಿದೆ ಕೊಂಡಾಡಿದವರಿಗೆ । ಖಳರ ಅಂಜಿಕೆಯಿಲ್ಲ ನಿಂದಲ್ಲೆ ಶುಭಯೋಗ । ಬಲವೈರಿನುತ ನಮ್ಮ ವಿಜಯ ವಿಠ್ಠಲರೇಯಾ । ಇಳೆಯೊಳಗೆ ಕಪಿಲಾವತಾರನಾಗಿ ನಮ್ಮ ಭಾರವಹಿಸಿದ ॥ ೫॥

....ಜತೆ....

ತಮ ಪರಿಚ್ಛೇದ ಈತನ ಸ್ಮರಣೆ ನೋಡು ಹೃ - । ತ್ಕಮಲದೊಳಗೆ ವಿಜಯ ವಿಠ್ಠಲನ್ನ ಚರಣಾಬ್ಜಾ ॥ ೬॥

## ೪) ಶ್ರೀದುರ್ಗಾದೇವೀ ಸ್ತೋತ್ರ ಸುಳಾದಿ

....ಧ್ರುವತಾಳ....

ದುರ್ಗಾ ದುರ್ಗೆಯೆ ಮಹದುಷ್ಟಜನ ಸಂಹಾರೆ । ದುರ್ಗಾಂತರ್ಗತ ದುರ್ಗೆ ದುರ್ಲಭೆ ಸುಲಭೆ । ದುರ್ಗಮವಾಗಿದೆ ನಿನ್ನ ಮಹಿಮೆ ಬೊಮ್ಮ । ಭರ್ಗಾದಿಗಳಿಗೆಲ್ಲ ಗುಣಿಸಿದರೂ । ಸ್ವರ್ಗ ಭೂಮಿ ಪಾತಾಳ ವ್ಯಾಪುತ ದೇವಿ । ವರ್ಗಕ್ಕೆ ಮೀರಿದ ಬಲು ಸುಂದರಿ । ದುರ್ಗುಣದವರ ಬಾಧೆ ಬಹಳವಾಗಿದೆ ತಾಯಿ। ದುರ್ಗತಿಹಾರೆ ನಾನು ಪೇಳುವದೇನು । ದುರ್ಗಂಧವಾಗಿದೆ ಸಂಸ್ಕೃತಿ ನೋಡಿದರೆ। ನಿರ್ಗಮ ನಾ ಕಾಣೆನಮ್ಮ ಮಂಗಳಾಂಗೆ । ದುರ್ಗೆ ಹೆ ದುರ್ಗೆ ಮಹಾ ದುರ್ಗೆ ಭೂದುರ್ಗೆ ವಿಷ್ನು । ದುರ್ಗೆ ದುರ್ಜಯ ದುರ್ಧರ್ಕ್ಷೆ ಶಕ್ತಿ । ದುರ್ಗಕಾನನ ಗಹನ ಪರ್ವತಘೋರ ಸರ್ಪ । ಗರ್ಗರ ಶಬ್ದ ವ್ಯಾಘ್ರ ಕರಡಿ ಮೃತ್ಯು । ವರ್ಗ ಭೂತ ಪ್ರೇತ ಪೈಶಾಚಿ ಮೊದಲಾದ । ದುರ್ಗಣ ಸಂಕಟ ಪ್ರಾಪ್ತವಾಗೆ। ದುರ್ಗಾದುರ್ಗೆ ಎಂದು ಉಚ್ಚ ಸ್ವರದಿಂದ । ನಿರ್ಗಳಿತನಾಗಿ ಒಮ್ಮೆ ಕೂಗಿದರೂ । ಸ್ವರ್ಗಾಪವರ್ಗದಲ್ಲಿ ಹರಿಯೊಡನೆ ಇದ್ದರೂ। ಸುರ್ಗಣ ಜಯ ಜಯವೆಂದು ಪೊಗಳುತಿರೆ । ಕರ್ಗಳಿಂದಲಿ ಎತ್ತಿ ಸಾಕುವ ಸಾಕ್ಷಿ ಭೂತೆ । ನಿರ್ಗುಡಿದಂತೆ ಲೋಕ ಲೀಲೆ ನಿನಗೆ । ಸ್ವರ್ಗಂಗಾಜನಕ ನಮ್ಮ ವಿಜಯ ವಿಠ್ಠಲನಂಘ್ರಿ। ದುರ್ಗಾಶ್ರಮ ಮಾಡಿ ಬದುಕುವಂತೆ ಮಾಡು ॥ ೧॥

....ಮಟ್ಟತಾಳ....

ಅರಿದರಾಂಕುಶ ಶಕ್ತಿ ಪರಶು ನೇಗಲಿಖಡ್ಗ । ಸರಸಿಜ ಗದೆ ಮುದ್ಗರ ಚಾಪ ಮಾರ್ಗಣ। ವರ ಅಭಯ ಮುಸಲ ಪರಿ ಪರಿ ಆಯುಧವ । ಧರಿಸಿ ಮೆರೆವ ಲಕುಮಿ ಸರಸಿಜ ಭವ

ರುದ್ರ। ಸರುವ ದೇವತೆಗಳ ಕರುಣಾಪಾಂಗದಲ್ಲಿ । ನಿರೀಕ್ಷಿಸಿ ಅವರವರ ಸ್ವರೂಪ ಸುಖಕೊಡುವ। ಸಿರಿಭೂಮಿ ದುರ್ಗಾ ಸರ್ವೋತ್ತಮ ನಮ್ಮ। ವಿಜಯ ವಿಠ್ಠಲನಂಘ್ರಿ । ಪರಮ ಭಕುತಿಯಿಂದ ಸ್ಮರಿಸುವ ಜಗಜ್ಜನನಿ ॥ ೨॥

....ತ್ರಿವಿಡಿತಾಳ....

ಸ್ತುತಿ ಮಾಡುವೆ ನಿನ್ನ ಕಾಳಿ ಮಹಾಕಾಳಿ ಉ । ನ್ನತ ಬಾಹು ಕರಾಳವದನೆ ಚಂದಿರೆ ಮುಖೆ । ಧೃತಿ ಶಾಂತಿ ಬಹುರೂಪೆ ರಾತ್ರಿ ರಾತ್ರಿ ಚರಣೆ । ಸ್ಥಿತಿಯೆ ನಿದ್ರಾಭದ್ರೆ ಭಕ್ತವತ್ಸಲೇ ಭವ್ಯೇ । ಚತುರಷ್ಟ ದ್ವಿಹಸ್ತೆ ಹಸ್ತಿ ಹಸ್ತಿಗಮನೆ ಅ -। ದ್ಭುತ ಪ್ರಬಲೆ ಪ್ರವಾಸೆ ದುರ್ಗಾರಣ್ಯವಾಸೆ। ಕ್ಷಿತಿಭಾರಹರಣೆ ಕ್ಷೀರಾಬ್ಧಿ ತನಯೆ ಸ । ದ್ಗತಿ ಪ್ರದಾತೆ ಮಾಯಾ ಶ್ರೀಯೆ ಇಂದಿರೆ ರಮೆ । ದಿತಿ ಜಾತೆ ನಿಗ್ರಹೆ ನಿರ್ಧೂತ ಕಲ್ಮಷೆ । ಪ್ರತಿಕೂಲ ಭೇದೆ ಪೂರ್ಣಬೋಧೆ ರೌದ್ರೇ । ಅತಿಶಯ ರಕ್ತಜಿಹ್ವಾಲೋಲೆ ಮಾಣಿಕ್ಯಮಾಲೆ । ಜಿತಕಾಮೆ ಜನನ ಮರಣ ರಹಿತ ಖ್ಯಾತೆ । ಘೃತ ಪಾತ್ರ ಪರಮಾನ್ನ ತಾಂಬೂಲ ಹಸ್ತೆ ಸು । ವ್ರತೆ ಪತಿವ್ರತೆ ತ್ರಿನೇತ್ರೆ ರಕ್ತಾಂಬರೆ । ಶತಪತ್ರನಯನೆ ನಿರುತಕನ್ಯೇ ಉದಯಾರ್ಕ । ಶತಕೋಟಿ ಸನ್ನಿಭೆ ಹರಿಯಾಂಕಸಂಸ್ಥೆ । ಶ್ರುತಿತತಿನುತೆ ಶುಕ್ಲಶೋಣಿತ ರಹಿತೆ ಅ । ಪ್ರತಿಹತೆ ಸರ್ವದಾ ಸಂಚಾರಿಣಿ ಚತುರೆ। ಚತುರ ಕಪರ್ದಿಯೆ ಅಂಭ್ರಣಿ ಹ್ರೀ । ಉತ್ಪತ್ತಿ ಸ್ಥಿತಿಲಯ ಕರ್ತೆ ಶುಭ್ರಶೋಭನ ಮೂರ್ತೆ । ಪತಿತಪಾವನೆ ರನ್ನೆ ಸರ್ವೋಷಧಿಯಲಿದ್ದು ಹತಮಾಡು ಕಾಡುವ ರೋಗಗಳಿಂದ । ಕ್ಷಿತಿಯೊಳು ಸುಖದಲ್ಲಿ ಬಾಳುವ ಮತಿಯಿತ್ತು । ಸತತ ಕಾಯಲಿ ಬೇಕು ದುರ್ಗೇ ದುರ್ಗೇ । ಚ್ಯುತದೂರ ವಿಜಯ ವಿಠ್ಠಲರೇಯನ ಪ್ರೀಯೆ । ಕೃತಾಂಜಲಿಯಿಂದಲಿ ತಲೆಬಾಗಿ ನಮಿಸುವೆ ॥ ೩॥

....ಅಟ್ಟತಾಳ....

ಶ್ರೀಲಕ್ಷ್ಮೀಕಮಲಾ ಪದ್ಮಾಪದ್ಮಿನಿ ಕಮ । ಲಾಲಯೆ ರಮಾ ವೃಷಾಕಪಿ ಧನ್ಯಾವೃದ್ಧಿವಿ। ಶಾಲಾ ಯಜ್ಞಾ ಇಂದಿರೆ ಹಿರಣ್ಯ ಹರಿಣಿ । ವಾಲಯ ಸತ್ಯ ನಿತ್ಯಾನಂದ ತ್ರಯಿ ಸುಧಾ । ಶೀಲೆ ಸುಗಂಧ ಸುಂದರಿ ವಿದ್ಯಾ ಸುಶೀಲೆ । ಸುಲಕ್ಷಣದೇವಿ ನಾನಾ ರೂಪಂಗಳಿಂದ ಮೆರೆವ ಮೃತ್ಯುನಾಶೆ। ವಾಲಗಕೊಡು ಸಂತರ ಸನ್ನಿಧಿಯಲ್ಲಿ । ಕಾಲ ಕಾಲಕೆ ಎನ್ನ ಭಾರ ವಹಿಸುವ ತಾಯಿ । ಮೇಲು ಮೇಲು ನಿನ್ನ ಶಕ್ತಿ ಕೀರ್ತಿ ಬಲು । ಕೇಳಿ ಕೇಳಿ ಬಂದೆ ಕೇವಲ ಈ ಮನ । ಘಾಳಿಯಂತೆ ಪರದ್ರವ್ಯಕ್ಕೆ ಪೋಪುದು । ಏಳಲ ಮಾಡದೆ ಉದ್ಧಾರ ಮಾಡುವ । ಕೈಲಾಸಪುರದಲ್ಲಿ ಪೂಜೆಗೊಂಬ ದೇವಿ । ಮೂಲಪ್ರಕೃತಿ ಸರ್ವ ವರ್ಣಾಭಿಮಾನಿನಿ । ಪಾಲಸಾಗರಶಾಯಿ ವಿಜಯ ವಿಠ್ಠಲನೊಳು ಲೀಲೆ ಮಾಡುವ ನಾನಾಭರಣೆ ಭೂಷಣೆ ಪೂರ್ಣೆ॥೪॥

....ಆದಿತಾಳ....

ಗೋಪಿನಂದನೆ ಮುಕ್ತೆ ದೈತ್ಯ ಸಂತತಿಗೆ ಸಂ । ತಾಪವ ಕೊಡುತಿಪ್ಪ ಮಹಾಕಠೋರೆ ಉಗ್ರ । ರೂಪ ವೈಲಕ್ಷಣೆ ಅಜ್ಞಾನಕ್ಕಭಿಮಾನಿನಿ । ತಾಪತ್ರಯ ವಿನಾಶ ಓಂಕಾರೆ ಹೂಂಕಾರೆ । ಪಾಪಿ ಕಂಸಗೆ ಭಯ ತೋರಿದೆ ಬಾಲ ಲೀಲೆ । ವ್ಯಾಪುತ ಧರ್ಮಮಾರ್ಗ ಪ್ರೇರಣೆ ಅಪ್ರಾಕೃತೆ।

ಸ್ವಾಪದದಲಿ ನಿನ್ನ ನೆನೆಸಿದ ಶರಣನಿಗೆ । ಅಪಾರವಾಗಿದ್ದ ವಾರಿಧಿಯಂತೆ ಮಹಾ । ಆಪತ್ತು ಬಂದಿರಲು ಹಾರೆ ಪೋಗೋವು ಸಪ್ತ । ದ್ವೀಪ ನಾಯಿಕೆ ನರಕ ನಿರ್ಲೇಪೆ ತಮೋಗುಣದ । ವ್ಯಾಪಾರ ಮಾಡಿಸಿ ಭಕ್ತಜನಕೆ ಪುಣ್ಯ । ಸೋಪಾನ ಮಾಡಿಕೊಡುವ ಸೌಭಾಗ್ಯವಂತೆ ದುರ್ಗೆ। ಪ್ರಾಪುತವಾಗಿ ಎನ್ನ ಮನದಲಿ ನಿಂದು ದುಃಖ। ಕೂಪದಿಂದಲಿ ಎತ್ತಿ ಕಡೆ ಮಾಡು ಜನ್ಮಂಗಳ। ಸೌಪರ್ಣಿ ಮಿಗಿಲಾದ ಸತಿಯರು ನಿತ್ಯ ನಿನ್ನ । ಆಪಾದ ಮೌಳಿತನಕ ಭಜಿಸಿ ಭವ್ಯರಾದರು । ನಾ ಪೇಳುವದೇನು ಪಾಂಡವರ ಮನೋಭಿಷ್ಟೆ । ಈ ಪಂಚ ಭೌತಿಕದಲ್ಲಿ ಆವ ಸಾಧನೆ ಕಾಣೇ। ಶ್ರೀಪತಿ ನಾಮ ಒಂದೇ ಜಿಹ್ವಾಗ್ರದಲಿ ನೆನೆವ । ಔಪಾಸನ ಕೊಡು ರುದ್ರಾದಿಗಳ ವರದೇ । ತಾಪಸ ಜನಪ್ರೀಯ ವಿಜಯವಿಠ್ಠಲ ಮೂರ್ತಿಯ । ಶ್ರೀಪಾದಾರ್ಚನೆ ಮಾಳ್ಪ ಶ್ರೀಭೂದುರ್ಗಾ ವರ್ಣಾಶ್ರಯೆ ॥ ೫॥

....ಜತೆ....

ದುರ್ಗೆ ಹಾ ಹೇ ಹೋ ಹಾಃ ದುರ್ಗೆ ಮಂಗಳ ದುರ್ಗೆ । ದುರ್ಗತಿ ಕೊಡದಿರು ವಿಜಯವಿಠ್ಠಲಪ್ರೀಯೆ ॥ ೬॥

## ೫) ಶ್ರೀಮುಖ್ಯಪ್ರಾಣದೇವರ ಸ್ತೋತ್ರಸುಳಾದಿ

....ಧ್ರುವತಾಳ....

ಕೋತಿಯಾದರೆ ಬಿಡೆನೊ ಬಲುಪರಿ । ಭೂತಳದೊಳು ಪಾರ್ಯಾಡಲು ಬಿಡೆನೊ । ಖ್ಯಾತಿ ತೊರೆದು ಕಚ್ಚುಟ ಹಾಕಲು ಬಿಡೆನೊ । ಚಾತುರ ಬಿಟ್ಟರೆ ಬಿಡೆನೊ ನಾ ಬಿಡೆನೊ । ಭೀತಿ ಬೀರಲು ಬಿಡೆನೊ ಮಾತು । ಮಾತಿಗೆ ಹಲ್ಲು ತೋರಲು ಬಿಡೆನೊ । ಗಾತುರ ಗಗನಕ್ಕೆ ಬೆಳಿಸಲು ಬಿಡೆನೊ । ಕೋತಿ ಸೇವಿಸಲು ಬಿಡೆನೊ । ಆತುರದಲಿ ವನಧಿ ಲಂಘಿಸಿದರೆ ಬಿಡೆ । ಆ ತರುಗಳ ಕಿತ್ತಲು ಬಿಡೆನೊ। ವೀತಿಹೋತ್ರನ ಬಾಲದಲ್ಲಿ ಇಟ್ಟರೆ ಬಿಡೆ । ಜಾತಿ ಧರ್ಮವ ಬಿಟ್ಟರೆ ಬಿಡೆನೊ । ಈ ತೆರದಲ್ಲಿ ನೀನು ಇದ್ದರೇನಯ್ಯಾ ಬೆ । ನ್ನಾತು ಕೇಳುವದು ನಾ ಬಿಡಬಲ್ಲೆನೇ। ತಾತಾ ಇನ್ನಿದರಿಂದ ಆವದಾದರು ಬರಲಿ । ದಾತಾ ಮತ್ತಿದರಿಂದ ಏನಾದರಾಗಲಿ। ಸೋತು ಹಿಂದಗದು ಪೋದರೆ ನಿನ್ನ ಪದದಾಣೆ । ಯಾತಕ್ಕೆ ಸಂಶಯವೊ ಬಿಡೆನೊ ಬಿಡೆನೊ ಖ - । ದ್ಯೋತ ಮಂಡಲ ಪೋಗಲು ಬಿಡೆನೊ । ಮಾತು ಪೊಳ್ಳಾದರೆ ನೂರೊಂದು ಕುಲ ಎನ್ನ । ಗೋತ್ರದವರಿಗೆ ಗತಿ ಎಲ್ಲದೋ । ವಾತನ್ನ ಮಗವಾತ ಆತನ್ನ ರೂಪವ । ಗಾತುರದಲ್ಲಿ ನಿನ್ನೊಳಗೆ ತೋರೊ । ಜ್ಯೋತಿರ್ಮಯ ರೂಪ ವಿಜಯವಿಠ್ಠಲರೇಯನ । ದೂತ ದುರ್ಜನಹಾರಿ ದುಃಖನಿವಾರಿ ॥ ೧॥

....ಅಟ್ಟತಾಳ....

ಭೂತಳದೊಳಗೆ ಇದ್ದ ಭೂಮಿ ಸುತ್ತಲು ಬಿಡೆ । ಭೀತಿನಾಮವನ್ನು ಇಟ್ಟುಕೊಂಡರೆ ಬಿಡೆ । ನೀ ತಿರಿದುಂಡರೆ ಬಿಡೆನೊ ಬಿಡೆನೊ ಆ । ರಾತಿಗಳಿಗೆ ಸೋತು ಅಡವಿ ಸೇರಲು ಬಿಡೆನೊ । ಸೋತುಮತನ ಬಿಟ್ಟು ಅಡಿಗಿ ಮಾಡಲು ಬಿಡೆ । ಘಾತಕ ನೀನಾಗಿ ಕುಲವ ಕೊಂದರೆ ಬಿಡೆ ।

ಮಾತುಗಾರಿಕೆಯಿಂದ ಯತಿಯಾದರೆ ಬಿಡೆನೊ । ಪ್ರೀತಿ ಸಲಹೊ ಎನ್ನ ಸಾಕದಿದ್ದರೆ ನಿನ್ನ । ಪೂತರೆ ದ್ವಿತಿಯೇಶನೆಂದು ಪೊಗಳಲ್ಯಾಕೆ । ನಾಥನಲ್ಲ ನಿನ್ನ ಮಂತ್ರಿತನವೇನೋ । ಪೋತಭಾವ ನಮ್ಮ ವಿಜಯ ವಿಠ್ಠಲರೇಯನ । ಆತುಮನದೊಳಗಿಟ್ಟ ಭಾರತೀರಮಣಾ ॥ ೨॥

....ತ್ರಿವಿಡಿತಾಳ....

ಭಾರವೆ ನಾನೊಬ್ಬ ಶರಣಾ ನಿನಗಲ್ಲವೆ । ಬಾರಿ ಬಾರಿಗೆ ನಿನ್ನ ಅಹಿಕ ಸೌಖ್ಯ। ಮೀರದೆ ಕೊಡು ಎಂದು ಬೇಡಿ ಬ್ಯಾಸರಿಸು ವಿ । ಸ್ತಾರವಾಗಿ ಗುರುವೆ ಕಾಡಿದೆನೇ । ಧಾರುಣಿಯೊಳು ಪುಟ್ಟಿ ಪಾರುಗಾಣದ ಸಂ । ಸಾರಹೇಯವೆಂದು ಕೇಳಿ ನಿನಗೆ । ದೂರಿದೆನೊ ಇದು ದೈನ್ಯದಿಂದಲಿ ವಿ । ಚಾರಿಸಿದರೊಳಿತೆ ಇಲ್ಲದಿದ್ದರೆ ಲೇಸೆ । ಸಾರಿ ಸಾರಿಗೆ ನಿನ್ನ ಸೌಭಾಗ್ಯ ಚರಣವ । ತೋರಿಸಿ ಧನ್ಯನ್ನ ಮಾಡೆಂದೆನೊ । ಕಾರುಣ್ಯದಲಿ ಕೈಟಭಾರಿಪ್ರಿಯನೆ । ಆರನ್ನ ಕಾಣೆನೊ ನಿನ್ನ ವಿನಾ । ಕೀರುತಿ ಅಪಕೀರ್ತಿ ನಿನ್ನದಯ್ಯಾ । ವಾರಣಾವರವಂದ್ಯ ವಿಜಯ ವಿಠ್ಠಲರೇಯನ । ಸೇರುವ ಪರಿಮಾಡೊ ತಾರತಮ್ಯ ಭಾವದಲಿ ॥ ೩॥

....ಅಟ್ಟತಾಳ....

ನೀನು ಒಲಿಯೇ ಹರಿ ತಾನೆ ಒಲಿವನಯ್ಯಾ । ನೀನು ಮುನಿದಡೆ ಹರಿ ತಾನೆ ಮುನಿವನು। ಏನೆಂಬೆ ನಿನ್ನ ಮೇಲಣ ಹರಿಕಾರುಣ್ಯ । ನೀನಲ್ಲದಿಲ್ಲದ ಸ್ಥಾನದಿ ತಾನಿಲ್ಲಾ। ಪ್ರಾಣೇಶ ನಮೋ ನಮೋ ನಿನ್ನ ಪಾದಾಬ್ಜಕ್ಕೆ । ವಾನರೇಶ ಸುಗ್ರೀವ ವಾಲಿ ಸಾಕ್ಷಿ । ಜ್ಞಾನೇಶ ಭಕ್ತಿ ವಿರಕ್ತೇಶ ಅಮರೇಶ । ಆನಂದ ಆನಂದ ಮೂರುತಿ ಗುರುರಾಯ । ಪಾಣಿಗ್ರಹಣ ಮಾಡು ಪತಿತಪಾವನ ದೇವ । ಪ್ರಾಣೇಂದ್ರಿಯಗಳು ದೇಹ ಚೇತನ ಚಿತ್ತವ । ಧ್ಯಾನ ಮಾಡಲಿ ಸರ್ವ ನಿನ್ನಾಧೀನವೆಂದು। ನೀನಿರೆ- ಲಾವಾಗ ಅನ್ಯ ಜನರಿಗೆ ಮತ್ತಾನು । ಬಿನ್ನೈಪೇನೆ ದೇಹತ್ಯಾಗವಾಗಿ । ಶ್ರೀನಾಥ ವಿಜಯವಿಠ್ಠಲರೇಯನ ಪಾದ। ರೇಣು ಧರಿಸುವ ಸರ್ವರುದ್ಧಾರೀ ॥ ೪॥

....ಆದಿತಾಳ....

ಎಲ್ಲ ಕಾಲದಲ್ಲಿ ನಿನ್ನಲ್ಲಿ ಭಕ್ತಿ ಇಪ್ಪ । ಸಲ್ಲಲಿತ ಮನುಜರ ಪದಪಾಂಸಶಿರ। ದಲ್ಲಿ ಧರಿಸುವಂತೆ ಸಂತತ ಮತಿಯಿತ್ತು । ಬಲ್ಲಿದ ಕಾಮ ಬಿಡಿಸು ಬಲವಂತ ಗುಣವಂತ । ಬಲ್ಲವ ಭವದೂರ ನೀನೆ ಗತಿಯೊ ಜಗ । ದೊಲ್ಲಭ ಮುಂದಣ ವಾಣೇಶ ಸುಖಪೂರ್ಣ । ಅಲ್ಲದಿದ್ದರೆ ಎನ್ನ ಕಾವ ಕರುಣಿಯ ಕಾಣೆ । ಮಲ್ಲಮರ್ದನ ನಮ್ಮ ವಿಜಯವಿಠ್ಠಲರೇಯನ । ನಿಲ್ಲಿಸಿ ಮನದಲ್ಲಿ ಪ್ರತಿಕೂಲವಾಗಿದೆ॥೫॥

....ಜತೆ....

ಅನಂತ ಜನುಮಕ್ಕೆ ನೀನೆ ಗುರು ಎಂಬ । ಜ್ಞಾನವೇ ಕೊಡು ಜೀಯಾ ವಿಜಯವಿಠ್ಠಲದಾಸಾ॥೬॥

॥ ಇಲ್ಲಿಗೆ ಶ್ರೀ ವಿಜಯದಾಸ ಕೃತ ಪಂಚರತ್ನ ಸುಳಾದಿಗಳು ಮುಗಿದವು ॥

## ೨) ಕೇಶವಾದಿ ನಾಮಗಳು

ಈಶ ನಿನ್ನ ಚರಣ ಭಜನೆ । ಆಸೆಯಿಂದ ಮಾಡುವೆನು ।
ದೋಷರಾಶಿ ನಾಶಮಾಡು ಶ್ರೀಶಕೇಶವ ॥ ೧॥

ಶರಣು ಹೊಕ್ಕೆನಯ್ಯ ಎನ್ನ । ಮರಣ ಸಮಯದಲ್ಲಿ ನಿನ್ನ ।
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ॥ ೨॥

ಶೋಧಿಸೆನ್ನ ಭವದ ಕಲುಷ । ಬೋಧಿಸಯ್ಯ ಜ್ಞಾನವೆನಗೆ ।
ಬಾಧಿಸುವ ಯಮನ ಬಾಧೆ ಬಿಡಿಸೊ ಮಾಧವ ॥ ೩॥

ಹಿಂದನೇಕ ಯೋನಿಗಳಲಿ । ಬಂದು ಬಂದು ನೊಂದೆನಯ್ಯ ।
ಇಂದು ಭವದ ಬಂಧ ಬಿಡಿಸೊ ತಂದೆ ಗೋವಿಂದ ॥ ೪॥

ಭ್ರಷ್ಟನೆನಿಸಬೇಡ ಕೃಷ್ಣ । ಇಷ್ಟು ಮಾತ್ರ ಬೇಡಿಕೊಂಬೆ ।
ಶಿಷ್ಟರೊಡನೆ ಇಟ್ಟು ಕಷ್ಟ ಬಿಡಿಸೊ ವಿಷ್ಣುವೆ ॥ ೫॥

ಮದನನಯ್ಯ ನಿನ್ನ ಮಹಿಮೆ । ವದನದಲ್ಲಿ ನುಡಿಯುವಂತೆ ।
ಹೃದಯದಲ್ಲಿ ಹುದುಗಿಸಯ್ಯ ಮಧುಸೂದನ ॥ ೬॥

ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡಿ ।
ಭವದ ಬಾಧೆಯನ್ನು ಬಿಡಿಸೊ ಶ್ರೀತ್ರಿವಿಕ್ರಮ ॥ ೭॥

ಕಾಮಜನಕ ನಿನ್ನ ನಾಮ । ಪ್ರೇಮದಿಂದ ಪಾಡುವಂಥ ।
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ॥ ೮॥

ಮೊದಲು ನಿನ್ನ ಪಾದಪೂಜೆ । ಒದಗುವಂತೆ ಮಾಡೋ ಎನ್ನ ।
ಹೃದಯದೊಳಗೆ ಸದನ ಮಾಡು ಮುದದಿ ಶ್ರೀಧರ ॥ ೯॥

ಹುಸಿಯನಾಡಿ ಹೊಟ್ಟೆ ಹೊರೆವ । ವಿಷಯದಲ್ಲಿ ರಸಿಕನೆಂದು ।
ಹುಸಿಗೆ ಹಾಕದಿರೋ ಎನ್ನ ಹೃಷೀಕೇಶನೆ ॥ ೧೦॥

ಬಿದ್ದು ಭವದನೇಕ ಜನುಮ - । ಬದ್ಧನಾಗಿ ಕಲುಷದಿಂದ ।
ಗೆದ್ದು ಪೋಪ ಬುದ್ಧಿ ತೋರೊ ಪದ್ಮನಾಭನೇ ॥ ೧೧॥

ಕಾಮಕ್ರೋಧ ಬಿಡಿಸಿ ನಿನ್ನ । ನಾಮ ಜಿಹ್ವೆಯೊಳಗೆ ನುಡಿಸೊ ।
ಶ್ರೀಮಹಾನುಭಾವನಾದ ದಾಮೋದರ ॥ ೧೨॥

ಪಂಕಜಾಕ್ಷ ನೀನು ಎನ್ನ । ಮಂಕುಬುದ್ಧಿಯನ್ನು ಬಿಡಿಸಿ ।
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ ॥ ೧೩॥

ಏಸು ಜನ್ಮ ಬಂದರೇನು । ದಾಸನಲ್ಲವೇನು ನಾನು ।
ಘಾಸಿ ಮಾಡದಿರು ಎನ್ನ ವಾಸುದೇವನೆ ॥ ೧೪॥

ಬುದ್ಧಿಶೂನ್ಯವಾಗಿ ಎನ್ನ । ಬದ್ಧಕಾಯ ಕುಹಕಮನವ ।
ತಿದ್ದಿ ಹೃದಯ ಶುದ್ಧ ಮಾಡೋ ಪ್ರದ್ಯುಮ್ನನೆ ॥ ೧೫॥

ಜನನಿ ಜನಕ ನೀನೆ ಎಂದು । ನೆನೆವೆನಯ್ಯ ದೀನಬಂಧು ।
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ ॥ ೧೬॥

ಹರುಷದಿಂದ ನಿನ್ನ ನಾಮ । ಸ್ಮರಿಸುವಂತೆ ಮಾಡು ಕ್ಷೇಮ ।
ಇರಿಸು ಚರಣದಲ್ಲಿ ಪ್ರೇಮ ಪುರುಷೋತ್ತಮ ॥ ೧೭॥

ಸಾಧುಸಂಗ ಕೊಟ್ಟು ನಿನ್ನ । ಪಾದಭಜನೆ ಇತ್ತು ಎನ್ನ ।
ಭೇದ ಮಾಡಿ ನೋಡದಿರು ಹೇ ಅಧೋಕ್ಷಜ ॥ ೧೮॥

ಚಾರುಚರಣ ತೋರಿ ಎನಗೆ । ಪಾರುಗಾಣಿಸಯ್ಯ ಕೊನೆಗೆ ।
ಭಾರ ಹಾಕಿರುವೆ ನಿನಗೆ ನಾರಸಿಂಹನೆ ॥ ೧೯॥

ಸಂಚಿತಾದಿ ಪಾಪಗಳು । ಕಿಂಚಿತಾದಿ ಪೀಡೆಗಳು ।
ಮುಂಚಿತಾಗೆ ಕಳೆಯಬೇಕೊ ಸ್ವಾಮಿ ಅಚ್ಯುತ ॥೨೦॥

ಜ್ಞಾನ ಭಕುತಿ ಕೊಟ್ಟು ನಿನ್ನ । ಧ್ಯಾನದಲ್ಲಿ ನೆಟ್ಟು ಸದಾ ।
ಹೀನ ಬುದ್ಧಿ ಬಿಡಿಸೋ ಮುನ್ನ ಶ್ರೀಜನಾರ್ದನ ॥ ೨೧॥

ಜಪತಪಾನುಷ್ಠಾನವಿಲ್ಲ । ಕುಪಥಗಾಮಿಯಾದ ಎನ್ನ ।
ಕೃಪೆಯ ಮಾಡಿ ಕ್ಷಮಿಸಬೇಕು ಹೇ ಉಪೇಂದ್ರನೆ ॥ ೨೨॥

ಮೊರೆಯ ಇಡುವೆನಯ್ಯ ನಿನಗೆ । ಶರಧಿಶಯನ ಶುಭಮತಿಯ ।
ಇರಿಸೋ ಭಕ್ತರೊಳು ಪರಮಪುರುಷ ಶ್ರೀಹರೇ ॥ ೨೩॥

ಪುಟ್ಟಿಸಲೇ ಬೇಡ ಇನ್ನು । ಪುಟ್ಟಿಸಿದಕೆ ಪಾಲಿಸಿನ್ನು ।
ಇಷ್ಟುಮಾತ್ರ ಬೇಡಿಕೊಂಬೆ ಶ್ರೀಕೃಷ್ಣನೇ ॥ ೨೪॥

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವರಿಗೆ ।
ಅರ್ಥಿಯಿಂದ ಸಲಹುತಿರುವ ಕರ್ತೃಕೇಶವ ॥ ೨೫॥

ಮರೆಯದಲೆ ಹರಿಯ ನಾಮ । ಬರೆದು ಓದಿ ಪೇಳ್ದವರಿಗೆ ।
ಕರೆದು ಮುಕ್ತಿಕೊಡುವ ನೆಲೆಯಾದಿಕೇಶವ ॥ ೨೬॥

## ೩) ಸ್ತುತಿರತ್ನಮಾಲಾ

ಭಾನುಕೋಟಿ ತೇಜ, ಲಾವಣ್ಯಮೂರುತಿ, ಶ್ರೀವೆಂಕಟೇಶನೆ ನಮೋ ನಮೋ, ಶ್ರೀನಿವಾಸ ದಯಾನಿಧೆ ॥ ೧॥ ಶೇಷಾಚಲನಿವಾಸ, ದೋಷದೂರನೆ, ಭಕ್ತಪೋಷಕ, ಶ್ರೀಕಾಂತ ನಮೋ ನಮೋ,। ಶ್ರೀನಿವಾಸ ದಯಾನಿಧೆ ॥ ೨॥ ನೀಲಮೇಘಶ್ಯಾಮ, ಪಾಲಸಾಗರಶಯನ, ಶ್ರೀಲಕುಮೀಶನೆ ನಮೋ ನಮೋ,। ಶ್ರೀನಿವಾಸ ದಯಾನಿಧೆ ॥ ೩॥ ಖಗರಾಜನವಾಹನ, ಜಗದೊಡೆಯನೆ ನಿನ್ನ ಅಗಣಿತ ಮಹಿಮಗೆ ನಮೋ ನಮೋ, । ಶ್ರೀನಿವಾಸ ದಯಾನಿಧೆ ॥ ೪॥ ಶಂಖಚಕ್ರಧರ, ವೆಂಕಟರಮಣಾಕಳಂಕ ಮೂರುತಿ ನಮೋ ನಮೋ, । ಶ್ರೀನಿವಾಸ ದಯಾನಿಧೆ ॥ ೫॥ ಪನ್ನಂಗಶಯನನೆ, ನಿನ್ನಂಥ ದೇವರು ಇನ್ನುಂಟೆ ಅಜಭವಸುರವಂದ್ಯಾ । ಶ್ರೀನಿವಾಸ ದಯಾನಿಧೆ ॥ ೬॥ ಸೃಷ್ಟಿ ಇಲ್ಲದಲೆ ಒತ್ತಟ್ಟಿಗಿದ್ದವರನ್ನು ಸೃಷ್ಟಿಸಿ ಜೀವರ ಸಲಹುವಿ । ಶ್ರೀನಿವಾಸ ದಯಾನಿಧೆ ॥ ೭॥ ತನುಮನ ಕರಣಗಳನು ಕೊಟ್ಟು, ಅನಿಮಿಷರನು ಅಭಿಮಾನಿಗಳೆನಿಸಿದಿ । ಶ್ರೀನಿವಾಸ ದಯಾನಿಧೆ ॥ ೮॥ ಕ್ಷಣ ಬಿಡದಲೆ ಭಕ್ತ ಜನರ ರಕ್ಷಿಸುವಿ ದುರ್ಜನರಿಗೆ ದುರ್ಲಭನೆನಿಸುವಿ । ಶ್ರೀನಿವಾಸ ದಯಾನಿಧೆ ॥ ೯॥ ವೈಷಮ್ಯ ನೈರ್ಘೃಣ್ಯಲೇಶವಿಲ್ಲವರ ಉಪಾಸನದಂತೆ ಫಲಗಳೀವೆ । ಶ್ರೀನಿವಾಸ ದಯಾನಿಧೆ ॥೧೦॥ ಒಂದೇ ರೂಪದಿ, ಬಹುಮಂದಿಯೊಳಗಿದ್ದು ಬಂಧಮೋಕ್ಷಪ್ರದನೆನಿಸುವಿ । ಶ್ರೀನಿವಾಸ ದಯಾನಿಧೆ ॥ ೧೧॥ ಜ್ಞಾನಿಗಳರಸ, ಅಜ್ಞಾನಿಗಳೊಳು ನಾ ಅಜ್ಞಾನಿ, ಸುಜ್ಞಾನವ ಪಾಲಿಸೋ । ಶ್ರೀನಿವಾಸ ದಯಾನಿಧೆ ॥ ೧೨॥ ನಂಬಿದೆ ನಾ ನಿನ್ನ, ಬಿಂಬ ಮೂರುತಿ ಎನ್ನ ಡಿಂಭದೊಳಗೆ ಪೊಳಿ ಅನುದಿನದಿ। ಶ್ರೀನಿವಾಸ ದಯಾನಿಧೆ ॥ ೧೩॥ ನಿನ್ನ ಹೊರತು ಎನಗನ್ಯರಿಂದೇನಯ್ಯ, ಸ್ತುತಿಪೆ ಸುಖಕ್ಕೆಣೆಗಾಣೆನೋ ಶ್ರೀನಿವಾಸ ದಯಾನಿಧೆ ॥ ೧೪॥ ಘನಮಹಿಮ ಎನಗಿನ್ನೊಂದು ಬಯಕಿಲ್ಲ, ನಿನ್ನ ಧ್ಯಾನದೊಳಿಡು ಮರೆಯದೆ । ಶ್ರೀನಿವಾಸ ದಯಾನಿಧೆ ॥ ೧೫॥ ದುರ್ಜನಸಂಗ ವಿವರ್ಜ ಮಾಡಿಸಿ ಸಾಧುಸಜ್ಜನರ ಸೇವೆಯೊಳಗಿಡೊ। ಶ್ರೀನಿವಾಸ ದಯಾನಿಧೆ ॥ ೧೬॥ ಏಸು ಜನ್ಮಗಳೀಯೆ, ಲೇಸು ಚಿಂತೆಯು ಇಲ್ಲ, ದಾಸನೆಂದೆನಿಸು ದಾಸ್ಯವನಿತ್ತು,। ಶ್ರೀನಿವಾಸ-ದಯಾನಿಧೆ ॥ ೧೭॥ ಎನ್ನಪ್ಪ ಎನ್ನಣ್ಣ ಎನ್ನ ಕಾಯ್ವ ದೇವ, ನಿನ್ನ ವಿಸ್ಮರಣೆಯ ಕೊಡದಿರೋ। ಶ್ರೀನಿವಾಸ ದಯಾನಿಧೆ ॥ ೧೮॥ ಮನಸಿನ ಚಂಚಲವನು ತೊಲಗಿಸಿ, ಪಾದವನಜದಲ್ಲಿರಿಸಯ್ಯಾ ಜಿತವಾಗಿ । ಶ್ರೀನಿವಾಸ ದಯಾನಿಧೆ ॥ ೧೯॥ ಕರಣಗಳಿಂದ ಆಚರಿಸುವ ವಿಷಯ, ಶ್ರೀಹರಿ ನಿನ್ನ ಸೇವೆಯಾಗಲಿ ಸ್ವಾಮಿ । ಶ್ರೀನಿವಾಸ ದಯಾನಿಧೆ ॥ ೨೦॥ ಹರಿಯೇ ಸರ್ವೋತ್ತಮ, ಸುರರೆಲ್ಲ ದಾಸರು, ತರತಮಭೇದ ಜ್ಞಾನವನೀಯೋ । ಶ್ರೀನಿವಾಸ ದಯಾನಿಧೆ॥ ೨೧॥ ಗುರುಗಳ ಕರುಣ ಸುಸ್ಥಿರವಾಗಿದ್ದವರಿಗೆ, ಹರಿ ನಿನ್ನನುಗ್ರಹವಾಗುವದೊ । ಶ್ರೀನಿವಾಸ ದಯಾನಿಧೆ ॥ ೨೨॥ ನಿನ್ನವರಲ್ಲದೇ ಅನ್ಯರು ಬಲ್ಲರೆ ಘನ್ನಮತದ ಸುಖ ಸವಿಯನ್ನೊ । ಶ್ರೀನಿವಾಸ ದಯಾನಿಧೆ॥೨೩॥ ನಿನ್ನ ಚಿತ್ತಕೆ ಬಂದುದೆನ್ನ ಚಿತ್ತಕೆ ಬರಲಿ, ಅನ್ಯಥಾ ಬಯಕೆಯ ಕೊಡದಿರೊ। ಶ್ರೀನಿವಾಸ ದಯಾನಿಧೆ ॥ ೨೪॥ ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ ಪ್ರತಿದಿನ ಸುಖ ಅಭಿವೃದ್ಧಿಯೋ । ಶ್ರೀನಿವಾಸ ದಯಾನಿಧೆ॥ ೨೫॥ ಗುರುಗಳು ಮಧ್ವರಾಯರು ಮೂರು ಲೋಕಕ್ಕೆ ದೊರೆ ಗುರು ಶ್ರೀಶವಿಠ್ಠಲ ನಮೋ । ಶ್ರೀನಿವಾಸ ದಯಾನಿಧೆ ॥ ೨೬॥

## ೪) ಶ್ರೀಕೃಷ್ಣಸಾರಕಥಾ

ನೆನೆವೆನನುದಿನ ನೀಲನೀರದ ವರ್ಣನ ಗುಣರನ್ನನ ॥ ಪ॥ ಮುನಿಜನ ಪ್ರಿಯ ಮುದ್ದು ಉಡುಪಿಯ ರಂಗನ ದಯಾಪಾಂಗನ ॥ ಅ.ಪ.॥ ದೇವಕೀ ಜಠರೋದಯಾಂಬುಧಿ ಚಂದ್ರನ ಗುಣಸಾಂದ್ರನ । ಗೋವ್ರಜಕೆ ಘನ ಯಮುನೆ ದಾಟಿ ಬಂದನ ಅಲ್ಲಿ ನಿಂದನ । ಮಾವ ಕಳುಹಿದ ಮಾಯಾ ಶಟವಿಯ ಕೊಂದನ ಚಿದಾನಂದನ। ದೇವರಿಪುದೈತ್ಯೇಂದ್ರ ಶಕಟನ ಒದ್ದನ ಶ್ರುತಿಸಿದ್ಧನ ॥ ೧॥ ಗೋಕುಲದ ಗೋಪಿಯರ ವಂಚಕ ಚೋರನ ಬಹುಧೀರನ । ಅನೇಕ ನಾರಿಯರ್ವಸನವನು ಕದ್ದೊಯ್ದನ ತುರಗಾಯ್ದನ । ನಾಕಿಯರಿಗರಿಧೇನುಕ - ವತ್ಸವಿಘಾತನ ವಿಖ್ಯಾತನ । ಕಾಕುಮತಿ ಕಾಳಿಂಗನ ಫಣ ತುಳಿದನ ಅವಗೊಲಿದನ ॥ ೨॥ ಶೈಲವನು ಅಹಿಶಯನ ಬೆರಳಲಿ ಆಂತನ ಬಲವಂತನ। ಸೋಳಸಾವಿರ ಬಾಲೆಯರ ಕರ ಪಿಡಿದನ ಸುಧೆಗುಡಿದನ । ಬಾಲೆಭಾಮೆಯರೊಡನೆ ಜಲಕ್ರೀಡೆಗಿಳಿದನ ಅಲ್ಲಿ ನಲಿದನ । ಲೀಲೆಯಲಿ ಲಲನೆಯರಿಗಿಷ್ಟವ ಕೊಟ್ಟನ ಸಂತುಷ್ಟನ ॥ ೩॥ ಕ್ರೂರ ಬಕಕೇಶಿಗಳನೆಲ್ಲರ ಸೀಳ್ದನ ಸುರನಾಳ್ದನ । ಅಕ್ರೂರ ಕರೆಯಲು ಹರುಷದಿಂದಲಿ ಬಂದನ ಸುರವಂದ್ಯನ । ನಾರಿ ಕುಬುಜೆಗೆ ಭೂರಿ ಸಂತಸವಿತ್ತನ ಅತಿ ಶಕ್ತನ । ವಾರಣವನ್ನು ಕೆಡಹಿದ ಪ್ರತಿಮಲ್ಲನ ಅತಿ ಚೆಲ್ವನ ॥೪॥ ಸುಲಭದಿಂದಲಿ ಶಿವನ ಧನುವನು ಮುರಿದನ ನೆರೆಮೆರೆದನ । ಮಲೆತಮಲ್ಲರ ಕೆಡಹಿ ರಂಗದಿ ನಿಂತನ ಜಯವಂತನ ॥ ಖಳಕುಲಾಗ್ರಣಿ ಕಂಸನೆಂಬನ ಹೊಡೆದನ ಹುಡಿಗೆಡೆದನ । ಬಲದಿ ತಾಯ್ತಂದೆಯರ ಬಂಧನ ಕಡಿದನ ಯಶ ಪಡೆದನ ॥೫॥ ಭುವನ ಪಟ್ಟವನುಗ್ರಸೇನಗೆ ಕೊಟ್ಟನ ಅತಿ ಶ್ರೇಷ್ಠನ । ಯುವತಿಯರಿಗುದ್ಧವನ ಕಳುಹಿದ ಜಾಣನ ಸುಪ್ರವೀಣನ ॥ ವಿವಿಧ ವಿದ್ಯಾಕಲೆಗಳೆಲ್ಲವನರಿತನ ಶುಭಚರಿತನ । ಜವನ ಶಿಕ್ಷಿಸಿ ದ್ವಿಜನ ಕಂದನ ತಂದನ ಆನಂದನ ॥ ೬॥ ಕುಮತಿ ಖಳಮಾಗಧನ ಯುದ್ಧದಿ ಗೆದ್ದನ ಅನವದ್ಯನ । ದ್ಯುಮಣಿ ಸಮ ದ್ವಾರಕಿಯ ರಚಿಸಿದುದಾರನ ಗಂಭೀರನ । ಸುಮತಿಮುಚಕುಂದನೊದ್ದ ಯವನನ ಸುಟ್ಟನ ಅತಿ ಧಿಟ್ಟನ । ವಿಮಲ ಸುಚರಿತ್ರಾಷ್ಟಮಹಿಷಿಯರಾಳ್ದನ ನೆರೆಬಾಳ್ದನ ॥ ೭॥ ಮುರನರಕ ಮುಖ್ಯರನು ಚಕ್ರದಿ ತರಿದನ ಕರಿವರದನ । ಸುರತರುವ ಸತಿಗಾಗಿ ತಂದ ಸಮರ್ಥನ ಜಗತ್ಕರ್ತನ ॥ ದುರುಳ ಶಿಶುಪಾಲಾದಿ ದೈತ್ಯಸಂಹಾರನ ಬಹುಶೂರನ ॥ ಕುರುಕುಲಕೆ ಲಯವಿತ್ತ ಪಾಂಡವಪ್ರೀಯನ ಕವಿಗೇಯನ ॥೮॥ ಇಂತು ಸಲಹುವ ಇಳೆಸುಜನರನ ಕಾಂತನ ಸಿರಿವಂತನ । ಪಂಥವುಳ್ಳ ಪ್ರಸನ್ನ ಶ್ರೀಹಯವದನನ ಮುನಿಮಾನ್ಯನ ॥ ಸಂತಸದೊಳೀಸಾರ ಕಥೆಯನು ಕೇಳ್ವರ ನೆರೆ ಬಾಳ್ವರ । ಕಂತುಪಿತ ಕಾರುಣ್ಯದಿಂದಲಿ ಪೊರೆವನು ಸುಖಗರೆವನು ॥ ೯॥

## ೫) ಶ್ರೀ ನರಸಿಂಹ ಪ್ರಾದುರ್ಭಾವಕಥಾ

ನಾರಸಿಂಹನೆಂಬ ದೇವನ ನಂಬಿದಂಥ ನರರಿಗೆಲ್ಲ ವರವ ಕೊಡುವನು ॥ ಪ॥ ಆದಿಯಲ್ಲಿ ಲಕ್ಷ್ಮೀಸಹಿತದಿ ಮಲಗಿರಲು । ಬಂದರಾಗ ಸನತ್ಕುಮಾರರು । ಆಗ ದ್ವಾರಪಾಲಕರು ತಡೆಯಲಾಗ ಕೋಪದಿಂದ । ಮೂರು ಜನ್ಮದಲ್ಲಿ ನೀವು ಅಸುರರಾಗಿ ಪುಟ್ಟಿರೆಂದರು ॥ ೧॥ ದಿತಿಯ ಗರ್ಭದಲ್ಲಿ ಜನಿಸಿದಾ । ಹಿರಣ್ಯಾಕ್ಷ ಹಿರಣ್ಯಕಶಿಪುರೆಂಬ ಭ್ರಾತೃರು । ಪೃಥ್ವಿಯನ್ನು ಮುಳುಗಿಸಿದ ಕಾರಣಾದಿ ಶ್ರೀಹರಿಯು । ತೃತೀಯ ರೂಪದಿಂದ ಖಳನ ಕೊಂದು ಧರೆಯನುಳುಹಿದಾನು ॥ ೨॥ ಅನುಜನಾದ ಹಿರಣ್ಯಾಕ್ಷನ ಮರಣವನ್ನು ಕೇಳಿ ಆಗ ನಡೆದ

ತಪಸಿಗೆ । ಹರಿಯ ಮೇಲೆ ಸಿಟ್ಟಿನಿಂದ ಉಗ್ರ ತಪಸ್ಸನ್ನು ಮಾಡಿ । ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಬಂದನಾಗ ॥ ೩॥ ಇಂದ್ರಲೋಕ ಸೂರೆ ಮಾಡಿದಾ ಮೂರು ಲೋಕಕೆ । ಅಸುರ ತನ್ನ ಭಯವ ತೋರಿದಾ । ಗರ್ಭಿಣಿ ಕಯಾಧುವನ್ನು ಬ್ರಹ್ಮಪುತ್ರ ಬಂದು ಆಗ ದೈತ್ಯರಾಜ ಹಿರಣ್ಯಕಶಿಪುವಿಗೆ ಒಪ್ಪಿಸಿದಾ ॥ ೪॥ ನವಮಾಸಗಳು ತುಂಬಲು ಕಯಾದು ಆಗ ಪುತ್ರರತ್ನವನ್ನು ಪಡೆದಳು । ನಾಮ ಕರಣವನ್ನು ಮಾಡಿ ವಿಪ್ರರನ್ನು ಕರೆಸಿ ಬೇಗ । ದೈತ್ಯ ತನ್ನ ಸುತಗೆ ಪ್ರಹ್ಲಾದನೆಂದು ಕರೆಸಿದಾನು ॥ ೫॥ ಓಂ ನಮಃ ಶಿವಾಯ ಎನುತಲಿ ಅಸುರ ತನ್ನ ಸುತಗೆ ಬರೆದು ತೋರು ಎನ್ನಲು । ನರಹರಿಯ ನಾಮವನ್ನು ನಗು ನಗುತಲೆ ಬರೆಯುತಿರಲು । ಎಡದೊಡೆಯ ಮೇಲ ಶಿಶುವ ಧರೆಗೆ ಬಡೆದು ನೂಕಿದಾನು ॥ ೬॥ ಸುತ್ತ ಜನರ ಕರೆಸಿ ಬೇಗದಿ ಅಸುರ ತನ್ನ ಸುತನ ಕೊಲಿಸಬೇಕು ಎಂದಾಗ । ಅಟ್ಟ ಅಡಗಿಯೊಳು ವಿಷವನಿಟ್ಟು ಭೋಜನಂಗಳ ಮಾಡಿ । ಹರಿಯ ಸ್ಮರಣೆ ಮಾತ್ರದಿಂದ ಭುಂಜಿ ತಿಳಿದ ಜಟ್ಟಿಹಾಂಗ ॥ ೭॥ ಅಂಬುಧಿಯೊಳು ಮಗನ ಮಲಗಿಸಿ ಮೇಲೆ ದೊಡ್ಡ ಬೆಟ್ಟವನ್ನು ಇಟ್ಟು ಬನ್ನಿರೊ । ಹರಿಯ ಕೃಪೆಗೆ ವಶನಾದ ತರಳನೆಂದು ವರುಣದೇವ । ಮರಣ ಇಲ್ಲಧಾಂಗ ಮಾಡಿ ಮನೆಗೆ ಕೊಟ್ಟು ಕಳುಹಿದಾನು ॥೮॥ ಬೆಟ್ಟದಿಂದ ಕಟ್ಟಿ ಉರುಳಿಸಿ ಅಸುರ ತನ್ನ ಪಟ್ಟದಾನೆ ಕಾಲಿಲೆ ಮೆಟ್ಟಿಸಿ । ಹರಿವ ಒಲೆಯ ಮಾಡಿ ಸುಟ್ಟು ಹುಲಿಯ ಬೋನಿನಲ್ಲಿ ಇಟ್ಟು । ಯತ್ನವಿಲ್ಲದೇ ಸುತನ ಕೊಲ್ಲಲು ಶಕ್ತನಲ್ಲದೆ ಪೋದನಂತೆ ॥ ೯॥ ನಿನ್ನ ದೇವ ಇದ್ದ ಎಡೆಯನು ತೋರು ಎನುತ ಪಿತನು ತನ್ನ ಸುತನ ಕೋರಲು । ಎನ್ನ ದೇವ ಇಲ್ಲದಂಥ ಎಡೆಗಳುಂಟೆ ಲೋಕದಲ್ಲಿ । ಖಂಬದಲ್ಲಿ ಇರುವನೆಂದು ಕೈಮುಗಿದು ತೋರ್ದನಾಗ ॥ ೧೦॥ ವರಖಂಬವನು ಒದೆಯಲು ನರಹರಿಯು ಉಗ್ರಕೋಪವನ್ನು ತಾಳಿದಾ । ಖಟ ಖಟೆಂದು ಧ್ವನಿಯ ಮಾಡಿ ನಖಗಳಿಂದ ಪಿಡಿದು ಒತ್ತಿ । ಕರುಳ ಬಗೆದು ಮಾಲೆ ಹಾಕಿ ಕಂದ ಭಕ್ತನಪ್ಪಿಕೊಂಡ ॥ ೧೧॥ ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನು ಕರೆದರು । ಅಜನ ಪಡೆದ ದೇವಿ ಬಂದು ತೊಡೆಯ ಮೇಲೆ ಕುಳಿತಿರಲು । ಅಮರಪತಿಯರೆಲ್ಲ ನೋಡಿ ಅಂಜಬೇಡಿರೆಂದಭಯವಿತ್ತ ॥ ೧೨॥ ಲಕ್ಷ್ಮೀನಾರಸಿಂಹನ ಚರಿತೆಯ ಉದಯ ಕಾಲ ಪಠಿಸುವಂಥ ನರರಿಗೆಲ್ಲವೂ । ಪುತ್ರಸಂತಾನಂಗಳಿತ್ತು ಮತ್ತೆ ಬೇಡಿಧಾಂಗ ಕೊಟ್ಟು । ಭಕ್ತವತ್ಸಲ ಮುಕ್ತಿ ಕೊಡುವ ಪುರಂದರ ವಿಠ್ಠಲರಾಯ ॥೧೩॥ ನಾರಸಿಂಹನೆಂಬ ದೇವನ ನಂಬಿದಂಥ ನರರಿಗೆಲ್ಲ ವರವ ಕೊಡುವನು॥

## ೬) ಶ್ರೀ ಹಯವದನ ಪ್ರಾರ್ಥನಾ

**.... ಅಟ್ಟತಾಳ....**

**೪)** ಲಕ್ಷುಮಿನಾರಾಯಣ ಜಯ । ಲಕ್ಷುಮಿ ನಾರಾಯಣ ॥ ಪ ॥ ಸರ್ವಲೋಕ ಶರಣ್ಯ ಶಾಶ್ವತ । ಸರ್ವವಂದಿತಪಾದ ದಾನವ - । ಗರ್ವಹರಣ ಗದಾರಿಧಾರಣ। ಪರ್ವತಾರಿ ವರಪ್ರದ ॥ ೧॥ ನಂಬಿಕೊಂಡಿಹೆ ನಿನ್ನ ದಿವ್ಯ ಪ -। ದಾಂಬುಜಗಳನು ಸರ್ವಕಾಲದಿ । ಅಂಬುಜಾಲಯೆ ಸಹಿತ ಮನದೊಳ - । ಗಿಂಬುಗೊಳು ಕಮಲಾಂಬಕ ॥ ೨॥ ಆರುಸಂಖ್ಯೆಯ ಕಳ್ಳರೆನ್ನನು । ಗಾರು ಮಾಡುವರಾದರಿಂದತಿ । ಧೀರ ನಿನ್ನ ಪದಾರವಿಂದಕೆ । ದೂರುವೆನು

ರಘುವೀರನೆ ॥ ೩॥ ದುರ್ಮತಿಗಳಾದಸುರ ಹರಣಕೆ । ಭರ್ಮಗರ್ಭನು ಬಂದು ಸ್ತುತಿಸಲು । ಧರ್ಮ ಸಂಸ್ಥಾಪಿಸುತ ಬಹು ಶುಭ । ಕರ್ಮ ತೋರುವ ಕರುಣಿಯೆ ॥ ೪॥ ಸಪ್ತಋಷಿಗಳ ಕೂಡಿಕೊಂಡತಿ । ಭಕ್ತಿಯಿಂದಲಿ ನಿನ್ನ ಭಜಿಸಿದ । ಸತ್ಯವ್ರತನಿಗೆ ಸಕಲ ಶ್ರುತಿಗಳ । ತತ್ವ ತಿಳಿಸಿದ ಮತ್ಸ್ಯನೆ ॥ ೫॥ ಅಮರ ದೈತ್ಯರು ಅಂಬುನಿಧಿಯೊಳು । ಭ್ರಮಣಗೊಳಿಸಲು ಮುಳುಗಿಕೊಂಡಿಹ । ಅಮಿತಗುರು ಮಂದರವ ಧರಿಸುತ । ಅಮೃತರಸ ತಂದಿತ್ತನೆ ॥ ೬॥ ಧಾತ್ರಿಯನು ಕದ್ದೊಯ್ದ ಹಾಟಕ। ನೇತ್ರನ ತೆಗೆದು ಬಿಸುಟು ವಿ - । ಧಾತೃನಾಸಾಕುಹರಜನಿತ ಪ । ವಿತ್ರ ಯಜ್ಞವರಾಹನೆ ॥ ೭॥ ಹುಡುಗ ಪೇಳಿದ ಮಾತಿನಿಂದ । ಘುಡಿಘುಡಿಸಿ ಕಂಭದೊಳು ಬಂದ । ಸಿಡಿಲಿನಂತಿಹ ನಖದಿ ದೈತ್ಯನ । ಒಡಲ ಬಗೆದ ಕೋಪದಿಂದ ॥ ೮॥ ಮಾಣಿಯಂದದಿ ಪೋಗಿ ಭೂಮಿಯ । ದಾನ ಕೊಂಡಾ ನೆವನದಿ । ದಾನವಾಹೃತಧರೆಯ ಕಶ್ಯಪ । ಸೂನುಗಳಿಗೊಲಿದಿತ್ತನೆ ॥ ೯॥ ದುಷ್ಟ ಭೂಭುಜ ಭಾರದಿಂದಲಿ । ಕಷ್ಟಬಡುತಿಹ ಧರೆಯ ಕರುಣಾ । ದೃಷ್ಟಿಯಿಂದಲಿ ನೋಡಿ ಕೊಡಲಿಯ । ಪೆಟ್ಟಿನಿಂದಲಿ ನೃಪರ ಕಡಿದ ॥ ೧೦॥ ಸೀರಜಾವದನಾರವಿಂದ ಮ। ಹಾ ರಸಾಸ್ವಾದನ ಪರ ಕಪಿ । ವೀರನಿಗೆ ಸ್ವಾರಾಜ್ಯ ನೀಡಿದ। ಮಾರುತಿಗೆ ದಯ ಮಾಡಿದ ॥ ೧೧॥ ಬಾಲ ಲೀಲೆಯ ತೋರಿ ಗೋಪಿಕ । ಬಾಲೆಯರ ಕೂಡಾಡಿದ। ಖೂಳ ಕಂಸನ ಕೆಡಹಿ ದಾನವ । ಮೂಲಕಿತ್ತು ಬಿಸಾಡಿದ ॥ ೧೨॥ ದಾನವರ ಮೋಹಿಸುವೆನೆಂದನು । ಮಾನವಿಲ್ಲದೆ ನಗ್ನನಾಗಿ । ಹೀನ ಬುದ್ಧಿಯ ತಿಳಿಸಿ ತ್ರಿಪುರರ । ಹಾನಿಗೈಸಿದ ಬೌದ್ಧನೆ ॥ ೧೩॥ ಮಿಂಚನೊಡ್ಡಿದ ಮೇಘದಂದದ । ಪಂಚವರ್ಣದ ತುರುಗವೇರಿ। ಸಂಚರಿಸಿ ಮ್ಲೇಂಛರನ ಗೆಲಿದ ಶಿ । ಲೋಂಛ ಜೀವರ ವರದನೆ ॥ ೧೪॥ ಮಂಗಳಾಯತ ನಿನ್ನ ಕರುಣಾ । ಪಾಂಗ ಸುಧೆಯನು ಕರೆದು ಶಿರದಲಿ। ತುಂಗ ವಿಷಯ ತರಂಗ ತಪ್ಪಿಸು । ಲಿಂಗಭಂಗದ ಸಿಂಗನೆ ॥ ೧೫॥ ಮಂದಿರದಿ ನೀ ಬಂದು ರಕ್ಷಿಪೆ । ಯೆಂದು ಸಕಲಾನಂದಗೊಂಡಿಹೆ । ಇಂದಿರೇಶನೆ ಎಂದಿಗೂ ಈ । ಅಂದದಿಂದಲಿ ನಿಂದು ಸಲಹೋ ॥ ೧೬॥ ಕೇಶವಾದಿ ಚತುರ ವಿಂಶತಿ । ಮಾಸಗಳಧಿಷ್ಠಾನ ನಿನಗೆ । ಪರೇಶ ಕಡೆಯಲಿ ಬರುವ ಕಾರ್ತಿಕ ॥ ವಾಸಿ ದಾಮೋದರ ಹರೇ ॥೧೭॥ ಛಳಿಯೊಳೇಳುತ ಮುಳುಗಿ ಜಲದೊಳು । ಬಳಲಿ ಕರ್ಮವ ಮಾಡಲಾರೆ । ನಳಿನಜಾರ್ಚಿತ ನಿನ್ನ ಪಾದದ । ನೆಳಲ ನಂಬಿ ಸುಮ್ಮನಿರುವೆ ॥ ೧೮॥ ಅಖಿಳ ದೋಷನಿವಾರಣಾರ್ಭೂತ। ಸಕಲ ಸದ್ಗುಣ ಧಾರಣ । ಮಕರ ಕುಂಡಲಧಾರಿ ವೇಂಕಟ । ಶಿಖರಸ್ಥಿತ ಸುಖ ಕಾರಣ ॥ ೧೯॥ ಪಕ್ಷಿವಾಹನವಂತೆ ನಿನಗೆ । ಸರ್ಪ ನಿನ್ನ ಶಯನವಂತೆ । ಮುಕ್ಕಣ್ಣಾ ಮೊಮ್ಮಗನಂತೆ॥ ಮುದ್ದು ಮುಖದ ಚೆಲುವನಂತೆ ॥ ೨೦॥ ಕಡಲಮಗಳ ಗಂಡನಂತೆ । ಕರಡಿಮಗಳು ಮಡದಿಯಂತೆ । ಬೆಡಗಿನಿಂದ ಬಂದೆಯಂತೆ । ಮಧ್ವಮುನಿಗೆ ಒಲಿದೆಯಂತೆ ॥ ೨೧॥ ದೇವರ ದೇವನೆ ಬಾರೋ। ದೇವಕೀನಂದನ ಬಾರೋ । ದೇವೇಂದ್ರರನ್ನ ಸಲಹಿದ ದೇವ ಬಾ ನರಹರಿಯೆ ॥೨೨॥ ಕೊಲ್ಲು ಬೇಗ ಖಳರ ಶ್ರೀ । ನಲ್ಲ ಮಧ್ವವಲ್ಲಭ ಕೊಲ್ಲದಿದ್ದರೆ ನಿಲ್ಲರವರು । ಕಲಿಯುಗದ ಕಳ್ಳರು ॥ ೨೩॥ ಎಲ್ಲ ಕೂಡಿ ನಿನ್ನ ಪೂಜೆಗೆ । ಕಲ್ಲು ಹಾಕುತ ಲೀಹರು। ಚಲ್ಲುವ ಹಯವದನ ಅವರ। ಕೊಲ್ಲು ನಮ್ಮನು ಗೆಲ್ಲಿಸು ॥ ೨೪॥

ತಪಸಿಗೆ । ಹರಿಯ ಮೇಲೆ ಸಿಟ್ಟಿನಿಂದ ಉಗ್ರ ತಪಸ್ಸನ್ನು ಮಾಡಿ । ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಬಂದನಾಗ ॥ ೩॥ ಇಂದ್ರಲೋಕ ಸೂರೆ ಮಾಡಿದಾ ಮೂರು ಲೋಕಕೆ । ಅಸುರ ತನ್ನ ಭಯವ ತೋರಿದಾ । ಗರ್ಭಿಣಿ ಕಯಾಧುವನ್ನು ಬ್ರಹ್ಮಪುತ್ರ ಬಂದು ಆಗ ದೈತ್ಯರಾಜ ಹಿರಣ್ಯಕಶಿಪುವೀಗೆ ಒಪ್ಪಿಸೀದಾ ॥ ೪॥ ನವಮಾಸಗಳು ತುಂಬಲು ಕಯಾದು ಆಗ ಪುತ್ರರತ್ನವನ್ನು ಪಡೆದಳು । ನಾಮ ಕರಣವನ್ನು ಮಾಡಿ ವಿಪ್ರರನ್ನು ಕರೆಸಿ ಬೇಗ । ದೈತ್ಯ ತನ್ನ ಸುತಗೆ ಪ್ರಹ್ಲಾದನೆಂದು ಕರೆಸಿದಾನು ॥ ೫॥ ಓಂ ನಮಃ ಶಿವಾಯ ಎನುತಲಿ ಅಸುರ ತನ್ನ ಸುತಗೆ ಬರೆದು ತೋರು ಎನ್ನಲು । ನರಹರಿಯ ನಾಮವನ್ನು ನಗು ನಗುತಲೆ ಬರೆಯುತಿರಲು । ಎಡದೊಡೆಯ ಮೇಲ ಶಿಶುವ ಧರೆಗೆ ಬಡೆದು ನೂಕಿದಾನು ॥ ೬॥ ಸುತ್ತ ಜನರ ಕರೆಸಿ ಬೇಗದಿ ಅಸುರ ತನ್ನ ಸುತನ ಕೊಲಿಸಬೇಕು ಎಂದಾಗ । ಅಟ್ಟ ಅಡಗಿಯೊಳು ವಿಷವನಿಟ್ಟು ಭ ೀಜನಂಗಳ ಮಾಡಿ । ಹರಿಯ ಸ್ಮರಣೆ ಮಾತ್ರದಿಂದ ಭುಂಜಿ ತಿಳಿದ ಜಟ್ಟಿಹಾಂಗ ॥ ೭॥ ಅಂಬುಧಿಯೊಳು ಮಗನ ಮಲಗಿಸಿ ಮೇಲೆ ದೊಡ್ಡ ಬೆಟ್ಟವನ್ನು ಇಟ್ಟು ಬನ್ನಿರೊ । ಹರಿಯ ಕೃಪೆಗೆ ವಶನಾದ ತರಳನೆಂದು ವರುಣದೇವ । ಮರಣ ಇಲ್ಲಧಾಂಗ ಮಾಡಿ ಮನೆಗೆ ಕೊಟ್ಟು ಕಳುಹಿದಾನು ॥೮॥ ಬೆಟ್ಟದಿಂದ ಕಟ್ಟಿ ಉರುಳಿಸಿ ಅಸುರ ತನ್ನ ಪಟ್ಟದಾನೆ ಕಾಲಿಲೆ ಮೆಟ್ಟಿಸಿ । ಹರಿವ ಒಲೆಯ ಮಾಡಿ ಸುಟ್ಟು ಹುಲಿಯ ಬೋನಿನಲ್ಲಿ ಇಟ್ಟು । ಯತ್ನವಿಲ್ಲದೇ ಸುತನ ಕೊಲ್ಲಲು ಶಕ್ತನಲ್ಲದೆ ಪೋದನಂತೆ ॥ ೯॥ ನಿನ್ನ ದೇವ ಇದ್ದ ಎಡೆಯನು ತೋರು ಎನುತ ಪಿತನು ತನ್ನ ಸುತನ ಕೋರಲು । ಎನ್ನ ದೇವ ಇಲ್ಲದಂಥ ಎಡೆಗಳುಂಟೆ ಲೋಕದಲ್ಲಿ । ಖಂಬದಲ್ಲಿ ಇರುವನೆಂದು ಕೈಮುಗಿದು ತೋರ್ದನಾಗ ॥ ೧೦॥ ವರಖಂಬವನು ಒದೆಯಲು ನರಹರಿಯು ಉಗ್ರಕೋಪವನ್ನು ತಾಳಿದಾ । ಖಟ ಖಟೆಂದು ಧ್ವನಿಯ ಮಾಡಿ ನಖಗಳಿಂದ ಪಿಡಿದು ಒತ್ತಿ । ಕರುಳ ಬಗೆದು ಮಾಲೆ ಹಾಕಿ ಕಂದ ಭಕ್ತನಪ್ಪಿಕೊಂಡ ॥ ೧೧॥ ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನು ಕರೆದರು । ಅಜನ ಪಡೆದ ದೇವಿ ಬಂದು ತೊಡೆಯ ಮೇಲೆ ಕುಳಿತಿರಲು । ಅಮರಪತಿಯರೆಲ್ಲ ನೋಡಿ ಅಂಜಬೇಡಿರೆಂದಭಯವಿತ್ತ ॥ ೧೨॥ ಲಕ್ಷ್ಮೀನಾರಸಿಂಹನ ಚರಿತೆಯ ಉದಯ ಕಾಲ ಪಠಿಸುವಂಥ ನರರಿಗೆಲ್ಲವೂ । ಪುತ್ರಸಂತಾನಂಗಳಿತ್ತು ಮತ್ತೆ ಬೇಡಿಧಾಂಗ ಕೊಟ್ಟು । ಭಕ್ತವತ್ಸಲ ಮುಕ್ತಿ ಕೊಡುವ ಪುರಂದರ ವಿಠ್ಠಲರಾಯ ॥೧೩॥ ನಾರಸಿಂಹನೆಂಬ ದೇವನ ನಂಬಿದಂಥ ನರರಿಗೆಲ್ಲ ವರವ ಕೊಡುವನು॥

## ೬) ಶ್ರೀ ಹಯವದನ ಪ್ರಾರ್ಥನಾ

.... ಅಟ್ಟತಾಳ....

**೪)** ಲಕ್ಷ್ಮಿನಾರಾಯಣ ಜಯ । ಲಕ್ಷ್ಮಿ ನಾರಾಯಣ ॥ ಪ ॥ ಸರ್ವಲೋಕ ಶರಣ್ಯ ಶಾಶ್ವತ । ಸರ್ವವಂದಿತಪಾದ ದಾನವ - । ಗರ್ವಹರಣ ಗದಾರಿಧಾರಣ। ಪರ್ವತಾರಿ ವರಪ್ರದ ॥ ೧॥ ನಂಬಿಕೊಂಡಿಹೆ ನಿನ್ನ ದಿವ್ಯ ಪ -। ದಾಂಬುಜಗಳನು ಸರ್ವಕಾಲದಿ । ಅಂಬುಜಾಲಯೆ ಸಹಿತ ಮನದೊಳ - । ಗಿಂಬುಗೊಳು ಕಮಲಾಂಬಕ ॥ ೨॥ ಆರುಸಂಖ್ಯೆಯ ಕಳ್ಳರೆನ್ನನು । ಗಾರು ಮಾಡುವರಾದರಿಂದತಿ । ಧೀರ ನಿನ್ನ ಪದಾರವಿಂದಕೆ । ದೂರುವೆನು

ರಘುವೀರನೆ ॥ ೩॥ ದುರ್ಮತಿಗಳಾದಸುರ ಹರಣಕೆ । ಭರ್ಮಗರ್ಭನು ಬಂದು ಸ್ತುತಿಸಲು । ಧರ್ಮ ಸಂಸ್ಥಾಪಿಸುತ ಬಹು ಶುಭ । ಕರ್ಮ ತೋರುವ ಕರುಣಿಯೆ ॥ ೪॥ ಸಪ್ತಋಷಿಗಳ ಕೂಡಿಕೊಂಡತಿ । ಭಕ್ತಿಯಿಂದಲಿ ನಿನ್ನ ಭಜಿಸಿದ । ಸತ್ಯವ್ರತನಿಗೆ ಸಕಲ ಶ್ರುತಿಗಳ । ತತ್ವ ತಿಳಿಸಿದ ಮತ್ಸ್ಯನೆ ॥ ೫॥ ಅಮರ ದೈತ್ಯರು ಅಂಬುನಿಧಿಯೊಳು । ಭ್ರಮಣಗೊಳಿಸಲು ಮುಳುಗಿಕೊಂಡಿಹ । ಅಮಿತಗುರು ಮಂದರವ ಧರಿಸುತ । ಅಮೃತರಸ ತಂದಿತ್ತನೆ ॥ ೬॥ ಧಾತ್ರಿಯನು ಕದ್ದೊಯ್ದ ಹಾಟಕ। ನೇತ್ರನ ತೆಗೆದು ಬಿಸುಟು ವಿ - । ಧಾತ್ರನಾಸಾಕುಹರಜನಿತ ಪ । ವಿತ್ರ ಯಜ್ಞವರಾಹನೆ ॥ ೭॥ ಹುಡುಗ ಪೇಳಿದ ಮಾತಿನಿಂದ । ಘುಡಿಘುಡಿಸಿ ಕಂಭದೊಳು ಬಂದ । ಸಿಡಿಲಿನಂತಿಹ ನಖದಿ ದೈತ್ಯನ । ಒಡಲ ಬಗೆದ ಕೋಪದಿಂದ ॥ ೮॥ ಮಾಣಿಯಂದದಿ ಪೋಗಿ ಭೂಮಿಯ । ದಾನ ಕೊಂಡಾ ನೆವನದಿ । ದಾನವಾಹೃತಧರೆಯ ಕಶ್ಯಪ । ಸೂನುಗಳಿಗೊಲಿದಿತ್ತನೆ ॥ ೯॥ ದುಷ್ಟ ಭೂಭುಜ ಭಾರದಿಂದಲಿ । ಕಷ್ಟಬಡುತಿಹ ಧರೆಯ ಕರುಣಾ । ದೃಷ್ಟಿಯಿಂದಲಿ ನೋಡಿ ಕೊಡಲಿಯ । ಪೆಟ್ಟಿನಿಂದಲಿ ನೃಪರ ಕಡಿದ ॥ ೧೦॥ ಸೀರಜಾವದನಾರವಿಂದ ಮ। ಹಾ ರಸಾಸ್ವಾದನ ಪರ ಕಪಿ । ವೀರನಿಗೆ ಸ್ವಾರಾಜ್ಯ ನೀಡಿದ। ಮಾರುತಿಗೆ ದಯ ಮಾಡಿದ ॥ ೧೧॥ ಬಾಲ ಲೀಲೆಯ ತೋರಿ ಗೋಪಿಕ । ಬಾಲೆಯರ ಕೂಡಾಡಿದ। ಖೂಳ ಕಂಸನ ಕೆಡಹಿ ದಾನವ । ಮೂಲಕಿತ್ತು ಬಿಸಾಡಿದ ॥ ೧೨॥ ದಾನವರ ಮೋಹಿಸುವೆನೆಂದನು । ಮಾನವಿಲ್ಲದೆ ನಗ್ನನಾಗಿ । ಹೀನ ಬುದ್ಧಿಯ ತಿಳಿಸಿ ತ್ರಿಪುರರ । ಹಾನಿಗೈಸಿದ ಬೌದ್ಧನೆ ॥ ೧೩॥ ಮಿಂಚನೊಡ್ಡಿದ ಮೇಘದಂದದ । ಪಂಚವರ್ಣದ ತುರುಗವೇರಿ। ಸಂಚರಿಸಿ ಮ್ಲೇಂಛರನ ಗೆಲಿದ ಶಿ । ಲೋಂಛ ಜೀವರ ವರದನೆ ॥ ೧೪॥ ಮಂಗಳಾಯತ ನಿನ್ನ ಕರುಣಾ । ಪಾಂಗ ಸುಧೆಯನು ಕರೆದು ಶಿರದಲಿ। ತುಂಗ ವಿಷಯ ತರಂಗ ತಪ್ಪಿಸು । ಲಿಂಗಭಂಗದ ಸಿಂಗನೆ ॥ ೧೫॥ ಮಂದಿರದಿ ನೀ ಬಂದು ರಕ್ಷಿಪೆ । ಯೆಂದು ಸಕಲಾನಂದಗೊಂಡಿಹೆ । ಇಂದಿರೇಶನೆ ಎಂದಿಗೂ ಈ । ಅಂದದಿಂದಲಿ ನಿಂದು ಸಲಹೋ ॥ ೧೬॥ ಕೇಶವಾದಿ ಚತುರ ವಿಂಶತಿ । ಮಾಸಗಳಧಿಷ್ಠಾನ ನಿನಗೆ । ಪರೇಶ ಕಡೆಯಲಿ ಬರುವ ಕಾರ್ತಿಕ ॥ ವಾಸಿ ದಾಮೋದರ ಹರೇ ॥೧೭॥ ಛಳಿಯೊಳೇಳುತ ಮುಳುಗಿ ಜಲದೊಳು । ಬಳಲಿ ಕರ್ಮವ ಮಾಡಲಾರೆ । ನಳಿನಜಾರ್ಚಿತ ನಿನ್ನ ಪಾದದ । ನೆಳಲ ನಂಬಿ ಸುಮ್ಮನಿರುವೆ ॥ ೧೮॥ ಅಖಿಳ ದೋಷನಿವಾರಣಾರ್ಭುತ। ಸಕಲ ಸದ್ಗುಣ ಧಾರಣ । ಮಕರ ಕುಂಡಲಧಾರಿ ವೇಂಕಟ । ಶಿಖರಸ್ಥಿತ ಸುಖ ಕಾರಣ ॥ ೧೯॥ ಪಕ್ಷಿವಾಹನವಂತೆ ನಿನಗೆ । ಸರ್ಪ ನಿನ್ನ ಶಯನವಂತೆ । ಮುಕ್ಕಣ್ಣಾ ಮೊಮ್ಮಗನಂತೆ॥ ಮುದ್ದು ಮುಖದ ಚೆಲುವನಂತೆ ॥ ೨೦॥ ಕಡಲಮಗಳ ಗಂಡನಂತೆ । ಕರಡಿಮಗಳು ಮಡದಿಯಂತೆ । ಬೆಡಗಿನಿಂದ ಬಂದೆಯಂತೆ । ಮಧ್ವಮುನಿಗೆ ಒಲಿದೆಯಂತೆ ॥ ೨೧॥ ದೇವರ ದೇವನೆ ಬಾರೋ। ದೇವಕೀನಂದನ ಬಾರೋ । ದೇವೇಂದ್ರರನ್ನ ಸಲಹಿದ ದೇವ ಬಾ ನರಹರಿಯೆ ॥೨೨॥ ಕೊಲ್ಲು ಬೇಗ ಖಳರ ಶ್ರೀ । ನಲ್ಲ ಮಧ್ವವಲ್ಲಭ ಕೊಲ್ಲದಿದ್ದರೆ ನಿಲ್ಲರವರು । ಕಲಿಯುಗದ ಕಳ್ಳರು ॥ ೨೩॥ ಎಲ್ಲ ಕೂಡಿ ನಿನ್ನ ಪೂಜೆಗೆ । ಕಲ್ಲು ಹಾಕುತ ಲೀಹರು। ಚಲ್ಲುವ ಹಯವದನ ಅವರ। ಕೊಲ್ಲು ನಮ್ಮನು ಗೆಲ್ಲಿಸು ॥ ೨೪॥

## ೭) ಶ್ರೀರುಕ್ಮಿಣೀವಿಲಾಸ ಸುವ್ವಾಲಿ

ಫಣಿರಾಜಶಯನ ರುಕ್ಮಿಣಿದೇವಿಯೊಡಗೂಡಿ ಮಣಿಮಂಚದ ಮೇಲೆ ಕುಳಿತಿರ್ದು ಸತಿಯೊಡನೆ ಅಣಕವಾಡಿದನು ಇನಿತೆಂದು ॥ ೧॥ ಹೇ ರಾಜಕನ್ನಿಕೆ ಭೂರಮಣ ನಾನಲ್ಲ ವಾರಿಧಿಯೊಳಗಿದ್ದು ಬದುಕುವ । ಬದುಕುವಗೆ ಮರುಳಾದೆ ನಾರದನ ನುಡಿಗೆ ನಳಿನಾಕ್ಷಿ ॥ ೨॥ ಶಿಶುಪಾಲ ಮೊದಲಾದ ವಸುಧೆಪಾಲರ ಬಿಟ್ಟು ಪಶುಪಾಲಗೊಲಿದೆ ಸುಕುಮಾರಿ । ಸುಕುಮಾರಿ ಎನಲು ಪರವಶಳಾದಳಾಗ ಮಹಲಕ್ಷ್ಮಿ ॥ ೩॥ ಈ ಮಾತ ಕೇಳಿ ಕೈಚಾಮರವನೀಡಾಡಿ ಭೂಮಿಗೊರಗಿದಳು ಭುಗಿಲೆಂದು । ಭುಗಿಲೆಂದು ಮಲಗಿದಾಕಾಮಿನಿಯ ಕಂಡ ಕಮಲಾಕ್ಷ ॥ ೪॥ ಕಂಗೆಟ್ಟಳೆಂದು ತನ್ನಂಗನೆಯ ಬಿಗಿದಪ್ಪಿ ಮುಂಗುರುಳು ತಿದ್ದಿ ಮುದ್ದಿಸಿ। ಮುದ್ದಿಸಿ ಮಾತಾಡ್ದ ಕಂಗಳಶ್ರುಗಳ ಒರಸುತ್ತ ॥ ೫॥ ಸಲಿಗೆ ಮಾತುಗಳ ಬಗೆ ತಿಳಿಯದಲೆ ಹೀಗೆ ಚಂಚಲವನೈದುವರೆ ಚಪಲಾಕ್ಷಿ । ಚಪಲಾಕ್ಷಿ ಏಳೆಂದು ಲಲನೆಯಳ ನಗಿಸಿ ನಗುತಿರ್ದ ॥ ೬॥ ಶ್ರೀದೇವಿ ನಿನ್ನೊಳು ವಿನೋದವನೆ ಮಾಡಲು ವಿಷಾದ ಪಡಲ್ಯಾಕೆ ಅನುದಿನ । ಅನುದಿನದಿ ಸ್ಮರಿಸುವರ ಕಾದು ಕೊಂಡಿಹೆನೆ ಬಳಿಯಲ್ಲಿ ॥ ೭॥ ಹಿಗ್ಗಿದಳು ಮನದಿ ಸೌಭಾಗ್ಯಭಾಮಿನಿಯು ಅಪವರ್ಗದ ನುಡಿಗೆ ಹರುಷದಿ। ಹರುಷದಿಂದಲಿ ಪಾದಯುಗ್ಮಕೆರಗಿದಳು ಇನಿತೆಂದು ॥ ೮॥ ಜಗದೇಕ ಮಾತೆ ಕೈಮುಗಿದು ಲಜ್ಜೆಯಲಾಗ ಮುಗುಳು ನಗೆಸೂಸಿ ಮಾತಾಡಿ । ಮಾತಾಡಿದಳು ಪತಿಯ ಮೊಗವ ನೋಡುತಲಿ ನಳಿನಾಕ್ಷಿ ॥ ೯॥ ಪರಿಪೂರ್ಣಕಾಮ ನೀ ಕರುಣದಿಂದೀಗ ಸ್ವೀಕರಿಸಿದೆಯೋ ಎನ್ನ ಸತಿಯೆಂದು । ಸತಿಯೆಂದಕಾರಣಾಕ್ಷರಳೆನಿಸಿಕೊಂಡೆ ಶ್ರುತಿಯಿಂದ ॥ ೧೦॥ ಭುವನಾಧಿಪತಿ ನೀನು ಅವಿಯೋಗಿ ನಿನಗಾನು ಅವಿವೇಕಿನೃಪರ ಪತಿಯೆಂದು । ಪತಿಯೆಂದು ಬಗೆವೇನೇ ಸವಿಮಾತಿದಲ್ಲ ಸರ್ವಜ್ಞ ॥ ೧೧॥ ಭಗವಂತ ನೀನು ದುರ್ಭಗದೇಹಗತರವರು ತ್ರಿಗುಣವರ್ಜಿತವು ತವ ರೂಪ । ತವ ರೂಪ ಗುಣಗಳನು ಪೊಗಳಲೆನ್ನಳವೆ ಪರಮಾತ್ಮ ॥ ೧೨॥ ಭಾನು ತನ್ನಯ ಕಿರಣಪಾಣಿಗಳ ದೆಸೆಯಿಂದ ಪಾನೀಯಜಗಳ ಅರಳಿಸಿ । ಅರಳಿಸಿ ಗಂಧವನಾಘ್ರಾಣಿಸಿದಂತೆ ಗ್ರಹಿಸಿದಿ ॥ ೧೩॥ ಬೈದವನ ಕುತ್ತಿಗೆಯ ಕೊಯ್ದು ಅಂಧಂತಮಸಿಗೊಯ್ದು ಹಾಕಿದೆಯೊ ಪರಿಪಂಥಿ । ಪರಿಪಂಥಿ ನೃಪರನ್ನು ಐದುವೆನೆ ನಿನ್ನ ಹೊರತಾಗಿ ॥ ೧೪॥ ನಿಮ್ಮನುಗ್ರಹದಿಂದ ಬ್ರಹ್ಮರುದ್ರಾದಿಗಳ ನಿರ್ಮಿಸಿ ಸಲಹಿ ಸಂಹಾರ । ಸಂಹಾರ ಮಾಡುವೆನು ದುರ್ಮದಾಂಧರನು ಬಗೆವೆನೆ ॥ ೧೫॥ ಮಂಜುಳೋಕ್ತಿಯ ಕೇಳಿ ಅಂಜಲೇಕೆಂದು ನವಕಂಜಲೋಚನೆಯ ಬಿಗಿದಪ್ಪಿ । ಬಿಗಿದಪ್ಪಿ ಪೇಳಿದ ಧನಂಜಯಪ್ರಿಯ ಸಥೆಯಿಂದ ॥ ೧೬॥ ನಿನಗೆ ಎನ್ನಲಿ ಭಕ್ತಿ ಎನಿತಿಹುದು ನಾ ಕಂಡೆ ಎನಗಿಹುದು ಕರುಣ ಎಂದೆಂದು । ಎಂದೆಂದು ಇಹುದಿದಕೆ ಅನುಮಾನವಿಲ್ಲ ವನಜಾಕ್ಷಿ ॥ ೧೭॥ ದೋಷವರ್ಜಿತರುಕ್ಮಿಣೀಶನ ವಿಲಾಸ ಸಂತೋಷದಲಿ ಕೇಳಿ ಪಠಿಸಿದ । ಪಠಿಸಿದಂಥ- ವರ ಅಭಿಲಾಷೆ ಪೂರೈಸಿ ಸಲಹುವ ॥ ೧೮॥ ನೀತಜನಕನು ಜಗನ್ನಾಥ ವಿಠಲ ಜಗನ್ಮಾತೆಯೆನಿಸುವಳು ಮಹಲಕ್ಷ್ಮೀ । ಮಹಲಕ್ಷ್ಮಿಸುತ ಬ್ರಹ್ಮಭ್ರಾತನೆನಿಸುವನು ಗುರುರಾಯ ॥ ೧೯॥

## ೮) ಶ್ರೀಮಧ್ವನಾಮ

ಜಯ ಜಯ ಜಗತ್ರಾಣ ಜಗದೊಳಗೆ ಸುತ್ರಾಣ । ಅಖಿಲ ಗುಣಸದ್ಧಾಮ ಮಧ್ವನಾಮಾ ॥ ಪ॥ ಆವ ಕಚ್ಛಪರೂಪದಿಂದಲ್ಯಂಡೋದಕದಿ । ಓವಿ ಧರಸಿಹ ಶೇಷಮೂರುತಿಯನು ॥ ಆವವನ ಬಳಿವಿಡಿದು ಹರಿಯ ಸುರರೈದುವರೋ । ಆ ವಾಯು ನಮ್ಮ ಕುಲಗುರುರಾಯನು॥೧॥ ಆ ವಾತನು ದೇಹದಿರೆ ಹರಿಯು ತಾ ನೆಲೆಸಿರುವ । ಆವಾತನು ತೊಲಗೆ ಹರಿ ತಾ ತೊಲಗುವ॥ ಆ ವಾತನು ದೇಹದೊಳ ಹೊರಗೆ ನಿಯಾಮಕನು । ಆ ವಾಯು ನಮ್ಮ ಕುಲ ಗುರುರಾಯನು॥೨॥ ಕರಣಾಭಿಮಾನಿ ದಿವಿಜರು ದೇಹವನು ಬಿಡಲು । ಕುರುಡ ಕಿವುಡನು ಮೂಕನೆಂದೆನಿಸುವ ॥ ಪರಮ ಮುಖ್ಯಪ್ರಾಣ ತೊಲಗಲಾ ದೇಹವನು । ಅರಿತು ಪೆಣನೆಂದು ಪೇಳ್ವರು ಬುಧಜನಾ ॥ ೩॥ ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ । ಪರತರನೆನಿಸಿ ನೇಮದಿ ನೆಲೆಸಿಹ॥ ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು । ಗುರುಕುಲತಿಲಕ ಮುಖ್ಯ ಪವಮಾನನು ॥ ೪॥

### ಶ್ರೀಹನುಮಂತದೇವರ ವರ್ಣನೆ

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು । ವಾತಸುತ ಹನುಮಂತ ನೆಂದೆನಿಸಿದ॥ ಪೋತಭಾವದಿ ತರಣಿಬಿಂಬಕ್ಕೆ ಲಂಘಿಸಿದ । ಈತಗೆಣೆ ಯಾರು ಮೂರ್ಲೋಕದೊಳಗೆ ॥ ೫॥ ತರಣಿಗಭಿಮುಖವಾಗಿ ಶಬ್ದಶಾಸ್ತ್ರವ ಪಠಿಸಿ । ಉರವಣಿಸಿ ಹಿಂದೆ ಮುಂದಾಗಿ ನಡೆದ ॥ ಪರಮ ಪವಮಾನಸುತ ಉದಯಾಸ್ತ ಶೈಲಗಳ । ಭರದಿ ಐದಿದ ಈತಗುಪಮೆಯುಂಟೆ ॥೬॥ ಅಖಿಲ ವೇದಗಳ ಸಾರವ ಧರಿಸಿ ಮುನ್ನ ತಾ । ನಿಖಿಳ ವ್ಯಾಕರಣ ಶಾಸ್ತ್ರವನು ಪೇಳೆ ॥ ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು । ಮುಖ್ಯಪ್ರಾಣನು ರಾಮನನುಕರಿಸಿದ ॥ ೭॥ ತರಣಿಸುತನನು ಕಾಯ್ದು ಶರಧಿಯನು ನೆರೆ ದಾಟಿ । ಧರಣಿಸುತೆಯಳ ಕಂಡು ದನುಜರೊಡನೆ॥ ಭರದಿ ರಣವನು ಮಾಡಿ ಗೆಲಿದು ದಿವ್ಯಾಸ್ತ್ರಗಳ । ಉರುಹಿ ಲಂಕೆಯಿಂ ಬಂದ ಹನುಮಂತನು॥೮॥ ಹರಿಗೆ ಚೂಡಾಮಣಿಯನಿತ್ತು (ರತ್ನವಿತ್ತು) ಹರಿಗಳ ಕೂಡಿ । ಶರಧಿಯನು ಕಟ್ಟಿ ಬಹು ರಕ್ಕಸರನು ॥ ಒರೆಸಿ ರಣದಲ್ಲಿ ದಶಶಿರನ ಹುಡಿಗುಟ್ಟಿ ತಾ । ಮೆರೆದ ಹನುಮಂತ ಬಲವಂತ ಧೀರಾ ॥೯॥ ಉರಗಬಂಧಕೆ ಸಿಲುಕಿ ಕಪಿವರರು ಮೈಮರೆಯೆ। ತರಣಿಕುಲತಿಲಕನಾಜ್ಞೆಯ ತಾಳಿ ತಾ । ಗಿರಿಸಹಿತ ಸಂಜೀವನವ ಕಿತ್ತಿ ತಂದಿತ್ತ । ಸುರನರರೊಳುಂಟೆ ಸರಿ ಹನುಮಂತಗೆ ॥ ೧೦॥ ವಿಜಯ ರಘುಪತಿಯೊಲಿಸಿ ಧರಣಿಸುತೆಯಳನೀತ। ಭಜಿಸಿ ಮೌಕ್ತಿಕದ ಹಾರವನು ಪಡೆದ ॥ ಅಜಪದವಿಯನು ರಾಮ ಕೊಡಬರಲು ಹನುಮಂತ । ನಿಜಭಕುತಿಯನೆ ಬೇಡಿ ವರವ ಪಡೆದ ॥ ೧೧॥

### ಶ್ರೀಭೀಮಸೇನದೇವರ ವರ್ಣನೆ

ಆ ಮಾರುತನೆ ಭೀಮನೆನಿಸಿ ದ್ವಾಪರ ಯುಗದಿ । ಸೋಮ ಕುಲದಲಿ ಜನಿಸೆ ಪಾರ್ಥರೊಡನೆ ॥ ಭೀಮ ವಿಕ್ರಮ ರಕ್ಕಸರನು ಮುರಿದಿಕ್ಕಿದ । ಆ ಮಹಿಮ ನಮ್ಮ ಕುಲಗುರುರಾಯನು ॥ ೧೨॥ ಕರದಿಂದ ಶಿಶುಭಾವನಾದ ಭೀಮನ ಬಿಡಲು । ಗಿರಿಯೊಡೆದು

ಶತಶೃಂಗವೆಂದೆನಿಸಿತು ॥ ಹರಿಗಳನು ಹರಿಗಳಿಂ ಕರಿಗಳನು ಕರಿಗಳಿಂ । ಅರೆದ ವೀರನಿಗೆ ಸುರನರರು ಸರಿಯೆ ॥ ೧೩॥ ಕುರುಪ ಗರಳವನಿಕ್ಕೆ ನೆರೆಯುಂಡು ತೇಗುತಲಿ । ಉರಗಗಳ ಮೇಲ್ಬಿಡಲು ಅವನೊರಸಿದ । ಅರಗಿನ ಅರಮನೆಯಲ್ಲಿ ಉರಿಯನಿಕ್ಕಿ ತಾ ಧೀರ । ಧರಿಸಿ ಜಾಹ್ನವಿಗೊಯ್ದ ತನ್ನನುಜರ ॥ ೧೪॥ ಅಲ್ಲಿದ್ದ ಬಕಹಿಡಂಬಕರೆಂಬ ರಕ್ಕಸರ । ನಿಲ್ಲದೊರೆಸಿದ ಲೋಕಕಂಟಕರನು। ಬಲ್ಲಿದಸುರರ ಗೆಲಿದು ದ್ರೌಪದಿಯ ಕರವಿಡಿದು । ಎಲ್ಲ ಸುಜನರಿಗೆ ಹರುಷವ ಬೀರಿದಾ॥೧೫॥ ರಾಜಕುಲವಜ್ರನೆನಿಸಿದ ಮಾಗಧನ ಸೀಳಿ । ರಾಜಸೂಯಯಾಗವನು ಮಾಡಿಸಿದನು ॥ ಆಜಿಯಲಿ ಕೌರವರ ಬಲವ ಸವರುವೆನೆಂದು ॥ ಮೂಜಗವರಿಯೆ ಕಂಕಣ ಕಟ್ಟಿದ ॥ ೧೬॥ ಮಾನನಿಧಿ ದ್ರೌಪದಿಯ ಮನದಿಂಗಿತವನರಿತು । ದಾನವರ ಸವರಬೇಕೆಂದು ಬೇಗ ।ಕಾನನವ ಪೊಕ್ಕು ಕಿರ್ಮೀರಾದಿಗಳ ತರಿದು । ಮಾನಿನಿಗೆ ಸೌಗಂಧಿಕವನಿತ್ತ॥೧೭॥ ದುರುಳ ಕೀಚಕನು ದ್ರೌಪದಿದೇವಿ ಚೆಲ್ವಿಕೆಗೆ । ಮರುಳಾಗಿ ಕರೆಕರೆಯ ಮಾಡಲವನ। ಗರಡಿ ಮನೆಯೊಳು ಬರಿಸಿ ಒರೆಸಿ ಅವನನುಜರನು । ಕುರಪನಟ್ಟಿದ ಮಲ್ಲಕುಲವ ಸದೆದ ॥ ೧೮॥ ವೈರಿ ದುಶ್ಯಾಸನನ ತೊಡೆಯ ಮೇಲಡ್ಡಗೆಡಹಿ । ವೀರ ನರಹರಿಯ ಲೀಲೆಯ ತೋರಿದ ॥ ಕೌರವರ ಬಲ ಸವರಿ ವೈರಿಗಳ ನೆಗ್ಗೊತ್ತ। ಓರಂತೆ ಕೌರವರ ಕುಲವ ತರಿದ ॥ ೧೯॥ ಗುರುಸುತನು ಸಂಗರದಿ ನಾರಾಯಣಾಸ್ತ್ರಬಿಡೆ। ಉರವಣಿಸಿ ಬರಲು ಶಸ್ತ್ರವ ಬಿಸುಡದೆ ॥ ಹರಿಯ ಕೃಪೆ ಪಡೆದಿದ್ದ ಭೀಮ ಹುಂಕಾರದಲಿ। ಎರಗದಲೆ ದಿವ್ಯಾಸ್ತ್ರ ನೆರೆ ಅಟ್ಟಿದ ॥ ೨೦॥ ನೀರೊಳಡಗಿದ್ದ ದುರ್ಯೋಧನನ ಹೊರಗೆಡಹಿ । ಊರುದ್ವಯ ತನ್ನ ಗದೆಯಿಂದ ಮುರಿದ । ನಾರಿ ರೋದನ ಕೇಳಿ ಮನಮರುಗಿ ಗುರುಸುತನ। ಹಾರ್ಹಿಡಿದು ಶಿರೋರತ್ನ ಕಿತ್ತಿ ತೆಗೆದ ॥೨೧॥ ಚಂಡವಿಕ್ರಮನು ಗದೆಗೊಂಡು ರಣದೊಳಗೆ ಭೂ । ಮಂಡಲದೊಳು- ಧ್ವಂಸಿಸಿದಖಿಳ ಖಳರ । ಹಿಂಡಿ ಬಿಸುಟಿದ ವೃಕೋದರನ ಪ್ರತಾಪವನು। ಕಂಡು ನಿಲುವವರಾರು ತ್ರಿಭುವನದೊಳು ॥ ೨೨॥

## ಶ್ರೀಮನ್ಮಧ್ವಾಚಾರ್ಯರ ವರ್ಣನೆ

ದಾನವರು ಕಲಿಯುಗದೊಳವತರಿಸಿ ಸುಜನರಿಗೆ । ವೇನನ ಕುಮತವ ಬೋಧಿಪುದನರಿತು॥ ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ । ಮಾನನಿಧಿ ಮಧ್ವಾಖ್ಯನೆಂದೆನಿಸಿದ ॥ ೨೩॥ ಅರ್ಭಕತನವ ನೀಗಿ ಬದರಿಯಲಿ ಮಧ್ವಮುನಿ । ನಿರ್ಭಯದಿ ಸಕಲ ಶಾಸ್ತ್ರಾಸ್ತ್ರಗಳ ಪಠಿಸಿ ॥ ಉರ್ವಿಯೊಳು ಆಮ್ನಾಯದ ತತ್ವಮಾರ್ಗವನು । ಸರ್ವಸುಜನರಿಗೆ ಅರುಹಿದ ಮೋದದಿ ॥೨೪॥ ಸರ್ವೇಶ ಹರಿ ವಿಶ್ವವೆಲ್ಲವೂ ಪುಸಿಯೆಂಬ । ದುರ್ವಾದಿಗಳ ಮತವ ನೆರೆ ಖಂಡಿಸಿ ॥ ಸರ್ವೇಶ ಹರಿ ವಿಶ್ವಸತ್ಯವೆಂದರುಹಿದ । ಶರ್ವಾದಿಗೀರ್ವಾಣ ಸಂತತಿಯಲಿ ॥ ೨೫॥ ಪರಶುರಾಮಕ್ಷೇತ್ರ ಉಡುವೆಂಬ ಗ್ರಾಮಕ್ಕೆ । ಮೂರು ಕೋಶದಲಿದ್ದ ಕಡಲ ತಟಕೆ ॥ ಪರಮ ಪಾವನ ತನು ಮಧ್ವಮುನಿ । ಹರುಷದಲಿ ಹರಿಯ ಧ್ಯಾನದಿ ತಪವ ಗೈಯುತಿರಲು ॥ ೨೬॥ ಅಕಳಂಕ ಚರಿತ ಶ್ರೀಹರಿ ಬಂದು ಹಡಗದಲಿ । ಶಿಖಿಸಖನು ಬೆಸೆದಿರೆ ನಿಂತಿತಲ್ಲೇ ॥ ಸಕಲಜ್ಞ ಮುನಿ ತನ್ನ ಪತಿಯು ಬಂದಿಹನೆಂದು ।

ಸುಖತೀರ್ಥಗುರು ಕರದಿ ಕರವ ಬೀಸೆ ।। ೨೭।। ಆ ವಾಯುನಿಂದಲ್ಲಿ ಹಡಗ ದಡಕೆ ತರಲು । ಆ ವಾಯುಸುತನಂಘ್ರಿ ಕಂಡ ಧನಪ ।। ದೇವಾಧಿದೇವ ನಮೋ ದೇವಾಂತರಾತ್ಮ ನಮೋ । ಜೀವದಾಯಕ ಜಗಜ್ಜೀವದೊಡೆಯಾ ।। ೨೮।। ಎಂದು ಕೊಂಡಾಡಿ ಮುಕ್ಕೊಂಡು ವಂದನೆ ಮಾಡಿ । ತಂದ ಭಾಗ್ಯವು ನಿಮ್ಮದೆಂದು ನುಡಿಯೆ ।। ನಂದತೀರಥ ಗೋಪಿಚಂದನದ ಕರಣೆಗಳ ಮುದದಿ ಮೂರೆನಗಿತ್ತು ನಡಿಯೆಂದನು ।। ೨೯।। ಧನದಲಿಂದಲಿ ತಂದ ಮೂರು ಕರಣೆಗಳೊಳಗೆ। ಘನ ಭುಜಗಳಲ್ಲೆರಡು ಶಿರದೊಳೊಂದು।। ಮುನಿರಾಜ ಧರಿಸಿ ತನ ಮನದೊಡೆಯನಂಘ್ರಿಗಳ । ಘನದ್ವಾದಶಸ್ತೋತ್ರದಿಂದ ಸ್ತುತಿಸಿ।।೩೦।। ತರುವಾಗಲದರೊಳೊಂಧಾರಿ ಬೆಟ್ಟವ ಸೇರಿ । ಹರಿ ಸಹೋದರಿ ದುರ್ಗೆ ಎನಿಸಿ ನಿಲಲು ।। ಮರುಳೊಂದು ಕರಣೆಯು ಶರಧಿ ತೀರದಿ ಒಡೆದು । ಹರಿ ಸಹೋದರ ಬಲರಾಮ ನೆಲೆಸೆ।।೩೧।। ಮೂರನೇ ಕರಣೆಯಲಿ ಮೂಜಗದ ಜನಕನಿರೆ । ಚಾರು ಉಡುಪಿಗೆ ತಂದು ವಿವರಗೈಸೆ ।। ಮೂರ್ಧತ್ತು ಜನ ಕೂಡಿ ಸುಪ್ರತೀಕವನೆ ತರ - । ಲಾರದಲೆ ಕರ ಮುಗಿದು ಶರಣಗೈಯೆ ।। ೩೨।। ಮೂರು ಲೋಕಕೆ ಗುರು ಭಾರತೀರಮಣಾಖ್ಯ । ಸಿರಿಮಧ್ವಮುನಿ ತಮ್ಮ ಕರಗಳಿಂದ ।। ಶೌರಿ ಶ್ರೀಪತಿಯಾದ ಶ್ರೀಕೃಷ್ಣಮೂರ್ತಿಯನು। ಸುರಹೃದಯದಿ ನಿಲಿಸಿ ಸ್ಥಿರವ ಗೈಸಿ ।। ೩೩।। ಮತ್ತೆಂಟು ಶಿಷ್ಯರಿಗೆ ಕೊಟ್ಟು ಸನ್ಯಾಸವನು। ಕೃಷ್ಣನಂಘ್ರಿಯ ಪೂಜೆ ಮಾಡಿರೆಂದು ।। ಸೃಷ್ಟೀಶನಾಜ್ಞೆಯಿಂ ಪುನರಪಿ ಬದರಿಗೆ । ಶ್ರೇಷ್ಠ ಗುರುಗಳು ತೆರಳೆ ಶಿಷ್ಟ ಜನರು ।। ೩೪।। ಇಷ್ಟ ಗುರುಗಳ ಪಾದ ಬಿಟ್ಟಿರದೆ ಬರುತಿರಲು । ಕಾಷ್ಠ ಮೌನವ ಮಾಡಿ ಗುರುರಾಜರು ।। ಘಟ್ಟಿ ಗುಂಡಿನ ಮ್ಯಾಲೆ ಬರೆದು ಇಷ್ಟಾರ್ಥವನು। ಕೊಟ್ಟು ಪೋದರು ತಮ್ಮ ಶ್ರೇಷ್ಠ ಜನಕೆ।।೩೫।। ಪ್ರೀತಿಯಲಿ ಶ್ರೀಕೃಷ್ಣ ದ್ವೈಪಾಯನರ ಕಂಡು । ಗೀತ ಭಾಷ್ಯವನು ಅರಿಕೆ ಮಾಡಿ ।। ಶ್ರೋತವ್ಯರಾದ ಋಷಿ ಸಂತತಿಗೆ ಬೋಧಿಸಿ । ಶ್ರೀಪತಿಯ ಕರುಣೆಯಿಂದ ಬಂದು ।। ೩೬।। ಮೂಲ ಮೂವತ್ತೇಳು ಗ್ರಂಥಗಳ ರಚಿಸಿ ನಿ - । ರ್ಮೂಲ ಮಾಡಿದರು ಮಾಯ ಮತಗಳೆಲ್ಲ।। ಮೇಲೆನಿಸಿ ಮಧ್ವಮತ ಮೂಲ್ಲೋಕದೊಳು ಭೇರಿ । ವಾಲೈಸಿ ಶ್ರೀಮಧ್ವಮುನಿಯು ಮೆರೆದ ।। ೩೭।। ಏಕವಿಂಶತಿ ಕುಭಾಷ್ಯಗಳ ಬೇರನು ತರಿದು । ಶ್ರೀಕರಾರ್ಚಿತನೊಲುಮೆ ಶಾಸ್ತ್ರ ರಚಿಸಿ।। ಲೋಕತ್ರಯದೊಳಿದ್ದ ಸುರರು ಆಲಿಸುವಂತೆ । ಆ ಕಮಲನಾಭಯತಿನಿಕರಕೊರೆದ ।। ೩೮।। ಬದರಿಕಾಶ್ರಮಕೆ ಪುನರಪಿ ಪೋಗಿ ವ್ಯಾಸಮುನಿ- । ಪದಕೆರಗಿ ಸಕಲ ವೇದಾರ್ಥಗಳನು ।। ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ-। ವೈದಿದ ಮಧ್ವಮುನಿರಾಯಗಭಿನಮಿಪೆನು।।೩೮।। ಜಯ ಜಯತು ದುರ್ವಾದಿಮತತಿಮಿರಮಾರ್ತಾಂಡ । ಜಯ ಜಯತು ವಾದಿಗಜ- ಪಂಚಾನನ।। ಜಯ ಜಯತು ಚಾರ್ವಾಕಗರ್ವಪರ್ವತಕುಲಿಶ । ಜಯ ಜಯತು ಜಗನ್ನಾಥ ಮಧ್ವನಾಥಾ ।। ೩೯।। ತುಂಗಕುಲಗುರುವರನ ಹೃತ್ಕಮಲದೊಳು ನೆಲೆಸಿ। ಭಂಗವಿರದ ಸುಖವ ಸುಜನಕೆಲ್ಲ।। ಹಿಂಗದೆ ಕೊಡುವ ಗುರು ಮಧ್ವಾಂತರ್ಯಾಮಿ । ಶ್ರೀರಂಗವಿಠ್ಠಲನೆಂದು ನೆರೆನಂಬಿರೊ।।೪೦।।

**ಫಲಸ್ತುತಿ** : ಸೋಮಸೂರ್ಯೋಪರಾಗದಿ ಗೋಸಹಸ್ರಗಳ । ಭೂಮಿದೇವರಿಗೆ ಸುರನದಿಯ ತಟದಿ ॥ ಶ್ರೀಮುಕುಂದಾರ್ಪಣವೆನುತ ಕೊಟ್ಟ ಫಲವಕ್ಕು । ಈ ಮಧ್ವನಾಮ ಬರೆದೋದಿದವರಿಗೆ ॥ ೪೧॥ ಪುತ್ರರಿಲ್ಲದವರು ಸತ್ಪುತ್ರರೈದುವರು ಸರ್ವತ್ರದಲಿ ದಿಗ್ವಿಜಯವಾಹುದು ಸದಾ ॥ ಶತ್ರುಗಳು ಬೀಳ್ವರಪಮೃತ್ಯು ಬರಲಂಜುವದು । ಸೂತ್ರ ನಾಮಕನ ಸಂಸ್ಮೃತಿ ಮಾತ್ರದಿ ॥ ೪೨॥ ಶ್ರೀಪಾದರಾಜರುಸುರಿದ ಮಧ್ವನಾಮ ಸಂ- । ತಾಪವನು ಕಳೆದು ಸೌಖ್ಯವನೀವುದು । ಶ್ರೀಪತಿ ಜಗನ್ನಾಥ ವಿಠಲನ ತೋರಿ ಭವಾಕೂಪಾರದಿಂದ ಕಡೆಹಾಯಿಸುವುದು ॥ ೩೨॥

## ೯) ಪಂಚಮುಖೀಮಾರುತೀ ಕರಾವಲಂಬನಸ್ತೋತ್ರಂ

ಶ್ರೀರಾಮಪಾದಸರಸೀರುಹಭೃಂಗರಾಜ । ಸಂಸಾರವಾರ್ಧಿ ಪತಿತೋದ್ಧರಣಾವತಾರ ॥ ದುಸ್ಸಾಧ್ಯರಾಜ್ಯಧನಯೋಷಿದದಭ್ರಬುದ್ಧೇ । ಪಂಚಾನನೇಶ ಮಮ ದೇಹಿ ಕರಾವಲಂಬಮ್ ॥ ೧॥ ಆಪ್ರಾತರಾಶ್ರಿತಕುನಾಥನಿಕೇತನಾಳಿ । ಸಂಚಾರಕೃತ್ಯಪಟುಪಾದಯುಗಸ್ಯ ನಿತ್ಯಂ ॥ ಮಾನಾಥಸೇವಿಜನಸಂಗಮನಿಷ್ಕೃತಂ ನೋ । ಪಂಚಾನನೇಶ ಮಮ ದೇಹಿ ಕರಾವಲಂಬಮ್ ॥೨॥ ಷಡ್ವರ್ಗವೈರಿಸುಖಿಕೃದ್ಭವದುರ್ಗುಹಾಯಾಂ । ಅಜ್ಞಾನಗಾಢತಿಮಿರಾತಿ ಭಯಪ್ರದಾಯಾಮ್॥ ಕರ್ಮಾನಿಲೇನ ವಿನಿವೇಶಿತದೇಹಧರ್ತುಃ । ಪಂಚಾನನೇಶ ಮಮ ದೇಹಿ ಕರಾವಲಂಬಮ್ ॥ ೩॥ ಸಚ್ಛಾಸ್ತ್ರವಾರ್ಧಿಪರಿಮಜ್ಜನಶುದ್ಧಚಿತ್ತಾಃ । ತ್ವತ್ಪಾದ-ಪದ್ಮಪರಿಚಿಂತನಮೋದಸಾಂದ್ರಾಃ ॥ ಪಶ್ಯಂತಿ ನೋ ವಿಷಯದೂಷಿತಮಾನಸಂ ಮಾಂ। ಪಂಚಾನನೇಶ ಮಮ ದೇಹಿ ಕರಾವಲಂಬಮ್॥ ೪॥ ಪಂಚೇಂದ್ರಿಯಾರ್ಜಿತ - ಮಹಾಖಿಲಪಾಪಕರ್ಮಾ । ಶಕ್ತೋ ನ ಭೋಕ್ತುಮಿಹ ದೀನಜನೇ ದಯಾಲೋ ॥ ಅತ್ಯಂತ - ದುಷ್ಟಮನಸೋ ದೃಢನಷ್ಟದೃಷ್ಟೇಃ । ಪಂಚಾನನೇಶ ಮಮ ದೇಹಿ ಕರಾವಲಂಬಮ್ ॥ ೫॥ ಇತ್ಥಂ ಶುಭಂ ಭಜಕವೆಂಕಟಪಂಡಿತೇನ । ಪಂಚಾನನಸ್ಯ ರಚಿತಂ ಖಲು ಪಂಚರತ್ನಮ್ ॥ ಯಃ ಪಾಪಠೀತಿ ಸತತಂ ಪರಿಶುದ್ಧಭಕ್ತ್ಯಾ । ಸಂತುಷ್ಟಿಮೇತಿ ಭಗವಾನಖಿಲೇಷ್ಟದಾಯೀ॥ ೬॥

॥ ಇತಿ ಶ್ರೀಮತ್ ಪಂಚಮುಖೀಹನುಮದ್ಭಜಕವೆಂಕಟಾರ್ಯಕೃತಂ
ಪಂಚಮುಖೀಮಾರುತೀಸ್ತೋತ್ರಂ ಸಂಪೂರ್ಣಮ್ ॥

ಕಪಿಮುಖಮಪಿ ಪೂರ್ವಂ ದಕ್ಷಿಣೇ ನಾರಸಿಂಹಂ । ಗರುಡಮುಖಮಪಿ ಪಶ್ಚಾದುತ್ತರೇ ಸೂಕರಾಸ್ಯಮ್ ॥ ಹಯವದನಮತೋರ್ಧ್ವಂ ಚಿಂತಯೇತ್ ವಾಯುಸೂನುಂ । ಸಕಲದುರಿತಹರಂ ಶ್ರೀರಾಮದೂತಂ ಶಿರಸಾ ನಮಾಮಿ॥

## ೧೦) ಶ್ರೀರಾಘವೇಂದ್ರ ಸುಳಾದಿ

### ....ಧ್ರುವತಾಳ....

ಧರೆಯೊಳಗೆ ನಮ್ಮ ಗುರುರಾಘವೇಂದ್ರರಿನ್ನು । ಇರುತಿಪ್ಪ ವಿವರವ ಅರಿತಷ್ಟು ವರ್ಣಿಸುವೆ । ಸ್ಥಿರವಾಗಿ ಮಂತ್ರಾಲಯ ಪುರ ತುಂಗಾತೀರದಿ । ಹರಿಭಕ್ತ ಪ್ರಹ್ಲಾದ ವರಯಾಗ ಇಲ್ಲಿ ಮಾಡಿ । ಸುರರಿಗಮೃತ ಉಣಿಸಿ ಪರಿ ಪರಿಯ ಕ್ರಿಯೆ ಮಾಡಿ । ಪರಿಶುದ್ಧನಾದೆನೆಂದು ಅರಿತು ಈ ಸ್ಥಳದಲ್ಲಿ । ಗುರುರಾಘವೇಂದ್ರರಾಯ ಶರೀರ ಪೋಗಾಡಿಸಿಲ್ಲಿ । ಪರಲೋಕ ಸಾಧನ ಪರಿಪೂರ್ತಿ ಮಾಡಿಕೊಂಡು। ಶಿರಿಕೃಷ್ಣನ ಚರಣಕ್ಕೆರಗಿ ಸಂತೋಷದಲ್ಲಿ । ಧರೆಯ ಮೇಲಿದ್ದ ಜನರ ಪೊರೆಯಬೇಕೆಂದೆನಲು । ಹರಿ ನೋಡಿದನಿವರ ಪರಮ ದಯಾಳುತನವ । ಗುರ್ವಂತರ್ಯಾಮಿಯಾಗಿ ವರವ ನೀಡಲು ಜಗಕೆ । ನರಹರಿ ತಾನೆ ನಿಂದು ನಿರುತ ಪೂಜೆಯಗೊಂಡು । ಸಿರಿಯುಳ್ಳ ಕೀರುತಿಯ ಸುರರ ಪಾಲಕ ಚಕ್ರ-। ಧರ ನಾರಾಯಣ ತಾನಿವರ ಸನ್ನಿಧಾನನಾಗೀ । ವರಿಗೆ ಫಲ ತಂದೀವ ಇಹಪರದಲ್ಲಿನ್ನು। ಕರುಣಾಕರರಂಗ ಗೋಪಾಲವಿಠಲ ತನ್ನ । ಶರಣರ ಪೊರೆವಂಥ ಚರಿಯ ಪರಿಪರಿಯುಂಟು ॥ ೧॥

### ....ಮಟ್ಟತಾಳ....

ನರಹರಿ ಶ್ರೀಕೃಷ್ಣ ರಾಮ ವೇದವ್ಯಾಸ । ಎರಡೆರಡು ನಾಲ್ಕು ಹರಿ ಮೂರುತಿಗಳು ಪರಿವಾರ ಸಹಿತಾಗಿ ಸಿರಿಸಹಿತ ನಿಂದು । ಸುರಗುರು ಮಧ್ವಾಚಾರ್ಯರೆ ಮೊದಲಾಗಿ । ತರುವಾಯದಲ್ಲಿನ್ನು ತಾರತಮ್ಯಾನುಸಾರ । ಪರಿ ಪರಿ ಯತಿಗಳು ಇರುತಿಪ್ಪರಿಲ್ಲಿ । ಹರುಷದಿಂದಲಿ ವೇದಗರೆದು ಶಾಸ್ತ್ರಗಳನ್ನು । ಪರಿ ಪರಿ ಪುರಾಣ ಭಾರತಗಾನದಲಿ । ಸರಿ ಸರಿ ಬಂದಂತೆ ಸರಿಗಮವೆನುತಲಿ । ಭರದಿಂದಲಿ ಕುಣಿದು ಭಕುತಿಯಿಂದಲಿ ಇನ್ನು । ಹರಿಯನ್ನು ಪೂಜಿಸುತ ಹಗಲಿರಳು ಬಿಡದೆ । ಪರತತ್ವದ ವಿವರ ಪರಿಪರಿ ಪೇಳುವರು। ಗರುಡವಾಹನ ರಂಗಗೋಪಾಲ ವಿಠಲ ತನ್ನ । ಶರಣರ ಪರಿಪಾಲಿಸುತಿರುತಿಪ್ಪನಿಲ್ಲಿ ॥ ೨॥

### ....ತ್ರಿವಿಡಿತಾಳ....

ನರಹರಿ ರೂಪನಾಗಿ ವಾಸವಾಗಿ ಇಲ್ಲಿ । ದುರಿತ ದುಷ್ಕೃತ ಬ್ರಹ್ಮೇತಿಗಳ ದೂರೋಡಿಸುವ। ಸಿರಿರಾಮನಾಗಿ ವಾಸವಾಗಿ ಇಲ್ಲಿ ಪರಿ । ಪರಿಯಲಿ ದೇಶಾಂತರದಿ ಅನ್ನ ಕಳಕೊಂಡು । ನರರಿಲ್ಲಿ ಬಂದರೆ ಸ್ಥಿರಪಟ್ಟಗಟ್ಟುವ । ಸಿರಿ ಕೃಷ್ಣನಾಗಿ ವಾಸವಾಗಿ ಇಲ್ಲಿ । ಪರಿಪರಿಯಲಿ ಬಂದ ಪರಮಾತುರರಿಗೆ। ವರವೀವ ಪುತ್ರೋತ್ಸವ ಮದುವೆ ಮುಂಜಿ । ಹರಕೆಗಳ ಕೈಕೊಂಡು ಹರುಷಬಡುವ । ವರವೇದವ್ಯಾಸನಾಗಿ ವಾಸವಾಗಿ ಇಲ್ಲಿ । ಭರದಿಂದ ಬಂದ ದುರ್ವಾದಿಗಳನೆಲ್ಲ। ದೂರ ಓಡಿಸಿ ಮುರಿದು ಅವರ ಕುಶಾಸ್ತ್ರವ। ಹರಿಸರ್ವೋತ್ತಮನೆಂದು ಇರುವ ನಿಲ್ಲಿ ತೋರಿ। ಶರಣ ಜನಕೆ ಇನ್ನು ವರಜ್ಞಾನ ಸುಧೆಯ। ಗರೆದು ಕೊಡುತಲಿ ಇರುತಿಪ್ಪನಿಲ್ಲಿ । ಸಿರಿವಂದಿತನಾದ ಗೋಪಾಲ ವಿಠ್ಠಲ । ಪರಿಪರಿಯಲ್ಲಿ ಇಲ್ಲಿ ವಾಲಗಗೊಳುತಿಪ್ಪ ॥ ೩॥

....ಅಟ್ಟತಾಳ....

ರಾಘವೇಂದ್ರನೆಂಬ ರೂಪ ತಾನೆಯಾಗಿ । ರಾಘವೇಂದ್ರನೆಂಬ ನಾಮ ಇಡಿಸಿಕೊಂಡು । ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ । ಭೋಗವರಿತು ತನ್ನ ಭಾಗವತರ ಕೀರ್ತಿ । ಸಾಧಿಸಿ ಸಲಹಲು ಮೂಜಗದೊಳಗೆಲ್ಲ । ಮೇಘ ಸೂರ್ಯನಂತಮೋಘ ಕೀರುತಿಯನ್ನು । ರಾಘವ ಇವರಿಗೆ ರಾಜ್ಯವ ತಂದಿತ್ತ । ರಾಘವೇಂದ್ರಮೂರ್ತಿ ಗೋಪಾಲವಿಠ್ಠಲ ಭಾಗವತರಲ್ಲಿ ಬಹು ಪೂಜೆಯನು ಕೊಂಬ॥೪॥

....ಆದಿತಾಳ....

ದಿನ ದಿನಕಿಲ್ಲಿ ನೂತನ ಪೂಜೆಗಳಾಗುವವು । ದಿನ ದಿನಕಿಲ್ಲಿ ನೂತನ ವಾರ್ತೆಗಳಾಗುವವು। ದಿನದಿನಕಿಲ್ಲಿ ನೂತನ ಕೀರ್ತಿಗಳಾಗುವವು । ಜನಸಂದಣಿ ಪ್ರತಿದಿನ ವಿಪ್ರಭ ೀಜನ । ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವರು । ಜನುಮ ಸಫಲ ತಮ್ಮ ಜನನವ ನೀಗುವರು । ದಿನ ಸಪ್ತ ಶತವರ್ಷ ಪರಿಯಂತವಾಗಿ । ದಿನಕರ ಶತತೇಜ ಜಗನ್ನಾಥ ತಾನಿಲ್ಲಿ । ಅನುವಾಗಿ ತಾ ನಿಂದು ಜನರ ಪಾಲಿಪುದ। ಕ್ಕನುಮಾನ ಸಲ್ಲದು ಗುಣಗಣಪರಿ-। ಪೂರ್ಣ ಗೋಪಾಲವಿಠ್ಠಲ ಅಣೋ - । ರಣಿಯಾ ಎಂಬುವಗೆ ಎಣೆಯಾರೊ ಜಗದೊಳಗೆ ॥ ೫॥

....ಜತೆ....

ಮಂತ್ರ ಸಿದ್ಧಿಯ ಕ್ಷೇತ್ರ ಇದು ನೋಡಿ ಕೋವಿದರು । ಮಂತ್ರ ಪ್ರತಿಪಾದ್ಯ ಗೋಪಾಲ ವಿಠ್ಠಲನಿಂದ ॥ ೬॥

॥ಇಲ್ಲಿಗೆ ನಿತ್ಯಸ್ತೋತ್ರ ಪ್ರಕರಣವು ಸಮಾಪ್ತವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸ್ನಾನ ಮಾಡಿದರಿನ್ನೇನು ಫಲವೊ । ಮೌನ ಮಾಡಿದರಿನ್ನೇನು ಫಲವೊ॥
ದಾನ ಮಾಡಿದರಿನ್ನೇನು ಫಲವೊ । ಸ್ನಾನ ಮೌನ ದಾನ ನಾನಾ ಕರ್ಮವೆಲ್ಲ
ಭಾನು ಉದಯದಲಿ ನೀನೆದ್ದು ಭಕುತಿಲಿ। ಶ್ರೀನಾರಾಯಣನೆಂಬೊ ನಾಮ
ಆನಂದವಾಗಿ ಒಮ್ಮೆ ಕೊನೆ ನಾಲಿಗೆಯಿಂದ । ನೀ ನೆನೆಯೊ ನೆನೆಯೊ ಮನವೆ
ಜ್ಞಾನಗೋಚರ ವಿಜಯವಿಠ್ಠಲನ್ನ । ಧ್ಯಾನದಲ್ಲಿ ಒಮ್ಮೆ ನೆನೆದರೆ ಸಾಕು
ಸ್ನಾನಮಾಡಿದರಿನ್ನೇನುಂಟು

## ೩. ಸಾಪ್ತಾಹಿಕ ಸ್ತೋತ್ರ ಪ್ರಕರಣ

ಈ ಪ್ರಕರಣದಲ್ಲಿ ವಾರದ ಏಳು ದಿನಗಳಲ್ಲಿ ಪ್ರತಿದಿನ ನಿರ್ದಿಷ್ಟಪಡಿಸಿದ ಹಾಡುಗಳನ್ನು ಹಾಗೂ ಸುಳಾದಿಗಳನ್ನು ಕೊಡಲಾಗಿದೆ. ವಾರದ ಆಯಾ ದಿನ ಅಧಿಕೃತವಾದ ದೇವತೆಗಳ ಹಾಡು ಹಾಗೂ ಸುಳಾದಿಗಳನ್ನು ಭಕ್ತಿಯಿಂದ ಹೇಳಿದರೆ, ದೇವತಾ ಪ್ರೀತಿಯಾಗುವದು.

### ೧) ರವಿವಾರ

**( ಶ್ರೀರಾಮದೇವರು ಮತ್ತು ಸೂರ್ಯಾಂತರ್ಗತ ಶ್ರೀಮನ್ನಾರಾಯಣ )**

**ಅ. ಹಾಡುಗಳು**

೧) ರಾಮ ರಾಮ ಎಂಬೆರಡಕ್ಷರ ಪ್ರೇಮದಿ ಸಲುಹಿತು ಸುಜನರನು ॥ಪ॥ ಹಾಲಾಹಲವನ್ನು ಪಾನವ ಮಾಡಿದ ಫಾಲಲೋಚನನೆ ಬಲ್ಲವನು । ಆಲಾಪಿಸುತಾ ಶಿಲೆಯಾಗಿದ್ದ ಬಾಲೆ ಅಹಲ್ಯೆಯ ಕೇಳೆಲೋ ॥ ೧॥ ಅಂಜಿಕೆ ಇಲ್ಲದೆ ಗಿರಿ ಸಾರಿದ ಕಪಿ ಕಂಜಲೋಚನನೆ ಬಲ್ಲವನು । ಎಂಜಲು ಫಲಗಳ ಹರಿಗರ್ಪಿಸಿದಾ ಕಂಜಲೋಚನೆಯಾ ಕೇಳೆಲೋ ॥ ೨॥ ಕಾಲವನರಿತು ಸೇವೆಯ ಮಾಡಿದ ಲೋಲ ಲಕ್ಷ್ಮಣನೆ ಬಲ್ಲವನು। ಶೇಷಾಚಲವಾಸ ವಿಜಯ ವಿಠ್ಠಲನ ಲೀಲೆಯ ಶರಧಿಯ ಕೇಳೆನೋ ॥ ೩॥

೨) ಸಾರಿ ಭಜಿಸುವೆ ಸೂರ್ಯಾಂತರ್ಗತ । ನಾರಾಯಣ ನಿನ್ನಾ ॥ ಪ॥ ಘೋರತರ ಈ ಭವವ ತಾರಿಸೋ । ನಾರಿಕಾಂತಾ, ದುಷ್ಟಹಂತ ॥ ಅ. ಪ.॥ ಬಾಲಕ ಧ್ರುವರಾಜನಂತೆ, ವಾಯುಸುತನಂತೆ। ಶೀಲ ಅಜಮಿಳನಂತೆ, ಮತ್ತಾ ಸತ್ರಾಜಿತನಂತೆ॥ ಕಾಲಸುತ ಶ್ರೀಧರ್ಮನಂತೆ, ವೀರಮಾತೆ ಕುಂತಿಯಂತೆ। ಬಾಲೆ ದ್ರೌಪದಿ ಕಾಯ್ದೆಯಂತೇ ಕಾಲಮೂರ್ತಿ ಭಕ್ತರಂತೆ ॥ ೧॥ ಕಂಜಸಖನ ಮಧ್ಯನಂತೆ, ಕಂಜಸ್ಥಿತನಂತೇ । ಕಂಜ ಆದಿ ಧರಿಸಿದಂತೆ । ಕಂಜನಯನಂತೇ ॥ ಕಂಜಸದ್ಮಗೆ ನಾಥನಂತೆ, ಬಾಡದ ಸರ ಧರಿಸಿದಂತೆ । ಕುಂಜರ ಕರೆಗೊದಗಿದಂತೆ,ಭಂಜಿಸೆನ್ನ ಪಾಪಕಂತೆ ॥ ೨॥ ದಕ್ಷಿಣಾಕ್ಷಿಯೊಳಿರುವಿಯಂತೆ, ವಕ್ಷಸ್ಥಳವಂತೆ । ಪಕ್ಷಿವಾಹನನಂತೆ ಮತ್ತೆ ಸಾಕ್ಷಿ ನೀನಂತೇ॥ ಕುಕ್ಷಿಯೊಳು ಈರೇಳು ಲೋಕವ, ಇಟ್ಟು ನೀನು ರಕ್ಷಿಪೆಯಂತೆ । ಮೋಕ್ಷದಾತ ಭಕ್ತರಿಗಂತೆ, ವರದವಿಠ್ಠಲ ನೀನಂತೆ ॥ ೩॥

**ಆ. ಸುಳಾದಿಗಳು**

### ೧. ಶ್ರೀರಾಮಾಯಣಸಾರ ಸುಳಾದಿ

**....ಧ್ರುವತಾಳ....**

ರಾಜ ರಾಜರಮಣಿ ರಾಜಶೇಖರ ವಿನುತಾ । ರಾಜ ತೇಜೋನಿಧಿ ರಾಜಾಧೀಶಾ। ರಾಜಹಂಸನಯನಾ ರಾಜಶೇಖರ ವಿ । ರಾಜಿತ ಕೀರ್ತಿ ಗಜರಾಜವರದಾ। ರಾಜವದನಾ ರಿಪುರಾಟಮಸ್ತಕಶೂಲಾ । ರಾಜ ರಾಜೋತ್ತುಮ ರಾಜವಿನುತಾ। ರಾಜೀವದೊಳಗಿದ್ದ ರಾಜೀವನ

ಪುಟ್ಟಿಸಿದ । ರಾಜ ಮಾರ್ತಾಂಡ ದ್ವಿಜ ರಾಜ ಗಮನಾ । ರಾಜ ರಾಜರು ನಿನ್ನ ರಾಜಿಸುವ ಚರಣಾ । ರಾಜೀವದಲ್ಲಿ ವಾಲಗ ಮಾಳ್ಪರೋ । ರಾಜಾ ರಾಜಾಗ್ರಣ್ಯ ರಾಜಾಭಿಷೇಕಕ್ಕೆ ರಾಜಾ ನೀನಲ್ಲದೆ ರಾಜರುಂಟೇ । ರಾಜಗಂಭೀರ ಅಪರಾಜಿತನಾಮ ನಮ್ಮ ವಿಜಯ ವಿಠ್ಠಲ ರಂಗರಾಜ। ರಾಜ ಸಮುದ್ರರಾಜ ಶಯನನೆ ॥ ೧॥

....ಮಟ್ಟತಾಳ....

ದಶಶಿರನೆಂಬುವನು ಅಸಮ ವೀರನಾಗಿ । ಬಿಸಿಜ ಮದ್ಯದಲ್ಲಿ ತ್ರಿದಶರ ಸೆರೆಯಿಡಲು। ದಶದಿಕ್ಕಿನ ಒಳಗೆ ಪೆಸರಾಗಿ ಪಸರಿಸುತ । ಪಶುಪನ ವರದಿಂದ ಕುಸಿಯದಲಿರುತೀರೆ । ಅಸುರನ ಉಪಹತಿಗೆ ವಸುಧಿ ಭಾರವಾಗೆ । ಬಿಸಿಜಾಭವ ಸುಮನಸರೆಲ್ಲರು ಪೋಗಿ । ಬಿಸಿಜ ದಳನಯನ ವಸುಧಿ ಸಂರಕ್ಷಕನೇ । ಅಸುರರ ಶಿಕ್ಷಕನೆ ಅಸಮಯ ಬಂದಿದೆ । ದೆಶೆಗೆಟ್ಟವರ ಪಾಲಿಸಬೇಕೆಂದೆನುತ। ಶಿಶುಗಳೊದರಿದಂತೆ ಎಸದು ಮೊರೆ ಇಡಲು । ವೃಷಭ ನಾಮ ದೇವರ ವಿಜಯ ವಿಠ್ಠಲರೇಯನ । ಬಿಸಜ ಚರಣದಲ್ಲಿ ಹಸನಾಗಿ ಬಿನ್ನೈಸೆ ॥ ೨॥

....ರೂಪಕತಾಳ....

ಮೂರು ಗುಣರಹಿತ ಮೂರುತಿ ಈತನ । ಕಾರುಣ್ಯವನ್ನು ಇನ್ನಾರು ಬಲ್ಲವರಿಲ್ಲ। ವಾರಿಜಜಾದ್ಯರ ಸಾರೆಗರದು ಶ । ರೀರವ ತಡವರಿಸಿ ತಾರತಮ್ಯದಿಂದ । ಭಾರ ಎನ್ನದು ಎಂದು ಭರವಸವ ಇತ್ತು । ಕ್ರೂರನಿಂದಲಿ ಬಂದ ಭಾರ ಇಳಿಸುವೆನೆಂದು । ಧಾರುಣಿಯೊಳಗಿತ್ತ ಈರೈದು ರಥದವನು । ನಾರಾಯಣನು ಕುಮಾರನಾಗಲೆಂದೂ । ಆರಾಧನೆಯ ಮಾಡೆ ಶ್ರೀರಾಮನೆಂದೆಂಬುವ । ತಾರವನ್ನು ಧರಿಸಿದ ರಮಾರಮಣನೂ। ಚಾರುಗುಣನಿಲಯ ವಿಜಯವಿಠ್ಠಲರೇಯಾ । ಸಾರಿದವರ ಮನೋಹಾರವ ತೋರುತ್ತಾ ॥ ೩॥

....ಝಂಪೆತಾಳ....

ಮುನಿಪ ಕೌಶಿಕನ ಯಾಗವ ಕಾಯಿದು ತಾಟಕಿ । ದನುಜಿಯ ಮುರಿದು ನಿಜಾನುಜನ ಕೂಡ ಜನಕಪುರಕೆ ಗ । ಮನವಾಗಿ ಪೋಗುತ್ತ ಮುನಿಯಾಂ । ಗನಿಯ ಶಾಪವನ್ನೆ ತೊಡದೂ ಅನಲಾ । ಕ್ಷನ ಧನಸ್ಸು ಮುರಿದು ನಿಕ್ಕಡಿ ಮಾಡಿ। ಜನಕರಾಯನ ನಂದಿನಿಯ ನೆರದೂ । ಅನುವರದೊಳಗೆ ಭೃಗುತನು ಜನ್ನ ಪೊಕ್ಕಳಲಿ । ದನುಜ ಸೇರಿರಲು ಬಾಣದಲ್ಲಿ ಸದದೂ । ತನಗೆ ತಾನೇ ಲೀಲೆ ತೋರಿದ ಮಹದೈವವಾ । ತನೆ ಕಾಣೋ ಮೋಹಿತ ವಿಜಯವಿಠ್ಠಲ ರಾಮ ॥ ೪॥

....ತ್ರಿವಿಡಿತಾಳ....

ಪಿತನ ಮಾತನು ಮನ್ನಿಸಿ ಸತಿ ಸಹಿತ ಭಾಗೀ । ರಥಿಯ ದಾಟುತಲಿ ಭಕುತಗೊಲಿದೂ । ಅತಿಶಯವಾದ ಪರ್ವತ ಚಿತ್ರಕೂಟದಲಿ । ಯತಿಗಳಿಂದಲಿ ಪೂಜಿತನಾಗುತ। ಮತಿಹೀನನಾಗಿ ಬಾಳುತಲಿದ್ದ ಕಾಕನ್ನ । ಗತಲೋಚನನಮಾಡಿ ಕ್ಷಿತಿಗಟ್ಟಿದೇ । ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು । ವ್ರತವ ಧರಿಸಿದ ಉನ್ನತ ಮಹಿಮಾ । ಪಥಚಾರನಾಗಿ ಶೋಭಿಸುತ ದಂಡಕಾರಣ್ಯ । ಯತಿ ಪುಂಗವ ಕುಂಭಸುತನ ಕಂಡು । ಅಪ್ರತಿರಥ ನಾಮಾ ವಿಜಯವಿಠ್ಠಲ ರಘು । ಪತಿ ನೀನೇ ಉತ್ಪತ್ತಿ ಸ್ಥಿತಿ ಲಯ ಕರ್ತನೇ ॥ ೫॥

....ಅಟ್ಟತಾಳ....

ವೋಸದಾ ಅಸುರಿಯ ಮೂಗು ಕೊಯ್ದ ಖರ । ದೂಷಣಾದ್ಯರನ್ನ ಕೊಂದು ಗೌತುಮೆಯಲ್ಲಿ। ವಾಸವಾಗಿದ್ದ ಮಾರೀಚ ಮಾಯಾಮೃಗ । ವೇಷವಾಗಿ ಬರೆ ಕೊಂದು ಮಾರ್ಗದಲ್ಲಿ । ಘಾಸಿಯಾಗಿದ್ದ ವಿಹಂಗನ ಮನ್ನಿಸಿ । ದ್ವೇಷಿಕ ಬಂಧನ ಕಡಿದು ಶಬರಿಯ। ಮೀಸಲು ಭಕುತಿಗೆ ಹಣ್ಣು ಸವಿದು । ಸಂತೋಷದಿಂದಲಿ ತುಂಗಾ ತೀರದಲ್ಲಿ ಪವ । ನಸೂನು ಯೆರಗಲು ಎತ್ತಿ ಮಾತಾಡಿದಿ । ನೇಶ ತನುಜಗೆ ಅಭಯವನ್ನು ಇತ್ತು । ಬೀಸಿ ವಗದೆ ಕಾಲಲಿ ದುಂಧುಮಾರನ್ನ । ನೀ ಸವರಿದೆ ಏಳು ತಾಳವ ಒಮ್ಮೆಲೆ । ಸಾಸಿರ ನಾಮನೇ ವಿಜಯವಿಠ್ಠಲ ನರ । ವೇಷವ ಧರಿಸಿದ ವೈಕುಂಠವಾಸ ॥ ೬॥

....ಆದಿತಾಳ....

ಭೀತಿಶೂನ್ಯನಾದ ಪುರಹೂತ ಮಗನ ಕೊಂದು ರವಿ । ಜಾತಗೆ ಪಟ್ಟವಗಟ್ಟಿ ಪ್ರೀತಿದೂತ ವಾಯುಜನ್ನ । ಸೀತೆ ಬಳಿಗೆ ಕಳುಹೆ ಪೋಗಿ । ಮಾತು ತಂದು ಪೇಳಿದಾತಗೆ ವರವನಿತ್ತು । ಕೋತಿ ಕರಡಿ ಸಹಿತವಾಗಿ ಸೇತುವೆ ಬಿಗಿಸಿ ಬಂದ । ನೀತ ವಿಭೀಷಣನ ಕೂಡ ಕಾತುರದಿಂದಲಿ ದಾಟಿ । ದೂತ ರಾವಣಾದಿಗಳ ಯಾತನಿಗೆ ಬೀಳಕೊಡಿಸಿ । ಪ್ರೀತಿಯಾಸ್ಪದನಾದ ತಾತ ವಿಭೀಷಣಗೆ ಪ್ರ । ದ್ಯೋತ ಶಶಿವುಳ್ಳ ನಕ ಭೂತಳದೊಳಗೆ ಲಂಕೆ । ಯ ತಪ್ಪದಂತೆ ಆಳೆಂದಾತಗೆ ಪಟ್ಟವಗಟ್ಟಿ। ಸೀತೆಸಹಿತ ಬಂದು ಸಾಕೇತ ಪುರದಲ್ಲಿ ನಿಂದು । ಧಾತಾದಿಗಳ ಮನಕೆ ಪ್ರೀತಿ ಬಡಿಸಿ ಶೆರೆಯ ಬಿಡಿಸಿ। ಸೀತೆಯರಸ ವಿಜಯವಿಠ್ಠಲ ಭೂತ । ನಾಥನಿಂದ ಬಂದ ಮಾತು ಮನ್ನಿಸಿದ ಮಹಾತ್ಮಾ ।

....ಜತೆ....

ಸಾರ್ವಭೌಮನೆ ರಾಮಾ ದುರುಳ ದೈತ್ಯ ವಿರಾಮಾ । ಸರ್ವಯೋಗಿ ವಿನಿಶ್ರುತಾ ವಿಜಯವಿಠ್ಠಲ॥೮॥

## ೨) ರವಿವಾರ ಸುಳಾದಿ

....ಧ್ರುವತಾಳ....

ಆಲಿಸಿ ಕೇಳುವದು ಆದರದಿಂದಲಿ । ಶ್ರೀಲಕುಮೀಶನ ಭಕುತರೆಲ್ಲಾ । ಕಾಲದೇಶವ್ಯಾಪ್ತಳೆನಿಪಳಿಗಾದರು । ಶೀಲ ಮೂರುತಿ ಇಂದ ಸುಖವೆಂಬೊದೊ । ಕೇಳಿಬಲ್ಲದ್ದೆ ಸರಿ ಶ್ರುತಿ ಸ್ಮೃತಿ ಮುಖದಿಂದ । ಆಲೋಚನೆ ಇದಕ್ಕಿಲ್ಲ ಎಣಿಸಿ ಗುಣಿಸು । ಮೂಲಜೀವರ ಸುಖಕೆ ಶ್ರೀಪತಿ ಆದ ಬಳಿಕ । ಹಲವು ಬಗೆಯಲಿ ಹರಿಯ ಸಂಪಾದಿಸು । ಇಳಿಯೊಳು ವಾಜಿಪೇಯ ಪೌಂಡರಿಕಾದಿ ಯಜ್ಞ ನಿರ್ಮಲ ವಾದ ಧ್ಯಾನ ಜಪ ನೇಮವೂ । ಜಾಲ ನಕ್ಷತ್ರ ಸಂಖ್ಯ ಮೀರಿದ ಮಹಾದಾನಾ । ಕಾಲೋಚಿತವಾದ ಕರ್ಮಧ್ಯಾನ ವೌನ । ಜ್ವಾಲವಾಡ ಕ್ರೂರ ತಪ ಹೋಮ ಸುರರರ್ಚನ । ಸ್ಥೂಲ ಕರ್ಮಾಭಿಜಾತ ಪುಣ್ಯದಿಂದ । ತ್ರಿಲೋಕಾಧಿಪತಿ ಸ್ಥಾನ ವೈದಿದ ನಂತರ । ಇಳಿಯಬೇಕೊ ಧರಿಗೆ ಭೂಯೊ ಭೂಯೊ । ವಲಿಯನು ಇದಕ್ಕ ಜಲಜಾಯತೇಕ್ಷಣ । ವಲಿಸಬೇಕೆಂಬೋದು ಮನದಲ್ಲಿತ್ತೆ । ಪೇಳಿದ ಮಾತಿನಲ್ಲಿ ಸಂದೇಹ

ಪುಟ್ಟಿಸಿದ । ರಾಜ ಮಾರ್ತಾಂಡ ದ್ವಿಜ ರಾಜ ಗಮನಾ । ರಾಜ ರಾಜರು ನಿನ್ನ ರಾಜಿಸುವ ಚರಣಾ । ರಾಜೀವದಲ್ಲಿ ವಾಲಗ ಮಾಳ್ಪರೋ । ರಾಜಾ ರಾಜಾಗ್ರಣ್ಯ ರಾಜಾಭಿಷೇಕಕ್ಕೆ ರಾಜಾ ನೀನಲ್ಲದೆ ರಾಜರುಂಟೇ । ರಾಜಗಂಭೀರ ಅಪರಾಜಿತನಾಮ ನಮ್ಮ ವಿಜಯ ವಿಠ್ಠಲ ರಂಗರಾಜ। ರಾಜ ಸಮುದ್ರರಾಜ ಶಯನನೆ ॥ ೧॥

....ಮಟ್ಟತಾಳ....

ದಶಶಿರನೆಂಬುವನು ಅಸಮ ವೀರನಾಗಿ । ಬಿಸಿಜ ಮದ್ಯದಲ್ಲಿ ತ್ರಿದಶರ ಸೆರೆಯಿಡಲು। ದಶದಿಕ್ಕಿನ ಒಳಗೆ ಪೆಸರಾಗಿ ಪಸರಿಸುತ । ಪಶುಪನ ವರದಿಂದ ಕುಸಿಯದಲಿರುತೀರೆ । ಅಸುರನ ಉಪಹತಿಗೆ ವಸುಧಿ ಭಾರವಾಗೆ । ಬಿಸಿಜಾಭವ ಸುಮನಸರೆಲ್ಲರು ಪೋಗಿ । ಬಿಸಿಜ ದಳನಯನ ವಸುಧಿ ಸಂರಕ್ಷಕನೇ । ಅಸುರರ ಶಿಕ್ಷಕನೆ ಅಸಮಯ ಬಂದಿದೆ । ದೆಶೆಗೆಟ್ಟವರ ಪಾಲಿಸಬೇಕೆಂದೆನುತ। ಶಿಶುಗಳೊದರಿದಂತೆ ಎಸದು ಮೊರೆ ಇಡಲು । ವೃಷಭ ನಾಮ ದೇವರ ವಿಜಯ ವಿಠ್ಠಲರೇಯನ । ಬಿಸಜ ಚರಣದಲ್ಲಿ ಹಸನಾಗಿ ಬಿನ್ನೈಸೆ ॥ ೨॥

....ರೂಪಕತಾಳ....

ಮೂರು ಗುಣರಹಿತ ಮೂರುತಿ ಈತನ । ಕಾರುಣ್ಯವನ್ನು ಇನ್ನಾರು ಬಲ್ಲವರಿಲ್ಲ। ವಾರಿಜಜಾದ್ಯರ ಸಾರೆಗರದು ಶ । ರೀರವ ತಡವರಿಸಿ ತಾರತಮ್ಯದಿಂದ । ಭಾರ ಎನ್ನದು ಎಂದು ಭರವಸವ ಇತ್ತು । ಕ್ರೂರನಿಂದಲಿ ಬಂದ ಭಾರ ಇಳಿಸುವೆನೆಂದು । ಧಾರುಣಿಯೊಳಗಿತ್ತ ಈರೈದು ರಥದವನು । ನಾರಾಯಣನು ಕುಮಾರನಾಗಲೆಂದೂ । ಆರಾಧನೆಯ ಮಾಡೆ ಶ್ರೀರಾಮನೆಂದೆಂಬುವ । ತಾರವನ್ನು ಧರಿಸಿದ ರಮಾರಮಣನೂ। ಚಾರುಗುಣನಿಲಯ ವಿಜಯವಿಠ್ಠಲರೇಯಾ । ಸಾರಿದವರ ಮನೋಹಾರವ ತೋರುತ್ತಾ ॥ ೩॥

....ಝುಂಪೆತಾಳ....

ಮುನಿಪ ಕೌಶಿಕನ ಯಾಗವ ಕಾಯಿದು ತಾಟಕಿ । ದನುಜಿಯ ಮುರಿದು ನಿಜಾನುಜನ ಕೂಡ ಜನಕಪುರಕೆ ಗ । ಮನವಾಗಿ ಪೋಗುತ್ತ ಮುನಿಯಾಂ । ಗನಿಯ ಶಾಪವನ್ನೆ ತೊಡದೂ ಅನಲಾ । ಕ್ಷನ ಧನಸ್ಸು ಮುರಿದು ನಿಕ್ಕಡಿ ಮಾಡಿ। ಜನಕರಾಯನ ನಂದಿನಿಯ ನೆರದೂ । ಅನುವರದೊಳಗೆ ಭೃಗುತನು ಜನ್ನ ಪೊಕ್ಕಳಲಿ । ದನುಜ ಸೇರಿರಲು ಬಾಣದಲ್ಲಿ ಸದದೂ । ತನಗೆ ತಾನೇ ಲೀಲೆ ತೋರಿದ ಮಹದೈವವಾ । ತನೆ ಕಾಣೋ ಮೋಹಿತ ವಿಜಯವಿಠ್ಠಲ ರಾಮ ॥ ೪॥

....ತ್ರಿವಿಡಿತಾಳ....

ಪಿತನ ಮಾತನು ಮನ್ನಿಸಿ ಸತಿ ಸಹಿತ ಭಾಗೀ । ರಥಿಯ ದಾಟುತಲಿ ಭಕುತಗೊಲಿದೂ । ಅತಿಶಯವಾದ ಪರ್ವತ ಚಿತ್ರಕೂಟದಲಿ । ಯತಿಗಳಿಂದಲಿ ಪೂಜಿತನಾಗುತ। ಮತಿಹೀನನಾಗಿ ಬಾಳುತಲಿದ್ದ ಕಾಕನ್ನ । ಗತಲೋಚನನಮಾಡಿ ಕ್ಷಿತಿಗಟ್ಟಿದೇ । ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು । ವ್ರತವ ಧರಿಸಿದ ಉನ್ನತ ಮಹಿಮಾ । ಪಥಚಾರನಾಗಿ ಶೋಭಿಸುತ ದಂಡಕಾರಣ್ಯ । ಯತಿ ಪುಂಗವ ಕುಂಭಸುತನ ಕಂಡು । ಅಪ್ರತಿರಥ ನಾಮಾ ವಿಜಯವಿಠ್ಠಲ ರಘು । ಪತಿ ನೀನೇ ಉತ್ಪತ್ತಿ ಸ್ಥಿತಿ ಲಯ ಕರ್ತನೇ ॥ ೫॥

....ಅಟ್ಟತಾಳ....

ಮೋಸದಾ ಅಸುರಿಯ ಮೂಗು ಕೊಯ್ದು ಖರ । ದೂಷಣಾದ್ಯರನ್ನ ಕೊಂದು ಗೌತುಮೆಯಲ್ಲಿ। ವಾಸವಾಗಿದ್ದ ಮಾರೀಚ ಮಾಯಾಮೃಗ । ವೇಷವಾಗಿ ಬರೆ ಕೊಂದು ಮಾರ್ಗದಲ್ಲಿ । ಘಾಸಿಯಾಗಿದ್ದ ವಿಹಂಗನ ಮನ್ನಿಸಿ । ದ್ವೇಷಿಕ ಬಂಧನ ಕಡಿದು ಶಬರಿಯ। ಮೀಸಲು ಭಕುತಿಗೆ ಹಣ್ಣು ಸವಿದು । ಸಂತೋಷದಿಂದಲಿ ತುಂಗಾ ತೀರದಲ್ಲಿ ಪವ । ನಸೂನು ಯೆರಗಲು ಎತ್ತಿ ಮಾತಾಡಿದಿ । ನೇಶ ತನುಜಗೆ ಅಭಯವನ್ನು ಇತ್ತು । ಬೀಸಿ ವಗದೆ ಕಾಲಲಿ ದುಂಧುಮಾರನ್ನ । ನೀ ಸವರಿದೆ ಏಳು ತಾಳವ ಒಮ್ಮೆಲೆ । ಸಾಸಿರ ನಾಮನೇ ವಿಜಯವಿಠ್ಠಲ ನರ । ವೇಷವ ಧರಿಸಿದ ವೈಕುಂಠವಾಸ ॥ ೬॥

....ಆದಿತಾಳ....

ಭೀತಿಶೂನ್ಯನಾದ ಪುರಹೂತ ಮಗನ ಕೊಂದು ರವಿ । ಜಾತಗೆ ಪಟ್ಟವಗಟ್ಟಿ ಪ್ರೀತಿದೂತ ವಾಯುಜನ್ನ । ಸೀತೆ ಬಳಿಗೆ ಕಳುಹೆ ಪೋಗಿ । ಮಾತು ತಂದು ಪೇಳಿದಾತಗೆ ವರವನಿತ್ತು । ಕೋತಿ ಕರಡಿ ಸಹಿತವಾಗಿ ಸೇತುವೆ ಬಿಗಿಸಿ ಬಂದ । ನೀತ ವಿಭೀಷಣನ ಕೂಡ ಕಾತುರದಿಂದಲಿ ದಾಟಿ । ದೂತ ರಾವಣಾದಿಗಳ ಯಾತನಿಗೆ ಬೀಳಕೊಡಿಸಿ । ಪ್ರೀತಿಯಾಸ್ಪದನಾದ ತಾತ ವಿಭೀಷಣಗೆ ಪ್ರ । ದ್ಯೋತ ಶಶಿವುಳ್ಳ ನಕ ಭೂತಳದೊಳಗೆ ಲಂಕೆ । ಯ ತಪ್ಪದಂತೆ ಆಳೆಂದಾತಗೆ ಪಟ್ಟವಗಟ್ಟಿ। ಸೀತೆಸಹಿತ ಬಂದು ಸಾಕೇತ ಪುರದಲ್ಲಿ ನಿಂದು । ಧಾತಾದಿಗಳ ಮನಕೆ ಪ್ರೀತಿ ಬಡಿಸಿ ಶೆರೆಯ ಬಿಡಿಸಿ। ಸೀತೆಯರಸ ವಿಜಯವಿಠ್ಠಲ ಭೂತ । ನಾಥನಿಂದ ಬಂದ ಮಾತು ಮನ್ನಿಸಿದ ಮಹಾತ್ಮಾ ।

....ಜತೆ....

ಸಾರ್ವಭೌಮನೆ ರಾಮಾ ದುರುಳ ದೈತ್ಯ ವಿರಾಮಾ । ಸರ್ವಯೋಗಿ ವಿನಿಶ್ರುತಾ ವಿಜಯವಿಠ್ಠಲ॥೮॥

## ೨) ರವಿವಾರ ಸುಳಾದಿ

....ಧ್ರುವತಾಳ....

ಆಲಿಸಿ ಕೇಳುವದು ಆದರದಿಂದಲಿ । ಶ್ರೀಲಕುಮೀಶನ ಭಕುತರೆಲ್ಲಾ । ಕಾಲದೇಶವ್ಯಾಪ್ತಳೆನಿಪಳಿಗಾದರು । ಶೀಲ ಮೂರುತಿ ಇಂದ ಸುಖವೆಂಬೊದೊ । ಕೇಳಿಬಲ್ಲದ್ದೆ ಸರಿ ಶ್ರುತಿ ಸ್ಮೃತಿ ಮುಖದಿಂದ । ಆಲೋಚನೆ ಇದಕ್ಕಿಲ್ಲ ಎಣಿಸಿ ಗುಣಿಸು । ಮೂಲಜೀವರ ಸುಖಕೆ ಶ್ರೀಪತಿ ಆದ ಬಳಿಕ । ಹಲವು ಬಗೆಯಲಿ ಹರಿಯ ಸಂಪಾದಿಸು । ಇಳಿಯೊಳು ವಾಜಿಪೇಯ ಪೌಂಡರಿಕಾದಿ ಯಜ್ಞ ನಿರ್ಮಲ ವಾದ ಧ್ಯಾನ ಜಪ ನೇಮವೊ । ಜಾಲ ನಕ್ಷತ್ರ ಸಂಖ್ಯ ಮೀರಿದ ಮಹಾದಾನಾ । ಕಾಲೋಚಿತವಾದ ಕರ್ಮಧ್ಯಾನ ವೌನ । ಜ್ವಾಲವಾದ ಕ್ರೂರ ತಪ ಹೋಮ ಸುರರರ್ಚನ । ಸ್ಥೂಲ ಕರ್ಮಾಭಿಜಾತ ಪುಣ್ಯದಿಂದ । ತ್ರಿಲೋಕಾಧಿಪತಿ ಸ್ಥಾನ ವೈದಿದ ನಂತರ । ಇಳಿಯಬೇಕೊ ಧರಿಗೆ ಭೂಯೊ ಭೂಯೊ । ವಲಿಯನು ಇದಕ್ಕ ಜಲಜಾಯತೇಕ್ಷಣ । ವಲಿಸಬೇಕೆಂಬೋದು ಮನದಲ್ಲಿತ್ತೆ । ಪೇಳಿದ ಮಾತಿನಲ್ಲಿ ಸಂದೇಹ

ಮಾಡದಲೆ ॥ ಸುಲಭವಾದ ಪಥಪಿಡಿಯೊ ಬೇಗ । ನೀಲಾಂಬುದಶ್ಯಾಮ ಗುರು ವಿಜಯ-ವಿಠ್ಠಲರೇಯ । ಪಾಲಿಸುವನು ಇದಕೆ ಶ್ರುತಿಯೆ ಸಾಕ್ಷಿ ॥ ೧॥

....ಮಟ್ಟತಾಳ....

ಪ್ರವೃತ್ತಿ ನಿವೃತ್ತಿ ಅಭಿಧಾನದಿ ಕರ್ಮ । ದ್ವಿವಿಧವಾಗಿ ಉಂಟು ತಿಳಿವದು ಚೆನ್ನಾಗಿ। ಪ್ರವೃತ್ತಿ ಕರ್ಮವನು ಸ್ವಪ್ನದಿ ಕಾಮಿಸದೆ । ನಿವೃತ್ತಿ ಕರ್ಮದಲಿ ರತಿ ಉಳ್ಳವನಾಗಿ । ದೇವ ಎನ್ನೊಳಗಿದ್ದು ಕಾಲ ಕರ್ಮಾನುಸಾರ ॥ ಆವಾವದು ಮಾಳ್ಪ ಮಾಡುವೆನದರಂತೆ। ಆವ ಮಾಡಿಸದಿರಲು ನಾನ್ಯಾತಕೆ ಸಲ್ಲೆ । ಕಾವಕೊಲ್ಲುವ ತಾನೆ ಅನ್ಯರು ಎನಗಿಲ್ಲ । ಸರ್ವಾಧಿಷ್ಠಾನದಲಿ ಹರಿಯೆ ವ್ಯಾಪಿಸಿ ಇದ್ದು। ಶರ್ವಾದಿಗಳಿಂದ ವ್ಯಾಪಾರವ ಗೈಸಿ । ನಿರ್ವಾಹಕನಾಹ ಸ್ವತಂತ್ರ ತಾನಾಗಿ । ಓರ್ವನಾದರೂ ಶ್ವಾಸ ಬಿಡುವ ಸೇದಿಕೊಂಬ । ಗರ್ವಿಗಳಿಲ್ಲವೊ ಈ ಪೃಥ್ವಿಮಧ್ಯ। ಈ ವಿಧದಲಿ ತಿಳಿದು ಜೀವರ ಲಕ್ಷಣ। ಸಾವಧಾನದಿ ಗುಣಿಸು ಹರಿ ಕರ್ತೃತ್ವವನು। ದೇವದೇವ ಬಿಂಬ, ಜೀವನೆ ಪ್ರತಿಬಿಂಬ । ಭಾವ ಕೆಡದಂತೆ ಯೋಚಿಸು ಸರ್ವತ್ರ। ಜೀವಭಿನ್ನ ಗುರುವಿಜಯವಿಠ್ಠಲರೇಯ । ಸೇವಕರಭಿಮಾನ ಎಂದೆಂದಿಗೆ ಬಿಡನು ॥ ೨॥

....ತ್ರಿವಿಡಿತಾಳ....

ತನುವಿನೊಳಗೆ ಹೊರಗೆ ವಿಭಕ್ತ ಅವಿಭಕ್ತ । ಅಣುಮಹದ್ರೂಪದಿ ಹರಿವಾಸವಕ್ಕು । ವನಜಾಂಡಾಧಾರವಾಗಿಪ್ಪ ರೂಪವನ್ನು । ಮನುಜರ ದೇಹಾಶ್ರಯವಾಗಿಪ್ಪದೊ । ನೀನೊಲಿದು ಕೇಳುವದು ಇದನೇವೆ ಅವಿಭಕ್ತ । ಘನರೂಪವೆಂಬೋರು ಜ್ಞಾನಿಗಳು । ಮುನಿಗಳ ಮತವಿದು ಸಂದೇಹ ಬಡಸಲ್ಲ। ಮನದಿ ಚಿಂತಿಸು ಈ ಶೂನ್ಯಾಭಿಧನ ವ - । ದನದ ಮೇಲೆ ವದನ ಶ್ರೋತ್ರದ ಮೇಲೆ ಶ್ರೋತ್ರ ನ-। ಯನದ ಮೇಲೆ ನಯನ ಈ ಕ್ರಮದಿಂದಲಿ । ತನು ಸಮಸ್ತದಲ್ಲಿ ಹರಿ ತನ್ನ ಅಂಗದಿಂದ । ಅನುಸಾರವಾಗಿ ಆಶ್ರಯವಾಗಿಪ್ಪ । ಕ್ಷೋಣಿವೊಳಗೆ ಈ ರೂಪ ಅನುಪೇಕ್ಷದಿಂದ । ತನುವು ನಿಲ್ಲದಯ್ಯಾ ವಿಧಿಗಾದರೂ । ಇನಿತು ಸೊಬಗು ಪರಿಜ್ಞಾನರಹಿತರಾಗಿ ವನಜಭವಾಂಡ ದಾನವಿತ್ತರೂನು । ವನಜನಾಭಾನೊಮ್ಮೆ ದೃಷ್ಟಿಲಿ ನೋಡನಯ್ಯಾ ॥ ಅನುಮಾನ ಇದಕ್ಕಿಲ್ಲ ಶ್ರುತ್ಯುಕ್ತವೊ । ವಿನಯದಿಂದಲಿ ಇದು ಸ್ಮರಿಸಿದ ಜನರಿಗೆ । ಜನುಮ ಜನುಮದ ಪಾಪ ಪ್ರಶಾಂತವೊ । ಬಿನಗು ವ್ಯೆಲಿಗೆ ಯುಂಟೆ ಸ್ಪೃಷ್ಟಾಸ್ಪೃಷ್ಟದಿಂದ। ಅನುದಿನ ಪವಿತ್ರನು ಅಕೃತದಿಂದ । ಋಣತ್ರಯ- ದಿಂದಲಿ ಮುಕ್ತನಾಗಿ ಸತತ । ದನುಜಾರಿ ಪುರವನ್ನೆ ಐದುವರೋ ಮಲಿನ । ಮನುಜರ ಮನಸಿಗೆ ತೋರನೊಮ್ಮೆ । ನೀನೆ ಗತಿ ಎಂದು ನಂಬಿದವರ । ಮನಕೆ ಪೊಳೆವನು ಬಿಡದೆ ಮಾತರಿಶ್ವನ ದಯದಿ । ಮನುಜಾ ತಿಳಿ ಇದನೆ ಭಕುತಿ ಇಂದ । ಗುಣಗಣಪೂರ್ಣ ಗುರು ವಿಜಯವಿಠ್ಠಲರೇಯ । ಜನನ ಮರಣಗಳಿಂದ ದೂರಮಾಳ್ಪ ॥ ೩॥

....ಅಟ್ಟತಾಳ....

ಈ ರೀತಿ ಇಂದಲಿ ದೇಹ ಧಾರಿಯರೂಪವ । ಸಾರಿ ಸಾರಿಗೆ ತಿಳಿದು ಪೂಜಿಸು ಗುಪ್ತದಿ। ಶಾರೀರ ಉಪಯೋಗವಾದ ವಿಷಯ ಜಾಲ । ಹರಿಗೆ ಷೋಡಶ ಉಪಚಾರವೆಂದೆನ್ನು । ಆರಾರು

ಮಾಡುವ ವಂದನಾ ನಿಂದ್ಯೆಯು । ಶ್ರೀರಮಣನಿಗಿದು ಬಲು ಸ್ತೋತ್ರವೆಂದೆನ್ನು । ದಾರಾ ಪುತ್ರಾದಿ ಸಮಸ್ತ ಬಂಧುವರ್ಗ । ಪರಿಚಾರಕರೆನ್ನು ಘನಮಹಾಮಹಿಮಂಗೆ । ಮೆರೆವದೆಲ್ಲವು ಹರಿ ಮೆರವುದೆಂದೆನ್ನು । ನಿರುತದಲಿ ಇದು ಮರೆಯದೆ ಮನದೊಳು । ಕರಚರಣಾದಿ ಯಾವದ್ದವಯವ ಚೇಷ್ಟೆಯಾ - । ಗುರುಮುಖದಲಿ ತಿಳಿದು ಯಜ್ಞಕ್ರಮದಿಂದ । ನೀರಜನಾಭನಿಗರ್ಪಿಸು ಅವಧಾನಪೂರ್ವಕ । ಮಾರಜನಕ ಗುರು ವಿಜಯವಿಠ್ಠಲರೇಯ ಕರವ ಪಿಡಿವನು ಇದನೇವೆ ಕೈಕೊಂಡು॥೪॥

....ಆದಿತಾಳ....

ಬೊಮ್ಮಾಂಡದೊಳಗಿದ್ದ ಸ್ಥೂಲವಾದ ವಸ್ತುಗಳು । ನಿಮ್ನವಾಗಿ ದೇಹದಲ್ಲಿ ಸೂಕ್ಷ್ಮವಾಗಿ ಉಂಟು ಕೇಳು । ಈ ಮಹಾ ಲಕ್ಷಣದಿಂದಲೇ ಕ್ಷೇತ್ರವೆಂದು । ಸನ್ಮಾನ್ಯವಾಗಿಪ್ಪದೊ ಜಡಗಳ ಮಧ್ಯದಲ್ಲಿ । ಆ ಮಹಾ ಮಹಿಮನಾದ ಕ್ಷೇತ್ರಜ್ಞನನ್ನು ಭಜಿಸಿ । ಜನ್ಮವ ನೀಗುವದು ಅವ್ಯವಧಾನದಿಂದ ವೈ - । ಷಮ್ಯರಹಿತ ಗುರು ವಿಜಯವಿಠ್ಠಲರೇಯ । ಸಮ್ಮುಖನಾಗುವನು ಈ ಪರಿ ತಿಳಿದರೆ ॥ ೫॥

....ಜತೆ....

ಸಕಲ ಸಾಧನ ಮಧ್ಯ ಉತ್ಕೃಷ್ಟವೆನಿಪದು । ನಖಶಿಖ ಪರಿಪೂರ್ಣ ಗುರು-ವಿಜಯವಿಠ್ಠಲ ವೊಲಿವ ॥ ೬॥

## ೩. ಸುದಾಮಚರಿತ್ರೆ ಹಾಡು

(ಪ್ರತಿ ರವಿವಾರ ಮತ್ತು ಗುರುವಾರ ಸಂಜೆ ಅನ್ನಬೇಕು)

ಪತಿಯ ಪಾದಕ್ಕೆರಗಿ ಮತಿ ಬೇಡಿ ಪಾರ್ವತಿ । ಸುತಗೆ ವಂದನೆಯ ಮಾಡಿದಳು॥ ಅತಿ ಭಕ್ತಿಯಿಂದಲಿ ಸ್ತುತಿಸುವ ಜನರಿಗೆ ಸದ್ಗತಿಯಾಗಲೆನುತ ಪೇಳಿದಳು ॥ ೧॥ ಸುದಾಮನೆಂಬೋರ್ವ ಸೂಕ್ಷ್ಮದ ಬ್ರಾಹ್ಮಣ । ಹೊದಿಯಲಿಕ್ಕಿಲ್ಲ ಅಶನವಿಲ್ಲ ॥ ಗದ ಗದ ನಡಗುತ ಮಧುರ ಮಾತಾಡುತ । ಸದನದೊಳಿರುತಿದ್ದನಾಗ ॥ ೨॥ ಪ್ರಾತಃ ಕಾಲದಲೆದ್ದು ನಿತ್ಯಕರ್ಮವ ಮುಗಿಸಿ। ನಾಥನ ಧ್ಯಾನ ಮಾಡುತಲಿ ॥ ಪಾತ್ರರ ಮನೆಗ್ಹೋಗಿ ಯಾಚನೆಗಳ ಮಾಡಿ । ಗ್ರಾಸ ತರುವನು ಮುಷ್ಟಿ ತುಂಬ ॥ ೩॥ ಪತಿವ್ರತೆ ಹೆಂಡತಿ ಪತಿ ತಂದದ್ದೆ ಸಾಕೆಂದು ಹಿತದಿಂದ ಪಾಕ ಮಾಡುವಳು॥ ಅತಿ ಭಕ್ತಿಯಿಂದಲಿ ಪತಿಗೆ ಭೋಜನ ಬಡಿಸಿ । ಮತಿವಂತಿ ಉಳಿದದ್ದುಂಬುವಳು॥೪॥ ಹಸಿವೆ ತೃಷೆಗಳಿಂದ ಅತಿ ಕ್ಲೇಶವಾಗಿದ್ದು ಪತಿ ಕೂಡ ಮಾತನಾಡಿದಳು॥ ಗತಿಯೇನು ನಮಗಿನ್ನು ಹಿತದವರ್‍ಯಾರಿಲ್ಲೆ ಸ -। ದ್ಗತಿಯೇನೆನುತ ಪೇಳಿದಳು ॥ ೫॥ ಪೊಡವಿಯೊಳಗೆ ನಿಮ್ಮ ಒಡಹುಟ್ಟಿದವರಿಲ್ಲೆ। ಒಡನೆ ಆಡಿದ ಗೆಳೆಯರಿಲ್ಲೆ ॥ ಕರೆದು ಕೂಡಿಸಿಕೊಂಡು ಬಿರುಸು ಮಾತ್ಹೇಳುವ । ಹಿರಿಯರು ದಾರಿಲ್ಲೆ ನಿಮಗೆ ॥ ೬॥ ಚಿಕ್ಕಂದಿಲ್ಲೋದಿಲ್ಲೆ ಹೆತ್ತವರ್‍ಹೇಳಿಲ್ಲೆ। ಉತ್ತಮ ಗುರುಗಳಿಲ್ಲೇನು ॥ ಹೊತ್ತು ವೇಳೆಗಾಗೋ ಮಿತ್ರರು ಯಾರಿಲ್ಲೇ । ಮತ್ತೆ ಕೇಳಿದಳು ಕ್ಲೇಶದಲಿ ॥ ೭॥ ಮಡದಿ ಮಾತನು ಕೇಳಿ ಮನದಲಿ ಯೋಚಿಸಿ। ಹುಡುಗನಾಗಿರಲಿಕ್ಕೆ ಹೋಗಿ ॥ ಗುರುಕುಲವಾಸದಲಿ ಹರಿ ನಾವು ಓದಿದ್ದು । ಹರಿ ಹೊರ್ತು ಇನ್ನೊಬ್ಬರಿಲ್ಲಾ ॥ ೮॥ ಇನ್ನೊಬ್ಬರೇತಕೆ ಅನ್ಯರಪೇಕ್ಷೇಕೆ । ಮನ್ನಿಸಿ ಹೋಗಿ

ಬರ್ರೆಂದಳು ॥ ಇನ್ನೇನು ಕೊಡುತಿಹೆ ಹರಿ ಮುಂದ ಇಡಲಿಕ್ಕೆ । ಚೆನ್ನಾಗಿ ಕೇಳಿದನಾಗ ॥೯॥ ಗಾಬರಿಯಾದಳು ಸಾಗಿ ತಾ ನಡೆದಳು । ಬೇಗ ತಂದಳು ಅವಲಕ್ಕಿ ॥ ಬಾಗಿ ವಸ್ತ್ರದೋಳು ಬೇಗ ಕಟ್ಟಿಕೊಟ್ಟು । ಹೋಗಿ ಬರ್ರೆನುತ ಹೇಳಿದಳು ॥ ೧೦॥ ಅಂಗಳವನು ಬಿಟ್ಟು ಮುಂದಕೆ ಬಂದನು । ಹಂಗು ಹಾರಿ ಹೋದಿತೆಡಕೆ ॥ ಮಂಗಳವಾಗುವದು ರಂಗನ ದರುಶನ । ಸಂದೇಹವಿಲ್ಲದಾಗುವದು ॥ ೧೧॥ ಬಾಗಿಲವನು ಬಿಟ್ಟು ಸಾಗಿ ಮುಂದಕೆ ಬರಲು । ಕಾಗಿ ಹಾರ್‍ಹೋದವು ಬಲಕೆ ॥ ಆಗುವದು ನಮಗಿನ್ನು ಆಗುವುದು ಶುಭಚಿನ್ಹ । ಆಗುವದು ಹರಿಕೃಪೆಯಿಂದ ॥ ೧೨॥ ಹೀಗೆಂದ ಬ್ರಾಹ್ಮಣ ಮುಂದಕೆ ನಡೆದನು। ಕಂಡನು ಕಮಲ ಪುಷ್ಪಗಳ ॥ ರಂಗನ ಹೆಂಡರಿಗೆ ಹೆರಳಿಗೆ ಬೇಕೆಂದು । ತೆಗೆದುಕೊಂಡನು ಕಮಲ ಪುಷ್ಪಗಳ ॥ ೧೩॥ ಹರಿಯುವ ಜಲವೆಲ್ಲ ಹರಿಯ ಅಭಿಷೇಕಕ್ಕೆಂ-। ದ್ಹರುಷದಿಂದಲೆ ತುಂಬಿಕೊಂಡು ॥ ಕರದಲ್ಲಿ ಹಿಡಕೊಂಡು ಪುರದ ಬಾಗಿಲ ಮುಂದೆ। ಹರಿ ಹ್ಯಾಗೆ ದೊರಕುವನೆಂದ ॥ ೧೪॥ ನಿಂತನು ಬ್ರಾಹ್ಮಣಾನಂತರೂಪದ ಧ್ಯಾನ । ಅಂತರಂಗದಲಿ ಮಾಡುತಲಿ ॥ ಸಂತೋಷ ದಿಂದಲಿ ಧರಿಸಿದ ದಶರೂಪ - । ದಿಂದ ಬಂದೆನ್ನ ಕಾಯೆಂದ ॥ ೧೫॥ ಹರಕು ವಸ್ತ್ರವನುಟ್ಟು ಹರಿಧ್ಯಾನ ಮಾಡುವ । ವಿಪ್ರನ ಕಂಡು ಚಾರಕರು ॥ ಬರ ಬೇಡಿರೊಳಗೆ ಹಿರಿಯರಪ್ಪಣೆಯಿಲ್ಲ । ತಿರುಗಿ ಹೋಗೆನುತ ಹೇಳಿದರು ॥ ೧೬॥ ಅಂದ ಮಾತನು ಕೇಳಿ ಅಂಜಿದ ಬ್ರಾಹ್ಮಣ । ಇಂದಿರಾರಮಣಗ್ಹೇಳೆಂದ ॥ ಹೆಸರು ಸುದಾಮನಂತೆ ಹಸಿದು ಬಂದಾನೆಂದು । ವಸುದೇವತನಯಗ್ಹೇಳಿದರು ॥ ೧೭॥ ಕೇಳಿದ ಹರಿಯೆದ್ದು ಬಹಳ ಹರುಷದಿಂದ । ಬೇಗನೆ ಕರೆತನ್ನಿರವನ ॥ ಹೋಗು ಹೋಗೆಂದರೆ ಸಾಗಿ ಮುಂದಕೆ ಬಂದು। ಬಾಗಿಲಕೆ ಬಂದ ಸುಧಾಮ ॥ ೧೮॥ ಬಂದ ಭಕ್ತನ ನೋಡಿ ಆನಂದದಿಂದೆದ್ದು । ವಂದಿಸಿ ಆಸನವ ಹಾಕಿದರು ॥ ಚಂದದಿಂದಲಿ ಕರವ ಹಿಡಿದು ಮಾತಾಡುತ । ಬಂದ ಕಾರಣವ ಕೇಳಿದರು ॥ ೧೯॥ ಮಂದಗಮನೆ ಸಹಿತ ತಂದ ಉದಕದಿಂದ ಚಂದದಿಂದಲಿ ಪಾದ ತೊಳೆದ । ಗಂಧ ಕೇಶರ ಹಚ್ಚಿ ಚಂದ ಚಾಮರದಿಂದ। ಅಂದದಿ ಗಾಳಿ ಬೀಸಿದರು ॥ ೨೦॥ ಹಸಿದು ಬಂದಾರೆಂದು ಹಸಿವೆಗೆ ತಕ್ಕಂಥ । ಹಸನಾದ ಹಣ್ಣು ಸಕ್ಕರೆಯು ॥ ಕುಸುಮನಾಭನು ತಾನು ಪನ್ನೀರು ತಂದಿಡೆ । ಉಂಡು ಕೈತೊಳೆದ ಸುದಾಮ ॥೨೧॥ ಮಂದರಧರಗಿನ್ನು ಸುಂದರ ಸತಿಯರು । ತಂದರು ತಬಕ ವೀಳೆಯನು ॥ ಇಂದಿರೆರಮಣನು ಬಂದ ಸುಧಾಮನು । ಚಂದದಿ ಮೆಲೆದರು ವೀಳೆಯನು ॥೨೨॥ ಶ್ರಮ ಬಹಳವಾಗಿದೆ ವಿಶ್ರಮಿಸಿಕೊಳ್ಳಿರೆಂದು । ಸೆಳೆಮಂಚ ತಂದು ಹಾಕಿದರು ॥ ಶಾಲು ಸಕಲಾತಿಯು ಮೇಲಾದ ಹಾಸಿಗೆ । ಮೇಲೆ ಮಲಗಿದನು ಸುದಾಮ ॥೨೩॥ ಅಂದಿನ ರಾತ್ರಿಯಲಿ ಮಂದಗಮನೇರ ಬಿಟ್ಟು । ಬಂದು ಮಲಗಿದನು ಶ್ರೀಹರಿಯು॥ ಹಿಂದಿನ ವೃತ್ತಾಂತ ಒಂದೊಂದು ಸ್ಮರಿಸುತಾ । ನಂದದಿ ಹರಿಯು ಸುದಾಮ ॥ ೨೪॥ ಅಂದಿನ ಸ್ನೇಹವು ಇಂದೇಕೆ ನೆನಪಾಯ್ತು । ಬಂದಿರಿ ಬಹು ದಿನಕೆಂದ ॥ ಹೆಂಡತಿ ಮಕ್ಕಳು ಇಹರೇನು ನಿಮಗೆಂದು । ಇಂದಿರೆರಮಣ ಕೇಳಿದನು ॥ ೨೫॥ ಹೆಂಡತಿ ಕಳುಹಿದಳು ರಂಗನ ದರುಶನ । ಕೊಂಡು ಬಾರೆನುತ ಪೇಳಿದಳು॥ ತಂದದ್ದು ಕೊಡಲಿಕ್ಕೆ ಸಂದೇಹವೇತಕೆ । ತಂಡುಲ ಹಿಡಿದು ಜಗ್ಗಿದನು ॥ ೨೬॥ ಮುಷ್ಟಿತುಂಬವಲಕ್ಕಿ ಮುಕ್ಕಿದ ಹರಿ ಬೇಗ । ನಕ್ಕರು ಸತಿಯರು ಎಲ್ಲ। ಇಷ್ಟೇ ಸಾಕು ಎಂದು ಗಟ್ಯಾಗಿ ಕೈ ಹಿಡಿಯೆ।

ಕೊಟ್ಟನು ಭಕ್ತಗೈಶ್ವರ್ಯ ॥ ೨೭॥ ಹದಿನಾರು ಸಾವಿರ ಚದುರೇರ ಕರೆಸಿದ । ಕೊಡಿಸಿದೆಲ್ಲರಿಗೆ ತಂಡುಲವ ॥ ಉಳಿಸಿದ ಅವಲಕ್ಕಿ ಉಣಲಿಕ್ಕೆ ಮಾರ್ಗಕ್ಕೆ । ಬೇಕೆಂದು ಬಿಗಿದು ಕಟ್ಟಿದರು ॥೨೮॥ ರನ್ನದ ಬಾಗಿಲಿಗೆ ಚಿನ್ನದ ಚೌಕಟ್ಟು । ಹೊನ್ನ ಹೊಸ್ತಿಲವ ನಿರ್ಮಿಸಿದ ॥ ರನ್ನ ಮಾಣಿಕ ಬಿಗಿದ ತೊಲಿ ಕಂಬ ಗಿಳಿಬೋದು । ಪನ್ನಗಶಯನ ನಿರ್ಮಿಸಿದ ॥ ೨೯॥ ಇರಿರಿ ನಾಲ್ಕು ದಿವಸ ತ್ವರೆ ಯಾಕೆ ಮಾಡುವಿರಿ । ಇರಲಿಕ್ಕೆ ಬಾರದೆ ಅಂದ ॥ ನೆರೆಹೊರೆಯಾರಿಲ್ಲ ತರುಣಿಯೊಬ್ಬಳಿಹಳು । ಇರಲಿ ನಾಹೇಗೆ ಪೇಳೆಂದ ॥ ೩೦॥ ಪಾದಕೆ ಎರಗಿ ತಾ ಸಾಗಿ ಮುಂದಕೆ ಬಂದ ಬಾಗಿಲಕೆ ಬಂದ ಸುದಾಮ । ಹೋಗಿರಿ ಹಿಂದಕೆ ಹೋಗಿಬರುತೇನೆನಲು । ಬಾಗಿ ಕೈಮುಗಿದ ಶ್ರೀಹರಿಯು ॥ ೩೧॥ ಮುಂದೆ ಬಂದನು ಇಂದೇನೂ ಕೊಡಲಿಲ್ಲ । ಹೆಂಡತಿಗೆ ಹೇಳಲೇನೆಂದಾ ॥ ನಿಂತಾನು ಓಣಿಯಲಿ ಮಂದಿರ ಸಿಗಲಿಲ್ಲಾ । ಹೆಂಡತಿಯ ಕಂಡ ಸುದಾಮ ॥೩೨॥ ಮಂದಿರವನ್ನೆಲ್ಲ ಕಂಡನು ಐಶ್ವರ್ಯ । ಚಂದದಿಂದಾಭರಣ ಕಂಡಾ॥ ಇಂದಿರಾಪತಿಯನ್ನು ಕಂಡು ಬಂದುದರಿಂದ । ಬಂದಿತು ಸಕಲ ಸಂಪತ್ತು ॥ ೩೩॥ ರವಿವಾರ ಹಾಡಿದರೆ ರಾಜಕಾರ್ಯವಾಗುವದು । ಬಂಜೆಗೆ ಮಕ್ಕಳಾಗುವವು ॥ ಬರಡೆಮ್ಮೆ ಕರೆಯೋದು ಬಡತನ ಹಿಂಗುವದು । ಗುರುವಾರ ಹಾಡಿದವರಿಗೆ॥೩೪॥ ಶ್ರೀನಿವಾಸನ ಧ್ಯಾನ ಮೌನದಿಂದಲಿ ಮಾಡಿ । ನಾನಾ ಸಂಪತ್ತು ಪಡೆದರು ॥ ಅದರ ವಿಷಯ ತಿಳಿದು ಗತಿ ಮೋಕ್ಷ ಇರಲೆಂದು । ಶ್ರೀಹರಿ ಕೊಡು ದೇವ ಸಿರಿಯ ॥ ೩೫॥ ಇದು ಭಾಗವತವೆನ್ನಿ ಇದು ಭಾಗವತವೆನ್ನಿ । ಇದ ಭಾಗವತಕೆ ಕೀಲಗಳು । ಇದಕೆ ಪ್ರಿಯನು ನಮ್ಮ ಪುರಂದರ ವಿಠ್ಠಲ । ಇದರಿಂದ ಮುಕ್ತಿ ಕೊಡುವನು ಸತ್ಯ ॥ ೩೬॥

## ಮಂಗಳ ಹಾಡು

ಜಯ ಜಯ ಪಾಂಡುರಂಗ ಜಾನಕೀಮೋಹನಾಂಗ । ಜಯ ಕಾಳಿಮದಭಂಗ ಪಾಲಿಸೋ ಮೋಹನಾಂಗ ॥ ಪ॥ ಪಿಡಿಯವಲಕ್ಕಿಗೆ ಬಡವ ಸುದಾಮಗೆ। ತಡೆಯದೆ ಭಾಗ್ಯಕೊಟ್ಟೆನ್ನೊಡೆಯ ನೀನಹುದಹುದೋ ॥ ೧॥ ಪಾರ್ಥಸಾರಥಿಯಾಗಿ ಪಾಂಡವರನ್ನೇ ಕಾಯ್ದಿ । ಪಾದ ನಂಬಿದೆ ನಿನ್ನ ಪಾರು ಮಾಡಿಸೋ ಎನ್ನ ॥ ೨॥ ಕರುಣವಿರಲಿ ನಿನ್ನ ಪರಮಪುರುಷ ಎನ್ನ । ತ್ವರಿತದಿ ಬಂದು ಕಾಯೋ ಗಿರಿಜ ವೆಂಕಟರಮಣ ॥ ೩॥

## ೨) ಸೋಮವಾರ

### ( ರುದ್ರಾಂತರ್ಗತ ಶ್ರೀಲಕ್ಷ್ಮೀನರಸಿಂಹದೇವರು, ರುದ್ರದೇವರು )

**ಅ. ಹಾಡುಗಳು**

**ರಾಗ - ಸಾವೇರಿ, ಅಟ್ಟತಾಳ**

೧) ರುದ್ರಾಂತರ್ಗತ ನಾರಸಿಂಹ । ಪಾಹಿ । ಭದ್ರಮೂರುತಿ ನಿರ್ಗತಾಂಹ ॥ ಪ॥ ಹೃದ್ರೋಗ ಕಳೆದು ಜ್ಞಾನಾರ್ದ್ರಸ್ವಾಂತನ ಮಾಡು । ಪದ್ರ ಸಾಮಗಘುಸಮುದ್ರ ದಾಟಿಸೋ ಬೇಗ ॥ ಅ.

ಪ. ॥ ಏಸೇಸು ಜನ್ಮಗಳಲ್ಲಿ । ನಿನ್ನ ದಾಸನೆಂದು ಎನ್ನ ಬಲ್ಲಿ ॥ ಈಶ ನೀನೆಂಬುದು ಲೇಶವರಿಯೇ ಕ್ಲೇಶ । ನಾಶನ ಪ್ರಭುವೆ ವಾರಾಶಿಜೆವಲ್ಲಭ ॥ ವಾಸವಾನುಜ ವನಧಿ ಶಯನ । ಮಹೇಶ ವಂದಿತ ವರದ ಹೇ ಕರು । ಣಾ ಸಮುದ್ರ ಕರಾಳವದನನೆ । ನೀ ಸಲಹದಿರೆ ಕಾಣೆ ಕಾವರಾ॥ ೧॥ ಹೇಮಕಶ್ಯಪು ತನ್ನ ಸುತನ ನೋಯಿಸೆ । ಶ್ರೀಮನೋಹರನೇ ಅನಾಥನ । ವ್ಯೋಮಪರ್ವತಾಂಬುಧಿ ಧಾಮದೊಳುಳುಹಿದ। ಭೌಮ ಸನ್ಮುನಿಗಣ ಸ್ತೋಮವಂದಿತ ಪಾದ ॥ ಸಾಮಜೇಂದ್ರನ ಸರಸಿಯೊಳು ಸು - । ತ್ರಾಮನಂದನನಾ ರಣದಿ ಕುರು - । ಭೂಮಿಪತಿ ಸಭೆಯೊಳಗೆ ದ್ರೌಪದಿ - । ಯಾ ಮಹಾತ್ಮರ ಕಾಯ್ದ ಕರುಣಿ ॥ ೨॥ ವೇದಗಮ್ಯ ವೇದವ್ಯಾಸಾ ಕಪಿಲ । ಯಾದವೇಶ ಮಹಿದಾಸಾ ॥ ಶ್ರೀದ ಶ್ರೀಶ ಅನ್ನದ ವಿಶ್ವಧನ್ವಂತ್ರಿ। ಮೇಧಾವಿಪತಿಯೇ ವಮಾದಿರೂಪಕ ವಿಷ್ಣು । ಕಾದುಕೋ ನಿನ್ನವರ ಮನದ ವಿ - । ಷಾದ ರೋಗಂಗಳನಳಿದು ಮಹದಾದಿ ದೇವ ಜಗನ್ನಾಥ ವಿಠ್ಠಲ । ಆದರದಿ ಪ್ರಹ್ಲಾದ ವರದ ॥ ೩॥

### ರಾಗ - ಆನಂದಭೈರವಿ, ಆದಿತಾಳ

೨) ದಯಮಾಡೊ । ಹರಿಯೆ । ದಯಮಾಡೊ ॥ಪ॥ ದಯಮಾಡ್ಹರಿಯೆ ಅಭಯ ಕೊಟ್ಟು ನೋಡೋ ॥ ಅ.ಪ.॥ ನಾರಸಿಂಹನೆ ನಿನ್ನ ಮೋರೆಗಂಜುವನಲ್ಲ। ಕ್ರೂರವಾದ ನಿನ್ನ ಕೋರೆಗಂಜುವನಲ್ಲಾ ॥ ಶ್ರೀರಮಣನೆ ಸಂಸಾರ ಚಕ್ರ ಕ್ಷುರ। ಧಾರೆಗಂಜುವೆನು ಪಾರುಮಾಡೋ ॥ ೧॥ ಹುಂಕೃತಿ ನಿನ್ನ ಭಯಂಕರ ರೂಪಕೆ । ಶಂಕಿತನಾಗಿ ಭಯಾಂಕಿತನಲ್ಲವೋ ॥ ಶಂಕಿಸಿ ನನ್ನ ಅಹಂಕೃತಿಯಿಂದ ಭಯಾಂಕಿತನಾದೆನು ಶಂಕಿಸಬೇಡೋ ॥ ೨॥ ಹೃದಯ ಭೇದಿಸುವ ಷಡ್ವಿಧ ವೈರಿಗಳೆ । ನ್ನೆದುರಿಗೆ ಬೀಳದೆ ಕದನ ಮಾಡುವರಯ್ಯಾ ॥ ಎದೆಯೊಡೆದಂಜಿ ನಾ ಗದಗದ ನಡಗುವೆ । ನೊದಗಿ ಬೇಗನೆ ಬಂದು ಬದಿಯಲಿ ಕೂಡೋ ॥ ೩॥ ಹಿರಿಯರ ಬಲದಿಂದ ಮೆರೆವ ಮಕ್ಕಳು ಮಾಳ್ಪ । ಪರಮಾಪರಾಧವ ಸ್ಮರಿಸುವರೇನವರು ॥ ಧರೆಯೊಳಗೆಲ್ಲರಿಗ್ಹಿರಿಯನೇ ನಾ ನಿನ್ನ । ಮರೆತರು ನೀನೆನ್ನ ಮರೆಯಲು ಬೇಡವೋ ॥ ೪॥ ಸ್ಮರಣೆಲ್ಲದೆ ನಾ ಸ್ಮರಿಸಿ ವಿಷಯಂಗಳ। ಮರೆತು ನಿನ್ನಡಿಗಳ ಮರಗುವೆ ಮನದೊಳು। ವರದ ಅನಂತಾದ್ರಿಧೊರೆಯೆ ಎಂದೆಂದಿಗು। ಮರೆಯದಂಥ ವರ ತ್ವರದಲಿ ನೀಡೋ ॥

### ರಾಗ - ಶಂಕರಾಭರಣ, ಅಟ್ಟತಾಳ

೩) ನರಸಿಂಹ ಪಾಹಿ ಲಕ್ಷ್ಮೀನರಸಿಂಹ ॥ ಪ॥ ನರಸಿಂಹ ನಮಿಪೆ ನಾ ನಿನ್ನ ಚಾರು । ಚರಣಕಮಲಕೆ ನೀನೆನ್ನ । ಅಹ । ಕರವ ಪಿಡಿದು ನಿಜ ಶರಣನೆಂದೆನಿಸು ಭಾ । ಸುರ ಕರುಣಾಂಬುಧಿ ಗರುಡವಾಹನ ಲಕ್ಷ್ಮೀ ನರಸಿಂಹ ॥ ಅ. ಪ.॥ ತರಳ ಪ್ರಲ್ಹಾದನ ನುಡಿಯ ಕೇಳಿ । ತ್ವರಿತದಿ ಬಂದ್ಯೋ ಎನ್ನೊಡೆಯ । ಏನು । ಕರುಣಾಳೋ ಭಕ್ತರ ಭಿಡೆಯ । ಮೀರ । ಲರಿಯೆನೆಂದೆಂದು ಕೆಂಗಿಡಿಯ । ಆಹ ॥ ಭರದಿಂದುಗುಳುತ ಬೊಬ್ಬಿರಿದು ಬೆಂಬತ್ತಿ ಕ- । ರ್ಬುರ ಕಶ್ಯಪುವಿನ ಮುಂಗುರಳ ಪಿಡಿದೆ ಲಕ್ಷ್ಮೀ... ॥ ೧॥ ಪ್ರಳಯಾಂಬುನಿಧಿ ಘನ ಘೋಷ । ದಂತೆ । ಘುಳಿ ಘುಳಿಸುತಲಿ ಪ್ರದೋಷ । ಕಾಲ । ತಿಳಿದು ದೈತ್ಯನ ಅತಿರೋಷ। ದಿಂದ । ಪ್ಪಳಿಸಿ ಮೇದಿನಿಗೆ ನಿರ್ದೋಷ । ಅಹ ॥ ಸೆಳೆಸೆಳೆಯುತ ಚರ್ಮ ಸುಲಿದು ಕೆನ್ನೆತ್ತರೋ। ಕುಳಿಯನಾಡಿದ ಧೀರ ಇಳೆಯೊಳಗೆ ಲಕ್ಷ್ಮೀ.... ॥ ೨॥ ಕ್ರೂರ ದೈತ್ಯನ ತೋರಕರುಳ। ತೆಗೆ । ದ್ಹಾರ ಮಾಡಿದೆ ನಿಜ

ಕೊರಳ । ಕಂಡು । ವಾರಿಜಾಸನ ಮುಖ್ಯರರಳ । ವೃಷ್ಟಿ । ಸಾರಿಗರೆದರಾಗ ತರಳ । ಆಹ ॥ ಧೀರ ಪ್ರಲ್ಹಾದಗೆ ತೋರಿ ತ್ವದಂಘ್ರಿ ಸ - । ರೋರುಹ ಪೊರೆದ ಸರ್ವರ ಕಾರುಣ್ಯನಿಧಿ ॥ ೩॥ ಜಯ ಜಯ ದೇವವರೇಣ್ಯ । ಮಹ । ದ್ಭಯ ನಿವಾರಣ ಅಗ್ರಗಣ್ಯ । ಗುಣ । ತ್ರಯದೂರ ದುರಿತಾರಣ್ಯ । ಧನಂ । ಜಯ ಜಗದೇಕ ಶರಣ್ಯ । ಆಹ ॥ ಲಯವಿವರ್ಜಿತ ಲೋಕತ್ರಯವ್ಯಾಪ್ತ ನಿಜಭಕ್ತ । ಪ್ರಿಯ ಘೋರಾಮಯ ಹರ, ದಯ ಮಾಡೆನ್ನೊಳು ಲಕ್ಷ್ಮೀ.... ॥ ೪॥ ಕುಟಿಲ ದ್ವೇಷದವ ನೀನಲ್ಲ । ನಿನ್ನಾ। ಭಟಕಂಜಿದರು ಸುರರೆಲ್ಲ । ನರ । ನಟನೆ ಮಾಡಿದ್ಯೊ ಲಕ್ಷ್ಮೀನಲ್ಲ । ಇದು । ಸಟೆಗಾಣೆನಪ್ರತಿಮಲ್ಲ । ಆಹ ॥ ವಟಪತ್ರಶಯನ ದೂರ್ಜಟಿವಂದ್ಯ ಜಗನ್ನಾಥ । ವಿಠ್ಠಲ ಕೃತಾಂಜಲಿಪುಟದಿ ಬೇಡುವೆ ಲಕ್ಷ್ಮೀ.... ॥ ೫॥

**ಆ. ಸುಳಾದಿಗಳು**

## ೧) ಶ್ರೀನರಸಿಂಹ ಸುಳಾದಿ

**....ಧ್ರುವತಾಳ....**

೧) ವೀರ ಸಿಂಹನೆ ನಾರ ಸಿಂಹನೆ ದಯ ಪಾರಾ । ವಾರನೆ ಭಯ ನಿವಾರಣ ನಿರ್ಗುಣ । ಸಾರಿದವರ ಸಂಸಾರ ವೃಕ್ಷದ ಮೂಲ । ಬೇರರಿಸಿ ಕೀಳುವ ಬಿರಿದು ಭಯಂಕರ। ಘೋರವತಾರ ಕರಾಳವದನ ಅ । ಘೋರ ದುರಿತ ಸಂಹಾರ ಮಾಯಾಕಾರ । ಕ್ರೂರದೈತ್ಯರ ಶೋಕ ಕಾರಣ ಉದುಭವ । ಈರೇಳು ಭುವನ ಸಾಗರದೊಡೆಯ । ಅರೌದ್ರನಾಮಕ ವಿಜಯವಿಠ್ಠಲ ನರಸಿಂಗ। ವೀರರ ಸಾತುಂಗ ಕಾರುಣ್ಯಾಪಾಂಗ ॥ ೧॥ ----------

**(ಶ್ರೀವಿಜಯದಾಸರ "ಪಂಚರತ್ನ ಸುಳಾದಿ" ಗಳಲ್ಲಿ ಈ ಸುಳಾದಿಯನ್ನು ಹಿಂದಿನ ಪ್ರಕರಣದಲ್ಲಿ ಕೊಡಲಾಗಿದ್ದು ಅದನ್ನು ನೋಡಿ ಅನ್ನಬಹುದು.)**

## ೨) ಶ್ರೀ ಜಗನ್ನಾಥದಾಸ ವಿರಚಿತ ಶ್ರೀನೃಸಿಂಹ ಸುಳಾದಿ

**ರಾಗ - ನಾಟಿ, ತಾಳ - ಧ್ರುವ**

ದುರಿತವನ ಕುಠಾರಿ ದುರ್ಜನ ಕುಲವೈರಿ । ಶರಣಾಗತ ವಜ್ರಪಂಜರಕುಂಜರ । ವರ ಸಂರಕ್ಷಕ ಜನ್ಮಮರಣರಹಿತ ಮಹಿತ । ಪರಮ ಕರುಣಾಸಿಂಧು ಭಕುತಬಂಧು । ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ । ಹರಿಯೆ ಕ್ಷರಾಕ್ಷರ ಪುರುಷೋತ್ತಮಾ । ಉರುಗಾಯ ವೈಕುಂಠ ವರಮಂದಿರ ಚಂದಿರ । ತರಣಿ ಕೋಟಿ ಸಂಕಾಶ ವಿಮಲಕೇಶ । ಧುರದೊಳಗರ್ಜುನನ ತುರಗ ನಡೆಸಿದ ಸಂ । ಗರ ಭಯಂಕರ ಲೋಕೈಕ ವೀರ । ನರಸಿಂಹ ನಿನ್ನ ಪಾದಕ್ಕೆರಗಿ ಬೇಡಿಕೊಂಬೆ ಮೊರೆ ಹೊಕ್ಕ ದಾಸಗೆ ಬಂದ ಭಯವ ಪರಿ । ಹರಿಸಿ ಸೌಖ್ಯವ ಕರುಣಿಸು ದಯ ದಿಂದ । ಸರುವರಂತರ್ಯಾಮಿ ಲೋಕಸ್ವಾಮಿ । ಸ್ಮರಣೆ ಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ । ಅರಿದೆನೋ ನೀನೀಗ ಪೊರೆವುದೆಮ್ಮ । ಸರುವ ಕಾಮದ ಜಗನ್ನಾಥ ವಿಠ್ಠಲ ಭಕ್ತ । ಪರಿಪಾಲಕನೆಂಬ ಬಿರುದು ನಿನ್ನದಲ್ಲವೆ ? ॥ ೧॥

**....ಮಟ್ಟತಾಳ....**

ವಿಧಿಪಿತ ನೀನಲ್ಲದೆ ನಿಧಿಪತಿಗಳು ಉಂಟೆ ? । ಸಧನನಾಗಿ ಇರ್ಪೆ ನಿನ್ನ ದಾಸರಿಗಾಗಿ । ಮಧುಸೂದನ ಜಗನ್ನಾಥ ವಿಠ್ಠಲರೇಯ । ನಿಧನನೆನಿಸಿಕೊಂಬೆ ನಿನ್ನ ದ್ವೇಷಿಗಳಿಗೆ ॥ ೨॥

....ರೂಪಕತಾಳ....

ಮೂರುಲೋಕ ಸ್ವಾಮಿ ಸರ್ವಜ್ಞ ಸುಖಪೂರ್ಣ । ಪ್ರೇರಕ ಸಾಕ್ಷಿ ಕಾರಣ-ಕಾರ್ಯದೋಷವಿದೂರ ಸದ್ಗುಣ ಸಾಂದ್ರ ಸಜ್ಜನಾಂಬುಧಿಚಂದ್ರ । ಭಾರಕರ್ತ ಜಗಕೆ ನೀನಿರೆ ಎಮ್ಮ ಮ । ನೋರಥ ಸಲಿಸುವದೇನಸಾಧ್ಯವೊ ನಿನಗೆ । ಕ್ರೂರಮಾನವರ ಸಂಹಾರ ಮಾಡಿಸು ಗುರು । ಮಾರುತನಿಂದತಿ ಶೀಘ್ರವಾಗಿ । ನೀ ರಕ್ಷಿಸೆಂದು ಪ್ರಾರ್ಥಿಸುವೆ ಭಕ್ತಗೆ ಭೂರಿ । ಸಾರ ಭಾಗ್ಯವನಿತ್ತು ಕೃಪೆ ಮಾಡು ಅನುದಿನ । ಶೂರ ಜಗನ್ನಾಥ ವಿಠ್ಠಲ ನೀನಲ್ಲದಿ । ನ್ನಾರು ಭಕ್ತರ ಕಾವ ಕರುಣೆಗಳು ಜಗದಿ ? ॥ ೩॥

....ಝಂಪೆತಾಳ....

ಪಿತನಿಂದ ನೊಂದ ಪ್ರಹ್ಲಾದನ ಕಾಯ್ದೆ ದೇ । ವತೆಗಳಿಗೆ ಬಂದ ಭಯವ ಪರಿಹರಿಸಿ ದಯದಿ ದ್ರೌ । ಪದಿಯ ಮೊರೆ ಕೇಳಿ ದಿವ್ಯಾಂಬರವ ಕರುಣಿಸಿದೆ । ಕ್ಷಿತಿಜನಾಲಯದಿ ಬಳಲುವ ಬಾಲೆಯರ ದ್ವಾರಾ । ವತಿಗೆ ಕರೆದೊಯ್ದು ಒಲಿದವರ ಪೋಷಿಸಿದೆ ಮಾ । ರುತಿಯ ಕರದಿಂದ ಬೃಹದ್ರಥನ ಕುವರನ ಕೊಲಿಸಿ। ಪೃಥಿವಿಪರ ಬಿಡಿಸಿ ಪಾಲಿಸಿದೆ ಕರುಣದಲಿ ಕುರು । ಪೃತನದೋಳ್ಪಾಂಡವರ ಗೆಲಿಸಿ ಕೀರ್ತಿಯನಿತ್ತೆ । ಶತಮೋದನಾಸ್ತ್ರದಿಂದಲಿ ಗರ್ಭದೊಳಗೆ ಪೀಡಿತನಾದ ಶಿಶು ಪರೀಕ್ಷಿತನ ಸಂತೈಸಿದೆ । ಸಿತಿಕಂಠಗೊಲಿದು ಸಾಯಕನಾಗಿ ಮುಪ್ಪುರದ । ಸತಿಯರನು ಒಲಿಸಿ ಕೀರುತಿಯಿತ್ತೆ ಭಕುತನಿಗೆ । ಮಿತಿಯುಂಟೆ ನಿನ್ನ ಕರುಣಕೆ ದೇವಪತಿ ಸಾ। ಪ್ರತ ಬೇಡಿಕೊಂಬೆ ಬಿನ್ನಪ ಕೇಳಜಸ್ರ ಸಂ । ಸ್ತುತಿಪ ಭಕುತರ ಮನೋರಥವ ಪೂರೈಸು ಸು । ವ್ರತ ನಾಮ ಶ್ರೀಜಗನ್ನಾಥವಿಠ್ಠಲ ಭಾಗ । ವತ ಜನರ ಪ್ರಿಯ ನೀನೇ ಗತಿ ಎಮಗೆ ಇಹಪರದಿ ॥ ೪॥

....ತ್ರಿಪುಟತಾಳ....

ನೀ ಸಲಹಲಿನ್ನಾರು ಮೂಲೋಕದೊಳು ಬಂದ । ಡ್ಡೈಸುವರು ಒಳ ಹೊರಗೆ ಸಮಸ್ತ ದಿವೌಕಸರು ನಿನಗೆ ಸಮರ್ಪಕ - । ಕಾರ್ಯ ಮಹಾಸುಖದಿ ನಡೆಸುವರು ನಿರುತಲಕ್ಷ್ಮೀ । ದಾಸಿ ಎಂದೆನಿಪಳು ನಿನ್ನರಮನೆಯಲ್ಲಿ । ದೇಶ ಕಾಲಗುಣ ಕರ್ಮಾದಿಗಳು ನಿನಗಾ । ವಾಸಕೆ ಯೋಗ್ಯವಾದ ಸ್ಥಾನವೆನಿಪವು । ಈಶ ಲೋಕಕೆ ಲೇಶಾಯಾಸ ಕಾಣೆನೋ ಕರು । ಣಾ ಸಮುದ್ರನೆ ಒಲಿದು ಎಮ್ಮ ಅಭಿ। ಲಾಷೆ ಪೂರೈಸೆಂದು ಬೇಡಿಕೊಂಬೆನೋ ವೇದ । ವ್ಯಾಸ ಕೀಟಗೆ ನೀನೇ ಒಲಿದು ಕೊಟ್ಟೆ ಮಹೀ ಸಿಂ । ಹಾಸನವೇರಿಸಿ ನೀ ಪೊರೆದೆಯೊ ಪ । ರಾಶರಾತ್ಮಜ ನಿನ್ನ ಗುಣಗಳ ಬಣ್ಣಿಸೆ। ನಾ ಸಮರ್ಥನೆ ಎಂದಿಗಾದರು ದೇವ । ನೀ ಸುಲಭನೆಂದಾಶ್ರಯಿಸಿಂದು ನಾ ಬಿ। ನ್ನೈಸಿದೆನೋ ಈ ರೀತಿಯಲ್ಲಿ ಸರು । ವಾಸು ನಿಲಯ ಶ್ರೀಜಗನ್ನಾಥ ವಿಠ್ಠಲರೇಯ । ಈಸು ಮಾತುಗಳೇಕೆ ಮನ್ಮನದ । ಆಶೆಪೂರ್ತಿಯ ಮಾಡಿ ಎಮ್ಮನು ಉ । ದಾಸಿಸದೆ ದಯದಿ ಅನುದಿನ ನೋಳ್ಪುದು ॥ ೫॥

....ಅಟ್ಟತಾಳ....

ನಿಗಮ ತತಿಗಳಿಗೆ ವೇದ್ಯವಾ(ಗ)ದ ನಿನ್ನ । ಅಗಣಿತ ಮಹಿಮೆ ಲಕುಮಿ ಬೊಮ್ಮ ಭವಾ। ದಿಗಳು ತಾವರಿಯರು ಸಾಕಲ್ಯದಿ ಮಂದ ಜೀ । ವಿಗಳಿಗೆ ಗೋಚರಿಸುವುದೆ ನಿನ್ನ ರೂಪ । ಭಗವಂತ ನೀನೆ ದಯಾಳುವೆಂದರಿದು ನಾ । ಪೊಗಳಿದೆನೊ ಯಥಾಮತಿಯೊಳಗೆ ಲೇಶ। ಬಗೆಯದಿರೆನ್ನಪರಾಧ ಕೋಟಿಗಳ । ಜಗತೀಪತಿ ತನ್ನ ಮಗುವಿನ ತೊದಲು ಮಾ । ತುಗಳನೆ ಕೇಳಿ ತಾ ನಗುತ ಕಾಮಿತ ಬಗೆ। ಬಗೆಯಿಂದ ಪೂರ್ತಿಸಿ ಮಿಗೆ ಹರುಷದಿಂದ । ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ। ತೆಗೆದು ಬಿಸುಟು ಮತ್ತೆ ಹಗೆಗೊಂಬನೇನೋ ತ್ರೈ। ಯುಗನೆ ಬಿಡದೆ ಪಾಡಿ ಪೊಗಳುವ ದಾಸಗೀ । ಬಗೆ ಬಡತನವೇಕೆ ಸಂಸಾರದೊಳಗೆ ನಾ । ಲ್ಕೊಗನಯ್ಯ ಅರ್ಥ ಕಾಮಗಳೊಳಗಿಪ್ಪ ಈ । ರ್ವಗೆ ರೂಪ ಒಂದಾಗೆ ಆವುದಸಾಧ್ಯವೋ । ಗಗನ ಭೂಪಾತಾಳ ವ್ಯಾಪ್ತರೂಪನೆ ಕರ । ಮುಗಿವೆ ಗೋಚರಿಸೆಮ್ಮ ದೃಗುಯುಗಗಳಿಗಿಂದು। ಯುಗಕರ್ತ ಶ್ರೀಜಗನ್ನಾಥ ವಿಠ್ಠಲ ನರ । ಮೃಗನಾಗಿ ಕಂಭದಿಂದೊಗೆದು ಬಂದೊದಗಿದೆ ॥೬॥

....ಆದಿತಾಳ....

ಶ್ರೀನಿಧಿ ಪ್ರತಿದೇಹಂಗಳಲ್ಲಿ ಗತಿ । ನೀನಲ್ಲದೆ ಎಮಗಾರಿಹಪರದಲ್ಲಿ। ಆ ನಳಿನಭವಭವಾದ್ಯನಿಮಿಷರ ನಿ । ಜಾನಂದ ವರಿತು ಫಲಗಳ ಕೊಡುವೆ ಮಹಾನುಭಾವ ಎಮ್ಮಭಿಮತ ಸಲಿಸುವು । ದೇನಚ್ಚರಿ ನಿನ್ನರಸಿ ಲಕುಮಿ ಕಡೆ । ಗಾಣಳು ಪರಮೈಶ್ವರ್ಯದ ಪ್ರಾಂತ ಚಿ । ದಾನಂದ ಮಯನೆ ಪ್ರಣತರ ಅಧಿಕಾ। ರಾನುಸಾರ ಸುಖವನಧಿ - ಯೊಳೋಲ್ಯಾಡಿಸುವಿ। ದಾನಿಗಳರಸ ಮನಾದಿಕರಣಗಳಭಿ । ಮಾನಿಗಳಿಗೊಡೆಯನೆನಿಸುವ ಮುಖ್ಯ । ಪ್ರಾಣಪತಿಗೆ ನೂತನ ವಿಜ್ಞಾಪನ । ವೇನುಂಟನ್ನನು ದಿನದಲಿ ಮಾಳ್ಪುದು । ಮಾನದ ಗುರು ಜಗನ್ನಾಥ ವಿಟ್ಠಲ ಕರುಣಾನಿಧಿ ಸರ್ವದಾ ಸುಲಭನೀನಲ್ಲವೆ ॥ ೭॥

....ಜತೆ....

ಚಟುಲ ಕಾರ್ಯಗಳ ಸಂ । ಘಟನೆ ಮಾಡಿಸುವಿ ನಿ । ಷ್ಕುಟಿಲ ಶ್ರೀಜಗನ್ನಾಥ । ವಿಠ್ಠಲ ದೇವೋತ್ತಮ ॥ ೮॥

## ೩) ಸೋಮವಾರ ಸುಳಾದಿ

ನಿನ್ನ ಕಾಂಬುವುದೆನಗೆ ನಿಖಿಳ ಸೌಭಾಗ್ಯಪ್ರಾಪ್ತಿ। ನಿನ್ನ ಕಾಂಬುವುದೆ ನಿತ್ಯಾನಂದ । ನಿನ್ನ ಕಾಂಬುವುದೆ ಶುಭದಿನವೆನಿಪುದು । ನಿನ್ನ ಕಂಡದ್ದೆ ಪರಮ ಮಂಗಳವೂ । ನಿನ್ನ ಕಾಂಬುವದೆ ಘನ್ನ ಯಶಸ್ಸು ಎನಗೆ । ನಿನ್ನ ಕಾಂಬುವದೇ ನಿತ್ಯೋತ್ಸವ । ನಿನ್ನ ಕಾಂಬುವದೇ ದೇಹ ಪುಷ್ಟತ್ವ ಎನಗೆ । ನಿನ್ನ ಕಾಂಬುವದೇ ನಿಶ್ಚಿಂತವೂ । ನಿನ್ನ ಕಾಂಬುವದೆ ಪರಮ ಪವಿತ್ರ ಎನಗೆ। ನಿನ್ನ ಕಾಂಬುವದೇ ಆರೋಗ್ಯವು । ನಿನ್ನ ಕಾಂಬುವದೆ ಗಂಗಾದಿ ಸ್ನಾನ ಎನಗೆ । ನಿನ್ನ ಕಂಡದ್ದನೇಕ ಜಪತಪ ಹೋಮವ್ವೋ । ನಿನ್ನ ಕಾಂಬುವದೇ ಅಪರಿಮಿತಾನ್ನದಾನ । ನಿನ್ನ ಕಂಡದ್ದನೇಕ ಕ್ರತು ವಿಶೇಷ । ನಿನ್ನ ಕಾಂಬುವದೆ ಷೋಡಶ ಮಹಾದಾನ । ನಿನ್ನ ಕಾಂಬುವದೆ ಸಕಲ ವ್ರತವೊ । ನಿನ್ನ ಕಾಂಬುವದೆ ತೇಜಸ್ಸು ಎನಗದು। ನಿನ್ನ ಕಾಂಬುವದೆ ಶೌರ್ಯ ಧೈರ್ಯ । ನಿನ್ನ ಕಾಂಬುವದೆ ಇಹಪರ ಸೌಖ್ಯವೆಲ್ಲ । ನಿನ್ನ ಕಂಡದ್ದು ಮುಕ್ತಿ ನಿಜಾವಿದು । ಅನ್ಯಥ ಇದಕ್ಕಿಲ್ಲ ನಿನ್ನ

ಪಾದಾವೆ ಸಾಕ್ಷಿ । ಪನ್ನಂಗ ಶಯನ ಗುರು ವಿಜಯವಿಠ್ಠಲರೇಯ । ನಿನ್ನ ಕಾಂಬುವದೆ ಇಷ್ಟ ಎನಗೆ ॥ ೧॥

....ಮಟ್ಟತಾಳ....

ನಿನ್ನ ಕಾಣದ ದಿನ ಅಶುಭ ದುರ್ದಿನ । ನಿನ್ನ ಕಾಣದ ಜ್ಞಾನ ಅಡವಿಯ ರೋದನ। ನಿನ್ನ ಕಾಣದ ಭಕುತಿ ರೋಗಿಷ್ಟನ ಶಕುತಿ । ನಿನ್ನ ಕಾಣದ ವೈರಾಗ್ಯ ದಾರಿದ್ರಾನ ಭಾಗ್ಯ । ನಿನ್ನ ಕಾಣದ ಸುಖಾ ತ್ರೈತಾಪದ ದುಃಖಾ । ನಿನ್ನ ಕಾಣದ ಸ್ನಾನ ಬಧಿರ ಕೇಳುವ ಗಾನ । ನಿನ್ನ ಕಾಣದ ಜಪ ಚಂಡಾರ್ಕನ ತಾಪ । ನಿನ್ನ ಕಾಣದ ತಪ ನಿರ್ಗತ ಪ್ರತಾಪ । ನಿನ್ನ ಕಾಣದ ಆಚಾರ ಬಾಧಿಪ ಗ್ರಹಚಾರ । ನಿನ್ನ ಕಾಣದ ನರ ಕ್ರಿಮಿ ಕೀಟ ವಾನರ । ನಿನ್ನ ಕಾಣದ ಕರ್ಮ ಅರಿಯದಿಪ್ಪ ಮರ್ಮ । ನಿನ್ನ ಕಾಣದ ಪುಣ್ಯ ಗತವಾದ ಧಾನ್ಯ । ನಿನ್ನ ಕಾಣದ ಯಾತ್ರ ಅಂಧಕನ ನೇತ್ರ । ನಿನ್ನ ಕಾಣದ ಪಾತ್ರ ಕಾಣದಿಪ್ಪ ನೇತ್ರ । ನಿನ್ನ ಕಾಣದೆ ಬರಿದೆ ಪರಿ ಪರಿ ಸಾಧನ । ಅನ್ನಂತ ಮಾಡಿದರು ಅವಗಿಲ್ಲ ಸುಖಸ್ಪರ್ಶ । ಚಿನ್ಮಯ ಮೂರುತಿ ಗುರು ವಿಜಯ ವಿಠ್ಠಲರೇಯ । ನಿನ್ನ ಕಾಂಬುವದೆಲ್ಲ ಕರ್ಮಕ್ಕೆ ಸಾರ್ಥಕವೊ ॥ ೨॥

....ತ್ರಿವಿಡಿತಾಳ....

ನಿನ್ನ ಕಂಡವ ಸಕಲ ಸಾಧನವ ಮಾಡಿದವ । ನಿನ್ನ ಕಂಡವನೇ ನಿರ್ಮಲನು। ನಿನ್ನ ಕಂಡವಗುಂಟೆ ಕಲಿಕೃತ ಅಘವು । ನಿನ್ನ ಕಂಡವನೆ ಜೀವನ್ಮುಕ್ತಾ । ನಿನ್ನ ಕಂಡವರಲ್ಲಿ ಸಕಲ ಸುರರು ಉಂಟು । ನಿನ್ನ ಕಾಂಬುವ ದೇಹ ಸುಕ್ಷೇತ್ರವೋ । ನಿನ್ನ ಕಾಂಬುವ ತನುವು ಪಾವನವೆನಿಪುದು । ನಿನ್ನ ಕಾಂಬುವದೆ ವಿಮಲ ಕೀರ್ತಿ । ನಿನ್ನ ಕಾಂಬುವ ನರಗೆ ನರಕದ ಭಯ ಉಂಟೆ ? । ನಿನ್ನ ಕಾಂಬುವದೆ ಮಾನ್ಯತೆಯೋ । ಉನ್ನತ ಮಹಿಮ ಗುರು ವಿಜಯವಿಠ್ಠಲರೇಯ । ನಿನ್ನ ಕಾಂಬುವದೇ ನಿಖಿಳ ಸುಖವೋ ॥ ೩॥

....ಅಟ್ಟತಾಳ....

ನಿನ್ನ ಕಾಣದೆ ಧನ್ಯನಾಗೇನೆಂಬೋದು । ಖಿನ್ನ ಮಾತಲ್ಲದೆ ಸಮ್ಮತವಲ್ಲವು ಉನ್ನತ ಗುಣನಾರಿ ಪತಿಯುಕ್ತಳಾಗಲು । ಸನ್ಮಾನ್ಯಳೆನಿಪಳು ಸಂತತ ಸುಖದಿ । ಅನಂತ ರೂಪನ್ನ ಕಾಂಬುವ ಜನರೆಲ್ಲ । ಚಿನ್ಮಯರೆನಿಸಿ ಶುಭದಿ ಶೋಭಿಸುವರು। ಪನ್ನಗಾರಿ ಮಹಗುರು ವಿಜಯವಿಟ್ಠಲರೇಯ । ನಿನ್ನಿಂದೆ ಭಕುತರು ವಿಚ್ಛಿನ್ನ ದಾರಿದ್ರರೋ ॥ ೪॥

....ಆದಿತಾಳ....

ನಿನ್ನ ಕಾಂಬುವದೆ ಜನ್ಮಕ್ಕೆ ಸಫಲವೋ । ನಿನ್ನ ಕಾಂಬುವಗೆ ಪುನರಪಿ ಜನ್ಮವಿಲ್ಲ । ಅನಾದಿ ಪ್ರಾರಬ್ಧ ಸಂಬಂಧ ನಿಮಿತ್ಯ । ಜನ್ಮವು ಒದಗಲು ಅವಗಿಲ್ಲ ಲೇಪವು । ನಿನ್ನ ಕಾಂಬುವನ್ನ ಸುರರೆಲ್ಲ ಮನ್ನಿಪರು । ನಿನ್ನ ಕಾಂಬುವದೆ ಷಡುರಸ ಭ ೀಜನವು । ಉನ್ನತ ಭಕ್ತರಿಗೆ ಅನ್ನವನೀವೆನೆನಿಪ । ಅನ್ನಮಯ ದೇವಗುರು ವಿಜಯವಿಟ್ಠಲರೇಯ । ನಿನ್ನ ಕಾಂಬುವಂತೆ ಅಭಿಮುಖನಾಗುವದು ॥ ೫॥

....ಜತೆ....

ನಿನ್ನ ಕಾಂಬುವದೆ ನಿತ್ಯೈಶ್ವರ್ಯವೋ ದೇವಾ ಪ್ರಸನ್ನನಾಗುವದು ಗುರು ವಿಜಯ ವಿಟ್ಠಲರೇಯಾ॥೬॥

### ೩. ರುದ್ರದೇವರು

ಧವಳಗಂಗೆಯ ಗಂಗಾಧರ ಮಹಾಲಿಂಗ ಮಾ - । ಧವನ ತೋರಿಸಯ್ಯಾ ಗುರುಕುಲೋತ್ತುಂಗಾ ॥ ಪ॥ ಅರ್ಚಿಸಿದವರಿಗಭೀಷ್ಟೆಯ ಕೊಡುವಾ । ಹೆಚ್ಚಿನ ಅಘಗಳ ತರಿದು ಬಿಸುಡುವಾ ॥ ದುಶ್ಚರಿತಗಳೆಲ್ಲಾ ದೂರದಲ್ಲಿಡುವಾ ನ -। ಮ್ಮಚ್ಯುತಗಲ್ಲದ ಅಸುರರ ಬಡಿವಾ ॥ ೧॥ ಮಾರನ್ನ ಗೆದ್ದ ಮನೋಹರ ಮೂರ್ತಿ। ಸಾರ ಸಜ್ಜನರಿಗೆ ಶುಭಚಕ್ರವರ್ತಿ ॥ ಧಾರುಣಿಯೊಳಗೆ ತುಂಬಿದೆ ನಿನ್ನ ಕೀರ್ತಿ । ಮುರಾರಿಯ ತೋರಿಸಯ್ಯಾ ನಿನಗೆ ಶರಣಾರ್ತಿ ॥ ೨॥ ಚೆನ್ನ ಪ್ರಸನ್ನ ಶ್ರೀಹಯವದನನ್ನ । ಅನುದಿನ ನೆನೆವಂತೆ ಮಾಡೋ ನೀ ಎನ್ನ ॥ ಅನ್ಯನಲ್ಲವೋ ನಾನು ಗುರುವೆಂಬೆ ನಿನ್ನ । ಇನ್ನಾದರೂ ತೋರೋ ಹರಿಯ ಮುಕ್ಕಣ್ಣ ॥ ೩॥

## ೩) ಮಂಗಳವಾರ

### ಅ. ಹಾಡು

#### ( ಶ್ರೀರಂಗನಾಥ ಹಾಗೂ ಮಧ್ವಾಂತರ್ಗತ ಶ್ರೀವೇದವ್ಯಾಸದೇವರು )

**ರಾಗ - ತೋಡಿ** **ರೂಪಕ ತಾಳ**

೧) ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ ॥ ಪಲ್ಲ॥ ಜಗಂಗಳೊಳಗೆ ಮಂಗಳ ಮೂರುತಿ । ರಂಗನ ಶ್ರೀಪಾದಂಗಳ ನೋಡದ ॥ ಅ.ಪ.॥ ಎಂದಿಗಾದರೊಮ್ಮೆ ಜನರು । ಬಂದು ಭೂಮಿಯಲ್ಲಿ ನಿಂದು । ಚಂದ್ರ ಪುಷ್ಕರಣಿ ಸ್ನಾನವ ಮಾಡಿ ಆ - । ನಂದದಿಂದಲಿ ರಂಗನ ನೋಡದ ॥ ೧॥ ಹರಿಪಾದೋದಕ ಸಮ ಕಾವೇರಿ । ವಿರಜಾನದಿಯ ಸ್ನಾನವ ಮಾಡಿ॥ ಪರಮ ವೈಕುಂಠ ರಂಗ ಮಂದಿರ । ಪರ ವಾಸುದೇವನ ನೋಡದ ॥ ೨॥ ಹಾರ ಹೀರ ವೈಜಯಂತಿ । ತೋರ ಮುತ್ತಿನ ಹಾರ ಪದಕ ॥ ತೇರನೇರಿ ಬೀದಿಲಿ ಬರುವ । ಶ್ರೀರಂಗವಿಠ್ಠಲ ರಾಯನ ನೋಡದ ॥ ೩॥

### ಆ. ಸುಳಾದಿಗಳು

#### ೧) ಶ್ರೀರಂಗನಾಥ ಸುಳಾದಿ

....ಧ್ರುವತಾಳ....

ಇಂದ್ರಾದಿಗಳು ತಮ್ಮ ಸಂದಣಿಯಾ ಸಾರೆ ತಾ । ವಂದಾರು ಪ್ರಾಕಾರಾ ಒಂದಾರು ಬೀದಿಯೊಳು । ನಿಂದು ನಿರ್ಮಳರಾಗಿ ಒಂದೊಂದು ಪರಿರಂಗ । ಮಂದಿರದಲ್ಲಿದ್ದ ಇಂದಿರೇಶನ ಪಾದ । ದ್ವಂದ್ವವ ಎಣಿಸಿ ಒಂದೊಂದು ಗುಣಗಳ । ನಂದವ ನೆನವುತ್ತ ಮುಂದುಗಾಣದ ಸುಖ । ಸಿಂಧುವಿನೊಳಿಪ್ಪರು ಕಂದರವನ್ನು ತೂಗಿ । ಗಂಧರ್ವ ತುಂಬುರ ನಾರದನು ಮಹಾಹತಿ। ಯಿಂದ ನುಡಿಸಿ ತಾರಾ ಮಂದರದಿಂದಲಿ। ಕಂದೆರದೂ ಮುಚ್ಚಿ ಕಂದನ ನುಡಿಯಂತೆ । ಒಂದೊಂದು ಕೀರ್ತಿಸಿ ವಂದನೆ ಮಾಡಾಲು । ಬಂದ ಶರೀರ ಸಾಲಾದೆಂದೆಂಬೊ ಗಾದೆಯಾಗೆ। ಮಂದರಧರ ಗೋವಿಂದ ವಿಜಯವಿಠಲ । ಸುಂದರ ವಿಗ್ರಹ ಒಂದೆ ದೈವವೆ ರಂಗ ॥ ೧॥

....ಮಟ್ಟತಾಳ....

ರಂಗ ರಂಗ ರಂಗಾಧಾಮಾ ರಂಗ ಕಸ್ತೂರಿರಂಗ ಕಾವೇರಿ । ರಂಗ ವೈಭ ೀಗರಂಗ ಜಗದಂತರಂಗ ರಂಗ ರಂಗನಾಥಾ । ರಂಗಶಾರೆಂಗ ದುರಿತಸಂಘ ದೂರ ರಂಗ ದನುಜ। ಭಂಗ ಶೌರಿ ರಂಗ ರಾಮಾ ವಿಜಯವಿಠಲ । ರಂಗೇಶ ರಂಗ ಮಂದಿರವಾಸ ॥ ೨॥

....ತ್ರಿವಿಡಿತಾಳ....

ಸಪುತ ಪ್ರಾಕಾರವೆ ಸಪುತವಾರಿಧಿ ಎನ್ನಿ । ಸಪುತ ಬೀದಿಗಳು ಸಪ್ತಾದ್ವೀಪ ಎನ್ನಿ। ಸಪುತಕಾಂಚನಮಯ ಸುಮೇರು ಪರ್ವತ । ಗುಪುತ ಮಹಿಮಾನಿಪ್ಪ ಸ್ಥಾನವೆನ್ನೀ । ಸಪುತಾಶ್ವ ಚಂದ್ರಮಾ ಬಿಡದೆ ತಿರುಗುವರೆನ್ನಿ । ಸಪುತಾ ಋಷಿಗಳಲ್ಲಿ ವಾಸಾವೆನ್ನಿ । ಸಪುತೆರೆದು ಲೋಕದಲಿ ಇದು ವೆಗ್ಗಳವೆನ್ನಿ। ಶಪುತ ಮಾಡುವರೊಡಿಯಾ ವಿಜಯವಿಠಲರೇಯಾ । ಕುಪಿತ ಸಂಹಾರಾ ಭಕುತರ ಉದ್ಧಾರಾ ॥ ೩॥

....ಅಟ್ಟತಾಳ....

ಆವಾನಾದರು ಬಂದು ಭಾವಾ ಶುದ್ಧದಲ್ಲಿ । ನಾವಣಾಂತಕ ನಿದ್ದ ಈ ವೈಕುಂಠದ। ಸೇವೆಯ ಮಾಡಾಲು ಸಾವಿರ ಬಗೆಯಿಂದ । ಶ್ರೀವಾಸುದೇವನು ತಾವೊದಗಿ ಬಂದು। ಕೋವಿದರನ ಮಾಡಿ ಪಾವನರೋಳಿಡುವ । ಕಾವೇರಿ ನಿವಾಸಾ ವಿಜಯವಿಠಲ ರಂಗ। ದೇವನ ಕ್ಷೇತ್ರವ ಆವ ಬಂಣಿಪನು॥೪॥

....ಆದಿತಾಳ....

ಬಯಸಾದಿರು ಮೇಲು ಲೋಕ ಬಯಸಾದಿರು ನಾಗಲೋಕ । ಬಯಸದಿರು ಸ್ವರ್ಗ ಸಕಲ ದಿಕ್ಪಾಲಕರ ಸುಖಗಳ । ಬಯಸು ಮನುಜಾ ರಂಗಕ್ಷೇತ್ರದಲ್ಲಿ ಒಂದು ದಿವಸಾವಿದ್ದು । ದಯಪಯೋನಿಧಿಯ ಪಾದ ಭಯಭಕುತಿಲಿಂದ ನೋಡೆ। ಬಯಲಾಗುವದು ಪಾಪಾತ್ರಯ ಕಾಲದಲ್ಲಿ ವೊಲಿದು । ಜಯಮೂರ್ತಿ ರಂಗಾ ವಿಜಯವಿಠಲ ಸಿರಿರಮಣಾ । ಈಯಬಲ್ಲ ಈ ಪರಿಗಾಯನ ಮಾಡಲು ವೇಗ ॥ ೫॥

....ಜತೆ....

ವಿಧು ಪುಷ್ಕರಣಿಯಾ ನಿವಾಸ ಶೇಷಶಾಯಿ । ಮಧುವೈರಿ ವಿಜಯ ವಿಠಲ ರಂಗಧಾಮಾ॥೬॥

## ೨) ಮಂಗಳವಾರ ಸುಳಾದಿ

....ಧ್ರುವತಾಳ....

ಮಿತ್ರನು ಎಂದು ನಿನ್ನ ಮನದಿ ನಂಬಿದದಕ್ಕೆ । ಉತ್ತಮ ಉಪಕಾರ ಮಾಡಿದಯ್ಯಾ। ಶತ್ರುಗಳಂತೆ ನಿಂದು ಬಹಿರಂತರಂಗದಲ್ಲಿ । ಕತ್ತಲೆಚರರಿಗೆ ಸಹಾಯನಾಗಿ । ನಿತ್ಯ ದುಃಖಗಳುಣಿಸಿ ಎಷ್ಟು ಕೂಗಿದರೂ । ನೇತ್ರದಿ ನೋಡದಲೆ ಇರುವ ಬಗೆಯೋ । ಮಿತ್ರರ ಲಕ್ಷಣವೆ ಅಥವಾ ಶತ್ರುತ್ವದ ಸೊಬಗೆ । ಎತ್ತಣದೊ ಇದನು ತೋರದೆನಗೆ । ಕರ್ತೃ ನಿನ್ನಲ್ಲಿ ದೋಷ ಎಂದೆಂದು ಕೂಡದಾಗಿ । ನಿಸ್ತ್ರೈಗುಣ್ಯನೆಂದು ಶ್ರುತಿ ಸಾರಿತು ಸ-। ರ್ವತ್ರ ಸಮನಾದ ಹರಿ ನೀನು ಜೀವಕಾಲ

ಪ್ರ । ಕೃತಿ ಅನುಸರಿಸಿ ಸುಖ ದುಃಖ । ಹೊತ್ತು ಹೊತ್ತಿಗೆ ತಂದು ತುತ್ತು ಮಾಡಿ ಉಣಿಸಿ । ಕೀರ್ತ್ಯಾಪಕೀರ್ತಿಗಳ ಜಾದಿಗಳಿಗೆ । ಇತ್ತು ಪೊರೆವಿ ಎಂಬ ಕಾರಣದಿಂದ ನಿನಗೆ । ಯುಕ್ತವಾಗದಯ್ಯಾ ದೋಷವನ್ನು । ಈ ತೆರವಾದ ಬಗೆಯಿಂದ ಎನ್ನ ಕರ್ಮದಂತೆ ದು - । ಷ್ಕೃತ್ಯಗಳುಂಬೆನೆಂದು ನಿಶ್ಚೈಸುವೆನು ಧಾ । ರಿತ್ರಿ ಒಳಗೆ ಅಶಕ್ತರಾದವರೆಲ್ಲ। ಶಕ್ತರಾದವರನ್ನ ಆಶ್ರೈಸೆ । ಅತ್ಯಭಿಮಾನದಿಂದ ಪೊರೆಯದಿರಲು ಆವ । ಕೀರ್ತಿ ಐದುವನೆಂತು ಮಾನ್ಯನಾಗಿ ತಾ - । ಪತ್ರಯ ಕಳಿಯದಿರೆ ಅನುಸಾರ ಮಾಳ್ಪದೇಕೆ । ಕೃತ್ಯಾಭಿಮಾನಿಗಳ ಸುರರೊಡಿಯಾ ಮುಕ್ತಾ। ಮುಕ್ತರಾಶ್ರಯ ಗುರು ವಿಜಯ ವಿಠ್ಠಲರೇಯ । ಭಕ್ತವತ್ಸಲ ದೇವ ಮಹಾನುಭಾವಾ॥೧॥

....ಮಟ್ಟತಾಳ....

ಅನಾದಿ ಕರ್ಮವನು ಅನುಭವ ಮಾಡುವದು । ಪ್ರಾಣಾದ್ಯಮರರಿಗೆ ತಪ್ಪುವದೇ ಎಂದು। ಜಾಣತನದಲಿಂದ ಜಾರಿ ಪೋಗುವ ದೊಳಿತೆ । ಶ್ರೀನಾಥ ನಿನ್ನ ಪಾದ ಸಾರಿದ ಜನಕೆ । ಅನೇಕ ಜನ್ಮದ ಪಾಪ ತಕ್ಷಣದಿಂದಲ್ಲೇವೆ । ವಿನಾಶವಾಗುವದೆಂದು ಶ್ರುತಿ ಸಾರುತಲಿದಕೋ । ದೀನರಾಗಿ ನಿನ್ನ ಸ್ತುತಿಪರು ಸುರರೆಲ್ಲ । ಎನಗಿದ್ದ ಕರ್ಮವನು ಕ್ಷೀಣವೈದಿಸದಿರಲು । ವಿನಯದಿಂದಲಿ ನಿನಗೆ ಬೇಡಿಕೊಂಬುವದೇಕೆ । ಪ್ರಾಣನಾಥ ಗುರುವಿಜಯವಿಠ್ಠಲರೇಯಾ । ನೀನು ಪ್ರೀಣನಾಗುತಿರಲು ನಿಲ್ಲುವದೆ ದೋಷ ॥ ೨॥

....ತ್ರಿವಿಡಿತಾಳ....

ವೆಂಕಟನೆಂಬುವದು ವ್ಯವಹಾರ ತೋರುತಿದೆ । ಪಂಕಜಾಕ್ಷನೆ ಇನಿತು ನಡತಿ ಇಂದ। "ಯತತೋಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ।" ಎಂಬೋ ಉಕ್ತಿಗೆ ಕಳಂಕ ಬಾರದೇನೋ । ಈ ತೆರ ನುಡಿದರೆ ಶಂಕರನೆಂಬೋ ನಾಮ ನುಡಿಯಲಾಯಕೆ। ನಿಖಿಳಾಘೌಘವಿನಾಶಕ ನೆಂಬೋದೇನೋ । ಮಂಕು ಜನರ ಪಾಪ ಕಳಿಯದಿರೆ "ಯಂ ಕಾಮಯೆ ತಂ ತಮುಗ್ರಂ ಕೃಣೋಮಿ" ಎಂಬ । ಬಿಂಕದ ಉಕುತಿಗೆ ಘನ್ನತ್ಯಾಕೆ । ಸಂಕಟಹರ ಗುರು ವಿಜಯ ವಿಠ್ಠಲ ನಿನ್ನಗ। ಲಂಕಾರ ವಾಗದಯ್ಯಾ ಇನಿತು ನೋಡೆ ॥ ೩॥

....ಅಟ್ಟತಾಳ....

ಮಾಡಿದ ಕರ್ಮವು ಕ್ಷೀಣವೈದಿಸದಿರಲು । ನಾಡೊಳಗೆ ಪುಟ್ಟಿ ಅನುಭವಿಸಲೆ ಎನ್ನೆ। ಯೂಢವಾದ ಕಲ್ಪ ತಿರುಗಿ ತಿರುಗಿದರು । ಗಾಢವಾದ ಕರ್ಮ ನಾಶವಾಗದು ಕೇಳೊ । ಈಡು ಇಲ್ಲದಿಪ್ಪ ಸೌಖ್ಯದಾಯಕ ಮುಕ್ತಿ । ಪ್ರೌಢರಾದವರಿಗೆ ದುರ್ಲಭವೇ ಸರಿ । ರೂಢಿಯ ಜನಕಿನ್ನು ಪೇಳುವದ್ಯಾತಕೊ। ಗೂಢಕರುಣಿ ಗುರು ವಿಜಯವಿಠ್ಠಲ ಎಂಬೋದು । ರೂಢಿಯೆ ಸರಿ ಮತ್ತೆ ಯೋಗ ಎನ್ನಲ್ಯಾಕೆ ॥ ೪॥

....ಆದಿತಾಳ....

ವಿನಯದಿಂದಲಿ ಒಮ್ಮೆ ಹರಿ ಎಂದು ಸ್ಮರಿಸಲು । ಜನ್ಮ ಜನ್ಮದ ಪಾಪ ಪರಿಹಾರವಾಗುವವು । ಅನುನಯದಿ ಮತ್ತೊಮ್ಮೆ ಅಚ್ಚುತನೆಂದು ನೆನೆಯೆ । ಮನದಲ್ಲಿ

ತೋರಿ ನೀನು ಆನಂದ ಬಡಿಸುವಿ । ಘನ್ನ ಮಹಿಮ ನಿನ್ನ ಮೂರನೆ ಖ್ಯಾಪಿ ನೆನೆಯ । ಅನಾದಿಯಿಂದ ಬಂದ ಪ್ರತಿಬಂಧ ದೂರ ಮಾಡಿ । ಆನಂದ ಪ್ರದವಾದ ಸ್ಥಾನವನ್ನು ಐದಿಸುವಿ। ಚಿನುಮಯನೆ ನಿನ್ನ ನಾಲ್ಕನೆಯ ಭಾರಿ ನೆನೆಯೆ । ಋಣವನ್ನು ತೀರಿಸುವಿ ಉಪಾಯವಿಲ್ಲ ನಿನಗೆ । ಅನುಗಾಲ ನಿನ್ನ ಪಾದ ಭಜಿಸಿದ ಭಕ್ತರಿಗೆ । ಅನುಸಾರವಾಗಿಪ್ಪ ಅಳುಕಂದಿ ಅಳುಕಂದಿ। ಅನುಮಾನ ಇದಕ್ಕಿಲ್ಲ ಬಲಿಯೇ ಇದಕೆ ಸಾಕ್ಷಿ । ಇನಿತು ನಿನ್ನ ಮಹಿಮೆ ಶ್ರುತಿ ಸ್ಮೃತಿ ವರಲುತಿರೆ। ಎನಗಿದ್ದ ದುಷ್ಕರ್ಮ ಪರಿಹಾರ ಮಾಡದಿರಲು । ಘನವಾದ ಮಹಿಮೆಯು ಲೌಕಿಕ ವಾಗದೇನೊ । ಸನಕಾದಿ ಮುನಿವಂದ್ಯ ಗುರು ವಿಜಯ ವಿಟ್ಠಲರೇಯಾ । ಮನನಕ್ಕೆ ತಂದುಕೋ ಎನ್ನಯ ಬಿನ್ನಪವ ॥ ೫॥

....ಜತೆ....

ಭಕುತಿ ಇಲ್ಲದೆ ಬರಿದೆ ಸಥೆಯಿಂದ ಬಿನ್ನೈಸಿದೆ । ಉಕುತಿ ಲಾಲಿಸು ಗುರು ವಿಜಯ ವಿಠ್ಠಲರೇಯ॥೬॥

## ೪) ಬುಧವಾರ

### ( ಶ್ರೀ ರುಕ್ಮಿಣೀಪಾಂಡುರಂಗದೇವರು )

**ಅ. ಹಾಡುಗಳು**

ರಾಗ-ಮೋಹನ ಆದಿತಾಳ

೧) ನೆರೆನಂಬಿದೆ ಮದ್‌ಹೃದಯಮಂಟಪದೋಳ್ । ಪರಿಶೋಭಿಸುತಿರು ಪಾಂಡುರಂಗ ॥ ಪ॥ ಶರಣ ಜನರ ಸಂಸಾರ ಮಹಾಭಯ । ಹರಣ ಕರುಣ ಸಿರಿ ಪಾಂಡುರಂಗ ॥ ಅ.ಪ.॥ ನೆರೆದಿಹ ಬಹು ಜನರೋಳಿದ್ದರು ಮನ - । ಸ್ಥಿರವಿಡು ನಿನ್ನಲಿ ಪಾಂಡುರಂಗ ॥ ಪರಿ ಪರಿ ಕೆಸಲವು ನಿನ್ನ ಮಹಾಪೂಜೆ । ನಿರುತವೆನಗೆ ಕೊಡು ಪಾಂಡುರಂಗ ॥ ೧॥ ಪರದೇವನೆ ನಿನ್ನ ಲೀಲಾಸ್ಮೃತಿಯನು । ನಿರುತವೆನಗೆ ಕೊಡು ಪಾಂಡುರಂಗ ॥ ಪರರಾಪೇಕ್ಷೆಯ ಬಿಡಿಸಿ ನಿರಂತರ ಪರಗತಿ ಪಥ ತೋರೊ ಪಾಂಡುರಂಗ ॥ ೨॥ ಸುಖವಾಗಲಿ ಬಹುದುಃಖವಾಗಲಿ । ಸಖ ನೀನಾಗಿರು ಪಾಂಡುರಂಗ ॥ ನಿಖಿಲಾಂತರ್ಗತ ವ್ಯಾಸವಿಠ್ಠಲ ತವ । ಮುಖಪಂಕಜ ತೋರೊ ಪಾಂಡುರಂಗ ॥ ೩॥

ರಾಗ - ಮೋಹನ ಆದಿತಾಳ

೨) ಪಾಂಡುರಂಗ ತ್ವತ್ಪಾದ ತೋರಿಸಯ್ಯಾ । ಕರುಣದಿ ಪಿಡಿ ಕೈಯ್ಯಾ ॥ಪ॥ ಪುಂಡರೀಕ ಮುನಿ ವರದ ನಮಿಪೆ ನಿನಗೆ । ನೀ ತ್ವರದಲೆನಗೆ ॥ ಅ.ಪ.॥ ವನಜ ಭವಾದಿ ಸುರವ್ರಾತ । ವಂದಿತ ಶ್ರೀನಾಥ । ಪ್ರಣತಾರ್ಥಿ ಹರನೆ ಕಾಮಿತ ಫಲದಾತ । ಮುನಿಗಣ ಸಂಧ್ಯಾತ ॥ ನೆನೆವ ಜನರ ಮನದೊಳಗಿಹ ವಿಖ್ಯಾತ । ಭುವನಾದಿ ನಾಥ । ಘನ ಮಹಿಮಾ ಎನಗೊಲಿದು ಪಾಲಿಸೊ ಮಾತ । ದಯಮಾಡಿ ತ್ವರಿತ ॥ ೧॥ ಸುರಚಿರ ಮಹಿಮನೆ ಭಜಕಾಮರಧೇನು । ವಸುದೇವನ ಸೂನು । ಧರಣಿಯೊಳಗೆ ನಮ್ಮ ಹಿರಿಯರನುದ್ಧಾರ। ಮಾಡಿದ್ಯೊ ಗಂಭೀರ ॥

ದೊರೆಯೆ ಹೊರತನ್ಯರ ನಾನರಿಯೆ । ಕೇಳೆಲೊ ನರಹರಿಯೇ ॥ ಕಿರಿ ಕಿರಿ ಭವದೊಳು ಬಿದ್ದು ಬಾಯಿ ಬಿಡುವೆ । ಪೊರೆಯೆಂದು ನುಡಿವೆ ॥ ೨॥ ಬಂದ ಜನರ ಭವಸಾಗರ ಪರಮಿತಿ । ತೋರಿಸುತಿಹ ರೀತಿ ॥ ಚಂದದಿಂದ ಕರವಿಟ್ಟು ಕಟಿಗಳಲ್ಲೀ। ಶ್ರೀಕ್ಷೇತ್ರದಲ್ಲೀ ॥ ನಿಂದಿಹ ಭೀಮಾತೀರ ಚಂದ್ರಭಾಗ । ದಲಿ ವೈಭ ೀಗ ॥ ತಂದೆ ಶ್ರೀಪತಿ ವಿಠ್ಠಲ ಸುಖ ಸಿಂಧೋ । ಅನಾಥ ಬಂಧೋ ॥ ೩॥

**ರಾಗ-ಭೀಮಪಲಾಸ** **ಅಟ್ಟತಾಳ**

೩) ಕಟಿಯಲ್ಲಿ ಕರವಿಟ್ಟನು, ಪಂಢರಿರಾಯ ॥ ಪ॥ ಗೊಲ್ಲ ಬಾಲಕರೊಡಗೂಡಿ ತಾ ಬಂದು। ಗೊಲ್ಲತೆಯರ ಮನೆ ಪೊಕ್ಕು ಬೆಣ್ಣೆಯ ತಿಂದು॥ ಬಲ್ಲಿದ ತೃಣಾವರ್ತ ಮೊದಲಾದಸುರರ । ಮೆಲ್ಲನೆ ಕೊಂದದಾಯಾಸದಿಂದಲೋ ॥ ೧॥ ಮುದದಿಂದ ವ್ರಜದ ಹದಿನಾರು ಸಾವಿರದ । ಸುದತಿಯರಾಳಿದ ಮದದಿಂದಲೋ ॥ ಮದಗಜಗಮನೇರ ಮದದಂತಕ ಕೃಷ್ಣ। ಒದಗಿ ಮಾವನ ಕೊಂದದಾಯಾಸದಿಂದಲೋ ॥ ೨॥ ರಾಜಸೂಯ ಯಾಗದಲ್ಲಿ ರಾಜೇಶ್ವರ । ರಾಜರು ಮೊದಲಾದ ಸುರರೆಲ್ಲರು ॥ ಭೋಜನವನು ಮಾಡಿದೆಂಜಲು ಮೊದಲಾದ್ದು । ರಾಜೀವಾಕ್ಷನು ಎತ್ತಿದಾಯಾಸದಿಂದಲೋ ॥ ೩॥ ಸುರಪತನಯಗೆ ಸಾರಥ್ಯವನೆ ಮಾಡಿ । ಭರದಿಂದ ಚಕ್ರವ ಪಿಡಿದುದರಿಂದಲೋ ॥ ಪರಿ ಪರಿ ವಿಧದಿಂದ ಕುದುರೆಗಳನೆ ತೊಳೆದು । ಪರಿಪರಿ ಕೆಸಲ ಮಾಡಿದಾಯಾಸದಿಂದಲೋ ॥ ೪॥ ನೇಮದಿಂದಲಿ ಬಂದ ಭಕ್ತರು ನಿಮ್ಮ ಚರಣ-। ಕಮಲಯುಗ್ಮವ ಮುಟ್ಟಿ ಭಜಿಸುತಿರೆ॥ ಮಮತೆಯಿಂದಲಿ ಅವರ ಭವವ ಕಳೆವೆನೆಂದು । ಕಮಲನಾಭ ಶಿರಿ ಪುರಂದರ ವಿಠ್ಠಲಾ ॥ ೫॥

**ಆ. ಸುಳಾದಿಗಳು**

### ೧) ಶ್ರೀಪಾಂಡುರಂಗ ಸುಳಾದಿ

**....ಧ್ರುವತಾಳ....**

ಬಂದೆನೊ ಎಲೊ ಹರಿಯೆ ಪಂಢರಿಪುರಿ ಧೊರೆಯೆ । ಇಂದೆನ್ನ ಪಾಲಿಸೊ ಬಿನ್ನಪವ ಲಾಲಿಸೋ । ಮಂದನು ನಾನಯ್ಯ ಮಹಾತ್ಮ ನೀನಯ್ಯಾ । ಮಂದಾಕಿನಿ ಜನಕ ಲಿಂಗ ಭಂಗದ ತನಕ । ಒಂದು ಸಾಧನ ಕಾಣೆ ನಿನ್ನ ಸ್ಮರಣೆ ಮಾಡೆ । ಬಂಧು ಬಳಗ ನೀನೆ ಭಕ್ತರಾಮರಧೇನು। ಎಂದೆಂದಿಗೆ ನಿನ್ನ ಪಾಡಿದವಗೆ ಬನ್ನಾ। ಪೊಂದಪ್ಪವೆಂದು ಪ್ರತಿದಿನದಲಿ ನಿಂದು । ವೃಂದಾರಕ ವೃಂದ ಪೊಗಳೀದರಾನಂದ। ನಂದನಾಗಿ ಕೇಳಿ ಘನಸಂತಸ ತಾಳಿ । ಬಂದೆನೊ ಎಲೊ ಹರಿಯೆ ಪಂಢರಿಪುರಿ ಧೊರಿಯೆ । ಬಿಂದುಮಾತುರ ಪುಣ್ಯ ಇಲ್ಲವೊ ಕಾರುಣ್ಯ । ಸಿಂಧು ಪುಂಡರೀಕ ವರದ ನಿಷ್ಕಳಂಕ । ಚಂದಿರ ಭಾಗ ಭೀಮಾ ತೀರ ಗೋವಾಗಾ । ನಂದ ವಿಗ್ರಹ ವಿಜಯವಿಠ್ಠಲ ಮುನಿಗೇಯ। ವಂದಿಸುವೆನು ನಾರಂದ ಮುನಿ ಹೃದ್ಭಾನು ॥೧॥

**....ಮಟ್ಟತಾಳ....**

ದೋಷಿ ಮಾನವರಿಗೆ ದಯಮಾಡುವೆನೆಂದು । ದೇಶದೊಳಗೆ ನಿನ್ನ ಕೀರ್ತಿ ವ್ಯಾಪಿಸಿ ಇಪ್ಪದು । ದೋಷ ವಿದೂರ ದುರ್ಜನ ಮಾರ । ದೋಷ ಭಾವಗಳೆಲ್ಲ ನರದಂತೆ ಕೈಕೊಂಡು।

ಯೋಷಿ ಜನರ ಸಂಗಡ ಮಾಡಿ ಅವರ ಪಾಪ - । ಲೇಶವುಳಿಯದಂತೆ ಅಪಹರಿಸಿದ ದೇವ । ಲೇಸು ನಿನ್ನ ಮಹಿಮೆ ಪೊಗಳಲು ಅತಿ ಚಿತ್ರಾ । ಏಸು ಬಗೆಯಿಂದ ವಲಿಸಿದ ಕಾಲಕ್ಕು । ಆಶೆ ತೀರದು ಕಾಣೊ ಅನಿಮಿತ್ಯ ಬಂಧು । ವಾಸ ಪಂಢರಪುರಿ ವಿಜಯ ವಿಠ್ಠಲಗೋವ । ಳೇಶ ಇಟ್ಟಾಗಿ ಮೇಲೆ ನಿಂದ ಮುಕ್ಕುಂದ ॥ ೨॥

....ತ್ರಿವಿಡಿತಾಳ....

ದೇವರೆಂಬುವರೆಲ್ಲ ನಿನ್ನ ತರುವಾಯ । ಆವಾವ ದೇಶದಲಿ ನೋಡಿದರೂ। ಕಾವ ನೀತಿಯಲ್ಲಿ ಕೊಡುವಲ್ಲಿ ಕೊಂಬಲ್ಲಿ । ಭೂವಲಯದಲ್ಲಿ ಸರಿಗಾಣೆನೋ । ಪಾವನ್ನ ಮೂರ್ತಿಯೆ ನಿನ್ನ ನಂಬಿದೆ ಇ - । ನ್ನಾವ ದೈವಗಳನ್ನು ಸ್ತುತಿಸಲರಿಯೆ। ಪೂವಿನೊಳಗೆ ಇಟ್ಟು ನಮ್ಮನು ಸಲುಹುವ । ಗೋವರ್ಧನನುದ್ಧರಣ ಕಲಿಹರಣ। ಭಾವೆ ವಂದನೆ ಕೇಳೊ ನಿರ್ವಿಘ್ನದಾಯಕನೆ । ದೇವಗಂಗಿಯ ಸ್ನಾನ ಮಾಡಿಸಯ್ಯಾ। ಸೇವಕ ನುಡಿದದ್ದು ಸತ್ಯ ಮಾಡುವಿ ವಸು । ದೇವ ನಂದನ ಪಂಢರಿಪುರಿರಾಯನೆ। ಶ್ರೀವತ್ಸಲಾಂಛನ ವಿಜಯ ವಿಠ್ಠಲ ಎನ್ನ । ಜೀವನೋಪಾಯವೇ ಜೀವ ಜೀವೇಶ ॥ ೩॥

....ಅಟ್ಟತಾಳ....

ಹೂಣ ಪುಳಿಂದ ಪುಲ್ಕಸ ಕುಂಕ ಕಿರಾತ । ಕಾಣ ಅಭೀರ ಯವನ ನಾನಾ ವಿಜಾತಿ । ಯೋನಿ ಜನರಿಗೆ ನೀನೆ ವಲಿದಂತೆ ಕರುಣಾಳೆ । ನಾನಂತು - ವೈಷ್ಣವ ಸತ್ಕುಲ ಪ್ರಸೂತ । ಆನಂದತೀರ್ಥರ ಮತದಲ್ಲಿ ಪೊಂದಿಪ್ಪೆ । ಏನಾದರವಗುಣ ಇದ್ದರಾದಡೆ ನೀನೆ । ಎಣಿಸಾದೆ ಎನ್ನ ಪಾಲಿಸು ಪರದೈವ। ಕಾಣಿ ಮಿಕ್ಕಾ ದ್ರವ್ಯದಿಂದ ನಿನ್ನಂಘ್ರಿ । ಮಾನಸದಲಿ ಪೂಜೆ ಮಾಡಲಿಲ್ಲ ಪ್ರಭುವೆ । ಮಾನಿಸ ವೇಷನೆ ವಿಜಯವಿಠ್ಠಲರೇಯಾ । ಜ್ಞಾನವ ಕೊಡುವೆ ಮಹಾಭಾಗ್ಯವ ಕೊಡುವೆ ॥ ೪॥

....ಆದಿತಾಳ....

ನಿನ್ನ ನುಡಿದೆ ನಾನು ನಿನ್ನ ಪಾಡಿದೆ ನಾನು । ನಿನ್ನ ಕಾಡಿದೆ ನಾನು ನಿನ್ನ ಮುಂದೆ ಎನ್ನ ಬಡತನ ಪೇಳಿಕೊಂಡು । ಅನಂತ ಬಗೆಯಿಂದ ಕೊಂಡಾಡುವೆನೊ ವಿಠ್ಠಲಾ । ಎನ್ನ ಭಾರ ನಿನ್ನದು ಕ್ಷಣ ಅನಂತ ಕ್ಷಣಕ್ಕೆ । ಮುನ್ನೆ ಪೇಳುವುದೆಲ್ಲಾ ಉಪಚಾರವೊ ಸ್ವಾಮಿ । ಘನ್ನ ಪಂಢರಿರಾಯಾ ವಿಜಯವಿಠ್ಠಲರೇಯಾ । ರನ್ನ ಪ್ರಸನ್ನ ಸಂಪನ್ನ ಮತಿಯ ಕೊಡು ॥ ೫॥

....ಜತೆ....

ಮನೋರಥ ಸಿದ್ಧ ಮಾಡಯ್ಯ ಮನ್ಮಥನಯ್ಯಾ । ಅನುಭವದಿಂದಲಿ ವಿಜಯವಿಠ್ಠಲ ಪಂಢರಿ ॥ ೬॥

## ೨) ಬುಧವಾರ ಸುಳಾದಿ

ಇಷ್ಟು ನಿರ್ದಯವ್ಯಾಕೊ ಎಲೆ ಆಪ್ತನಾದ । ಕೃಷ್ಣ ನಿನಗೆ ನಾನು ದೂರಾದವನೆ। ಘಟ್ಟಿ ಮನಸಿನವ ನೀನಲ್ಲ ಎಂದಿಗೂ ಎನ್ನ ಅ - । ದೃಷ್ಟ ಲಕ್ಷಣವೆಂತೊ ತಿಳಿಯದಯ್ಯಾ।

ಸೃಷ್ಟಿಯೊಳಗೆ ಭಕುತ ವತ್ಸಲನೆಂಬೊ । ಶ್ರೇಷ್ಠವಾದ ಬಿರುದು ಇಲ್ಲವೇನೋ । ಶಿಷ್ಟ ಜನರ ಸಂಗ ವರ್ಜಿತನಾಗಿ ನಿನ್ನ । ಮುಟ್ಟಿ ಭಜಿಸದಿಪ್ಪ ಹೀನನೆಂದು । ಮಿಟ್ಟು ನೋಡಿದರೆ ಮತ್ತಿಷ್ಟು ಅಧಿಕ್ಯವಾದ। ದುಷ್ಟ ನಡತಿ ಇಂದ ಬದ್ಧನಾಹ । ಪ್ರೇಷ್ಟ ಯೋಗ್ಯವಾದ ಕಾಲವ ನೀರೀಕ್ಷಿಸ । ಎಷ್ಟು ಕಲ್ಪಗಳಿಗೆ ಭವದಾಲಿಂದ । ಸಿಷ್ಟವಾಗುವನೇನೋ ಅಭೀಷ್ಟ ವೈದುವ ನೆಂತೋ । ದೃಷ್ಟಿಲಿ ನೋಡದಿರೆ ಅಜಭವಾದ್ಯರು । ಕಷ್ಟವೈದುವರು ನಿಜ ಸುಖವಿಲ್ಲದಲೆ। ವಿಷ್ಣು ನಿನ್ನಯ ಮಹಿಮೆ ಇನಿತು ಇರಲು । ಎಷ್ಟರವರಯ್ಯಾ ಮಿಕ್ಕಾದ ಭಕ್ತರೆಲ್ಲ। ತುಷ್ಟನಾಗಿ ನಿನಗೆ ನೀನೇ ಒಲಿದು । ದಟ್ಟವಾದ ಕರ್ಮ ನೂಕಿ ಕಢಿಗೆಮಾಡಿ । ಪುಷ್ಟಿಗೈಸು ಜ್ಞಾನಾನಂದದಿಂದ । ತಟ್ಟಲೀಸದೆ ಕಲಿಬಾಧಿ ಎಂದೆಂದಿಗೆ । ಹೃಷ್ಟನಾಗು ಎನ್ನ ಸಾಧನಕ್ಕೆ। ಧಿಟ್ಟ ಮೂರುತಿ ಗುರು ವಿಜಯ ವಿಟ್ಠಲರೇಯಾ। ಪೊಟ್ಟಿಯೊಳಗೆ ಜಗವಿಟ್ಟು ಸಲಹುವ ದೇವ ॥ ೧॥

....ಮಟ್ಟತಾಳ....

ಕಾಳಿ ಸರ್ಪನು ನಿನ ಕಚ್ಚೆ ಬಿಗಿಯೆ ಅವನ । ಕೀಳು ನಡತೆಯನ್ನು ನೋಡದಲೆ ಕರುಣದಲಿ। ಮೇಲಾದಾನುಗ್ರಹ ಮಾಡಿದಿ ಮುದದಿಂದ । ಫಾಲಲೋಚನ ಸುರಪ ಗುರು ಸತಿ ಭೃಗು ಭೀಷ್ಮ । ಶೀಲ ಭಕುತರೆಲ್ಲ ಕಲಿ ಕಲ್ಮಷದಿಂದ । ಕಾಲನಾಮಕ ನಿನ್ನ ಬಂಧಕ ಶಕುತಿಯಲಿ । ವ್ಯಾಳೆ ವ್ಯಾಳೆಗೆ ಅಪರಾಧವೆ ಮಾಡಿದರೂ । ಪಾಲಿಸಿದಿ ಹೊರ್ತು ಪ್ರದ್ವೇಷ ಮಾಡಿದಿಯಾ । ಜಾಲ ಅಘವ ಮಾಡಿ ದೇಹಿ ದೇಹಿ ಎನಲು । ತಾಳುವರಲ್ಲದಲೆ ಛಿದ್ರಗಳೆಣಿಸುವರೆ । ಮೂಲ ನೀನೆ ಸುಖ ದುಃಖಾನುಭವಕ್ಕೆ । ಮೂರ್ಲೋಕಾಧಿಪ ಗುರು ವಿಜಯವಿಠ್ಠಲ ನಿನ್ನ । ಆಳುಗಳೊಳಗೊಬ್ಬ ಅಧಮನು ನಾನೇವೆ।।೨॥

....ತ್ರಿವಿಡಿತಾಳ....

ವಿದೇಶದವನಾಗಿ ಪಥದೊಳು ಒಂದು ಕ್ಷಣ । ಆದರ ಪರಸ್ಪರವಾದ ಭಿಡಿಯಾ । ಹೃದಯದೊಳು ಮರಿಯಾದೆ ಸ್ಮರಿಸುವನೊಮ್ಮಿಗನ್ನ । ಪದುಮನಾಭನೆ ನಿನ್ನ ನಿರ್ಭಿಡಿಯ ತನಕೆ । ಆದಿ ಅಂತ್ಯವಿಲ್ಲ ಆಶ್ಚರ್ಯ ತೋರುತಿದೆ । ಉದಧಿ ಪೋಲುವ ದಯಪೂರ್ಣನೆಂದು। ಸದಮಲವಾಗಿ ನಿನ್ನ ಧೇನಿಸಬೇಕೆಂತೊ । ವಿದೂರನೆನಿಪ ದೋಷರಾಶಿಗಳಿಗೆ । ಪದೋಪದಿಗೆ ಗುರುದ್ರೋಹ ಮಾಡಿದಿ ಎಂದು ಅ । ವಾಧಿ ಇಲ್ಲದಲೆ ಹಂಗಿಸುವದು । ಮೋದವಾಗಿ ನಿನಗೆ ತೋರುತಲಿದೆ ನಿನ್ನ । ಚದುರಾತನಕೆ ನಾನು ಎದುರೆ ನೋಡಾ । ಪದುಮಸಂಭವ ಮುಖ್ಯ ದಿವಿಜರು ಸ್ವಾತಂತ್ರದಿ । ಪದವಾ ಚಲಣದಲ್ಲಿ ಸಮರ್ಥರೇ । ಹೃದಯ ದೊಳಗೆ ವಾಸವಾಗಿದ್ದ ಹರಿ ನಿನ್ನ । ಚೋದನದಂತೆ ನಡೆವ ಆವಕಾಲ । ಇದು ಎನ್ನ ಮಾತಲ್ಲ "ಯಥಾ ದಾರುಮಯೀ ಯೋಷಾ ।" ಶುದ್ಧ ಭಾಗವತೋಕ್ತಿ ಪ್ರಮಾಣದಂತೆ। ಅದು ಭೂತ ಬಿಂಬ ನೀನು ಪ್ರತಿಬಿಂಬ ಜೀವ ನಿನಗೆ ನೀ । ಮುದದಿ ಮಾಡಿಸದಿಪ್ಪ ಕಾರ್ಯವೆನಗೆ। ಒದಗಲು ಪೂರ್ವೋಕ್ತವಾದ ಪ್ರಮಾಣಗಳಿಗೆ । ಅಧಿಕಾರ ಸಿದ್ಧಾಂತ ಬರುವದೆಂತೋ । ಉದರಗೋಸುಗವಾಗಿ ಮಾಡಿದವನಲ್ಲ। ಉದಿಯಾಸ್ತಮಾನ ಎನ್ನ ಬಳಲಿಪಾದು । ಇದು ಧರ್ಮವಲ್ಲ ನಿನಗೆ ಕರವ ಮುಗಿದು ನಮಿಪೆ। ಪದಕೆ ಬಿದ್ದವನ ಕೂಡ ಛಲವ್ಯಾತಕೆ । ಬದಿಯಲ್ಲಿ ಇಪ್ಪ ಗುರು ವಿಜಯವಿಠ್ಠಲರೇಯಾ । ಸದಾ ಕಾಲದಲಿ ನೀನೇ ಗತಿ ಎಂದು ಇಪ್ಪೆ ನೋಡಾ ॥ ೩॥

....ಅಟ್ಟತಾಳ....

ಬಲವಂತವಾಗಿದ್ದ ಪೂರ್ವದ ಕರ್ಮವು । ತಲೆಬಾಗಿ ಉಣಬೇಕು ಉಣದಿದ್ದರೆ ಬಿಡದು। ಜಲಜನಾಭನೆ ನಿನ್ನ ಸಂಕಲ್ಪ ಇನಿತೆಂದು । ತಿಳಿದು ಈ ದೇಹದ ಅಭಿಮಾನವಿದ್ದರು । ತಲೆದೂಗಿ ಸುಮ್ಮನೆ ಇರಲಾಗಿ ಎನ್ನಿಂದ । ಒಲ್ಲೆನೆಂದರೆ ಬಿಡದು ಎಲ್ಲಿ ಪೊಕ್ಕರೆನ್ನ । ನಳಿನಾಕ್ಷ ನೀನೆವೆ ಘನ ಕರುಣವ ಮಾಡಿ। ವಿಲಯ ಗೈಸುವ ಉಪಾಯಗಳಿಂದಲಿ । ನೆಲೆಯಾಗಿ ನಿಂತಿದ್ದ ಪಾಪ ರಾಶಿಗಳನ್ನು। ಸತಿ ಇಂದಿನ ದಿನಕ್ಕೆ ಸರಿಹೋಯಿತು ಎಂದು । ಕುಲ ಪಾವನ ನೀನೇ ಪೇಳಿದ ಮಾತಿಗೆ । ಹಲವು ಬಗೆ ಇಂದ ಇನ್ನು ಬಳಲಿಪದ್ಯಾತಕ್ಕೆ । ಮಲತ ಮಲ್ಲರ ಗಂಡ ಗುರು ವಿಜಯವಿಠ್ಠಲರೇಯ । ಖಳದರ್ಪಭಂಜನ ಕೃಪೆ ಇಂದ ನೋಡೋದು ॥೪॥

....ಆದಿತಾಳ....

ಅನುಭವದಿಂದ ಇದು ತೀರಿಪೆನೆಂದೆನೆ । ವನಜಭವ ಕಲ್ಪಕ್ಕೆ ಎನ್ನಿಂದಾ ಹದಲ್ಲ । ಸನಕಾದಿ ಮುನಿವಂದ್ಯ ನೀನೀವೆ ದಯದಿಂದ । ಋಣವನ್ನು ತೀರಿಪಿದು ಆಲಸ್ಯ ಮಾಡದಲೆ। ತೃಣದಿಂದ ಸಾಸಿರ ಹಣವನ್ನು ತೀರಿದಂತೆ । ಶಣಿಸಲಿ ಬೇಡ ಇನ್ನು ಅಪರಾಧ ಮೊನೆ ಮಾಡಿ। ಕ್ಷಣ ಕ್ಷಣಕೆ ಇದು ಬೆಳಿಸುವದುಚಿತವೆ । ಮುನಿಮನಮಂದಿರ ಗುರು ವಿಜಯ ವಿಠ್ಠಲರೇಯ। ನಿನ್ನವನೆಂದರೆ ಎನಗಾವ ದೋಷ ಉಂಟು ॥ ೫॥

....ಜತೆ....

ಅಹಿತ ಮಾಡುವನಲ್ಲ ಭಕತರ ಸಮೂಹಕ್ಕೆ । ಲೋಹಿತಾಕ್ಷ ಗುರು ವಿಜಯ ವಿಠ್ಠಲರೇಯ ॥ ೬॥

## ೫) ಗುರುವಾರ

### (ಮಧ್ವಾಂತರ್ಗತಶ್ರೀವೇದವ್ಯಾಸದೇವರು, ಶ್ರೀಸೀತಾರಾಮದೇವರು ಮತ್ತು ಶ್ರೀರಾಯರು)

**ಅ. ಹಾಡುಗಳು**

**ರಾಗ - ಪುನ್ನಾಗ ತೋಡಿ** **ತ್ರಿವಿಡಿ ತಾಳ**

೧) ಮಧ್ವಾಂತರ್ಗತ ವೇದವ್ಯಾಸಾ । ಕಾಯೋ । ಶುದ್ಧ ಮೂರುತಿಯೆ ಸರ್ವೇಶಾ ॥ ಶ್ರದ್ಧೆಯಿಂದಲಿ ನಿನ್ನ ಭಜಿಸುವ ಭಕುತರ್ಗೇ । ಬುದ್ಧ್ಯಾದಿಗಳ ಕೊಟ್ಟುದ್ಧರಿಸೊ ದೇವರದೇವ ॥ ಪ॥ ದ್ವಾಪರದಲಿ ಒಬ್ಬ ಮುನಿಪ । ತನ್ನ । ಕೋಪದಿಂದಲಿ ಕೊಟ್ಟ ಶಾಪಾ । ಶಾಪಿಸಲು ಜ್ಞಾನ ಲೋಪ । ವಾಗೆ । ಆ ಪರತತ್ವ ಸ್ವರೂಪ ॥ ಶ್ರೀಪತಿಯೆ ಕಾಯೆಂದು ಮೊರೆಯಿಡೆ । ಪಾಪವಿರಹಿತಳಾದ ಯಮುನೆಯ ದ್ವೀಪದಲಿ ಅಂಬಿಗರ ಹೆಣ್ಣಿನ । ರೂಪಕೊಲಿದವನಲ್ಲಿ ಜನಿಸಿದೆ ॥ ೧॥ ವೇದ ವಾದಗಳೆಲ್ಲ ಕೆಡಲೂ ತತ್ತ್ವ । ವಾದಿ ಜನರು ಬಾಧೆ ಬಡಲೂ । ಮೇದಿನಿ ಸುರರು ಮೊರೆಯಿಡಲೂ। ನಾನಾ । ವೇದಾದಿ ಭಾಗ ರಚಿಸಲು ॥ ಮೋದದಿಂದ ತದರ್ಥಬೋಧಕ । ವಾದ ಸೂತ್ರ ಪುರಾಣ ರಚಿಸಿ ವಿ - । ವಾದಗಳನು ನಿರಾಶೆ ಮಾಡಿದ । ಸಾಧುವಂದಿತ ಬಾದರಾಯಣ ॥ ೨॥ ಸುಮತಿ ಗಳಿಗೆ ನೀ ಬೋಧಿಸಿದೆ । ಮಿಕ್ಕ ಕುಮತಂಗಳೆಲ್ಲಾ

ಭೇದಿಸಿದೇ । ಕ್ರಿಮಿಯಿಂದ ರಾಜ್ಯವಾಳಿಸಿದೇ । ಜಗ । ತ್ಸ್ವಾಮಿ ಕಾ(ಚ)ರ್ಯವನು ತೋರಿಸಿದೆ॥ ವಿಮಲ ರೂಪನೆ ಕಮಲನಾಭನೆ । ರಮೆಯ ವಲ್ಲಭ ರಮ್ಯ ಚರಿತನೆ । ಮಮತೆಯಲಿ ಕೊಡು ಕಾಮಿತಾರ್ಥವ ನಮಿಸುವೆನು ಹಯವದನ ಮೂರುತಿ ॥೩॥

೨) ಮಧ್ವಾಂತರ್ಗತವೇದವ್ಯಾಸಾ । ಮಮ । ಹೃದ್ವನರುಹ ಸನ್ನಿವಾಸಾ ॥ ಪ.॥ ಸದ್ಬುದ್ಧಿ ಕೊಡು ಶ್ರೀಕೃಷ್ಣ ದ್ವೈಪಾಯನ । ಚಿದಚಿದ್ವಿಲಕ್ಷಣ ತ್ವತ್ಪಾದದ್ವಯಾಬ್ಜವ ತೋರೋ ॥ ಅ.ಪ.॥ ಬಾದರಾಯಣ ಬಹುರೂಪಾ । ಸನಕಾದಿ ಸನ್ನುತ ಧರ್ಮಯೂಪಾ । ವೇದೋದ್ಧಾರನಾದಿ ಕರ್ತಪೂರ್ಣ। ಬೋಧ ಸದ್ಗುರುವರರಾಧಿತ ಪದಯುಗ । ಮೇದಿನಿಯೊಳಾನೋರ್ವ ಪರ -। ಮಾಧಮಾಧಮ ಕೈ ಪಿಡಿಯೊ ಪೂರ್ಣ ಮ-। ಹೋದಧೇ ಕಮನೀಯ ಕಾಯ ಪ್ರಬೋಧ ಮುದ್ರಾಭಯ ಕರಾಂಬುಜ ॥ ೧॥ ಹರಿತೋಪ ಲಾಭ ಶರೀಶ। ಪರಾಶರ ಮುನಿವರ ಸುಕುಮಾರ ॥ ಪರಮ ಪುರುಷಕಾರ್ತ ಸ್ವರ ಗರ್ಭ ಪ್ರಮುಖ ನಿ -। ರ್ಜರಗಣ ಮುನಿನುತ ವರಪಾದ ಪಂಕಜ ॥ ಕುರು ಕುಲದಿ ಧೃತರಾಷ್ಟ್ರ ಪಾಂಡು ವಿ । ದುರರ ಪಡೆದವರಿಗೊಲಿದು ಸಂ -। ಹರಿಸಿ ದುರ್ಯೋಧನನ ಭಾರತ । ವಿರಚಿಸಿದ ಸುಂದರ ಕವೀಂದ್ರ ॥ ೨॥ ಜಾತರೂಪ ಜಟಾಜೂಟ । ಶ್ರೀನಿಕೇತನ ತಿಲಕ ಲಲಾಟ । ಪೀತ ಕೃಷ್ಣಾಜಿನ ಶ್ವೇತ ಶ್ರೀಯಜ್ಞೋಪ-। ವೀತ ಮೇಖಲ ದಂಡಾನ್ವಿತ ಕಮಂಡಲ ॥ ಭೂತ ಭಾವನ ಭೂತ ಕೃತ್ಸ । ದ್ಭೂತಿ ದಾಯಕ ಶ್ರೀಜಗನ್ನಾಥ ವಿಠ್ಠಲನೆ ನಿನ್ನ ಮಹಿಮೆ -। ನಾ ತುತಿಸಬಲ್ಲೆನೆ ಸುಖಾತ್ಮಾ॥೩॥

**ಆ. ಸುಳಾದಿಗಳು**

## ೧) ಶ್ರೀವೇದವ್ಯಾಸ ಸುಳಾದಿ

### ....ಧ್ರುವತಾಳ....

ಯತಿಗಳ ಶಿರೋರತುನಾ ಸತಿಯ ಅವಿಯೋಗಿ । ರತಿಪತಿ ಜನಕಾ ಸ್ವರತ ಸ್ವಪ್ರಕಾಶಿತ। ಅತಿತಾದ್ಭುತ ಮಹಿಮ ಪತಿತ ಪಾವನನಾಮಾ । ನತಜನ ಸುರಧೇನು ದಿತಿಜತಿಮಿರಭಾನು । ಅತಿ ದೂರ ದೂರಸಂತತ ದಯಾಪರ । ಚತುರ ನಾನಾ ಸುರತತಿ ಕರಕಮಲಾ । ರ್ಚಿತಪಾದ ಸುಂದರ ದೀನ ಮಂದಾರ । ಪ್ರತರ್ದನನಾಮ ನಮ್ಮ ವಿಜಯವಿಠ್ಠಲ ಸತ್ಯ । ವತಿಸೂನು ಜಗದೊಳು ಪ್ರತಿಯಿಲ್ಲದ ದಾತಾ ॥೧॥

### ....ಮಟ್ಟತಾಳ....

ಜ್ಞಾನಮಯಾಕಾರ ಜ್ಞಾನಮಯಾನಂದಾ । ಜ್ಞಾನಮಯೈಶ್ವರ್ಯ ಜ್ಞಾನಮಯವರ್ನ। ಜ್ಞಾನಮಯ ತೇಜಾ ಜ್ಞಾನಮಯ ಶಕ್ತಿ । ಜ್ಞಾನ ಮಯಾಂಬುಧಿ ಜ್ಞಾನವಿಲೋಲ ನಾ । ಮಾನಿ ವಿಜಯ ವಿಠ್ಠಲನೆ ನಿನಗೆ ಸಮಾ । ಮೌನಿ ವ್ರತ ಧೃತನೆ ಜ್ಞಾನ ಸುಖ ಸಾಂದ್ರಾ ॥ ೨॥

### ....ತ್ರಿವಿಡಿತಾಳ....

ಕಲಿಯ ವ್ಯಾಪಾರ ವೆಗ್ಗಳವಾಗಿ ವ್ಯಾಪಿಸಿ । ಸಲೆ ಧರ್ಮಾವಳಿಗಳ । ಅಳಿದು ಪೋಗಿರಲಾಗಿ। ಸುಲಭ ಜ್ಞಾನವೆಲ್ಲ ಮಲಿನದಿಂದಲಿ ಕೆಟ್ಟು । ಇಳಿಯೊಳು ಉತ್ತಮ ಸಂಪ್ರದಾಯಕದಾ । ಸುಳುವು ಕಾಣದೆ ಪೋಗಿ ಅಳಲಿ ಗೀರ್ವಾಣರು । ಜಲಜ ಸಂಭವನು

ಒಂದಾಗಿ ನಿಂದೂ । ತಲೆವಾಗಿ ಉಸಿರಲು ಬಲುವಾಗಿ । ವಶಿಷ್ಠ ಕುಲದಲ್ಲಿ ಜನಿಸೀದ ಬಲದೈವವೇ। ನಳಿನಾಕ್ಷ ಮಹಸಿರಿ ವಿಜಯ ವಿಟ್ಠಲ ಬದರಿ। ನಿಲಯ ನಿನ್ನ ಲೀಲೆಗೆ ನೆಲೆಯಾವದೋ ಜೀಯಾ ॥ ೩॥

....ಅಟ್ಟತಾಳ....

ಪರಾಶರ ಉದರದಲ್ಲಿ ಒಂದು ಮೂರಾರು ಪುರಾಣ ವಿರಚಿಸಿ । ಅದರೊಳು। ಆರು ಸತ್ವ ರಾಜಸ ತರುವಾಯ । ಆರು ತಾಮಸ ಇನಿತಷ್ಟು ದಶವೆಂದು ಧಾರುಣಿ ತುಂಬಲು। ಕರುಣದಿಂದ ಸೂರಿ ಮುಕ್ತರಿಗೆ ನಿತ್ಯ ಸಂಸಾರಿಗೆ । ಘೋರತಮಸಿಗೀ ಮೂರು ಪರಿಮಾಡಿ । ಕಾರಣ ವೆನಿಸಿ ಪ್ರತಿಷ್ಠಿಸಿ ಕಲಿಯ ನಿ । ವಾರಣವನು ಮಾಡಿದ ಭಾರತಕರ್ತನೆ ಸುಜ । ನರಿಗೆ ತೋರಿದ ದ್ವಯಪಾಯನ ಮುನಿ । ಈರೇಳು ಭುವನದೊಳಾರು ನಿನಗೆ ಎಣೆ । ಕಾರುಣ್ಯನಿಧಿ ಪುಣ್ಯ ವಿಜಯವಿಟ್ಠಲ ಮುನಿ । ವರೇಣ್ಯ ಸುರರಗ್ರ ಗಣ್ಯ ನಿರ್ವಿಣ್ಯಾ ॥ ೪॥

....ಆದಿತಾಳ....

ತಮ ಸಂಬಂಧವ ಕಳದು ವಿಮಲ ಸುಜ್ಞಾನವನ್ನು । ಅಮರರಿಗೆ ಪಾಲಿಸಿದೆ ಅಮಿತ ತೇಜಸದಿಂದ । ಕಮಂಡಲು ದಂಡಕಾಷ್ಠ ಸಮೀಚಿನವಾದ ಕರ । ಕಮಲದಲ್ಲಿ ಧರಿಸಿದಮಲ ಕಾಷಾಯಾಂಬರಾ - । ಗಮದರ್ಥ ಶಿಷ್ಯರಿಗೆ ಪ್ರಮೇಯಗಳ ಪೇಳುತ । ಕ್ರಮನೂರಾರು ಮಾಡಿದ ಕುಮತಿಯ ಪರಿಹರಿಸಿ । ದಮಯತೆ ನಾಮ ಯತಿ ವಿಜಯವಿಠಲನನು । ಪರಮ ಚಿತ್ರ ರಾಜ್ಯವನು ಕ್ರಿಮಿಯಿಂದ ಆಳಿಸಿದೆ॥೫॥

....ಜತೆ....

ಬಾದರಾಯಣ ಸುಖಕಾರಣ ಭಕುತರಿಗೆ । ವೇದವ್ಯಾಸನೆ ವಿಷ್ಣು ವಿಜಯ ವಿಠಲವ್ಯಾಸ ॥೬॥

## ಶ್ರೀಸೀತಾರಾಮದೇವರು

### ರಾಗ - ಪೂರ್ವಿ, ಆದಿತಾಳ

೧) ನಮೋ ನಮೋ ರಾಮಾ ದೇವೋ । ತ್ತುಮಾಂಜನೇಯ ಪ್ರೇಮಾ । ಕ್ಷಮಾಪಶ್ರಿತ ಜನ ಸಮೂಹ ಕಲ್ಪ । ದ್ರುಮಾಪರಾಧ ಕ್ಷಮಾಪನಂ ಕುರು॥ಪ॥ ಅಜಾತ ನರರೂಪ ರಘುಜಾಂ। ಬಜಾಪ್ತ ಕುಲದೀಪ ॥ ಅಜೇಶ ಭುಜಗಾದ್ವಿಜೇಂದ್ರ ಮುಖಿಸುರ । ವ್ರಜಾಧಿಪತಿ ಹರೆ ಗಜೇಂದ್ರವರದ ॥ ೧॥ ಅಯೋಧ್ಯ ಪುರಿ ನಿಲಯಾ ನಿತ್ಯಾ - । ವಿಯೋಗಿನೀಪ್ರಿಯಾ ॥ ದಯಾಪ ಅಸ್ಮದ್ಭಯಾಪಹರ ಋಷಿ । ಸುಯಾಗ ರಕ್ಷಕ ತ್ರಯೀಮಯಾತ್ಮಾ ॥ ೨॥ ಸನಾತನ ಸುಮಿತ್ರಾ ದಶಶ್ಯಂ - । ದನಾಖ್ಯ ನೃಪ ಪುತ್ರಾ॥ ಅನಾದಿ ಮಂಗಳ ಸುನಾಮ ಚರಿತಾ ॥ ಘನಾಶನಭಿನವ ಜನಾರ್ದನ ವಿಠ್ಠಲ ॥ ೩॥

### ೨) ರವಿವಾರದ ಶ್ರೀರಾಮಾಯಣಸಾರ ಸುಳಾದಿ ಅನ್ನಬೇಕು

....ಧ್ರುವತಾಳ....

ರಾಜ ರಾಜರಮಣಿ ರಾಜಶೇಖರ ವಿನುತಾ । ರಾಜ ತೇಜೋನಿಧಿ ರಾಜಾಧೀಶಾ । ರಾಜಹಂಸನಯನಾ ರಾಜಶೇಖರ ವಿ । ರಾಜಿತಕೀರ್ತಿ ಗಜರಾಜ ವರದಾ । ರಾಜವದನಾ

ರಿಪುರಾಟ ಮಸ್ತಕಶೂಲಾ । ರಾಜ ರಾಜೋತ್ತುಮ ರಾಜವಿನುತಾ । ರಾಜೀವದೊಳಗಿದ್ದ ರಾಜೀವನ ಪುಟ್ಟಿಸಿದ । ರಾಜ ಮಾರ್ತಾಂಡ ದ್ವಿಜರಾಜಗಮನಾ । ರಾಜ ರಾಜರು ನಿನ್ನ ರಾಜಿಸುವ ಚರಣಾ । ರಾಜೀವದಲ್ಲಿ ವಾಲಗ ಮಾಳ್ಪರೊ । ರಾಜಾ ರಾಜಾಗ್ರಣ್ಯ ರಾಜಾಭಿಷೇಕಕ್ಕೆ । ರಾಜಾ ನೀನಲ್ಲದೆ ರಾಜರುಂಟೇ । ರಾಜಗಂಭೀರ ಅಪರಾಜಿತನಾಮ ನಮ್ಮ । ವಿಜಯವಿಠ್ಠಲ ರಂಗರಾಜ। ರಾಜ ಸಮುದ್ರ ರಾಜ ಶಯನನೆ ॥ ೧॥.... ಇತ್ಯಾದಿ. (ಪುಟ ೯೧-೯೩ ರಲ್ಲಿದ್ದಂತೆ)

## ೩) ಗುರುವಾರ ಸುಳಾದಿ

### ....ಧ್ರುವತಾಳ....

ಘನ ದಯಾನಿಧಿಯಾದ ಗುರುರಾಘವೇಂದ್ರ ನಿಮ್ಮ । ವನಜ ಪಾದಯುಗಕೆ ನಮೋ ನಮೋ। ಜನುಮಾರಭ್ಯವಾಗಿ ಅಭಿನಮಿಸದಲಿಪ್ಪ । ಮನುಜನ ಅಪರಾಧ ವೆಣಿಸದಲೆ ॥ ವನಧಿಪೊಲುವ ಕರುಣಿ ಗೋವತ್ಸನ್ಯಾಯದಿಂದ । ನಿನಗೆ ನೀನೆ ಬಂದು ಸ್ವಪ್ನದಲ್ಲಿ । ಸನಕಾದಿ ಮುನಿಗಳ ಮನನಕ್ಕೆ ನಿಲುಕದ । ಇನಕೋಟಿಭಾಸ ವೇದೇಶ ಪ್ರಮೋದತೀರ್ಥ । ಮುನಿಗಳಿಂದಲಿ ಕೂಡಿ ಸಂದರುಶನವಿತ್ತು । ವಿನಯೋಕ್ತಿಗಳ ನುಡಿದ ಕೃತ್ಯದಿಂದ । ಆನಂದವಾಯಿತು ಅಘದೂರನಾದೆನಿಂದು। ದನುಜಾರಿ ಭಕತರ ಮಣಿಯೆ ಗುಣಿಯೇ । ಎಣೆಗಾಣೆ ನಿಮ್ಮ ಕರುಣಾಕಟಾಕ್ಷ ವೀಕ್ಷಣಕ್ಕೆ । ಅನುಪಮ ಮಹಿಮನೆ ಅನಿಳಪ್ರಿಯಾ । ಗುಣಗಣ ಪರಿಪೂರ್ಣ ಗುರುವಿಜಯವಿಠ್ಠಲ ನಿಮ್ಮ । ಘನವಾದ ಬಲದಿ ಎನಗೆ ಸುಳಿದ ನಿಂದು ॥ ೧॥

### ....ಮಟ್ಟತಾಳ....

ಸುಖತೀರ್ಥರ ಮತವೇದ್ಯಂಬಾ ಧ್ವಜವನ್ನು । ಖಿಖನಸಾಂಡದ ಮಧ್ಯ ಪ್ರತಿಯಲ್ಲದೆ ಮೆರೆಯ । ಪಖರಹಿತವಾದ ಪಕ್ಷಿಯು ತನ್ನಯ । ಪಖಚಿನ್ಹಿಯ ಜನಿತ ಮಾರುತನಿಂದಲಿ ಧ್ವಜವ । ಪ್ರಕಟದಿ ಚರಿಸುವ ಯತ್ನದಿಂದಲಿ ದುರುಳ । ಸ ಕುಟಿಲರಾದ ಆ ವಿದ್ಯಾರಣ್ಯ । ಮುಖರೆಲ್ಲರು ಬರಲು ಅಮಸ್ಥಿತ ನಿಶ್ಚಯದಿ ಮಖಶತಜ ನೆನಿಪ ಜಯರಾಯಾಚಾರ್ಯ । ಪ್ರಕಟಿ ಗ್ರಂಥಗಳೆಂಬ ಪಾಶಗಳಿಂದಲ್ಲಿ । ಯುಕುತಿಯಿಂದಲಿ ಬಿಗಿದು ವೀರಧ್ವನಿಯ ಗೈಯೆ । ಉಕುತಿಗೆ ನಿಲ್ಲದಲೆ ಮೂಲದಂತೆ ಜರಿದು । ದಿಕ್ಕು ವಿದಿಕ್ಕಿನಲ್ಲಿ ಪಲಾಯನರಾಗಿ । ತೈಕತ ಲಜ್ಜೆಯಲಿಂದ ಹತವಾ- ಶೇಷ್ಯ । ಸಾಕುಂಠಿತವಾದ ಬಲವೀರ್ಯನು ಮೇರು । ಶಿಖರವೆತ್ತುವೆನೆಂಬೊ ಸಹಸದಂದದಲಿ । ವಿಕಟಮತಿಯುಕ್ತ ದುರುಳರು ರೋಷದಲಿ ಕು । ಯುಕುತಿಗಳಿಂದಲಿ ಸಂಚರಿಸುತ ಬರಲು । ಲಕುಮಿಪತಿಯ ನೇಮ ತಿಳಿದ ಪ್ರೌಢ ನೀನು । ಈ ಖಂಡದಿ ಬಂದು ದ್ವಿಜನ್ಮವ ಧರಿಸಿ । ಪ್ರಖ್ಯಾತವಾದ ನ್ಯಾಯಾಮೃತವನ್ನು । ತರ್ಕತಾಂಡವ ಚಂದ್ರಿಕ ಪರಿಮಳ ಮೊದಲಾದ । ಮಿಕ್ಕಾದ ಗ್ರಂಥವೆಂತೆಂಬ ವಜ್ರದಲಿ ದು -। ರುಕುತಿಗಳೆಂಬಂಥ ಗಿರಿಗಳ ಛೇದಿಸಿ । ಈ ಕುಂಭಿಣಿ ಮಧ್ಯ ಪ್ರತಿ ಇಲ್ಲದೆ ಮೆರದೆ । ಭಕುತರಾಗ್ರೇಸರನೆ ಭೂವಿಬುಧರ ಪ್ರೀಯ್ಯಾ । ನಖಶಿಖಪರಿಪೂರ್ಣ ಗುರುವಿಜಯವಿಠ್ಠಲ ನಿಮ್ಮ । ಭಕುತಿಗೆ ವಶನಾಗಿ ಇತ್ತಿಹ ಕೀರ್ತಿಯನು ॥ ೨॥

ಒಂದಾಗಿ ನಿಂದೂ । ತಲೆವಾಗಿ ಉಸಿರಲು ಬಲುವಾಗಿ । ವಶಿಷ್ಠ ಕುಲದಲ್ಲಿ ಜನಿಸೀದ ಬಲದೈವವೇ। ನಳಿನಾಕ್ಷ ಮಹಸಿರಿ ವಿಜಯ ವಿಟ್ಠಲ ಬದರಿ। ನಿಲಯ ನಿನ್ನ ಲೀಲೆಗೆ ನೆಲೆಯಾವದೋ ಜೀಯಾ ॥ ೩॥

....ಅಟ್ಟತಾಳ....

ಪರಾಶರ ಉದರದಲ್ಲಿ ಒಂದು ಮೂರಾರು ಪುರಾಣ ವಿರಚಿಸಿ । ಅದರೊಳು। ಆರು ಸತ್ವ ರಾಜಸ ತರುವಾಯ । ಆರು ತಾಮಸ ಇನಿತಷ್ಟ ದಶವೆಂದು ಧಾರುಣಿ ತುಂಬಲು। ಕರುಣದಿಂದ ಸೂರಿ ಮುಕ್ತರಿಗೆ ನಿತ್ಯ ಸಂಸಾರಿಗೆ । ಘೋರತಮಸಿಗೀ ಮೂರು ಪರಿಮಾಡಿ । ಕಾರಣ ವೆನಿಸಿ ಪ್ರತಿಷ್ಠಿಸಿ ಕಲಿಯ ನಿ । ವಾರಣವನು ಮಾಡಿದ ಭಾರತಕರ್ತನೆ ಸುಜ । ನರಿಗೆ ತೋರಿದ ದ್ವಯಪಾಯನ ಮುನಿ । ಈರೇಳು ಭುವನದೊಳಾರು ನಿನಗೆ ಎಣೆ । ಕಾರುಣ್ಯನಿಧಿ ಪುಣ್ಯ ವಿಜಯವಿಟ್ಠಲ ಮುನಿ । ವರೇಣ್ಯ ಸುರರಗ್ರ ಗಣ್ಯ ನಿರ್ವಿಣ್ಯಾ ॥ ೪॥

....ಆದಿತಾಳ....

ತಮ ಸಂಬಂಧವ ಕಳದು ವಿಮಲ ಸುಜ್ಞಾನವನ್ನು । ಅಮರರಿಗೆ ಪಾಲಿಸಿದೆ ಅಮಿತ ತೇಜಸದಿಂದ । ಕಮಂಡಲು ದಂಡಕಾಷ್ಠ ಸಮೀಚಿನವಾದ ಕರ । ಕಮಲದಲ್ಲಿ ಧರಿಸಿದಮಲ ಕಾಷಾಯಾಂಬರಾ - । ಗಮದರ್ಥ ಶಿಷ್ಯರಿಗೆ ಪ್ರಮೇಯಗಳ ಪೇಳುತ । ಕ್ರಮನೂರಾರು ಮಾಡಿದ ಕುಮತಿಯ ಪರಿಹರಿಸಿ । ದಮಯತೆ ನಾಮ ಯತಿ ವಿಜಯವಿಠಲನನು । ಪರಮ ಚಿತ್ರ ರಾಜ್ಯವನು ಕ್ರಿಮಿಯಿಂದ ಆಳಿಸಿದೆ॥೫॥

....ಜತೆ....

ಬಾದರಾಯಣ ಸುಖಕಾರಣ ಭಕುತರಿಗೆ । ವೇದವ್ಯಾಸನೆ ವಿಷ್ಣು ವಿಜಯ ವಿಠಲವ್ಯಾಸ ॥೬॥

## ಶ್ರೀಸೀತಾರಾಮದೇವರು

### ರಾಗ - ಪೂರ್ವಿ, ಆದಿತಾಳ

೧) ನಮೋ ನಮೋ ರಾಮಾ ದೇವೋ । ತ್ತುಮಾಂಜನೇಯ ಪ್ರೇಮಾ । ಕ್ಷಮಾಪಶ್ರಿತ ಜನ ಸಮೂಹ ಕಲ್ಪ । ದ್ರುಮಾಪರಾಧ ಕ್ಷಮಾಪನಂ ಕುರು॥ಪ॥ ಅಜಾತ ನರರೂಪ ರಘುಜಾಂ। ಬಜಾಪ್ತ ಕುಲದೀಪ ॥ ಅಜೇಶ ಭುಜಗಾದ್ವಿಜೇಂದ್ರ ಮುಖಸುರ । ವ್ರಜಾಧಿಪತಿ ಹರೆ ಗಜೇಂದ್ರವರದ ॥ ೧॥ ಅಯೋಧ್ಯ ಪುರಿ ನಿಲಯಾ ನಿತ್ಯಾ - । ವಿಯೋಗಿನೀಪ್ರಿಯಾ ॥ ದಯಾಪ ಅಸ್ಮದ್ಭಯಾಪಹರ ಖುಷಿ । ಸುಯಾಗ ರಕ್ಷಕ ತ್ರಯೀಮಯಾತ್ಮಾ ॥ ೨॥ ಸನಾತನ ಸುಮಿತ್ರಾ ದಶಶ್ಯಂ - । ದನಾಖ್ಯ ನೃಪ ಪುತ್ರಾ॥ ಅನಾದಿ ಮಂಗಳ ಸುನಾಮ ಚರಿತಾ ॥ ಘನಾಶನಭಿನವ ಜನಾರ್ದನ ವಿಠ್ಠಲ ॥ ೩॥

### ೨) ರವಿವಾರದ ಶ್ರೀರಾಮಾಯಣಸಾರ ಸುಳಾದಿ ಅನ್ನಬೇಕು

....ಧ್ರುವತಾಳ....

ರಾಜ ರಾಜರಮಣಿ ರಾಜಶೇಖರ ವಿನುತಾ । ರಾಜ ತೇಜೋನಿಧಿ ರಾಜಾಧೀಶಾ । ರಾಜಹಂಸನಯನಾ ರಾಜಶೇಖರ ವಿ । ರಾಜಿತಕೀರ್ತಿ ಗಜರಾಜ ವರದಾ । ರಾಜವದನಾ

ರಿಪುರಾಟ ಮಸ್ತಕಶೂಲಾ । ರಾಜ ರಾಜೋತ್ತುಮ ರಾಜವಿನುತಾ । ರಾಜೀವದೊಳಗಿದ್ದ ರಾಜೀವನ ಪುಟ್ಟಿಸಿದ । ರಾಜ ಮಾರ್ತಾಂಡ ದ್ವಿಜರಾಜಗಮನಾ । ರಾಜ ರಾಜರು ನಿನ್ನ ರಾಜಿಸುವ ಚರಣಾ । ರಾಜೀವದಲ್ಲಿ ವಾಲಗ ಮಾಳ್ಪರೊ । ರಾಜಾ ರಾಜಾಗ್ರಣ್ಯ ರಾಜಾಭಿಷೇಕಕ್ಕೆ । ರಾಜಾ ನೀನಲ್ಲದೆ ರಾಜರುಂಟೇ । ರಾಜಗಂಭೀರ ಅಪರಾಜಿತನಾಮ ನಮ್ಮ । ವಿಜಯವಿಠ್ಠಲ ರಂಗರಾಜ। ರಾಜ ಸಮುದ್ರ ರಾಜ ಶಯನನೆ ॥ ೧॥.... ಇತ್ಯಾದಿ. (ಪುಟ ೯೧-೯೩ ರಲ್ಲಿದ್ದಂತೆ)

## ೩) ಗುರುವಾರ ಸುಳಾದಿ

### ....ಧ್ರುವತಾಳ....

ಘನ ದಯಾನಿಧಿಯಾದ ಗುರುರಾಘವೇಂದ್ರ ನಿಮ್ಮ । ವನಜ ಪಾದಯುಗಕೆ ನಮೋ ನಮೋ। ಜನುಮಾರಭ್ಯವಾಗಿ ಅಭಿನಮಿಸದಲಿಪ್ಪ । ಮನುಜನ ಅಪರಾಧ ವೆಣಿಸದಲೆ ॥ ವನಧಿಪೊಲುವ ಕರುಣಿ ಗೋವತ್ಸನ್ಯಾಯದಿಂದ । ನಿನಗೆ ನೀನೆ ಬಂದು ಸ್ವಪ್ನದಲ್ಲಿ । ಸನಕಾದಿ ಮುನಿಗಳ ಮನನಕ್ಕೆ ನಿಲುಕದ । ಇನಕೋಟಿಭಾಸ ವೇದೇಶ ಪ್ರಮೋದತೀರ್ಥ । ಮುನಿಗಳಿಂದಲಿ ಕೂಡಿ ಸಂದರುಶನವಿತ್ತು । ವಿನಯೋಕ್ತಿಗಳ ನುಡಿದ ಕೃತ್ಯದಿಂದ । ಆನಂದವಾಯಿತು ಅಘದೂರನಾದೆನಿಂದು। ದನುಜಾರಿ ಭಕತರ ಮಣಿಯೆ ಗುಣಿಯೇ । ಎಣೆಗಾಣೆ ನಿಮ್ಮ ಕರುಣಾಕಟಾಕ್ಷ ವೀಕ್ಷಣಕ್ಕೆ । ಅನುಪಮ ಮಹಿಮನೆ ಅನಿಳಪ್ರಿಯಾ । ಗುಣಗಣ ಪರಿಪೂರ್ಣ ಗುರುವಿಜಯವಿಠ್ಠಲ ನಿಮ್ಮ । ಘನವಾದ ಬಲದಿ ಎನಗೆ ಸುಳಿದ ನಿಂದು ॥ ೧॥

### ....ಮಟ್ಟತಾಳ....

ಸುಖತೀರ್ಥರ ಮತವೇದ್ಯಂಬಾ ಧ್ವಜವನ್ನು । ವಿಖನಸಾಂಡದ ಮಧ್ಯ ಪ್ರತಿಯಲ್ಲದೆ ಮೆರೆಯ । ಪಖರಹಿತವಾದ ಪಕ್ಷಿಯು ತನ್ನಯ । ಪಖಚಿನ್ಹಿಯ ಜನಿತ ಮಾರುತನಿಂದಲಿ ಧ್ವಜವ । ಪ್ರಕಟದಿ ಚರಿಸುವ ಯತ್ನದಿಂದಲಿ ದುರುಳ । ಸ ಕುಟಿಲರಾದ ಆ ವಿದ್ಯಾರಣ್ಯ । ಮುಖರೆಲ್ಲರು ಬರಲು ಅಮಸ್ಥಿತ ನಿಶ್ಚಯದಿ ಮಖಶತಜ ನೆನಿಪ ಜಯರಾಯಾಚಾರ್ಯ । ಪ್ರಕಟಿ ಗ್ರಂಥಗಳೆಂಬ ಪಾಶಗಳಿಂದಲ್ಲಿ । ಯುಕುತಿಯಿಂದಲಿ ಬಿಗಿದು ವೀರಧ್ವನಿಯ ಗೈಯೆ । ಉಕುತಿಗೆ ನಿಲ್ಲದಲೆ ಮೂಲದಂತೆ ಜರಿದು । ದಿಕ್ಕು ವಿದಿಕ್ಕಿನಲ್ಲಿ ಪಲಾಯನರಾಗಿ । ತ್ಯೆಕತ ಲಜ್ಜೆಯಲಿಂದ ಹತವಾ- ಶೇಷ್ಯ । ಸಾಕುಂಠಿತವಾದ ಬಲವೀರ್ಯನು ಮೇರು । ಶಿಖರವೆತ್ತುವೆನೆಂಬೊ ಸಹಸದಂದದಲಿ । ವಿಕಟಮತಿಯುಕ್ತ ದುರುಳರು ರೋಷದಲಿ ಕು । ಯುಕುತಿಗಳಿಂದಲಿ ಸಂಚರಿಸುತ ಬರಲು । ಲಕುಮಿಪತಿಯ ನೇಮ ತಿಳಿದ ಪ್ರೌಢ ನೀನು । ಈ ಖಂಡದಿ ಬಂದು ದ್ವಿಜನ್ಮವ ಧರಿಸಿ । ಪ್ರಖ್ಯಾತವಾದ ನ್ಯಾಯಾಮೃತವನ್ನು । ತರ್ಕತಾಂಡವ ಚಂದ್ರಿಕ ಪರಿಮಳ ಮೊದಲಾದ । ಮಿಕ್ಕಾದ ಗ್ರಂಥವೆಂತೆಂಬ ವಜ್ರದಲಿ ದು -। ರುಕುತಿಗಳೆಂಬಂಥ ಗಿರಿಗಳ ಛೇದಿಸಿ । ಈ ಕುಂಭಿಣಿ ಮಧ್ಯ ಪ್ರತಿ ಇಲ್ಲದೆ ಮೆರದೆ । ಭಕುತರಾಗ್ರೇಸರನೆ ಭೂವಿಬುಧರ ಪ್ರೀಯ್ಯಾ । ನಖಶಿಖಪರಿಪೂರ್ಣ ಗುರುವಿಜಯವಿಠ್ಠಲ ನಿಮ್ಮ । ಭಕುತಿಗೆ ವಶನಾಗಿ ಇತ್ತಿಹ ಕೀರ್ತಿಯನು ॥ ೨॥

....ತ್ರಿವಿಡಿತಾಳ....

ಕಲಿಯಯುಗದಲ್ಲಿ ಜನರು ಕಲಿಕಲ್ಮಷದಲಿಂದ । ಬಲವಂತವಾದ ತ್ರಿವಿಧ ತಾಪಗಳನ್ನು। ವಿಲಯಗೈಸುವ ಉಪಾಯವನರಿಯಾದೆ । ಮಲಯುಕ್ತವಾದ ಭವಶರಧಿಯಲ್ಲಿ। ನೆಲೆಯಾಗಿ ಮಗ್ನರಾಗಿ ನಿವರ್ತಿವತ್ಮಾರ್ವನ್ನು । ತಿಳಿಯದಲೆ ದುಃಖಬಡುವ ಸುಜನಾ । ವಳಿಗೆ ತಾರಕನಾಗಿ ಈ ನದಿಯ ತೀರದಲ್ಲಿ । ನಿಲಯವಲ್ಲದೆ ನಿನಗೆ ಅನ್ಯ ಕೃತ್ಯಗಳಿಲ್ಲಾ । ನಳಿನಸಂಭವ ಜನಕ ಗುರು ವಿಜಯವಿಠ್ಠಲರೇಯ ನಿನಗೆ । ಒಲಿದಿಪ್ಪಾಧಿಕಾಧಿಕವಾಗಿ ಬಿಡದೆ ॥ ೩॥

....ಅಟ್ಟತಾಳ....

ಸೂಚನೆ ಮಾಡಿದ ಸೊಬಗಿನ ತೆರದಂತೆ । ಯೋಚನೆ ಯಾತಕ್ಕೆನ್ನನು ಉದ್ಧರಿಪದಕ್ಕೆ । ಉಚ್ಚ ಜ್ಞಾನಾನಂದ ಬಲವೀರ್ಯನು ನೀನು । ನೀಚವಾದ ದೇಹಧಾರಣವನು ಮಾಡಿ ಅ । ನುಚಿತವಾಗಿದ್ದ ಕಾಮ ಕ್ರೋಧಂಗಳು । ಆಚರಣೆಯ ಮಾಳ್ಪ ಅಧಮನಾದವ ನಾನು । ಸೂಚರಿತ್ರನಾಗಿ ಶುಚಿಯಾದ ಮನುಜಂಗೆ । ನೀಚ ಅಶುಚಿಯಾದ ನರನು ಅಧಿಕನೆಂತೊ । ಭೂಚಕ್ರದಲಿ ಅಪರ ದೇಹ ತೆತ್ತವನಾಗಿ । ಆಚರಿಸಿದೆ ಬಲು ಹೀನ ಕೃತ್ಯಂಗಳು । ಸೂಚನೆ ಮಾಡಿದ್ದು ಸೊಬಗು ನೋಡದಲೆ। ಯೋಚನೆ ಮಾಡಿದ್ದು ಸಾರ್ಥಕ ಮಾಡಿ ವಿ । ಮೋಚನೆ ಮಾಡುವದು ಭವಬಂಧದಲಿಂದ । ಶ್ರೀಚಕ್ರಪಾಣಿ ಗುರು ವಿಜಯವಿಠ್ಠಲನ್ನ । ಯೋಚನೆ ಮಾಡುವ ಯೋಗವ ಬೋಧಿಸು ॥ ೪॥

....ಆದಿತಾಳ....

ಪರಿಶುದ್ಧವಾದ ನಿಮ್ಮ ಭಕುತಿಗೆ ವಶನಾಗಿ । ಹರಿ ತನ್ನ ಪರಿವಾರ ಸಮೇತನಾಗಿ ನಿಂದು । ಮೊರೆ ಹೊಕ್ಕ ಜನರಿಗೆ ಪರಿಪೂರ್ಣ ಸುಖವಿತ್ತು । ಪರಿ ಪರಿ ಕೀರ್ತಿಗಳು ತಂದೀವ ನಿಮಗಿಂದು । ಪರಮಾರ್ತನಾಗಿ ತವ ಪಾದ ಸಾರಿದೆನು। ದೂರ ನೋಡದಲೆ ಕರುಣ ಮಾಡಿ ವೇಗ । ಸುರರಿತ್ತ ಶಾಪದಿಂದ ಕಡಿಗೆ ಮಾಡಿ ಎನ್ನ ಹೃ । ತ್ಸರಸಿಜದಲ್ಲಿ ಹರಿ ಪೊಳೆವಂತೆ ಮಾಡುವದು । ಪರಮ ಕೃಪಾನಿಧೆ ಗುರು ವಿಜಯವಿಠ್ಠಲನ್ನ । ಶರಣರ ಅಭಿಮಾನಿ ಔದಾರ್ಯ ಗುಣಮಣಿ ॥ ೫॥

....ಜತೆ....

ಗುರುಕುಲತಿಲಕನೆ ಗುರುರಾಘವೇಂದ್ರಾಖ್ಯ । ಸುರಕಲ್ಪತರು ಗುರು ವಿಜಯ ವಿಠ್ಠಲಪ್ರೀಯ್ಯಾ ॥ ೬॥

**ಗುರುವಾರ :** ಸಂಜೆ ಶ್ರೀರಾಯರ ೫ ಹಾಡುಗಳನ್ನು ಹೇಳಬೇಕು ಮತ್ತು ರವಿವಾರ ಅಂದಿರುವ ಸುದಾಮ ಚರಿತ್ರೆ ಹಾಡು ಅನ್ನಬೇಕು.

ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ಪಾಹಿ ಮಾಂ ।
ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ರಕ್ಷ ಮಾಂ ॥

## ೬) ಶುಕ್ರವಾರ

### ( ಶ್ರೀಕೃಷ್ಣ, ಶ್ರೀಲಕ್ಷ್ಮೀದೇವಿ )

**ಅ.ಹಾಡುಗಳು**

**ರಾಗ - ಭೂಪಾಳಿ** **ತಾಳ - ಝಂಪೆ**

೧) ಭಕುತಜನ ಪಾಲಕ ಭಕ್ತಿಸುಖದಾಯಕ । ಮುಕ್ತೀಶ ದೀನಬಂಧೋ ಕೃಷ್ಣ ॥ ಪ॥ ಯುಕುತಿಯಲಿ ನಿನ್ನಂಥ ದೇವರನು ನಾ ಕಾಣೆ । ಸತ್ಯವತಿಸುತನೆ ಕಾಯೊ ಕೃಷ್ಣ ॥ ಅ.ಪ.॥ ಆನಂದತೀರ್ಥ ಮುನಿಗಳ ಧ್ಯಾನಿಪರ ಸಂಗ । ದಾನಂದದಲಿ ನಿಲ್ಲಿಸೋ ಕೃಷ್ಣ॥ ದೀನ ಜನ ಮಂದಾರ ನೀನೆಂದು ನಂಬಿದೆನೊ। ಸಾನು ರಾಗದಲಿ ಕಾಯೊ ಕೃಷ್ಣ ॥ ೧ ॥ ಕೆಟ್ಟ ಜನರ ಸಂಗ ಇಷ್ಟು ದಿನವು ಮಾಡಿ। ಭ್ರಷ್ಟನಾಗಿ ಪೋದೆನೊ ಕೃಷ್ಣ ॥ ಬೆಟ್ಟದೊಡೆಯನೆ ನಿನ್ನ ಮುಟ್ಟಿ ಭಜಿಸುವ ಭಾಗ್ಯ। ಇಷ್ಟ ಎನಗೆ ಪಾಲಿಸೋ ಕೃಷ್ಣ ॥ ೨॥ ಅಜಜನಕ ಗಜವರದ ಭುಜಗಶಯನನೆ ನಿನ್ನ। ಭಜಿಪರ ಸೇವೆ ಕೊಡಿಸೊ ಕೃಷ್ಣ ॥ ನಿಜವಾಗಿ ನಿನ್ಹೊರತು ಸಲಹುವರ ನಾ ಕಾಣೆ। ವಿಜಯ ವಿಠ್ಠಲದೇವನೇ ಕೃಷ್ಣ ॥ ೩॥

**ರಾಗ - ಆನಂದಭೈರವಿ. ಏಕತಾಳ**

೨) ರಂಗ ಕೊಳಲನೂದಲಾಗಿ । ರಂಗಯ್ಯ ಕೊಳಲನೂದಲು ॥ ಪ॥) ಮಂಗಳಮಯವಾಯಿತು ಧರೆ ಜ- । ನಂಗಳು ಜೀವನ ಚೇತನ ಮರೆದು । ರಂಗಧ್ಯಾನ ಪರರಾದರು ॥ ಅ. ಪ.॥ ಬಾಡಿದ ಬಳ್ಳಿ ಮರಾಗೊನೆಯೊಡೆದುವು। ತೀಡುವ ಮಂದ - ಮಾರುತ ಕೂಡ ತೂ ॥ ಗಾಡುವ ಮನ ಫಲ ಗೊಂಚಲದಿ । ಪಾಡಲೊಲ್ಲವಳಿಕುಲಗಳು॥ ಹೇಡಿಗೊಂಡವು ಜಾಣಕ್ಕಿ ಗಿಳಿಯು ಮಾ - । ತಾಡದೆ ಕಳೆಗುಂದಿದವು ಕೋಕಿಲ । ಓಡಾಟ ವೈರಾಟ ಜರೆದು ಖಗ ಮೃಗ । ಗಾಢ ನಿದ್ರೆಗೆ ವಶವಾದವು ॥ ೧॥ ಕೆಚ್ಚಲ ಬಿಗಿದ ತೊರೆದ ಮೊಲೆಯ । ವತ್ಸವಡಲಾಸೆ ಜರೆದೆಳೆ ಹುಲ್ಲು । ಕಚ್ಚಿ ಅಲ್ಲಲ್ಲಿಗೆ ನಿಂತವು ತಲೆಯ। ಪುಚ್ಛವ ನೆಗಹಿ ನೀಂಟಿಸಿ॥ ಅಚ್ಯುತನ ಕೃತಿ ನೋಡಲು ಸುರರಿ - । ಗಚ್ಚರವಾಯಿತು ಆವು ಕಂಡಾನಂದ। ಮೆಚ್ಚಿ ಮುಕುಂದನ ಲೀಲಾವಿನೋದಕೆ । ಅಚ್ಚ ಕುಸುಮ ಸುರಿದರು ॥ ೨॥ ಕೆಳಗಿನೋದಕ ಉಕ್ಕೇರಿ ಬಂದವು । ತುಳುಕಿ ಚಲ್ಲಾಡಿ ನಿಂತಳು ಯಮುನೆ । ಮೇಲೆ ಮೋಡೊಡ್ಡಿ ಮೇಘಾಳಿ ಭೋರಿಟ್ಟವು । ಕಲ್ಲು ಕರಗಿ ನೀರಾದವು ॥ ನಳಿನ ಚಂಪಕನಾಗ ಪುನ್ನಾಗ ಪಾ- । ಟಲ ಶಾವಂತಿಗೆ ಕುಂದ ಬಕುಲವು । ಮಾಲತಿ ಜಾಜಿಯು ಪರಿಮಳಂಗೂಡಿ । ನೀಲಾಂಗನಂಘ್ರಿಗೆ ಎರಗಿದುವು॥೩॥ ಮುದ್ದು ಮೋಹನ್ನನ ಮಂಜುಳ ಸಂಗೀತ । ಸದ್ದನಾಲಿಸಿ ಗೋಪಾಂಗನೆರೆಲ್ಲರು। ಬುದ್ಧಿ ಸೂರಾಡಿದರಂಗಜಶರಕೆ-। ಬಿದ್ದು ಪರವಶರಾದರು ॥ ಸಿದ್ಧ ಮುನಿಜನರಿದ್ದ ಸಮಾಧಿಯೊ- । ಳೆದ್ದೆದ್ದು ಕುಣಿದು ಎದೆ ತಾವರೆ । ಗದ್ದಿಗಿ ಅರಸನೊಲಿಸಿಕೊಂಡರು । ಗೆದ್ದರು ಭವ ಸಮುದ್ರವ॥೪॥ ಶ್ರೀಮನೋಹರ ಮೂರುತಿ ಗೋಪಾಲನು । ಆ ಮಧು ಕುಂಜ ವನಾದಿ ತ್ರಿಭಂಗಿಸಿ । ಹೇಮಾಂಬರುಟ್ಟು ಗೀರ್ಗಂಧ ಕಸ್ತೂರಿಯ । ನಾಮ ಕುಂಡಲದ ಬೆಳಕಿನಲಿ ॥

ದಾಮ ವನಮಾಲಿ ರತನಾಭರಣ । ಶ್ರೀಪ್ರಸನ್ನವೆಂಕಟ ಕೃಷ್ಣನ। ನಾಮಕ್ರಿ ಗುಂಡಕ್ರಿ ಮೇಲು ರಾಗವ ಮಾಡಿ । ಸಾಮಗಾನದಿ ನವೋ ಎಂದರು ॥ ೫॥

೩) ಭಾಗ್ಯದ ಲಕ್ಷುಮಿ ಬಾರಮ್ಮಾ ನಮ್ಮಮ್ಮಾ ನೀ ಸೌಭಾಗ್ಯದ ಲಕ್ಷುಮಿ ಬಾರಮ್ಮಾ||ಪ|| ಗೆಜ್ಜೆಯ ಕಾಲ್ಗಳ ಧ್ವನಿಯ ತೋರುತ | ಹೆಜ್ಜೆಯ ಮೇಲೊಂದ್ಹೆಜ್ಜೆಯ ನಿಕ್ಕುತ || ಸಜ್ಜನ ಸಾಧುಪೂಜೆಯ ವೇಳೆಗೆ | ಮಜ್ಜಿಗೆಯೊಳಗಿನ ಬೆಣ್ಣೆಯಂತೆ ||೧|| ಕನಕವೃಷ್ಟಿಯ ತ್ವರದಿಂ ಕರೆಯುತ | ಮನಕೆ ಮನವ ಸಿದ್ಧಿಯ ತೋರುತ || ದಿನಕರ ಕೋಟಿ ತೇಜದಿ ಹೊಳೆಯುವ | ಜನಕರಾಜನ ಕುಮಾರಿ ಬೇಗ ||೨|| ಅತ್ತಿತ್ತಗಲದೆ ಭಕ್ತರ ಮನೆಯೊಳ್ | ನಿತ್ಯ ಮಹೋತ್ಸವ ನಿತ್ಯ ಸುಮಂಗಳ || ಸತ್ಯವ ತೋರುತ ಸಜ್ಜನರಗಲದೆ | ಚಿತ್ತದಿ ಹೊಳೆಯುವ ಪುತ್ಥಳಿ ಗೊಂಬೆ ||೩|| ಕುಂಕುಮಾಂಕಿತ ಪಂಕಜನಾಭನ | ವೆಂಕಟರಮಣನ ಮೋಹದ ರಾಣಿ || ಶಂಕೆಯಿಲ್ಲದೆ ಭಕ್ತರ ಮನೆಯೊಳು | ಕುಂಕುಮಪೂಜೆಯಗೊಳ್ಳುತ ಬಾರೆ ||೪|| ಸಕ್ಕರೆ ತುಪ್ಪ ಕಾಲುವೆ ಹರಿಸಿ | ಶುಕ್ರವಾರದ ಪೂಜೆಯ ವೇಳೆಗೆ || ಅಕ್ಕರೆಯುಳ್ಳ ಅಳಗಿರಿ ರಂಗನ | ಚೊಕ್ಕ ಪುರಂದರ ವಿಠಲನ ರಾಣಿ ||೫||

೪) ಜಯ ಕೊಲ್ಹಾಪುರ ನಿಲಯೆ | ಭಜದಿಷ್ಟೇತರ ವಿಜಯೇ || ತವ ಪಾದೌ ಹೃದಿಕಲಯೇ | ರತ್ನರಚಿತವಲಯೆ ||ಪ|| ಜಯ ಜಯ ಸಾಗರಜಾತೇ | ಕುರು ಕರುಣಾಂ ಮಯಿ ಭೀತೇ || ಜಗದಂಬಾಭಿಧಯಾ ತೇ | ಜೀವತಿ ತವ ಪೋತೇ ||೧|| ಜಯ ಜಯ ಸಾಗರಸದನಾ| ಜಯ ಕಾಂತ್ಯಾ ಜಿತಮದನಾ || ಜಯ ದೃಷ್ಟಾಂತಕಕದನಾ | ಕುಂದಮುಕುಲರದನಾ ||೨|| ಸುರರಮಣೀನುತರಚರಣೇ | ಸುಮನಃಸಂಕಟಹರಣೇ || ಸುಸ್ವರರಂಜಿತ ವೀಣೇ | ಸುಂದರನಿಜಕಿರಣೆ ||೩|| ಭಜದಿಂದೀವರಸೋಮಾ | ಭವ ಮುಖ್ಯಾಮರಕಾಮಾ || ಭಯಮೂಲಾಳಿವಿರಾಮಾ | ಭಂಜಿತಮುನಿಭೀಮಾ ||೪|| ಕುಂಕುಮರಂಜಿತಫಾಲೇ | ಕುಂಜರಬಾಂಧವಲೋಲೆ || ಕಲಧೌತಾಮಲಚೈಲೇ | ಕೃಂತಕುಜನಜಾಲೇ ||೫|| ಧೃತಕರುಣಾರಸಪೂರೇ | ಧನದಾನೋತ್ಸವಧೀರೇ || ಧ್ವನಿಲವನಿಂದಿತಕೀರೇ | ಧೀರೆ ದನುಜಧಾರೇ ||೬|| ಸುರಹೃತ್ಪಂಜರಕೀರಾ | ಸುಮಗೇಹಾರ್ಪಿತ ಹಾರಾ || ಸುಂದರಕುಂಜ ವಿಹಾರಾ | ಸುರಪರಿವಾರಾ ||೭|| ವರಕಬರೀಧೃತಕುಸುಮೇ | ವರಕನಕಾಧಿಕ ಸುಷುಮೆ || ವನನಿಲಯಾದಯಭೀಮೆ | ವದನವಿಜಿತಸೋಮೇ ||೮|| ಮದಕಲಭಾಲಸಗಮನೇ | ಮಧು ಮಥನಾಲಸನಯನೇ | ಮೃದುಲೋಲಾಲಕರಚನೇ | ಮಧುರಸರಸಗಾನೇ ||೯|| ವ್ಯಾಘ್ರಪುರೀವರನಿಲಯೇ | ವ್ಯಾಸಪದಾರ್ಪಿತ ಹೃದಯೆ || ಕುರು ಕರುಣಾಂ ಮಯಿ ಸದಯೇ | ವಿವಿಧ ನಿಗಮಗೇಯೇ ||೧೦||

**ಆ. ಸುಳಾದಿಗಳು**

### ೧) ಶ್ರೀಕೃಷ್ಣ ಸುಳಾದಿ

**....ಧ್ರುವತಾಳ....**

ಅಣು ಮೂರುತಿ ಪರಮಾಣು ಮೂರುತಿ ಇದೆ । ಘನ್ನ ಮೂರುತಿ ಮಹಘನವಾದ ಮೂರುತಿ। ತೃಣಕಾಷ್ಠ ಮೊದಲಾದ ಪರಿಪೂರ್ಣ ಮೂರುತಿ । ಗುಣ ತ್ರಯಾತ್ಮಕವಾದ ಗುಣವಂತ ಮೂರುತಿ । ಮನುಜೋತ್ತಮರ ವಿಡಿದ ವನುಜಭವಾದ್ಯರ । ಮನಕೆ ಪೊಳೆವ

ಮೂರುತಿ ಚಿನುಮಯ ಮೂರುತಿ । ದನುಜ ಕುಲಕೆ ದಲ್ಲಣವಾದ ಮೂರುತಿ । ರಣದೊಳಗರ್ಜುನನ್ನ ತನು ಉಳುಹಿದಾ ಮೂರುತಿ । ಕ್ಷಣವಗಲದೇವನ ಕೂಡಲಪ್ಪದಿದೆ। ಅನಿರುದ್ಧ ಮೂರುತಿ ಅಚ್ಯುತ ಮೂರುತಿ । ಜನನಿ ಗೋಪಿಯ ಮುಂದೆ ಮೊಸರು ಕಟೆವಾಗ। ಕುಣಿದ ಮೂರುತಿ ಅಪ್ರಮೇಯ ಮೂರುತಿ ಇದೆ । ಪ್ರಣವ ಮೂರುತಿ ಮಧ್ವಮುನಿಗೊಲಿದ ಉಡು। ಪಿನವಾಸ ಸಿರಿಕೃಷ್ಣ । ಎನ್ನ ಮೂರುತಿ ವಿಜಯವಿಠ್ಠಲ ನಿರುತಿಪ್ಪ ॥ ೧॥

....ಮಟ್ಟತಾಳ....

ದ್ವಾರವತಿ ಎತ್ತ ಪಡುವಲ ದಿಕ್ಕಿನ । ವಾರಿನಿಧಿ ಎತ್ತ ಗೋಪಿ ಚಂದನ ವೆತ್ತ । ಮಾರಾಟದ ಹಡಗ ಪೋಗಿ ಬರುವದೆತ್ತ । ಭಾರತೀ ಪತಿಯಾದ ಮಧ್ವಮುನಿ ಎತ್ತ । ಈ ರೀತಿ ಸಂಗತಿಯಾ ಆವಲ್ಲೀ ಕಲ್ಪೀಸಿ । ತೋರಿದಿಯೋ ದೇವ ಆರು ಬ । ಲ್ಲರು ನಿನ್ನ ಮಹಾ ವಿಚಿತ್ರವು । ಸಾರಲಾಪೆನೆ ನಿತ್ಯ ಉಡುಪಿನ ಸಿರಿಕೃಷ್ಣ । ಜಾರ ಚೋರ ನಮ್ಮ ವಿಜಯ ವಿಠ್ಠಲರೇಯಾ । ದ್ವಾರಾವತಿ ಎತ್ತ ಪಡುವಲ ದಿಕ್ಕಿನ ॥ ೨॥

....ತ್ರಿವಿಡಿತಾಳ....

ಅಂದು ದೇವಕಿದೇವಿ ದ್ವಾರಕಪುರದಲ್ಲಿ । ಒಂದು ದಿವಸ ನಿನ್ನ ಮಾಯಾ ಮುಸುಗೇ। ಕಂದ ನೀನಾಗಿ ಗೋಕುಲದಲ್ಲಿ ಗೋಪಿಯಾ । ಮುಂದೆ ಬಾಲಕನಾಗಿ ತೋರಿದಾಟಾ । ಒಂದಾದರೂ ನೋಡಿ ದಣಿಯಾಲಿಲ್ಲವು ಮನಸು । ಎಂದೆನೆ ಜನನಿಯಾ ಮಾತು ಕೇಳಿ । ನಂದನನಾಗಿ ತೋರುವನೆಂದು ನೆನೆದು ಗೋ । ಎಂದನು ಗೋಪಳ್ಳಿಯಲ್ಲಿ ನಲಿದದ್ದು । ಒಂದೊಂದು ತೋರುತ್ತ ಬರಲಾದಾ ರೊಳಗಿದೆ । ಚಂದವಾದಾ ರೂಪಾ ಮನಕೆ ಪೊಳೆಯೇ । ನಿಂದಿರ ಪೇಳಿ ಮಗನಾ ಮುದ್ದಾಡಿ ನೋಡಿ। ತಂದೆ ಈ ರೂಪದಲಿ ಭೂಮಿಯೊಳಗೆ । ಕುಂದಾದರ್ಚನೆ ಗೊಂಡು ಕೀರ್ತಿಮೆರೆವದೆಂದು। ಮಂದಹಾಸದಲ್ಲಿ ಪೇಳಲು ಕೈಕೊಂಡು । ಒಂದು ಕೈಯಲ್ಲಿ ಕಡಗೋಲು ಪಿಡಿದು ಮ । ತ್ತೊಂದು ಕೈಲಿ ನೇಣು ಧರಿಸಿ ಬಾಲಾ । ನಂದಾದಿ ಇರಲಿತ್ತ ಭೈಷ್ಮಿ ವಿಶ್ವಕರ್ಮಾ । ನಿಂದ ಅದರಂತೆ ರಚಿಸಾ ಪೇಳಿ । ನಂದಾದಿಂದತಿ ತನ್ನ ಮೂಗುತಿಯನು ಇಟ್ಟು । ಸುಂದರ ವಿಗ್ರಹದೊಡನಾಡುತ। ಇಂದಿರೆ ಇರೆ ಇತ್ತ ಕಲಿಯುಗ ಬರೆ ಗೋಪಿ । ಚಂದನದೊಳು ನಿನ್ನ ಅಡಗಿಸಲು । ಸಿಂಧುವಿನೊಳಗೊಬ್ಬ ಹಡಗದವಶಕೆ । ತಂದಿರೆ ತವಕದಿಂದಲಿ ಅಲ್ಲಿಂದ । ನಂದಾ ತೀರ್ಥರಿಗೊಲಿದ ಉಡಪಿನ ಸಿರಿಕೃಷ್ಣ । ಕಂದರ್ಪ ಪಿತ ನಮ್ಮ ವಿಜಯ ವಿಠಲರೇಯಾ ॥ ೩॥

....ಅಟ್ಟತಾಳ....

ಈ ಉಡುಪಿನ ಯಾತ್ರಿ ಶ್ರೀವೈಕುಂಠದಯಾತ್ರಿ ಆವಾದ ಮನುಜನು ಸೇವಿ ಸಾಲು ದುರಿ - । ತವನ ದಾವನ ಪಾವನ ಮಾಡುವ । ಯಾವತ್ತೂ ಜನುಮದ ನೋವು ಕಳದು ತನ್ನ। ಸೇವಿಯೊಳಿಟ್ಟು ಅಪವರ್ಗ ಕೊಡುವಾನು । ದೇವಕಿ ನಂದನ ಕೃಷ್ಣ ಮೂರುತಿ ಕರು । ಣಾವಾರಿಧಿ ನಮ್ಮ ವಿಜಯವಿಠಲರೇಯಾ । ಜೀವೋತ್ತುಮಾ ಮಧ್ವಮುನಿ ಮನ ದೈವವೇ ॥ ೪॥

....ಆದಿತಾಳ....

ಇದೆ ಜನುಮಾ ಸಾರ್ಥಕಾ ಇದೆ ಸರ್ವಕಾರ್ಯಸಿದ್ಧ । ಇದೆ ಕುಲಕೋಟಿ ಉದ್ಧಾರ ಇದಕ್ಕಿಂತಧಿಕವಿಲ್ಲ । ಇದಕೆ ಸಮಾನವಿಲ್ಲ ಇದೆ ಮುಖ್ಯಯಾತ್ರಿ ಎನ್ನಿ । ಇದೆ ಇದೆ ಇದೆ ಸಿದ್ಧ ಯದುಕುಲೇಶನ ದಿವ್ಯ । ಪದಗಳ ಒಮ್ಮೆ ನೋಡೆ ಪದವಿಗೆ ಸೋಪಾನ । ಮುದದಿಂದ ಸ್ಥಿರವಹುದು ಸದಮಲಾನಂದ ಮುನಿಗೊ । ಲಿದ ಮುದ್ದು ಕೃಷ್ಣನು । ಹೃದಯರ ಮನೋವಾಸ ವಿಜಯ ವಿಠ್ಠಲ ಪಡುವಲ । ಉದಧಿ ತೀರದಲಿಪ್ಪ ಇದೆ ದ್ವಾರಕಿ ಎಂದು ॥ ೫॥

....ಜತೆ....

ಮಧ್ವಸರೋವರ ಸ್ನಾನ ಮುದ್ದು ಕೃಷ್ಣಧ್ಯಾನ । ಶುದ್ಧನಾಗಿ ಮಾಡೆ ವಿಜಯವಿಠ್ಠಲ ಕಾವಾ॥೬॥

## ೨) ಶುಕ್ರವಾರ ಸುಳಾದಿ (ಶ್ರೀಲಕ್ಷ್ಮೀ ಸುಳಾದಿ)

....ಧ್ರುವತಾಳ....

ಇಂದುಮುಖಿಯೆ ನಿನ್ನ ಸಂದರುಶನದಿಂದಾ । ನಂದ ವಾಯಿತು ಅರವಿಂದ ನಯನೆ । ಅಂದಿಗೆ ಗೆಜ್ಜೆ ಮೊದಲಾದಾಭರಣದಿಂದ । ಸುಂದರವಾದ ರೂಪದಿಂದ ಬಂದು। ಮಂದಹಾಸದಿಂದ ಮಾತನಾಡಿದರಿಂದ । ಬೆಂದು ಪೋದವೆನ್ನ ತ್ರಿವಿಧ ತಾಪ । ಇಂದಿರೆ ಈ ರೂಪದಿಂದ ತೋರಿದಳು । ಬಂಧು ನೆನಿಪ ಲೋಕ ಗುರು ಸತಿಯೊ । ಕಂದು ಕಂಧರನಾದ ದೇವನ್ನ ರಾಣಿಯೊ । ಇಂದ್ರಾಣಿ ಮೊದಲಾದ ಜನರೋರ್ವಳೊ । ಮಂದಾಕಿನಿಯೋ ಇದರೊಳೊಂದರಿಯೇ ಕರುಣ । ಸಿಂಧುವೆ ನಿನ್ನ ಪದಕೆ ನಮೋ ನಮೋ । ಮಂದರ್ಗೆ ಯೋಗ್ಯವಾದ ಮಾನುಷ್ಯ ದೇಹವನ್ನು। ಪೊಂದಿಪ್ಪ ಕಾರಣದಿಂದ ನಿನ್ನ । ಅಂದವಾದ ರೂಪ ಕ್ರಿಯೆಗಳನ್ನು ತಿಳಿದು । ವಂದಿಸಿ ವರಗಳು ಬೇಡಲಿಲ್ಲ । ಇಂದಿರೆ ರಮಣನ ಬಂಧಕ ಶಕುತಿಯು। ಮಂದನಾದವ ನಾನು ಮೀರುವೆನೇ । ಕಂದನ ಅಪರಾಧವೆಣಿಸದಲೆ ನೀನು । ಅಂದ ವಚನವನ್ನು ಸತ್ಯ ಮಾಡಿ । ಬಂಧು ನೆನಿಸಿಕೊಂಬ ಗುರು ವಿಜಯವಿಠ್ಠಲನ್ನ। ಎಂದೆಂದಗಲದಿಪ್ಪ ವರವ ನೀಡು ॥೧॥

....ಮಟ್ಟತಾಳ....

ಸಾನುರಾಗದಿ ಎನ್ನ ಸಾಮೀಪ್ಯವ ನೈದಿ । ಪಾಣಿ ದ್ವಯದಲಿ ಮೇಣು ಸ್ಪರಿಶ ಮಾಡಿ। ಏನು ಬೇಡುವೆ ಬೇಡು ನೀಡುವೆನೆಂತೆಂದು । ವಾಣೆಯಿಂದಲಿ ನುಡಿದು ಅನುಗ್ರಹಿಸಿದುದಕ್ಕೆ । ಮಾನುಷ್ಯನ್ನ ಜನಿತ ಅಜ್ಞಾನದಿಂದ । ಜ್ಞಾನನಿಧಿಯೆ ನಿನ್ನ ಪದದ್ವಂದ್ವಕ್ಕೆ ನಮಿಸಿ । ಮಾನಸಿನಾಪೇಕ್ಷೆ ವಿವರಿಸಿ ಬಿನ್ನೈಸಿ । ಪೂರ್ಣ ಮಾಡು ಎಂದು ವರಗಳ ಬೇಡದಲೆ । ಹೀನ ಮನೋಭಾವ ಮಾಡಿದೆ ಹೇ ಜನನಿ । ಧೇನುವಿಗೆ ವತ್ಸ ಮಾಡಿದ ಅಪಚಾರ । ತಾನೆಣಿಸಿ ಅದರ ಸಾಕದೆ ಬಿಡುವದೆ । ಮಾನನಿಧಿಯೆ ಎನ್ನ ಅನುಚಿತವೆಣಿಸದಲೆ । ಏನು ಬೇಡಿದ ವರವ ನೀಡುವೆ ನೆಂತೆಂದ । ವಾಣಿ ಸತ್ಯ ಮಾಡು ಅವ್ಯವಧಾನದಲಿ । ಜ್ಞಾನಪೂರ್ಣ ಗುರು ವಿಜಯ ವಿಟ್ಠಲರೇಯನ । ಪ್ರೇರಣೆ ಇಂದಲ್ಲಿ ಪ್ರಾರ್ಥಿಸುವೆನು ನಿನ್ನ ॥ ೨॥

....ತ್ರಿವಿಡಿತಾಳ....

ನಿನ್ನನುಗ್ರಹದಿಂದ ಧನ ಮೊದಲಾದ ವಸ್ತು । ತನ್ನಿಂದ ತಾನೆ ಬಂದು ಒದಗುತಿರೆ। ಇನ್ನಿದಕ್ಕೆ ನಾನು ನಿನ್ನ ಪ್ರಾರ್ಥಿಪೊದಿಲ್ಲ । ಬಿನ್ನಪವನೊ ವುಂಟು ಗ್ರಹಿಸಬೇಕು । ಅನಂತ ಜನುಮದ ಪುಣ್ಯ ಪ್ರಭಾವದಿಂದ । ಘನ್ನ ಮಹಿಮನಾದ ಪುರುಷನೋರ್ವ । ಕ್ಷಣವಗಲದಿಪ್ಪ ಆಪ್ತನಾದವ ನೆನಿಸಿ । ಎನ್ನ ವಿರಹಿತವಾದ ಸ್ಥಾನವನ್ನು । ಕಂಣಿಲಿ ನೋಡಲಾರೆನೆಂದು ನುಡಿದವನ್ನ। ಎನ್ನ ದುರ್ಭಗದಿಂದ ಅಗಲಿ ನಾನಾ । ಬನ್ನ ಬಡುತಲಿಪ್ಪೆ ನಿಮಿಷ ಒಂದ್ಯುಗವಾಗಿ। ಮನ್ನಿಸಿ ಮನಕ ತಂದು ಪೂರ್ವದಂತೆ । ಮನ್ಮನದಲಿ ತೋರೊ ವ್ಯವಧಾನ ಮಾಡದಲೆ । ಇನ್ನಿದೆ ಬೇಡುವೆನೇ ಜನ್ನನೀಯೇ। ನಿನ್ನಿಂದ ನುಡಿದಂಥ ವಾಕ್ಯ ಸಫಲ ಮಾಡಿ । ಮನ್ಮನೋ-ರಥವನು ಪೂರ್ಣಮಾಡು ಆ । ಪನ್ನರ ರಕ್ಷಿಸುವ ಬಿರಿದು ನಿನಗೆ ಉಂಟು । ಸನ್ನುತಿಸಿ ಬೇಡಿಕೊಂಬೆ ಗುಣನಿಧಿಯೇ। ಪನ್ನಂಗತಲ್ಪ ಗುರು ವಿಜಯವಿಠ್ಠಲರೇಯ । ನಿನ್ನ ವಾಕ್ಯವ ವಹಿಪ ಸರ್ವಕಾಲ ॥ ೩॥

....ಅಟ್ಟತಾಳ....

ಕರಣಗಳಲಿ ಹರಿ ವ್ಯಾಪಕ ನೆಂತೆಂಬ । ಪರಿಯನು ತಿಳಿದಿಪ್ಪ ನರ ನುಡಿದ ವಾಕ್ಯ । ಪರಮೇಷ್ಠಿ ವೊದಲಾದ ಸುರರು ಸಹಿತನಾದ । ಸಿರಿಪತಿ ವಹಿಸುವನೆಂದು ಪೇಳುತಲಿರೆ । ಕರಣ ಮಾನಿಗಳಾದ ಸುರರಿತ್ತ ವರಗಳ । ಹರಿ ಸತ್ಯ ಮಾಡುವನೆಂಬ ದಚ್ಚರವೇನೊ । ಶರಣನ್ನ ಮನೋರಥ ಪೂರ್ಣಮಾಡುವದಕ್ಕೆ । ಕೊರತೆ ನಿನಗಾವದು ಕೋಮಲಾಂಗಿಯೆ ನಿನ್ನ । ಚರಣ ದ್ವಂದ್ವಕೆ ನಮಿಸಿ ಶರಗೊಡ್ಡಿ ಬೇಡುವೆ । ತ್ವರಿತದಿಂದಲಿ ಈ ವರವನ್ನೆ ಪಾಲಿಸು । ಸುರಪಕ್ಷಪಾಲ ಗುರು ವಿಜಯವಿಠ್ಠಲ ನಿಮ್ಮ । ಕರವಶವಾಗಿಪ್ಪ ಆವಾವ ಕಾಲದಲಿ ॥ ೪॥

....ಆದಿತಾಳ....

ಆವಾವ ಜನ್ಮದಲ್ಲಿ ಅರ್ಚಿಸಿದೇನೋ ನಿನ್ನ । ಆವಾವ ಕಾಲದಲ್ಲಿ ಅನುಗ್ರಹಿಸಿದ ವರವು । ಈ ವಿದ್ಯಮಾನವಾದ ಜನುಮದಲ್ಲೊಮ್ಮೆಗನ್ನ । ದೇವಿಯೆ ನಿನ್ನ ಪಾದ ಸಾರಿದವನಲ್ಲ। ಗೋವತ್ಸ ನ್ಯಾಯದಿಂದ ನಿನಗೆ ನೀನೆ ಬಂದು । ಆವದು ಬೇಡಿದ ವರಗಳ ನೀವೆನೆಂದು । ಸುವಾಣಿ ಇಂದ ಎನ್ನ ಆದರಿಸಿದಿ ನಿನ್ನ । ಔದಾರ್ಯ ತನಕಿನ್ನು ಆವದಾವದು ಸಮ । ಶ್ರೀವತ್ಸ ಲಾಂಛನ ಗುರು ವಿಜಯ ವಿಠ್ಠಲನ್ನ । ಭಾವದಿಂದಲಿ ನೋಳ್ಪ ಭಾಗ್ಯವೇ ಪಾಲಿಸೇ॥೫॥

....ಜತೆ....

ನಿನ್ನ ದರುಶನದಿಂದ ಅನಿಷ್ಟವನು ನಾಶ । ಘನ್ನ ಇಷ್ಟರೂಪ ಗುರು ವಿಜಯ ವಿಟ್ಠಲಪ್ರಾಪ್ತಾ ॥ ೬॥

**ಶುಕ್ರವಾರ ಶ್ರೀಲಕ್ಷ್ಮೀಶೋಭಾನೆ ಹಾಡು ಅನ್ನಬೇಕು (ನೋಡಿ ಪುಟ ೨೧೭).**

## ೮. ಶ್ರೀ ಶ್ರೀಶಗುಣದರ್ಪಣಸ್ತೋತ್ರಮ್

॥ಯಾ ಸುಗಂಧಾಸ್ಯನಾಸಾದಿನವದ್ವಾರಾಽಖಿಲೇನ ಯಾ । ದುರಾಧರ್ಷಾ ಸರ್ವಸಸ್ಯೋದಯಾರ್ಥಂ ಯಾ ಕರೀಷಿಣೀ ॥೧॥ ಯಾ ನಿತ್ಯಪುಷ್ಟಾ ಸರ್ವಾಂಗ್ಯೈಃ ಸೌಂದರ್ಯಾದಿಗುಣೈರಪಿ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ॥೨॥ ಮಾತರ್ಲಕ್ಷ್ಮಿ ನಮಸ್ತುಭ್ಯಂ ಮಾಧವಪ್ರಿಯಮಾನಿನಿ । ಯುವಾಂ ವಿಶ್ವಸ್ಯ ಪಿತರಾವಿತರೇತರಯೋಗಿನೌ ॥೩॥ ಸಮನಾ ಕಿಲ ಮಾತಸ್ತ್ವಮಮುನಾ ತತಯೋಗಿನೀ । ಮಮ ನಾಥೇನ ದೇವಶ್ಚ ವಿಮನಾಶ್ಚ ನ ಸ ತ್ವಯಿ ॥೪॥ ತ್ವಂ ವೇದಮಾನಿನೀ ವೇದವೇದ್ಯಃ ಕಿಲ ಸ ತೇ ಪ್ರಿಯಃ । ತ್ವಂ ಮೂಲಪ್ರಕೃತಿರ್ದೇವೀ ಸ ಚಾದಿಪುರುಷಃ ಕಿಲ ॥೫॥ ಯಸ್ತ್ವಾಮುರಸಿ ಧತ್ತೇಽಂಬ ಕೌಸ್ತುಭದ್ಯುತಿಭಾಸಿತೇ । ಸ ತ್ವಾಂ ನೈವಾಚ್ಯುತಃ ಸರ್ವಸ್ಯಾತ್ಯಯೇ ಸತ್ಯಪಿ ತ್ಯಜೇತ್॥೬॥ ದೇವಿ ತ್ವಂ ಲಲನಾರತ್ನಂ ದೇವೋಽಸೌ ಪುರುಷೋತ್ತಮಃ । ಯುವಾಂ ಯುವಾನೌ ಸತತಂ ಯುವಯೋರ್ನ ವಯೋಽಧಿಕಃ ॥೭॥ ತ್ವಂ ಪದ್ಮಿನೀ ಪದ್ಮವಕ್ತ್ರಾ ಪದ್ಮಾಕ್ಷೀ ಪದ್ಮವಿಷ್ಟರಾ । ಪದ್ಮದ್ವಯಧರಾ ಪದ್ಮಕೋಶೋದ್ಯತ್‌ಸ್ತನಶೋಭನಾ ॥೮॥ ಪದ್ಮಹಸ್ತಾ ಪದ್ಮಪಾದಾ ಪದ್ಮನಾಭಮನಃಪ್ರಿಯಾ । ಪದ್ಮೋದ್ಭವಸ್ಯ ಜನನೀ ಪದ್ಮಾ ಚ ವರವರ್ಣಿನೀ॥೯॥ ಅಂಬಾಂ ಪೀತಾಂಬರಶ್ರೋಣೀಂ ಲಂಬಾಲಕಲಸನ್ಮುಖೀಮ್। ಬಿಂಬಾಧರೋಷ್ಠೀಂ ಕಸ್ತೂರಿಜಂಬಾಲತಿಲಕಾಂ ಭಜೇ ॥೧೦॥ ರತ್ನೋದ್ದೀಪ್ತಸುಮಾಂಗಲ್ಯಸೂತ್ರಾ-ವೃತಶಿರೋಧರಾಮ್ । ಕುಂಡಲಪ್ರಭಯೋದ್ದಂಡಗಂಡಮಂಡಲಮಂಡಿತಾಮ್ ॥೧೧॥ ಕುಚಕಂಚುಕಸಂಚಾರಿಹಾರನಿಷ್ಕಮನೋಹರಾಮ್ । ಕಾಂಚೀಕಿಂಕಿಣಿಮಂಜೀರಕಂಕಣಾ-ದ್ಯೈರಲಂಕೃತಾಮ್ ॥೧೨॥ ಸುವರ್ಣಮಂಟಪೇ ರತ್ನಚಿತ್ರಸಿಂಹಾಸನೋತ್ತಮೇ । ನಮಾಮಿ ಹರಿಣಾ ಸಾಕಮಿಂದಿರಾಂ ಕೃತಮಂದಿರಾಮ್ ॥೧೩॥ ಬ್ರಹ್ಮಾದ್ಯಾ ವಿಬುಧಶ್ರೇಷ್ಠಾ ಬ್ರಹ್ಮಾಣ್ಯಾದ್ಯಾಃ ಸುರಾಂಗನಾಃ । ಯಾಂ ಪೂಜಯಂತೇ ಸೇವಂತೆ ಸಾ ಮಾಂ ಪಾತು ರಮಾ ಸದಾ ॥೧೪॥ ಸರ್ವಾಲಂಕಾರಭರಿತೌ ಸರ್ವಜ್ಞೌ ಸರ್ವಸದ್ಗುಣೌ । ಶರ್ವಾದಿ ಸರ್ವಭಕ್ತೌಘಸರ್ವಸರ್ವಸ್ವದಾಯಕೌ ॥೧೫॥ ಸುಮುಖೌ ಸುಂದರತರೌ ಸುನಾಸೌ ಸುಖಚಿತ್ತನೂ । ಸುರಾರಾಧಿತಪಾದಾಬ್ಜೌ ರಮಾನಾರಾಯಣೌ ಸ್ತುಮಃ ॥೧೬॥ ಚತುಷ್ಕಪರ್ದಾ ಯಾ ದೇವೀ ಚತುರಾಸ್ಯಾದಿಭಿಃ ಸ್ತುತಾ । ಚತುರ್ವೇದೋದಿತಗುಣಾ ಚತುರ್ಮೂರ್ತೇರ್ಹರೇಃ ಪ್ರಿಯಾ ॥೧೭॥ ಘೃತಪ್ರತೀಕಾಂ ತಾಂ ನಿತ್ಯಂ ಘೃತಪೂರ್ಣಾನ್ನದಾಯಿನೀಮ್ । ಯಥೇಷ್ಟವಿತ್ತದಾತ್ರೀಂ ಚ ನತೋಽಸ್ಮ್ಯಭಯದಾಂ ಶ್ರಿಯಮ್ ॥೧೮॥ ವಾದಿರಾಜೇನ ರಚಿತಂ ಶ್ರೀಶ್ರೀಶಗುಣದರ್ಪಣಮ್। ಇಮಂ ಸ್ತವಂ ಪಠನ್ಮರ್ತ್ಯಃ ಶ್ರೀಮಾನ್ ಸ್ಯಾನ್ನಾತ್ರ ಸಂಶಯಃ॥೧೯॥

॥ಇತಿ ಶ್ರೀಮದ್ವಾದಿರಾಜಪೂಜ್ಯಚರಣವಿರಚಿತಂ ಶ್ರೀಶ್ರೀಶಗುಣದರ್ಪಣಸ್ತೋತ್ರಂ ಸಂಪೂರ್ಣಮ್॥

## ೭) ಶನಿವಾರ

### ( ಶ್ರೀಲಕ್ಷ್ಮೀವೆಂಕಟೇಶದೇವರು, ಶ್ರೀಪವಮಾನ )

### ಅ. ಹಾಡುಗಳು

**ರಾಗ - ಯರಕಲ ಕಾಂಬೋಧಿ** **ತ್ರಿಪುಡಿತಾಳ**

೧) ಸಾರಿದೆನೊ ನಾ ನಿನ್ನ ವೆಂಕಟರನ್ನ ॥ ಪ॥ ನೀರಜ ನಯನನೆ ನಿರ್ಮಲ ಗುಣಪೂರ್ಣ ॥ ಅ.ಪ.॥ ಅನಾಥನೋ ನಾನು ಎನಗೆ ಬಂಧುವೊ ನೀನು । ನಿನ್ನವನೆಂದು ನೋಡೊ, ನೀನಾಗಿ ದಯಮಾಡೋ ॥ ೧॥ ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ । ಪನ್ನಗಾಚಲವಾಸ ಕಾಯೋ ನಿರ್ದೋಷ ॥೨॥ ದೇಶ ದೇಶದವರ ಪೊರೆದಂತೆ ಪೊರೆಯೆನ್ನ ॥ ಶೇಷಾಚಲ ಘನ್ನ ಶ್ರೀಶ ಶ್ರೀಹಯವದನ ॥ ೩॥

**ರಾಗ - ಮಧ್ಯಮಾವತಿ** **ಅಟ್ಟತಾಳ**

೨) ಬಂದು ನಿಂದಿಹ ನೋಡಿ, ಭೂತಳದಿ ವೆಂಕಟ । ಇಂದಿರೆಯರೊಡಗೂಡಿ ಒಪ್ಪುವ ನಿರಂತರ । ಪೊಂದಿ ಭಜನೆಯ ಮಾಡಿ, ಆನಂದ ಬೇಡಿ ॥ಪ॥ ವಂದಿಸುತ ಮನದೊಳಗೆ ಇವನಡಿ । ದ್ವಂದ್ವ ಭಜಿಸಲು ಬಂದ ಭಯಹರ। ಇಂದು ಧರ ಸುರವೃಂದ ನುತ ಗೋ - । ವಿಂದ ಘನ ದಯಾಸಿಂಧು ಶ್ರೀಹರಿ ॥ಅ.ಪ.॥ ದ್ವಾರದೆಡಬಲದಲ್ಲಿ ಜಯ ವಿಜಯರಿಬ್ಬರು । ಸೇರಿ ಸೇವಿಪರಲ್ಲಿ ಸನಕಾದಿ ನುತ ಶೃಂ - । ಗಾರ ನಿಧಿಯಂ ಗೂಲಿ, ಮುತ್ತಿನಲಿ ಶೋಭಿಪ । ಹಾರ ಪೊಂದಿಹವಲ್ಲಿ, ವಿಸ್ತಾರದಲ್ಲಿ ॥ ವಾರ ವಾರಕೆ ಪೂಜೆಗೊಂಬುವ । ಹಾರ ಮುಕುಟಾಭರಣ ಕುಂಡಲ । ಧಾರ ಭುಜ ಕೇಯೂರ ಭೂಷಿತ। ಮಾರಪಿತ ಗುಣಮೋಹ - ನಾಂಗಾ ॥ ಚಾರು ಪೀತಾಂಬರ ಕಟೀಕರ । ವೀರ ಕಲ್ಹಾರಾದಿ ಹೂವಿನ । ಹಾರ ಕೊರಳೊಳು ಎಸೆಯುತಿರೆ ವದ - । ನಾರವಿಂದನು ನಗುತ ನಲಿಯುತ ॥ ೧॥ ಎಲ್ಲ ಭಕುತರಾಭೀಷ್ಟ ಕೊಡುವುದಕೆ ತಾ ಕೈವಲ್ಯ ಸ್ಥಾನವ ಬಿಟ್ಟ । ಶೇಷಾದ್ರಿ ಮಂದಿರ । ದಲ್ಲಿ ಲೋಲಿಪಧಿಟ್ಟ, ಸೌಭಾಗ್ಯ ನಿಧಿಗೆದು- । ರಿಲ್ಲ ಭುಜಬಲ ಪುಷ್ಟ ಕಸ್ತೂರಿಯಿಟ್ಟ ॥ ಚೆಲ್ವ ಶಿರದಲಿ ಶೋಭಿಸುವ ಸಿರಿ । ವಲ್ಲಭನ ಗುಣ ಪೊಗಳದಿಹ ಜಗ - । ಖುಲ್ಲರೆದೆ ದಲ್ಲಣ ಪರಾಕ್ರಮ । ಮಲ್ಲಮರ್ದನ ಮಾತುಳಾಂತಕ ॥ ಫಲ್ಗುಣನ ಸಖ ಪ್ರಕಟನಾಗಿಹ । ದುರ್ಲಭನು ಅಘದೂರ ಬಹು ಮಾಂಗಲ್ಯವಹನಿವನುದ್ಯತಾಕ್ಷಿಗೆ। ಉಲ್ಹಾಸ ಕೊಡುತಲಿ ಚೆಂದದಿಂದಲಿ ॥ ೨॥ ಪದಕ ಕೌಸ್ತುಭ ತೋರ ಸರಿಗೆಯ ಕಂಧರ। ಸುದರ್ಶನಾದರ ಧಾರಾ ಸುಂದರ ಮನೋಹರ । ಪದಯುಗದಿ ನೂಪುರ ಇಟ್ಟಿಹನು ಸನ್ಮುನಿ। ಹೃದಯಸ್ಥಿತ ಗಂಭೀರ, ಬಲುದಾನ ಶೂರಾ ॥ ವಿಧಿಭವಾದ್ಯರ ಪೊರೆವ ದಾತನು। ತುದಿ ಮೊದಲು ಮಧ್ಯಗಳ ರಹಿತನು । ಉದುಭವಾದಿಗಳಿಗೆ ಸುಕರ್ತನು । ತ್ರಿದಶಪೂಜಿತ ತ್ರಿಭುವನೇಶ ॥ ಸದುವಿಲಾಸದಿ ಸ್ವಾಮಿ ತೀರ್ಥದಿ ಉದಿಸುತಿರೆ ಸಿರಿ ಮಹಿಳೆ ಸಹಿತದಿ । ಪದುಮನಾಭ ಪುರಂದರ ವಿಠ್ಠಲನು । ಪ್ರತಿವರುಷ ಬ್ರಹ್ಮೋತ್ಸವದಿ ಮೆರೆಯುತ॥೩॥

## ಆ. ಸುಳಾದಿಗಳು

### ೧) ಶ್ರೀಲಕ್ಷ್ಮೀ ವೆಂಕಟೇಶ ಸುಳಾದಿ

....ಧ್ರುವತಾಳ....

ಮುಕ್ತಾ ಆಮುಕ್ತಾರಿಂದರ್ಚನೆಗೊಂಬ ಚರಣ ವೀ - । ರಕ್ತಾರ ಮನದಲ್ಲಿ ನಿಂದಿಪ್ಪ ಚರಣ ಸೂ । ರಕ್ತಾವರ್ನ ನಖದಿಂದಲೊಪ್ಪುವ ಚರಣ । ಭಕ್ತಿಗೆ ವೊಲಿದೊಲಿದು ಭಾಗ್ಯ ಕೊಡುವ ಚರಣ । ಭಕ್ತಾವತ್ಸಲನೆಂಬೊ ಮಹಾಪ್ರತಾಪದ ಚರಣ । ವ್ಯಕ್ತವಾಗಿ ಲೋಕಾ ಪೂರ್ಣವಾದ ಚರಣ । ಉಕ್ತಿಗೆ ಮೈದೋರದ ಉನ್ನತೋನ್ನತ ಚರಣ । ಶಕ್ತಿಪ್ರದವಾದ ಜ್ಞಾನಾನಂದ ಚರಣ । ತ್ಯಕ್ತಾ ವೈದಿಕಾಸಿದ್ಧ ಸಾರಸುಂದರ ಚರಣ । ಭಕ್ತಿ ಭೂಷಣವಿತ್ತ ಪಾಲಿಸುವ ಚರಣ। ಶಕ್ತಿ ಉದರದಲ್ಲಿ ಅಂಕಿತವಾದ ಚರಣ । ಸಿಕ್ತೋದಕ ಧರಿಸೆ ಸಿರದಲ್ಲಿ ಪೊಳೆವಾ ಚರಣಾ । ಮುಕ್ತಿ ಕೊಡುತಿಪ್ಪ ಮದನ ಲಾವಣ್ಯ ಚರಣ । ನಕ್ತೇಶನಂದದಲಿ ಥಳಥಳಿಸುವ ಚರಣ । ಮುಕ್ತಾಭರಣ ರಂಗಾ ವಿಜಯ ವಿಠಲರೇಯಾ। ಮುಕ್ತಗಿರಿಯ ವೆಂಕಟ ಶ್ರೀನಿವಾಸನ ಚರಣ ॥ ೧॥

....ಮಟ್ಟತಾಳ....

ಈ ಚರಣ ಸಮಸ್ತರಿಗೆ ಸುಲಭಸಾಧ್ಯ । ಈ ಚರಣ ಜ್ಞಾನಭಕುತಿ ಕೊಡುವದು । ಈ ಚರಣ ಅಹಂಕಾರ ಬಿಡಿಸುವದು । ಈ ಚರಣ ಕರಣ ಶುದ್ಧಿಯ ಮಾಡುವದು । ಈ ಚರಣ ದುರಿತರಾಶಿಯ ದಹಿಸುವದು । ಈ ಚರಣದಿಂದ ಪ್ರಸಾದತ್ರಯವೊ । ಈ ಚರಣಾರ್ಚನೆಯ ಮಾಡಿದ ಅಜಭವರು । ಗೋಚರಿಸುವರು ತಮ್ಮ ಪದವಿಯಲ್ಲಿ ನಿತ್ಯ । ಈ ಚರಣ ನೆನಸಿದವನ ಭಾಗ್ಯವೇ ಭಾಗ್ಯ । ಈ ಚರಣ ಕರ್ಮ ಜ್ಞಾನಾನಂದಕೆ। ಸೂಚನೆ ಕಾಣಿರೊ ಗುರುಗಳ ಕೃಪೆಯಿಂದ। ಈ ಚರಣವೆ ದೈತ್ಯವನ ಸವರುವ ಕೊಡಲಿ। ಈ ಚರಣ ದೋಷರಹಿತ ಸಂಪೂರ್ಣ । ಈ ಚರಣೀ ಚರಣಾ ಆಲೋಚನೆಯ ಮಾಡೆ। ಮೋಚಕವಾಗುವದು ಲಿಂಗಾ ಶರೀರವೂ । ವಾಚಸ್ಪತಿ ಜನಕ ವಿಜಯ ವಿಠ್ಠಲ ವೆಂಕಟ। ಲೋಚನಕೆ ಪೊಳೆವ ಅಪ್ರಾಕೃತ ಚರಣ ॥ ೨॥

....ತ್ರಿವಿಡಿತಾಳ....

ಬನ್ನಿರೊ ಬನ್ನಿರೊ ಜನರು ಭಾಗ್ಯ ಪ್ರದಾತನ್ನ । ಘನ್ನ ಚರಣಾವಿಡಿದು ಮೌಳಿಯ ಪರಿಯಂತ । ಚನ್ನಾಗಿ ತಿಳಿದು ಧ್ಯಾನವ ಮಾಡಿ ವೆಂಕಟನ್ನ । ರನ್ನ ಮುಕುಟ ಕುಂಡಲ ಕರ್ನನಸಲಾನಾಮಾ । ಬಂಣಿಸಾಲರಿದು ಮುಖನಯನ ನಾಸಾವದನ । ಕೆನ್ನೆಕಪೋಲಾ ಸುಲಿಪಲ್ಲು ಸುಧಾಸುರಿಯೆ । ಚಿನ್ನದ ಸರಿಗೆ ನಾನಾಹಾರ ಕೌಸ್ತುಭಾ । ಸನ್ನಿಭಾರವಿಯನ್ನೆ ಕೊರಳ ತ್ರಿವಳಿಕಾಂತಿ। ಕನ್ನೆ ಲಕುಮಿ ಇಪ್ಪ ಉರ ಚತುರ್ಭುಜ ಬಾಹು । ಉನ್ನತ ಕೇಯೂರ ಹಸ್ತ ಕಂಕಣಂಗೂಲಿ । ಹನ್ನೆರಡು ಎರಡು ಲೋಕಾ ಉಳ್ಳವುದರ । ಪನ್ನಂಗನ ಕಾಯ ಸೋಲಿಸುವ ಕಟಿಸೂತ್ರಾ । ಗಣ್ಯಗಣದ ಪೀತಾಂಬರವೂರು ಪಾ । ವನ್ನಾ ಜಾನು ಜಂಘೆ ಪರಡು ಪಾದಾಂಗುಲಿ। ಬನ್ನಾದಿ ಪಡದ ನಖಾರೇಖಾಂಕಿತ ಬಲು ಪರಿ । ಭಿನ್ನಾವಿಲ್ಲದೆ ಇಪ್ಪ ಸರ್ವಾವಯಂಗಳೂ । ಇನ್ನೂ ಈ ವಿಧದಲಿ ನಿಮ್ಮ ಚಿತ್ತದಲ್ಲಿ ಸಂ । ಪನ್ನ ಈ ಮೂರ್ತಿಯ ನಿಲಿಸಿ ಆತ್ಮನೆಂದೂ।

ಬನ್ನಾ ಬಡದಿರಿ ಅಲ್ಲೆಲ್ಲಿ ಇಹನೆಂದೂ । ಕಣ್ಣೆ ಮುಂದಾಡುವ ಪರಿಮಳ ಯಸವೃತ್ತ । ಪುಣ್ಯ ಶ್ಲೋಕರಾಯಾ ವಿಜಯ ವಿಠ್ಠಲ ವೆಂಕಟ । ಮನ್ನಿಸಿ ಮುದದಿಂದ ಪ್ರಸನ್ನನಾಗುವ ॥ ೩॥

....ಅಟ್ಟತಾಳ....

ವಿಶ್ವಮಂಗಳನೀತ ವಿಶ್ವಕಾಯನೀತ । ವಿಶ್ವಕುಟುಂಬ ಪಾಲಕನೀತ ಪ್ರಭುನೀತ। ವಿಶ್ವಾಧಾರಕನೀತ ವಿಶ್ವವಿಶ್ವನೀತ । ವಿಶ್ವೇಶ್ವರನೀತ ವಿಶ್ವಾಸಗುಣನೀತ । ವಿಶ್ವನಾಟಕನೀತ ವಿಶ್ವಪ್ರೇರಕನೀತ । ವಿಶ್ವಕರ್ಮನೀತ ವಿಶ್ವಕಾಲನೀತ । ವಿಶ್ವದ್ರವ್ಯನೀತ ವಿಶ್ವನೀತ । ವಿಶ್ವವ್ಯಾಪ್ತನೀತ ವಿಶ್ವಭಿನ್ನನೀತ। ವಿಶ್ವಮೂರುತಿ ಈತ ವಿಲಕ್ಷಣನೀತ । ವಿಶ್ವಾಂಬರೆಯೊಳಗೆ ವಿಶ್ವಾಸದಲಿ ಶ್ವೇ । ತಶ್ವನ್ನ ಮಿತ್ರನ್ನ ಸುಸ್ವರದಲಿ ಪಾಡಿ । ಈಶ್ವರ ನಾನೆಂಬ ನಶ್ವರ ಮತಿಬಿಟ್ಟು । ಭಾಸ್ವರ ಸಂಪೂರ್ಣ ಐಶ್ವರ್ಯನಾಗೋ । ವಿಶ್ವ ಗಿರಿವಾಸ ವಿಜಯವಿಠ್ಠಲ ವೆಂಕ । ಟೇಶ್ವರ ಭಕ್ತರ ವ್ಯಾಧಿಗಳ ಕಳೆವಾ॥೪॥

....ಆದಿತಾಳ....

ದ್ರವ್ಯ ಧರ್ಮ ಮೂರ್ತಿ ಭವ್ಯ ಫಲದ ಭಯಹಾರಿ । ನವ್ಯಾಭೂಷಣ । ಅವ್ಯಕ್ತ ವ್ಯಕ್ತಗಾತ್ರ ದಿವ್ಯತೇಜದಿವಿಜರಾಜ । ಅವ್ಯಯ ಆನಂದಮಯ ಹವ್ಯಾದಿಕ್ರಿಯಾ ನಿಯಾಮಕ। ಸವ್ಯಸಾಚಿ ಪ್ರೀಯ ಜೀಯ್ಯಭವ್ಯ ಗಿರಿರಾಯಾ ವಿಜಯವಿಠ್ಠಲಾ । ಸೇವ್ಯ ಮಾನನೋ ಸುರರಿಂದ ವೆಂಕಟ ॥ ೫॥

....ಜತೆ....

ವೆಂಕಟಗಿರಿ ಸ್ವಾಮಿ ಪುಷ್ಕರಣಿನಿವಾಸ । ಪಂಕಜಾಪತಿ ವಿಜಯ ವಿಠ್ಠಲನ್ನ ಕೊಂಡಾಡು॥೬॥

## ಶ್ರೀಪವಮಾನ

**ರಾಗ : ದರ್ಬಾರಿ** **ಆದಿತಾಳ**

ರಾಮದೂತನ ಪಾದತಾಮರಸವ ಕಂಡ ಆ ಮನುಜನೆ ಧನ್ಯನು ॥ ಪ. ॥ ಶ್ರೀಮನೋಹರನಂಘ್ರಿ ಭಜಕ ಸ್ತೋಮ ಕುಮುದಕೆ ಸೋಮನೆನಿಸುವ । ಭೂಮಿ ಯೊಳು ಯದುಗಿರಿಯ ಸೀಮೆಯ ಕಾಮ ವರದೊಳು ಪ್ರೇಮದಿಂದಿಹ ॥ ಅ.ಪ.॥ ಕೋತಿರೂಪದಿ ರಘುನಾಥನಾಜ್ಞೆಯ ತಾಳಿ ಪಾಥೋದಧಿಯ ಲಂಘಿಸಿ। ಖ್ಯಾತ ಲಂಕೆಯ ಪೊಕ್ಕು ಶೋಧಿಸಿ । ಮಾತೆಯನು ಕಂಡೆರಗಿ ದಶಮುಖ । ಪೋತಖಳಕುಲವ್ರಾತ ಘಾತಿಸಿ। ಸೀತೆವಾರ್ತೆಯ ನಾಥಗರುಹಿದ ॥ ೧॥ ಪಾಂಡುಸುತನೆ ಪ್ರಚಂಡ ಗದೆಯನು ದೋ- । ರ್ದಂಡದಿ ಧರಿಸುತಲಿ । ಮಂಡಲದೊಳು ಭಂಡ ಕೌರವ । ಚಂಡರಿಪುಗಳ ಖಂಡಿಸಿ ಶಿರ । ಚಂಡನಾಡಿ ಸತಿಗೆ ಕರುಳಿನ । ದಂಡೆ ಮುಡಿಸಿದುದ್ದಂಡ ವಿಕ್ರಮ ॥ ೨॥ ಧಾರುಣಿಯೊಳು ದ್ವಿಜನಾರಿ ಗರ್ಭದಿ ಬಂದು ಮೂರೊಂದಾಶ್ರಮ ಧರಿಸಿ । ಧೀರ ನೀನೇಳಧಿಕ ತ್ರಿದಶ । ಸಾರ ಗ್ರಂಥಗಳ್ ವಿರಚಿಸುತ ಮಹ- । ಶೂರ ಶ್ರೀಗೋಪಾಲವಿಠಲನ । ಚಾರುಚರಣಕೆ ಅರ್ಪಿಸಿದ ಗುರು॥೩॥

## ೨) ಶನಿವಾರ ಸುಳಾದಿ

### ....ಧ್ರುವತಾಳ....

ಘನದಯಾನಿಧಿಯಾದ ಪವನರಾಯನೇ ನಮೋ । ಪುನರಪಿ ನಮೋ ನಿನ್ನ ಪಾದಸರಸಿರುಹಕೆ । ಮಣಿದು ಬೇಡಿಕೊಂಬೆ ನೀನೇವೆ ಗತಿ ಯಂದು । ನಿನಗಿಂದ ಹಿತರಾರು ಜೀವನಕೆ । ಸನಕಾದಿವಂದ್ಯನ್ನ ಅಜ್ಞಾನದಿಂದಲಿ ಪರಮ । ಅಣುಗಳಲ್ಲಿ ವ್ಯಾಪ್ತನಾಗಿ ಬಿಡದೆ। ಅಣುರೂಪಗಳಿಂದ ನಿಂದು ಮಾಡಿದ ಕೃತ್ಯ । ಮನಸಿಜಿವೈರಿ ಇಂದ ತಿಳಿಯಲೊಶವೆ । ಹೀನಾಮನಸಿನಿಂದ ಬದ್ಧನಾದವ ನಾನು। ಗುಣರೂಪ ಕ್ರಿಯೆಗಳ ವಿದಿತನೇನೋ । ತನುವಿನೊಳಗೆ ಮೂರು ಕೋಟ್ಯಧಿಕ ಎಪ್ಪತ್ತೆರಡು । ಎನಿಪ ಸಾಸಿರ ರೂಪದಿಂದ ಸತಿಯ ಸಹಿತ । ತೃಣ ಮೊದಲಾದ ಜೀವ ಪ್ರಕೃತಿ ಕಾಲ ಕರ್ಮ । ಅನುಸಾರವಾಗಿ ಕ್ರಿಯೆಗಳನೆ ಮಾಡಿ । ಅನಿಮಿತ್ತ ಬಾಂಧವ ನೆನಿಪ ಸಜ್ಜನರಿಗೆ । ಜ್ಞಾನ ಭಕ್ತ್ಯಾದಿಗಳು ನೀನೇ ಇತ್ತು । ಮನದಲ್ಲಿ ಹರಿರೂಪ ಸಂದರ್ಶನ ವಿತ್ತು । ಘನೀಭೂತವಾದ ಆನಂದ ದಿಂದ । ವಿನಯ ದಿಂದಲಿ ಪೊರೆವ ಉಪಕಾರ। ವನು ಸ್ಮರಿಸಲಾಪೆನೆ ಎಂದೆಂದಿಗೆ ಗುಣನಿಧಿಯೆ । ಇನಕೋಟಿ ತೇಜಗುರು ವಿಜಯವಿಠ್ಠಲರೇಯ। ಇನಿತು ನಿನ್ನೊಳು ಲೀಲೆ ಮಾಡುವ ಆವಕಾಲ ॥ ೧॥

### ....ಮಟ್ಟತಾಳ....

ಮಿನುಗುವ ಕಂಠದಲಿ ಎರಡು ದಳದ ಕಮಲ । ಕರ್ಣಿಕ ಮಧ್ಯದಲಿ ಸತಿ ಸಹಿತದಲಿದ್ದು। ವನಜಾಸನ ವಿಡಿದು ತೃಣ ಜೀವರ ತನಕ । ತನುಗಳಿಗೆ ವಿಹಿತವಾದ ಶಬ್ದಗಳನ್ನು । ನೀನೆವೆ ಮಾಡಿ ಅವರವರಿಗೆ ಕೀರ್ತಿ । ಘನತೆಯನ್ನೆ ಇತ್ತು ಕಾಣಿಸಿ ಕೊಳ್ಳದಲೆ। ಮನುಜಾಧಮರಿಗೆ ಮಾಯವ ಮಸಗಿಸಿ । ಕೊನೆಗುಣದವರನ್ನ । ನಿತ್ಯ ದುಃಖಗಳಿಂದ । ದಣಿಸುವಿ ಪ್ರಾಂತ್ಯದಲಿ ಕಡೆ ಮೊದಲಿಲ್ಲಾದೆ । ದನುಜಮರ್ದನ ಗುರು ವಿಜಯವಿಠ್ಠಲರೇಯ । ನಿನಗಿತ್ತನು ಈ ಪರಿ ಸ್ವತಂತ್ರ ಮಹಿಮೆಯನು॥೨॥

### ....ರೂಪಕತಾಳ....

ನಾಸಿಕ ಎಡದಲ್ಲಿ ಭಾರತಿ ತಾನಧೋ । ಶ್ವಾಸ ಬಿಡಿಸುವಳು ನಿನ್ನಾಜ್ಞದೀ। ನಾಸಿಕ ಬಲದಲ್ಲಿ ಈಶನಾಜ್ಞದಿ ಊರ್ಧ್ವ । ಶ್ವಾಸ ಬಿಡಿಸಿ ಪೊರೆವಿ ಜೀವರನ್ನು । ತಾಸಿಗೊಂಭೈನೂರು ಕ್ರಮದಿಂದ ಇಪ್ಪತ್ತೊಂದು । ಸಾಸಿರದಾರು ಶತ ದಿನ ಒಂದರಲಿ । ಭೂಶಬ್ದದಿಂದಲ್ಲಿ ಹರಿಯನ್ನೆ ಪೂಜಿಸುತ್ತ । ಅಶೀತಿ ನಾಲ್ಕು ಲಕ್ಷ ಜೀವರಿಗೆ । ಲೇಸು ಮಿಶ್ರಗಳಿತ್ತು ಅದರಂತೆ ನಿರ್ದೇಶ । ವಾಸಗೈಸುವಿ ನೀನೇ ಪ್ರಾಂತ್ಯದಲ್ಲಿ । ಈ ಸುಜ್ಞಾನವ ತಿಳಿದುಪಾಸನೆ ಮಾಳ್ಪರಿಗೆ । ಶ್ವಾಸ ಮಂತ್ರದ ಪುಣ್ಯ ಶೇಷವೀ ವಿ । ಕಾಶಿನಿಂದಲಿ ಕೋಟಿ ದ್ರವ್ಯ ಪ್ರಾಪುತದಂತೆ । ವಾಸುದೇವನು ಇದಕೆ ತುಷ್ಟನಾಗೀ । ಈ ಶರೀರದಿ ಪೊಳೆದು ಕ್ಲೇಶವ ಪರಿಹರಿಪ । ಈ ಸಂಜ್ಞದಿಂದಲ್ಲಿ ದಿವಿಜರೆಲ್ಲ । ದಾಸರಾಗಿಹರಯ್ಯ ನಿನ್ನ ಪಾದವ ಬಿಡದೆ । ಕ್ಲೇಶಾನಂದಗಳೆಲ್ಲಾ ನಿನ್ನಾಧೀನ । ದೇಶಕಾಲ ಪೂರ್ಣ ಗುರು ವಿಜಯವಿಠ್ಠಲರೇಯ । ಭಾಸುರ ಜ್ಞಾನ ನಿನ್ನಿಂದ ನೀವ ॥ ೩॥

....ಝಂಪೆತಾಳ....

ಪಂಚದ್ವಾರಗಳಿಂದ ಪಂಚವಪುಷಗಳಿಂದ । ಪಂಚರೂಪನಧ್ಯಾನ ಮಾಳ್ಪ ನಿನ್ನ । ಪಂಚಮುಖ ಮೊದಲಾದವುರರೆಲ್ಲರು ನಿ । ಶ್ಚಂಚಲದಿ ಭಜಿಸುತಿರೆ ಅವರವರ । ವಾಂಛಿತಗಳನ್ನಿತ್ತು ಪೊರೆವ ಮುಖ್ಯಪ್ರಾಣ ದ್ವಿ । ಪಂಚ ಕರಣಕೆ ಮುಖ್ಯಮಾನಿ ನೀನೆ । ಪಂಚ ರೂಪಗಳಿಂದ ಪಂಚಾಗ್ನಿಗತನಾಗಿ। ಪಂಚ ವ್ಯಾಪಾರಗಳ ಮಾಳ್ಪ ದೇವ । ಪಂಚ ಪರ್ವದಲಿಪ್ಪ ಪಂಚ ಪಂಚಮರರು । ಸಂಚರಿಸುವರಯ್ಯಾ ನಿನ್ನಿಂದಲಿ । ಪಂಚ ಬೇಧಗಳರುಹಿ ಶುದ್ಧ ಶಾಸ್ತ್ರಗಳಿಂದ ಪ್ರ। ಪಂಚ ಸಲಹಿದ ವಿಮಲ ಉಪಕಾರಿಯೇ ನಿ । ಷ್ಕಿಂಚನರ ಪ್ರಿಯ ಗುರು ವಿಜಯ ವಿಠ್ಠಲರೇಯನ । ಮಿಂಚಿನಂದದಿ ಎನ್ನ ಮನದಿ ನಿಲಿಸು॥೪॥

....ತ್ರಿವಿಡಿತಾಳ....

ದಳ ಅಷ್ಟವುಳ್ಳ ರಕ್ತಾಂಬುಜದ ಮಧ್ಯ । ಪೊಳೆವ ಕರ್ಣಿಕೆಯಲ್ಲಿ ಶೋಭಿಸುವ । ಮೂಲೇಶನ ಪಾದ ಪಂಕಜದಲಿ ನಿಂದು । ಸಲೆ ಭಕುತಿ ಇಂದ ಭಜಿಸುವ ನಿನ್ನ ಚರಣ । ಮೂಲದಲ್ಲಿ ಜೀವ ಆಶ್ರಯಿಸಿ ಇಪ್ಪನಾಗಿ । ಸ್ಥಳವ ಸೇರಿಪ ಭಾರ ನಿನ್ನದಯ್ಯಾ । ಒಲ್ಲೆನೆಂದರೆ ಬಿಡದು ಭಕುತರ ಅಭಿಮಾನ । ಒಲಿದು ಪಾಲಿಸಬೇಕು ಘನ ಮಹಿಮಾ । ಖಳದರ್ಪ ಭಂಜನ ಗುರು ವಿಜಯ ವಿಠ್ಠಲರೇಯ। ಒಲಿವ ನಿನ್ನಯ ಕೃಪೆಗೆ ವಿಮಲ ಚರಿತ ॥ ೫॥

....ಅಟ್ಟತಾಳ....

ಜಾಗ್ರತ ಸ್ವಪ್ನ ಸುಷುಪ್ತಿಯಲ್ಲಿ ನೀನೆ । ಜಾಗರೂಕನಾಗಿ ಜೀವರ ಪಾಲಿಸಿ । ಭಾಗತ್ರಯದಲ್ಲಿ ವಿಭಾಗ ಮಾಡುವಿ । ನಾಗಭೂಷಣಾದಿ ಸುರರಿಗೆ ಜೀವನ । ಸಾಗರ ಮೊದಲಾದ ಸಕಲರಲ್ಲಿ ವ್ಯಾಪ್ತ। ನಾಗರಾಜನ ಅಂಗುಟದಿ ಮೀಟಿದ ಶಕ್ತ । ಯುಗಾದಿ ಕೃತುನಾಮ ಗುರುವಿಜಯ ವಿಠ್ಠಲರೇಯನ । ಯೋಗವ ಪಾಲಿಸಿ ಭವದೂರ ಮಾಡೋದು ॥ ೬॥

....ಆದಿತಾಳ....

ಅಸುರರ ಪುಣ್ಯವನ್ನು ಭಕುತರಿಗಿತ್ತವರ । ಅಸಮೀಚೀನ ಕರ್ಮ ದನುಜರಿಗುಣಿಸುವಿ। ಈಶನೆ ಗತಿ ಎಂದು ನೆರೆನಂಬಿದವರಿಗೆ । ಸುಸಮೀಚೀನವಾದ ಮೋದಗಳೀವಿ ನಿತ್ಯ । ವಸುಧಿಯ ಭಾರವನ್ನು ಧರಿಸಿ ತ್ರಿಕೋಟಿಯ । ಸುಶರೀರಗಳಿಂದ ಬಹಿರಾವರಣದಲ್ಲಿ । ವಾಸವಾಗಿ ಸಕಲ ಭೂತ ಹೃತ್ಕಮಲದಲ್ಲಿ ನಿಂದು । ಬೀಸಜ ಜಾಂಡವನ್ನು ಪೊರೆವ ಕರುಣಿ ನೀನು । ಅಸಮನೆನಿಪ ಗುರು ವಿಜಯವಿಠ್ಠಲರೇಯಾ । ವಶವಾಗುವನು ನಿನ್ನ ಕರುಣದಿ ಆವಕಾಲ ॥ ೭॥

....ಜತೆ....

ಹರಿಯ ವಿಹಾರಕ್ಕೆ ಆವಾಸನೆನೆಸುವಿ । ಗುರು ವಿಜಯವಿಠ್ಠಲನ್ನ ಸುಪ್ರೀತ ಘನದೂತ ॥೮॥

**ಶನಿವಾರ ಸಂಜೆ ಹನುಮಂತದೇವರ ೫ ಹಾಡುಗಳನ್ನು ಅನ್ನಬೇಕು**

## ಶನೈಶ್ಚರಕೃತಾ ಶ್ರೀ ಲಕ್ಷ್ಮೀನೃಸಿಂಹಸ್ತುತಿಃ

ಸುಲಭೋ ಭಕ್ತಿಯುಕ್ತಾನಾಂ ದುರ್ದರ್ಶೋ ದುಷ್ಟಚೇತಸಾಮ್।
ಅನನ್ಯಗತಿಕಾನಾಂ ಚ ಪ್ರಭುರ್ಭಕ್ತೈಕವತ್ಸಲಃ ॥
ಶನೈಶ್ಚರಸ್ತತ್ರ ನೃಸಿಂಹದೇವಸ್ತುತಿಂ ಚಕಾರಾಽಮಲಚಿತ್ತವೃತ್ತಿಃ।
ಪ್ರಣಮ್ಯ ಸಾಷ್ಟಾಂಗಮಶೇಷಲೋಕಕಿರೀಟ ನೀರಾಜಿತಪಾದಪದ್ಮಮ್ ॥

**ಶ್ರೀ ಶನಿರುವಾಚ -**

ಯತ್ಪಾದಪಂಕಜರಜಃ ಪರಮಾದರೇಣ
ಸಂಸೇವಿತಂ ಸಕಲಕಲ್ಮಷರಾಶಿನಾಶಮ್।
ಕಲ್ಯಾಣಕಾರಕಮಶೇಷನಿಜಾನುಗಾನಾಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೧॥

ಸರ್ವತ್ರ ಚಂಚಲತಯಾ ಸ್ಥಿತಯಾ ಹಿ ಲಕ್ಷ್ಮ್ಯಾ
ಬ್ರಹ್ಮಾದಿವಂದ್ಯಪದಯಾ ಸ್ಥಿರಯಾ ನ್ಯಸೇವಿ।
ಪಾದಾರವಿಂದಯುಗಲಂ ಪರಮಾದರೇಣ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೨॥

ಯದ್ರೂಪಮಾಗಮಶಿರಃಪ್ರತಿಪಾದ್ಯಮಾದ್ಯ-
ಮಾಧ್ಯಾತ್ಮಿಕಾದಿಪರಿತಾಪಹರಂ ವಿಚಿಂತ್ಯಮ್।
ಯೋಗೀಶ್ವರೈರಪಗತಾಖಿಲದೋಷಸಂಘೈಃ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೩॥

ಪ್ರಹ್ಲಾದಭಕ್ತವಚಸಾ ಹರಿರಾವಿರಾಸ
ಸ್ತಂಭೇ ಹಿರಣ್ಯಕಶಿಪುಂ ಯ ಉದಾರಭಾವಃ।
ಊರ್ವೋರ್ನಿಧಾಯ ತದುದರೋ ನಖರೈರ್ದದಾರ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೪॥

ಯೋ ನೈಜಭಕ್ತಮನಲಾಂಬುಧಿಭೂಧರೋಗ್ರ -
ಶೃಂಗಪ್ರಪಾತವಿಷದಂತಿಸರೀಸೃಪೇಭ್ಯಃ।
ಸರ್ವಾತ್ಮಕಃ ಪರಮಕಾರುಣಿಕೋ ರರಕ್ಷ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೫॥

ಯನ್ನಿರ್ವಿಕಾರಪರರೂಪವಿಚಿಂತನೇನ
ಯೋಗೀಶ್ವರಾ ವಿಷಯವೀತಸಮಸ್ತರಾಗಾಃ।
ವಿಶ್ರಾಂತಿಮಾಪುರವಿನಾಶವತೀಂ ಪರಾಖ್ಯಾಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೬॥.

ಯದ್ರೂಪಮುಗ್ರಪರಿಮರ್ದನಭಾವಶಾಲಿ
ಸಂಚಿಂತನೇನ ಸಕಲಾಘ ವಿನಾಶಕಾರಿ।

ಭೂತಜ್ವರಗ್ರಹಸಮುದ್ಭವಭೀತಿನಾಶಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೭॥

ಯಸ್ಯೋತ್ತಮಂ ಯಶ ಉಮಾಪತಿಪದ್ಮಜನ್ಮ -
ಶಕ್ರಾದಿದೈವತಸಭಾಸು ಸಮಸ್ತಗೀತಮ್ ।
ಶಕ್ತೈವ ಸರ್ವಶಮಲಪ್ರಶಮೈಕದಕ್ಷಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೮॥

ಇತ್ಥಂ ಶ್ರುತ್ವಾ ಸ್ತುತಿಂ ದೇವಃ ಶನಿನಾ ಕಲ್ಪಿತಾಂ ಹರಿಃ।
ಉವಾಚ ಬ್ರಹ್ಮವೃಂದಸ್ಥಂ ಶನಿಂ ತಂ ಭಕ್ತವತ್ಸಲಃ ॥

**ಶ್ರೀ ನೃಸಿಂಹ ಉವಾಚ -**

ಪ್ರಸನ್ನೋಽಹಂ ಶನೇ ತುಭ್ಯಂ ವರಂ ವರಯ ಶೋಭನಮ್ ।
ಯಂ ವಾಂಛಸಿ ತಮೇವ ತ್ವಂ ಸರ್ವಲೋಕಹಿತಾವಹಮ್ ॥

**ಶ್ರೀ ಶನಿರುವಾಚ -**

ನೃಸಿಂಹ ತ್ವಂ ಮಯಿ ಕೃಪಾಂ ಕುರು ದೇವ ದಯಾನಿಧೇ ।
ಮದ್ವಾಸರಸ್ತವ ಪ್ರೀತಿಕರಸ್ಸ್ಯಾದ್ದೇವತಾಪತೇ ॥
ಮತ್ಕೃತಂ ತ್ವತ್ಪರಂ ಸ್ತೋತ್ರಂ ಶೃಣ್ವಂತಿ ಚ ಪಠಂತಿ ಚ ।
ಸರ್ವಾನ್ ಕಮಾನ್ ಪೂರಯೇಥಾಃ ತೇಷಾಂ ತ್ವಂ ಲೋಕಭಾವನ ॥

**ಶ್ರೀನೃಸಿಂಹ ಉವಾಚ -**

ತಥೈವಾಸ್ತು ಶನೇಽಹಂ ವೈ ರಕ್ಷೋಭುವನಸಂಸ್ಥಿತಃ ।
ಭಕ್ತಕಾಮಾನ್ ಪೂರಯಿಷ್ಯೇ ತ್ವಂ ಮಮೈಕಂ ವಚಃ ಶೃಣು ॥
ತ್ವತ್ಕೃತಂ ಮತ್ಪರಂ ಸ್ತೋತ್ರಂ ಯಃ ಪಠೇತ್ ಶೃಣುಯಾಚ್ಚ ಯಃ ।
ದ್ವಾದಶಾಷ್ಟಮಜನ್ಮಸ್ಥಾತ್ತ್ವದ್ಭಯಂ ಮಾಸ್ತು ತಸ್ಯ ವೈ ॥

ಶನಿರ್ನರಹರಿಂ ದೇವಂ ತಥೇತಿ ಪ್ರತ್ಯುವಾಚ ಹ ।
ತತಃ ಪರಮಸಂತುಷ್ಟಾಃ ಜಯೇತಿ ಮುನಯೋಽವದನ್ ॥

**ಶ್ರೀಕೃಷ್ಣ ಉವಾಚ - (ಧರ್ಮರಾಜಂ ಪ್ರತಿ)**

ಇತ್ಥಂ ಶನೈಶ್ಚರಸ್ಯಾಥ ನೃಸಿಂಹದೇವ -
ಸಂವಾದಮೇತತ್‌ಸ್ತವನಂ ಚ ಮಾನವಃ ।
ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ
ಸರ್ವಾಣ್ಯಭೀಷ್ಟಾನಿ ಚ ವಿಂದತೇ ಧ್ರುವಮ್ ॥

॥ಇತಿ ಶ್ರೀಭವಿಷ್ಯೋತ್ತರಪುರಾಣೇ ರಕ್ಷೋಭುವನಮಾಹಾತ್ಮ್ಯೇ
ಶನೈಶ್ಚರಕೃತಂ ಶ್ರೀನೃಸಿಂಹಸ್ತೋತ್ರಂ ಸಂಪೂರ್ಣಮ್ ॥

॥ಇಲ್ಲಿಗೆ ಸಾಪ್ತಾಹಿಕ ಸ್ತೋತ್ರಪ್ರಕರಣವು ಮುಗಿಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಶನೈಶ್ಚರಕೃತಾ ಶ್ರೀ ಲಕ್ಷ್ಮೀನೃಸಿಂಹಸ್ತುತಿಃ

ಸುಲಭೋ ಭಕ್ತಿಯುಕ್ತಾನಾಂ ದುರ್ದರ್ಶೋ ದುಷ್ಟಚೇತಸಾಮ್।
ಅನನ್ಯಗತಿಕಾನಾಂ ಚ ಪ್ರಭುರ್ಭಕ್ತೈಕವತ್ಸಲಃ ॥
ಶನೈಶ್ಚರಸ್ತತ್ರ ನೃಸಿಂಹದೇವಸ್ತುತಿಂ ಚಕಾರಾಮಲಚಿತ್ತವೃತ್ತಿಃ।
ಪ್ರಣಮ್ಯ ಸಾಷ್ಟಾಂಗಮಶೇಷಲೋಕಕಿರೀಟ ನೀರಾಜಿತಪಾದಪದ್ಮಮ್ ॥

**ಶ್ರೀ ಶನಿರುವಾಚ -**

ಯತ್ಪಾದಪಂಕಜರಜಃ ಪರಮಾದರೇಣ
ಸಂಸೇವಿತಂ ಸಕಲಕಲ್ಮಷರಾಶಿನಾಶಮ್।
ಕಲ್ಯಾಣಕಾರಕಮಶೇಷನಿಜಾನುಗಾನಾಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೧॥

ಸರ್ವತ್ರ ಚಂಚಲತಯಾ ಸ್ಥಿತಯಾ ಹಿ ಲಕ್ಷ್ಮ್ಯಾ
ಬ್ರಹ್ಮಾದಿವಂದ್ಯಪದಯಾ ಸ್ಥಿರಯಾ ನ್ಯಸೇವಿ ।
ಪಾದಾರವಿಂದಯುಗಲಂ ಪರಮಾದರೇಣ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೨॥

ಯದ್ರೂಪಮಾಗಮಶಿರಃಪ್ರತಿಪಾದ್ಯಮಾದ್ಯ-
ಮಾಧ್ಯಾತ್ಮಿಕಾದಿಪರಿತಾಪಹರಂ ವಿಚಿಂತ್ಯಮ್।
ಯೋಗೀಶ್ವರೈರಪಗತಾಖಿಲದೋಷಸಂಘೈಃ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೩॥

ಪ್ರಹ್ಲಾದಭಕ್ತವಚಸಾ ಹರಿರಾವಿರಾಸ
ಸ್ತಂಭೇ ಹಿರಣ್ಯಕಶಿಪುಂ ಯ ಉದಾರಭಾವಃ ।
ಊರ್ವೋರ್ನಿಧಾಯ ತದುದರೋ ನಖರೈರ್ದದಾರ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೪॥

ಯೋ ನೈಜಭಕ್ತಮನಲಾಂಬುಧಿಭೂಧರೋಗ್ರ -
ಶೃಂಗಪ್ರಪಾತವಿಷದಂತಿಸರೀಸೃಪೇಭ್ಯಃ।
ಸರ್ವಾತ್ಮಕಃ ಪರಮಕಾರುಣಿಕೋ ರರಕ್ಷ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೫॥

ಯನ್ನಿರ್ವಿಕಾರಪರರೂಪವಿಚಿಂತನೇನ
ಯೋಗೀಶ್ವರಾ ವಿಷಯವೀತಸಮಸ್ತರಾಗಾಃ ।
ವಿಶ್ರಾಂತಿಮಾಪುರವಿನಾಶವತೀಂ ಪರಾಖ್ಯಾಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೬॥.

ಯದ್ರೂಪಮುಗ್ರಪರಿಮರ್ದನಭಾವಶಾಲಿ
ಸಂಚಿಂತನೇನ ಸಕಲಾಘ ವಿನಾಶಕಾರಿ ।

ಭೂತಜ್ವರಗ್ರಹಸಮುದ್ಭವಭೀತಿನಾಶಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೭॥

ಯಸ್ಯೋತ್ತಮಂ ಯಶ ಉಮಾಪತಿಪದ್ಮಜನ್ಮ -
ಶಕ್ರಾದಿದೈವತಸಭಾಸು ಸಮಸ್ತಗೀತಮ್ ।
ಶಕ್ತೈವ ಸರ್ವಶಮಲಪ್ರಶಮೈಕದಕ್ಷಂ
ಸ ತ್ವಂ ನೃಸಿಂಹ ಮಯಿ ಧೇಹಿ ಕೃಪಾವಲೋಕಮ್ ॥೮॥

ಇತ್ಥಂ ಶ್ರುತ್ವಾ ಸ್ತುತಿಂ ದೇವಃ ಶನಿನಾ ಕಲ್ಪಿತಾಂ ಹರಿಃ।
ಉವಾಚ ಬ್ರಹ್ಮವೃಂದಸ್ಥಂ ಶನಿಂ ತಂ ಭಕ್ತವತ್ಸಲಃ ॥

**ಶ್ರೀ ನೃಸಿಂಹ ಉವಾಚ -**

ಪ್ರಸನ್ನೋಽಹಂ ಶನೇ ತುಭ್ಯಂ ವರಂ ವರಯ ಶೋಭನಮ್ ।
ಯಂ ವಾಂಛಸಿ ತಮೇವ ತ್ವಂ ಸರ್ವಲೋಕಹಿತಾವಹಮ್ ॥

**ಶ್ರೀ ಶನಿರುವಾಚ -**

ನೃಸಿಂಹ ತ್ವಂ ಮಯಿ ಕೃಪಾಂ ಕುರು ದೇವ ದಯಾನಿಧೇ ।
ಮದ್ವಾಸರಸ್ತವ ಪ್ರೀತಿಕರಸ್ಸ್ಯಾದ್ದೇವತಾಪತೇ ॥
ಮತ್ಕೃತಂ ತ್ವತ್ಪರಂ ಸ್ತೋತ್ರಂ ಶೃಣ್ವಂತಿ ಚ ಪಠಂತಿ ಚ ।
ಸರ್ವಾನ್ ಕಮಾನ್ ಪೂರಯೇಥಾಃ ತೇಷಾಂ ತ್ವಂ ಲೋಕಭಾವನ ॥

**ಶ್ರೀನೃಸಿಂಹ ಉವಾಚ -**

ತಥೈವಾಸ್ತು ಶನೇಽಹಂ ವೈ ರಕ್ಷೋಭುವನಸಂಸ್ಥಿತಃ ।
ಭಕ್ತಕಾಮಾನ್ ಪೂರಯಿಷ್ಯೇ ತ್ವಂ ಮಮೈಕಂ ವಚಃ ಶೃಣು ॥
ತ್ವತ್ಕೃತಂ ಮತ್ಪರಂ ಸ್ತೋತ್ರಂ ಯಃ ಪಠೇತ್ ಶೃಣುಯಾಚ್ಚ ಯಃ ।
ದ್ವಾದಶಾಷ್ಟಮಜನ್ಮಸ್ಥಾತ್ತ್ವದ್ಭಯಂ ಮಾಸ್ತು ತಸ್ಯ ವೈ ॥

ಶನಿರ್ನರಹರಿಂ ದೇವಂ ತಥೇತಿ ಪ್ರತ್ಯುವಾಚ ಹ ।
ತತಃ ಪರಮಸಂತುಷ್ಟಾಃ ಜಯೇತಿ ಮುನಯೋಽವದನ್ ॥

**ಶ್ರೀಕೃಷ್ಣ ಉವಾಚ - (ಧರ್ಮರಾಜಂ ಪ್ರತಿ)**

ಇತ್ಥಂ ಶನ್ಯೈಶ್ಚರಸ್ಯಾಥ ನೃಸಿಂಹದೇವ -
ಸಂವಾದಮೇತತ್ಸ್ತವನಂ ಚ ಮಾನವಃ ।
ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ
ಸರ್ವಾಣ್ಯಭೀಷ್ಟಾನಿ ಚ ವಿಂದತೇ ಧ್ರುವಮ್ ॥

॥ಇತಿ ಶ್ರೀಭವಿಷ್ಯೋತ್ತರಪುರಾಣೇ ರಕ್ಷೋಭುವನಮಾಹಾತ್ಮ್ಯೇ
ಶನ್ಯೈಶ್ಚರಕೃತಂ ಶ್ರೀನೃಸಿಂಹಸ್ತೋತ್ರಂ ಸಂಪೂರ್ಣಮ್ ॥

॥ಇಲ್ಲಿಗೆ ಸಾಪ್ತಾಹಿಕ ಸ್ತೋತ್ರಪ್ರಕರಣವು ಮುಗಿಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ೪. ಪಾರಾಯಣ ಪ್ರಕರಣ

ಇಹದಲ್ಲಿಯೂ ಪರದಲ್ಲಿಯೂ ಸುಖವನ್ನು ಅಪೇಕ್ಷಿಸುವವರೆಲ್ಲರೂ ಶ್ರೀಹರಿವಾಯುಗುರುಗಳ ಉಪಾಸನೆಯನ್ನು ತಾರತಮ್ಯದಿಂದ ಮಾಡಿ ಅವರ ಅನುಗ್ರಹವನ್ನು ಸಂಪಾದಿಸಬೇಕು. ತಾರತಮ್ಯೋಪಾಸನೆಗೆ ಶ್ರೀಹರಿವಾಯು ಗುರುಗಳ ಮಹಿಮೆಯನ್ನು, ವೇದಾದಿ ಶಾಸ್ತ್ರೋಕ್ತಪ್ರಮೇಯಗಳನ್ನು ಹಾಗೂ ಉಪಾಸನಾ ಕ್ರಮವನ್ನು ತಿಳಿಯುವದು ಅತ್ಯವಶ್ಯ. ಆದರೆ ಋಗಾದಿವೇದಗಳನ್ನು ಹಾಗೂ ಸರ್ವಮೂಲ, ಟೀಕಾ ಟಿಪ್ಪಣ್ಯಾದಿ ಶಾಸ್ತ್ರಗ್ರಂಥಗಳನ್ನು ಸ್ತ್ರೀಯರು ಅಧ್ಯಯನ ಮಾಡುವಂತಿಲ್ಲ. ಶಾಸ್ತ್ರಗ್ರಂಥಗಳ ಗ್ರಂಥಪುರಸ್ಸರವಾದ ಅಧ್ಯಯನದಲ್ಲಿ ಅನಧಿಕಾರಿಗಳಾದ ಸ್ತ್ರೀಯರಿಗೆ ಮತ್ತು ಮಂದಮತಿಗಳಾದ ಪುರುಷರಿಗೆ ಶಾಸ್ತ್ರಗ್ರಂಥಗಳ ಅಧ್ಯಯನವಿಲ್ಲದೆ ಶ್ರೀಹರಿವಾಯುಗುರುಗಳ ಮಹಿಮೆಗಳ ಹಾಗೂ ಪ್ರಮೇಯಗಳ ಜ್ಞಾನವಾಗಲಾರದು. ಇದನ್ನರಿತ ಪರಮಕರುಣಾಳುಗಳಾದ ಜ್ಞಾನಿವರೇಣ್ಯರು ಸ್ತ್ರೀಯರನ್ನು ಹಾಗೂ ಮಂದಮತಿಗಳಾದ ಪುರುಷರನ್ನು ಉದ್ಧರಿಸುವುದಕ್ಕಾಗಿಯೇ ಸಂಸ್ಕೃತದಲ್ಲಿರುವ ಶಾಸ್ತ್ರಗ್ರಂಥಗಳ ಸಾರವನ್ನು ತಿಳಿಸುವ ಅನೇಕ ಕೃತಿಗಳನ್ನು ಪ್ರಾಕೃತ ಭಾಷೆಗಳಲ್ಲಿ ರಚಿಸಿ ಅನುಗ್ರಹಿಸಿದ್ದಾರೆ. ಸಾಧನ ಮಾರ್ಗದಲ್ಲಿ ದಾರಿದೀಪದಂತಿರುವ ಈ ಕೃತಿಗಳ ಅಧ್ಯಯನ ಪಾರಾಯಣಾದಿಗಳಿಂದ ಶ್ರೀಹರಿವಾಯುಗುರುಗಳನ್ನು ತಾರತಮ್ಯದಿಂದ ಆರಾಧಿಸಿ ಅವರ ಅನುಗ್ರಹವನ್ನು ಸಂಪಾದಿಸಲು ಸಾಧ್ಯವಾಗುವುದು.

ಪ್ರಕೃತ ಈ ಪಾರಾಯಣ ಪ್ರಕರಣದಲ್ಲಿ ನಾಲ್ಕು ಭಾಗಗಳನ್ನು ಮಾಡಲಾಗಿದ್ದು ಮೊದಲನೆಯ ಭಾಗದಲ್ಲಿ ಅಪರೋಕ್ಷಜ್ಞಾನಿಗಳಿಂದ ಕನ್ನಡದಲ್ಲಿ ರಚಿತವಾದ ವಿರಾಟಮೂರ್ತಿಧ್ಯಾನ ಪ್ರಕಾರ, ಪ್ರಾಕೃತ ತಂತ್ರಸಾರ, ತಾರತಮ್ಯ ಕ್ರಮ, ರಾಮಾಯಣ, ಮಹಾಭಾರತ, ಭಗವದ್ಗೀತಾ , ಭಾಗವತ, ಗೋಪಿಗೀತೆಗಳು, ಹರಿಭಕ್ತಿಸಾರ, ಮತ್ತು ಕೆಲವು ಸುಳಾದಿಗಳನ್ನು ಕೊಡಲಾಗಿದೆ. ಸರ್ವತ್ರ ಸುಶ್ರಾವ್ಯವಾಗಿ ಗೇಗೀಯಮಾನವಾದ ಸಂಸ್ಕೃತ ಗೋಪೀಗೀತ ಮತ್ತು ಕೃಷ್ಣಾಷ್ಟಕಗಳನ್ನೂ ಇಲ್ಲಿ ಸೇರಿಸಲಾಗಿದೆ. ಈ ರೀತಿ ಈ ಪ್ರಕರಣದ ಮೊದಲನೆಯ ಭಾಗವು ಶ್ರೀಹರಿಗೆ ಮೀಸಲಾಗಿದೆ.

ಎರಡನೆಯ ಭಾಗದಲ್ಲಿ ವಾಯುದೇವರಿಗೆ ಸಂಬಂಧಿಸಿದ ಕನ್ನಡ ಸುಂದರಕಾಂಡ, ಶ್ರೀಸುಮಧ್ವವಿಜಯ ಸುಳಾದಿ, ಅಣುಮಧ್ವವಿಜಯ, ಗ್ರಂಥ ಮಾಲಿಕಾಸ್ತೋತ್ರ, ವಾಯುಸ್ತುತಿ, ಶ್ರೀ ಸೌಭಾಗ್ಯ ಸಪ್ತತ್ರಿಂಶತಿ (ಬ್ರಹ್ಮವಾಯು ಋಜುಗಳ ಸ್ತೋತ್ರ ) ಮುಂತಾದ ಕೃತಿಗಳನ್ನು ಸೇರಿಸಲಾಗಿದೆ.

**ಮೂರನೆಯ ಭಾಗದಲ್ಲಿ ಎರಡು ನವಗ್ರಹ ಸ್ತೋತ್ರಗಳು ಹಾಗೂ ಸಂಧಿಮಾಲಾ ಸಂಧಿ ಇವುಗಳನ್ನು ಕಾಣಬಹುದು.**

ಶೀಘ್ರವಿವಾಹಕ್ಕಾಗಿ ಕನ್ಯಾಮಣಿಗಳು ಹಾಗೂ ಇಷ್ಟಾರ್ಥಸಿದ್ಧಿಗಾಗಿ ಎಲ್ಲ ಸ್ತ್ರೀಪುರುಷರು ಪಾರಾಯಣ ಮಾಡಬೇಕಾದ ಹಾಡು, ಸುಳಾದಿ, ಮಂತ್ರಗಳನ್ನು ನಾಲ್ಕನೆಯ ಭಾಗದಲ್ಲಿ ಕೊಡಲಾಗಿದೆ. ಇವುಗಳನ್ನು ಎಲ್ಲ ಸ್ತ್ರೀಯರೂ (ವಿವಾಹಿತರು ಹಾಗೂ ಅವಿವಾಹಿತರೂ) ಮತ್ತು ಪುರುಷರೂ ನೇಮದಿಂದ ಪಾರಾಯಣ ಮಾಡಿದರೆ ಶ್ರೀಹರಿವಾಯುಗುರುಗಳ ಅನುಗ್ರಹದಿಂದ ತಮ್ಮ ಎಲ್ಲ ಮನೋಬಯಕೆಗಳನ್ನು ಶೀಘ್ರದಲ್ಲಿ ಪಡೆಯಬಹುದೆಂದು ಜ್ಞಾನಿವರೇಣ್ಯರಾದ ಶ್ರೀಹರಿದಾಸರೇ ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ. **ಈ ನಾಲ್ಕನೆಯ ಭಾಗದಲ್ಲಿ ಮೊದಲು ಶ್ರೀವಾದಿರಾಜ ವಿರಚಿತ ರುಕ್ಮಿಣಿಯ ಓಲೆ, ಶ್ರೀನಿವಾಸಕಲ್ಯಾಣ ಮತ್ತು ಲಕ್ಷ್ಮೀಶೋಭಾನ ಹಾಡುಗಳಲ್ಲದೇ ಶ್ರೀಪುರಂದರದಾಸವಿರಚಿತ ಶ್ರೀನಿವಾಸ ಕಲ್ಯಾಣ, ಶ್ರೀಪ್ರಸನ್ನ ಶ್ರೀನಿವಾಸದಾಸ ಕೃತ ಹಾಗೂ ಶ್ರೀಅನಂತಾದ್ರೀಶ ಕೃತ ಶ್ರೀನಿವಾಸಕಲ್ಯಾಣಗಳು, ಶ್ರೀವಿಜಯದಾಸರ ಒಂದು ಕೀರ್ತನೆ, ಶ್ರೀಗುರುವಿಜಯ ವಿಠಲಕೃತ ವೈವಾಹಸುಳಾದಿ, ಶ್ರೀಗುರುಜಗನ್ನಾಥದಾಸ ವಿರಚಿತ ಶ್ರೀನಿವಾಸ ಸ್ತವರಾಜ ಹಾಗೂ ಲಕ್ಷ್ಮೀ ಹೃದಯ, ಶ್ರೀಸತ್ಯನಾರಾಯಣ ಹಾಡು** ಇವುಗಳನ್ನೆಲ್ಲ ಕಾಣಬಹುದು. ಕೊನೆಗೆ ಕನ್ಯಾಮಣಿಗಳು ವಿವಾಹಕ್ಕಾಗಿ ಗುರೂಪದೇಶ ಪೂರ್ವಕ ಜಪಿಸಬೇಕಾದ ಭಾಗವತಾದಿ ಪುರಾಣೋಕ್ತ ಕೆಲವು **ಮಂತ್ರಗಳನ್ನು** ಕೊಡಲಾಗಿದೆ. ಹೀಗೆ ಇವೆಲ್ಲವುಗಳ ಸೇರ್ಪಡೆಯಿಂದ ಈ ನಾಲ್ಕನೆಯ ಭಾಗವು ಪಾರಾಯಣ ಪ್ರಕರಣದ ತನ್ಮೂಲಕ ಸಾಧನದೀಪಿಕೆಯ ಉಪಯುಕ್ತತೆಯನ್ನು ಹೆಚ್ಚಿಸಿರುವದೆಂದು ಭಾವಿಸಿದ್ದೇನೆ.

***

## ಭಾಗ ೧

### ಶ್ರೀಮದ್ವಾದಿರಾಜಕೃತ ವಿರಾಟಮೂರ್ತಿ ಧ್ಯಾನ

ಪದ್ಮನಾಭನ ಪಾದ ಪದ್ಮಗಳಿಗೆ ನಮೋ ಎಂಬೆ ವಿದ್ಯಾ ।
ಬುದ್ಧಿಕೊಡುವ ಹರಿಯ ಪಾದಪದ್ಮಕ್ಕೆರಗುವೆ ।
ಬ್ರಹ್ಮವಾಯು ಸರಸ್ವತೀ ಭಾರತೀ ಉಮಾಪತಿ ।
ಗರುಡ ಶೇಷಾದಿಗಳಿಗೆ ನಮೋ ಎಂಬೆನು ॥ ೧ ॥

ಲೇಸು ಕೊಡುವ ಗುರುಗಳಿಗೆ ಅಶೇಷರಿಗೆ ವಂದಿಸುವೆ ।
ವಾಸುದೇವರ ಕಥೆಯ ಪೇಳ್ವೆ ದ್ವಿತೀಯ ಸ್ಕಂಧದಲಿ
ರಾಯ ಪ್ರಶ್ನೆ ಮಾಡಿದಾ ಉಪಾಯ ಬಂಧಮೋಕ್ಷಗಳಿಗೆ ।
ಧ್ಯೇಯ ವಸ್ತು ದಾವದು ಜಪ್ಯದಾವದು ॥ ೨ ॥

ಪ್ರಶ್ನ ವಚನ ಕೇಳಿ ಶುಕನು ಬಹಳ ಸಂತೋಷದಿಂದ ।
ಉತ್ತರವ ನೀಡಲೂದ್ಯುಕ್ತನಾದನು ।

ಅಣುರೂಪಿ ಪರಮಾತ್ಮ ಗುಣಗಳನರಿಯದೆ ।
ಗೃಹಸ್ಥ ಕರ್ಮಂಗಳಿಗೆ ಗೃಹಸ್ಥರಿಗೆ ॥ ೩ ॥

ಕೇಳಬೇಕಾದ ವಸ್ತುಗಳಿಗೆ ಸಾರಭೂತನಾದ ।
ಪರಕೆ ಪರಮಾತ್ಮ ಪರರಿಗೆ ಸಂಭೂತ ।
ಪರೋಪಕಾರ ಪುಣ್ಯಶ್ಲೋಕ ಇಂಥಾ ಪ್ರಶ್ನ ।
ವನ್ನು ಹೇಳಲಿಕ್ಕೆ ಅತ್ಯಾವಶ್ಯಕಾದದ್ದು ॥ ೪ ॥

ನಿದ್ರೆ ಭಾಗದಿಂದ ಅರ್ಧ ಆಯುಸ್ಸು ಹೋಯಿತು ।
ಹಗಲು ಹೋಯಿತು ವ್ಯರ್ಥ ಉದರಂಭರಣದಲಿ ।
ತನಗೆ ದೈನ್ಯ ತಂದು ಕೊಡುವ ದೇಹಾಪತ್ಯ ದಾರರಲ್ಲಿ ।
ಸಕ್ತನಾಗಿರೋದು ಕಂಡು ಕಾಣದೀಹನು ॥ ೫ ॥

ಸರ್ವರಂತರ್ಯಾಮಿ ಸರ್ವೈಶ್ವರ್ಯ ಸಂಪನ್ನ ।
ಸರ್ವರಿಗೆ ಬಂಧ ಮೋಕ್ಷದ ಕಾರಣ ।
ಬಂಧ ಮೋಕ್ಷೇಚ್ಛುಗಳಿಗೆ ಸೇವ್ಯ ಕೀರ್ತ್ಯ ಸ್ಮರ್ತವ್ಯವು ।
ಶ್ರವಣದಿಂದ ಸಕಲ ದೋಷವನ್ನು ಕಳೆವೋದು ॥ ೬ ॥

ಹರಿಯಾನುಗ್ರಹವಿಲ್ಲದೇ ಹುಟ್ಟು ಬಂಧ ಹೋಗದು ।
ಭಕ್ತರಿಗೆ ಹರಿಯಾನುಗ್ರಹವೆಂಬುದು ಸಿದ್ಧವು ।
ಶಾಸ್ತ್ರ ತತ್ವಜ್ಞಾನ ಯೋಗ, ನಿಷ್ಠೆ ಉಳ್ಳವರಿಗೆ ।
ಜನ್ಮ ಸಫಲವಾಗುವದು, ಹರಿಯ ಸ್ಮರಣೆಯಿಂದ ॥ ೭ ॥

ಮುನಿಗಳು ಕೇಳು ರಾಯ, ಬಹಳ ವೈರಾಗ್ಯದಿಂದ ।
ಮುಕ್ತರಾಗಿ ಹರಿಯ ಕಥಾದರತಿಯಲೀಹರು ।
ದ್ವಾಪರ ಯುಗದಲಿ ಕೃಷ್ಣಾವತಾರ (ದ) ಮೊದಲು ಕೃಷ್ಣದ್ವೈಪಾ -।
ಯನರಿಂದ ಈ ಭಾಗವತ ಓದಿದೆ ॥ ೮ ॥

ಎಷ್ಟು ಓದಿದೆ ರಾಯ, ಅಷ್ಟು ನಿನಗೆ ಹೇಳುವೆನು ಭಕ್ತ ।
ಶ್ರೇಷ್ಠನೆಂದು ತಿಳಿದು, ಮಹಾಭಕ್ತಿಯಿಂದಲಿ ।
ಯಂಥಾ ಶಾಸ್ತ್ರ ಭಕ್ತಿಯಲ್ಲಿ ಹರಿರತಿ ಹುಟ್ಟುವದು ।
ಆ ಶಾಸ್ತ್ರ ಹೇಳುವೆ ಆಸಲ್ಯವಿಲ್ಲದೆ ॥ ೯ ॥

ಇದರಿಂದ ಕೇಳು ರಾಯ, ಹರಿಯ ನಾಮ ಕೀರ್ತನೆಯು ।
ಅಂತ್ಯ ಕಾಲಕೆ ಸ್ಮರಣೆಗೆ, ಕಾರಣೆಂತ ತಿಳದುಕೋ ।

ಭಕ್ತಿಪರವಶವಾದ, ಭಕ್ತಿ ಜ್ಞಾನ ಶಾಸ್ತ್ರ ಬೇಕು, ।
ದಿವಸಗಳು ಹತ್ತವು, ದೇವಪ್ರೀಯಗೆ ॥ ೧೦ ॥
ವಂದಿಷ್ಟು ಘಳಿಗೀ, ಸಾಧನದಿಂದ ಹರಿಯ ತೃಪ್ತಿ, ।
ಅಷ್ಟು ವೈರಾಗ್ಯದಿಂದ, ಮುಕ್ತನಾಗುವ ।
ಖಟ್ವಾಂಗರಾಯನು ನಷ್ಟ ಆಯುಸ್ಸು ತಿಳಿದು ।
ಯರಡು ಘಳಿಗೀ ವಿಷಯ ಬಿಟ್ಟು, ಹರಿಯ ನೈದಿದ ॥ ೧೧ ॥

ರಾಯ ನಿನಗೆ ಸಪ್ತದಿನದ , ಕ್ಲಪ್ತ ಆಯುಸ್ಸು ವುಂಟು, ।
ಮುಕ್ತಿ ಪಥಕೆ ಸಾಧನಾಗೋದೇನು ಮಾಡಿಕೊ ।
ಅಂತ್ಯಕಾಲ ತಿಳಿದು, ದೇಹಾಂತಕ್ಕೆ ನೀನಂಜಾದೆ, ವೈರಾಗ್ಯ ।
ಶಾಸ್ತ್ರ ವಿಷಯದಿಂದ ಹರಿಯಸಂಗ ಯೈದಿಸು ॥ ೧೨ ॥
ಸನ್ಯಾಸ ಧರ್ಮದಿಂದ ಚೆನ್ನಾಗಿ ಧೀರನಾಗಿ ।
ಪುಣ್ಯ ಜಲದ ತೀರದಲ್ಲಿ ಪೂತ ದೇಹವು ।
ಏಕಾಂತದಲ್ಲಿ ಏಕಾಸನಾವು ನೇಮಿಸಿ ।
ಏಕಚಿತ್ತನಾಗಿ ಏಕಭಕ್ತಿಯಿಂದಲಿ ॥ ೧೩ ॥

ಶ್ರವಣಜನ್ಯ ಜ್ಞಾನದಿಂದ ಶುದ್ಧವಾದ ಮನಸ್ಸನ್ನು ।
ವಿಷಯಗಳಿಗೆ ಯೆರಗದೇ ಇಂದ್ರಿಯ ನಿಗ್ರಹಿಸಿ ।
ಬಾಹ್ಯ ವಿಷಯದಿಂದ ಬಹು ಚಂಚಲಾದ ಮನಸ್ಸನ್ನು ।
ದೇಹವಾದರೂ ಹರಿಯ ಅಂಗದಲ್ಲಿಡಬೇಕು. ॥ ೧೪ ॥

ಹರಿಯ ಅಂಗಗಳ ವಳಗೊಂದಂಗ ಧ್ಯಾನ ಮಾಡಬೇಕು ।
ಅನ್ಯ ಮನಸ್ಕನಾಗದೇ ನಿಶ್ಚಿಂತಿಲಿರಬೇಕು ।
ಮನಸು ವಿಷ್ಣುಪಾದದಲ್ಲಿ ನಿಲಿಸಿ ಶ್ವಾಸ ನಿಗ್ರಹಿಸಿ ।
ಶ್ರೀಕಾರ ಬ್ರಹ್ಮವೇದ್ಯನೊಳಗೆ ನೇಮಿಸಿ ॥ ೧೫ ॥

ಹೀಂಗ ಹೇಳಲು ಶುಕನ ಮಾತು ಕೇಳಿ ರಾಯನು ।
ಮತ್ತ ಪ್ರಶ್ನಮಾಡಿದ ಉತ್ತರವನು ।
ಯಂಥಾ ವಿಷ್ಣುಪಾದದಲ್ಲಿ, ಮನಸು ತಾ ನಿಲ್ಲುವೋದು ।
ಧ್ಯಾನವಾದರು ಹ್ಯಾಂಗ ಮಾಡಬೇಕಾದ್ದು ॥ ೧೬ ॥

ಯಂಥಾ ಭಗವತ್ಪಥಾದಲ್ಲಿ, ಮನಸು ಸ್ವಸ್ಥ ನಿಲ್ಲುವೋದು ।
ಇದಷ್ಟು ಹೇಳು ಎಂದು ರಾಯ ಪ್ರಶ್ನ ಮಾಡಿದ ।

ಅಣುರೂಪಿ ಪರಮಾತ್ಮ ಗುಣಗಳನರಿಯದೆ ।
ಗೃಹಸ್ಥ ಕರ್ಮಂಗಳಿಗೆ ಗೃಹಸ್ಥರಿಗೆ ॥ ೩ ॥

ಕೇಳಬೇಕಾದ ವಸ್ತುಗಳಿಗೆ ಸಾರಭೂತನಾದ ।
ಪರಕೆ ಪರಮಾತ್ಮ ಪರರಿಗೆ ಸಂಭೂತ ।
ಪರೋಪಕಾರ ಪುಣ್ಯಶ್ಲೋಕ ಇಂಥಾ ಪ್ರಶ್ನ ।
ವನ್ನು ಹೇಳಲಿಕ್ಕೆ ಅತ್ಯಾವಶ್ಯಕಾದದ್ದು ॥ ೪ ॥

ನಿದ್ರೆ ಭಾಗದಿಂದ ಅರ್ಧ ಆಯುಸ್ಸು ಹೋಯಿತು ।
ಹಗಲು ಹೋಯಿತು ವ್ಯರ್ಥ ಉದರಂಭರಣದಲಿ ।
ತನಗೆ ದೈನ್ಯ ತಂದು ಕೊಡುವ ದೇಹಾಪತ್ಯ ದಾರರಲ್ಲಿ ।
ಸಕ್ತನಾಗಿರೋದು ಕಂಡು ಕಾಣದೀಹನು ॥ ೫ ॥

ಸರ್ವರಂತರ್ಯಾಮಿ ಸರ್ವೈಶ್ವರ್ಯ ಸಂಪನ್ನ ।
ಸರ್ವರಿಗೆ ಬಂಧ ಮೋಕ್ಷದ ಕಾರಣ ।
ಬಂಧ ಮೋಕ್ಷೇಚ್ಛುಗಳಿಗೆ ಸೇವ್ಯ ಕೀರ್ತ್ಯ ಸ್ಮರ್ತವ್ಯವು ।
ಶ್ರವಣದಿಂದ ಸಕಲ ದೋಷವನ್ನು ಕಳೆವೋದು ॥ ೬ ॥

ಹರಿಯಾನುಗ್ರಹವಿಲ್ಲದೇ ಹುಟ್ಟು ಬಂಧ ಹೋಗದು ।
ಭಕ್ತರಿಗೆ ಹರಿಯಾನುಗ್ರಹವೆಂಬುದು ಸಿದ್ಧವು ।
ಶಾಸ್ತ್ರ ತತ್ವಜ್ಞಾನ ಯೋಗ, ನಿಷ್ಠೆ ಉಳ್ಳವರಿಗೆ ।
ಜನ್ಮ ಸಫಲವಾಗುವದು, ಹರಿಯ ಸ್ಮರಣೆಯಿಂದ ॥ ೭ ॥

ಮುನಿಗಳು ಕೇಳು ರಾಯ, ಬಹಳ ವೈರಾಗ್ಯದಿಂದ ।
ಮುಕ್ತರಾಗಿ ಹರಿಯ ಕಥಾದರತಿಯಲೀಹರು ।
ದ್ವಾಪರ ಯುಗದಲಿ ಕೃಷ್ಣಾವತಾರ (ದ) ಮೊದಲು ಕೃಷ್ಣದ್ವೈಪಾ -।
ಯನರಿಂದ ಈ ಭಾಗವತ ಓದಿದೆ ॥ ೮ ॥

ಎಷ್ಟು ಓದಿದೆ ರಾಯ, ಅಷ್ಟು ನಿನಗೆ ಹೇಳುವೆನು ಭಕ್ತ ।
ಶ್ರೇಷ್ಠನೆಂದು ತಿಳಿದು, ಮಹಾಭಕ್ತಿಯಿಂದಲಿ ।
ಯಂಥಾ ಶಾಸ್ತ್ರ ಭಕ್ತಿಯಲ್ಲಿ ಹರಿರತಿ ಹುಟ್ಟುವದು ।
ಆ ಶಾಸ್ತ್ರ ಹೇಳುವೆ ಆಸಲ್ಯವಿಲ್ಲದೆ ॥ ೯ ॥

ಇದರಿಂದ ಕೇಳು ರಾಯ, ಹರಿಯ ನಾಮ ಕೀರ್ತನೆಯು ।
ಅಂತ್ಯ ಕಾಲಕೆ ಸ್ಮರಣೆಗೆ, ಕಾರಣೆಂತ ತಿಳದುಕೋ ।

ಭಕ್ತಿಪರವಶವಾದ, ಭಕ್ತಿ ಜ್ಞಾನ ಶಾಸ್ತ್ರ ಬೇಕು, ।
ದಿವಸಗಳು ಹತ್ತವು, ದೇವಪ್ರೀಯಗೆ ॥ ೧೦ ॥
ವಂದಿಷ್ಟು ಘಳಿಗೀ, ಸಾಧನದಿಂದ ಹರಿಯ ತೃಪ್ತಿ, ।
ಅಷ್ಟು ವೈರಾಗ್ಯದಿಂದ, ಮುಕ್ತನಾಗುವ ।
ಖಟ್ವಾಂಗರಾಯನು ನಷ್ಟ ಆಯುಸ್ಸು ತಿಳಿದು ।
ಯರಡು ಘಳಿಗೀ ವಿಷಯ ಬಿಟ್ಟು ಹರಿಯ ನೈದಿದ ॥ ೧೧ ॥

ರಾಯ ನಿನಗೆ ಸಪ್ತದಿನದ , ಕ್ಲಪ್ತ ಆಯುಸ್ಸು ವುಂಟು, ।
ಮುಕ್ತಿ ಪಥಕೆ ಸಾಧನಾಗೋದೇನು ಮಾಡಿಕೊ ।
ಅಂತ್ಯಕಾಲ ತಿಳಿದು, ದೇಹಾಂತಕ್ಕೆ ನೀನಂಜಾದೆ, ವೈರಾಗ್ಯ ।
ಶಾಸ್ತ್ರ ವಿಷಯದಿಂದ ಹರಿಯಸಂಗ ಯ್ಯೆದಿಸು ॥ ೧೨ ॥
ಸನ್ಯಾಸ ಧರ್ಮದಿಂದ ಚೆನ್ನಾಗಿ ಧೀರನಾಗಿ ।
ಪುಣ್ಯ ಜಲದ ತೀರದಲ್ಲಿ ಪೂತ ದೇಹವು ।
ಏಕಾಂತದಲ್ಲಿ ಏಕಾಸನಾವು ನೇಮಿಸಿ ।
ಏಕಚಿತ್ತನಾಗಿ ಏಕಭಕ್ತಿಯಿಂದಲಿ ॥ ೧೩ ॥

ಶ್ರವಣಜನ್ಯ ಜ್ಞಾನದಿಂದ ಶುದ್ಧವಾದ ಮನಸ್ಸನ್ನು ।
ವಿಷಯಗಳಿಗೆ ಯೆರಗದೇ ಇಂದ್ರಿಯ ನಿಗ್ರಹಿಸಿ ।
ಬಾಹ್ಯ ವಿಷಯದಿಂದ ಬಹು ಚಂಚಲಾದ ಮನಸ್ಸನ್ನು ।
ದೇಹವಾದರೂ ಹರಿಯ ಅಂಗದಲ್ಲಿಡಬೇಕು. ॥ ೧೪ ॥

ಹರಿಯ ಅಂಗಗಳ ವಳಗೊಂದಂಗ ಧ್ಯಾನ ಮಾಡಬೇಕು ।
ಅನ್ಯ ಮನಸ್ಕನಾಗದೇ ನಿಶ್ಚಿಂತಿಲಿರಬೇಕು ।
ಮನಸು ವಿಷ್ಣುಪಾದದಲ್ಲಿ ನಿಲಿಸಿ ಶ್ವಾಸ ನಿಗ್ರಹಿಸಿ ।
ಶ್ರೀಕಾರ ಬ್ರಹ್ಮವೇದ್ಯನೊಳಗೆ ನೇಮಿಸಿ ॥ ೧೫ ॥

ಹೀಂಗ ಹೇಳಲು ಶುಕನ ಮಾತು ಕೇಳಿ ರಾಯನು ।
ಮತ್ತ ಪ್ರಶ್ನಮಾಡಿದ ಉತ್ತರವನು ।
ಯಂಥಾ ವಿಷ್ಣುಪಾದದಲ್ಲಿ, ಮನಸು ತಾ ನಿಲ್ಲುವೋದು ।
ಧ್ಯಾನವಾದರು ಹ್ಯಾಂಗ ಮಾಡಬೇಕಾದ್ದು ॥ ೧೬ ॥

ಯಂಥಾ ಭಗವತ್ಪಥಾದಲ್ಲಿ, ಮನಸು ಸ್ವಸ್ಥ ನಿಲ್ಲುವೋದು ।
ಇದಷ್ಟು ಹೇಳು ಎಂದು ರಾಯ ಪ್ರಶ್ನ ಮಾಡಿದ ।

ಪ್ರಶ್ನ ವಚನ ಕೇಳಿ ಶುಕನು, ಬಹಳ ಸಂತೋಷದಿಂದ ।
ಉತ್ತರವ ನೀಡಲೂದ್ಯುಕ್ತನಾದನು ॥ ೧೭ ॥

ಆಸನ ಶ್ವಾಸಜಯ ವಿಷಯ ಇಂದ್ರಿಯ ಜಯಗಳಿಗೆ ।
ಸ್ಥೂಲ ಭಗವದ್ರೂಪದಲ್ಲಿ ಮನಸು ನಿಲ್ಲೋದು ।
ಸ್ಥೂಲಕಿಂತ ಸ್ಥೂಲ ಬ್ರಹ್ಮಾಂಡ ಶರೀರವು ।
ಶಿಲಾಪ್ರತಿಮೆಯಂತೆ ಹರಿಯ ಶರೀರವೆಂಬೋದು ॥ ೧೮ ॥

ಪಂಚ ಮಹಾಭೂತ ಮಹತ್ತತ್ವಾಹಂಕಾರ ತತ್ವ ।
ವಿಕೃತವಾಗದ ದೇಹ ವಿರಾಟ ದೇಹವು ।
ವಿರಾಟಧ್ಯಾನ ಹೇಳಿದವರಿಗೆ ವೈಧವ್ಯದೋಷ ಹೋಗೋದು ।
ಮಾನ ದೋಷ ಹೋಗುವದು ಮುಕ್ತಿ ಬಾಹೋದು ॥ ೧೯ ॥

ಪಾದ ಮೂಲದಲ್ಲಿ ಪಾತಾಳಲೋಕ ಹುಟ್ಟಿತು ।
ಪಾದ ಅಗ್ರದಲ್ಲಿ ಮಹಾತಳ ಹುಟ್ಟಿತು ।
ರಸಾತಳ ಹುಟ್ಟಿತು ಪಾದ ದ್ವಯಗಳಿಂದ ।
ತಳಾತಳ ಹರಿಯ ಜಂಘೆಯಿಂದ ಹುಟ್ಟಿತು ॥ ೨೦ ॥

ಸುತಲವು ಹುಟ್ಟಿತು ಹರಿಯ ಜಾನುದ್ವಯಗಳಿಂದ ।
ತೊಡೆಗಳಿಂದ ಹುಟ್ಟಿದಾವು ಅತಲ ವಿತಲವು ।
ಭೂಪ ನಿಮ್ನ ಜಘ್ನದಿಂದ ಮಹಾತಲ ಹುಟ್ಟಿತು ।
ನಾಭಿಯಿಂದ ರಸಾತಲ ಒಂದೇ ಹುಟ್ಟಿತು ॥ ೨೧ ॥

ಹರಿಯ ವಕ್ಷಸ್ಥಳದಿಂದ ಜ್ಯೋತಿರ್ಲೋಕ ಹುಟ್ಟಿತು ।
ಕಂಠದಿಂದ ಹುಟ್ಟಿತು ಮಹರ್ಲೋಕವು ।
ಹರಿಯ ವದನದಿಂದಲೀ ಜನೋಲೋಕ ಹುಟ್ಟಿತು ।
ಲಲಾಟದಿಂದ ಹುಟ್ಟಿತು ತಪೋಲೋಕವು ॥ ೨೨ ॥

ಸತ್ಯಲೋಕ ಹರಿಯ ಶಿರಸ್ಸಿನಿಂದ ಹುಟ್ಟಿತು ।
ಲೋಕ ಪಾಲಕರು ಹುಟ್ಟಿದಾರು ಬಾಹುಗಳಿಂದಲೀ ।
ಕರ್ಣಗೋಲಿಕಾದಿಂದ ದಿಕ್ಕುಗಳು ಹುಟ್ಟಿದವು ।
ಶ್ರೋತ್ರದಿಂದ ಹುಟ್ಟಿದಾವು ಬಹಳ ಶಬ್ದಗಳು ॥ ೨೩ ॥

ಅಶ್ವಿನೀಗಳು ಹರಿಯ ನಾಸಿಕದಿಂದ ಹುಟ್ಟಿದಾರು ।
ಗಂಧಗಳು ಹುಟ್ಟಿದಾವು ಘ್ರಾಣದಿಂದಲೀ ।

ವಿಷ್ಣುಮುಖದಿಂದ ಇಂದ್ರಾಗ್ನಿಯೂ ಜನಿಸಿದಾರು ।
ಚಕ್ಷುರ್ಗೋಲಕದಿಂದ ದ್ಯೌರ್ಲೋಕ ಹುಟ್ಟಿತು ॥ ೨೪ ॥

ಚಕ್ಷುರಿಂದ್ರಿಯದಿಂದ ಸೂರ್ಯ ತಾ ಜನಿಸಿದಾ ।
ಯವಿಗಳಿಂದ ದೇವ ಮಾನುಷಾದಿಗಳಾದವು ।
ಭ್ರೂಭ್ರಮಣಗಳಿಂದ ಬ್ರಹ್ಮಸ್ಥಾನ ಹುಟ್ಟಿತು ।
ತಾಲುನಿಂದ ಹುಟ್ಟಿದಾವು ಸಕಲ ಉದಕವು ॥ ೨೫ ॥

ಜಿಹ್ವೇಂದ್ರಿಯದಿಂದ ರಸಗಳು ಹುಟ್ಟಿದಾವು ।
ದಂತದಿಂದ ಹುಟ್ಟಿದಾವು ನಕ್ಷತ್ರಂಗಳು ।
ದಂಷ್ಟ್ರದಿಂದ ಅರ್ಯಮೇಂದು ದೇವತೆಗಳು ಜನಿಸಿದಾರು ।
ಹರಿಯ ವಾಕ್ಯದಿಂದ ಜನಿಸಿದಾವು ವೇದರಾಶಿಯು ॥ ೨೬ ॥

ಹಾಸದಿಂದ ಜನರ ಉನ್ಮಾದ ಶಕ್ತಿ ಹುಟ್ಟಿತು ।
ಅಪಾಂಗದಿಂದ ವಿಶ್ವ ಸೃಷ್ಟಿಯಾಯಿತು. ।
ಉತ್ತರೋಷ್ಠದಿಂದ ಲಜ್ಜೆ ಅಪರದಿಂದ ಲೋಭವು ।
ಧರ್ಮವೆಂಬುದು ಹರಿಯ ಸ್ತನದಿಂದಾಯಿತು ॥ ೨೭ ॥

ಅಧರ್ಮ ಮಾರ್ಗಗಳು ಹಿಂಭಾಗದಿಂದ ಹುಟ್ಟಿದಾವು ।
ಗುಹ್ಯೇಂದ್ರಿಯದಿಂದ ಪ್ರಜಾಪತಿ ದಕ್ಷ ಹುಟ್ಟಿದರು ।
ಹರಿಯ ವೃಷಣದಿಂದಲೀ ಭಿನ್ನತಾ ಹುಟ್ಟಿತು ।
ಶಬ್ದದಿಂದ ವೈದಿಕ ಲೌಕಿಕ ವಾಕ್ಯ ಹುಟ್ಟಿತು ॥ ೨೮ ॥

ಅದ್ರಿಗಳು ಹುಟ್ಟಿದಾವು ಅಸ್ಥಿ ಸಮುದಾಯದಿಂದ ।
ನದಿಗಳು ಹುಟ್ಟಿದಾವು ನಾಡಿಯಿಂದಲೀ ।
ಹರಿಯ ರೋಮಗಳಿಂದ ವೃಕ್ಷಗಳು ಹುಟ್ಟಿದಾವು ।
ಅನ್ನಗಳು ಹುಟ್ಟಿದಾವು ವೀರ್ಯದಿಂದಲೀ ॥ ೨೯ ॥

ಶ್ವಾಸದಿಂದ ವಾಯುವು ಗಮನದಿಂದ ಆಯುಸ್ಸು ।
ಕರ್ಮದಿಂದ ಗುಣತ್ರಯ ಪ್ರವಾಹ ಹುಟ್ಟಿತು ।
ಕುಕ್ಷಿಯಿಂದ ಹುಟ್ಟಿದಾವು ಸಪ್ತ ಸಮುದ್ರಗಳು ।
ವಿಚಾರದಿಂದ ಸ್ವಾಯಂಭುವ ಮನುವು ಹುಟ್ಟಿದಾ ॥ ೩೦ ॥

ಹರಿಯ ಕೇಶಗಳಿಂದ ಮೇಘಗಳು ಹುಟ್ಟಿದಾವು ।
ಸಂಧ್ಯಾಕಾಲಗಳು ಹರಿಯ ವಸನದಿಂದಲೀ ।
ಹರಿಯ ಹೃದಯದಿಂದ ಅವ್ಯಕ್ತ ತತ್ವ ಹುಟ್ಟಿತು ।
ದೇವ ಮನಸಿನಿಂದ ಚಂದ್ರಮನು ಹುಟ್ಟಿದಾ ॥ ೩೦ ॥

ಹರಿಯ ಬುದ್ಧಿಯಿಂದ ವಿಜ್ಞಾನ ತತ್ವ ಹುಟ್ಟಿತು ।
ಅಂತಃಕರಣದಿಂದ ರುದ್ರನು ಹುಟ್ಟಿದಾ ।
ಹರಿಯ ನಖರಗಳಿಂದ ಅಶ್ವತ್ಥವೃಕ್ಷಗಳು ।
ಗಜಗಳೂ, ಅಶ್ವಗಳೂ ಜನನವಾದವು ॥ ೩೨ ॥

ಸಿಂಹ ಮೊದಲಾದ ಸರ್ವ ಮೃಗಗಳು ಹುಟ್ಟಿದಾವು ।
ಪಶುಗಳು ಹುಟ್ಟಿದಾವು ಶ್ರೋಣಿ ದೇಶದಿ ।
ಗಂಧರ್ವರು ವಿದ್ಯಾಧರರು ಚಾರಣಾಪ್ಸರ ಸ್ತ್ರೀಯರು ।
ಹರಿಯ ಸ್ವರ ಸ್ಮರಣೆಯಿಂದ ಜನಿಸಿದರು ॥ ೩೩ ॥

ಹರಿಯ ಮುಖದಿಂದಲೀ ಬ್ರಾಹ್ಮಣ ಜಾತಿ ಹುಟ್ಟಿತು ।
ಬಾಹುದ್ವಯಗಳಿಂದ ಕ್ಷತ್ರಿಯ ಜಾತಿ ಹುಟ್ಟಿತು ।
ಹರಿಯ ತೊಡೆಗಳಿಂದಲೀ ವೈಶ್ಯ ಜಾತಿ ಹುಟ್ಟಿತು ।
ಪಾದದ್ವಯದಿಂದ ಶೂದ್ರ ಜಾತಿ ಹುಟ್ಟಿತು ॥ ೩೪ ॥

ಹರಿಯ ಮಧ್ಯ ದೇಹದಿಂದ ಹವ್ಯಕವ್ಯ ಹುಟ್ಟಿತು ।
ಸಾಧನಾವು ಹುಟ್ಟಿದಾವು ಸರ್ವ ದೇಹದಿ ।
ಹರಿಯ ವೀರ್ಯದಿಂದಲೀ ಸ್ವಾಹಾ ಸ್ವಧಾ ಹುಟ್ಟಿದವು ।
ಉಪಾಯದಿಂದ ಸರ್ವ ಯಜ್ಞಗಳು ಹುಟ್ಟಿದವು ॥ ೩೫ ॥

ಹೀಂಗ ರಾಯಗೆ ಶುಕರು ವಿರಾಟ್ ಮೂರ್ತಿ ಧ್ಯಾನ ಹೇಳಿ ।
ದ್ವಿತೀಯ ಸ್ಕಂಧದಲಿ ಪ್ರಥಮಾಧ್ಯಾಯ ಮುಗಿಸಿದಾ ।
ವಿರಾಟ ಮೂರ್ತಿ ಧ್ಯಾನಕಿಂತಾ ಉತ್ತಮವಾದ್ದು ಇಲ್ಲವೆಂದು
ನಾನು ನಿನಗೆ ಹೇಳುವೆನು ಯಲೋ ರಾಯನೇ ॥ ೩೬ ॥

ವಿರಾಟ್ ಮೂರ್ತಿ ಧ್ಯಾನವನ್ನು ಹೇಳಿ ಕೇಳಿದವರಿಗೆ ।
ಸಾಯುಜ್ಯಪದವನೀವ ನಮ್ಮ ಹಯವದನನು ॥ ೩೭ ॥

॥ ಇತಿ ಶ್ರೀ ಮದ್ವಾದಿರಾಜ ಕೃತ ಪ್ರಾಕೃತ ವಿರಾಟಮೂರ್ತಿ ಧ್ಯಾನಂ ಸಂಪೂರ್ಣಂ ॥
ಶ್ರೀಕೃಷ್ಣಾರ್ಪಣಮಸ್ತು ॥

## ಶ್ರೀವರದೇಂದ್ರತೀರ್ಥಪೂಜ್ಯಚರಣಕೃತ
## "ಪ್ರಾಕೃತತಂತ್ರಸಾರ"

**ರಾಗ - ಮಧ್ಯಮಾವತೀ** **ತಾಳ - ಝಂಪಾ**

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ । ಪಾಹಿ ಪದ್ಮಾಲಯನಿಕೇತನ ಸದಾ ||ಪಲ್ಲ|| ಜಯತು ಚತುರಾನನಭವೇಂದ್ರಾದಿ ವಿನುತ ಜಯತು ಚತುರಾನನ ರಮಾವಲ್ಲಭಾ । ಜಯತು ಸಂಪೂರ್ಣಚಿತ್ಸುಖಮುಖ ಸುಗುಣ ನಿಲಯ ಜಯತು ಜನ್ಮಾದಿಕಾರಣ ದೋಷಹಾ || ೧ || ಕಮಲಾಕ್ಷ ಪರಮ ಸಂಭ್ರಮದಿಂದ ಲಕುಮಿ ಕರಕಮಲದಿಂ ಸೇವೆಗೊಳುತಿರಲು ಆಗ । ಅಮರನಿಕರಾರಾಧ್ಯ ಕಮಲಾಸನನು ಬಂದು ನಮಿಸಿ ಬಿನ್ನೈಸಿದನು ತನ್ನ ಪಿತಗೆ || ೨ || ಆವ ದೇವೋತ್ತಮನು ಆವಾವ ಗುಣಗಳಿಹವಾವಾವ ಶಬ್ದವಾಚ್ಯಾವರೀತಿ । ಈ ವಿಚಾರವನು ಪೇಳೆನಲು ನಸುನಗುತ ರಾಜೀವಸಂಭವಗೆ ಇಂತೆಂದು ನುಡಿದಾ || ೩|| ವನಜಸಂಭವ ಕೇಳು ನಾನೇ ಸರ್ವೋತ್ತಮನು ಯನಗನಂತಾನಂತ ಮಂಗಳಗುಣ । ಪ್ರಣವವಾಚ್ಯನು ನಾನೆ ಅಷ್ಟವರ್ಣೋಪೇತ ಪ್ರಣವದ ವಿಚಾರವನು ಪೇಳ್ವೆ ನಿನಗೆ ||೪ || ಸಾದರದಿ ಕೇಳಿನ್ನು ಅಕಾರ ಉಕಾರ ಮಕಾರ ನಾದ ಬಿಂದೂ ಘೋಷ ಶಾಂತಾತಿಶಾಂತ । ಈ ದಿವ್ಯ ವರ್ಣದಲಿ ವಿಶ್ವತೈಜಸಪ್ರಾಜ್ಞ ವೋದಮಯ ತುರ್ಯಾತ್ಮ ಅಂತರಾತ್ಮ || ೫ || ಪರಮಾತ್ಮ ಜ್ಞಾನಾತ್ಮನೆಂಬಷ್ಟ ರೂಪದಿಂದಿರುತಿಹೆನು ವೇದಾದಿಯಲಿ ಸರ್ವದಾ । ಪರಮಋಷಿಗಳು ಈ ಮಹಾಮಂತ್ರ ಜಪಿಸೆನ್ನ ಪುರವನ್ನೈದುವರು ಸತ್ವರದಿಂದಲೀ || ೬|| ವಾರಿರುಹಸಂಭವನೇ ಕೇಳಕಾರದಲಿ ಹದಿನಾರು ಅಚ್ಚುಗಳು ಜನಿಸಿದವು ಕ್ರಮದಿ। ಚಾರು, ಅಜ, ಆನಂದ , ಇಂದ್ರೇಶ ಮೊದಲಾದ ಈರೆಂಟು ಮೂರ್ತಿಗಳು ವಿಶ್ವಜನಿತಾ || ೭|| ಉಮ ನಾದ ಬಿಂದು ಘೋಷಗಳಿಂದ ಕಚಟತಪ ವಿಮಲವರ್ಗಗಳು ಪುಟ್ಟಿದವು ಐದು । ಕಮಸಲಂಭವ ಕೇಳು ತೈಜಸ ಪ್ರಾಜ್ಞ ತುರ್ಯಾತ್ಮಾಂತರಾತ್ಮಮೂರ್ತಿಗಳಿಂದಲೀ || ೮ || ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿರಿಂಚಿ ಕೇಳ್ ಶಾಂತದಿಂ ಯರಲವಗಳೂ । ಸಂಚಿಂತಿಸುವುದು ಅತಿಶಾಂತದಿಂ ಶಷಸಹಳ ಪಂಚಾಕ್ಷರಂಗಳು ಜನಿಸಿದವು ಇಲ್ಲಿ || ೯ || ಪರಮಾತ್ಮ ಜ್ಞಾನಾತ್ಮರೂಪದಿಂದೊಂಭತ್ತು ನಿರುಪಮಸ್ವಮೂರ್ತಿಗಳು ಶೋಭಿಸಿದವು । ಪರಮೇಷ್ಠಿ ನಾರಾಯಣಾಷ್ಟಾಕ್ಷರಾ ಮಂತ್ರ ಪೊರೆವೆ ನಿನಗಾನು ಸಾಂಗೋಪಾಂಗದಿಂ || ೧೦ || ತಾರಗತ ಅಷ್ಟವರ್ಣಗಳಿಂದ ಓಂ ನಮೋ ನಾರಾಯಣಾಯ ಎಂಬೀ ಮಂತ್ರವು । ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳುಂಟು ಸಾರ ವಿಶ್ವಾದಿ ಪ್ರಣವಸ್ಥ ಭಿನ್ನ || ೧೧ || ಓಂ ಭೂಃ ಓಂ ಭುವಃ ಓಂ ಸುವಃ ಓಂ ಎಂಬ ಓಂಭೂರ್ಭುವಸ್ಸುವಃ ಈ ವ್ಯಾಹೃತೀ । ಅಂಬುಜೋದ್ಭವ ಪ್ರಣವಾದಿ ನಾಲ್ವರ್ಣದಿಂ ಸಂಭವಿಸಿತೀ ಮಂತ್ರ ಸುಲಭದಿಂದಾ || ೧೨ || ತನಯ ಕೇಳೀ ಮಂತ್ರಗತ ನಾಲ್ಕು ರೂಪಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣಾ । ಅನಘ ಶ್ರೀವಾಸುದೇವನ ಮೂರ್ತಿಗಳು ಚಿಂತನೆ ಮಾಡು ಈ ವ್ಯಾಹೃತಿಯಲಿ ಬಿಡದೇ || ೧೩ || ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ ಭಗವತೇ ವಾಸುದೇವಾಯ ಯಂಬ । ಯುಗಳ ಆರಕ್ಷರಾತ್ಮಕ ಮಂತ್ರಪ್ರತಿಪಾದ್ಯನಾ ಭಗವದ್ರೂಪಗಳ ಪೇಳ್ವೆ ನಾ ನಿನಗೆ || ೧೪ || ಕೇಶವ ನಾರಾಯಣನು ಮಾಧವನು ಗೋವಿಂದ

ಹರಿಯ ಕೇಶಗಳಿಂದ ಮೇಘಗಳು ಹುಟ್ಟಿದಾವು ।
ಸಂಧ್ಯಾಕಾಲಗಳು ಹರಿಯ ವಸನದಿಂದಲೀ ।
ಹರಿಯ ಹೃದಯದಿಂದ ಅವ್ಯಕ್ತ ತತ್ವ ಹುಟ್ಟಿತು ।
ದೇವ ಮನಸಿನಿಂದ ಚಂದ್ರಮನು ಹುಟ್ಟಿದಾ ॥ ೩೦ ॥

ಹರಿಯ ಬುದ್ಧಿಯಿಂದ ವಿಜ್ಞಾನ ತತ್ವ ಹುಟ್ಟಿತು ।
ಅಂತಃಕರಣದಿಂದ ರುದ್ರನು ಹುಟ್ಟಿದಾ ।
ಹರಿಯ ನಖರಗಳಿಂದ ಅಶ್ವತ್ಥವೃಕ್ಷಗಳು ।
ಗಜಗಳೂ, ಅಶ್ವಗಳೂ ಜನನವಾದವು ॥ ೩೧ ॥

ಸಿಂಹ ಮೊದಲಾದ ಸರ್ವ ಮೃಗಗಳು ಹುಟ್ಟಿದಾವು ।
ಪಶುಗಳು ಹುಟ್ಟಿದಾವು ಶ್ರೋಣಿ ದೇಶದಿ ।
ಗಂಧರ್ವರು ವಿದ್ಯಾಧರರು ಚಾರಣಾಪ್ಸರ ಸ್ತ್ರೀಯರು ।
ಹರಿಯ ಸ್ವರ ಸ್ಮರಣೆಯಿಂದ ಜನಿಸಿದರು ॥ ೩೩ ॥

ಹರಿಯ ಮುಖದಿಂದಲೀ ಬ್ರಾಹ್ಮಣ ಜಾತಿ ಹುಟ್ಟಿತು ।
ಬಾಹುದ್ವಯಗಳಿಂದ ಕ್ಷತ್ರಿಯ ಜಾತಿ ಹುಟ್ಟಿತು ।
ಹರಿಯ ತೊಡೆಗಳಿಂದಲೀ ವೈಶ್ಯ ಜಾತಿ ಹುಟ್ಟಿತು ।
ಪಾದದ್ವಯದಿಂದ ಶೂದ್ರ ಜಾತಿ ಹುಟ್ಟಿತು ॥ ೩೪ ॥

ಹರಿಯ ಮಧ್ಯ ದೇಹದಿಂದ ಹವ್ಯಕವ್ಯ ಹುಟ್ಟಿತು ।
ಸಾಧನಾವು ಹುಟ್ಟಿದಾವು ಸರ್ವ ದೇಹದಿ ।
ಹರಿಯ ವೀರ್ಯದಿಂದಲೀ ಸ್ವಾಹಾ ಸ್ವಧಾ ಹುಟ್ಟಿದವು ।
ಉಪಾಯದಿಂದ ಸರ್ವ ಯಜ್ಞಗಳು ಹುಟ್ಟಿದವು ॥ ೩೫ ॥

ಹೀಂಗ ರಾಯಗೆ ಶುಕರು ವಿರಾಟ್ ಮೂರ್ತಿ ಧ್ಯಾನ ಹೇಳಿ ।
ದ್ವಿತೀಯ ಸ್ಕಂಧದಲಿ ಪ್ರಥಮಾಧ್ಯಾಯ ಮುಗಿಸಿದಾ ।
ವಿರಾಟ ಮೂರ್ತಿ ಧ್ಯಾನಕಿಂತಾ ಉತ್ತಮವಾದ್ದು ಇಲ್ಲವೆಂದು
ನಾನು ನಿನಗೆ ಹೇಳುವೆನು ಯಲೋ ರಾಯನೇ ॥ ೩೬ ॥

ವಿರಾಟ್ ಮೂರ್ತಿ ಧ್ಯಾನವನ್ನು ಹೇಳಿ ಕೇಳಿದವರಿಗೆ ।
ಸಾಯುಜ್ಯಪದವನೀವ ನಮ್ಮ ಹಯವದನನು ॥ ೩೭ ॥

॥ ಇತಿ ಶ್ರೀ ಮದ್ವಾದಿರಾಜ ಕೃತ ಪ್ರಾಕೃತ ವಿರಾಟಮೂರ್ತಿ ಧ್ಯಾನಂ ಸಂಪೂರ್ಣಂ ॥
ಶ್ರೀಕೃಷ್ಣಾರ್ಪಣಮಸ್ತು ॥

## ಶ್ರೀವರದೇಂದ್ರತೀರ್ಥಪೂಜ್ಯಚರಣಕೃತ
## " ಪ್ರಾಕೃತತಂತ್ರಸಾರ "

**ರಾಗ - ಮಧ್ಯಮಾವತೀ** **ತಾಳ - ಝಂಪಾ**

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ । ಪಾಹಿ ಪದ್ಮಾಲಯನಿಕೇತನ ಸದಾ ||ಪಲ್ಲ|| ಜಯತು ಚತುರಾನನಭವೇಂದ್ರಾದಿ ವಿನುತ ಜಯತು ಚತುರಾನನ ರಮಾವಲ್ಲಭಾ । ಜಯತು ಸಂಪೂರ್ಣಚಿತ್ಸುಖಮುಖ ಸುಗುಣ ನಿಲಯ ಜಯತು ಜನ್ಮಾದಿಕಾರಣ ದೋಷಹಾ || ೧ || ಕಮಲಾಕ್ಷ ಪರಮ ಸಂಭ್ರಮದಿಂದ ಲಕುಮಿ ಕರಕಮಲದಿಂ ಸೇವೆಗೊಳುತಿರಲು ಆಗ । ಅಮರನಿಕರಾರಾಧ್ಯ ಕಮಲಾಸನನು ಬಂದು ನಮಿಸಿ ಬಿನ್ನೈಸಿದನು ತನ್ನ ಪಿತಗೆ || ೨ || ಆವ ದೇವೋತ್ತಮನು ಆವಾವ ಗುಣಗಳಿಹವಾವಾವ ಶಬ್ದವಾಚ್ಯಾವರೀತಿ । ಈ ವಿಚಾರವನು ಪೇಳೆನಲು ನಸುನಗುತ ರಾಜೀವಸಂಭವಗೆ ಇಂತೆಂದು ನುಡಿದಾ || ೩|| ವನಜಸಂಭವ ಕೇಳು ನಾನೇ ಸರ್ವೋತ್ತಮನು ಯನಗನಂತಾನಂತ ಮಂಗಳಗುಣ । ಪ್ರಣವವಾಚ್ಯನು ನಾನೆ ಅಷ್ಟವರ್ಣೋಪೇತ ಪ್ರಣವದ ವಿಚಾರವನು ಪೇಳ್ವೆ ನಿನಗೆ ||೪ || ಸಾದರದಿ ಕೇಳಿನ್ನು ಅಕಾರ ಉಕಾರ ಮಕಾರ ನಾದ ಬಿಂದೂ ಘೋಷ ಶಾಂತಾತಿಶಾಂತ । ಈ ದಿವ್ಯ ವರ್ಣದಲಿ ವಿಶ್ವತೈಜಸಪ್ರಾಜ್ಞ ವೋದಮಯ ತುರ್ಯಾತ್ಮ ಅಂತರಾತ್ಮ || ೫ || ಪರಮಾತ್ಮ ಜ್ಞಾನಾತ್ಮನೆಂಬಷ್ಟ ರೂಪದಿಂದಿರುತಿಹೆನು ವೇದಾದಿಯಲಿ ಸರ್ವದಾ । ಪರಮಋಷಿಗಳು ಈ ಮಹಾಮಂತ್ರ ಜಪಿಸೆನ್ನ ಪುರವನ್ನೈದುವರು ಸತ್ವರದಿಂದಲೀ || ೬|| ವಾರಿರುಹಸಂಭವನೇ ಕೇಳಕಾರದಲಿ ಹದಿನಾರು ಅಚ್ಚುಗಳು ಜನಿಸಿದವು ಕ್ರಮದಿ। ಚಾರು, ಅಜ, ಆನಂದ , ಇಂದ್ರೇಶ ಮೊದಲಾದ ಈರೆಂಟು ಮೂರ್ತಿಗಳು ವಿಶ್ವಜನಿತಾ || ೭|| ಉಮ ನಾದ ಬಿಂದು ಘೋಷಗಳಿಂದ ಕಚಟತಪ ವಿಮಲವರ್ಗಗಳು ಪುಟ್ಟಿದವು ಐದು । ಕಮಸಲಂಭವ ಕೇಳು ತೈಜಸ ಪ್ರಾಜ್ಞ ತುರ್ಯಾತ್ಮಾಂತರಾತ್ಮಮೂರ್ತಿಗಳಿಂದಲೀ || ೮ || ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿರಿಂಚಿ ಕೇಳ್ ಶಾಂತದಿಂ ಯರಲವಗಳೂ । ಸಂಚಿಂತಿಸುವುದು ಅತಿಶಾಂತದಿಂ ಶಷಸಹಳ ಪಂಚಾಕ್ಷರಂಗಳು ಜನಿಸಿದವು ಇಲ್ಲಿ || ೯ || ಪರಮಾತ್ಮ ಜ್ಞಾನಾತ್ಮರೂಪದಿಂದೊಂಭತ್ತು ನಿರುಪಮಸ್ವಮೂರ್ತಿಗಳು ಶೋಭಿಸಿದವು । ಪರಮೇಷ್ಠಿ ನಾರಾಯಣಾಷ್ಟಾಕ್ಷರಾ ಮಂತ್ರ ಪೊರೆವೆ ನಿನಗಾನು ಸಾಂಗೋಪಾಂಗದಿಂ || ೧೦ || ತಾರಗತ ಅಷ್ಟವರ್ಣಗಳಿಂದ ಓಂ ನಮೋ ನಾರಾಯಣಾಯ ಎಂಬೀ ಮಂತ್ರವು । ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳುಂಟು ಸಾರ ವಿಶ್ವಾದಿ ಪ್ರಣವಸ್ಥ ಭಿನ್ನ || ೧೧ || ಓಂ ಭೂಃ ಓಂ ಭುವಃ ಓಂ ಸುವಃ ಓಂ ಎಂಬ ಓಂಭೂರ್ಭುವಸ್ಸುವಃ ಈ ವ್ಯಾಹೃತೀ । ಅಂಬುಜೋದ್ಭವ ಪ್ರಣವಾದಿ ನಾಲ್ವರ್ಣದಿಂ ಸಂಭವಿಸಿತೀ ಮಂತ್ರ ಸುಲಭದಿಂದಾ || ೧೨ || ತನಯ ಕೇಳೀ ಮಂತ್ರಗತ ನಾಲ್ಕು ರೂಪಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣಾ । ಅನಘ ಶ್ರೀವಾಸುದೇವನ ಮೂರ್ತಿಗಳು ಚಿಂತನೆ ಮಾಡು ಈ ವ್ಯಾಹೃತಿಯಲಿ ಬಿಡದೇ || ೧೩ || ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ ಭಗವತೇ ವಾಸುದೇವಾಯ ಯಂಬ । ಯುಗಳ ಆರಕ್ಷರಾತ್ಮಕ ಮಂತ್ರಪ್ರತಿಪಾದ್ಯನಾ ಭಗವದ್ರೂಪಗಳ ಪೇಳ್ವೆ ನಾ ನಿನಗೆ || ೧೪ || ಕೇಶವ ನಾರಾಯಣನು ಮಾಧವನು ಗೋವಿಂದ

ಕ್ಲೇಶನಾಶನ ವಿಷ್ಣು ಮಧುಸೂದನಾ। ಶ್ರೀಶ ತ್ರಿವಿಕ್ರಮನು ವಾಮನ ಶ್ರೀಧರ ಹೃಷೀಕೇಶಾಂಬುರುಹನಾಭ ದಾಮೋದರಾ ॥೧೫॥ ತ್ರಿತಯ ಆವರ್ತಿ ಅಷ್ಟಾರ್ಣದಿಂ ಮೂರು ವ್ಯಾಹೃತಿಯಿಂದ ದ್ವಿಷಡಕ್ಷರೆರಡರಿಂದ ।, ಚತುರಾಸ್ಯ ಕೇಳು ಗಾಯತ್ರಿ ಉತ್ಪನ್ನವಾಯಿತು ಕೇಶವಾದಿ ಕೃಷ್ಣಾಂತರೂಪಾ ॥ ೧೬ ॥ ವಿತತವಾದುದು ಪುರುಷಸೂಕ್ತ ಗಾಯತ್ರಿಯಿಂದತಿಶಯದಿ ಪುರುಷಸೂಕ್ತದಲಿ ವೇದ । ತತಿಗಳುದಿಸಿದವು ನಿಗಮಾದಿ ಬ್ರಹ್ಮಸೂತ್ರ ಭಾರತ ಪಂಚರಾತ್ರಾದಿ ಆಗಮಗಳು ॥ ೧೭ ॥ ಶತಕೋಟಿ ಮೂಲರಾಮಾಯಣ ಪುರಾಣಗಳು ಸ್ಮೃತಿಸಮೂಹಗಳುಪಪುರಾಣಗಳು । ಇತರ ವೈದಿಕಸೂಕ್ತ (ವೇದೋಕ್ತ) ಶಬ್ದ ಜನಿಸಿದವು ಸಂತತವಾಚ್ಯ ನಾನೇ ಸಂದೇಹವಿಲ್ಲ ॥ ೧೮ ॥ ಉದಯಿಸುವ ರವಿಯಯವೋಲ್ಕಾಂತಿ ಜ್ಞಾನಾನಂದ ವೊದಲಾದ ದಿವ್ಯ ಗುಣಮಯ ಶರೀರಾ । ಸುದರುಶನದರಗದಾಂಬುಜಗಳಾಯುಧವೆನಗೆ ತ್ರಿದಶಗಣಮಯನು ಸರ್ವೇಶ ನಾನು ॥ ೧೯ ॥ ಈ ದಿಶೆಯಲ್ಲೆನ್ನ ಸೇವಿಪರು ಶ್ರೀ ಭೂದೇವಿ ಕೃದ್ಧೋಲ್ಕ ವಿಶ್ವಕೇಶವ ಮತ್ಸ್ಯಾದಿ । ಮದ್ರೂಪಗಣಮಧ್ಯಗನು ನಾನು ಬ್ರಹ್ಮಪ್ರತಿ ಪಾದ್ಯ ರತಿಭಕ್ತಿ ಸೇವ್ಯನು ಸಮರ್ಥ ॥ ೨೦ ॥ ಅರಿದರವರಾಭಯಾಂಕಿತ, ಚತುರ್ಭುಜನು ನಾಲ್ಕೆರಡು ರೂಪಂಗಳು ಪ್ರದೀಪವರ್ಣ । ಸರುವಾಭರಣಭೂಷಿತವಾದ ಮದ್ರೂಪ ನಿರುತ ಮೇಯವು ಮುಮುಕ್ಷುಗಳಿಂದಲಿ ॥ ೨೧ ॥ ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು ಈರಾರುವರ್ಣ ಗಾಯತ್ರಿಮಂತ್ರ । ಸಾರಮಾತ್ರ ಪುರುಷಸೂಕ್ತ ವೈಷ್ಣವಗಳಿವು ನೀರಜಾಸನ ಕೇಳು ಮಹಮಂತ್ರವು ॥ ೨೨ ॥ ಸೀತಾರಮಣ ಮೂಲರಾಮನತಿಹರುಷದಿ ವಿಧಾತಗುಪದೇಶಿಸಿದ ಈ ತೆರದಲಿ । ಪ್ರೀತಿಯಿಂದಲಿ ನಿರಂತರದಲಿದ ಪಠಿಸೆ ಶೇಷಾತಪತ್ರನು ಕಾಮಿತಾರ್ಥವೀವ (ಪ್ರೀತಿಯಿಂದಲಿ ದ್ವಾದಶಾವರ್ತಿ ಪಠಿಸಲು ವಿಧಾತಪಿತನು ಕಾಮಿತಾರ್ಥವೀವ) ॥ ೨೩ ॥ ಬ್ಯಾಗವಾಟದ ರಂಗನೊಲಿದ ಶ್ರೀನರಸಿಂಹ ಭಾಗವತರಣುಗ ಜಗನ್ನಾಥದಾಸ । ಬಾಗಿ ವಿಜ್ಞಾಪಿಸಲು ಕೈಕೊಂಡು ಪರಮಾನುರಾಗದಲಿ ಪೇಳಿದೆವು ತಂತ್ರಸಾರ ॥ ೨೪ ॥ ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ ವಿರಚಿಸಿದೆವೀ ಗ್ರಂಥ ಪದರೂಪದಿ । ಅರಸಿಕನು ನಿಂದಿಸಲು ಕುಂದಾವುದಿದಕೆ ಭಾಸ್ಕರನುದಯ ಘೂಕ ದೂಷಿಸಿದ ತೆರದಿ ॥ ೨೫ ॥ ಧರ್ಮಾರ್ಥ-ಕಾಮಮೋಕ್ಷಗಳೀವ ಗ್ರಂಥವಿದು ನಿರ್ಮಾಣ ಮಾಡಿಸಿದ ರಾಮಚಂದ್ರ। ಹೇಮಗರ್ಭಗೆ (ಭರ್ಮಗರ್ಭಗೆ) ಒಲಿದು ಪೇಳಿದ ಮಹಾಮಂತ್ರ ಮರ್ಮಗಳನರಿತು ಭಜಿಸುವನೆ ಧನ್ಯ ॥ ೨೬ ॥ ವರದೇಂದ್ರಮುನಿರಚಿತ ಈ ತಂತ್ರಸಾರವನು ಬರೆದೋದಿ ಕೇಳಿ ಮೋದಿಸುವ ಜನರ । ವರಮೂಲರಾಮವೇದವ್ಯಾಸರಿಹ ಪರದಿ ಕರುಣಿಪರು ಬೇಡಿದಿಷ್ಟಾರ್ಥಗಳನು ॥ ೨೭ ॥ ಮಂಗಳಂ ರಮಾಪತಿಗೆ ಮಂಗಳಂ ದ್ರುಹಿಣಪಿತಗೆ ಮಂಗಳಂ ದಶಪ್ರಮತಿಮುನಿಮಾನ್ಯಗೆ । ಮಂಗಳಂ ಶಿವೇಂದ್ರಾದಿ ಸುರನಿಕರಪೂಜ್ಯನಿಗೆ ಮಂಗಳಂ ಜಗದ್ವಿಲಕ್ಷಣರೂಪಗೆ ॥ ೨೮ ॥ ಇಪ್ಪತ್ತರೊಂಭತ್ತು ಪದಗಳೆಂಬತಿವಿಮಲ ಪುಷ್ಪಮಾಲಿಕೆ ಮೂಲರಾಮನಡಿಗೆ । ಅರ್ಪಿಸಿದೆವೀ ಸುಮನಧಾಮವನು ದಿನದಲ್ಲಿ ಪಪ್ಪದಿಹದೇ ಬುಧರ ಮಸ್ತಕದಲಿ ॥ ೨೯ ॥

॥ ಇತಿ ಶ್ರೀವರದೇಂದ್ರತೀರ್ಥಪೂಜ್ಯಚರಣಕೃತ ಪ್ರಾಕೃತತಂತ್ರಸಾರಂ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಶ್ರೀಪುರಂದರದಾಸ ವಿರಚಿತ
## ಆರೋಹಣ ತಾರತಮ್ಯ

**ರಾಗ ಸೌರಾಷ್ಟ್ರ** **ಝಂಪೆ ತಾಳ**

ಸತ್ಯ ಜಗತಿದು ಪಂಚಭೇದವು, ನಿತ್ಯ ಶ್ರೀಗೋವಿಂದನ । ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ॥ ಪ॥ ಜೀವ ಈಶಗೆ ಭೇದ ಸರ್ವತ್ರ ಜೀವಜೀವಕೆ ಭೇದವು । ಜೀವ ಜಡರೊಳು ಭೇದ ಜಡರೊಳು ಭೇದ ಜಡ ಪರಮಾತ್ಮಗೆ ॥ ೧॥ ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವಗಂಧರ್ವರು । ಜಾನಪಿತರಜಾನ ಕರ್ಮಜ ದಾನವಾರಿ ತತ್ತ್ವೇಶರು॥೨॥ ಗಣಪಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು । ಇನಜಗೆ ಸಮ ಚಂದ್ರಸೂರ್ಯರು ಮನುಸುತೆಯು ಹೆಚ್ಚು ಪ್ರವಹನು ॥ ೩॥ ದಕ್ಷಸಮ ಅನಿರುದ್ಧ ಗುರು ಶಚಿ ರತಿ ಸ್ವಾಯಂಭುವರಾರ್ವರು । ಪಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ॥ ೪॥ ದೇವ ಇಂದ್ರನಿಗಧಿಕ ಮಹರುದ್ರ ದೇವರಿಗೆ ಸಮ ಗರುಡನು । ಕೇವಲವು ಈ ಶೇಷ ರುದ್ರರು ದೇವಿ ಹೆಚ್ಚು ಸರಸ್ವತೀ ॥ ೫॥ ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು। ವಾಯುಮುಕ್ತಗೆ ಕೋಟಿಗುಣದಿಂದಧಿಕ ಶಕ್ತಳು ಶ್ರೀರಮಾ ॥ ೬॥ ಅನಂತ ಗುಣದಿಂ ಲಕುಮಿಗಧಿಕನು ಶ್ರೀಪುರಂದರ ವಿಠಲನು । ಘನ ಸಮರೂ ಇಲ್ಲ ಜಗದೊಳು ಹನುಮಹೃತ್ಪದ್ಮವಾಸಗೆ ॥ ೭॥

## ಶ್ರೀಜಗನ್ನಾಥದಾಸ ವಿರಚಿತ
## ಅವರೋಹಣ ತಾರತಮ್ಯ ಗದ್ಯರೂಪ

ವಿಷ್ಣು ಸರ್ವೋತ್ತಮನು ಜೀವಜಡಾತ್ಮಕ ಜಗದತ್ಯಂತಭಿನ್ನ ಸಚ್ಚಿದಾನಂದ ಸ್ವರೂಪ ಮುಕ್ತಾಮುಕ್ತ ಸುರಗಣ ಸೇವಿತ ಲಕ್ಷ್ಮೀನಾರಾಯಣನಿಗೆ ಅನಂತಾನಂತ ನಮಸ್ಕಾರಗಳು ॥೧॥ ನಾರಾಯಣನ ಪತ್ನಿ ಜ್ಞಾನಾನಂದ ಸ್ವರೂಪಳಾದ ಅನಂತಾನಂತ ಗುಣದಿಂದ ಹೀನಳಾದ ಮಹಾಲಕ್ಷ್ಮೀ ದೇವಿಗೆ ಅನಂತಾನಂತ ನಮಸ್ಕಾರಗಳು ॥ ೨॥ ಮಹಾಲಕ್ಷ್ಮೀ ಪುತ್ರರಾದ ಜಗದ್ಗುರುಗಳಾದ ಬ್ರಹ್ಮ ವಾಯುಗಳಿಗೆ ಅನಂತಾನಂತ ನಮಸ್ಕಾರಗಳು ॥ ೩॥ ವೇದಾಭಿಮಾನಿಗಳಾದ ಬ್ರಹ್ಮವಾಯುಗಳಿಗೆ ಸ್ತ್ರೀಯರಾದ ಸರಸ್ವತೀ ಭಾರತೀಯರಿಗೆ ಅನಂತಾನಂತ ನಮಸ್ಕಾರಗಳು ॥೪॥ ಬ್ರಹ್ಮವಾಯುಗಳಿಗೆ ಮಕ್ಕಳಾದ ಗರುಡ ಶೇಷ ರುದ್ರರಿಗೆ ಅನಂತಾನಂತ ನಮಸ್ಕಾರಗಳು ॥೫॥ ಶ್ರೀಕೃಷ್ಣ ಪತ್ನೀರಾದ ಜಾಂಬವತಿ ಕಾಳಿಂದಿ ಭದ್ರಾ ನೀಲಾ ಮಿತ್ರವಿಂದಾ ಲಕ್ಷ್ಮಣಾ ಈ ಷಣ್ಮಹಿಷಿಯರಿಗೆ ಅನಂತಾನಂತ ನಮಸ್ಕಾರಗಳು ॥ ೬॥ ಗರುಡ ಶೇಷ ರುದ್ರರಿಗೆ ಹೆಂಡತಿಯರಾದ ಸೌಪರ್ಣಿ ವಾರುಣಿ ಪಾರ್ವತೀದೇವಿಯರಿಗೆ ಅನಂತಾನಂತ ನಮಸ್ಕಾರಗಳು ॥೭॥ ಸ್ವರ್ಗಾಧಿಪತಿ ಯಾದಂಥ ದೇವೇಂದ್ರಗೆ ಕಾಮರಿಗೆ ಅನಂತಾನಂತ ನಮಸ್ಕಾರಗಳು ॥೮॥ ಅಹಂಕಾರಿಕ ಪ್ರಾಣದೇವರಿಗೆ ಅನಂತಾನಂತ ನಮಸ್ಕಾರಗಳು ॥೯॥ ಇಂದ್ರಪತ್ನಿ ಶಚೀದೇವಿ, ಕಾಮಪತ್ನಿ ರತಿದೇವಿಗೆ, ಸ್ವಾಯಂಭು ಮನುವಿಗೆ, ಬೃಹಸ್ಪತ್ಯಾಚಾರ್ಯರಿಗೆ, ಕಾಮ ಪುತ್ರ ಅನಿರುದ್ಧಗೆ, ದಕ್ಷಪ್ರಜೇಶ್ವರ ಈ ಆರುಮಂದಿಗೆ ಅನಂತಾನಂತ ನಮಸ್ಕಾರಗಳು ॥ ೧೦॥ ಕೋಣಾಧಿಪತಿಯಾದ ಪ್ರವಹ ವಾಯು ದೇವರಿಗೆ

ಅನಂತಾನಂತ ನಮಸ್ಕಾರಗಳು ॥ ೧೧॥ ಶ್ರೀಹರಿಯ ಕಣ್ಣುಗಳಿಂದ ಹುಟ್ಟಿದ ಸೂರ್ಯದೇವರಿಗೆ ಮನಸ್ಸಿನಿಂದ ಹುಟ್ಟಿದಂಥ ಚಂದ್ರದೇವರಿಗೆ ಸ್ತನಗಳಿಂದ ಹುಟ್ಟಿದ ಧರ್ಮರಾಯಗೆ ಸ್ವಾಯಂಭುವ ಮನು ಪತ್ನಿ ಶತರೂಪಾದೇವಿಗೆ ಅನಂತಾನಂತ ನಮಸ್ಕಾರಗಳು ॥ ೧೨॥ ದೇವರ ಕುಕ್ಷಿ ಯಿಂದ ಹುಟ್ಟಿದ ಉದಕಾಭಿಮಾನಿಯಾದ ಸಮುದ್ರನಾಥ (ವರುಣ) ಗೆ ಅನಂತಾ ನಂತ ನಮಸ್ಕಾರಗಳು ॥ ೧೩॥ ಬ್ರಹ್ಮ ದೇವರ ಅಂಕೋದ್ಭವರಾದ ದೇವಋಷ್ಯೋತ್ತುಮರಾದ ನಾರದರಿಗೆ ಅನಂತಾನಂತ ನಮಸ್ಕಾರಗಳು ॥ ೧೪॥ ಹರಿ ಸರ್ವೋತ್ತಮತ್ವ ಸ್ಥಾಪಿಸಿದ ಭೃಗುಮುನಿಗೆ, ದೇವ ಮುಖನಾದ ಅಗ್ನಿ ದೇವರಿಗೆ, ದಕ್ಷಪತ್ನಿ ಪ್ರಸೂತಿಗೆ ಅನಂತಾನಂತ ನಮಸ್ಕಾರಗಳು ॥ ೧೫॥ ಗಾಧಿರಾಯನ ಮಗನಾದ ವಿಶ್ವಾಮಿತ್ರನಿಗೆ, ಬ್ರಹ್ಮಪುತ್ರರಾದ ಮರೀಚಿಕ್ರತು. ಬ್ರಹ್ಮನ ನೇತ್ರ ದಿಂದ ಹುಟ್ಟಿದ ಅತ್ರಿ, ಬ್ರಹ್ಮನ ಮುಖದಿಂದ ಹುಟ್ಟಿದ ಅಂಗಿರಸ, ಬ್ರಹ್ಮನ ಹೊಕ್ಕುಳಿಂದ ಹುಟ್ಟಿದ ಪುಲಸ್ತ್ಯ, ಬ್ರಹ್ಮನ ಕಿವಿಯಿಂದ ಹುಟ್ಟಿದ ಪುಲಹ, ಬ್ರಹ್ಮನ ಪ್ರಾಣದಿಂದ ಹುಟ್ಟಿದ ವಸಿಷ್ಠ ಮಹರ್ಷಿಗಳಿಗೆ ವೈವಸ್ವತ ಮನುವಿಗೆ ಅನಂತಾನಂತ ನಮಸ್ಕಾರಗಳು ॥ ೧೬॥ ಮಿತ್ರನಾಮಕ ಸೂರ್ಯನಿಗೆ ಗುರು ಪತ್ನಿ ತಾರಾ ದೇವಿಗೆ, ಕೋಣಾಧಿಪತಿ ನಿರಋತಿಗೆ, ಪ್ರವಾಹ ಪತ್ನಿ ಪ್ರಾವಹೀದೇವಿಗೆ ಅನಂತಾನಂತ ನಮಸ್ಕಾರಗಳು ॥ ೧೭॥ ದೇವ ಸೇನಾಧಿಪತಿ ವಿಷ್ವಕ್ಸೇನಗೆ, ಅಶ್ವಿನೀ ದೇವತೆಗಳಿಗೆ, ಗಣಪತಿಗೆ, ಧನೇಶ್ವರನಾದ ಕುಬೇರನಿಗೆ ಅನಂತಾನಂತ ನಮಸ್ಕಾರಗಳು ॥ ೧೮॥ ಶೇಷಶತಸ್ಕರಿಗೆ, ಏಕಾದಶ ಮನುಗಳಿಗೆ, ಚ್ಯವನ ಪುತ್ರರಿಗೆ, ಉಚತ್ಥ್ಯ ಋಷಿಗಳಿಗೆ, ಶುಕ್ರಾಚಾರ್ಯರಿಗೆ ಅನಂತಾನಂತ ನಮಸ್ಕಾರಗಳು ಕಾರ್ತವೀರ್ಯ ಶಶಿಬಿಂದು,- ಮಾಂಧಾತ ಪ್ರಿಯವ್ರತ - ಪರೀಕ್ಷಿತ ಅಂಬರೀಷಾದಿ ಕರ್ಮಜ ದೇವತೆಗಳಿಗೆ ಅನಂತಾನಂತ ನಮಸ್ಕಾರಗಳು ॥ ೧೯॥ ವಿಷ್ಣು ಪಾದೋದ್ಭೂತೆ ಭಾಗೀರಥಿಗೆ, ಮೇಘಾಭಿಮಾನಿ ಪರ್ಜನ್ಯಗೆ, ಸೂರ್ಯಪತ್ನಿ ಸಂಜ್ಞಾದೇವಿಗೆ, ಶಶಿಪತ್ನಿ ರೋಹಿಣಿಗೆ, ಯಮಪತ್ನಿ ಶಾಮಲಾ ದೇವಿಗೆ, ವಿರಾಟ ಅಭಿಮಾನಿ ಉಷಾದೇವಿಗೆ, ಅನಿರುದ್ಧಪತ್ನಿಗೆ ಅನಂತಾನಂತ ನಮಸ್ಕಾರಗಳು ॥ ೨೦॥ ತರುವಾಯ ಅನಾಖ್ಯಾತ ದೇವತೆಗಳಿಗೆ ಅನಂತಾನಂತ ನಮಸ್ಕಾರಗಳು ॥ ೨೧॥ ತಥಾ ಅಗ್ನಿಜಾಯಾ ಸ್ವಾಹಾದೇವಿಗೆ ಅನಂತಾನಂತ ನಮಸ್ಕಾರಗಳು ॥ ೨೨॥ ಜಲಾಭಿಮಾನಿ ಬುಧಗೆ ಅನಂತಾನಂತ ನಮಸ್ಕಾರಗಳು ॥ ೨೩॥ ನಾಮಾಭಿಮಾನಿ ಉಷಾದೇವಿಗೆ ಅನಂತಾನಂತ ನಮಸ್ಕಾರಗಳು ॥೨೪॥ ಭೂಮ್ಯಾಭಿಮಾನಿ ಶನೈಶ್ಚರದೇವಗೆ ಅನಂತಾನಂತ ನಮಸ್ಕಾರಗಳು ॥೨೫॥ ಕರ್ಮಾಭಿಮಾನಿ ಪುಷ್ಕರಗೆ ಅನಂತಾನಂತ ನಮಸ್ಕಾರಗಳು॥೨೬॥

ಇಲ್ಲಿ ಪರಿಯಂತ ಮುಖ್ಯ ಅಮುಖ್ಯ ತಾತ್ವಿಕರು

ತಥಾ ಆಜಾನಜ ದೇವತೆಗಳಿಗೆ ಅನಂತಾನಂತ ನಮಸ್ಕಾರಗಳು ॥೨೭॥ ತುಂಬುರ ಮೊದಲಾದ ೧೦೦ ಗಂಧರ್ವರಿಗೆ, ಊರ್ವಶಿ ಮೊದಲಾದ ೧೦೦ ಜನ ಅಪ್ಸರ ಸ್ತ್ರೀಯರಿಗೆ, ಶತೋನ ಶತಕೋಟಿ ಋಷಿಗಳಿಗೆ, ಅನಂತಾನಂತ ನಮಸ್ಕಾರಗಳು । ಅಗ್ನಿಪುತ್ರರಾದ ಕೃಷ್ಣ ಪತ್ನಿಯರು ೧೬ ಸಾವಿರ ನೂರು ಜನ ಗೋಪಿಕಾಸ್ತ್ರೀಯರಿಗೆ, ಅನಂತಾನಂತ ನಮಸ್ಕಾರಗಳು. ತಥಾ ಕೃಷ್ಣಾಂಗಸಂಗಿಗಳಾದ ಗೋಪಿಕಾಸ್ತ್ರೀಯರಿಗೆ, ಅನಂತಾನಂತ ನಮಸ್ಕಾರಗಳು ॥ ೨೮॥

ತಥಾ ಚಿರ ಪಿತೃಗಳಿಗೆ ಅನಂತಾನಂತ ನಮಸ್ಕಾರಗಳು ॥೨೯॥ ತಥಾ ದೇವ ಗಂಧರ್ವರಿಗೆ ಅನಂತಾನಂತ ನಮಸ್ಕಾರಗಳು ॥ ೩೦॥ ತಥಾ ಮನುಷ್ಯ ಗಂಧರ್ವರಿಗೆ ಅನಂತಾನಂತ ನಮಸ್ಕಾರಗಳು ॥ ೩೧॥ ತಥಾ ಕ್ಷಿತಿಪರಿಗೆ ಮನುಷ್ಯ ರಾಜರಿಗೆ ಅನಂತಾನಂತ ನಮಸ್ಕಾರಗಳು ॥ ೩೨॥ ಮನುಷ್ಯೋತ್ತಮರಿಗೆ ಅನಂತಾನಂತ ನಮಸ್ಕಾರಗಳು ॥೩೩॥ ಮನುಷ್ಯೋತ್ತುಮರಲಿ ಮನುಷ್ಯೋತ್ತಮ ಮಧ್ಯಮರಿಗೆ ಅನಂತಾನಂತ ನಮಸ್ಕಾರಗಳು। ಮನುಷ್ಯೋತ್ತಮ ಅಧಮರಿಗೆ ಅನಂತಾನಂತ ನಮಸ್ಕಾರಗಳು । ತಥಾ ಮನುಷ್ಯ ಮಧ್ಯಮೋತ್ತಮರಿಗೆ ಅನಂತಾನಂತ ನಮಸ್ಕಾರಗಳು ॥೩೪॥ ಅಸ್ಮದ್ಗುರುಗಳಂತರ್ಯಾಮಿ ಪರಮ ಗುರುಗಳಂತರ್ಯಾಮಿ ತತ್ವದೇವಾಂತರ್ಯಾಮಿ ಉಮಾಮಹೇಶ್ವರಂತರ್ಯಾಮಿ ಹನುಮಭೀಮ ಮಧ್ವಾತ್ಮಕ ಭಾರತೀ ರಮಣ ಮುಖ್ಯ ಪ್ರಾಣಾಂತರ್ಯಾಮಿ ಶ್ರೀ ಭೂದುರ್ಗಾರಮಣ ರಾಮಕೃಷ್ಣ ರೂಪಾದಿ ಅನಂತ ರೂಪಾತ್ಮಕ ಸಚ್ಚಿದಾನಂದಾತ್ಮಕ ಶ್ರೀಜಗನ್ನಾಥ ವಿಠಲಾತ್ಮಕ ಲಕ್ಷ್ಮೀ ನರಸಿಂಹ ಪ್ರೀತೋ ಭವತು ॥ ಶ್ರೀ ಮಧ್ವೇಶ ಕೃಷ್ಣಾರ್ಪಿತಮಸ್ತು ॥

**॥ ಇಲ್ಲಿಗೆ ಶ್ರೀಜಗನ್ನಾಥದಾಸ ವಿರಚಿತ ತಾರತಮ್ಯಗದ್ಯರೂಪವು ಸಮಾಪ್ತವಾಯಿತು ॥**

## ಶ್ರೀಹರಿಕಥಾಮೃತಾಸಾರೋಕ್ತ ಉಪಾಸನಾಕ್ರಮ

### ೧. ದ್ವಾದಶ ಗುರು ನಮಸ್ಕಾರ

**ಶ್ರೀಗುರುಭ್ಯೋ ನಮಃ**

ಹರಿಕಥಾಮೃತಸಾರ ನವರಸ । ಭರಿತ ಬಹು ಗಂಭೀರ ರತ್ನಾ । ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ ॥ ಸರಸ ನರಕಂಠೀರವಾಖ್ಯಾ - । ರ್ಯರ ಜನಿತ ಸುಕುಮಾರ ಸಾತ್ವೀ। ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ ॥ ೩೩-೧೪ ॥ ೧॥

ವಿಘ್ನರಾಜನೆ ದುರ್ವಿಷಯದೊಳು ಮಗ್ನವಾಗಿಹ ಮನವ ಮಹದೋ-। ಷಘ್ನನಂಘ್ರಿ ಸರೋಜ ಯುಗಳದಿ ಭಕ್ತಿ ಪೂರ್ವಕದಿ ॥ ಲಗ್ನವಾಗಲಿ ನಿತ್ಯ ನರಕ ಭ -। ಯಾಗ್ನಿಗಳಿಗಾನಂಜೆ ಗುರುವರ । ಭಗ್ನಗೈಸೆನ್ನವ ಗುಣಗಳನು ಪ್ರತಿದಿವಸದಲ್ಲಿ ॥ ೨೮-೩ ॥ ೨॥

ವಾಮದೇವ ವಿರಂಚಿ ತನಯ ಉ -। ಮಾ ಮನೋಹರ ಉಗ್ರ ಧೂರ್ಜಟಿ । ಸಾಮಜಾಜಿನ ವಸನ ಭೂಷಣ ಸುಮನಸೋತ್ತಂಸ ॥ ಕಾಮಹರ ಕೈಲಾಸ ಮಂದಿರ । ಸೋಮ ಸೂರ್ಯಾನಳ ವಿಲೋಚನ । ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವಾ ॥೧-೧೦॥೩॥

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ಗುರುಭ್ಯೋ ನಮಃ**

ಪಂಚ ಭೇದಾತ್ಮಕ ಪ್ರಪಂಚಕೆ । ಪಂಚ ರೂಪಾತ್ಮಕನೆ ದೈವಕ । ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ॥ ಪಂಚವಿಂಶತಿ ತತ್ವ ತರತಮ । ಪಂಚಿಕೆಗಳನು ಪೇಳ್ದ ಭಾವಿ ವಿ-। ರಿಂಚಿಯೆನಿಪಾನಂದ ತೀರ್ಥರ ನೆನೆವೆನನುದಿನವು ॥ ೧-೯॥ ೪॥

ಶ್ರೀವೇದವ್ಯಾಸಾಯ ನಮಃ

ವೇದಪೀಠ ವಿರಂಚಿಭವ ಶ - । ಕ್ರಾದಿ ಸುರ ವಿಜ್ಞಾನ ದಾಯಕ । ಮೋದ ಚಿನ್ಮಯ ಗಾತ್ರ ಲೋಕ ಪವಿತ್ರ ಸುಚರಿತ್ರಾ ॥ ಛೇದ ಭೇದ ವಿಷಾದ ಕುಟಿಲಾಂ । ತಾದಿ ಮಧ್ಯವಿದೂರ ನಾದಾ - । ನಾದಿ ಕಾರಣ ಬಾದರಾಯಣ ಪಾಹಿ ಸತ್ರಾಣಾ ॥ ೧-೭ ॥ ೫॥

ಶ್ರೀ ಭಾರತ್ಯೈ ನಮಃ

ಕೃತಿರಮಣ ಪ್ರದ್ಯುಮ್ನನಂದನೆ । ಚತುರ ವಿಂಶತಿ ತತ್ವಪತಿ ದೇ - । ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜ ಪತ್ನಿ ॥ ಸತತ ಹರಿಯಲಿ ಗುರುಗಳಲಿ ಸ - । ದ್ರತಿಯ ಪಾಲಿಸಿ ಭಾಗವತ ಭಾ - । ರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ ॥ ೧-೬ ॥ ೬॥

ಶ್ರೀ ಸರಸ್ವತ್ಯೈ ನಮಃ

ಚತುರವದನನ ರಾಣಿ ಅತಿರೋ । ಹಿತ ವಿಮಲ ವಿಜ್ಞಾನಿ ನಿಗಮ । ಪ್ರತತಿ ಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ॥ ನತಿಸಿ ಬೇಡುವೆ ಜನನಿ ಲಕುಮೀ - । ಪತಿಯ ಗುಣಗಳ ತುತಿಪುದಕೆ ಸ - । ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ- ಸದನದಲಿ ॥ ೧-೫ ॥ ೭॥

ಶ್ರೀ ವಾಯವೇ ನಮಃ

ಆರು ಮೂರೆರಡೊಂದು ಸಾವಿರ । ಮೂರೆರಡು ಶತ ಶ್ವಾಸ ಜಪಗಳ । ಮೂರು ವಿಧ ಜೀವರೊಳಗಬ್ಜಜ ಕಲ್ಪ ಪರಿಯಂತ ॥ ತಾ ರಚಿಸಿ ಸತ್ವರಿಗೆ ಸುಖ ಸಂ -। ಸಾರ ಮಿಶ್ರರಿಗಧಮ ಜನರಿಗ -। ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ ॥ ೧-೪ ॥ ೮॥

ಶ್ರೀ ಬ್ರಹ್ಮಣೇ ನಮಃ

ನಿರುಪಮಾನಂದಾತ್ಮ ಭವ ನಿ - । ರ್ಜರ ಸಭಾ ಸಂಸೇವ್ಯ ಋಜುಗಣ - । ದರಸೆ ಸತ್ವ ಪ್ರಚುರವಾಣೀ ಮುಖ ಸರೋಜೇನ ॥ ಗರುಡ ಶೇಷ ಶಶಾಂಕದಳ ಶೇ -। ಖರರ ಜನಕ ಜಗದ್ಗುರುವೆ ತ್ವ । ಚ್ಚರಣಗಳಿಗಭಿ ವಂದಿಸುವೆ ಪಾಲಿಪುದು ಸನ್ಮತಿಯ ॥ ೧-೩ ॥ ೯॥

ಶ್ರೀ ಲಕ್ಷ್ಮ್ಯೈ ನಮಃ

ಜಗದುದರನತಿ ವಿಮಲ ಗುಣ ರೂ - । ಪಗಳನಾಲೋಚನದಿ ಭಾರತ । ನಿಗಮ ತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ ॥ ಬಗೆ ಬಗೆಯ ನೂತನದಿ ಕಾಣುತ॥ ಮಿಗೆ ಹರುಷದಿಂ ಪೊಗಳಿ ಹಿಗ್ಗುವ । ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ ೧-೨ ॥ ೧೦॥

ಶ್ರೀ ನರಸಿಂಹಾಯ ನಮಃ

ಶ್ರೀರಮಣಿ ಕರಕಮಲ ಪೂಜಿತ । ಚಾರುಚರಣ ಸರೋಜ ಬ್ರಹ್ಮ ಸ - । ಮೀರ ವಾಣಿ ಫಣೇಂದ್ರ ವೀಂದ್ರ ಭವೇಂದ್ರಮುಖ ವಿನುತ ॥ ನೀರಜ ಭವಾಂಡೋದಯ ಸ್ಥಿತಿ । ಕಾರಣನೆ ಕೈವಲ್ಯದಾಯಕ । ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವ ॥೧-೧ ॥೧೧॥

ಶ್ರೀ ಪಾಂಡುರಂಗವಿಠಲಾಯ ನಮಃ

ಕಿಟ್ಟಗಟ್ಟಿದ ಲೋಹ ಪಾವಕ । ಸುಟ್ಟು ವಿಂಗಡ ಮಾಡುವಂತೆ ಘು- । ರಟ್ಟಿ ವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ ॥ ವಿಠ್ಠಲಾ ಎಂದೊಮ್ಮೆ ಮೈಮರೆ -। ದಟ್ಟಹಾಸದಿ ಕರೆಯೆ ದುರಿತಗಳ । ಟ್ಟುಳಿಯ ಬಿಡಿಸೆವನ ತನ್ನೊಳಗಿಟ್ಟು ಸಲಹುವನು ॥ ೧೧-೨೦ ॥ ೧೨॥

ಶ್ರೀ ವಾಸುದೇವಾಯ ನಮಃ

ವಾಸುದೇವನು ಒಳಹೊರಗೆ ಆ । ಭಾಸಕನು ತಾನಾಗಿ ಬಿಂಬ ಪ್ರ - । ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ ॥ ಈ ಸಮನ್ವಯವೆಂದೆನಿಪ ಸದು - । ಪಾಸನವ ಗೈವವನು ಮೋಕ್ಷಾ -। ನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ॥ ೧೧-೨೨ ॥ ೧೩॥

## ೨. ನಿದ್ರಾಸಮರ್ಪಣ

ಜ್ಞಾನಮಯ ತೈಜಸನು ಹೃದಯ । ಸ್ಥಾನ ವೈದಿಸಿ ಪ್ರಾಜ್ಞನೆಂಬಭಿ - । ಧಾನದಿಂ ಕರೆಸುತಲಿ ಚಿತ್ಸುಖ ವ್ಯಕ್ತಿಯನೆ ಕೊಡುತ ॥ ಆನತೇಷ್ಟಪ್ರದನು ಅನುಸಂ- । ಧಾನವೀಯದೆ ಸುಪ್ತಿಯೈದಿಸಿ - । ತಾನೆ ಪುನರಪಿ ಸ್ವಪ್ನ ಜಾಗ್ರತಿ ಈವ ಚೇತನಕೆ ॥ ೮-೧೪ ॥ ೧೪॥

ಚಿತ್ರಜೇಂದ್ರರು ಮನದೊಳಿಪ್ಪರು । ಕೃತ್ತಿವಾಸನು ಅಹಂಕಾರದಿ । ಚಿತ್ತ ಚೇತನ ಮಾನಿಗಳು ವಿಹಗೇಂದ್ರ ಫಣಿಪರೊಳು ॥ ನಿತ್ಯದಲಿ ನೆಲೆಗೊಂಡು ಹತ್ತೊಂ- । ಭತ್ತು ಮೊಗ ತೈಜಸನು ಸ್ವಪ್ನಾ। ವಸ್ಥೆಯೈದಿಸಿ ಜೀವರನು ಪ್ರವಿವಿಕ್ತಭುಕುಯೆನಿಪ ॥ ೮-೧೩ ॥ ೧೫॥

ಜೋತಿಯೊಳಗಿಪ್ಪನು ಕಪಿಲ ಪುರು- । ಹೂತ ಮುಖ ದಿಕ್ಪತಿಗಳಿಂದ ಸ-। ಮೇತನಾಗೀ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ॥ ಶ್ವೇತವರ್ಣ ಚತುರ್ಭುಜನು ಸಂ - । ಪ್ರೀತಿಯಿಂದ ಸ್ಥೂಲ ವಿಷಯವ । ಚೇತನರಿಗುಂಡುಣಿಪ ಜಾಗ್ರತಿಯಿತ್ತು ನೃಗಜಾಸ್ಯ ॥ ೮-೧೧ ॥ ೧೬॥

## ೩. ಹಂಸಮಂತ್ರ ಸಮರ್ಪಣ

ಒಂದು ದಿನದೊಳಗನಿಲ ಯಿಪ್ಪ -। ತ್ತೊಂದು ಸಾವಿರದಾರು ನೂರು ಮು -। ಕುಂದನಾಜ್ಞದಿ ಮಾಡಿ ಮಾಡಿಸಿ -। ಲೋಕಗಳ ಪೊರೆವ ॥ ನೆಂದು ಪವನನ ಪೊಗಳುತಿರು ಎಂ -। ದೆಂದು ಮರೆಯದೆ ಈ ಮಹಿಮೆ ಸಂ- । ಕ್ರಂದನಾದ್ಯರಿ ಗುಂಟೆ ನೋಡಲು ಸರ್ವಕಾಲದಲಿ ॥ ೧೫-೪ ॥ ೧೭॥

ಈರೆರಡು ದೇಹಗಳೊಳಿದ್ದು ಸ - । ಮೀರದೇವನು ಶ್ವಾಸ ಜಪ ನಾ - । ನೂರಧಿಕವಾಗಿಪ್ಪ ಯೆಂಭತ್ತಾರು ಸಾಹಸ್ರ ॥ ತಾ ರಚಿಸುವನು ದಿವಸ ಒಂದಕೆ । ಮೂರು ವಿಧ ಜೀವರೊಳಗಿದ್ದು ಖ-। ರಾರಿ ಕರುಣಾ ಬಲವಿದೆಂತುಟೊ ಪವನ ರಾಯನೊಳು ॥ ೧೨-೪೪ ॥ ೧೮॥

## ೪. ಸೃಷ್ಟಿ ಚಿಂತನ

ಕಾರಣಾಹ್ವಯ ಪ್ರಕೃತಿಯೊಳಗಿ - । ದ್ದಾರಧಿಕ ಹದಿನೆಂಟು ತತ್ವವ । ತಾ ರಚಿಸಿ ತದ್ರೂಪ ತನ್ನಾಮಂಗಳನೇ ಧರಿಸಿ ॥ ನೀರಜಭವಾಂಡವನು ನಿರ್ಮಿಸಿ । ಕಾರುಣಿಕ ಕಾರ್ಯಾಖ್ಯ ರೂಪದಿ । ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ ॥ ೧೪-೨೦ ॥ ೧೯॥

ತ್ರಿವಿಧ ಗುಣಮಯ ದೇಹ ಜೀವಕೆ । ಕವಚದಂದದಿ ತೊಡಿಸಿ ಕರ್ಮ । ಪ್ರವಹದೊಳು ಸಂಚಾರ ಮಾಡಿಸುತಿಪ್ಪ ಜೀವರನ ॥ ಕವಿಸಿ ಮಾಯಾರಮಣ ಮೋಹದ। ಭವಕೆ ಕಾರಣನಾಗುವನು ಸಂ -। ಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ ॥೨೪-೮॥೨೦॥

## ೫. ತತ್ವದೇವತೆಗಳ ಪ್ರಾರ್ಥನೆ

ಕರಣ ಗುಣ ಭೂತಗಳೊಳಗೆ ತ - । ದ್ವರರೆನಿಪ ಬ್ರಹ್ಮಾದಿ ಜೀವರೊ - । ಳರಿತು ರೂಪಚತುಷ್ಟಯಗಳನುದಿನದಿ ಸರ್ವತ್ರ ॥ ಸ್ಮರಿಸುತನುಮೋದಿಸುತ ಹಿಗ್ಗುತ । ಪರವಶದಿ ಪಾಡುವವರಿಗೆ ತ । ನ್ನಿರವ ತೋರಿಸಿ ಭವ ವಿಮುಕ್ತರ ಮಾಡಿ ಪೋಷಿಸುವ ॥೬-೩೩ ॥ ೨೧॥

## ೬. ದೇಹಚಿಂತನ

ನಾರಸಿಂಹ ಸ್ವರೂಪದೊಳಗೆ ಶ - । ರೀರ ನಾಮದಿ ಕರೆಸುವನು ಹದಿ - । ನಾರು ಕಲೆಗಳು ಉಳ್ಳ ಲಿಂಗದಿ ಪುರುಷ ನಾಮಕನು ॥ ತೋರುವನು ಅನಿರುದ್ಧನೊಳು ಶಾಂ -। ತೀರಮಣ ಅನಿರುದ್ಧ ರೂಪದಿ । ಪ್ರೇರಿಸುವ ಪ್ರದ್ಯುಮ್ನ ಸ್ಥೂಲ ಕಳೇವರದೊಳಿದ್ದು ॥ ೯ - ೨೬ ॥ ೨೨॥

ಮೊದಲು ತ್ವಕ್ಚರ್ಮಗಳು ಮಾಂಸವು । ರುಧಿರ ಮೇಧೋಮಜ್ಜ ಅಸ್ತಿಗ-। ಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವೂ ॥ ನಿಧನ ಹಿಂ ಕಾರಾದಿ ಸಾಮಗ। ಅದರ ನಾಮದಿ ಕರೆಸು ತೊಂಭತ್ತಧಿಕ । ನಾಲ್ಕುತ್ತೆನಿಪ ರೂಪದಿ ಧಾತುಗಳೊಳಿಪ್ಪ ॥ ೯-೨೭ ॥ ೨೩॥

ಸಪ್ತ ಧಾತುಗಳೊಳ ಹೊರಗೆ ಸಂ - । ತಪ್ತ ಲೋಹಗತಾಗ್ನಿಯಂದದಿ । ಸಪ್ತ ಸಾಮಗನಿಪ್ಪ ಅನ್ನಮಯಾದಿ ಕೋಶದೋಳು ॥ ಲಿಪ್ತನಾಗದೆ ತತ್ತದಾಹ್ವಯ । ಕ್ಲಿಪ್ತ ಭ ೯ಗವ ಕೊಡುತ ಸ್ವಪ್ನ ಸು - । ಷುಪ್ತಿ ಜಾಗ್ರತೆ ಈವ ತೈಜಸ ಪ್ರಾಜ್ಞ ವಿಶ್ವಾಖ್ಯಾ ॥ ೯-೨೮ ॥ ೨೪॥

ತೀವಿ ಗೊಂಡಿಹವಲ್ಲಿ ಮಜ್ಜ ಕ - । ಳೇವರದಿ ಅಂಗುಲಿಯ ಪರ್ವದ । ಠಾವಿನಲಿ ಮುನ್ನೂರು ಅರವತ್ತೆನಿಪ ತ್ರಿಸ್ಥಳದಿ ॥ ಸಾವಿರದ ಎಂಭತ್ತು ರೂಪವ। ಕೋವಿದರು ಪೇಳುವರು ದೇಹದಿ । ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ॥ ೯-೨೯ ॥ ೨೫॥

ಅತಿಥಿಯೆನಿಸುವ ಅನ್ನಮಯ ಭಾ - । ರತಿ ರಮಣನೊಳು ಪ್ರಾಣಮಯ ಪ್ರಾ - । ಕೃತ ವಿಷಯ ಚಿಂತನೆಯ ಮಾಡಿಸುವನು ಮನೋಮಯನು ॥ ಯತನ ವಿಜ್ಞಾನಮಯ ಬರಲದ - । ಜತನಮಾಡಿಸಿ ಆತ್ಮಜಾಯಾ । ಸುತರ ಸಂಗದಿ ಸುಖವನೀವಾನಂದಮಯನೆನಿಸಿ ॥೨೨-೨೦ ॥ ೨೬॥

ಬೃಹತಿ ನಾಮಕ ವಾಸುದೇವನು । ವಹಿಸಿ ಸ್ತ್ರೀರೂಪಗಳ ದೋಷ ವಿ - । ರಹಿತ ಎಪ್ಪತ್ತೆರಡು ಸಾವಿರ ನಾಡಿಗಳೊಳಗಿದ್ದು ॥ ದ್ರುಹಿಣ ಮೊದಲಾದಮರ ಗಣ ಸ - । ನ್ಮಹಿತ ಸರ್ವ ಪ್ರಾಣಿಗಳ ಮಹ । ಮಹಿಮ ಸಂತೈಸುವನು ಸಂತತ ಪರಮ ಕರುಣಾಳು ॥೧೨-೩॥೨೭॥

ಮೂಲರೂಪನು ಮನದೊಳಿಹ ಶ್ರವ - । ಣಾಲಿಯೊಳಗಿಹ ಮತ್ಸ್ಯ- ಕೂರ್ಮನು । ಕೋಲರೂಪನು ತ್ವಗ್ರಸನದೊಳಗಿಪ್ಪ ನರಸಿಂಹ ॥ ಬಾಲವಟು ವಾಮನನು ನಾಶಿಕ । ನಾಳದೊಳು ವದನದಲಿ ಭಾರ್ಗವ । ವಾಲಿಭಂಜನ ಹಸ್ತದೊಳು ಪಾದದಲಿ ಶ್ರೀಕೃಷ್ಣ ॥ ೬-೩೪ ॥ ೨೮॥

ಜಿನ ವಿಮೋಹಕ ಬುದ್ಧ ಪಾಯುಗ । ದನುಜ ಭಂಜನ ಕಲ್ಕಿ ಮೇಂಢ್ರದಿ । ಇನಿತು ದಶ ರೂಪಗಳ ದಶ ಕರಣಂಗಳಲಿ ತಿಳಿದು ॥ ಅನುಭವಿಪ ವಿಷಯಗಳ ಕೃಷ್ಣಾ । ರ್ಪಣವೆನಲು ಕೈಕೊಂಬ ವೃಜಿನಾ - । ರ್ದನ ವರಜಗನ್ನಾಥವಿಠ್ಠಲ ವಿಶ್ವವ್ಯಾಪಕನು ॥ ೬-೩೫ ॥ ೨೯॥

ಹೃದಯದೊಳಗಿಹುದಷ್ಟದಳ ಕಮ - । ಲದರೊಳಗೆ ಪ್ರಾದೇಶನಾಮಕ। ನುದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ ॥ ಪದುಮ ಚಕ್ರ ಸುಶಂಖ ಸುಗದಾಂ । ಗದ ಕಟಕ ಮಕುಟಾಂಗುಳೀಯಕ । ಪದಕ ಕೌಸ್ತುಭ ಹಾರ- ಗ್ರೈವೇಯಾದಿ ಭೂಷಿತನು ॥ ೮-೬ ॥ ೩೦॥

ದ್ವಿದಳ ಪದ್ಮವು ಶೋಭಿಪುದು ಕಂ - । ಠದಲಿ ಮುಖ್ಯಪ್ರಾಣ ತನ್ನಯ । ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ॥ ಉದಕ ಅನ್ನಾದಿಗಳಿಗವಕಾ- । ಶದನು ತಾನಾಗಿದ್ದು ದಾನಾ - । ಭಿಧನು ಶಬ್ದವ ನುಡಿದು ನುಡಿಸುವ ಸರ್ವ ಜೀವರೊಳು॥೮-೭॥೩೧॥

ಮಧ್ಯನಾಡಿಯ ಮಧ್ಯದಲಿ ಹೃ - । ತ್ಪದ್ಮ ಮೂಲದಿ ಮೂಲಪತಿ ಪದ । ಪದ್ಮ ಮೂಲದಲಿಪ್ಪ ಪವನನ ಪಾದಮೂಲದಲಿ ॥ ಪೊದ್ದಿಕೊಂಡಿಹ ಜೀವ ಲಿಂಗನಿ - । ರುದ್ಧ ದೇಹ ವಿಶಿಷ್ಟನಾಗಿ ಕ- । ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ೯-೧೯ ॥೩೨॥

## ೭. ಧ್ಯಾನ ಸ್ನಾನ

ಸೂರಿಗಳು ಚಿತ್ತೈಸುವದು ಭಾ - । ಗೀರಥೀ ಮೊದಲಾದ ತೀರ್ಥಗ- । ಳೀರಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಹವು ॥ ಈ ರಹಸ್ಯವ ಅಲ್ಪ ಜನರಿಗೆ । ತೋರಿ ಪೇಳದೆ ನಾಡಿ ನದಿಯೊಳು। ಧೀರರನುದಿನ ಮಜ್ಜನವ ಮಾಡುತಲಿ ಸುಖಿಸುವರು ॥ ೧೨-೯ ॥ ೩೩॥

## ೮. ನಾಮ ಮುದ್ರಾ ಧಾರಣ

ಕೇಶವಾದಿ ಸುಮೂರ್ತಿ ದ್ವಾದಶ । ಮಾಸ ಪುಂಡ್ರಗಳಲ್ಲಿ ವೇದ ‣ । ವ್ಯಾಸ ಅನಿರುದ್ಧಾದಿ ರೂಪಗಳಾರು ಋತುಗಳಲಿ ॥ ವಾಸವಾಗಿಹವೆಂದು ತ್ರಿಂಶತಿ । ವಾಸರದಿ ಸತ್ಕರ್ಮ ಧರ್ಮ ನಿ - । ರಾಶೆಯಿಂದಲಿ ಮಾಡು ಕರುಣವ ಬೇಡು ಕೊಂಡಾಡು ॥ ೬-೨೮ ॥ ೩೪॥

ತೋರುತಿಪ್ಪನು ಚಕ್ರದಲಿ ಹಿಂ- । ಕಾರ ನಾಮಕ ಶಂಖದಲಿ ಪ್ರತಿ - । ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವಾ ॥ ಕಾರುಣಿಕನುದ್ಗೀಥ ನಾಮದಿ । ಮಾರರಮಣ ನೈರೂಪಗಳ ಶಂ - । ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥ ೮-೨೮ ॥ ೩೫॥

## ೯. ಪಾಪಪುರುಷ ವಿಸರ್ಜನ

ನಾಭಿಯಲಿ ಷಟ್ಕೋಣ ಮಂಡಲ । ದೀ ಭವಿಷ್ಯದ್ ಬ್ರಹ್ಮನೊಳು ಮು-। ಕ್ತಾಭ ಶ್ರೀಪ್ರದ್ಯುಮ್ನನಿಪ್ಪನು ವಿಬುಧ ಗಣಸೇವ್ಯ ॥ ಶೋಭಿಸುತ ಕೌಸ್ತುಭವೆ ಮೊದಲಾ। ದಾಭರಣ ಆಯುಧಗಳಿಂದ ಮ- । ಹಾ ಭಯಂಕರ ಪಾಪ ಪುರುಷನ ಶೋಷಿಸುತ ನಿತ್ಯ ॥ ೮-೪ ॥ ೩೬॥

ಆ ನಳಿನಭವ ನಾಡಿಯೊಳಗೆ ತ್ರಿ । ಕೋಣ ಚಕ್ರವು ಇಪ್ಪುದಲ್ಲಿ ಕೃ । ಶಾನು ಮಂಡಲ ಮಧ್ಯಗನು ಸಂಕರುಷಣಾಹ್ವಯನು ॥ ಹೀನ ಪಾಪಾತ್ಮಕ ಪುರುಷನ ದ -। ಹಾನಗೈಸುತ ದಿನದಿನದಿ ವಿ - । ಜ್ಞಾನಮಯ ಶ್ರೀವಾಸುದೇವನ ಐದಿಸುವ ಕರುಣಿ ॥ ೯-೧೮॥ ೩೭॥

## ೧೦. ಮಾತೃಕಾನ್ಯಾಸ

ಮನದೊಳಾಹಂಕಾರದೊಳು ಚಿಂ - । ತನೆಯ ಮಾಳ್ಪದು ಅಂತರಾತ್ಮನ। ಘನ ಸುತತ್ವದಿ ಪರಮನವ್ಯಕ್ತದಲಿ ಜ್ಞಾನಾತ್ಮಾ ॥ ಇನಿತು ಪಂಚಾಶದ್ವರಣ ವೇ। ದ್ಯನ ಅಜಾದ್ಯೈವತ್ತು ಮೂರ್ತಿಗ । ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥ ೬-೨೬ ॥ ೩೮॥

## ೧೧. ತತ್ವನ್ಯಾಸ

ಚತುರವಿಂಶತಿ ತತ್ವದೊಳು ತ - । ತ್ವತಿಗಳೆನಿಸುವ ಬ್ರಹ್ಮ ಮುಖ ದೇ - । ವತೆಗಳೊಳು ಹದಿಮೂರು ಸಾವಿರದೆಂಟು ನೂರಧಿಕ ॥ ಚತುರ ವಿಂಶತಿ ರೂಪದಿಂದಲಿ। ವಿತತನಾಗಿದ್ದೆಲ್ಲರೊಳು ಪ್ರಾ - । ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥೬-೨೭ ॥ ೩೯॥

## ೧೨. ಮೂಲ ಮಂತ್ರ

ಎರಡು ದೀಕ್ಷೆಗಳಿಹವು ಬಾಹ್ಯಾಂ - । ತರವೆನಿಪ ನಾಮದಲಿ ಬುಧರಿಂ -। ದರಿತು ದೀಕ್ಷಿತನಾಗು ದೀರ್ಘ ದ್ವೇಷಗಳ ಬಿಟ್ಟು ॥ ಹರಿಯೆ ಸರ್ವೋತ್ತಮ ಕ್ಷರಾಕ್ಷರ । ಪುರುಷಪೂಜಿತಪಾದ ಜನ್ಮಾ- । ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥ ೧೬-೧೮ ॥ ೪೦ ॥

## ೧೩. ಬಿಂಬಮೂರ್ತಿ ಚಿಂತನ

ಅಷ್ಟದಳ ಸದ್ಧೃದಯ ಕಮಲಾ - । ಧಿಷ್ಠಿತನು ತಾನಾಗಿ ಸರ್ವೋ - । ತ್ಕೃಷ್ಟ ಮಹಿಮನು ದಳಗಳಲಿ ಸಂಚರಿಸುತೊಳಗಿದ್ದು ॥ ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ -। ಶಿಷ್ಟರಿಗೆ ಸುಜ್ಞಾನ ಧರ್ಮ ಸು । ಪುಷ್ಟಿಗೈಸುತ ಸಂತಯಿಪ ನಿರ್ದುಷ್ಟ ಸುಖಪೂರ್ಣ ॥ ೫-೯ ॥ ೪೧॥

## ೧೪.ದ್ವಾರಪಾಲಕರ ಚಿಂತನ

ಶ್ರೀರಮಣನರಮನೆಯ ಪೂರ್ವ । ದ್ವಾರದಲ್ಲಿಹ ಸಂಜ್ಞ ಸೂರ್ಯಗ । ಭಾರತೀಪತಿಪ್ರಾಣನೊಳಗಿಹ ಲಕುಮಿ ನಾರಯಣ । ಸೇರಿ ಮನುಜೋತ್ತಮರು ಸರ್ವ ಶ -। ರೀರ ಗತ ನಾರಾಯಣನ ಅವ । ತಾರ ಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ॥೧೫-೧೬॥೪೨॥

ಪ್ರಣವ ಪ್ರತಿಪಾದ್ಯನ ಪುರದ ದ - । ಕ್ಷಿಣ ಕವಾಟದಲಿಪ್ಪ ಶಶಿ ರೋ - । ಹಿಣಿಗತ ವ್ಯಾನಸ್ಥ ಕೃತಿ ಪ್ರದ್ಯುಮ್ನ ರೂಪವನು ॥ ಗುಣಗಳನು ಸಂತುತಿಸುತಲಿ ಪಿತೃ । ಗಣ ಗದಾಧರನತಿ ವಿಮಲ ಪ। ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು ॥ ೧೫-೧೭ ॥ ೪೩॥

ಅಮಿತ ವಿಕ್ರಮನಾಲಯದ ಪ - । ಶ್ಚಿಮ ಕವಾಟದಿ ಸತಿಸಹಿತ ಸಂ । ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ॥ ಸುಮನಸಾಸ್ಯನೊಳಿಪ್ಪ- ಪಾನಗ। ದಮನ ಸಂಕರುಷಣನ ನಿಜ ಹೃ - । ತ್ಕಮಲದೊಳು ಧೇನಿಸುವ ಋಷಿಗಣವೈದಿ ಸುಖಿಸುವರು ॥೧೫-೧೮ ॥ ೪೪॥

ಸ್ವರಮಣನ ಗುಣರೂಪ ಸಪ್ತ - । ಸ್ವರಗಳಿಂದಲಿ ಪಾಡುತಿಹ ತುಂ- । ಬರನೆ ಮೊದಲಾದಖಿಳ ಗಂಧರ್ವರು ರಮಾಪತಿಯ ॥ ಪುರದ ಉತ್ತರ ಬಾಗಿಲಾಧಿಪ । ಸುರಪ ಶಚಿಗ ಸಮಾನ ವಾಯುಗ । ಹರಿನ್ಮಣಿನಿಭ ಶಾಂತಿಪತಿ ಅನಿರುದ್ಧನೈದುವರು ॥೧೫-೧೯॥೪೫॥

ಗರುಡಶೇಷಸುರೇಂದ್ರಮುಖ ಪು-।ಷ್ಕರನೆ ಕಡೆಯಾಗಿಪ್ಪಖಿಳ ನಿ-। ರ್ಜರ ಊರ್ಧ್ವ ದ್ವಾರಗತ ಭಾರತೀ ಉದಾನದೊಳು॥ ಮೆರೆವ ಮಾಯಾ ವಾಸುದೇವನ । ಪರಮ ಮಂಗಳವಯವಗಳ ಮಂ-। ದಿರವನೈದಿ ಸದಾ ಮುಕುಂದನ ನೋಡಿ ಸುಖಿಸುವರು ॥೧೫-೨೦ ॥೪೬॥

## ೧೫. ಆರೋಹಣ ತಾರತಮ್ಯ

ನಿರುಪಮ ಶ್ರೀವಿಷ್ಣು ಲಕ್ಷ್ಮೀ । ಸರಸಿಜೋದ್ಭವ ವಾಯು ವಾಣೀ । ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣಾ ॥ ಗುರು ಬೃಹಸ್ಪತಿ ಪ್ರವಹ ಸೂರ್ಯನು। ವರುಣ ನಾರದ ವಹ್ನಿ ಸಪ್ತಾಂ - । ಗಿರರು ಮಿತ್ರ ಗಣೇಶ ಪೃಥು ಗಂಗಾಸ್ವಾಹಾ ಬುಧನು ॥ ೨೧-೫೫ ॥ ೪೭॥

ತರಣಿತನಯ ಶನೈಶ್ಚರನು ಪು - । ಷ್ಕರನಜಾನಜ ಚಿರಪಿತರು ಗಂ- । ಧರುವರೀರ್ವರು ದೇವ ಮಾನುಷ ಚಕ್ರವರ್ತಿಗಳು ॥ ನರರೊಳುತ್ತಮ ಮಧ್ಯಮಾಧಮ । ಕರೆಸುವರು ಮಧ್ಯೋತ್ತಮರು ಈ । ರೆರಡು ಜನ ಕೈವಲ್ಯ ಮಾರ್ಗಸ್ಥರಿಗೆ ಆ ನಮಿಪೆ ॥ ೨೧-೫೬ ॥ ೪೮॥

## ೧೬. ಬಿಂಬಮೂರ್ತಿ ಆವಾಹನ

ಬಿಂಬ ಜೀವಾಂಗುಷ್ಠ ಮಾತ್ರದಿ । ಇಂಬುಗೊಂಡಿಹ ಸರ್ವರೊಳು ಸೂ -। ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ ॥ ಎಂಬರೀತಗೆ ಕೋವಿದರು ವಿ -। ಶ್ವಂಭರಾತ್ಮಕ ಪ್ರಾಜ್ಞ ಭಕ್ತ ಕು - । ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ - ೯ ॥ ೪೯॥

ದೇವದೇವೇಶನ ಸುಮೂರ್ತಿ ಕ । ಳೇವರಗಳೊಳಗನವರತ ಸಂ - । ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ॥ ಶ್ರೀವರ ಜಗನ್ನಾಥ ವಿಠ್ಠಲ । ತಾವೊಲಿದು ಕಾರುಣ್ಯದಲಿ ಭವ । ನೋವು ಪರಿಹರಿಸುವನು ಪ್ರವಿತತ ಪತಿತಪಾವನನು ॥ ೮-೨೨ ॥ ೫೦॥

ಶ್ರೀಲಕುಮಿ ವಲ್ಲಭನು ವೈಕುಂ- । ಠಾಲಯದಿ ಪ್ರಣವ ಪ್ರಕೃತಿ ಕೀ - । ಲಾಲಜಾಸನಮುಖ್ಯ ಚೇತನರೊಳಗೆ ನೆಲೆಸಿದ್ದು ॥ ಮೂಲಕಾರಣ ಅಂಶನಾಮದಿ। ಲೀಲೆಗೈವುತ ತೋರಿಕೊಳ್ಳದೆ । ಪಾಲಿನೊಳು ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ ॥ ೧೪-೧೮ ॥ ೫೧॥

## ೧೭. ಅವಯವ ಚಿಂತನ

ಸ್ವರತ ಸುಖಮಯ ಸುಲಭ ವಿಶ್ವಂ - । ಭರ ವಿಶೋಕ ಸುರಾಸುರಾರ್ಚಿತ। ಚರಣಯುಗ ಚಾರ್ವಾಂಗ ಶಾರ್ಙ್ಗ ಶರಣ್ಯ ಜಿತಮನ್ಯು ॥ ಪರಮಸುಂದರತರ ಪರಾತ್ಪರ। ಶರಣಜನಸುರಧೇನು ಶಾಶ್ವತ । ಕರುಣಿ ಕಂಜದಳಾಕ್ಷ ಕಾಯನೆ ಕಂಗೊಳಿಪ ಶೀಘ್ರ ॥ ೧೯-೧೨ ॥ ೫೨॥

## ೧೮. ಪ್ರಾರ್ಥನೆ

ಶ್ರೀನಿಕೇತನ ಸಾತ್ವತಾಂಪತಿ । ಜ್ಞಾನಗಮ್ಯ ಗಯಾಸುರಾರ್ದನ । ಮೌನಿಕುಲಸನ್ಮಾನ್ಯ ಮಾನದ ಮಾತುಳಧ್ವಂಸಿ ॥ ದೀನಜನಮಂದಾರ ಮಧುರಿಪು । ಪ್ರಾಣದ ಜಗನ್ನಾಥವಿಠ್ಠಲ । ತಾನೆ ಗತಿಯೆಂದನುದಿನದಿ ನಂಬಿದವರನ ಪೊರೆವ ॥ ೭-೩೩ ॥ ೫೩॥

ಜಯ ಜಯ ಜಯಾಕಾಂತ ದತ್ತಾ - । ತ್ರಯ ಕಪಿಲ ಮಹಿದಾಸ ಭಕ್ತ । ಪ್ರಿಯ ಪುರಾತನ ಪುರುಷಪೂರ್ಣಾನಂದ ಜ್ಞಾನಘನ ॥ ಹಯವದನ ಹರಿ ಹಂಸ ಲೋಕ -। ತ್ರಯವಿಲಕ್ಷಣ ನಿಖಿಳಜಗದಾ - । ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು ॥ ೧೪-೮ ॥ ೫೪॥

## ೧೧. ತತ್ವನ್ಯಾಸ

ಚತುರವಿಂಶತಿ ತತ್ವದೊಳು ತ - । ತ್ಪತಿಗಳೆನಿಸುವ ಬ್ರಹ್ಮ ಮುಖ ದೇ - । ವತೆಗಳೊಳು ಹದಿಮೂರು ಸಾವಿರದೆಂಟು ನೂರಧಿಕ ॥ ಚತುರ ವಿಂಶತಿ ರೂಪದಿಂದಲಿ। ವಿತತನಾಗಿದ್ದೆಲ್ಲರೊಳು ಪ್ರಾ - । ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥೬-೨೭ ॥ ೩೯॥

## ೧೨. ಮೂಲ ಮಂತ್ರ

ಎರಡು ದೀಕ್ಷೆಗಳಿಹವು ಬಾಹ್ಯಾಂ - । ತರವೆನಿಪ ನಾಮದಲಿ ಬುಧರಿಂ -। ದರಿತು ದೀಕ್ಷಿತನಾಗು ದೀರ್ಘ ದ್ವೇಷಗಳ ಬಿಟ್ಟು ॥ ಹರಿಯೆ ಸರ್ವೋತ್ತಮ ಕ್ಷರಾಕ್ಷರ । ಪುರುಷಪೂಜಿತಪಾದ ಜನ್ಮಾ- । ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥ ೧೬-೧೮ ॥ ೪೦ ॥

## ೧೩. ಬಿಂಬಮೂರ್ತಿ ಚಿಂತನ

ಅಷ್ಟದಳ ಸದ್ಹೃದಯ ಕಮಲಾ - । ಧಿಷ್ಠಿತನು ತಾನಾಗಿ ಸರ್ವೋ - । ತ್ಕೃಷ್ಟ ಮಹಿಮನು ದಳಗಳಲಿ ಸಂಚರಿಸುತೊಳಗಿದ್ದು ॥ ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ -। ಶಿಷ್ಟರಿಗೆ ಸುಜ್ಞಾನ ಧರ್ಮ ಸು । ಪುಷ್ಟಿಗೈಸುತ ಸಂತಯಿಪ ನಿರ್ದುಷ್ಟ ಸುಖಪೂರ್ಣ ॥ ೫-೯ ॥ ೪೧॥

## ೧೪.ದ್ವಾರಪಾಲಕರ ಚಿಂತನ

ಶ್ರೀರಮಣನರಮನೆಯ ಪೂರ್ವ । ದ್ವಾರದಲ್ಲಿಹ ಸಂಜ್ಞ ಸೂರ್ಯಗ । ಭಾರತೀಪತಿಪ್ರಾಣನೊಳಗಿಹ ಲಕುಮಿ ನಾರಯಣ । ಸೇರಿ ಮನುಜೋತ್ತಮರು ಸರ್ವ ಶ - । ರೀರ ಗತ ನಾರಾಯಣನ ಅವ । ತಾರ ಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ॥೧೫-೧೬॥೪೨॥

ಪ್ರಣವ ಪ್ರತಿಪಾದ್ಯನ ಪುರದ ದ - । ಕ್ಷಿಣ ಕವಾಟದಲಿಪ್ಪ ಶಶಿ ರೋ - । ಹಿಣಿಗತ ವ್ಯಾನಸ್ಥ ಕೃತಿ ಪ್ರದ್ಯುಮ್ನ ರೂಪವನು ॥ ಗುಣಗಳನು ಸಂತುತಿಸುತಲಿ ಪಿತೃ । ಗಣ ಗದಾಧರನತಿ ವಿಮಲ ಪ। ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು ॥ ೧೫-೧೭ ॥ ೪೩॥

ಅಮಿತ ವಿಕ್ರಮನಾಲಯದ ಪ - । ಶ್ಚಿಮ ಕವಾಟದಿ ಸತಿಸಹಿತ ಸಂ । ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ॥ ಸುಮನಸಾಸ್ಯನೊಳಿಪ್ಪ- ಪಾನಗ। ದಮನ ಸಂಕರುಷಣನ ನಿಜ ಹೃ - । ತ್ಕಮಲದೊಳು ಧೇನಿಸುವ ಋಷಿಗಣವೈದಿ ಸುಖಿಸುವರು ॥೧೫-೧೮ ॥ ೪೪॥

ಸ್ವರಮಣನ ಗುಣರೂಪ ಸಪ್ತ - । ಸ್ವರಗಳಿಂದಲಿ ಪಾಡುತಿಹ ತುಂ- । ಬರನೆ ಮೊದಲಾದಖಿಳ ಗಂಧರ್ವರು ರಮಾಪತಿಯ ॥ ಪುರದ ಉತ್ತರ ಬಾಗಿಲಾಧಿಪ । ಸುರಪ ಶಚಿಗ ಸಮಾನ ವಾಯುಗ । ಹರಿನ್ಮಣಿನಿಭ ಶಾಂತಿಪತಿ ಅನಿರುದ್ಧನೈದುವರು ॥೧೫-೧೯॥೪೫॥

ಗರುಡಶೇಷಸುರೇಂದ್ರಮುಖ ಪು-।ಷ್ಕರನೆ ಕಡೆಯಾಗಿಪ್ಪಖಿಳ ನಿ-। ರ್ಜರ ಊರ್ಧ್ವ ದ್ವಾರಗತ ಭಾರತೀ ಉದಾನದೊಳು॥ ಮೆರೆವ ಮಾಯಾ ವಾಸುದೇವನ । ಪರಮ ಮಂಗಳವ ಯವಗಳ ಮಂ-। ದಿರವನೈದಿ ಸದಾ ಮುಕುಂದನ ನೋಡಿ ಸುಖಿಸುವರು ॥೧೫-೨೦ ॥೪೬॥

## ೧೫. ಆರೋಹಣ ತಾರತಮ್ಯ

ನಿರುಪಮ ಶ್ರೀವಿಷ್ಣು ಲಕ್ಷ್ಮೀ । ಸರಸಿಜೋದ್ಭವ ವಾಯು ವಾಣೀ । ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣಾ ॥ ಗುರು ಬೃಹಸ್ಪತಿ ಪ್ರವಹ ಸೂರ್ಯನು। ವರುಣ ನಾರದ ವಹ್ನಿ ಸಪ್ತಾಂ - । ಗಿರರು ಮಿತ್ರ ಗಣೇಶ ಪೃಥು ಗಂಗಾಸ್ವಾಹಾ ಬುಧನು ॥ ೨೧-೫೫ ॥ ೪೭॥

ತರಣಿತನಯ ಶನ್ಯೈಶ್ಚರನು ಪು - । ಷ್ಕರನಜಾನಜ ಚಿರಪಿತರು ಗಂ- । ಧರುವರೀರ್ವರು ದೇವ ಮಾನುಷ ಚಕ್ರವರ್ತಿಗಳು ॥ ನರರೊಳುತ್ತಮ ಮಧ್ಯಮಾಧಮ । ಕರೆಸುವರು ಮಧ್ಯೋತ್ತಮರು ಈ । ರೆರಡು ಜನ ಕೈವಲ್ಯ ಮಾರ್ಗಸ್ಥರಿಗೆ ಆ ನಮಿಪೆ ॥ ೨೧-೫೬ ॥ ೪೮॥

## ೧೬. ಬಿಂಬಮೂರ್ತಿ ಆವಾಹನ

ಬಿಂಬ ಜೀವಾಂಗುಷ್ಠ ಮಾತ್ರದಿ । ಇಂಬುಗೊಂಡಿಹ ಸರ್ವರೊಳು ಸೂ -। ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ ॥ ಎಂಬರೀತಗೆ ಕೋವಿದರು ವಿ -। ಶ್ವಂಭರಾತ್ಮಕ ಪ್ರಾಜ್ಞ ಭಕ್ತ ಕು - । ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ - ೯ ॥ ೪೯॥

ದೇವದೇವೇಶನ ಸುಮೂರ್ತಿ ಕ । ಳೇವರಗಳೊಳಗನವರತ ಸಂ - । ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ॥ ಶ್ರೀವರ ಜಗನ್ನಾಥ ವಿಠ್ಠಲ । ತಾವೊಲಿದು ಕಾರುಣ್ಯದಲಿ ಭವ । ನೋವು ಪರಿಹರಿಸುವನು ಪ್ರವಿತತ ಪತಿತಪಾವನನು ॥ ೮-೨೨ ॥ ೫೦॥

ಶ್ರೀಲಕುಮಿ ವಲ್ಲಭನು ವೈಕುಂ- । ಠಾಲಯದಿ ಪ್ರಣವ ಪ್ರಕೃತಿ ಕೀ - । ಲಾಲಜಾಸನಮುಖ್ಯ ಚೇತನರೊಳಗೆ ನೆಲೆಸಿದ್ದು ॥ ಮೂಲಕಾರಣ ಅಂಶನಾಮದಿ। ಲೀಲೆಗೈವುತ ತೋರಿಕೊಳ್ಳದೆ । ಪಾಲಿನೊಳು ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ ॥ ೧೪-೧೮ ॥ ೫೧॥

## ೧೭. ಅವಯವ ಚಿಂತನ

ಸ್ವರತ ಸುಖಮಯ ಸುಲಭ ವಿಶ್ವಂ - । ಭರ ವಿಶೋಕ ಸುರಾಸುರಾರ್ಚಿತ। ಚರಣಯುಗ ಚಾರ್ವಾಂಗ ಶಾರ್ಙ್ಗ ಶರಣ್ಯ ಜಿತಮನ್ಯು ॥ ಪರಮಸುಂದರತರ ಪರಾತ್ಪರ। ಶರಣಜನಸುರಧೇನು ಶಾಶ್ವತ । ಕರುಣಿ ಕಂಜದಳಾಕ್ಷ ಕಾಯನೆ ಕಂಗೊಳಿಪ ಶೀಘ್ರ ॥ ೧೯-೧೨ ॥ ೫೨॥

## ೧೮. ಪ್ರಾರ್ಥನೆ

ಶ್ರೀನಿಕೇತನ ಸಾತ್ವತಾಂಪತಿ । ಜ್ಞಾನಗಮ್ಯ ಗಯಾಸುರಾರ್ದನ । ಮೌನಿಕುಲಸನ್ಮಾನ್ಯ ಮಾನದ ಮಾತುಳಧ್ವಂಸಿ ॥ ದೀನಜನಮಂದಾರ ಮಧುರಿಪು । ಪ್ರಾಣದ ಜಗನ್ನಾಥವಿಠ್ಠಲ । ತಾನೆ ಗತಿಯೆಂದನುದಿನದಿ ನಂಬಿದವರನ ಪೊರೆವ ॥ ೭-೩೩ ॥ ೫೩॥

ಜಯ ಜಯ ಜಯಾಕಾಂತ ದತ್ತಾ - । ತ್ರಯ ಕಪಿಲ ಮಹಿದಾಸ ಭಕ್ತ । ಪ್ರಿಯ ಪುರಾತನ ಪುರುಷಪೂರ್ಣಾನಂದ ಜ್ಞಾನಘನ ॥ ಹಯವದನ ಹರಿ ಹಂಸ ಲೋಕ -। ತ್ರಯವಿಲಕ್ಷಣ ನಿಖಿಳಜಗದಾ - । ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು ॥ ೧೪-೮ ॥ ೫೪॥

## ೧೯. ಷೋಡಶೋಪಚಾರ ಪೂಜಾ

ವಾರಿಜಭವಾಂಡವೆ ಸುಮಂಟಪ । ಮೇರುಗಿರಿ ಸಿಂಹಾಸನವು ಭಾ - । ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿ ಮಂತ್ರ ॥ ಭೂರುಹಜ ಫಲ ಪುಷ್ಪ ಗಂಧ ಸ - । ಮೀರ ಶಶಿರವಿ ದೀಪ ಭೂಷಣ । ತಾರಕೆಗಳೆಂದರ್ಪಿಸಲು ಕೈಕೊಂಡು ಮನ್ನಿಸುವ ॥ ೫-೨೮ ॥ ೫೫॥

### ಕಲಶ ಪೂಜಾ

ಎರಡಧಿಕ ಎಪ್ಪತ್ತೆನಿಪ ಸಾ - । ವಿರದ ನಾಡಿಗೆ ಮುಖ್ಯವೇಕೋ । ತ್ತರ ಶತಗಳಲ್ಲಿಹವು ನೂರಾವಂದು ಮೂರ್ತಿಗಳು ॥ ಅರಿತು ದೇಹದಿ ಕಲಶನಾಮಕ। ಹರಿಗೆ ಕಳೆಗಳಿವೆಂದು ನೈರಂ - । ತರದಿ ಪೂಜಿಸುತಿಹರು ಪರಮಾದರದಿ ಭೂಸುರರು ॥ ೮-೧೮॥ ೫೬॥

### ಪಂಚಾಮೃತ

ಕ್ಷೀರ ದಧಿ ನವನೀತ ಘೃತದೊಳು । ಸೌರಭರಸಾಹ್ವಯನೆನಿಸಿ ಶಾಂ - । ತೀರಮಣ ಜ್ಞಾನಕ್ರಿಯೇಚ್ಛಾ ಶಕ್ತಿಯೆಂದೆಂಬ ॥ ಈರೆರಡು ನಾಮದಲಿ ಕರೆಸುವ। ಭಾರತೀ ವಾಗ್ದೇವಿ ವಾಯು ಸ । ರೋರುಹಾಸನರಲ್ಲಿ ನೆಲೆಸಿಹರೆಲ್ಲ ಕಾಲದಲಿ ॥ ೮-೨೬ ॥ ೫೭॥

### ಅಭಿಷೇಕ

ಶ್ರೀವರನಿಗಭಿಷೇಕವೆಂದರಿ - । ದೀ ವಸುಂಧರೆಯೊಳಗೆ ಬಲ್ಲವ । ರಾವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ॥ ತಾ ವೊಲಿದು ಬಂದಲ್ಲಿ ನೆಲೆಗೊಂ-। ಡೀವವಖಿಳಾರ್ಥಗಳನರಿಯದ । ಜೀವರಮರತರಂಗಿಣಿಯ- ನೈದಿದರು ಫಲವೇನು ॥೧೦-೭ ॥೫೮॥

### ಅಲಂಕಾರ

ಈತನಂತಾನಂತ ಗುಣಗಳ । ಪ್ರಾಂತಗಾಣದೆ ಮಹಲಕುಮಿ ಭಗ - । ವಂತಗಾಭರಣಾಯುಧಾಂಬರ ಆಲಯಗಳಾಗಿ ॥ ಸ್ವಾಂತದಲಿ ನೆಲೆಗೊಳಿಸಿ ಪರಮ ದು - । ರಂತ ಮಹಿಮನ ದೌತ್ಯಕರ್ಮ ನಿ - । ರಂತರದಿ ಮಾಡುತಲಿ ತದಧೀನತ್ವ ವೈದಿಹಳು ॥ ೭-೩೧ ॥ ೫೯॥

ಜಲಜನಾಭನ ಮೂರ್ತಿ ಮನದಲಿ । ನೆಲೆಗೊಳಿಸಿ ನಿಶ್ಚಲ ಭಕುತಿಯಲಿ । ಚಳಿ ಬಿಸಿಲು ಮಳೆ ಗಾಳಿಗಳ ನಿಂದಿಸದೆ ನಿತ್ಯದಲಿ ॥ ನೆಲದೊಳಿಹ ಗಂಧವೆ ಸುಗಂಧವು ಜಲವೆ ರಸ ರೂಪವು ಸುದೀಪವು । ಎಲರು ಚಾಮರ ಶಬ್ದ ವಾದ್ಯಗಳರ್ಪಿಸಲು ಒಲಿವಾ ॥ ೫-೧೩ ॥ ೬೦॥

ಗೋಳಕಗಳು ರಮಾರಮಣನ ನಿ - । ಜಾಲಯಗಳನುದಿನದಿ ಸಂಪ್ರ - । ಕ್ಷಾಲನೆಯ ಸಮ್ಮಾರ್ಜನವು ಕರಣಗಳೆ ದೀಪಗಳು ॥ ಸಾಲು ತತ್ತದ್ವಿಷಯಗಳ ಸ -। ಮ್ಮೇಳನವೆ ಪರಿಯಂಕ ತತ್ಸುಖ । ದೇಳಿಗೆಯೆ ಸುಪ್ಪತ್ತಿಗಾತ್ಮನಿವೇದನವೆ ವಸನಾ ॥ ೫-೧೪ ॥ ೬೧॥

ಪಾಪಕರ್ಮವು ಪಾದುಕೆಗಳನು - । ಲೇಪನವು ಸತ್ಪುಣ್ಯ ಶಾಸ್ತ್ರಾ - । ಲಾಪನವೆ ಶ್ರೀತುಲಸಿ ಸುಮನೋವೃತ್ತಿಗಳು ಸುಮನಾ ॥ ಕೋಪ ಧೂಪವು ಭಕ್ತಿ ಭೂಷಣ । ವ್ಯಾಪಿಸಿದ ಸದ್ಬುದ್ಧಿ ಛತ್ರವು । ದೀಪವೇ ಸುಜ್ಞಾನ ಆರಾರ್ತಿಗಳೆ ಗುಣ ಕಥನ ॥ ೫-೧೫ ॥ ೬೨॥

ಮನವಚನಕಾಯಕ ಪ್ರದಕ್ಷಿಣೆ । ಅನುದಿನದಿ ಸರ್ವತ್ರ ವ್ಯಾಪಕ । ವನರು-ಹೇಕ್ಷಣಗರ್ಭಿಸುತ ಮೋದಿಸುತಲಿರು ಸತತ ॥ ಅನುಭವಕೆ ತಂದುಕೊ ಸಕಲ ಸಾ -। ಧನಗಳೊಳಗಿದು ಮುಖ್ಯ ಪಾಮರ । ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ ॥ ೫-೧೬ ॥ ೬೩॥

## ನೈವೇದ್ಯ

ಚತುರವಿಧ ಪುರಷಾರ್ಥ ಪಡೆವರೆ । ಚತುರದಶ ಲೋಕಗಳ ಮಧ್ಯದೊ-। ಳಿತರುಪಾಯಗಳಿಲ್ಲ ನೋಡಲು ಸಕಲ ಶಾಸ್ತ್ರದಲಿ ॥ ಸತತ ವಿಷಯೇಂದ್ರಿಯಗಳಲಿ ಪ್ರವಿ- । ತತನೆನಿಸಿ ರಾಜಿಸುವ ಲಕ್ಷ್ಮೀ - । ಪತಿಗೆ ಸರ್ವ ಸಮರ್ಪಣೆಯೆ ಮಹಪೂಜೆ ಸದುಪಾಯ ॥ ೫-೧೭ ॥ ೬೪॥

ನೂತನ ಸಮೀಚೀನ ಸುರಸೋ । ಪೇತ ಹೃದ್ಯ ಪದಾರ್ಥದೊಳು ವಿಧಿ । ಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ ॥ ಪ್ರೀತಿ ಬಡಿಸುತ ನಿತ್ಯದಿ ಜಗ -। ನ್ನಾಥ ವಿಠಲನ ಕೂಡಿ ತಾ ನಿ - । ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ॥ ೩೧-೨೫॥ ೬೫॥

## ಮಂಗಳಾರ್ತಿ

ವಚನರಾದ್ರಿಧರಾಧರನೆ ಜಯ । ಮನುಜಮೃಗವರವೇಷ ಜಯ ವಾ । ಮನ ತ್ರಿವಿಕ್ರಮ ದೇವ ಜಯ ಭೃಗುರಾಮ ಭೂಮ ಜಯ ॥ ಜನಕಜಾವಲ್ಲಭನೆ ಜಯ ರು। ಗ್ಮಿಣಿ ಮನೋಹರ ಸಿದ್ಧಿದಾಯಕ । ಜಿನವಿಮೋಹಕ ಕಲಿವಿದಾರಣ ಜಯ ಜಯಾರಮಣ ॥ ೧೦-೨೪ ॥ ೬೬॥

## ಮಂತ್ರಪುಷ್ಪ

ದೇಹಗಳ ಕೊಡುವವನು ಅವರವ । ರಹರಗಳ ಕೊಡದಿಹನೆ ಸುಮನಸ। ಮಹಿತ ಮಂಗಳ ಚರಿತ ಸದ್ಗುಣಭರಿತನನವರತ ॥ ಅಹಿಕ ಪಾರತ್ರಿಕ ಸುಖಪ್ರದ। ವಹಿಸಿ ಬೆನ್ನಿಲಿ ಬೆಟ್ಟವಮೃತವ । ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನು ॥ ೧೪ - ೧೦ ॥ ೬೭॥

## ೨೦. ರಮಾನ್ನೈವೇದ್ಯ, ಹಸ್ತೋದಕ

ಶ್ರೀ ವಿಧೀರ ವಿಪಾಹಿಪೇಶ ಶ - । ಚೀವರಾತ್ಮಭವಾರ್ಕ ಶಶಿ ದಿ - । ಗ್ದೇವ ಋಷಿ ಗಂಧರ್ವ ಕಿನ್ನರ ಸಿದ್ಧಸಾಧ್ಯ ಗಣ ॥ ಸೇವಿತಪದಾಂಭೋಜ ತತ್ಪಾ - । ದಾವಲಂಬಿಗಳಾದ ಭಕುತರ । ಕಾವ ಕರುಣಾಸಾಂದ್ರ ಲಕ್ಷ್ಮೀ ಹೃತ್ಕುಮುದ ಚಂದ್ರ ॥ ೧೬-೩೩ ॥ ೬೮॥

## ೨೧. ಪೂಜಾ ಸಮರ್ಪಣ

ವಿತ್ತದೇಹಾಗಾರ ದಾರಾ - । ಪತ್ಯ ಮಿತ್ರಾದಿಗಳೊಳಗೆ ಗುಣ । ಚಿತ್ತ-ಬುದ್ಧ್ಯಾದಿಂದ್ರಿಯಗಳೊಳು ಜ್ಞಾನಕರ್ಮದೊಳು ॥ ತತ್ತದಾಹ್ವಯನಾಗಿ ಕರೆಸುತ। ಸತ್ಯ ಸಂಕಲ್ಪಾನುಸಾರದಿ । ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುತಿರು ॥ ೫-೧೦ ॥ ೬೯॥

## ೨೨. ಫಲಶ್ರುತಿ

ಭಾವದ್ರವ್ಯ ಕ್ರಿಯೆಗಳೆನಿಸುವ । ಈ ವಿಧಾದ್ವೈತ ತ್ರಯಂಗಳ । ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ ॥ ತಾವಕನು ತಾನೆಂದು ಪ್ರತಿದಿನ । ಸೇವಿಸುವ ಭಕ್ತರಿಗೆ ತನ್ನನು । ಈವ ಕಾವ ಕೃಪಾಳು ಕರಿವರಗೊಲಿದ ತೆರದಂತೆ ॥ ೫-೧೧ ॥ ೭೦॥

ಈ ಪರಿಯ ದೇಹದೊಳು ಭಗವ- । ದ್ರೂಪಗಳ ಮರೆಯದಲೆ ಮನದಿ ಪ -। ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರನ ॥ ಗೋಪತಿ ಜಗನ್ನಾಥ ವಿಠಲ ಸ -। ಮೀಪಗನು ತಾನಾಗಿ ಸಂತತ । ಸಾಪರೋಕ್ಷ್ಯಯ ಮಾಡಿ ಪೊರೆವನು ಎಲ್ಲ ಕಾಲದಲೀ ॥ ೯-೩೧ ॥ ೭೧॥

೨೩. ಮಂಗಳ

ಜಯ ಜಯತು ತ್ರಿಜಗದ್ವಿಲಕ್ಷಣ । ಜಯ ಜಯತು ಜಗದೇಕ ಕಾರಣ । ಜಯ ಜಯತು ಜಾನಕಿರಮಣ ನಿರ್ಗತ ಜರಾಮರಣ ॥ ಜಯ ಜಯತು ಜಾಹ್ನವಿಜನಕ ಜಯ। ಜಯತು ದೈತ್ಯಕುಲಾಂತಕ ಭವಾ - । ಮಯ ಹರ ಜಗನ್ನಾಥವಿಠ್ಠಲ ಪಾಹಿ ಮಾಂ ಸತತ ॥ ೩೨-೫೬ ॥ ೭೪ ॥

॥ ಇತಿ ಶ್ರೀಹರಿಕಥಾಮೃತ ಸಾರೋಕ್ತ ಉಪಾಸನಾ ಕ್ರಮ ಸಂಪೂರ್ಣ॥

*****

ಶ್ರೀ ಗುರು ರಾಮವಿಠಲ ದಾಸರಾಯ ( ೧೯ ನೇ ಶತಮಾನದವರು ) ವಿರಚಿತ

## ಶ್ರೀಮದ್ಭಾಗವತ ಕಥಾಸಂಗ್ರಹ ಪದ್ಯ ಮಾಲಾ

(ಸಂಕ್ಷೇಪ ಭಾಗವತ, ವಾರ್ಧಿಕ ಷಟ್ಪದಿ)

**ಸೂಚನೆ :** ಆಗಮದ ಸಾರ ಶಾಸ್ತ್ರ ವಿಚಾರ ಪೌರಾಣ । ಯೋಗ ತತ್ವಗಳ ಶೃಂಗಾರವೆನಿಸುತಿಹ ಸಿರಿ । ಭಾಗವತಮಂ ಪೇಳ್ವೆ ಸಂಕ್ಷೇಪದಿಂದ ಹನ್ನೆರಡು ಪದ್ಯಂಗಳಾಗಿ ॥ ಪ.॥ ಗುರುಸುತನ ಬಾಣದುಪಹತಿಗೆ ಮೊರೆಯಿಡುವ ಉ- । ತ್ತರೆಯ ಗರ್ಭವ ಶೌರಿ ರಕ್ಷಿಸಲ್ ಬಳಿಕ ಧರೆ । ಗರಸಾಗಿ, ಕಲಿಯ ನಿಗ್ರಹಿಸಿ ಧರ್ಮದಿ ರಾಜ್ಯವಾಳುತಿರೆ ವಿಷ್ಣುರಾತಂ ॥ ವರಶಮೀಕಾತ್ಮಜನ ಶಾಪಬರೆ ತಾ ಕೇಳಿ । ಪರಮ ವೈರಾಗ್ಯಾದಿ ಕುಶಾಸ್ತರಣದೊಳಿರಲ್ । ಕರುಣದಿಂ ಶುಕಮುನಿಪನೈತಂದನಿದುವ ಪ್ರಥಮ ಸ್ಕಂಧದೊಳ್ ॥ ೧॥ ಸಾರವಾಗಿಹ ಭಕ್ತಯೋಗವಂ ಪೂರ್ವದೊಳ್ । ನಾರದಗೆ ವಿಧಿಪೇಳ್ದ ಸೃಷ್ಟಿ ಕ್ರಮಂ ಪ್ರಳಯ । ವಾರಿಯಲಿ ಬ್ರಹ್ಮ ತಪಗೈಯಲೊಲಿದಚ್ಯುತಂ ತನ್ನ ಪುರಮಂ ತೋರಿಸಿ ॥ ಚಾರು ಭಾಗವತ ತತ್ತ್ವೋಪದೇಶದಿ ಸೃಷ್ಟಿ । ಗಾರಂಭ ಮಾಡಿಸಿದನೆಂದು ಶುಕ ಮುನಿವರಂ । ಧಾರುಣೀ ಪತಿ ಪರೀಕ್ಷಿತಗರುಹಿದಮಂ ದ್ವಿತೀಯ ಸ್ಕಂಧದೊಳ್ ತಿಳುವುದು ॥೨॥ ವಿದುರ ಮೈತ್ರೇಯ ಸಂವಾದವಂ ಸೃಷ್ಟಿಯಾ - । ಭ್ಯುದಯವಂ ಸ್ವಾಯಂಭುವಿನ ಜನನ, ವರಹರೂ - । ಪದ ಹರಿಯ ಚರಿತೆ ಸನಕಾದಿಗಳ್ ಜಯ ವಿಜಯರಿಗೆ ಕೊಟ್ಟ ಶಾಪ ತೆರನಂ ॥ ಉದಿಸಿದಂ ಹರಿ ಕರ್ದಮಂಗೆ ಕಪಿಲಾಖ್ಯದಿಂ । ವಿದಿತ ವಾಗಲ್‌ತಾಯಿಗರುಹಿದಂ ಸಾಂಖ್ಯಯೋ -। ಗದನೆಲೆಯ ರಾಜಂಗೆ ಮುನಿಯೊರೆದನಿದು ತೃತೀಯ ಸ್ಕಂಧದೊಳ್ ತಿಳಿವುದು ॥ ೩॥ ಶಿವನ ವೈರದಿ ದಕ್ಷ ಯಾಗಮಂ ಮಾಳ್ಪುದಂ । ತವಕದಿಂದ ಕೆಡಿಸಿ ಶಂಕರನು ಕರುಣಿಸುವುದಂ । ಧ್ರುವನ ಚರಿತೆಯುಮಂಗವೇನರ ಚರಿತ್ರೆಗಳ್ ಪೃಥು ಚಕ್ರವರ್ತಿ ಜನನ ॥ ಅವನಿ ಗೋರೂಪಿಯಾಗುತ ಸಕಲ ವಸ್ತು ಸಾ- । ರವಕೊಡುವುದಂ ಪ್ರಚೇತಸರುಪಾಖ್ಯಾನಮಂ -। ತವೆ ಪುರಂಜನನುಪಾಖ್ಯಾನಮಂ ಇದು ಚತುರ್ಥ ಸ್ಕಂಧದೊಳ್ ತಿಳಿವುದು ॥ ೪॥ ವರ ಪ್ರಿಯವ್ರತ ಚರಿತೆಯಾಗ್ನೀದ್ರಚರಿತೆಯಂ । ಹರಿಯ ಋಷಭಾವತಾರದ ಮಹಾಮಹಿಮೆಯಂ । ಭರತರಾಯನ ಮೂರು ಜನ್ಮ ವೃತ್ತಾಂತಮಂ ಭೂಗೋಳ ವಿಸ್ತಾರವು॥

ಎರಡನೇ ಖಗೋಳದೊಳ್ ವಾಯ್ವಾದಿ ಮಂಡಲ ವಿ - । ವರಗಳುಂ ನರಕಾದಿ ವರ್ಣನೆಯ ಸಂಖ್ಯೆಯಂ ।ಪರಿಪರಿಯ ಪಾಪಪ್ರಭೇದಮಂ ಇದು ಪಂಚಮ ಸ್ಕಂಧದೊಳ್ ತಿಳಿವುದು ॥ ೫॥ ಅರುಹಿದನಜಾಮಿಳನ ಚರಿತೆಯಂ ದಕ್ಷಸುತೆ -। ಯರಜನನಮಂ ವಿಶ್ವರೂಪಾಖ್ಯ ಭೂಸುರಂ। ಹರಿಗೆ ನಾರಾಯಣ ಕವಚವ ಮಿಗೆ ಪೇಳ್ವುದಂ ವೃತ್ರಾಸುರನ ಕೊಲ್ವುದಂ ॥ ಭರದಿ ಬೆನ್ಹತ್ತಿ ಬಹ ಬ್ರಹ್ಮಹತ್ಯವ ಸುರಪ -। ಧರಣಿ- ಜಲ - ವೃಕ್ಷ - ಸ್ತ್ರೀಯರಿಗೆ ಭಾಗಿಸಿದುದಂ। ವರಚಿತ್ರಕೇತುವಿನುಪಾಖ್ಯಾನ- ವಿದುವೆ ಷಷ್ಠಸ್ಕಂಧದೊಳ್ ತಿಳಿವುದು ॥ ೬॥ ವಿಧಿಯ ವರದಿ ಹಿರಣ್ಯಕಶ್ಯಪನುಳಗರ್ವದಿ ವಿ - । ಬುಧರಂ ಜಯಿಸುವುದಂ, ತರಳಿ ಪ್ರಹ್ಲಾದನ -। ಭ್ಯುದಯವಂ ಹರಿಯ ವೈರದೊಳಸುರ ಬಾಧಿಸಲ್ ನರಸಿಂಹನಾಗಿ ಹರಿಯು ॥ ಮದಮುಖನ ಸೀಳ್ವುದಂ ಪ್ರಹ್ಲಾದ ನೃಪನ ಜಗ -।ರದಮುಖದಿ ವರ್ಣಾಶ್ರಮದ ಧರ್ಮಕೇಳ್ವುದುಂ। ವಿಧುಧರಂ ತ್ರಿಪುರವಂ ವಧಿಸಿದ ಕಥೆಯು ಸಪ್ತಮ ಸ್ಕಂಧದೊಳ್ ತಿಳಿವುದು ॥ ೭॥ ಮನುಗಳ ಚರಿತ್ರೆಗಳ್ ಗಜರಾಜವೋಕ್ಷವಂ । ದನುಜದಿವಿಜರು ಶರಧಿಯಂ ಮಥಿಸೆ ವಿಷವ ರು-। ದ್ರನು ಭಕ್ಷಿಸುವುದಮಮೃತವ ಮೋಹಿನೀ ರೂಪದಿಂದ ಹರಿ ಸುರರಿಗೀಯೆ ॥ ಅನಿಮಿಷರ ಗೆದ್ದು ಬಲಿ ಶತಕ್ರತುವ ಮಾಳ್ಪುದಂ । ವನಜಾಕ್ಷ ವಟುವೇಷದಿಂದವನ ಗೆಲ್ವುದಂ॥ ಘನವಾದ ಮೀನಾವತಾರ ಚರಿತ್ರೆಯಮಷ್ಟಮ ಸ್ಕಂಧದೊಳ್ ತಿಳಿವುದು ॥ ೮॥ ಇನವಂಶರಾಜರ ಚರಿತ್ರೆಯೊಳಗಂಬರೀ -। ಷನಮಹಿಮೆ ಇಕ್ಷ್ವಾಕು ರಾಜನ ಚರಿತ್ರೆ ರಾ-। ಮನ ಚರಿತೆಯುಂ ಭವಿಷ್ಯದ್ರಾಜರಿತಿಹಾಸ ಚಂದ್ರವಂಶಾನುಚರಿತಂ ॥ ವನಿತೆಯುಂ ಪುರುಷನಾಗಿದ್ದಿಳನ ಚರಿತೆ ಶು -। ಕ್ರನ ಮಗಳ ಶರ್ಮಿಷ್ಠೆಯರ ಚರಿತೆ ಯದುಪೂರ್ವ -। ಜನಪಾಲವಂಶ ಪಾರಂಪರ್ಯವಿದುವೆ ನವಮಸ್ಕಂಧದೊಳ್ ತಿಳಿವುದು ॥ ೯॥ ಹರಿ ದೇವಕಿ ಪುತ್ರನಾಗಿ ಗೋಕುಲದಿ ಪರಿ -। ಪರಿ ಲೀಲೆಗಳ ತೋರಿ ದುಷ್ಟರಂ ಸದೆದು ತಾಂ। ತೆರಳಿ ಮಧುರೆಯೊಳು ಕಂಸಾದಿಗಳ ವಧಿಸಿ ಪಿತೃ-ಮಾತೃಗಳ ಸೆರೆಯ ಬಿಡಿಸಿ ॥ವರನುಗ್ರಸೇನಂಗೆ ಪಟ್ಟವಗಟ್ಟಿ ಸಾ - । ಗರದಿ ಪುರವಂ ರಚಿಸಿ ಬಲು ತರುಣಿಯರ ಕೂಡಿ । ಧರೆಯ ಭಾರವನಿಳುಹಿದಂ ಕೃಷ್ಣನಿದುವೆ ದಶಮಸ್ಕಂಧದೊಳ್ ತಿಳಿವುದು ॥ ೧೦॥ ವಸುದೇವ ನಾರದನ ಬೋಧೆಯಿಂದಲಿ ಮಖವ । ನೆಸಿಗಿದಂ ಯದುಕುಲಕೆ ಹರಿಯ ಸಂಕಲ್ಪದಿಂ। ಋಷಿಶಾಪ ಬರುವುದಂ ಉದ್ಧವಗೆ ಪರಮಾತ್ಮ ತತ್ವಬೋಧೆಯನರುಪಿದಂ ॥ ಮುಸಲದಿಂ ಯಾದವರ್ ಕ್ಷಯವೈದಲನ್ನೆಗಂ । ಬಿಸಜನಾಭನು ರಾಮನೊಡನೆ ತಾ ತೆರಳಿದಂ । ಶಶಿಮುಖಿಯರುಳಿದವರನರ್ಜುನಂ ಕರೆದೊಯ್ದನೇಕಾದಶಸ್ಕಂಧದೊಳ್ ॥ ೧೧॥ ಏಳು ದಿನದೊಳ್ ಪರೀಕ್ಷಿತ ಮಹೀಪಾಲ ತಾಂ। ಕೇಳಿದಂ ಶುಕನಿಂದ ಸಕಲಮುಂ ಕಲಿಕಾಲ। ದೇಳಿಗೆಯನು ಪ್ರಳಯವೃತ್ತಾಂತಮಂ ಸೂತ ಶೌನಕಾದಿಗಳಿಗಿದನು ॥ ಪೇಳಿದಂ ಬಾದರಾಯಣನ ಕೃಪೆಯಿಂದ ದ್ವಿ -। ಜಾಳಿ ಹರುಷದ ಕಡಲೋಳೀಜಾಡಿದುದು ರಮಾ -। ಲೋಲನ ಮಹಾಲೀಲೆಯವತಾರಮದ್ಭುತಂ ದ್ವಾದಶಸ್ಕಂಧವಿದುವೇ ॥ ೧೨॥ ಇಂತೀಪರಿಯ ಮಹಾಭಾಗವತ ಶಾಸ್ತ್ರಮಂ। ಸಂತರಡಿಗಳಿಗೆರಗಿ ಪೇಳ್ದೆ ಸಂತೋಷದಿಂ । ಕಂತುಪಿತ ಗುರುರಾಮ ವಿಠಲ ತಾಂ ಹೃದಯದೊಳ್ ನಿಂತು ನುಡಿಸಿದತೆರದೊಳು ॥ ಸ್ವಾಂತ ನಿರ್ಮಲರಾಗಿ ಪಠಿಸುವರಿಗನುದಿನಂ । ಚಿಂತಿತಾರ್ಥಗಳಿಹಪರಸೌಖ್ಯವಿತ್ತು ಶ್ರೀ -। ಕಾಂತ ಗುರುರಾಮ ವಿಠಲ ಪೊರೆವ ಜಯಜಯ ದುರಂತ ಮಹಿಮಂಗೆ ನಿರತಂ॥೧೩॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಹನ್ನೆರಡು ಸ್ಕಂಧ ಭಾಗವತ

ವಟದೆಲೆ ವ್ಯಾಲೆ ಮಾರ್ಕಾಂಡೇಯರು ಮಹಾ ಪ್ರಳಯವನೇ ತೋರಿದರು ॥ ಸುಖಚಿಂತನೆ ಪರೀಕ್ಷಿತ ರಾಯಗ ಹೇಳಿದರು ॥ ಪರಮತತ್ವ ತಿಳಿದು ರಾಯ ನಮಸ್ಕಾರವ ಹೇಳಿದನು ॥ ಶುಕಾಚಾರ್ಯರಿಗೆ ಹೇಳಿ ಕಳಿಸಿ ಧ್ಯಾನಕ್ಕೆ ಕುಳಿತನು ರಾಯಾ ॥ ಪ॥ ಪ್ರಥಮ ಸ್ಕಂಧದಲಿ ನಾರಾಯಣನ ವ್ಯಾಖ್ಯಾನ, ಕುಂತೀದೇವೀ ಸ್ತೋತ್ರ, ಪರೀಕ್ಷಿತರಾಯನ ಉತ್ಪತ್ತಿ, ಶಾಪ, ಶುಕಾಚಾರ್ಯರ ಸಂದರುಶನ ಹೇಳಿದರು ॥ ೧॥ ದ್ವಿತೀಯ ಸ್ಕಂಧದಲಿ ವಿರಾಟಪುರುಷ ಧ್ಯಾನ, ನಾರಾಯಣನ ಅವತಾರ ಮೂಲ್ಕ ಖಟ್ವಾಂಗರಾಯನ ಪುರಾಣಗಳ ಹೇಳಿದರು ॥ ೨॥ ತೃತೀಯ ಸ್ಕಂಧದಲಿ ಬ್ರಹ್ಮನ ಸೃಷ್ಟಿವಿಸ್ತಾರ, ಸ್ವಯಂಭು ಮನುಸೃಷ್ಟಿ, ದೇವಹೂತಿ, ದೇವಪ್ರಸನ್ನಿ, ವಿದುರ, ಮೈತ್ರೇಯರ ಸಂವಾದವನೇ ಹೇಳಿದರು ॥ ೩॥ ಚತುರ್ಥ ಸ್ಕಂಧದಲಿ ಯಜ್ಞದ ವಾರ್ತೆ. ಧ್ರುವರಾಯನ ಚರಿತ್ರೆ, ಯದುರಾಯನ ಚರಿತ್ರೆ, ಪುರಂಜನ ವ್ಯಾಖ್ಯಾನವನೆ ಹೇಳಿದರು ॥ ೪॥ ಪಂಚಮ ಸ್ಕಂಧದಲಿ, ಪ್ರಿಯ ವ್ರತರಾಯನ ವಂಶ, ಜಡಭರತನ ಕಥೆ, ಭೂಗೋಲ ಖಗೋಲ ವಿಸ್ತಾರವನೇ ಹೇಳಿದರು ॥ ೫॥ ಷಷ್ಠ ಸ್ಕಂಧದಲಿ ಅಜಮಿಳನ ವ್ಯಾಖ್ಯಾನ, ಏಕೋನ- ಪಂಚಾಶತಮೂರ್ತಿಗಳ ಉತ್ಪತ್ತಿ, ಶಾಪ, ವೃತ್ರಾಸುರ ವಧಾ ವಿಸ್ತಾರವನೇ ಹೇಳಿದರು ॥ ೬॥ ಸಪ್ತಮ ಸ್ಕಂಧದಲಿ ಪ್ರಹ್ಲಾದನ ಚರಿತ್ರೆ, ನರಸಿಂಹನ ಅವತಾರ, ಹಿರಣ್ಯಕಶ್ಯಪಪುವಿನ ವಧಾ, ವರ್ಣಾಶ್ರಮದ ವಿಸ್ತಾರವನೇ ಹೇಳಿದರು ॥ ೭॥ ಅಷ್ಟಮ ಸ್ಕಂಧದಲಿ ಗಜೇಂದ್ರಮೋಕ್ಷದ ವಾರ್ತೆ, ಕ್ಷೀರಾಬ್ಧಿಮಥನವನೆ ಮತ್ಸ್ಯಾವತಾರ, ಕೂರ್ಮಾವತಾರ, ವಾಮನಾವತಾರ, ವಿಸ್ತಾರವನೇ ಹೇಳಿದರು ॥ ೮॥ ನವಮ ಸ್ಕಂಧದಲಿ ರಾಜ ವಂಶಾವಳಿ. ಪರಶುರಾಮ ದೇವರ ಸೃಷ್ಟಿ, ಮತ್ಸ್ಯಾವತಾರವನೇ ಹೇಳಿದರು ॥ ೯॥ ದಶಮ ಸ್ಕಂಧದಲಿ ಶ್ರೀಕೃಷ್ಣನ ಚರಿತ್ರೆ ಹೇಳಿದರು, ರಾಸಕ್ರೀಡೆ, ಜಲಕ್ರೀಡೆ ಪೂತನಾ, ಕಂಸ ಜರಾಸಂಧರ ವಧೆ ವಿಸ್ತಾರವನೇ ಹೇಳಿದರು ॥ ೧೦॥ ಏಕಾದಶ ಸ್ಕಂಧದಲಿ ಶ್ರೀಕೃಷ್ಣ - ಉದ್ಧವರ ಸಂವಾದ, ಪಾಂಡವರು ಹಸ್ತಿನಾವತಿ ಪರೀಕ್ಷಿತರಾಯಗ ಕೊಟ್ಟು ಪರಂಧಾಮಕ ತೆರಳಿದರು ಅಂತಾ ಹೇಳಿದರು ॥ ೧೧॥ ದ್ವಾದಶ ಸ್ಕಂಧದಲಿ ವೇದವಿಭಾಗ, ಸರ್ಪಯಾಗದ ಮಹಿಮೆ ಮಾರ್ಕಾಂಡೇಯರ ಚರಿತ್ರೆ ಪುರಾಣ ಹೇಳಿದರು ॥೧೨॥ ಹನ್ನೆರಡು ಸ್ಕಂಧ ಭಾಗವತ ವೇದವ್ಯಾಸ ದೇವರು ಮಾಡಿದ್ದು ಹೇಳಿ ಕೇಳಿದಂಥಾ ಸಜ್ಜನರಿಗೆ ಶ್ರೀಮದಾನಂದತೀರ್ಥರೊಲಿದು ಸ್ವಾಮಿ ರಕ್ಷಿಸುವಾ ॥ ಸಂಪೂರ್ಣಂ॥

## ಒಂದೇ ಶ್ಲೋಕದಲ್ಲಿ ಇಡೀ ಭಾಗವತ

ಆದೌ ದೇವಕಿದೇವಿಗರ್ಭಜನನಂ ಗೋಪೀಗೃಹೇ ವರ್ಧನಂ
ಮಾಯಾಪೂತನಿಜೀವಿತಾಪಹರಣಂ ಗೋವರ್ಧನೋದ್ಧಾರಣಮ್ ।
ಕಂಸಚ್ಛೇದನಕೌರವಾದಿಹನನಂ ಕುಂತೀಸುತಾಪಾಲನಂ
ಏತದ್ಭಾಗವತಂ ಪುರಾಣಕಥಿತಂ ಶ್ರೀಕೃಷ್ಣಲೀಲಾಮೃತಮ್ ॥
॥ ಇತಿ ಏಕಶ್ಲೋಕೀಯಂ ಭಾಗವತಮ್ ॥

***

## 'ರಾಮಕಥಾಮೃತ'

**ರಾಗ : (ಮೋಹನ) ತಾಳ : ಛಾಪು**

ಅಸುರ ಬಾಧಿಸುತಿರಲು ಋಷಿಗಳು ಸ್ತುತಿಮಾಡೆ । ದಶರಥನ ಗರ್ಭದಲಿ ಜನಿಸಿ ಬಂದೆ ||೧|| ಶಿಶುವಾಗಿ ಕೌಸಲೆಗೆ ಬಾಲಲೀಲೆಯ ತೋರ್ದು । ಕುಶಲದಿಂ ನಾಲ್ವರ ಕೂಡೆ ಬೆಳೆದೆ ||೨|| ಅಸುರರನೆ ಬಡಿದಟ್ಟಿ ಋಷಿಯ ಯಾಗವ ಕಾಯ್ದು । ವಸುಧೆಯೊಳು ಶಿಲೆಯನು ಸತಿಯ ಮಾಡಿ ||೩|| ಮಿಥಿಲಪಟ್ಟಣಕೈದಿ ಮೃಡನ ಧನುವನೆ ಮುರಿದು । ಶಶಿಮುಖಿ ಜಾನಕಿಯ ಕರವ ಪಿಡಿದು ||೪|| ಪಥದೊಳಗೆ ಬರುವ ಭಾರ್ಗವರೊಡನೆ ಹೋರಾಡಿ। ದಶರಥಗೆ ಏಕೀಭಾವವನೆ ತೋರಿ ||೫|| ಪರಮಹರುಷದಲಿ ಸಾಕೇತನಗರಿಗೆ ಬಂದು । ಕಿರಿಯಮಾತೆಯ ಕಠಿಣನುಡಿ ಕೇಳಿ ||೬|| ಚಿತ್ರಕೂಟಕೆ ಬಂದು ಕೃತ್ಯವೆಲ್ಲವ ನಡೆಸಿ । ಭ್ರಾತೃ ಭರತನಿಗೆ ಪಾದುಕೆಯನಿತ್ತು ||೭|| ವನದೊಳಗೆ ಸಂಚರಿಸಿ ಘನಕಾರ್ಯಗಳ ಮಾಡಿ । ಹನುಮನ ಕಳುಹಿ ಮುದ್ರಿಕೆಯ ಕೊಡಲು ||೮|| ಮಿತ್ರೆ ಜಾನಕಿಗರುಹಿ ರತ್ನಕೊಂಡು ಬರಲು । ಅತ್ಯಂತ ಹರುಷದಲಿ ಶರಧಿಕಟ್ಟಿ ||೯|| ದುಷ್ಟರಾಕ್ಷಸಕುಲವ ಕುಟ್ಟಿ ಬೇರನೆ ಸವರಿ । ಸೃಷ್ಟಿಸುತೆ ಜಾನಕಿಯ ಅಗ್ನಿಹೊಗಿಸಿ ||೧೦|| ಪಟ್ಟಣಕೆ ಬಂದು ಭರತನಿಗೆ ಪೇಳೆ । ಅಷ್ಟಗಂಗೆ ಉದಕವನೆ ತಂದು ||೧೧|| ಅಷ್ಟ ಋಷಿಗಳು ಎಲ್ಲ ಕೂಡಿಕೊಂಡು । ಪಟ್ಟಾಭಿಷೇಕವನು ಮಾಡುತಿರಲಂದು ||೧೨|| ಸೃಷ್ಟಿಯೊಳು ಜಗನ್ನಾಥವಿಠಲನಿಗೆ ಪುಷ್ಪ । ವೃಷ್ಟಿಗಳನ್ನು ಕರೆದರಾಗ ||೧೩||

## ಸಂಕ್ಷೇಪ ರಾಮಾಯಣ

ಕಂದನೆಂದೆನಿಸಿದ ಕೌಸಲ್ಯದೇವಿಗೆ ರಾಮ ಎನಬಾರದೆ ।
ಇಂದಿರಾಪತಿ ರಾಮಚಂದ್ರಗೆ ಶ್ರೀರಘುರಾಮ ಎನಬಾರದೆ ||೧||
ಶಿಶುವಾಗಿ ಅವತಾರ ಮಾಡಿದ ದಶರಥನಲಿ ರಾಮ ಎನಬಾರದೆ ।
ಋಷಿಯಜ್ಞ ಸಲಹಿ ರಕ್ಕಸರನೆ ಕೊಂದ ಶ್ರೀರಾಮ ಎನಬಾರದೆ ||೨||
ನೀಟಾಗಿ ನೆನೆ ಭಾನುಕೋಟಿತೇಜ ಶ್ರೀರಾಮ ಎನಬಾರದೆ ।
ಸಾತ್ವಿಕ ದೈವವೆ ತಾಟಕಾಂತಕ ಶ್ರೀರಾಮ ಎನಬಾರದೆ ||೩||
ಪಾದನಖವು ಸೋಕಿ ಪಾಪನಾಶನವಾಗೆ ರಾಮ ಎನಬಾರದೆ ।
ಶ್ರೀಪತಿ ಕರುಣದಿ ಶಿಲೆಯು ಸ್ತ್ರೀಯಾಗಲು ರಾಮ ಎನಬಾರದೆ ||೪||
ಸಕಲ ಸದ್ಗುಣ ಪೋಗಿ ಮಿಥಿಲಾ ಪಟ್ಟಣದಲಿ ರಾಮ ಎನಬಾರದೆ ।
ತ್ರಿಪುರ ಸಂಹಾರ ತ್ರಿನೇತ್ರನ ಧನುವೆತ್ತಿ ರಾಮ ಎನಬಾರದೆ ||೫||
ಚೆಲ್ವೆ ಜಾನಕಿ ಮಲ್ಲಿಗೆಯ ವನಮಾಲೆಯು ರಾಮ ಎನಬಾರದೆ ।
ವಲ್ಲಭಗ್ಹಾಕಲು ಪುಲ್ಲಲೋಚನೆ ಸೀತಾರಾಮ ಎನಬಾರದೆ ||೬||
ಮಂಗಳ ಮಹಿಮೆ ಸೀತಾಂಗನೆ ಕೊರಳಿಗೆ ರಾಮ ಎನಬಾರದೆ ।

ಮಾಂಗಲ್ಯ ಬಂಧನ ಮಾಡಿದ ಮಹಾತ್ಮನು ರಾಮ ಎನಬಾರದೆ ॥೭॥
ಜಗದೇಕ ಸುಂದರಿ ಜಾನಕಿಯನೆ ಗೆದ್ದ ರಾಮ ಎನಬಾರದೆ ।
ಜಗದೀಶ ಜನಕಗೆ ಜಾಮಾತನೆನಿಸಿದೆ ರಾಮ ಎನಬಾರದೆ ॥೮॥
ಮುದ್ದು ಜಾನಕಿ ಕೂಡಿ ಅಯೋಧ್ಯಕೆ ಬರುತಿರೆ ರಾಮ ಎನಬಾರದೆ ।
ಮಧ್ಯ ಮಾರ್ಗದಿ ಬಂದಿದ್ದನು ಭಾರ್ಗವ ರಾಮ ಎನಬಾರದೆ ॥೯॥
ತನ್ನ ತಾನೇ ಗೆದ್ದು ಧನ್ಯನೆಂದೆನಿಸಿದಿ ರಾಮ ಎನಬಾರದೆ ।
ಬ್ರಹ್ಮ ಶಂಕರರಿಂದಿನ್ನು ಉತ್ತಮನಾದ ರಾಮ ಎನಬಾರದೆ ॥೧೦॥
ಪಟ್ಟಗಟ್ಟಲು ಪರಮೋತ್ಸವ ಕಾಲಕ್ಕೆ ರಾಮ ಎನಬಾರದೆ ।
ದುಷ್ಟ ಕೈಕೆಯ ನಿಷ್ಠೂರ್ವಚನವ ಕೇಳಿದ ರಾಮ ಎನಬಾರದೆ ॥೧೧॥
ಆ ಲಕ್ಷುಮಿಯ ಮಾತಲಕ್ಷ್ಯವ ಮಾಡದೆ ರಾಮ ಎನಬಾರದೆ ।
ಲಕ್ಷ್ಮಣ ಲಕ್ಷ್ಮಿಕೂಡ್ವನವಾಸ ತಿರುಗಿದ ರಾಮ ಎನಬಾರದೆ ॥೧೨॥
ಸೋಸಿಲಿಂದಲಿ ಸತಿ ಆದೇನೆಂದಸುರೆಯ ರಾಮ ಎನಬಾರದೆ ।
ನಾಶರಹಿತ ಕಿವಿ ನಾಸಿಕನಳಿಸಿದ ಶ್ರೀರಾಮ ಎನಬಾರದೆ ॥೧೩॥
ದಂಡಕಾರಣ್ಯದಿ ಕಂಡು ಮಾರೀಚನ್ನ ರಾಮ ಎನಬಾರದೆ ।
ಹಿಂದ್ಹೋಗೆ ರಾಘವ ಬಂದ ರಾವಣನಲ್ಲೆ ರಾಮ ಎನಬಾರದೆ ॥೧೪॥
ಘಾತಕ ರಾವಣ ಜಗನ್ಮಾತೆಯನೊಯ್ಯಲು ರಾಮ ಎನಬಾರದೆ ।
ಸೋತು ಜಟಾಯು ಯುದ್ಧವಮಾಡಿ ತಾ ಬೀಳಲು ರಾಮ ಎನಬಾರದೆ ॥೧೫॥
ಒಲಿದು ಸುಗ್ರೀವಗೆ ವಾಲಿ ವಧೆಯ ಮಾಡಿ ರಾಮ ಎನಬಾರದೆ ।
ವಾನರಗಳ ಕೂಡಿ ವಾರಿಧಿ ಕಟ್ಟಿದ ಶ್ರೀರಾಮ ಎನಬಾರದೆ ॥೧೬॥
ಲೋಕಮಾತೆಯ ಲಂಕಾನಾಥ ತಾ ಒಯ್ದಾಗ ರಾಮ ಎನಬಾರದೆ ।
ಸೀತಾಕೃತಿಯನಿಟ್ಟಽ ಶೋಕವನದೊಳು ರಾಮ ಎನಬಾರದೆ ॥೧೭॥
ಮಂಡೋದರಿಯ ಗಂಡನ್ನ ದಶಶಿರಗಳ ರಾಮ ಎನಬಾರದೆ ।
ಚೆಂಡನಾಡಿದ ಕೋದಂಡಪಾಣಿಯ ಶ್ರೀರಾಮ ಎನಬಾರದೆ ॥೧೮॥
ಪ್ರೀತಿಂದ್ವಿಭೀಷಣಗೆ ಪಟ್ಟವಗಟ್ಟಿದ ರಾಮ ಎನಬಾರದೆ ।
ಸೀತಾ ಸಮೇತನಾಗಿ ಸಿಂಧು ದಾಟಿದ ರಾಮ ಎನಬಾರದೆ ॥೧೯॥
ಆದಿ ಲಕ್ಷುಮಿ ಕೂಡಿ ಹೋದನಯೋಧ್ಯಕೆ ರಾಮ ಎನಬಾರದೆ ।
ಶ್ರೀದೇವಿ ಸಹಿತ ಪಟ್ಟಣ ಹೊಕ್ಕ ಪಟ್ಟಾಭಿರಾಮ ಎನಬಾರದೆ ॥೨೦॥
ಭರತ ಸುಮಿತ್ರ ಕೌಸಲ್ಯಗೆ ಸುಖವಿಟ್ಟ ರಾಮ ಎನಬಾರದೆ ।
ಮುಕ್ತಿದಾಯಕ ಮುಂದೆ ಬಿಡದೆ ಕಾಪಾಡುವ ರಾಮ ಎನಬಾರದೆ ॥೨೧॥
ಪತ್ನಿ ವಾರ್ತೆಯ ತಂದ ಪವನಸುತಗೆ ಒಲಿದ ರಾಮ ಎನಬಾರದೆ ।

ಸತ್ಯ ಲೋಕದ ಆಧಿಪತ್ಯವ ಕೊಟ್ಟ ಶ್ರೀರಾಮ ಎನಬಾರದೆ ॥ ೨೨॥
ರಾಮರಾಮನು ಎಂದು ಕರೆಯೆ ಭಕ್ತಿಯ ನೋಡಿ ರಾಮ ಎನಬಾರದೆ ।
ಪ್ರೇಮದಿ ತನ್ನ ನಿಜಧಾಮವ ಕೊಡುವೋನು ರಾಮ ಎನಬಾರದೆ ॥೨೩॥
ಅರಸಾಗಯೋಧ್ಯವನಾಳಿ ಯದುಕುಲದಲಿ ರಾಮ ಎನಬಾರದೆ ।
ಹರುಷದಿ ಭೀಮೇಶ ಕೃಷ್ಣನಾಗ್ಯುದಿಸಿದ ರಾಮ ಎನಬಾರದೆ ॥ ೨೩॥

*****

## ಶ್ರೀಮದ್ರಾಮ ಭಜನೆ

ರಾಮೋ ರಾಜಮಣಿಃ ಸದಾ ವಿಜಯತೇ ರಾಮಂ ರಮೇಶಂ ಭಜೇ ॥
ರಾಮೇಣಾಭಿಹತಾ ನಿಶಾಚರಚಮೂಃ ರಾಮಾಯ ತಸ್ಮೈ ನಮಃ ॥ ೧ ॥
ರಾಮಾನ್ನಾಸ್ತಿ ಪರಃ ಪುಮಾನ್ ಪರತರಃ ರಾಮಸ್ಯ ದಾಸೋಽಸ್ಮ್ಯಹಂ ।
ರಾಮೇ ಭಕ್ತಿರಚಂಚಲಾ ಭವತು ಮೇ ಹೇ ರಾಮ ಮಾಂ ಪಾಲಯ ॥ ೨ ॥
ರಾಮಂ ರಾಜೀವನೇತ್ರಂ ರಘುಕುಲತಿಲಕಂ ಶ್ಯಾಮಲಂ ಕೋಮಲಾಂಗಂ ।
ದ್ವಾತ್ರಿಂಶಲ್ಲಕ್ಷಣಾಢ್ಯಂ ಕನಕಮಣಿ ಗಣಾಲಂಕೃತಂ ಪೀತವಾಸಂ ॥ ೩ ॥
ಸದ್ರತ್ನಾವಳಿಹೇಮಶೇಖರಲ ಸತ್ಪೂರ್ಣೇಂದುಬಿಂಬಾನನಂ ।
ಸದ್ಭಕ್ತಾವಳಿಪಾಲನೈಕನಿರತಂ ಸೀತಾಸಮೇತಂ ಭಜೇ ॥ ೪ ॥
ರಾಮಃ ಪುರಸ್ತಾತ್ಪರತೋಽಪಿ ರಾಮಃ ರಾಮಃ ಪರಂ ದಿಕ್ಷು ವಿದಿಕ್ಷು ರಾಮಃ ।
ರಾಮೈರನಂತೈರತಿ ವಿಶ್ವರೂಪೋ ಜಘ್ನನ್ನರಾತೀನ್ವಿರರಾಜ ರಾಮಃ ॥ ೫ ॥
ದುರ್ಗೋಪದ್ರವಕಾಂತಾರದಾವಾನಲರಘೂದ್ವಹಮ್ ।
ತದ್ರಾಮಭಜನಾದೇವ ಮುಚ್ಯಂತೇ ತದ್ಭಯಾಜ್ಜನಾಃ ॥ ೬॥
ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ನ ಚ ಮಾರಿಕಾಗಮಃ ।
ಮಧ್ವಮಾಧವಸುನಾಮಸೇವನಾ ಹೃಷ್ಟಪುಷ್ಟಸುಧಿಯಸ್ಸುಜನಾಸ್ಸ್ಯುಃ॥ ೭ ॥

**॥ಸಕಲದೋಷಪರಿಹಾರಪೂರ್ವಕ ಇಷ್ಟಾರ್ಥ ಸಿದ್ಧ್ಯರ್ಥಂ ಶ್ರೀಮದ್ರಾಮಚಂದ್ರ ಪ್ರೇರಣಯಾ ಶ್ರೀರಾಮಚಂದ್ರಪ್ರೀತ್ಯರ್ಥಂ ಶ್ರೀರಾಮನಾಮಭಜನಾಂ ಕರಿಷ್ಯೇ ಇತಿ ಸಂಕಲ್ಪಃ ॥**

## ಶ್ರೀಮದ್ರಾಮ ಭಜನೆ (ಅರ್ಥಾತ್ ಸಂಪೂರ್ಣರಾಮಾಯಣ)

## ಬಾಲಕಾಂಡ

**ರಾಗ : ಶ್ರೀ** **ತಾಳ : ಏಕ**

ಜಯ ಜಯ ಶ್ರೀರಘುರಾಮ । ಜಯ ಜಯ ಸೀತಾರಾಮ ॥ ಪ ॥ ಜಯ ಜಯ ಭಜಕರ ಭಯಹರ ತ್ವತ್ಪದ । ದಯದಲಿ ತೋರಿಸೊ ರಾಮ ॥ ಅ.ಪ.॥ ದಶರಥನೃಪಸುತ

ದಶಕಂಧರ ಮುಖ್ಯ । ನಿಶಿಚರಕುಲನಿರ್ಧೂಮ । ಸುರರರ್ಥಿತ ಹರಿ ಧರೆಯೊಳು ತಾನವ - । ತರಿಸಿದ ರಘುಕುಲ - ರಾಮ ॥ ೧ ॥ ದಶರಥನೃಪಸುತ ಶಿಶುಭಾವದಲಿ । ವಸುಮತಿ ಮೋಹಿಪ -ರಾಮ ॥ ೨ ॥ ಸುಂದರ ಸ್ನಾನನದಿಂದಲಿ ಜನಕಾ - । ನಂದವ ಬೀರಿದ ರಾಮ ॥ ೩ ॥ ಒಂದಿನ ಮುನಿವರ ಬಂದಾ ನೃಪವರ । ಕಂದನ ಪ್ರಾರ್ಥಿಸೆ ರಾಮ ॥ ೪ ॥ ತಂದೆಗೆ ತಾನಭಿವಂದಿಸಿ ಮುನಿಸಹ । ನಂದದಿ ನಡೆದನು ರಾಮ ॥ ೫ ॥ ದನುಜರ ಸದೆದಾ ಮುನಿಮಖ ಪೊರೆದ । ಇನಕುಸಲಂಭವ- ರಾಮ ॥ ೬ ॥ ಶಿಲೆಯನು ತನ ಪದಜಲಜದಲಿಂದ । ಲಲನೆಯ ಮಾಡಿದ - ರಾಮ ॥ ೭ ॥ ಇನಿಯನಿಂದಲಾ ವನಿತೆಯಗೂಡಿಸಿ । ಮುನಿಸಹ ನಡೆದನು ರಾಮ ॥ ೮ ॥ ಜನಕನ ಪುರವನು ಅನುಜನ ಸಹಿತದಿ । ಮುನಿಯೊಡನೈದಿದ-ರಾಮ ॥ ೯ ॥ ನರವರಸಭೆಯಲಿ ಗಿರಿಶನ ಧನುವನು । ಮುರಿದನು ರಾಘವ-ರಾಮ ॥ ೧೦॥ ಕ್ಷೋಣೀಶನ ಪಣ ಕ್ಷೀಣಿಸಿ ಸೀತೆಯ । ಪಾಣಿಯ ಪಿಡಿದನು-ರಾಮ ॥ ೧೧ ॥ ಸುದತಿಯು ನೀಡಿದ ಪದುಮದ ಮಾಲೆಯ । ಮುದದಲಿ ಧರಿಸಿದ-ರಾಮ ॥ ೧೨ ॥ ಜಾನಕಿ ಸೊಗಸಿನ ಆನನಕಮಲಕೆ। ಭಾನುಮನಾದನು-ರಾಮ ॥ ೧೩ ॥ ಮಾರ್ಗಮಧ್ಯದಿ ಭಾರ್ಗವ ಬರಲು । ಮಾರ್ಗಣ ಎಸೆದನು-ರಾಮ ॥ ೧೪ ॥ ಲಕ್ಷಣಸತಿಯುತ ಲಕ್ಷ್ಮಣ ಸಹಿತದಿ । ತಕ್ಷಣ ನಡೆದನು-ರಾಮ ॥ ೧೫ ॥ ಸೀತೆಯ ಸಹ ಸಾಕೇತದ ಜನರಿಗೆ । ಪ್ರೀತಿಯಗೊಳಿಸಿದ-ರಾಮ ॥ ೧೬ ॥

## ಅಯೋಧ್ಯಾಕಾಂಡ

ಸುತನಿಗೆ ಪಟ್ಟದ ಯತನಕೆ ವಿಘ್ನವ । ಸತಿಯಳು ಮಾಡಲು-ರಾಮ ॥ ೧೭ ॥ ಧ್ವರಿತನ ಪಟ್ಟವ ಭರತಗೆ ನೇಮಿಸಿ । ತ್ವರದಲಿ ನಡೆದನು-ರಾಮ ॥ ೧೮ ॥

## ಅರಣ್ಯಕಾಂಡ

ನಾರಿನ ಮಡಿಯನು ಜಾರದಲುಟ್ಟು । ಸಾಗಿದ ವನದಲಿ-ರಾಮ ॥ ೧೯ ॥ ಸಾನುಜ ರಘುವರ ಮಾನಿನಿ ಸಹಿತ । ಕಾನನ ಚರಿಸಿದ-ರಾಮ ॥ ೨೦ ॥ ಅನುಜನ ಕೈಯಲಿ ದನುಜೆಯ ನಾಸಿಕ । ಹನನವ ಗೈಸಿದ-ರಾಮ ॥ ೨೧ ॥ ಖರಮುಖದನುಜರ ತರಿದಾ ರಘುವರ । ಚರಿಸಿದ ವನವನ-ರಾಮ ॥ ೨೨ ॥ ಪಂಚವಟಿಯಲಿ ಚಂಚಲನೇತ್ರೆಯ । ವಂಚಿಪ ಮೃಗ ಬರೆ-ರಾಮ ॥೨೩॥ ರಾಣಿಯು ಬೇಡಲು ಬಾಣದಿ ಸದೆದು । ಕ್ಷೋಣಿಗೆ ಕೆಡಹಿದ-ರಾಮ ॥೨೪॥ ದೀನಧ್ವನಿಯನು ಮಾನಿನಿ ಕೇಳಿ । ಹೀನೋಕ್ತಿಯ ನುಡಿಯಲು-ರಾಮ ॥ ೨೫ ॥ ಸೀತೆಯ ವಚನದಿ ಕಾತರ ಮನದಿ। ದಾತನು ನಡೆದನು-ರಾಮ ॥ ೨೬ ॥ ರಾಕ್ಷಸರಾವಣ ವೀಕ್ಷಿಸಿ ಸೀತೆಯ । ನಾಕ್ಷಣ ವೈದನು-ರಾಮ ॥ ೨೭ ॥ ಲೋಕಜನನಿಯಾಶೋಕವನದಲಿ । ಶೋಕದಲಿಟ್ಟನು-ರಾಮ ॥ ೨೮ ॥ ತರಣಿಕುಲೋದ್ಭವ ಪರಣಶಾಲೆಯೊಳು । ತರುಣಿಯ ಕಾಣದೆ-ರಾಮ ॥ ೨೯ ॥ ಪೊಡವಿತನಯಳ ಪುಡುಕುವ ನೆವದಿ । ಅಡವಿಯ ಚರಿಸಿದ-ರಾಮ ॥೩೦॥ ಕಂಜಮುಖಿಯಳ ಕುಂಜದಿ ಪುಡುಕಿದ । ಕಂಜಲೋಚನ-ರಾಮ॥ ೩೧ ॥ ಮಾಯದ ಸೀತಾಕಾಯದ ಸುದ್ದಿ ಜ -। ಟಾಯು ಪೇಳಿದ-ರಾಮ ॥ ೩೨ ॥ ಪಕ್ಷಗಳಿಲ್ಲದ ಪಕ್ಷಿಯ ಮುಖದಿ ಸ - । ಲಕ್ಷಣ ಕೇಳಿದ-ರಾಮ ॥ ೩೩ ॥ ಅರಸುತ ಬರುತಿರೆ ಗಿರಿಯಲಿ ಅಂಜನೆ - । ತರುಳನ ಕಂಡನು-ರಾಮ ॥ ೩೪॥ ಮರುತನು ರಾಮನ ಶಿರಸದಿ ನಮಿಸಿ । ಕರಯುಗ

ಮುಗಿದನು-ರಾಮ ॥ ೩೫ ॥ ಅನುಪಮ ಕರುಣದಿ ಹನುಮನ ಗ್ರಹಿಸಿದ । ಇನಕುಸಲಂಭವ-ರಾಮ ॥ ೩೬ ॥

## ಕಿಷ್ಕಿಂಧಾಕಾಂಡ

ದೇವಿಯ ನವ ಸುಗ್ರೀವನ ಸಖ್ಯವ । ತಾ ವಹಿಸಿದನು-ರಾಮ ॥ ೩೭ ॥ ಶೀಲ ಬಹುಬಲಶಾಲಿ ಎನಿಸಿಹ । ವಾಲಿಯ ಕೊಂದನು - ರಾಮ ॥ ೩೮ ॥ ಥಟ್ಟನೆ ರವಿಜಗೆ ಪಟ್ಟವ ಗಟ್ಟೀ । ಧಿಟ್ಟರ ನೆರಹಿದ - ರಾಮ ॥ ೩೯ ॥ ದ್ವಿಪಗಂಹ್ವರದ ಕಪಿಗಳ ಕರೆಸಿ । ವಿಪಿನಕೆ ಕಳಿಸಿದ-ರಾಮ ॥ ೪೦ ॥ ಕಾನನದಲಿ ತಾವ್ ಜಾನಕಿ ಕಾಣದೆ । ಧ್ಯಾನದಿ ಕುಳಿತರು-ರಾಮ॥೪೧॥

## ಸುಂದರಕಾಂಡ

ವನಿತೆಯ ಗೋಸುಗ ಹನುಮನು ವೇಗದಿ । ವನಧಿಯ ದಾಟಿದ-ರಾಮ ॥ ೪೨ ॥ ಬಿಂಕದಿ ಹನುಮನು ಲಂಕೆಯ ಪೊಕ್ಕು । ಮಂಕು ದನುಜರ-ರಾಮ ॥ ೪೩॥ ವನಗಿರಿ ದುರ್ಗದಿ ವನಜಾಕ್ಷಿಯನು । ಮನದಣಿ ಪುಡಿಕಿದ-ರಾಮ ॥ ೪೪ ॥ ಧಾರುಣಿ ತನಯಳ ಸಾರುವೆನೆನುತ। ಊರಲಿ ಪುಡುಕಿದ-ರಾಮ ॥೪೫ ॥ ಓಣಿಗಳೊಳು ತಾ ಕ್ಷೋಣಿತನಯಳಾ । ಕಾಣದೆ ತಿರುಗಿದ-ರಾಮ ॥ ೪೬ ॥ ಲೋಕದ ಮಾತೆಯಾ - ಶೋಕವನದೊಳಾ -। ಲೋಕನಗೈದನು-ರಾಮ ॥ ೪೭ ॥ ಕಾಮಿನಿಮಣಿಗೆ ರಾಮನ ವಾರ್ತೆಯ । ಪ್ರೇಮದಿ ಪೇಳಿದ -ರಾಮ ॥ ೪೮ ॥ ರಾಮನ ಶುಭಕರನಾಮದ ವಾರ್ತೆಯ । ಪ್ರೇಮದಿ ಪೇಳಿದ-ರಾಮ ॥ ೪೯ ॥ ರಾಮನ ಶುಭತಮನಾಮದ ಮುದ್ರಿಕೆ। ಪ್ರೇಮದಿ ನೀಡಿದ-ರಾಮ ॥ ೫೦॥ ರೂಢಿಜದೇವಿಯ ಚೂಡಾಮಣಿಯ । ನೀಡುವೆನೆಂದನು - ರಾಮ ॥ ೫೧ ॥ ಕಾಮಿನಿಮಣಿಗೆ ರಾಮನ ವಾರ್ತೆಯ। ಪ್ರೇಮದಿ ಪೇಳಿದ-ರಾಮ ॥ ೫೨ ॥ ಕುಶಲದ ವಾರ್ತೆಯ ಶಶಿಮುಖಿ ಕೇಳಿ । ವ್ಯಸನದಿ ನುಡಿದಳು-ರಾಮ ॥ ೫೩ ॥ ಕೋತಿಯೆ ಇಲ್ಲಿಗೆ ಯಾತಕೆ ಬಂದೆಯೊ । ಘಾತಿಪರಸುರರು -ರಾಮ ॥ ೫೪ ॥ ಬಲಹೀನನು ನೀ ಬಲವಂತಸುರರು । ಛಲಮಾಡದೆ ನಡಿ-ರಾಮ ॥ ೫೫ ॥ ಘನತರ ಲಂಕೆಗೆ ವನಚರ ಬಂದೆಯೊ । ದನುಜರು ಕೊಲ್ವರು ರಾಮ ॥ ೫೬॥ ರಾಕ್ಷಸಗಣ ತಾ ವೀಕ್ಷಿಸಿ ನಿನ್ನನು । ಶಿಕ್ಷೆಯ ಗೈವುದು -ರಾಮ ॥ ೫೭ ॥ ಮಾತೆಯೆ ತಿಳಿ ಎನಗ್ಯಾತರ ಭಯ ರಘು - । ನಾಥನು ಕಾಯುವ-ರಾಮ ॥ ೫೮ ॥ ಆಖಣಾಶ್ಮನಾ ರಾಮನ ದಯದಲಿ । ನೀ ಕರುಣಿಸು ತಾಯೆ-ರಾಮ ॥ ೫೯ ॥ ಮರುತಾತ್ಮಜ ತಾ ಭರದಲಿ ನಡೆದು । ತರುಗಳ ಕಿತ್ತಿದ-ರಾಮ ॥ ೬೦ ॥ ಅಶೋಕವನದ ಸಶೋಕವಾರ್ತೆಯ । ನಿಶಿಚರ ಕೇಳಿದ-ರಾಮ ॥ ೬೧ ॥ ಕೋತಿಯ ಹಿಡಿಯಲು ಕಾತುರದಿಂದಲಿ । ದೂತರ ಕಳುಹಿದ-ರಾಮ ॥ ೬೨ ॥ ಲಕ್ಷ್ಯ ಮಾಡದೆ ತಕ್ಷಣ ಕೋತಿಯ । ಶಿಕ್ಷಿಪೆನೆನುತಲಿ-ರಾಮ ॥ ೬೩ ॥ ಬಂದಾ ರಾವಣಕಂದನ ನೋಡಿ । ನಂದದಿ ನಲಿದನು-ರಾಮ ॥ ೬೪ ॥ ಅಕ್ಷಕುಮಾರನ ಲಕ್ಷ್ಯಿಯ ಮಾಡದೆ । ತಕ್ಷಣ ಕೊಂದನು-ರಾಮ ॥ ೬೫ ॥ ಯುದ್ಧದಲತಿ ಸನ್ನದ್ಧರಾದ ಪ್ರ - । ಸಿದ್ಧ ದಿತಿಜರು -ರಾಮ ॥ ೬೬॥ ಶಕ್ತಿಯು ಸಾಲದಶಕ್ತರಾಗಿ ಬಹು। ಯುಕ್ತಿಯ ಮಾಡ್ದರು-ರಾಮ ॥ ೬೭ ॥ ಇಂದ್ರಾರಾತಿಯು ನಂದದಿ ಬಂದು । ನಿಂದನು ರಣದಲಿ-ರಾಮ ॥ ೬೮ ॥ ಬೊಮ್ಮನಸ್ತ್ರವ ಘುಮ್ಮನೆ ಹಾಕಲು । ಸುಮ್ಮನೆ ಸಿಕ್ಕನು-ರಾಮ ॥

೭೯॥ ಮಾತೆಯ ಕಂಡಾರಾತಿಯ ಪುರವರ - । ನಾಥನ ಕಂಡನು-ರಾಮ ॥ ೨೦ ॥ ಮುಖ್ಯಾಗ್ರಣಿ ಕೇಳ್ ಲೇಖಾಗ್ರಣಿ ಶಿರಿ । ಕಾಕುತ್ಸ್ಥಾನ್ವಯ - ರಾಮ ॥ ೨೧॥ ರಾಮನ ಪದಯುಗತಾಮರಸಕೆ ನಾ । ಪ್ರೇಮದ ಭಕ್ತನು-ರಾಮ ॥ ೨೨ ॥ ಶ್ರೀನಿಧಿರಾಮನ ಮಾನಿನಿತಸ್ಕರ । ದಾನವ ಕೇಳೆಲೊ-ರಾಮ ॥ ೨೩ ॥ ದುಷ್ಟನೆ ತಿಳಿ ನೀ ಸೃಷ್ಟಿಯೆ ಮೊದಲಾ-। ದಷ್ಟಕಕರ್ತನು-ರಾಮ ॥ ೨೪ ॥ ಭ್ರಷ್ಟರಾವಣ ಸುರಶ್ರೇಷ್ಠನ ವೈರದಿ । ನಷ್ಟನು ನೀನಾಗುವಿ-ರಾಮ ॥ ೨೫ ॥ ಜಾನಕಿರಮಣನು ಮಾನವನಲ್ಲವೊ । ದಾನವಾಂತಕನು-ರಾಮ ॥ ೨೬ ॥ ಬಲವದ್ವೇಷವು ಸುಲಭಲ್ಲವೊ ತವ । ಕುಲನಾಶಾಗೊದೊ-ರಾಮ ॥ ೨೭ ॥ ಕಾನನಕೋತಿಯೆ ಏನಾಡಿದಿ ನುಡಿ । ಹಾನಿಯ ಮಾಡುವೆ-ರಾಮ ॥ ೨೮ ॥ ಆ ಕ್ಷಣ ರಾವಣ ರಾಕ್ಷಸ ಜನರಿಗೆ । ಶಿಕ್ಷಿಸಿರೆಂದನು-ರಾಮ ॥ ೨೯ ॥ ಕೋತಿಯ ಕೊಂದರೆ ಪಾತಕ ಬಪ್ಪೊದು । ಘಾತವು ಸಲ್ಲದು-ರಾಮ ॥ ೮೦ ॥ ತರುವರನೇರಿದ ವಾನರಬಾಲದಿ । ತರುವೈರಿಯನಿಟ್ಟರು-ರಾಮ ॥ ೮೧ ॥ ಹರಿವರ ತಾನೇ ಉರಿಯಲಿ ಲಂಕಾ - । ಪುರವನು ದಹಿಸಿದ-ರಾಮ ॥ ೮೨ ॥ ವಾನರನಾಥನು ಕಾನನ ಸುರವರ । ರಾನನಕಿತ್ತನು-ರಾಮ ॥ ೮೩ ॥ ದಿತಿಜತತಿಯನು ಹತಗೈದಾ ಕಪಿ । ನತಿಸಿದ ಸೀತೆಗೆ-ರಾಮ ॥ ೮೪ ॥ ಸಾಗರ ಲಂಘಿಸಿ ವೇಗದಿ ಬಂದು । ಬಾಗಿದ ಸ್ವಾಮಿಗೆ-ರಾಮ ॥ ೮೫ ॥ ರಾಮನ ಪದಕೆ ಪ್ರೇಮದಿ ನಮಿಸಿ । ಕ್ಷೇಮವ ತಿಳಿಸಿದ-ರಾಮ ॥ ೮೬ ॥ ಕಾಮಿನಿ ಕೊಟ್ಟಿಹ ಹೇಮದ ರಾಗಟೆ । ಸ್ವಾಮಿಗೆ ನೀಡಿದ - ರಾಮ ॥ ೮೭ ॥

## ಯುದ್ಧಕಾಂಡ

ಉಗ್ರಮನದ ಸುಗ್ರೀವ ಕಪಿಗಳ । ನಿಗ್ರಹಗೈಸಿದ-ರಾಮ ॥ ೮೮ ॥ ಗಿರಿತರುಗಳ ತಾ ತ್ವರದಲಿ ತರಿಸಿ । ಶರಧಿಯ ಕಟ್ಟಿದ-ರಾಮ ॥ ೮೯ ॥ ಸೀತೆಯ ಗೋಸುಗ ಸೇತುಮಾರ್ಗದಿ ರಘು - । ನಾಥನು ನಡೆದನು-ರಾಮ ॥ ೯೦ ॥ ವಾನರ-ನಾಯಕಸೇನೆಯ ಸಹಿತದಿ । ತಾನು ನಡೆದನು -ರಾಮ ॥ ೯೧ ॥ ದಶಮುಖನಗರಿಯ ವಶದಲಿ ಮಾಡಿದ - । ನಸಮಮಹಿಮನು - ರಾಮ ॥ ೯೨ ॥ ಕಾಮಿನಿ ನೆವದಲಿ ರಾಮ ದನುಜರಿಗೆ । ಆ ಮಹಯುದ್ಧವು - ರಾಮ ॥ ೯೩ ॥ ಪಾವಿನ ಬಾಣದಿ ರಾವಣಿ ಲಕ್ಷ್ಮಣ। ಜೀವನ ಕಳೆಯಲು-ರಾಮ ॥ ೯೪ ॥ ಪಾವನಿ ತಾ ಸಂಜೀವನ-ಪರ್ವತ । ತೀವ್ರದಿ ತಂದನು-ರಾಮ ॥ ೯೫ ॥ ಸೇವಕಹನುಮನು ದೇವನ ತಮ್ಮಗೆ। ಜೀವನವಿತ್ತನು-ರಾಮ ॥ ೯೬ ॥ ತಂದೆಯ ಪುರದಲಿ ಇಂದ್ರನ ವೈರಿಯ । ಕೊಂದನು ಲಕ್ಷ್ಮಣ-ರಾಮ ॥ ೯೭ ॥ ಮೂಲ ಬಲವನು ಲೀಲೆಯಿಂದ ನಿ - । ರ್ಮೂಲವ ಗೈಸಿದ-ರಾಮ ॥ ೯೮ ॥ ಅಂಬುಧಿತೆರ ತಾ ಸಂಭ್ರಮಸೈನ್ಯ ಕ - । ದಂಬವ ನೋಡಿದ-ರಾಮ ॥ ೯೯ ॥ ಅಂಬುಗಳೆಸೆದಾ ಕುಂಭಕರ್ಣನಾ । ಕುಂಭಿಣಿಗಿಳಿಸಿದ-ರಾಮ ॥ ೧೦೦ ॥ ಕರೆಸಲು ದಿತಿಜನು ಶರವೃಷ್ಟಿಯ ತಾ । ಸುರಸಿದ ರಣದಲಿ-ರಾಮ ॥ ೧೦೧ ॥ ರಾವಣನನುಚರ ಜೀವನ ಕಳೆದನು। ದೇವ-ಶಿಖಾಮಣಿ-ರಾಮ ॥ ೧೦೨ ॥ ರಾಕ್ಷಸವರ್ಯನ ವಕ್ಷೋದಾರಣ - । ವಾಕ್ಷಣ ಗೈಸಿದ-ರಾಮ ॥ ೧೦೩ ॥ ಗುಣಯುತ ವಿಭೀಷಣನಿಗೆ ಪಟ್ಟವ । ಕ್ಷಣದಲಿ ಕಟ್ಟಿದ-ರಾಮ ॥ ೧೦೪ ॥

## ಉತ್ತರ ಕಾಂಡ

ಸತಿ ನಿಜಅನುಜಾಮಿತಮರ್ಕಟವರ । ತತಿಸಹ ಹೊರಟನು-ರಾಮ ॥೧೦೫॥ ಬಿಸಜಾಂಬಕ ತಾ ಕುಸುಮದ ರಥವನು । ಕುಶಲದಲೇರಿದ-ರಾಮ ॥ ೧೦೬ ॥ ಮಂದಗಮನಿ ಸಹ ನಂದಿಗ್ರಾಮಕೆ । ನಂದದಿ ಬಂದನು -ರಾಮ ॥ ೧೦೭ ॥ ಭರತನ ಸಹಿತದಿ ಪುರವನು ಸಾರಿದ । ಸರಸಗುಣಾರ್ಣವ-ರಾಮ ॥ ೧೦೮ ॥ ತಂದೆಯ ತ್ವರ ಪುರಂದರಲೋಕದ - । ಲಿಂದ ಕರೆಸಿದ-ರಾಮ ॥ ೧೦೯ ॥ ಶಿಷ್ಟರೆನಿಪ ವಸಿಷ್ಠ ದ್ವಿಜಕುಲ। ಶ್ರೇಷ್ಠರ ಕರೆಸಿದ-ರಾಮ ॥ ೧೧೦ ॥ ಶುಭದಿನದಲಿ ಮಹವಿಭವ ಪೂರ್ವಕ । ಸಭೆಯನು ಸಾರಿದ-ರಾಮ ॥ ೧೧೧ ॥ ಸ್ವಸ್ತಿವಾಚನ ತಾ ಸ್ವಸ್ಥ ಮನದಿ ಪ್ರಾ - । ಶಸ್ತವಗೈಸಿದ-ರಾಮ ॥ ೧೧೨ ॥ ವಿಪ್ರರ ಭೋಜನ ಕ್ಷಿಪ್ರದಿ ಗೈಸಿದ - । ನಪ್ರತಿ ಪುರುಷನು-ರಾಮ॥೧೧೩ ॥ ರೂಢಿಯೆ ಮೊದಲಾಷೋಡಶ ದಾನವ । ನೀಡಿದ ದ್ವಿಜರಿಗೆ-ರಾಮ ॥ ೧೧೪ ॥ ರಾಮನು ಸಾರ್ವಭೌಮನಾಗಿ ಈ । ಭೂಮಿಯನಾಳಿದ-ರಾಮ ॥ ೧೧೫ ॥ ರಮೆಯಿಂದಲಿ ತಾ ರಮಿಸಿದ ಸೀತಾ - । ರಮಣನು ರಘುಕುಲ-ರಾಮ ॥ ೧೧೬ ॥ ದಶರಥಸುತ ತ್ರಿದಶರಿಂದಲಿ ಈ । ವಸುಧೆಯ ಪೊರೆದನು - ರಾಮ ॥ ೧೧೭ ॥ ಅಂಜನಿ ತನಯಗೆ ಕಂಜಜಪಟ್ಟವ । ರಂಜಿಸಿ ನೀಡಿದ - ರಾಮ ॥ ೧೧೮ ॥ ರಾಜ ರಾಜ ರಾಜೀವನಯನ ತನ । ಭೋಜನ ನೀಡಿದ - ರಾಮ ॥ ೧೧೯ ॥ ಕಂಜಾಕ್ಷನ ಪದಕಂಜಭಜಕ ಪ್ರಾ - । ಭಂಜನಸುತ ಕಪಿ-ರಾಮ ॥ ೧೨೦ ॥ ಚಂಪಕ ತರುಲತ ಕಂಪಿತ ಶುಭತರ । ಕಿಂಪುರುಷ್ಯದಿದ-ರಾಮ ॥೧೨೧॥ ಮೋಕ್ಷದ ಸುಖವಾಪೇಕ್ಷಿಪ ಜನರನು। ವೀಕ್ಷಿಸಿ ಕರೆದನು - ರಾಮ ॥ ೧೨೨ ॥ ತನ್ನಲಿ ಭಕುತಿಯ ಚನ್ನಾಗಿ ಪಾಲಿಸಿ । ಮನ್ನಿಸಿ ಪೊರೆದನು - ರಾಮ ॥ ೧೨೩ ॥ ದುಷ್ಟರ ನಿಗ್ರಹ ಶಿಷ್ಟರ ಪಾಲಕಾ - । ನಿಷ್ಟವ ಕಳೆದನು-ರಾಮ ॥ ೧೨೪ ॥ ಸಾನುಜಸತಿಸಹ ಜ್ಞಾನಮಯ ಬಹು - । ಮಾನದಿ ಪೊರೆದನು-ರಾಮ ॥ ೧೨೫ ॥ ಕ್ಷುದ್ರರು ಮಾಳ್ಪೋಪದ್ರವ ಕಳೆದು । ಭದ್ರವ ನೀಡಿದ- ರಾಮ ॥ ೧೨೬ ॥ ಮೋದವ ದಕ್ಷ ಪ್ರಮೋದೋತ್ತರ ನಿಜ। ಮೋದಾವಯವನು- ರಾಮ ॥ ೧೨೭ ॥ ಪೂರ್ಣರೂಪ ತಾ ಪೂರ್ಣಗುಣಾರ್ಣವ । ಪೂರ್ಣನೆನಿಸಿದ-ರಾಮ ॥ ೧೨೮ ॥

## ಫಲಶ್ರುತಿ

ರಾಮನ ಭಜನೆಯ ನೇಮದಿ ಮಾಡಲು । ಕಾಮಿತ ನೀಡುವ - ರಾಮ ॥ ೧೨೯॥ ಅರ್ಗಳವಾಗಿಹ ದುರ್ಗೋಪದ್ರ ಸಂ - । ಸರ್ಗವ ಕಳೆವನು-ರಾಮ ॥ ೧೩೦ ॥ ದೂತಜನರಗತಿದಾತನು ಗುರುಜಗ - । ನ್ನಾಥವಿಠಲನು-ರಾಮ ॥ ೧೩೧ ॥

*****

## ಸಂಕ್ಷಿಪ್ತ ಮಹಾಭಾರತ

**ರಾಗ - ಧನ್ಯಾಸಿ** **ತಾಳ - ಆದಿ**

ಬಗೆ ಬಗೆ ಆಟಗಳೆಲ್ಲಿ ಕಲಿತೆಯೊ । ಜಗದ ಮೋಹಕನೆ ! ॥ ೧॥ ಖಗವರಗಮನನೆ ಅಗಣಿತಮಹಿಮನೆ । ಜಗದೊಳು ನೀ ಬಹು ಮಿಗಿಲಾಗೀ ಪರಿ ॥ ಅ.ಪ. ॥ ಒಬ್ಬಳ ಬಸಿರಿಂದಲಿ ಬಂದು - ಮ - । ತ್ತೊಬ್ಬಳ ಕೈಯಿಂದಲಿ ಬೆಳೆದು ॥ ಕೊಬ್ಬಿದ ಭೂಭಾರವನಿಳುಹಲು ಇಂಥ।

೭೯॥ ಮಾತೆಯ ಕಂಡಾರಾತಿಯ ಪುರವರ - । ನಾಥನ ಕಂಡನು-ರಾಮ ॥ ೭೦ ॥ ಮುಖ್ರಾಗ್ರಣಿ ಕೇಳ್ ಲೇಖಾಗ್ರಣಿ ಶಿರಿ । ಕಾಕುತ್ಸ್ಥಾನ್ವಯ - ರಾಮ ॥ ೭೧॥ ರಾಮನ ಪದಯುಗತಾಮರಸಕೆ ನಾ । ಪ್ರೇಮದ ಭಕ್ತನು-ರಾಮ ॥ ೭೨ ॥ ಶ್ರೀನಿಧಿರಾಮನ ಮಾನಿನಿತಸ್ಕರ । ದಾನವ ಕೇಳೆಲೊ-ರಾಮ ॥ ೭೩ ॥ ದುಷ್ಟನೆ ತಿಳಿ ನೀ ಸೃಷ್ಟಿಯೆ ಮೊದಲಾ-। ದಷ್ಟಕಕರ್ತನು-ರಾಮ ॥ ೭೪ ॥ ಭ್ರಷ್ಟರಾವಣ ಸುರಶ್ರೇಷ್ಠನ ವೈರದಿ । ನಷ್ಟನು ನೀನಾಗುವಿ-ರಾಮ ॥ ೭೫ ॥ ಜಾನಕಿರಮಣನು ಮಾನವನಲ್ಲವೊ । ದಾನವಾಂತಕನು-ರಾಮ ॥ ೭೬ ॥ ಬಲವದ್ವೇಷವು ಸುಲಭಲ್ಲವೊ ತವ । ಕುಲನಾಶಾಗೊದೊ-ರಾಮ ॥ ೭೭ ॥ ಕಾನನಕೋತಿಯೆ ಏನಾಡಿದಿ ನುಡಿ । ಹಾನಿಯ ಮಾಡುವೆ-ರಾಮ ॥ ೭೮ ॥ ಆ ಕ್ಷಣ ರಾವಣ ರಾಕ್ಷಸ ಜನರಿಗೆ । ಶಿಕ್ಷಿಸಿರೆಂದನು-ರಾಮ ॥ ೭೯ ॥ ಕೋತಿಯ ಕೊಂದರೆ ಪಾತಕ ಬಪ್ಪೊದು । ಘಾತವು ಸಲ್ಲದು-ರಾಮ ॥ ೮೦ ॥ ತರುವರನೇರಿದ ವಾನರಬಾಲದಿ । ತರುವೈರಿಯನಿಟ್ಟರು-ರಾಮ ॥ ೮೧ ॥ ಹರಿವರ ತಾನೇ ಉರಿಯಲಿ ಲಂಕಾ - । ಪುರವನು ದಹಿಸಿದ-ರಾಮ ॥ ೮೨ ॥ ವಾನರನಾಥನು ಕಾನನ ಸುರವರ । ರಾನನಕಿತ್ತನು-ರಾಮ ॥ ೮೩ ॥ ದಿತಿಜತತಿಯನು ಹತಗೈದಾ ಕಪಿ । ನತಿಸಿದ ಸೀತೆಗೆ-ರಾಮ ॥ ೮೪ ॥ ಸಾಗರ ಲಂಘಿಸಿ ವೇಗದಿ ಬಂದು । ಬಾಗಿದ ಸ್ವಾಮಿಗೆ-ರಾಮ ॥ ೮೫ ॥ ರಾಮನ ಪದಕೆ ಪ್ರೇಮದಿ ನಮಿಸಿ । ಕ್ಷೇಮವ ತಿಳಿಸಿದ-ರಾಮ ॥ ೮೬ ॥ ಕಾಮಿನಿ ಕೊಟ್ಟಿಹ ಹೇಮದ ರಾಗಟೆ । ಸ್ವಾಮಿಗೆ ನೀಡಿದ - ರಾಮ ॥ ೮೭ ॥

## ಯುದ್ಧಕಾಂಡ

ಉಗ್ರಮನದ ಸುಗ್ರೀವ ಕಪಿಗಳ । ನಿಗ್ರಹಗೈಸಿದ-ರಾಮ ॥ ೮೮ ॥ ಗಿರಿತರುಗಳ ತಾ ತ್ವರದಲಿ ತರಿಸಿ । ಶರಧಿಯ ಕಟ್ಟಿದ-ರಾಮ ॥ ೮೯ ॥ ಸೀತೆಯ ಗೋಸುಗ ಸೇತುಮಾರ್ಗದಿ ರಘು - । ನಾಥನು ನಡೆದನು-ರಾಮ ॥ ೯೦ ॥ ವಾನರ-ನಾಯಕಸೇನೆಯ ಸಹಿತದಿ । ತಾನು ನಡೆದನು -ರಾಮ ॥ ೯೧ ॥ ದಶಮುಖನಗರಿಯ ವಶದಲಿ ಮಾಡಿದ - । ನಸಮಮಹಿಮನು - ರಾಮ ॥ ೯೨ ॥ ಕಾಮಿನಿ ನೆವದಲಿ ರಾಮ ದನುಜರಿಗೆ । ಆ ಮಹಯುದ್ಧವು - ರಾಮ ॥ ೯೩ ॥ ಪಾವಿನ ಬಾಣದಿ ರಾವಣಿ ಲಕ್ಷ್ಮಣ। ಜೀವನ ಕಳೆಯಲು-ರಾಮ ॥ ೯೪ ॥ ಪಾವನಿ ತಾ ಸಂಜೀವನ-ಪರ್ವತ । ತೀವ್ರದಿ ತಂದನು-ರಾಮ ॥ ೯೫ ॥ ಸೇವಕಹನುಮನು ದೇವನ ತಮ್ಮಗೆ। ಜೀವನವಿತ್ತನು-ರಾಮ ॥ ೯೬ ॥ ತಂದೆಯ ಪುರದಲಿ ಇಂದ್ರನ ವೈರಿಯ । ಕೊಂದನು ಲಕ್ಷ್ಮಣ-ರಾಮ ॥ ೯೭ ॥ ಮೂಲ ಬಲವನು ಲೀಲೆಯಿಂದ ನಿ - । ರ್ಮೂಲವ ಗೈಸಿದ-ರಾಮ ॥ ೯೮ ॥ ಅಂಬುಧಿತೆರ ತಾ ಸಂಭ್ರಮಸೈನ್ಯ ಕ - । ದಂಬವ ನೋಡಿದ-ರಾಮ ॥ ೯೯ ॥ ಅಂಬುಗಳೆಸೆದಾ ಕುಂಭಕರ್ಣನಾ । ಕುಂಭಿಣಿಗಿಳಿಸಿದ-ರಾಮ ॥ ೧೦೦ ॥ ಕರೆಸಲು ದಿತಿಜನು ಶರವೃಷ್ಟಿಯ ತಾ । ಸುರಸಿದ ರಣದಲಿ-ರಾಮ ॥ ೧೦೧ ॥ ರಾವಣನನುಚರ ಜೀವನ ಕಳೆದನು। ದೇವ-ಶಿಖಾಮಣಿ-ರಾಮ ॥ ೧೦೨ ॥ ರಾಕ್ಷಸವರ್ಯನ ವಕ್ಷೋದಾರಣ - । ವಾಕ್ಷಣ ಗೈಸಿದ-ರಾಮ ॥ ೧೦೩ ॥ ಗುಣಯುತ ವಿಭೀಷಣನಿಗೆ ಪಟ್ಟವ । ಕ್ಷಣದಲಿ ಕಟ್ಟಿದ-ರಾಮ ॥ ೧೦೪ ॥

## ಉತ್ತರ ಕಾಂಡ

ಸತಿ ನಿಜಅನುಜಾಮಿತಮರ್ಕಟವರ । ತತಿಸಹ ಹೊರಟನು-ರಾಮ ॥೧೦೫॥ ಬಿಸಜಾಂಬಕ ತಾ ಕುಸುಮದ ರಥವನು । ಕುಶಲದಲೇರಿದ-ರಾಮ ॥ ೧೦೬ ॥ ಮಂದಗಮನಿ ಸಹ ನಂದಿಗ್ರಾಮಕೆ । ನಂದದಿ ಬಂದನು -ರಾಮ ॥ ೧೦೭ ॥ ಭರತನ ಸಹಿತದಿ ಪುರವನು ಸಾರಿದ । ಸರಸಗುಣಾರ್ಣವ-ರಾಮ ॥ ೧೦೮ ॥ ತಂದೆಯ ತ್ವರ ಪುರಂದರಲೋಕದ - । ಲಿಂದ ಕರೆಸಿದ-ರಾಮ ॥ ೧೦೯ ॥ ಶಿಷ್ಟರೆನಿಪ ವಸಿಷ್ಠ ದ್ವಿಜಕುಲ। ಶ್ರೇಷ್ಠರ ಕರೆಸಿದ-ರಾಮ ॥ ೧೧೦ ॥ ಶುಭದಿನದಲಿ ಮಹವಿಭವ ಪೂರ್ವಕ । ಸಭೆಯನು ಸಾರಿದ-ರಾಮ ॥ ೧೧೧ ॥ ಸ್ವಸ್ತಿವಾಚನ ತಾ ಸ್ವಸ್ಥ ಮನದಿ ಪ್ರಾ - । ಶಸ್ತವಗೈಸಿದ-ರಾಮ ॥ ೧೧೨ ॥ ವಿಪ್ರರ ಭೋಜನ ಕ್ಷಿಪ್ರದಿ ಗೈಸಿದ - । ನಪ್ರತಿ ಪುರುಷನು-ರಾಮ॥೧೧೩ ॥ ರೂಢಿಯೆ ಮೊದಲಾಷೋಡಶ ದಾನವ । ನೀಡಿದ ದ್ವಿಜರಿಗೆ-ರಾಮ ॥ ೧೧೪ ॥ ರಾಮನು ಸಾರ್ವಭೌಮನಾಗಿ ಈ । ಭೂಮಿಯನಾಳಿದ-ರಾಮ ॥ ೧೧೫ ॥ ರಮೆಯಿಂದಲಿ ತಾ ರಮಿಸಿದ ಸೀತಾ - । ರಮಣನು ರಘುಕುಲ-ರಾಮ ॥ ೧೧೬ ॥ ದಶರಥಸುತ ತ್ರಿದಶರಿಂದಲಿ ಈ । ವಸುಧೆಯ ಪೊರೆದನು - ರಾಮ ॥ ೧೧೭ ॥ ಅಂಜನಿ ತನಯಗೆ ಕಂಜಜಪಟ್ಟವ । ರಂಜಿಸಿ ನೀಡಿದ - ರಾಮ ॥ ೧೧೮ ॥ ರಾಜ ರಾಜ ರಾಜೀವನಯನ ತನ । ಭೋಜನ ನೀಡಿದ - ರಾಮ ॥ ೧೧೯ ॥ ಕಂಜಾಕ್ಷನ ಪದಕಂಜಭಜಕ ಪ್ರಾ - । ಭಂಜನಸುತ ಕಪಿ-ರಾಮ ॥ ೧೨೦ ॥ ಚಂಪಕ ತರುಲತ ಕಂಪಿತ ಶುಭತರ । ಕಿಂಪುರುಷ್ಯೆದಿದ-ರಾಮ ॥೧೨೧॥ ಮೋಕ್ಷದ ಸುಖವಾಪೇಕ್ಷಿಪ ಜನರನು। ವೀಕ್ಷಿಸಿ ಕರೆದನು - ರಾಮ ॥ ೧೨೨ ॥ ತನ್ನಲಿ ಭಕುತಿಯ ಚನ್ನಾಗಿ ಪಾಲಿಸಿ । ಮನ್ನಿಸಿ ಪೊರೆದನು - ರಾಮ ॥ ೧೨೩ ॥ ದುಷ್ಟರ ನಿಗ್ರಹ ಶಿಷ್ಟರ ಪಾಲಕಾ - । ನಿಷ್ಟವ ಕಳೆದನು-ರಾಮ ॥ ೧೨೪ ॥ ಸಾನುಜಸತಿಸಹ ಜ್ಞಾನಮಯ ಬಹು - । ಮಾನದಿ ಪೊರೆದನು-ರಾಮ ॥ ೧೨೫ ॥ ಕ್ಷುದ್ರರು ಮಾಳ್ಪೋಪದ್ರವ ಕಳೆದು । ಭದ್ರವ ನೀಡಿದ- ರಾಮ ॥ ೧೨೬ ॥ ಮೋದವೆ ದಕ್ಷ ಪ್ರಮೋದೋತ್ತರ ನಿಜ। ಮೋದಾವಯವನು- ರಾಮ ॥ ೧೨೭ ॥ ಪೂರ್ಣರೂಪ ತಾ ಪೂರ್ಣಗುಣಾರ್ಣವ । ಪೂರ್ಣನೆನಿಸಿದ-ರಾಮ ॥ ೧೨೮ ॥

## ಫಲಶ್ರುತಿ

ರಾಮನ ಭಜನೆಯ ನೇಮದಿ ಮಾಡಲು । ಕಾಮಿತ ನೀಡುವ - ರಾಮ ॥ ೧೨೯॥ ಅರ್ಗಳವಾಗಿಹ ದುರ್ಗೋಪದ್ರ ಸಂ - । ಸರ್ಗವ ಕಳೆವನು-ರಾಮ ॥ ೧೩೦ ॥ ದೂತಜನರಗತಿದಾತನು ಗುರುಜಗ - । ನ್ನಾಥವಿಠಲನು-ರಾಮ ॥ ೧೩೧ ॥

*****

## ಸಂಕ್ಷಿಪ್ತ ಮಹಾಭಾರತ

**ರಾಗ - ಧನ್ಯಾಸಿ** **ತಾಳ - ಆದಿ**

ಬಗೆ ಬಗೆ ಆಟಗಳೆಲ್ಲಿ ಕಲಿತೆಯೊ । ಜಗದ ಮೋಹಕನೆ ! ॥ ೧॥ ಖಗವರಗಮನನೆ ಅಗಣಿತಮಹಿಮನೆ । ಜಗದೊಳು ನೀ ಬಹು ಮಿಗಿಲಾಗೀ ಪರಿ ॥ ಅ.ಪ. ॥ ಒಬ್ಬಳ ಬಸಿರಿಂದಲಿ ಬಂದು - ಮ - । ತ್ತೊಬ್ಬಳ ಕೈಯಿಂದಲಿ ಬೆಳೆದು ॥ ಕೊಬ್ಬಿದ ಭೂಭಾರವನಿಳುಹಲು ಇಂಥ।

ತಬ್ಬಿಬ್ಬಾಟಗಳೆಲ್ಲಿ ಕಲಿತೆಯೊ ! ॥ ೧॥ ಮಗುವಾಗಿ ಪೂತಣಿ ಮೊಲೆಯ ಉಂಡು । ನಗುತಲವಳ ಅಸುವನೆ ಕೊಂಡು ॥ ಅಘಹರ, ನೀ ಗೋಪಿಯೊಳು ಜನಿಸಿ ಇಂಥ । ಸೊಗಸಿನ ಆಟಗಳೆಲ್ಲಿ ಕಲಿತೆಯೋ! ॥ ೨॥ ಲೋಕರಂತೆ ನೀ ಮಣ್ಣನು ತಿನಲು । ತಾ ಕೋಪಿಸಿ ಜನನಿಯು ಬೇಗ ॥ ಓಕರಿಸೆನ್ನಲು ಬಾಯೊಳು ಸಕಲ । ಲೋಕವ ತೋರಿದುದೆಲ್ಲಿ ಕಲಿತೆಯೋ! ॥ ೩॥ ಮಡುವ ಧುಮುಕಿ ಕಾಳಿಂಗನ ಪಿಡಿದು । ಪೆಡೆಯ ಮೇಲೆ ಕುಣಿದಾಡುತಿರೆ ॥ ಮಡದಿಯರು ನಿನ್ನ ಬಿಡದೆ ಬೇಡಲು । ಕಡುದಯೆ ದೋರಿದುದೆಲ್ಲಿ ಕಲಿತೆಯೊ ! ॥ ೪॥ ಒಂದು ಪಾದ ಭೂಮಿಯಲಿ ವ್ಯಾಪಿಸಿ ಮ - । ತ್ತೊಂದು ಪಾದ ಗಗನಕ್ಕಿಡಲು ॥ ಅಂದದಿ ಬಲಿಯ ಶಿರದಿ ಮೂರನೆಯದಿಟ್ಟು। ಬಂಧಿಸಿದಾಟಗಳೆಲ್ಲಿ ಕಲಿತೆಯೋ ! ॥ ೫॥ ಭರದಿ ಭಸ್ಮಾಸುರ ವರವನು ಪಡೆದು। ಹರನ ಶಿರದಿ ಕರವಿಡಲು ಬರಲು ॥ ತರುಣಿರೂಪವ ತಾಳಿ ಉರಿಹಸ್ತದವನ । ಮರುಳುಗೊಳಿಸಿದುದನೆಲ್ಲಿ ಕಲಿತೆಯೊ ! ॥ ೬॥ ಜಗಕೆ ಮೂಲನೆಂದು ನಾಗರಾಜ ಕರೆಯೆ। ಖಗವಾಹನನಾಗದೆ ನೀ ಬಂದು ॥ ನಗುತ ನಗುತ ಆ ವಿಗಡನಕ್ರನ ಕೊಂದ । ಹಗರಣದಾಟಗಳೆಲ್ಲಿ ಕಲಿತೆಯೊ ! ವೇದಗಳರಸಿಯು ಕಾಣದ ಬ್ರಹ್ಮ ನೀ - । ನಾದರದಲಿ ವಿದುರನ ಗೃಹದಿ ॥ ಮೋದದಿ ಒಕ್ಕುಡಿತೆಯ ಪಾಲನೆ ಕೊಂಡು । ಹಾದಿಯೊಳ್ ಹರಿಸಿದುದೆಲ್ಲಿ ಕಲಿತೆಯೊ ! ॥೮॥ ಡಂಬಕ ಹಿರಣ್ಯಕಶಿಪು ಪ್ರಹ್ಲಾದನ । ಹಂಬಲವಿಲ್ಲದೆ ಶಿಕ್ಷಿಸಲು ॥ ಸ್ತಂಭದಿ ಭಕ್ತಗೆ ರೂಪವ ತೋರಿ । ಸಂಭ್ರಮವಿತ್ತುದನೆಲ್ಲಿ ಕಲಿತೆಯೊ ! ॥ ೯॥ ಚಕ್ರಧರನೆ ಜರಾತನಯನೊಂದಿಗೆ ಕಾದಿ । ಸಿಕ್ಕಿ ಓಡಿದವನಿವನೆಂದೆನಿಸಿ ॥ ಭಕ್ತಭೀಮನ ಕೈಯಲಿ ಕೊಲ್ಲಿಸಿ । ಠಕ್ಕಿನಾಟಗಳನೆಲ್ಲಿ ಕಲಿತೆಯೊ ! ॥ ೧೦॥ ಪ್ರಾಣ ಸೆಳೆವೆನೀ ದಿನವೆಂದರ್ಜುನ । ಧೇನಿಸದಲೆ ಸೈಂಧವಗೆನಲು ॥ ಕಾಣದಂತೆ ಸೂರ್ಯಗೆ ಚಕ್ರವನಿಟ್ಟು। ಬಾಣ ಹೊಡಿಸಿದುದನೆಲ್ಲಿ ಕಲಿತೆಯೊ ॥ ೧೧॥ ಆ ಶಿರವಾತನ ತಂದೆಯ ಕರದೊಳು । ಸೂಸುತ ರಕ್ತವ ಬೀಳುತಿರೆ ॥ ಸೋಸಿ ನೋಡದೆ ರುಂಡ ಬಿಸುಡಲವನ ಶಿರ । ಸಾಸಿರ ಮಾಡಿದುದೆಲ್ಲಿ ಕಲಿತೆಯೊ ! ॥ ೧೨॥ ಸರ್ಪನ ಬಾಣವು ಉರಿಯುತ ಬರಲು ಕಂ - । ದರ್ಪನಪಿತ ನೀ ಕರುಣದಲಿ ॥ ತಪ್ಪಿಸಿ ಪಾರ್ಥನ ರಥ ನೆಲಕೊತ್ತಿ। ತೋರ್ಪಡಿಸಿದಾಟವೆಲ್ಲಿ ಕಲಿತೆಯೊ ! ॥ ೧೩॥ ದುರುಳ ದುಃಶಾಸನ ದ್ರೌಪದಿ ಸೀರೆಯ। ಕರದಿಂದ ಸಭೆಯೊಳು ಸೆಳೆಯುತಿರೆ ॥ ಹರಿ ಶ್ರೀಕೃಷ್ಣ ನೀ ಪೊರೆಯೆನಲಾಕ್ಷಣ । ಅರಿವೆರೂಪದಿ ಬಂದುದೆಲ್ಲಿ ಕಲಿತೆಯೊ ! ॥ ೧೪॥ ಕುರುಪತಿ ಸಭೆಯೊಳು ಗರುವಿನಿಂದಿರುತ । ಸಿರಿ ಕೃಷ್ಣನು ಬರೆ ವಂದಿಸದೆ ॥ ಸ್ಥಿರವಾಗಿ ಕುಳಿತಿರೆ ಚರಣದಿ ಧರೆಮೆಟ್ಟಿ। ಕುರುಪನನುರುಳಿಸಿದ್ದೆಲ್ಲಿ ಕಲಿತೆಯೊ! ॥೧೫॥ ದುರಿಯೋಧನ ಪಾಂಡವರ ಶಿಕ್ಷಿಸಲು । ಮೊರೆಯಿಡಲವನ ಮರುಳುಗೊಳಿಸಿ ॥ ಧುರದೊಳು ಪಾರ್ಥಗೆ ಸಾರಥಿಯಾಗಿ ನೀ । ಕುರುಕುಲವಳಿದುದನೆಲ್ಲಿ ಕಲಿತೆಯೊ! ॥ ೧೬॥ ಪತಿಶಾಪದಿ ಶಿಲೆಯಾದ ಅಹಲ್ಯೆಯ । ಹಿತದಿಂದವಳನು ಉದ್ಧರಿಸಿ ॥ ಪತಿಯೊಡಗೂಡಿಸಿ ಪತಿವ್ರತೆಯೆನಿಸಿದ - ಅ- । ಮಿತಮಹಿಮೆಯ ಕೃತಿಯಲ್ಲಿ ಕಲಿತೆಯೊ ॥ ೧೭॥ ಅಂಬರೀಷ ದ್ವಾದಶಿ ವ್ರತ ಸಾಧಿಸೆ । ತೊಂಬೆತನದಿ ದೂರ್ವಾಸ ಬರೆ ॥ ಇಂದುಧರಾಂಶನು ರಾಜನ ಪೀಡಿಸ - । ಲಂದು ಚಕ್ರದಿ ಕಾಯ್ದುದೆಲ್ಲಿ ಕಲಿತೆಯೊ ! ॥ ೧೮॥ ಕುಲಛಲಗಳನಳಿದ ಅಜಮಿಳ ಸರಸದಿ । ಹೊಲತಿಯ ಕೂಡಿರೆ ಮರಣ ಬರೆ ॥ ಬಲು ಮೋಹದ ಸುತ ನಾರಣನೊದರಲು ।

ಒಲಿದು ಗತಿಯನಿತ್ತುದೆಲ್ಲಿ ಕಲಿತೆಯೊ ! ॥ ೧೯॥ ಬಡತನ ಪಾರ್ವನ ಬಿಡದೆ ಬಾಧಿಸಲು। ಮಡದಿಯ ನುಡಿ ಕೇಳಿ ಆ ಕ್ಷಣದಿ ॥ ಒಡೆಯ ನೀನವನೊಪ್ಪಿಡಿಯಲವನು ಕೊಂಡು । ಕಡುಭಾಗ್ಯನಿತ್ತುದನೆಲ್ಲಿ ಕಲಿತೆಯೊ ! ॥ ೨೦॥ ಎಂದೆಂದು ನಿನ್ನ ಗುಣವೃಂದಗಳೆಣಿಸಲು । ಇಂದಿರೆ ಬೊಮ್ಮನಿಗಸದಳವು ॥ ಮಂದರಧರ ಸಿರಿಪುರಂದರವಿಠಲನೆ । ಚೆಂದ - ಚೆಂದದಾಟಗಳೆಲ್ಲಿ ಕಲಿತೆಯೊ ! ॥ ೨೧॥

*****

## ಕುಮಾರವ್ಯಾಸ ವಿರಚಿತ ಮಹಾಭಾರತ ಸಂಗ್ರಹ

ಕೇಳು ಜನಮೇಜಯ ಚರಿತ್ರೆಯ । ಪಾಲ ವೇದವ್ಯಾಸದೇವರು ಪಾಲಿಸಿದ ಅವತಾರ ಪಾಂಡವ ಕೌರವರ ಚರಿತಾ ॥ ಪ॥ ಶ್ರೀಲತಾಂಗಿಯ ರಮಣ ಕೃಷ್ಣನು। ಪಾಲಿಸಿದನರಗಿನ ಮನೆಯೊಳೈವರನು । ಮ್ಯಾಲೆ ಮದುವೆಯ ಮಾಡಿ ಕಾಯ್ದನು। ಆದಿಪರವಿನಲಿ ॥ ೧॥ ರಾಜಸೂಯಯಾಗವು ಮಾಡೆ ಧರ್ಮಜ ರಾಜತನ ಪಾಂಡವರ ಪತ್ನಿಯ । ಜೂಜಿನಲಿ ಸೋಲಿಸಿದ ಪಾಂಚಾಲಿ ಸಭೆಯಲ್ಲಿ । ರಾಜ್ಯವದನಿಯ ಭಂಗಬಡಿಸಲು ಮೂರ್ಜಗತ್ಪತಿ ಲಕ್ಷ್ಮಿಅರಸನು । ಆ ಜನಾರ್ದನನು ಕಾಯ್ದುಕೊಂಡನು ಸಭಾಪರವಿನಲಿ ॥ ೨॥ ದೇಶವನು ಬಿಟ್ಟು ಅಡವಿಯಲಿ ವನವಾಸದಲಿ ಪಾಂಡವರು ಇರುತಿರೆ ದುರ್ವಾಸಮುನಿಗಳು ಬಂದು ಗ್ರಾಸವ ಬೇಡೆ ಧರ್ಮಜನ । ಆ ಸಮಯದಲಿ ಕೃಷ್ಣ ಕೇಶವ ಶಾಕದಳವನು ಕೊಂಡು ಮೇಯಲು ಮಹೇಶಪಾರ್ಥನಿಗಿಟ್ಟು ಸಲುಹಿದ ಅರಣ್ಯಪರವಿನಲಿ ॥೩॥ ಬಂಧು ವಿರಾಟನ ಮನೆಯಲಿ ಪಾಂಡವರು ಹಾ ಎಂದು ಇರುತಿರಲು ಕೀಚಕನು ಸೈರಂಧ್ರಿಯನೆ ಕರೆಪಾಲ ಮಡಿದ ಸುದ್ದಿಯ ಕೇಳಿ ಕುರುಪತಿಯು। ಬಂದು ಗೋಗ್ರಾಮದಲಿ ತುರಗಮಂಜವನು ಹೊಡೆದಟ್ಟಿ ಮರಳಿಸಿ ಕುಂದಿ ಮರಳಿಸಿ ಕುರುಪನಟ್ಟಿದ ವಿರಾಟಪರವಿನಲಿ ॥೪॥ ದೇವ ನಾರಾಯಣನು ಕಪಟತನದಲಿ ಭಾವಿಸಿದನುದ್ಯೋಗಸಂಧಿಯ ಠೀವಿ ಮಾಡಿದ ಬಳಿಕ ವಿದುರನ ಮನೆಯ ಪಾಲುಂಡಾ ಕೌರವರ ಸಭೆಗ್ಹೋಗಿ ಕೃಷ್ಣನು ಐದು ಗ್ರಾಮವ ಬೇಡಿ ಕೊಡದಿರೆ ಯುದ್ಧಕೆ ಭಾಗವನೆ ಮಾಡಿದ ಉದ್ಯೋಗಪರ್ವದಲಿ ॥ ೫॥ ಕುರುಪತಿಯು ಗಾಂಗೇಯಗೆ ದ್ರೋಣರು ಶಲ್ಯರು ಪಟ್ಟಗಟ್ಟಲು। ಮೆರವಣಿಗೆ ರಣಭೂಮಿಗೆ ನಡೆದವು ನಾಲ್ವತ್ತೆಂಟು ಯೋಜನವ। ಕರೆಸಿದರು ಪಾಂಡವರ ಪುತ್ರರ ಬೆರಸಿ ಕಾಳಗ ಮಾಡೆ ಸಮರರು ಸರಳಮಂಚದ ಮೇಲೆ ಮಲಗಿದ ಭೀಷ್ಮಪರವಿನಲಿ ॥೬॥ ಗುರುಗಳಿಗೆ ಪಟ್ಟಾಭಿಷೇಕವನು ಕರೆದು ಮಾಡಿಸೆ ಕೌರವೇಂದ್ರನು । ರಥಿ ಚಕ್ರವ್ಯೂಹ ಧರಿಸಿದ ರಥವ ನಡೆಸಿದರು ತರಳ ಅಭಿಮನ್ಯುವು ಹೊಕ್ಕು ಮಡಿದನು। ಮರುಳ ಜಯದ್ರಥನ ಶಿರವನಳಿದನು । ದ್ರೋಣಬಿದ್ದನು ದ್ರೋಣಪರವಿನಲಿ ॥ ೭॥ ವೀರಕರ್ಣಗೆ ಪಟ್ಟಗಟ್ಟಲು ಕೌರವರು । ಷಣ್ಮುಖನ ಪುಟ್ಟಿದ ಮೂರು ಪುರವನು ಪಾರ್ಥಗೆಲಿದನು ಕೃಷ್ಣನನುಗ್ರಹದೀ । ಸಾರಥಿಯ ಮಾಡಿದನು ಶಲ್ಯನ। ವೀರ ಅರ್ಜುನನೊಡನೆ ಕಾಯ್ದನು । ಧಾರುಣಿಗೆ ರವಿತನಯ ಮಡುಹಿದ ಕರ್ಣಪರವಿನಲಿ ॥ ೮॥ ಸೂತಜನಮಡಿಲಿಕ್ಕೆ ಯುದ್ಧದೋಳ್ । ತಾತಹೋಯಿತು ಎನುತ ಶಲ್ಯನು ಆತ ಮಡುಹಿದ ಅರ್ಧ ದಿವಸಕೆ ಶಲ್ಯಪರವಿನಲಿ ॥ ೯॥ ಷಡ್‌ರಥಿಕರ ಬಲವೆಲ್ಲ ಮುಗ್ಗಿತು । ವಡೆಯ ಕುರುಪತಿ ಶ್ರಮವನಳೆಯಲು ಕಡೆಯ ಕಾಳಗವಾಯ್ತು

ಭಾರತ ಗದಾಪರುವದಲಿ ॥ ೧೦॥ ರಣದೊಳಗೆ ಬಿದ್ದವರ ಹೆಂಡಿರ ಹೆರಳುಮಂಡೆಯ ಕೆದರಿ ದುಃಖದಿ ತಮ್ಮ ಪತಿಗಳನೆ ನೋಡುತಲಿ ಹಣೆಗೆ ಹಣೆಯನೆ ಹಚ್ಚಿ । ಕಣ್ಣಿನ ಕುಣಿಕೆಯಲಿ ಜಲ ಸುರಿಯೆ ರಾಯಸ ವನಿತೆಯರು ಬಹು ಮಾಡು ಬಿದ್ದರು ಸ್ತ್ರೀಯಪರವಿನಲಿ ॥ ೧೧॥ ಅಂಧಕನು ತಾ ಕೇಳಿ ಮನದಲಿ । ಕೊಂದರಾಯರ ಕರೆಯಲಟ್ಟಿದ ಉಕ್ಕಿನ ಪ್ರತಿಮೆಯ ಅಪ್ಪಿ ಕೋಪವ ಕರದುಕೊಂಡನು ಐಕ್ಯಪರುವದಲಿ ॥ ೧೨॥ ಅರಸು ಧರ್ಮಜ ಬಂದು ಭೀಷ್ಮಗೆ ಎರಗಿ ಕಂಬನಿದುಂಬಿ ನಿಜಗುರು ಪರಮಮಿತ್ರದ್ರೋಹ-ಬಂದಿತು ಸಹೋದರರ ಕೊಂದು । ಧರೆಯ ನಾಳುವುದಕ್ಕಿಂತಲೀ ದೇಶಾಂತರ ಪೋಗುವೆನೆಂದನು । ಜ್ಞಾನ ಅರುಹಿ ಜೀವನ ಬಿಟ್ಟ ನದಿಸುತ ಶಾಂತಿಪರವಿನಲಿ ॥ ೧೩॥ ಇಂದು ಧರ್ಮಜ ಬಂದು ಅಲ್ಲಿಗೆ ಬಂದು ದಾಯಾದರಿಗೆ ದಿಶಿದಿನಾ । ಬಂದರಯ್ಯಾ ವ್ಯಾಸರೂ, ಪುರೋಹಿತರೂ ಸಹಿತಾ। ಇಂದು ಆಸ್ತಿಯ ದಾನ ಮಾತ್ರದಿ ಬಂದು ಸೂತಕವಗೆ ಪಿಡಿಯಲಾ । ದಶಮಿ, ಏಕಾದಶಿ ದ್ವಾದಶಿ ದಿನದಲಿ ಭೂರಿ ಶ್ರಾದ್ಧವನೆ ಮಾಡಿಸಿದರು ಸ್ವರ್ಗಾರೋಹಣಪರವಿನಲಿ ॥ ೧೪॥ ತುರುಗವನು ಶೃಂಗರಿಸಿ ಬಿಟ್ಟರು ಧರಣಿರಾಯರ ಮೇಲೆ ಕಪ್ಪವ । ತೆರವುಗಳ ನೀವ್ ಕೊಡಿರಿ ಎನುತಲಿ ಶೂರ ವಿಕ್ರಮರು । ಪರಿಪರಿಯ ರತ್ನಗಳ, ದ್ರವ್ಯವ ತುರಗನೇರಿಸಿ ಪುರಕ ಕಳುಹಲು । ಅರಸುಗಳು ತಾವ್ ಮಾಡಿದರಶ್ವಮೇಧ ಎಂಬೋ ಯಾಗಪರವಿನಲಿ ॥ ೧೫॥ ಕಲಿಯು ಬರಲೆಂತೆಂದು ವಿಪ್ರರು ಬರಿದೆ ಎರಡನೆ ಗೆಲಿದು ಮುನ್ನಿನಾ ॥ ಇಳವಿ ಭಾರಾ ಹಿಂಗಕಳೆದರು ಮುಸಲ ಪರವದಲಿ ॥ ೧೬॥ ಕಲಹ ಮಾಡಿಸಿ ಕೊಲಿಸಿ ವನಕಿಲಿ ಬರಿಯ ಮನಿಯಲಿ ಘಾಯ ಮೈಯಿಸಿ । ಇಳುವಿ ಕೃಷ್ಣ ಯಾದವರ ಮನೆಯಲಿ ಸಿಲುಕು ಸಿಕ್ಕಿರಲಿ ॥ ೧೭॥ ನಡೆದರೈ ಪಾಂಡವರು ವಂದಾಗಿ ಘಟನದಲಿ ಹೇಮಂತ ಪರ್ವತ ಎಡವಿ ಪೋಗುತ ಬಿದ್ದರೆಲ್ಲರೂ ಉಳಿದ ಧರ್ಮಜನು ॥೧೮॥ ಇಂದು ಧರ್ಮಜ ಬಂದು ಅಲ್ಲಿಗೆ ಕಂಡನೈ ಕೌರವನ ಇಂದು ಬಾರೈ ಸ್ವರ್ಗಲೋಕಕೆ ಎಂದ ಕೌರವನು । ಇಂದು ನಿನ್ನಂಗಿನ ಸ್ವರ್ಗವು ಎಂದೆಂದಿಗೂ ಬೇಡ ಎನುತಲಿ ॥ ಇಂದಿರಾಪತಿ ಕೊಟ್ಟ ನರಕವೇ ಲೇಸೆಂದಾ ॥೨೦॥ ನಡೆದರೈ ಪಾಂಡವರು ವಂದಾಗಿ ಸೇರಿದರು ಗೋವಿಂದನಂಘ್ರಿಜ । ಓಯೆನುತಲಿ ಮರಿ ಇಡಲಿ ಕೌರವರ ನೋಡಿದನು ಧರ್ಮಜನು ॥ ೨೧॥ ನೋಡಿದರು ನಾನಾ ವಿನೋದವ ಸಾರ ಹೃದಯದ ಲಕ್ಷ್ಮೀರಮಣ । ಪಾರುಗಾಣಿಸುವನು ನಮ್ಮ ಗದುಗಿನ ವೀರನಾರಯಣಾ ॥ ೨೨॥

*****

## ಶ್ರೀವ್ಯಾಸರಾಯರು ರಚಿಸಿದ
## ಭಗವದ್ಗೀತಾಸಾರ

"ಕೇಳಯ್ಯ ಎನ್ನ ಮಾತ ಪಾರ್ಥನೆ । ಗೀತಾದರ್ಥನೇ"

ಶ್ಲೋಕ : ಕುರುಕ್ಷೇತ್ರದಿ । ಎನ್ನವರು ಪಾಂಡವರೂ ।
ಪೇಳೊ ಸಂಜಯ । ಏನು ಮಾಡುವರು ಕೂಡಿ ।
ಕೇಳೈ ಅರಸನೇ । ನೋಡು ಪಾಂಡವರ ಸೇನಾ ।
ಮಾತಾಡಿದ ನಿನ್ನ ಸುತಗೆ । ದ್ರೋಣ ನಿಂತು ॥

ಪದ - ಕೇಳಿ ತಾ ಪಾರ್ಥನು ಕುರುದಂಡ । ರಣದಲಿ ಚಂಡ । ಗಾಂಡೀವ ಕರದಂಡ ಅಚ್ಯುತ ಪಿಡಿ ರಥ ನಡೆ ಮುಂದಾ । ಬಹುತ್ವರದಿಂದ । ನೋಡುವೆ ನೇತ್ರದಿಂದಾ । ಗುರುಹಿರಿಯರ ಕೂಡಾ ಯಾಕಂದಾ । ಯುದ್ಧ ಸಾಕೆಂದ । ಭಿಕ್ಷವೆ ಸುಖವೆಂದಾ । ಕುಂತೀಸುತ ಈ ಮಾತು ಉಚಿತವಲ್ಲ । ನಿನಗಿದು ಸಲ್ಲ । ಪಿಡಿ ಗಾಂಡೀವ ಬಿಲ್ಲ ॥ ೧॥

ಶ್ಲೋಕ : ಬಾಲ ಯೌವನ ಮುಪ್ಪುತನ ದೇಹದಲ್ಲಿ
ಇಂಥಾ ದೇಹಕೆ ಮೋಹ ಮತ್ಯಾತರೆಲ್ಲಿ ॥
ಕಾಯ್ದು ಕೊಲ್ಲುವ ನಾನು ಇರುತಿರಲು ಇಲ್ಲೀ
ಬಿಲ್ಲು ಪಿಡಿದು ಕೀರ್ತಿಪಡೆ ಲೋಕದಲ್ಲೀ ॥೧॥

ಪದ - ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ । ಈ ದೇಹಕ್ಕೆ । ಪಾವಕನ ದಾಹಕ್ಕೆ। ಉದಕಗಳಿಂದ ವೇದನೆಯಾಕೆ । ಈ ಜೀವಕ್ಕೆ । ಮಾರುತದ ಶೋಷಕ್ಕೆ । ನಿತ್ಯ ಅಭೇದ್ಯ ತಾ ಜೀವನ । ಸನಾತನ । ವಸ್ತ್ರದ್ಹಾಂಗೆ ಈ ತನುವು । ಆದಾವು ಪೋದಾವು ನಿನಗಯ್ಯಾ । ಅದ ನಾ ಬಲ್ಲೆನಯ್ಯಾ॥೨॥

ಶ್ಲೋಕ : ಜ್ಞಾನ ದೊಡ್ಡದು ಕರ್ಮ ಬಂಧವ ಬಿಟ್ಟು
ಕರ್ಮ ಬಿಟ್ಟರೇ ಪ್ರತ್ಯವಾಯವಿಷ್ಟು ॥
ಫಲ ಬಿಟ್ಟು ನೀ ಮಾಡು ಕರ್ಮಗಳ
ಸಮ ದೇಹಕೆ ಫಲ ಕರ್ಮ ಕಾರಣವಲ್ಲ ॥ ೩॥

ಪದ - ಕರ್ಮದಲ್ಲೇ ನಿನಗಧಿಕಾರ । ಫಲ ತಾ ದೂರ । ಧನಂಜಯ ಗೋಸ್ಕರ । ಜ್ಞಾನ ದೊಡ್ಡದು ಕರ್ಮ ದೂರಯ್ಯಾ । ಇತ್ತ ಬಾರಯ್ಯ। ಯೋಗ ಬುದ್ಧಿ ಮಾಡಯ್ಯ । ಜಿತಬುದ್ಧಿ ಯಾವುದ್ಯೆ ಕೇಶವಾ । ಜಗತ್ಪಾಶವ । ನೋಡದೆ ಪರಮೇಶ ಗೋವಿಂದನಲ್ಲಿ ಮನವಿಟ್ಟವ । ಕಾಮ ಬಿಟ್ಟವ । ಜಿತದೇಹ ತಾನಾವ।

ಶ್ಲೋಕ : ಜ್ಞಾನ ದೊಡ್ಡದು ಕರ್ಮದಲ್ಯಾಕೆ ಎನ್ನ
ಬುದ್ಧಿ ಮೋಹಿಸಿ ಕೃಷ್ಣ ಕೇಳಯ್ಯ ಬಿನ್ನ ॥
ಕರ್ಮವಿಲ್ಲದೆ ಮೋಕ್ಷ ಫಲವುಂಟೆ ಇನ್ನಾ
ಕರ್ಮ ಮೋಕ್ಷದ ಬುದ್ಧೀಗೆ ಬೀಜವಲ್ಲೇ ॥ ೪॥

ಪದ - ಯುದ್ಧ ಧರ್ಮವ ಮಾಡೊ ಪಾಂಡವ । ರಣತಾಂಡವ । ವ್ಯೆರ ಷಂಢನೆಂಬುವ ಜನರೆಲ್ಲ ಮಾಳ್ಪರೋ ನಿನನೋಡಿ । ಮತ್ತೇನ ನೋಡಿ । ನೋಡಿದರ ನೀ ಬೇಡಿ । ಎನಗ್ಯಾಕೆ ಪೇಳಯ್ಯ ಜನಕರ್ಮ । ಕ್ಷತ್ರಿಯ ಧರ್ಮ । ನಷ್ಟವಾಗುವದು ಧರ್ಮ । ಅರ್ಪಿಸು ಎನ್ನಲ್ಲಿ ಸರ್ವವು । ಬಿಟ್ಟು ಗರ್ವವು । ತಿಳಿ ಎನ್ನೊಳು ಸರ್ವವು ॥ ೪॥

ಶ್ಲೋಕ : ಯೋಗ ಸನ್ಯಾಸವೆರಡು ಮುಕ್ತಿಗೆ ಧೃಢವು
ಭ ೀಗ ವರ್ಜಿತ ಕೇಳು ಸನ್ಯಾಸಿಯಿರವು ॥
ಹ್ಯಾಗೆ ಪದ್ಮಕೆ ಪಾಣೆಯ ಲೇಪವಿಲ್ಲ
ಹಾಗೆ ಭಕ್ತಿಗೆ ಸಂಸ್ಸೃತಿಯು ಇಲ್ಲ ॥ ೫॥

ಪದ - ಅಜನಲ್ಲಿ ದ್ವಿಜನಲ್ಲಿ ಗಜದಲ್ಲಿ । ಸಮನಾನಲ್ಲಿ । ಭಜಿಪರ ಮನದಲ್ಲಿ । ಮನಸು ಯಾರ ಜೀವಕೆ ಬಂದು । ಇತ್ತ ಬಾರೆಂದು ಮತ್ತೆ ವೈರಿದಾರೆಂದೂ । ಲೋಷ್ಟಕಾಂಚನ ನೋಡು ಸಮ ಮಾಡಿ । ಆಸನ ಹೂಡಿ ನಾಶಿಕ ತುದಿ ನೋಡಿ । ಧ್ಯಾನ ಮಾಡು ಹರಿ ಅಲ್ಲಿಹ। ಅವನಲ್ಲಿಹ । ಯೋಗ ಸನ್ನಿಹಿತನವನೇ ॥ ೫॥

ಶ್ಲೋಕ : ಯಾರ ಭಕ್ತಿಯು ಎನ್ನ ಪದಾಬ್ಜದಲ್ಲೀ
ಘೋರ ಸಂಸಾರ ಯಾತನೆ ಅವರಿಗಿಲ್ಲ ॥
ಶರೀರವೇ ಕ್ಷೇತ್ರವೆಂದು ತಿಳಿಯೋ
ಮರೆಯದೇ ಕ್ಷೇತ್ರಜ್ಞನೆಂದೆನ್ನ ತಿಳಿಯೋ ॥ ೬॥

ಪದ - ಶರೀರದೊಳಗಿದ್ದು ಪಾಪಿಲ್ಲ । ದುಃಖ ಲೇಪಿಲ್ಲ । ಆಕಾಶವು ಎಲ್ಲಾ। ಯಾತರಿಂದ್ಹುಟ್ಟಿತು ಈ ಗುಣ । ಮೂರು ಸದ್ಗುಣ । ಕೇಳಯ್ಯ ಫಲ್ಗುಣ ಸುಖ ದುಃಖ ಸಮ ಮಾಡಿ ನೋಡು ನೀ । ಈಡ್ಯಾಡು ನೀ । ಬ್ರಹ್ಮಾನ ನೋಡೋ ನೀ । ಚಂದ್ರ ಸೂರ್ಯರ ತೇಜ ನನದಯ್ಯ । ಗುಡಾಕೇಶಯ್ಯ । ಅನ್ನಪಚನ ವೆನದಯ್ಯಾ ॥ ೬॥

ಶ್ಲೋಕ : ನಾನೇ ಉತ್ತಮ ಮನಸು ಎನ್ನಲ್ಲಿ ಮಾಡೋ
ಜ್ಞಾನ ಅಜ್ಞಾನ ಪೇಳುವೆ ತಿಳಿದು ನೋಡೋ ॥
ಜ್ಞಾನ ದುರ್ಲಭ ಅವರ ಭಕ್ತಿಗಳಂತೆ
ನಾನು ಕೊಡುವೆನು ಫಲವ ಮನಸು ಬಂದಂತೆ ॥ ೭॥

ಪದ - ಸ್ಮರಣೆ ಮಾಡುತ ದೇಹ ಬಿಡುವರೋ । ಎನ್ನ ಪಡೆವರೋ । ಬಲು ಭಕ್ತಿ ಮಾಡುವರೋ । ಅನಂತ ಚೇತನ ಸುಳಿವೆನು । ಹರಿಸುಲಭನು । ಮತ್ತೇ ಜನನವಿಲ್ಲವಗೇ। ಎನ್ನ ಭಕ್ತರಗಿಲ್ಲ ನಾಶವು । ಸ್ವರ್ಗದಾಶವು । ಬಿಟ್ಟು ಚರಣ ಭಕುತಿಯ ॥ ೭॥

ಶ್ಲೋಕ : ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ
ಇಷ್ಟ ಪೂರುತಿಯಾಗಲೋ ಎನಗೆ ಶ್ರೀಪ ॥
ರಾಮ ನಾನಯ್ಯ ರಾಜರ ಗುಂಪಿನಲ್ಲೀ
ಸೋಮ ನಾನಯ್ಯ ತಾರಕ ಮಂಡಲದಲ್ಲೀ ॥ ೮॥

ಪದ - ಅಕ್ಷರದೊಳಗೆ ಆಕಾರನು । ಗುಣಸಾಗರನು । ಪಕ್ಷಿಗಳಲ್ಲಿ ನಾನು। ಗರುಡನು ಸಕಲ ಜಾತಿಗಳಲ್ಲಿ । ಶ್ರೇಷ್ಠತನದಲ್ಲಿ । ಎನ್ನರೂಪ ತಿಳಿಯಲ್ಲೀ । ತೋರಿಸೋ ಕೃಷ್ಣ ನಿನ್ನ ರೂಪ । ನಾನಾ ರೂಪ । ಅರ್ಜುನ ನೋಡೋ ರೂಪ। ಕಂಡನು ತನ್ನನು ಸಹಿತಾದಿ । ಹರಿ ದೇಹದಿ । ಬ್ರಹ್ಮಾಂಡಗಳಲ್ಲಿ ॥ ೮॥

ಶ್ಲೋಕ : ಕ್ಷರ ಅಕ್ಷರ ಎರಡಕ್ಕೂ ಉತ್ತಮನು
ಘೋರ ನರಕಕ್ಕೆ ಲೋಭಕಾಮನು ನಾನು ॥
ಸಾರದಾನವು ಸಜ್ಜನರ ಹಸ್ತದಲ್ಲೀ
ಭೂರಿದಕ್ಷಿಣೆ ನೀಡೋ ಸತ್ಪಾತ್ರದಲ್ಲಿ ॥ ೯॥

ಪದ - ಸರ್ವ ದಾನಕ್ಕಿಂತ ಎನ ಭಕ್ತಿ । ಕೇಳೋ ಭೂಶಕ್ತಿ । ಮಾಡಯ್ಯ ವಿಶಕ್ತಿ । ಕೃಷ್ಣ

ಹರಣವಾಯ್ತು ನಿನ್ನಿಂದ । ಮೋಹ ಎನ್ನಿಂದ । ಬಹು ಸೂವಾಕ್ಯದಿಂದ । ಕೃಷ್ಣ ಭೀಮಾನುಜರ ಸಂವಾದ । ಮಹಸುಖಪ್ರದ । ಧೃತರಾಷ್ಟ್ರ ಕೇಳಿದ । ಬಲ್ಲೆನು ವ್ಯಾಸರ ದಯದಿಂದ । ಮನಸೀನಿಂದ ಕೃಷ್ಣನಲ್ಲೇ ಜಯವೆಂದ ॥ ೯॥ **॥ ಮಂಗಲಂ ॥**

**॥ ಇಲ್ಲಿಗೆ ಶ್ರೀವ್ಯಾಸರಾಯವಿರಚಿತ ಭಗವದ್ಗೀತಾಸಾರವು ಸಮಾಪ್ತವಾಯಿತು ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

*****

### ಹರಿಭಕ್ತಾಗ್ರೇಸರ ಕನಕದಾಸರ

## ಹರಿಭಕ್ತಿಸಾರ

### ಭಾಮಿನಿ ಷಟ್ಪದಿ

ಶ್ರೀಯರಸ ಗಾಂಗೇಯನುತ ಕೌಂ - । ತೇಯವಂದಿತಚರಣ ಕಮಲದ-। ಳಾಯತಾಂಬಕ ರೂಪಚಿನ್ಮಯ ದೇವಕೀತನಯ ॥ ರಾಯ ರಘುಕುಲವರ್ಯ ಭೂಸುರ-। ಪ್ರೀಯ ಸುರಪುರನಿಲಯ ಚನ್ನಿಗ - । ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥ ೧॥ ದೇವ ದೇವ ಜಗದ್ಭರಿತ ವಸು-। ದೇವಸುತ ಜಗದೇಕನಾಥ ರ -। ಮಾವಿನೋದಿತ ಸಜ್ಜನಾನತ ನಿಖಿಲಗುಣಭರಿತ ॥ ಭಾವಜಾರಿಪ್ರಿಯ ನಿರಾಮಯ। ರಾವಣಾಂತಕ ರಘುಕುಲಾನ್ವಯ । ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ॥೨॥ ಅನುಪಮಿತಚಾರಿತ್ರ್ಯ ಕರುಣಾ-। ವನದಿ ಭಕ್ತಕುಟುಂಬಿ ಯೋಗೀ - । ಜನಹೃದಯ ಪರಿಪೂರ್ಣ ನಿತ್ಯಾನಂದ ನಿಗಮನುತ ॥ ವನಜನಾಭ ಮುಕುಂದ ಮುರಮ- । ರ್ದನ ಜನಾರ್ದನ ತ್ರೈಜಗತ್ಪಾ - । ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ॥ ೩॥ ಕಮಲ ಸಂಭವವಿನುತ ವಾಸವ । ನಮಿತ ಮಂಗಳಚರಿತ ದುರಿತ । ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ ॥ ಅಮಿತವಿಕ್ರಮ ಭೀಮ ಸೀತಾ । ರಮಣ ವಾಸುಕಿಶಯನ ಖಗಪತಿ । ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ॥ ೪॥ ಕ್ಷೀರವಾರಿಧಿಶಯನ ಶಾಂತಾ - । ಕಾರ ವಿವಿಧವಿಚಾರ ಗೋಪೀ- । ಜಾರ ನವನಿತಚೋರ ಚಕ್ರಾಧಾರ ಭವದೂರ ॥ ಮಾರಪಿತ ಗುಣಹಾರ ಸರಸಾ-। ಕಾರ ರಿಪುಸಂಹಾರ ತುಂಬುರು । ನಾರದಪ್ರಿಯ-ವರದ ರಕ್ಷಿಸು ನಮ್ಮನನವರತ ॥ ೫॥ ತಾಮರಸದಳನಯನ ಭಾರ್ಗವ। ರಾಮ ಹಲಧರ ರಾಮ ದಶರಥ - । ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ ॥ ಸಾಮಗಾನಪ್ರೇಮ ಕಾಂಚನ-। ಧಾಮಧರ ಸುತ್ರಾಮವಿರಚಿತ - । ಕಾಮ ರವಿಕುಲ-ಸೋಮ ರಕ್ಷಿಸು ನಮ್ಮನನವರತ ॥ ೬॥ ವೇದಗೋಚರ ವೇಣುನಾದವಿ -। ನೋದ ಮಂದರಶೈಲಧರ ಮಧು-। ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ॥ ಯಾದವೇಂದ್ರ ಯಶೋದೆನಂದನ। ನಾದಬಿಂದುಕಳಾತಿಶಯ ಪ್ರ - । ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ॥ ೭॥ ಅಕ್ಷಯಾಶ್ರಿತ ಸುಜನಜನಸಂ -। ರಕ್ಷಣ ಶ್ರೀವತ್ಸ- ಕೌಸ್ತುಭ॥ ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ॥ ಪಕ್ಷಿವಾಹನ ದೇವಸಂಕುಲ । ಪಕ್ಷಜಗದಧ್ಯಕ್ಷ ವರನಿಟಿ। ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ ॥ ೮॥ ಚಿತ್ರಕೂಟನಿವಾಸ ವಿಶ್ವಾ-।

ಪದ - ಅಜನಲ್ಲಿ ದ್ವಿಜನಲ್ಲಿ ಗಜದಲ್ಲಿ । ಸಮನಾನಲ್ಲಿ । ಭಜಿಪರ ಮನದಲ್ಲಿ । ಮನಸು ಯಾರ ಜೀವಕೆ ಬಂದು । ಇತ್ತ ಬಾರೆಂದು ಮತ್ತೆ ವೈರಿದಾರೆಂದೂ । ಲೋಷ್ಟಕಾಂಚನ ನೋಡು ಸಮ ಮಾಡಿ । ಆಸನ ಹೂಡಿ ನಾಶಿಕ ತುದಿ ನೋಡಿ । ಧ್ಯಾನ ಮಾಡು ಹರಿ ಅಲ್ಲಿಹ। ಅವನಲ್ಲಿಹ । ಯೋಗ ಸನ್ನಿಹಿತನವನೇ ॥ ೫॥

**ಶ್ಲೋಕ :** **ಯಾರ ಭಕ್ತಿಯು ಎನ್ನ ಪದಾಬ್ಜದಲ್ಲೀ**
**ಘೋರ ಸಂಸಾರ ಯಾತನೆ ಅವರಿಗಿಲ್ಲ ॥**
**ಶರೀರವೇ ಕ್ಷೇತ್ರವೆಂದು ತಿಳಿಯೋ**
**ಮರೆಯದೇ ಕ್ಷೇತ್ರಜ್ಞನೆಂದೆನ್ನ ತಿಳಿಯೋ ॥ ೬॥**

ಪದ - ಶರೀರದೊಳಗಿದ್ದು ಪಾಪಿಲ್ಲ । ದುಃಖ ಲೇಪಿಲ್ಲ । ಆಕಾಶವು ಎಲ್ಲಾ। ಯಾತರಿಂದ್ಹುಟ್ಟಿತು ಈ ಗುಣ । ಮೂರು ಸದ್ಗುಣ । ಕೇಳಯ್ಯ ಫಲ್ಗುಣ ಸುಖ ದುಃಖ ಸಮ ಮಾಡಿ ನೋಡು ನೀ । ಈಡ್ಯಾಡು ನೀ । ಬ್ರಹ್ಮಾನ ನೋಡೋ ನೀ । ಚಂದ್ರ ಸೂರ್ಯರ ತೇಜ ನನದಯ್ಯ । ಗುಡಾಕೇಶಯ್ಯ । ಅನ್ನಪಚನ ವೆನದಯ್ಯಾ ॥ ೬॥

**ಶ್ಲೋಕ :** **ನಾನೇ ಉತ್ತಮ ಮನಸು ಎನ್ನಲ್ಲಿ ಮಾಡೋ**
**ಜ್ಞಾನ ಅಜ್ಞಾನ ಪೇಳುವೆ ತಿಳಿದು ನೋಡೋ ॥**
**ಜ್ಞಾನ ದುರ್ಲಭ ಅವರ ಭಕ್ತಿಗಳಂತೆ**
**ನಾನು ಕೊಡುವೆನು ಫಲವ ಮನಸು ಬಂದಂತೆ ॥ ೭॥**

ಪದ - ಸ್ಮರಣೆ ಮಾಡುತ ದೇಹ ಬಿಡುವರೋ । ಎನ್ನ ಪಡೆವರೋ । ಬಲು ಭಕ್ತಿ ಮಾಡುವರೋ । ಅನಂತ ಚೇತನ ಸುಳಿವೆನು । ಹರಿಸುಲಭನು । ಮತ್ತೇ ಜನನವಿಲ್ಲವಗೇ। ಎನ್ನ ಭಕ್ತರಗಿಲ್ಲ ನಾಶವು । ಸ್ವರ್ಗದಾಶವು । ಬಿಟ್ಟು ಚರಣ ಭಕುತಿಯ ॥ ೭॥

**ಶ್ಲೋಕ :** **ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ**
**ಇಷ್ಟ ಪೂರುತಿಯಾಗಲೋ ಎನಗೆ ಶ್ರೀಪ ॥**
**ರಾಮ ನಾನಯ್ಯ ರಾಜರ ಗುಂಪಿನಲ್ಲೀ**
**ಸೋಮ ನಾನಯ್ಯ ತಾರಕ ಮಂಡಲದಲ್ಲೀ ॥ ೮॥**

ಪದ - ಅಕ್ಷರದೊಳಗೆ ಆಕಾರನು । ಗುಣಸಾಗರನು । ಪಕ್ಷಿಗಳಲ್ಲಿ ನಾನು। ಗರುಡನು ಸಕಲ ಜಾತಿಗಳಲ್ಲಿ । ಶ್ರೇಷ್ಠತನದಲ್ಲಿ । ಎನ್ನರೂಪ ತಿಳಿಯಲ್ಲೀ । ತೋರಿಸೋ ಕೃಷ್ಣ ನಿನ್ನ ರೂಪ । ನಾನಾ ರೂಪ । ಅರ್ಜುನ ನೋಡೋ ರೂಪ। ಕಂಡನು ತನ್ನನು ಸಹಿತಾದಿ । ಹರಿ ದೇಹದಿ । ಬ್ರಹ್ಮಾಂಡಗಳಲ್ಲಿ ॥ ೮॥

**ಶ್ಲೋಕ :** **ಕ್ಷರ ಅಕ್ಷರ ಎರಡಕ್ಕೂ ಉತ್ತಮನು**
**ಘೋರ ನರಕಕ್ಕೆ ಲೋಭಕಾಮನು ನಾನು ॥**
**ಸಾರದಾನವು ಸಜ್ಜನರ ಹಸ್ತದಲ್ಲೀ**
**ಭೂರಿದಕ್ಷಿಣೆ ನೀಡೋ ಸತ್ಪಾತ್ರದಲ್ಲಿ ॥ ೯॥**

ಪದ - ಸರ್ವ ದಾನಕ್ಕಿಂತ ಎನ ಭಕ್ತಿ । ಕೇಳೋ ಭೂಶಕ್ತಿ । ಮಾಡಯ್ಯ ವಿಶಕ್ತಿ । ಕೃಷ್ಣ

ಹರಣವಾಯ್ತು ನಿನ್ನಿಂದ । ಮೋಹ ಎನ್ನಿಂದ । ಬಹು ಸೂವಾಕ್ಯದಿಂದ । ಕೃಷ್ಣ ಭೀಮಾನುಜರ ಸಂವಾದ । ಮಹಸುಖಪ್ರದ । ಧೃತರಾಷ್ಟ್ರ ಕೇಳಿದ । ಬಲ್ಲೆನು ವ್ಯಾಸರ ದಯದಿಂದ । ಮನಸೀನಿಂದ ಕೃಷ್ಣನಲ್ಲೇ ಜಯವೆಂದ ॥ ೯॥ **॥ ಮಂಗಲಂ ॥**

**॥ ಇಲ್ಲಿಗೆ ಶ್ರೀವ್ಯಾಸರಾಯವಿರಚಿತ ಭಗವದ್ಗೀತಾಸಾರವು ಸಮಾಪ್ತವಾಯಿತು ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

*****

### ಹರಿಭಕ್ತಾಗ್ರೇಸರ ಕನಕದಾಸರ

## ಹರಿಭಕ್ತಿಸಾರ

### ಭಾಮಿನಿ ಷಟ್ಪದಿ

ಶ್ರೀಯರಸ ಗಾಂಗೇಯನುತ ಕೌಂ - । ತೇಯವಂದಿತಚರಣ ಕಮಲದ-। ಳಾಯತಾಂಬಕ ರೂಪಚಿನ್ಮಯ ದೇವಕೀತನಯ ॥ ರಾಯ ರಘುಕುಲವರ್ಯ ಭೂಸುರ-। ಪ್ರೀಯ ಸುರಪುರನಿಲಯ ಚನ್ನಿಗ - । ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥ ೧॥ ದೇವ ದೇವ ಜಗದ್ಭರಿತ ವಸು-। ದೇವಸುತ ಜಗದೇಕನಾಥ ರ -। ಮಾವಿನೋದಿತ ಸಜ್ಜನಾನತ ನಿಖಿಲಗುಣಭರಿತ ॥ ಭಾವಜಾರಿಪ್ರಿಯ ನಿರಾಮಯ। ರಾವಣಾಂತಕ ರಘುಕುಲಾನ್ವಯ । ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ॥೨॥ ಅನುಪಮಿತಚಾರಿತ್ರ್ಯ ಕರುಣಾ-। ವನದಿ ಭಕ್ತಕುಟುಂಬಿ ಯೋಗೀ - । ಜನಹೃದಯ ಪರಿಪೂರ್ಣ ನಿತ್ಯಾನಂದ ನಿಗಮನುತ ॥ ವನಜನಾಭ ಮುಕುಂದ ಮುರಮ- । ರ್ದನ ಜನಾರ್ದನ ತ್ರೈಜಗತ್ಪಾ - । ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ॥ ೩॥ ಕಮಲ ಸಂಭವವಿನುತ ವಾಸವ । ನಮಿತ ಮಂಗಳಚರಿತ ದುರಿತ । ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ ॥ ಅಮಿತವಿಕ್ರಮ ಭೀಮ ಸೀತಾ । ರಮಣ ವಾಸುಕಿಶಯನ ಖಗಪತಿ । ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ॥ ೪॥ ಕ್ಷೀರವಾರಿಧಿಶಯನ ಶಾಂತಾ - । ಕಾರ ವಿವಿಧವಿಚಾರ ಗೋಪೀ- । ಜಾರ ನವನಿತಚೋರ ಚಕ್ರಾಧಾರ ಭವದೂರ ॥ ಮಾರಪಿತ ಗುಣಹಾರ ಸರಸಾ-। ಕಾರ ರಿಪುಸಂಹಾರ ತುಂಬುರು । ನಾರದಪ್ರಿಯ-ವರದ ರಕ್ಷಿಸು ನಮ್ಮನನವರತ ॥ ೫॥ ತಾಮರಸದಳನಯನ ಭಾರ್ಗವ। ರಾಮ ಹಲಧರ ರಾಮ ದಶರಥ - । ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ ॥ ಸಾಮಗಾನಪ್ರೇಮ ಕಾಂಚನ-। ಧಾಮಧರ ಸುತ್ರಾಮವಿರಚಿತ - । ಕಾಮ ರವಿಕುಲ-ಸೋಮ ರಕ್ಷಿಸು ನಮ್ಮನನವರತ ॥ ೬॥ ವೇದಗೋಚರ ವೇಣುನಾದವಿ -। ನೋದ ಮಂದರಶೈಲಧರ ಮಧು-। ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ॥ ಯಾದವೇಂದ್ರ ಯಶೋದೆನಂದನ। ನಾದಬಿಂದುಕಳಾತಿಶಯ ಪ್ರ - । ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ॥ ೭॥ ಅಕ್ಷಯಾಶ್ರಿತ ಸುಜನಜನಸಂ -। ರಕ್ಷಣ ಶ್ರೀವತ್ಸ- ಕೌಸ್ತುಭ॥ ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ॥ ಪಕ್ಷಿವಾಹನ ದೇವಸಂಕುಲ । ಪಕ್ಷಜಗದಧ್ಯಕ್ಷ ವರನಿಟಿ। ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ ॥ ೮॥ ಚಿತ್ರಕೂಟನಿವಾಸ ವಿಶ್ವಾ-।

ಮಿತ್ರಕ್ರತುಸಂರಕ್ಷ ರವಿಶಶಿ-। ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ ॥ ಧಾತ್ರಿಜಾಂತಕ ಕಪಟನಾಟಕ । ಸೂತ್ರ ಪರಮಪವಿತ್ರ ಫಲ್ಗುನ-। ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ॥ ೯॥ ಮಂಗಳಾತ್ಮಕ ದುರಿತತಿಮಿರಪ- । ತಂಗ ಗರುಡತುರಂಗ ರಿಪುಮದ । ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ॥ ಅಂಗದಪ್ರಿಯನೆಂಗಪಿತ ಕಾ -। ಳಿಂಗಮರ್ದನ ಅಮಿತಕರುಣಾ - । ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ॥ ೧೦॥ ದಾಶರಥಿ ವೈಕುಂಠನಗರನಿ - । ವಾಸ ತ್ರೈಜಗದೀಶ ಪಾಪವಿ - । ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ ॥ ವಾಸುದೇವ ದಿನೇಶಶತಸಂ - । ಕಾಶ ಯದುಕುಲವಂಶತಿಲಕ ಪ - । ರಾಶರಾನತ ದೇವ ರಕ್ಷಿಸು ನಮ್ಮನನವರತ ॥ ೧೧॥ ಕುಂದಕುಡ್ಮಲರದನ ಪರಮಾ - । ನಂದ ಹರಿ ಗೋವಿಂದ ಸನಕಸ । ನಂದವಂದಿತ ಸಿಂಧು ಬಂಧನ ಮಂದರಾದ್ರಿಧರ ॥ ಇಂದಿರಾಪತಿ ವಿಜಯಸಖ ಅರ - । ವಿಂದನಾಭ ಪುರಂದರಾರ್ಚಿತ । ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ॥ ೧೨॥ ಬಾಣಬಾಹುಚ್ಛೇದ ರಾವಣ - । ಪ್ರಾಣನಾಶನ ಪುಣ್ಯನಾಮ ಪು - । ರಾಣ ಪುರುಷೋತ್ತಮ ನಿಪುಣ ಅಣುರೇಣು ಪರಿಪೂರ್ಣ॥ ಕ್ಷೋಣಿಪತಿ ಸುಲಲಿತ-ಸುದರ್ಶನ - । ಪಾಣಿ ಪಾಂಡವರಾಜಕಾರ್ಯ ಧು -। ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ॥ ೧೩॥ ನೀಲವರ್ಣ ವಿಶಾಲ ಶುಭ ಗುಣ- । ಶೀಲ ಮುನಿಕುಲಪಾಲ ಲಕ್ಷ್ಮೀ - । ಲೋಲ ರಿಪುಶಿಶುಪಾಲಮಸ್ತಕ ಶೂಲ ವನಮಾಲ ॥ ಮೂಲಕಾರಣ ವಿಮಲಯಾದವ -। ಜಾಲಹಿತ ಗೋಪಾಲ ಅಗಣಿತ - । ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ॥ ೧೪॥ ನಾಗನಗರಿಧರಿತ್ರಿ ಕೋಶವಿ - । ಭಾಗತಂತ್ರ-ನಿಯೋಗಗಮನ ಸ -। ರಾಗಪಾಂಡವರಾಜ ಜಿತಸಂಗ್ರಾಮ ನಿಸ್ಸೀಮ ॥ ಯೋಗ-ಗಮ್ಯ ಭವಾಬ್ಧಿ ವಿಷಧರ- । ನಾಗಗಾರುಡಮಂತ್ರವಿದ ಭವ - । ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ ॥ ೧೫॥ ಶ್ರೀಮದುತ್ಸಹ ದೇವನುತ ಶ್ರೀ - । ರಾಮ ನಿನ್ನಯ ಚರಣಸೇವಕ । ಪ್ರೇಮದಿಂ ಸಾಷ್ಟಾಂಗವೆರಗುತೆ ಮಾಳ್ಪೆ ಬಿನ್ನಪವ ॥ ಈ ಮಹಿಯೊಳೀ ವರೆಗೆ ನಾವು ಸು - । ಕ್ಷೇಮಿಗಳು ನಿನ್ನಯ ಪದಾಬ್ಜ । ಕ್ಷೇಮ-ವಾರ್ತೆಯನರುಹಿ ರಕ್ಷಿಸು ನಮ್ಮನನವರತ ॥ ೧೬॥ ಈಗಲೀ ಮರ್ಯಾದೆಯಲಿ ಶರ- । ಣಾಗತರ ಸೇವೆಯೊಳು ಹೊಂಪುಳಿ - । ಯಾಗಿ ಬಾಳುವರೇನು ಧನ್ಯರೋ ಹರ ಮಹಾದೇವ ॥ ಭೋಗಭಾಗ್ಯವ ಬಯಸಿ ಮುಕ್ತಿಯ - । ನೀಗಿ ನಿಮ್ಮನು ಭಜಿಸಲರಿಯದ। ಯೋಗಿಗಳ ಮಾತೇನು ರಕ್ಷಿಸು ನಮ್ಮನನವರತ ॥ ೧೭॥ ಭಕ್ತಿಸಾರದ ಚರಿತೆಯನು ಹರಿ-। ಭಕ್ತರಾಲಿಸುವಂತೆ ರಚಿಸುವೆ । ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು ॥ ಮುಕ್ತಿಗಿದು ನೆಲೆದೋರುವುದು ಹರಿ-। ಭಕ್ತರನು ಲಾಲಿಪುದು ನಿಜಮತಿ - । ಭಕ್ತಗೊಲಿವಂದದಲಿ ರಕ್ಷಿಸು ನಮ್ಮನನವರತ ॥ ೧೮॥ ನಳಿನಲೋಚನ ನಿಮ್ಮ ಮೂರ್ತಿಯ - । ಕಳೆ ಬೆಳಗುತಿದೆ ಲಹರಿಯಲಿ ಭೂ - । ತಳದೊಳಚ್ಚರಿಯಾದ ನಾಮಾಮೃತ ಸಮುದ್ರದಲಿ ॥ ಬಳಸುವರು ಸತ್ಕವಿಗಳವರ - । ಗ್ಗಳಿಕೆ ಎನಗಿನಿತಿಲ್ಲ ಸನ್ಮತಿ- । ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ॥ ೧೯॥ ಗಿಳಿಯ ಮರಿಯನು ತಂದು ಪಂಜರ - । ದೊಳಗೆ ಪೋಷಿಸಿ ಕಲಿಸಿ ಮೃದುನುಡಿ -। ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ ॥ ತಿಳುಹಿ ಮತಿಯನು ಎನ್ನ ಜಿಹ್ವೆಗೆ । ಮೊಳಗುವಂದದಿ

ನಿನ್ನ ನಾಮಾ- । ವಳಿಯ ಪೊಗಳಿಕೆ ಇತ್ತು ರಕ್ಷಿಸು ನಮ್ಮನನವರತ ॥ ೨೦॥ ಪೊಗಳಲಳವೇ ನಿನ್ನ ನಾಮವ। ಸುಗುಣ-ಸಚ್ಚಾರಿತ್ರ ಕಥನವ - । ನಗಣಿತೋಪಮ ಅಮಿತ ವಿಕ್ರಮಗಮ್ಯ ನೀನೆಂದು ॥ ನಿಗಮತತಿ ಕೈವಾರಿಸುತ ಪದ - । ಯುಗವ ಕಾಣದೆ ಬಳಲುತಿದೆ ವಾ- । ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ॥ ೨೧॥ ವೇದಶಾಸ್ತ್ರ ಪುರಾಣ ಪುಣ್ಯದ । ಹಾದಿಯನು ನಾನರಿಯೆ ತರ್ಕದ - । ವಾದದಲಿ ಗುರು- ಹಿರಿಯರರಿಯದ ಮೂಢಮತಿ ಎನಗೆ ॥ ಆದಿಮೂರುತಿ ನೀನು ನೆರೆ ಕರು - । ಣೋದಯನು ಹೃದಯಾಂಗಣದಿ ಜ್ಞಾ - । ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ॥ ೨೨॥ ಹಸಿವರಿತು ತಾಯ್ತನ್ನ ಶಿಶುವಿಗೆ। ಒಸೆದು ಮೊಲೆ ಕೊಡುವಂತೆ ನೀ ಪೋ - । ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ॥ ಬಸಿರೊಳಗೆ ಬ್ರಹ್ಮಾಂಡಕೋಟಿಯ । ಪಸರಿಸಿದ ಪರಮಾತ್ಮ ನೀನೆಂ - । ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥ ೨೩॥ ಇಬ್ಬರಣುಗರು ನಿನಗೆ ಅವರೊಳ- । ಗೊಬ್ಬ ಮಗನೀರೇಳು ಲೋಕದ । ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು ॥ ಒಬ್ಬ ಮಗನದ ಬರೆವ ಕರಣಿಕ । ರಿಬ್ಬರೀ ಲೋಕಪ್ರಸಿದ್ಧರು। ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ॥ ೨೪॥ ಸಿರಿಯು ಕುಲಸತಿ ಸುತನು ಕಮಲಜ। ಹಿರಿಯ ಸೊಸೆ ಶಾರದೆ ಸಹೋದರಿ । ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು॥ ನಿರುತ ಮಾಯೆಯ ದಾಸಿ ನಿಜಮಂ-। ದಿರವಜಾಂಡವು ಜಂಗಮಸ್ಥಾ-। ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ॥ ೨೫॥ ಸಾಗರನ ಮಗಳರಿಯದಂತೆ ಸ-। ರಾಗದಲಿ ಸಂಚರಿಸುತಿಹೆ ಉ -। ದ್ಯೋಗವೇನು ನಿಮಿತ್ತಕಾರಣವೆಲ್ಲ ಲೋಕದಲಿ॥ ಭಾಗವತರಾದವರ ಸಲಹುವ- । ನಾಗಿ ಸಂಚರಿಸುವುದು ಈ ಭವ - । ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ॥ ೨೬॥ ಹಸ್ತಿವಾಹನನಾದಿಯಾದ ಸ - । ಮಸ್ತ ದೇವನಿಕಾಯದೊಳಗೆ ಪ್ರ -। ಶಸ್ತ ನಾವನು ನಿನ್ನವೋಲ್ ಶರಣಾಗತರ ಪೊರೆವ ॥ ಹಸ್ತಕಲಿತ ಸುದರ್ಶನದೊಳರಿ । ಮಸ್ತಕವನಿಳುಹುವ ಪರಾತ್ಪರ - । ವಸ್ತುವಲ್ಲವೇ ನೀನು ರಕ್ಷಿಸು ನಮ್ಮನನವರತ ॥ ೨೭॥ ಹಗೆಯರಿಗೆ ವರವೀವರಿಬ್ಬರು । ತೆಗೆಯಲರಿಯರು ಕೊಟ್ಟ ವರಗಳ । ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ ॥ ಸುಗುಣರಿನ್ನಾರುಂಟು ಕದನವ। ಬಗೆದು ನಿನ್ನೊಳು ಜೈಸುವವರೀ। ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ॥ ೨೮॥ ಸುಮನಸರ ವೈರದಲಿ ಕೆಲವರು। ಕುಮತಿಗಳು ತಪದಿಂದ ಭರ್ಗನ। ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು ॥ ಸಮರಮುಖದೊಳಗುಪಮೆಯಲಿ ವಿ - । ಕ್ರಮದಿ ವೈರವ ಮಾಡಿದವರಿಗೆ । ಅಮರ ಪದವಿಯನಿತ್ತೆ ರಕ್ಷಿಸು ನಮ್ಮನನವರತ ॥ ೨೯॥ ಬಲಿಯ ಬಂಧಿಸಿ ಮೊರೆಯಿಡುವ ಸತಿ -। ಗೊಲಿದು ಅಕ್ಷಯವಿತ್ತು ಕರುಣದಿ । ಮೊಲೆಯನುಣಿಸಿದ ಬಾಲಿಕೆಯು ಪಿಡಿದಸುವನಪಹರಿಸಿ ॥ ಶಿಲೆಯ ಸತಿಯಳ ಮಾಡಿ ತ್ರಿಪುರದ । ಲಲನೆಯರ ವ್ರತಗೆಡಿಸಿ ಕೂಡಿದ । ಕೆಸಲವುತ್ತಮವಾಯ್ತು ರಕ್ಷಿಸು ನಮ್ಮನನವರತ ॥ ೩೦॥ ಕರಿಯ ಕಾಯ್ದಾ ಜಲದಿ ಮಕರಿಯ । ತರಿದು ಹಿರಣ್ಯಕನನ್ನು ಸೀಳ್ದಾ । ತರಳನನು ತಲೆಗಾಯ್ದು ಶಕಟಾಸುರನ ಹತ ಮಾಡಿ ॥ ದುರುಳ ಕಂಸನ ಕೊಂದು ಮಗಧನ । ಮುರಿದು ವತ್ಸನ ಹಮ್ಮಳಿಸಿ ಖರ -। ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ॥ ೩೧॥ ಶಿಶುತನದ ಸಾಮರ್ಥ್ಯದಲಿ ಕೆಲ- ।

ರಸುರರನು ಸಂಹರಿಸಿ ಚಕ್ರವ । ಬಿಸುಟು ಯೌವನಕಾಲದಲಿಯಾ ಪಾಂಡುಸುತರಿಂದ ॥ ವಸುಮತಿಯ ಭಾರವನಿಳುಹಿ ಸಾ - । ಹಸದಿ ಮೆರೆದವನಾಗಿ ನೀ ಮೆ- । ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ॥ ೩೨॥ ಎಲ್ಲರಲಿ ನೀನಾಗಿ ಸುಮನಸ - । ರಲ್ಲಿ ಅತಿಹಿತನಾಗಿ ಯಾದವ - । ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ ॥ ಕೊಲ್ಲಿಸಿದೆ ಭೀಮಾರ್ಜುನರ ಕೈ -। ಯಲ್ಲಿ ಕೌರವ ಕುಲವನೆಲ್ಲವ। ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ॥ ೩೩॥ ನರಗೆ ಸಾರಥಿಯಾಗಿ ರಣದೊಳು - । ತುರಗ ನೀರಡಿಸಿದರೆ ವಾರಿಯ । ಸರಸಿಯನು ನಿರ್ಮಿಸಿ ಕಿರೀಟಿಯ ಕೈಲಿ ಸೈಂಧವನ ॥ ಶಿರವ ಕೆಡಹಿಸಿ ಅವನ ತಂದೆಯ । ಕರತಳಕೆ ನೀಡಿಸಿದೆ ಹರಹರ। ಪರಮ ಸಾಹಸಿ ನೀನು ರಕ್ಷಿಸು ನಮ್ಮನನವರತ ॥ ೩೪॥ ಬವರದಲಿ ಖತಿಗೊಂಡು ಗದೆಯೊಳು । ಕವಿದು ನಿನ್ನ ಶತಾಯುಧನು ಹೊ - । ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ ॥ ವಿವರವೇನೋ ತಿಳಿಯೆ ನೀ ಮಾ - । ಯವನು ನೀನೇ ಬಲ್ಲೆ ನಿನ್ನಾ - । ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ॥ ೩೫॥ ಇಳೆಗೆ ಪತಿಯಾದವನು ಯಾದವ - । ರೊಳಗೆ ಬಾಂಧವ ನಿನಗೆ ಸೋದರ - । ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಂಗುಳದಿ ॥ ಅಳಲಿನಬ್ಧಿಯೊಳದ್ದಿ ತಂಗಿಯ। ಬಳಲಿಸಿದೆ ಕುಲಗೋತ್ರ ಬಾಂಧವ - । ರೊಳಗೆ ಕೀರ್ತಿಯ ಪಡೆದ ರಕ್ಷಿಸು ನಮ್ಮನನವರತ ॥ ೩೬॥ ತಾಯನಗಲಿದ ತನಯ ನೀ ರಾ - । ಧೇಯ ನೊಳಗೆ ರಹಸ್ಯದಲಿ ಕುಲ - । ದಾಯವನು ನೆರೆ ತಿಳುಹಿ ಅರ್ಜುನನಿಂದ ಕೊಲ್ಲಿಸಿದೆ॥ ಮಾಯ ಮಂತ್ರದ ಕುಟಿಲಗುಣವ । ನ್ಯಾಯವೋ ಸುನ್ಯಾಯವೋ ನಿ- । ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ॥ ೩೭॥ ಕೊಲ್ಲಬಗೆದವಗಾಗಿ ನೇ ಹಗೆ - । ಯಲ್ಲಿ ಸಖ್ಯವ ಬೆಳೆಸಲದು ಹಿತ - । ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ ॥ ಗೊಲ್ಲ ನಾರಿಯರೊಳು ಪ್ರವರ್ತಕ - । ನಲ್ಲವೇ ಭಾವಿಸಲು ಲೋಕದೊ - । ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ॥ ೩೮॥ ಮಗನ ಕೊಂದವನಾಳುವಂತಹ । ಸುಗುಣೆಯರು ಹದಿನಾರು ಸಾವಿರ । ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ ॥ ಬಗೆ ಬಗೆಯ ರತಿಕಲೆಗಳಲಿ ಕೂ - । ರುಗುರ ನಾಟಿಸಿ ಮೆರೆದು ನೀನೀ - । ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ॥೩೯॥ ಏನು ಮಾಡಿದರೇನು ಕರ್ಮವ । ನೀನೊಲಿಯದಿನ್ನಿಲ್ಲವಿದಕನು - । ಮಾನವುಂಟೇ ಭ್ರಮರಕೀಟನ್ಯಾಯದಂದದಲಿ ॥ ನೀನೊಲಿಯೆ ತೃಣ ಪರ್ವತವು ಪುಸಿ - । ಯೇನು ನೀ ಪತಿಕರಿಸೆ ಬಳಿಕಿ - । ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ॥ ೪೦॥ ಎಷ್ಟು ಮಾಡಲು ಮುನ್ನ ತಾ ಪಡ -। ದಷ್ಟೆ ಎಂಬುದ ಲೋಕದೊಳು ಮತಿ -। ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ ॥ ಪಟ್ಟವಾರಿಂದಾಯ್ತು ಧ್ರುವನಿಗೆ । ಕೊಟ್ಟ ವರ ತಪ್ಪಿತೆ ಕುಚೇಲನಿ -। ಗಿಷ್ಟ ಬಾಂಧವ ನೀನು ರಕ್ಷಿಸು ನಮ್ಮನನವರತ ॥ ೪೧॥ ತನ್ನ ದೇಹಾತುರದಲಡವಿಯೊ - । ಳನ್ಯರನು ಸಂಹರಿಸುತಿರುತಿರೆ । ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ ॥ ಧನ್ಯನಾದನು ಮುನಿಕುಲದಿ ಸಂ - । ಪನ್ನನಾದನು ನೀನೊಲಿದ ಬಳಿ -। ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ॥ ೪೨॥ ನಿನ್ನ ಸತಿಗಳುಪಿದ ದುರಾತ್ಮನ । ಬೆನ್ನಿನಲಿ ಬಂದವನ ಕರುಣದಿ। ಮನ್ನಿಸಿದಕಾರಣ ದಯಾಪರಮೂರ್ತಿ ಎಂದೆನುತ ॥ ನಿನ್ನ ಭಜಿಸಿದ ಸಾರ್ವಭೌಮರಿ। ಗಿನ್ನು

ಇಹಪರ ಉಂಟು ಸದ್ಗುಣ । ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ ॥ ೪೩॥ ವೀರ ರಾವಣನೊಡನೆ ಹೋರಿದ । ವೀರರಗ್ಗದ ಕಪಿಗಳವರೊಳು । ಮಾರುತನ ಮಗನೇನು ಧನ್ಯನೋ ಬ್ರಹ್ಮಪಟ್ಟದಲಿ ॥ ಸೇರಿಸಿದೆ ನಿನ್ನಂತೆ ಕೊಡುವ ಉ - । ದಾರಿಯಾವನು ತ್ರಿಜಗದೊಳಗಾ- । ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ॥ ೪೪॥ ಶಿವಶಿವಾ ನೀ ಮಾಡಿದುಪಕಾ - । ರವನು ಮರೆತವರುಂಟೆ ಪಾಪದಿ । ನವೆದಜಾಮಿಳಗೊಲಿದು ಪ್ರಾಣವಿಯೋಗ ಕಾಲದಲಿ ॥ ಜವನವರ ಕೈಗೊಪ್ಪಿಸದೆ ಕಾ-। ಯ್ದವನು ನೀ ಮಾಧವನು ಮಿಕ್ಕಾ-। ದವರಿಗುಂಟೆ ಕರುಣ ರಕ್ಷಿಸು ನಮ್ಮನನವರತ ॥ ೪೫॥ ಹೆತ್ತಮಗಳನು ಮದುವೆಯಾದವ - । ನುತ್ತಮನು ಗುರುಪತ್ನಿಗಳುಪಿದ । ಚಿತ್ತಜನು ಮಾವನು ಕೃತಘ್ನನು ನಿನಗೆ ಮೈದುನನು ॥ ಹೊತ್ತು ತಪ್ಪಿಸಿ ಕಾಮದಲಿ ಮುನಿ । ಪೋತ್ತಮನ ಮಡದಿಯನು ನೆರೆದವ - । ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ॥ ೪೬॥ ಇಲ್ಲಿಹನು ಅಲ್ಲಿಲ್ಲವೆಂಬೀ । ಸೊಲ್ಲು ಸಲ್ಲದು ಹೊರಗೊಳಗೆ ನೀ। ನಿಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು ॥ ಬಲ್ಲರಿಳೆಯೊಳು ಭಾಗವತರಾ - । ದೆಲ್ಲರಿಗೆ ವಂದಿಸದ ಕುಜನರಿ - । ಗಿಲ್ಲ ಸದ್ಗತಿ ನೋಡು ರಕ್ಷಿಸು ನಮ್ಮನನವರತ ॥ ೪೭॥ ಸಿರಿಯ ಸಂಪತ್ತಿನಲಿ ನೀ ಮೈ । ಮರೆದು ಮದಗರ್ವದಲಿ ದೀನರ । ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ ॥ ಹರಿಹರ ಅನಾಥರನು ಪಾಲಿಸಿ। ವರವ ಕೊಡುವ ಉದಾರಿಯೆಂಬೀ । ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ॥ ೪೮॥ ದೀನ ನಾನು ಸಮಸ್ತ ಲೋಕಕೆ । ದಾನಿ ನೀನು ವಿಚಾರಿಸಲು ಮತಿ - । ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ॥ ಏನು ಬಲ್ಲೆನು ನಾನು ನೆರೆ ಸು- । ಜ್ಞಾನಮೂರುತಿ ನೀನು ನಿನ್ನ ಸ - । ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥ ೪೯॥ ತರಳತನದಲಿ ಕೆಲವು ದಿನ ದುರು । ಭರದ ಗರ್ವದಿ ಕೆಲವು ದಿನ ಮೈ । ಮರೆದು ನಿಮ್ಮಡಿ ಗೆರಗದಾದೆನು ವಿಷಯ ಕೇಳಿಯಲಿ - ॥ ನರಕ ಭಾಜನನಾಗಿ ಕಾಮಾ - । ತುರದಿ ಪರಧನ ಪರಸತಿಗೆ ಮನ । ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ॥ ೫೦॥ ಮರೆದೆನಭ್ಯುದಯದಲಿ ನಿಮ್ಮನು । ಮರೆಯೆನಾಪತ್ತಿನಲಿ ಪೊರೆಯೆಂ । ದೊರಲುವೆನು ಮನವೇಕಭಾವದೊಳಿಲ್ಲ ನಿಮ್ಮಡಿಯ ॥ ಮರೆದು ಬಾಹಿರನಾದವನ ನೀ । ಮರೆವರೇ ಹಸು ತನ್ನ ಕಂದನ । ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ॥ ೫೧॥ ಧಾರುಣಿಗೆ ವರಚಕ್ರವರ್ತಿಗ - । ಳಾರು ಮಂದಿ ನೃಪಾಲಕರು ಹದಿ - । ನಾರು ಮಂದಿಯು ಧರಣಿಯನು ಮುನ್ನಾಳ್ದ ನೃಪರೆನಿತೋ॥ ವೀರರನು ಮೆಚ್ಚಿದಳೆ ಧರಣೀ । ನಾರಿ ಬಹು ಮೋದದೊಳು ನಿನ್ನನು । ಸೇರಿ ಓಲೈಸುವಳು ರಕ್ಷಿಸು ನಮ್ಮನನವರತ ॥ ೫೨॥ ಭಾರಕರ್ತನು ನೀನು ಬಹು ಸಂ- । ಸಂಸಾರಿಯೆಂಬುದ ನಿಗಮತತಿ ಕೈ । ವಾರಿಸುತ್ತಿದೆ ದಿವಿಜ ಮನುಜಭುಜಂಗರೊಳಗಿನ್ನು ॥ ಆರಿಗುಂಟು ಸ್ವತಂತ್ರ ನಿನ್ನಂ । ತಾರು ಮುಕ್ತಿಯನೀವ ಸದ್ಗುರು । ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ॥ ೫೩॥ ಗತಿವಿಹೀನರಿಗಾರು ನೀನೇ । ಗತಿಕಣಾ ಪತಿಕರಿಸಿಕೊಡು ಸ । ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ ॥ ಶ್ರುತಿವಚನ ಮಾಡುವುದು ಶರಣಾ । ಗತರ ರಕ್ಷಕನೆಂದು ನಿನ್ನನು । ಮತಿವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ॥ ೫೪॥ ಈಗಲೋ ಈ ದೇಹವಿನ್ನಾ । ವಾಗಲೋ ನಿಜವಲ್ಲವೆಂಬುದ - । ನೀಗ ತಿಳಿಯದೆ ಮಡದಿ ಮನೆ ಮನೆ

ವಾರ್ತೆ ಎಂದೆನುತ ॥ ರಾಗಲೋಭದಿ ಮುಳುಗಿ ಮುಂದಣ। ತಾಗುಬಾಗುಗಳರಿಯೆ ನಿನ್ನ ಸ-। ಮಾಗಮವ ಬಯಸುವೆನು ರಕ್ಷಿಸು ನಮ್ಮ- ನನವರತ ॥ ೫೫॥ ಮಾಂಸ ರಕ್ತದ ಮಡುವಿನಲಿ ನವ - । ಮಾಸ ಜನನಿಯ ಜಠರದೊಳಗಿರು - । ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು ॥ ನೀ ಸಲಹಿದವನಲ್ಲವೇ 'ಕರು - । ಣಾ ಸಮುದ್ರನು ನೀನಿರಲು ಕಮ-। ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೫೬॥ ಬಲು ಮೃಗವು ಮರ ಪಕ್ಷಿ ಕೀಟಕ । ಜಲಚರೌಘಧಿ ಜನಿಸಿದೆನು ಕೋ - । ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು ॥ ಕೊಲಿಸದಿರು ಯಮನಿಂದ ಮುರಹರ । ಒಲಿದು ನಿನ್ನನು ಭಜಿಸುವವರಿಗೆ। ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥ ೫೭॥ ಪಂಚಭೂತದ ಕಾಯದೊಳು ನೀ । ವಂಚಿಸದೆ ಇರುತಿರಲು ಪೂರ್ವದ । ಸಂಚಿತದ ಫಲವೆನ್ನಲೇಕಿದ ಮರುಳತನದಿಂದ ॥ ಮಿಂಚಿದವರಿನ್ನುಂಟೆ ತಿಳಿಯೆ ಪ್ರ - । ಪಂಚವೆಲ್ಲಕೆ ತಪ್ಪಿದವ ನೀ। ಕೊಂಚದವನೆ ಕೃಷ್ಣ ರಕ್ಷಿಸು ನಮ್ಮನನವರತ ॥ ೫೮॥ ಹಲವು ಕರ್ಮಗಳಿಂದ ಮೂತ್ರದ। ಬಿಲಗಳಲಿ ಸಂಚರಿಸಿ ಪದವಿಯ । ಫಲವ ಕಾಣದೆ ಹೊಲಬು ತಪ್ಪದೆನೆನ್ನ ದೇಹದಲಿ ॥ ಒಲಿದು ನೀನಿರೆ ನಿನ್ನ ಸಲುಗೆಯ । ಒಲುಮೆಯಲಿ ಬರೆಸೆಳೆವೆ ಮುಕುತಿಯ । ಲಲನೆಯನು ತಳುವಿಲ್ಲ ರಕ್ಷಿಸು ನಮ್ಮನನವರತ ॥ ೫೯॥ ಎತ್ತಿದೆನು ನಾನಾ ಶರೀರವ । ಹೊತ್ತು ಹೊತ್ತಲಿಸಿದೆನು ಸಲೆ ಬೇ - । ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು॥ ಸತ್ತು ಹುಟ್ಟುವ ಹುಟ್ಟಿ ಹಿಂಗುವ । ಸುತ್ತು ತೊಡಕನು ಮಾಣಿಸಲೆ ಪುರು - । ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ॥ ೬೦॥ ಇಂದು ಈ ಜನ್ಮದಲಿ ನೀನೇ। ಬಂಧು ಹಿಂದಣ ಜನ್ಮದಲಿ ಬಳಿ - । ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು ॥ ಎಂದಿಗೂ ಎನಗಿಲ್ಲ ತನುಸಂ - । ಬಂಧ ನಿನ್ನದು ಎನಗೆ ನೀ ಗತಿ-। ಯೆಂದು ಬಿನ್ನೈಸಿದೆನು ರಕ್ಷಿಸು ನಮ್ಮನನವರತ ॥ ೬೧॥ ಗಣನೆಯಿಲ್ಲದ ಜನನಿಯರು ಮೊಲೆ । ಯುಣಿಸಲಾ ಪಯಬಿಂದುಗಳನದ। ನೆಣಿಸಲಳವೇ ಸಪ್ತಸಾಗರಕಧಿಕವೆನಿಸುವುದು ॥ ಬಣಗು ಕಮಲಜನದಕೆ ತಾನೇ। ಮಣಿಯಗಾರನು ಈತ ಮಾಡಿದ । ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ॥ ೬೨॥ ಲೇಸ ಕಾಣೆನು ಜನನ ಮರಣದಿ । ಘಾಸಿಯಾದೆನು ನೊಂದೆನಕಟಾ । ಲೇಸೆನಿಸಿ ನೋಡಲು ಪರಾಪರವಸ್ತು ನೀನಾಗಿ ॥ ನೀ ಸಲಹುವವನಲ್ಲವೇ ಕರುಣಾ।ಸಮುದ್ರನು ನೀನಿರಲು ಕಮ-। ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೬೩॥ ಕಾಪುರುಷರೈದಾರು ಮಂದಿ ಸ - । ಮೀಪದಲಿ ಕಾಡುವರು ಎನ್ನನು । ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ॥ ಶ್ರೀಪದಾಬ್ಜದ ಸೇವೆಯಲಿ ನೆರೆ । ಪಾಪವನು ಪರಿಹರಿಸಿ ನೀ ನಿಜ । ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ॥ ೬೪॥ ಐದು ತತ್ತ್ವಗಳಾದವೊಂದ - । ಕ್ಕೈದು ಕಡೆಯಲಿ ತತ್ತ್ವವಿಪ್ಪ-। ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು ॥ ಭೇದಿಸದೆ ಜೀವಾತ್ಮ ತಾ ಸಂ - । ಪಾದಿಸಿದ ಸಂಚಿತ ಸುಕರ್ಮವ - । ನಾದರಿಸಿ ಕೈಕೊಂಡು ರಕ್ಷಿಸು ನಮ್ಮನನವರತ ॥ ೬೫॥ ಎಂಟು ಗೇಣಿನ ದೇಹ ರೋಮಗ । ಳೆಂಟು ಕೋಟಿಯು ಕೀಲ್ಗಳರವ- । ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ॥ ನೆಂಟ ನೀನಿರ್ದಗಲಿದಡೆ ಒಣ -। ಹೆಂಟೆಯಲಿ ಮುಚ್ಚುವರು ದೇಹದ - । ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ ॥ ೬೬॥ ಸ್ನಾನ

ಸಂಧ್ಯಾ ಧ್ಯಾನ ಜಪ ತಪ । ದಾನ ಧರ್ಮ ಪರೋಪಕಾರ ವಿ - । ಹೀನ ಜನ್ಮವದಳೆವುದಲ್ಲದೇ ಬೇರೆ ಗತಿಯುಂಟೆ ॥ ಏನು ಮಾಡಿದಡೇನು ಮುಕ್ತಿ । ಜ್ಞಾನ ವಿಲ್ಲದೊಡಿಲ್ಲ ಭಕ್ತಿಗೆ । ನೀನೇ ಕಾರಣನಾಗಿ ರಕ್ಷಿಸು ನಮ್ಮನನವರತ ॥ ೬೭॥ ಕೋಪವೆಂಬುದು ತನುವಿನಲಿ ನೆರೆ । ಪಾಪ ಪಾತಕದಿಂದ ನರಕದ । ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೆ ॥ ರಾಪು ಮಾಡದೆ ಬಿಡನು ಯಮನು ನಿ । ರಾಪರಾಧಿಯ ನೋಡಿ ಕೀರ್ತಿ ಕ- । ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ॥ ೬೮॥ ನಿನ್ನ ಸೂತ್ರದೊಳಾಡುವುವು ಚೈ - । ತನ್ಯ ಸಚರಾಚರ ಗಳೆಲ್ಲವು । ನಿನ್ನ ಸೂತ್ರವು ತಪ್ಪಿದರೆ ಮಗ್ಗುವುವು ಊಹೆಗಳು ॥ ಇನ್ನು ನಮಗೆ ಸ್ವತಂತ್ರವೆಲ್ಲಿಯ। ದನ್ಯಕರ್ಮ ಸುಕರ್ಮವೆಲ್ಲವು । ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥ ೬೯॥ ಒಡೆಯ ನೀನೆಂದರಿತು ನಾ ನಿ - । ಮ್ಮಡಿಯ ಭಜಿಸದೆ ದು(ಮ)ರುಳನಾದೆನು । ಮಡದಿ ಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ। ಮಡದಿ ಯಾರೀ ಮಕ್ಕಳಾರೀ । ಒಡಲಿ ಗೊಡೆಯನು ನೀನು ನೀ ಕೈ । ಪಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ॥ ೭೦॥ ಪಂಟಿಸಿದ ಮದಮುಖರು ಕೆಲ ಕೆಲ । ರುಂಟು ರಿಪುಗಳು ದಂಟಿಸುತ ಬಲು । ಕಂಟಕದಿ ಕಾಡುವರು ಕಾಯ್ಯೆ ಕಲುಷಸಂಹಾರ ॥ ಬಂಟನಲ್ಲವೆ ನಾನು ದೀನರ । ನೆಂಟನಲ್ಲವೆ ನೀನು ನಿನ್ನೊಳಿ। ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ॥ ೭೧॥ ದಂಡಧರನುದ್ದಂಡ ಪಟಲತೆ । ಕೊಂಡು ಮೊರೆ ಹೋಗುವವರ ಕಾಣೆನು । ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ॥ ಖಂಡಪರಶುವು ರುದ್ರಭೂಮಿಯೊ । ಳಂಡಲೆದು ತಿರುಗುವನು ನೀನು -। ದ್ದಂಡ ದೇವರ ದೇವ ರಕ್ಷಿಸು ನಮ್ಮನನವರತ ॥ ೭೨॥ ಶಕ್ತಿಯೆಂಬುದು ಮಾಯೆ `ಮಾಯಾ । ಶಕ್ತಿಯದು ತನುವಿನಲಿ ನೀ ನಿಜ । ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು ॥ ಯುಕ್ತಿಯೊಳಗಿದ- ನರಿತು ಮನದಿ ವಿ- । ರಕ್ತಿಯಲಿ ಭಜಿಸುವಗೆ ಮುಕ್ತಿಗೆ । ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ॥ ೭೩॥ ಮೂರು ಗುಣ ವೊಳೆದೋರಿತದರೊಳು । ಮೂರು ಮೂರ್ತಿಗಳಾಗಿ ರಂಜಿಸಿ । ತೋರಿ ಸೃಷ್ಟಿ ಸ್ಥಿತಿ ಲಯಂಗಳ ರಚಿಸಿ ವಿಲಯದಲಿ ॥ ಮೂರು ರೂಪೊಂದಾಗಿ ಪ್ರಳಯದ । ವಾರಿಯಲಿ ವಟಪತ್ರಶಯನದಿ । ಸೇರಿದವ ನೀನೀಗ ರಕ್ಷಿಸು ನಮ್ಮನನವರತ॥೭೪॥ ನೀರಮೇಲಣ ಗುಳ್ಳೆಯಂದದಿ । ತೋರಿಯಡಗುವ ದೇಹವೀ ಸಂ-। ಸಾರಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ ॥ ತೋರಿಸಚಲಾನಂದ ಪದವಿಯ। ಸೇರಿಸಕಟಾ ನಿನ್ನವೊಲ್ಲಮ - । ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ॥ ೭೫॥ ಹೊದ್ದಿ ನಿಲುವುದೆ ದರ್ಪಣದ ಮೇ - । ಲುದ್ದುರುಳಿ ಬೀಳ್ವಂತೆ ನಿಮಿಷದಿ । ಬಿದ್ದು ಹೋಗುವ ಕಾಯವೀ ತನುವೆಂಬ ಪಾಶದಲಿ ॥ ಬದ್ಧನಾದೆನು ಮಮತೆಯಲಿ ನೀ । ನಿರ್ದುದಕೆ ಫಲವೇನು ಭಕ್ತಿ ವಿ - । ರುದ್ಧವಾಗದವೋಲು ರಕ್ಷಿಸು ನಮ್ಮನನವರತ ॥ ೭೬॥ ಕೇಳುವುದು ಕಡುಕಷ್ಟ ಕಷ್ಟದ । ಬಾಳುವೆಯು ಬದುಕೇನು ಸುಡು ಸುಡು । ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು॥ ಬಾಳಬೇಕೆಂಬವಗೆ ನೆರೆ ನಿ- । ಮ್ಮಾಳಿಗವ ಮಿಗೆ ಮಾಡಿ ಭಕ್ತಿಯೊ । ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ॥೭೭॥ ದೇಹಧಾರಕನಾಗಿ ಬಹುವಿಧ । ಮೋಹದೇಳಿಗೆಯಾಗಿ ಮುಕುತಿಗೆ। ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ ॥ ಹೇಯವೀ ಸಂಸಾರವೆನ್ನದೆ ।

ಮೋಹಿಸುವ ಮತಿಗೇಡಿ ಮಾನವ । ಸಾಹಸಿಯೆ ಸಟೆಮಾತು ರಕ್ಷಿಸು ನಮ್ಮನನವರತ ॥೭೮॥ ಅಳಿವ ಒಡಲನು ನೆಚ್ಚಿ ವಿಷಯಂ । ಗಳಿಗೆ ಕಾತರನಾಗಿ ಮಿಗೆ ಕಳ । ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ ॥ ತಿಳಿದು ಮನದೊಳು ನಿನ್ನ ನಾಮಾವಳಿಯ ಜಿಹ್ವೆಗೆ ತಂದು ಪಾಪವ । ಕಳೆದ ಬದುಕೇ ಲೇಸು ರಕ್ಷಿಸು ನಮ್ಮನನವರತ॥೭೯॥ ವರುಷ ನೂರಾಯುಷ್ಯವದರೊಳ- । ಗಿರುಳು ಕಳೆದೈವತ್ತು ಐವ । ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು ॥ ಇರದೆ ಸಂದುದು ಬಳಿಕ ಇಪ್ಪ -। ತ್ತರುಷವದರೊಳಗಾದುದಂತಃ - । ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥ ೮೦॥ ಊರು ತನಗೊಂದಿಲ್ಲ ಹೊತ್ತ ಶ - । ರೀರಗಳ ಮಿತಿಯಿಲ್ಲ ತಾ ಸಂ - । ಚಾರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ॥ ಮೇರೆ ಹೊಸತೊಂದಿಲ್ಲ ಉಣ್ಣದ ಸಾರವಸ್ತುಗಳಿಲ್ಲ ತನು ಸಂ - । ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ॥ ೮೧॥ ಗೋಪುರದ ಭಾರವನು ಗಾರೆಯ। ರೂಪುದೋರಿದ ಪ್ರತಿಮೆಯಂದದಿ। ಈ ಪರಿಯ ಸಂಸಾರ ಭಾರವನಾರು ತಾಳುವರು ॥ ತಾ ಪರಾಕ್ರಮಿಯೆಂದು ಮನುಜನು । ಕಾಪಥವ- ನೈದುವನು ವಿಶ್ವ । ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ ॥ ೮೨॥ ಬೀಜ ವೃಕ್ಷದೊಳಾಯ್ತು ವೃಕ್ಷಕೆ । ಬೀಜವಾರಿಂದಾಯ್ತು ಲೋಕದಿ । ಬೀಜವೃಕ್ಷನ್ಯಾಯವಿದ ಭೇದಿಸುವರಾರಿನ್ನು ॥ ಸೋಜಿಗವ ನೀ ಬಲ್ಲೆ ನಿನ್ನೊಳು । ರಾಜಿಸುತ ಮೊಳೆದೋರುವುದು ಸುರ - । ರಾಜನಂದನನಮಿತ ರಕ್ಷಿಸು ನಮ್ಮನನವರತ ॥ ೮೩॥ ತೊಗಲು ಬೊಂಬೆಗಳಂತೆ ನಾಲಕು । ಬಗೆಯ ನಿರ್ಮಾಣದಲಿ ಇದರೊಳು। ನೆಗಳಿದೀ ಚೌಷಷ್ಟಿ ಲಕ್ಷಣ ಜಾತಿ ಧರ್ಮದಲಿ ॥ ಬಗೆ ಬಗೆಯ ನಾಮಾಂಕಿತದ ಜೀ - । ವಿಗಳವೆಲ್ಲವು ನಿನ್ನ ನಾಮದಿ । ಜಗಕೆ ತೋರುತ್ತಿಹುವು ರಕ್ಷಿಸು ನಮ್ಮನನವರತ ॥ ೮೪॥ ಹೂಡಿದೆಲುಮರಮುಟ್ಟು ಮಾಂಸದ । ಗೋಡೆ ಚರ್ಮದ ಹೊದಿಕೆ ನರಗಳ । ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು ॥ ಬೀಡು ತೊಲಗಿದ ಬಳಿಕಲಾ ಸುಡು-। ಗಾಡಿನಲಿ ಬೆಂದುರಿವ ಕೊಂಪೆಯ । ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ॥ ೮೫॥ ಬೀಗಮುದ್ರೆಗಳಿಲ್ಲದೂರಿಗೆ । ಬಾಗಿಲಗಳೊಂಭತ್ತು ಹಗಲಿರು । ಳಾಗಿ ಮುಚ್ಚದೆ ತೆರೆದಿಹರು ಜೀವಾತ್ಮ ತಾನಿರುತ ॥ ನೀಗಿಯೆಲ್ಲವ ಬಿಸುಟು ಬೇಗದಿ । ಹೋಗುತಿಹ ಸಮಯದಲಿ ಇವರವ - । ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ॥ ೮೬॥ ಕೀಲು ಬಲಿದಿಹುದೈದು ತಿರುಗುವ । ಗಾಲಿಯೆರಡರ ರಥದಿ ತ್ರೈಗುಣ । ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ ॥ ಕೀಲು ಕಡೆಗೊಂದೂಡಿ ಬೀಳಲು । ಕಾಲಗತಿ ತಪ್ಪುವದು ಅದರನು । ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೮೭॥ ಬಿಗಿದ ರಕುತದ ರೋಮ ಕೂಪದ ತೊಗಲ ಕೋಟೆಯ ನಂಬಿ ರೋಗಾ- । ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು ॥ ವಿಗಡ ಯಮನಾಳುಗಳು ಬರುತಿರೆ । ತೆಗೆಸು ಕಾಲನ ಬಲದ ಬಲು ಮು -। ತ್ತಿಗೆಯ ನಿದ ಪರಿಹರಿಸಿ ರಕ್ಷಿಸು ನಮ್ಮನನವರತ ॥ ೮೮॥ ವಾರಣಗಳೆಂಟೆಸೆವ ನಗರಕೆ । ದ್ವಾರವೊಂಬತ್ತದಕೆ ಬಲು ಮೊನೆ । ಗಾರರಾದಾಳುಗಳ ಕಾವಲುಗಾರರನು ಮಾಡಿ ॥ ಆರರಿಯದಂತದರೊಳಗೆ ಹೃದ - । ಯಾರವಿಂದದಿ ನೀನಿರಲು ಬರಿ - । ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥ ೮೯॥ ಪೇಳಲೆನ್ನಳವಲ್ಲವೀಯಮ-। ನಾಳುಗಳು ನೆರೆಯಂಗದೇಶವ।

ದಾಳಿಮಾಡುವರ ಕಟಕಟ ಸೆರೆಸೂರೆಗಳ ಪಿಡಿದು॥ ಕಾಳುಮಾಡುವರಿನ್ನು ತನುವಿದು । ಬಾಳಲರಿಯದು ಕೋಟೆಯವರಿಗೆ। ಕೋಳುಹೋಗದ ಮುನ್ನ ರಕ್ಷಿಸು ನಮ್ಮನನವರತ ॥೯೦॥ ನಾಲಿಗೆಯು ನಾಸಿಕವು ನಯನ ಕ- । ಪಾಲ ಪದ ಪಾಣಿಗಳು ತನುವಿನ - । ಮೂಲಕರ್ತುವಿನಲ್ಲಿ ಪರಿಚಾರಕರು ತಾವಾಗಿ ॥ ಲೀಲೆಯಿಂದಿರುತಿರ್ದು ಕಡೆಯಲಿ । ಕಾಲತೀರಿದ ಬಳಿಕಲದರನು - । ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೯೧॥ ಸತ್ತವರಿಗಳಲೇಕೆ ತನ್ನನು । ಹೊತ್ತವರು ಹೆತ್ತವರುಗಳು ತಾ । ಸತ್ತು ಹೋಗುವರಲ್ಲುಳಿವರೆ ಮರುಗಲೇಕಿನ್ನು॥ ಮೃತ್ಯು ಬೆನ್ನಿನೊಳಿಹುದು ತಾವಿ - । ನ್ನತ್ತು ಮಾಡುವುದೇನು ಪೂರ್ವದ । ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ ॥ ೯೨॥ ಮಣ್ಣು ಮಣ್ಣಿನೊಳುದಿಸಲದರಲಿ । ಮಣ್ಣು ಬೊಂಬೆಗಳಾಗಿ ರಂಜಿಸಿ । ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ॥ ಮಣ್ಣಿನಲಿ ಬಂಧಿಸಿದ ದೇಹವ । ಮಣ್ಣು ಗೂಡಿಸಬೇಡ ಜ್ಞಾನದ । ಕಣ್ಣ ದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ ॥ ೯೩॥ ಬೀಯವಾಗುವ ತನುವಿನಲಿ ನಿ - । ರ್ದಾಯಕನು ನೀನಿರ್ದು ಅತಿ ಹಿರಿ - । ದಾಯಸಂಬಡಿಸುವರೆ ನೀನನುಕೂಲವಾಗಿರ್ದು ॥ ತಾಯನಗಲಿದ ಶಿಶುವಿನಂದದಿ। ಬಾಯ ಬಿಡುವಂತಾಯ್ತೆಲೆ ಚಿಂ - । ತಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ॥ ೯೪॥ ಮೊದಲು ಜನನವನರಿಯೆ ಮರಣದ । ಹದನ ಕಡೆಯಲಿ ತಿಳಿಯೆ ನಾ ಮ- । ಧ್ಯದಲಿ ನೆರೆ ನಾ ನಿಪುಣ ನೆಂಬುದು ಬಳಿಕ ನಗೆಗೇಡು ॥ ಮೊದಲು ಕಡೆ ಮಧ್ಯಗಳ ಬಲ್ಲವ । ಮದನ ಜನಕನು ನೀನು ನಿನ್ನಯ । ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ॥ ೯೫॥ ಸಾರವಿಲ್ಲದ ದೇಹವಿದು ನಿ - । ಸ್ಸಾರವಾಗಿಹ ತನುವಿನಲಿ ಸಂ - । ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ ॥ ದೂರತಪ್ಪಿಸಿ ಕೊಂಡು ಬರಿಯಪ - । ದೂರ ಹೊರಿಸಿದೆ ಜೀವದಲಿ ಇದ -। ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ॥ ೯೬॥ ಅಂಡವೆರಡುದ್ಭವಿಸಿದವು ಬ್ರ-। ಹ್ಮಾಂಡವದರೋಪಾದಿಯಲಿ ಪಿಂ - । ಡಾಂಡವೆಸೆದುದು ಸ್ಥೂಲಕಾರಣ ಸೂಕ್ಷ್ಮತನುವಿನಲಿ ॥ ಅಂಡ ನಿನ್ನಯ ರೋಮಕೂಪದೊ - । ಳಂಡಲೆದವಖಿಳಾಂಡವಿದು ಬ್ರ - । ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ॥ ೯೭॥ ಒಂದು ದಿನ ತನುವಿನಲಿ ನಡೆವುವು । ಇಂದು ಭಾಸ್ಕರ ಸ್ವರಗಳಿಪ್ಪ - । ತ್ತೊಂದು ಸಾವಿರದಾರನೂರನು ಏಳು ಭಾಗದಲಿ ॥ ಬಂದುದನು ಉಡುಚಕ್ರದಲ್ಲಿಗೆ । ತಂದು ಧಾರೆಯನೆರೆದ ಮುನಿಕುಲ - । ವೃಂದಹೃದಯನು ನೀನು ರಕ್ಷಿಸು ನಮ್ಮನನವರತ ॥ ೯೮॥ ತೊಲಗುವರು ಕಡೆಕಡೆಗೆ ತಾ ಹೊಲೆ । ಹೊಲೆಯೆನುತ ಕಳವಳಿಸಿ ಮೂತ್ರದ । ಬಿಲದೊಳಗೆ ಬಂದಿಹುದು ಕಾಣದೆ ಬರಿದೆ ಮನನೊಂದು ॥ ಜಲದೊಳಗೆ ಮುಳುಗಿದರೆ ತೊಲಗದು । ಹೊಲೆಗೆಲಸವೀ ದೇಹದೊಳು ನೀ । ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥ ೯೯॥ ಬರಿದಹಂಕಾರದಲಿ ತತ್ವದ । ಕುರುಹ ಕಾಣದೆ ನಿನ್ನ ದಾಸರ । ಜರೆದು ವೇದ ಪುರಾಣ ಶಾಸ್ತ್ರಗಳೋದಿ ಫಲವೇನು ॥ ನರರು ದುಷ್ಕರ್ಮದಲಿ ಮಾಡಿದ । ದುರಿತವಡಗಲು ನಿನ್ನ ನಾಮ -। ಸ್ಮರಣೆಯೊಂದೆ ಸಾಕು ರಕ್ಷಿಸು ನಮ್ಮನನವರತ ॥ ೧೦೦॥ ಎಂಜಲೆಂಜಲು ಎಂಬರಾ ನುಡಿ । ಯೆಂಜಲಲ್ಲವೆ ವಾರಿ ಜಡಚರ - । ದೆಂಜಲಲ್ಲವೆ

ಹಾಲು ಕರುವಿನ ಎಂಜಲೆನ್ನಿಸದೆ ॥ ಎಂಜಲೆಲ್ಲಿಯದೆಲ್ಲಿಯುಂ ಪರ-। ರೆಂಜಲಲ್ಲದೆ ಬೇರೆ ಭಾವಿಸ -। ಲೆಂಜಲುಂಟೆ ದೇವ ರಕ್ಷಿಸು ನಮ್ಮನನವರತ ॥ ೧೦೧॥ ಕೇಳುವುದು ಹರಿಕಥೆಯ ಕೇಳಲು । ಹೇಳುವುದು ಹರಿಭಕ್ತಿ ಮನದಲಿ। ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ ॥ ಊಳಿಗವ ಮಾಡುವದು ವಿಷಯವ । ಹೂಳುವುದು ನಿಜಮುಕ್ತಿ ಕಾಂತೆಯ - । ನಾಳುವುದು ಕೃಪೆ ಮಾಡಿ ರಕ್ಷಿಸು ನಮ್ಮನನವರತ ॥ ೧೦೨॥ ಈ ತೆರದೊಳಚ್ಯುತನ ನಾಮವ। ನೂತನದಿ ವಸುಧಾತಳದಿ ವಿ - । ಖ್ಯಾತಿಯಲಿ ಬಣ್ಣಿಸಿದೆ ಕನ್ನಡ ಕುಸುಮಷಟ್ಪದಿಯ ॥ ನೀತಿಕೋವಿದರಾಲಿಸುವುದತಿ । ಪ್ರೀತಿಯಲಿ ಕೇಳ್ದರಿಗೆ ಅಸುರಾ -। ರಾತಿ ಚನ್ನಿಗರಾಯ ಸುಖಗಳನೀವನನವರತ ॥ ೧೦೩॥ ಬಾದರಾಯಣ ಪೇಳ್ದ ಭಾರತ - । ಕಾದಿಕರ್ತನುದಾರ ಶ್ರೀಪುರ - । ದಾದಿಕೇಶವಮೂರ್ತಿಗಂಕಿತವಾದ ಚರಿತೆಯನು॥ ಮೇದಿನಿಯೊಳಿದನಾರು ಹೃದಯದೊ - । ಳಾದರಿಸಿ ಕೇಳ್ದಪರು ಮುದದಲಿ । ಆದಿಮೂರುತಿ ಸುರವರಾಧಿಪನೊಲಿವನನವರತ ॥ ೧೦೪॥ ಕುಲಗಿರಿಗಳನ್ವಯವು ಧಾರುಣಿ । ಜಲಧಿ ಪಾವಕ ಮರುತ ಜಲ ನಭ । ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ ॥ ಚಲನೆಯಿಲ್ಲದೆ ನಿನ್ನ ಚರಿತೆಯು । ಬಲಿದು ಧರೆಯೊಳಗಪ್ಪುವಂದದಿ । ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ ॥೧೦೫॥ ನೂರು ಕನ್ಯಾದಾನವನು ಭಾ-। ಗೀರಥಿ ಸ್ನಾನವನು ಮಿಗೆ ಕೈ - । ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು॥ ಊರುಗಳ ನೂರಗ್ರಹಾರವ । ಧಾರೆಯೆರೆದಿತ್ತಂತೆ ಫಲಕೈ -। ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ ॥ ೧೦೬॥ ಮೇರುಮಂದರನಿಭ ಸುವರ್ಣವ। ವಾರಿಮಧ್ಯದೊಳಿರುವ ಅವನಿಯ । ನಾರಿಯರ ಗಾಯತ್ರಿ ಪಶುಗಳನಿತ್ತ ಫಲವಹುದು ॥ ಧಾರುಣಿಯೊಳೀ ಭಕ್ತಿಸಾರವ -। ನಾರು ಓದುವರವರಿಗನುದಿನ । ಚಾರುವರ ಗಳನಿತ್ತು। ರಕ್ಷಿಪನಾದಿಕೇಶವನು ॥ ೧೦೭ ॥ ಲೋಕದೊಳಗತ್ಯಧಿಕನೆನಿಸುವ। ಕಾಗಿನೆಲೆಸಿರಿಯಾದಿಕೇಶವ। ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು ॥ ಜೋಕೆಯಲಿ ಬರೆದೋದಿ ಕೇಳ್ದರ -। ನಾಕುಲದಿ ಮಾಧವನು ಕರುಣಿಪ - । ಶ್ರೀಕಮಲವಲ್ಲಭನು ಮಿಗೆ ಬಿಡದಾದಿ ಕೇಶವನು॥೧೦೮॥

ಮಂಗಳಂ ಸರ್ವಾಧಿಭೂತಗೆ । ಮಂಗಳಂ ಸರ್ವವನು ಪೊರೆವಗೆ । ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬುವಗೆ ॥ ಮಂಗಳಂ ಸರ್ವಸ್ವತಂತ್ರಗೆ । ಮಂಗಳಂ ಸತ್ಯಸ್ವರೂಪಗೆ । ಮಂಗಳಂ ಸಿರಿಯೊಡೆಯ ಚನ್ನಿಗರಾಯ ಕೇಶವಗೆ ॥ ೧॥ ಮಂಗಳಂ ಜಗದಾದಿ ಮೂರ್ತಿಗೆ । ಮಂಗಳಂ ಜಯಪುಣ್ಯಕೀರ್ತಿಗೆ । ಮಂಗಳಂ ಕರಕಲಿತಚಕ್ರ ವಿದಳಿತನಕ್ರನಿಗೆ ॥ ಮಂಗಳಂ ದ್ರೌಪದಿಯ ಪೊರೆದಗೆ । ಮಂಗಳಂ ಧ್ರುವರಾಜಗೊಲಿದಗೆ ಮಂಗಳಂ ಬೇಲೂರ ಚನ್ನಿಗರಾಯ ಕೇಶವಗೆ ॥ ೨॥ ಜಯ ಸುರೇಂದ್ರವರಾರ್ಚಿತಾಂಘ್ರಿಯೆ। ಜಯ ಪರಾಧಿಪಸಂಸ್ತುತಾತ್ಮನೆ । ಜಯ ಮಹಾಮುನಿ ಯೋಗ ಗಮ್ಯನೆ ಮೇಘ ಮೋಚಕನೆ ॥ ಜಯ ಸುನೀರದನೀಲದೇಹನೆ । ಜಯ ಜಾನಕೀವದನಾಬ್ಜಮಿತ್ರನೆ । ಜಯ ಕಲಾಧಿಪಸೂರ್ಯನೇತ್ರನೆ । ಜಯ ಜಯ ಜಗನ್ನಾಥ ದೇವನೆ ಚನ್ನಕೇಶವನೆ ॥ ೩॥ ॥ ಹರಿಭಕ್ತಿಸಾರವು ಸಂಪೂರ್ಣವು ॥

*****

## ಶ್ರೀಧನ್ವಂತ್ರಿದೇವರ ಸ್ತೋತ್ರ

**ರಾಗ-ಮಧ್ಯಮಾವತಿ** **ಧ್ರುವತಾಳ**

ರೋಗನಿವಾರಣವಾಗುವದಿದು ಮಹಾ । ಯೋಗಿಗಳು ನೆರೆದು ನಿಗಮ ಸುಪುರಾಣ । ಭಾಗವತ ಪಂಚರಾತ್ರಾಗಮವ ಶೋಧಿಸಿ । ವೇಗದಿಂದಲಿ ದುಗ್ಧಸಾಗರ ಮಧ್ಯದೊಳಗೆ । ನಾಗರಾಜನ ಮೇಲೆ ಯೋಗನಿದ್ರೆಯೊಳಿಪ್ಪ । ವಾಗೀಶಪಿತನ ಇಂಬಾಗಿನೆನಿಸಲು । ಪೋಗುವುದಘವೆಂದು ಯೋಗೀಶ್ವರರು ಶಿರ। ದೂಗಿ ಸಾರುವರೊ ಚೆನ್ನಾಗಿ ಶ್ರೀಹರಿನಾಮ । ಈಗ ಸಂಸಾರವೆಂಬೋ ಬ್ಯಾಗಿ ಮಧ್ಯದಿ ನರರು । ಜಾಗುಮಾಡದೆ ಬಲು ಜಾಗರರಾಗಿ ತಂಬಲಾಗುವಂತೆ ಉಂಡು। ತೇಗಿ ತೃಪ್ತಿಬಡುವುದು ಭ ೀಗಾನಂದ ನಿಮಗೆ ಯೋಗಾನಂದ । ಹಾಗಾರ ಹಾಗವಿತ್ತು ಲೋಗರ ಕೈಯಿಂದ । ತೂಗಿ ಬೆಲೆಗೆ ವಸ್ತು ವೇಗ ತರುವುದಲ್ಲ । ಶ್ರೀಗುರು ಧನ್ವಂತ್ರಿ ವಿಜಯ ವಿಠಲನಾಮ ದ್ವೇಷ । ಭಾಗಿಗಳಿಗೆ ಸಲ್ಲ ಶ್ರೀ ಗೌರೀ ಪತಿ ಬಲ್ಲ ॥ ೧॥

.... ಮಟ್ಟತಾಳ ....

ಅಡವಿಗಿಡವ ತುಕ್ಕಿ ಅಗಳಿ ತರುವುದಲ್ಲ । ಕೊಡಲಿಯಲಿ ಕಡಿದು ಪೊತ್ತು ತರುವುದಲ್ಲ। ಪುಡಿಮಾಡಿ ಅರದು ಮುದ್ದೆ ಮಾಡುವದಲ್ಲ । ಅಡಿಗೆಯನೆ ಮಾಡಿ ಪಾಕಕ್ಕಿಳಿಪದಲ್ಲ । ಅಡಿಗಡಿಗೆ ಬಾಯ್ದೆರೆದು ಬೇಡುವುದು ಅಲ್ಲ । ಕೊಡರು ಪರರು ಎಂದು ದುಃಖಬಡುವುದಲ್ಲ। ಬಡವ ಭಾಗ್ಯವಂತರೆಂಬ ವಚನ ಸಲ್ಲ । ಪೊಡವಿಯೊಳಗೆ ಬಲು ಸವಿಯಾದೌಷಧವೋ । ಕುಡಿಯಬಲ್ಲವರಿಗೆ ರುಚಿ ಬಲು ರುಚಿ ಕಾಣೋ । ಕಡಲ ಶಯನ ನಮ್ಮ ವಿಜಯವಿಠ್ಠಲರೇಯನ । ಕಡುನಾಮಾಮೃತವು ಸರ್ವರೋಗಹರವು ॥ ೨॥

.... ತ್ರಿವಿಡಿತಾಳ ....

ಪಥ್ಯ ಮಾಡುವುದಲ್ಲ ಅನುಪಾನ ಮೊದಲಿಲ್ಲ । ಪೈತ್ಯ ಹೆಚ್ಚಿತು ಎಂದು ಬಳಲಿ ಬೀಳುವುದಲ್ಲ। ಶೈತ್ಯ ವಾತ ಭ್ರಮಣ ಮೇಹ ಹೆಚ್ಚುವುದಲ್ಲ ಅ - । ಪಥ್ಯವಾಯಿತು ಎಂದು ಶೋಕಿಸುವುದು ಸಲ್ಲ । ನಿತ್ಯಕೊಳ್ಳಲು ಲೇಶ ರುಚಿ ಕೆಡುವುದಲ್ಲ । ಸತ್ಯವಲ್ಲದೆ ಇದು ಎಂದಿಗೂ ಪುಸಿಯಲ್ಲ । ಮೃತ್ಯು ಮೃತ್ಯುವಿನ ದೂತರಿಗೆ ಕಕ್ಕಸವಾಗಿಪ್ಪುದು । ಭೃತ್ಯರಾದವರಿದು ಪಾಲಿಸುತಿಪ್ಪುದು । ಸತ್ಯವಲ್ಲಭಸಿರಿ ವಿಜಯವಿಟ್ಠಲರೇಯನ್ನ । ಸ್ತುತ್ಯವ ಮಾಳ್ಪರ ಮನಕೆ ಶೋಭಿಸುವುದು ॥ ೩॥

.... ಅಟ್ಟತಾಳ ....

ಸರಿ ಬಂದದುಣಲುಂಟು ಸರಿ ಬಂದ ಕಾಲಕ್ಕೆ । ಸರಿ ಸರಿ ಬಂದಂತೆ ಸುರಿದು ಸುಖಿಸೆ ತನ್ನ । ಜರೆ ಮರಣ ಜಡ ಜ್ವರ ಜಠರಾದಿ ರೋಗಗಳು ಉರುಳಿ ಪೋಗುವಯ್ಯ । ಸುರಕ್ಷಿತವಾಗಿಹ ಪರದಲ್ಲಿ ಪೊರೆವುದು । ಸುರಮುನಿನುತ ಸಿರಿ ವಿಜಯವಿಠಲರೇಯನ। ನೆರೆನಂಬಿದವರಿಗೆ ಹಿರಿದಾಗಿ ಒಲಿವುದು ॥ ೪॥

.... ಆದಿತಾಳ ....

ಬುದ್ಧಿವಂತರೆಲ್ಲರಿದು ಮೆದ್ದು ಸವಿ ನೋಡಿ ಜಗಕೆ । ಶುದ್ಧಜೀವಿಗಳಿಗಿದು ಸಿದ್ಧವೆಂದು ಧರೆಗೆ ಬೀರೆ । ಎದ್ದು ಮಲಗಿ ಕುಳಿತು ಇದ್ದು ತಿರುಗಾಡುತ । ಇದ್ದ ಕಾಲಕ್ಕೆ ಸಮೀಪ ಹೊದ್ದಿಕೊಂಡು ಇಪ್ಪದು । ಉದ್ದಿನಷ್ಟು ಪಾಪವ ಹೊದ್ದುಗೊಡದೆ ಓಡಿಸಿ ಜ್ಞಾ - । ನಾಬ್ಧಿಯೊಳಗಿಡುವುದು ಶ್ರದ್ಧಾ- ವೈರಾಗ್ಯವಿತ್ತು। ಬದ್ಧವಾಗಿದ್ದ ಭವಕೆ ಮದ್ದು ಇತ್ತು ಮಾಣಿಸುವ । ಶುದ್ಧ ಮೂರುತಿ ನಮ್ಮ ವಿಜಯವಿಠ್ಠಲರೇಯ ॥೫॥

.... ಜತೆ ....

ಬಹಿರಂತರ ರೋಗ ನಿವಾರಣವಾಗುವುದು । ಅಹಿಶಾಯಿ ವಿಜಯವಿಠ್ಠಲನ ನಾಮೌಷಧಕೆ॥೬॥

## ಶ್ರೀಕಪಿಲದೇವರ ಸ್ತೋತ್ರ

ರಾಗ - ಭೈರವಿ ಧ್ರುವತಾಳ

ಉಪಜೀವ್ಯ ನಿಜಾನಂದ ಉದಧಿಶಯನ ಸರ್ವೇಶ । ಸಪುತ ಸಪುತ ಲೋಕಪಾಲ ಪಾಲಕ ಕಾಮೇಶ । ಉಪಜೀವ್ಯ ತಪೋಧನಪಾನಿಷ್ಟ ಪಾವನ ಪಾವಕ । ಜಪಶೀಲ ಸಿದ್ಧಮೂರ್ತಿ ಸಾಕಾರ ಸರ್ವಾಕಾರ । ಉಪದೇಶದ ತುಂಬರಾದಿ ನಾರದ ವಂದಿತ ಪಾದಾ - । ನುಪಮೇಯ ರಮೆಯರಸ ಯೋಗಿ ಜಟಿ ವಲ್ಕಲವಸನ । ತ್ರಪುತ ತ್ರಿಗುಣಾತೀತ ತ್ರಿಕಾಲ ಕಾಲ ನಾಮಕ । ವಿಪುಲ ಮಧ್ಯಯೋಗ ಶಾಸ್ತ್ರ ರಚನೆ ಗೈಸಿದ ಗತಿಪ್ರದ । ಕುಪಿತರಹಿತ ನಿರುತ ಅಪಾರ ಅನಾದಿ ಅಪ್ರತಿಹತದೇವ । ಚಪಲನಯನ ಅಪರಿಚ್ಛಿನ್ನ ವ್ಯಾಪ್ತ ಬೊಮ್ಮಾಂಡ ಕಾರಣ । ಉಪಜೀವ್ಯ ತ್ರಿಕೋಟಿ ಕಪಿಗಳಯ್ಯ ಕನಕವರ್ಣ । ಕಪಿಲ ವೃಷಾಕಪಿಪತಿ ಅಪರ ಬುದ್ಧನು ನೋಡು ಎ- । ನ್ನಪರಾಧ ಕ್ಷಮೆಮಾಡಯ್ಯಾ ಕೃಪಣವತ್ಸಲ । ಉಪಹತಿಗಳನು ಕೆಡಿಸಯ್ಯ ಉಪಜೀವ್ಯದೀಪುತ ವಿಜಯವಿಠ್ಠಲ । ಕಪಿಲಾವತಾರ ಲಾವಣ್ಯಾ ॥ ೧॥

.... ಮಟ್ಟತಾಳ ....

ಪದ್ಮಸಂಜಾತನ್ನ ಛಾಯದಿಂದಲಿ ಪುಟ್ಟಿದ। ಕರ್ದಮ ಮುನಿದೇವಹೂತಿಯಲ್ಲಿ ಬಂದು । ಉದ್ಭವವಾದ ಶುಕ್ಲಶೋಣಿತ ರಹಿತ । ಈ ಧರೆಯೊಳಗೆ ನಿನ್ನ ನಂಬಿದ ಮಾನವಗೆ । ಹೃದ್ರೋಗವೇ ಇಲ್ಲ ಸುಹೃತ ಸುಪ್ರಭ ಪ್ರಭಾಮೂರುತಿ ವಿಜಯವಿಠ್ಠಲ ಕಪಿಲಾತ್ಮಕ । ಉದ್ಧರಿಸು ಎನ್ನ ಮನದೊಳಗೆ ನಿಂದು ॥ ೨॥

.... ತ್ರಿವಿಡಿತಾಳ ....

ಮುನಿವರೇಣ್ಯ ಸ್ವಾಮಿ ಸ್ವತಂತ್ರಕರ್ತ ಸ - । ಜ್ಜನ ಮನೋಭೀಷ್ಟ ಭಯನಾಶಕಶಕ್ತ । ಜನನಿಗೆ ಜ್ಞಾನೋಪದೇಶವ ಪೇಳಿ ಸಾ- । ಧನಮಾರ್ಗ ತೋರಿ ಸಂಸಾರವೆಂಬೋ । ವನಧಿಯ ದಾಟಿಸಿ ಸ್ನೇಹಭಾವದಿಂದ । ನಿನಗೆ ನೀನೆ ಪೊಳೆದ ಭಕುತವಶನೇ । ವನಜಭವಾದಿಗಳು ನಿನ್ನ ಲೀಲೆಯ ನೋಡಿ । ಗುಣಿಸಿ ಎಣಿಸಿ ಮೈಮರದರದಕೋ । ಎಣೆಗಾಣೆನೋ ಸ್ವೇಚ್ಛಾಕ್ರೀಡೆಗೆ ಮಂಗಳ । ಖಣಿಯೇ ತುಳಸೀಪ್ರಿಯ ಅತುಳಕೀರ್ತಿ । ಪ್ರಣವ ಮೂರುತಿ ನಮ್ಮ ವಿಜಯವಿಠ್ಠಲರೇಯಾ । ಮಣಿದು ನಮೋ ಎಂಬೆ ಸಾರ ಹೃದಯಬದ್ಧ ॥ ೩॥

.... ಅಟ್ಟತಾಳ ....

ಆದಿ ಮನುವಿನ ಕಾಲದಲ್ಲಿ ಪುಟ್ಟಿ । ವೇದಾರ್ಥಜ್ಞಾನವ ಶಿಷ್ಯರಿಗೆ ಪೇಳಿ । ವೇದವೇದಾಂತವ ತಿಳುಪಿ ಅಜ್ಞಾನವ । ಛೇದಿಸಿ ಬಿಟ್ಟಬಿಸಜದಳಾಂಬಕ । ಸಾಧು ಸಾಧು ಸಚ್ಚಿದಾನಂದಾತ್ಮಾ ವಿ- । ನೋದ ಮನುಜಕಾಯ ನಾರಾಯಣವರ । ಬೋಧಮುದ್ರಹಸ್ತಾ ಶಶಿವರ್ಣಸಂಕಾಶ । ಆದಿತ್ಯವಂದ್ಯ ವಿಜಯವಿಟ್ಠಲರೇಯಾ । ವೈಧಾತ್ಯಸೇವ್ಯಾ । ನಿರಾಕುಲಾ ಕಪಿಲಾ ॥ ೪॥

.... ಆದಿತಾಳ ....

ಅರುಣೋದಯದಲೆದ್ದು ಕರಣಶುದ್ಧಿಯಿಂದ । ಗುರುಕಪಿಲ ಕಪಿಲನೆಂದು ಸ್ಮರಿಸಿದ ಮಾನವಗೆ । ನಿರುತ ಮಾಡಿದ ಮಹತ್ತರ ಕರ್ಮಬಂಧ । ಪರಿಹಾರವಾಗಿ ಪೋಗುವುದು ಪರಮಜ್ಞಾನಿಯಾಹ । ಪರಿಮಾಣಕ್ಕೆ ತನ್ನ ಕುರುಹು ತೋರಿಸಿ ಯಮನ ಬಾಧೆ ತಪ್ಪಿಸುವನು । ನಿರಯವಿದೂರ ಮನುಪೌತ್ರ ವಿಜಯವಿಠ್ಠಲ । ಪೊರೆವ ಪ್ರಪನ್ನ ಜನರ ಹೃದಯದೊಳಗೆ ನಿಂದು ॥ ೫॥

.... ಜತೆ ....

ಕಪಿಲ ಕಪಿಲದೇವ ದೇಶಕಾಲದಿಪೂರ್ಣ ದ್ರುಪದನಂದನವರದ ವಿಜಯ ವಿಠ್ಠಲಮೂರ್ತಿ॥೬॥

## ಶ್ರೀಹರಿಸ್ತೋತ್ರ

ರಾಗ - ರೇಗುಪ್ತಿ ಧ್ರುವತಾಳ

ಹರಿನಾಮ ಲಕ್ಷ್ಮೀ ಕಾಣೋ ದಾರಿದ್ರ ಜನರಿಗೆ । ಹರಿನಾಮ ಬ್ರಹ್ಮ ಕಾಣೋ ಅಲ್ಪಾಯುಳ್ಳ ಜನಕೆ । ಹರಿನಾಮ ಪವನ ಕಾಣೋ ದುರಿತಘನಾವಳಿಗೆ। ಹರಿನಾಮ ಗರುಡ ಕಾಣೋ ಕಾಲಾಖ್ಯ ಸರ್ಪಗಳಿಗೆ । ಹರಿನಾಮ ಶೇಷ ಕಾಣೋ ಜ್ಞಾನಸಾಧನ ಪಾಲಿಪದಕೆ । ಹರಿನಾಮ ರುದ್ರ ಕಾಣೋ ಭವವೆಂಬ ಮೃತ್ಯುವಿಗೆ । ಹರಿನಾಮ ಇಂದ್ರ ಕಾಣೋ ದುಷ್ಕರ್ಮ ಪರ್ವತಕ್ಕೆ । ಹರಿನಾಮ ಸೂರ್ಯ ಕಾಣೋ ಅಜ್ಞಾನಾಖ್ಯ ಕತ್ತಲೆಗೆ। ಹರಿನಾಮ ಚಂದ್ರ ಕಾಣೋ ಹೃತ್ತಾಪ ಮೂಸಲ್ಡಾನಕ್ಕೆ । ಹರಿನಾಮ ವರುಣ ಕಾಣೋ ದೃಷ್ಟಿ ಕೊಡುವುದಕ್ಕೆ । ಹರಿನಾಮ ಅಗ್ನಿ ಕಾಣೋ ದುರಿತಕಾನನಕೆ ಮುಖ್ಯ । ಹರಿನಾಮ ವಡಬಾನಳೋ ಮಹಾ ದುಃಖಸಾಗರಕ್ಕೆ । ಹರಿನಾಮ ವೈದ್ಯ ಕಾಣೋ ಭವರೋಗ ಕಳೆವದಕ್ಕೆ । ಹರಿನಾಮ ಸಂಜೀವನವೋ ಮೃತ್ಯುಪ್ರಾಯಜೀವಿಗಳಿಗೆ । ಹರಿನಾಮ ಗಂಗೆ ಕಾಣೋ ಮನಮಲಿನ ತೊಳೆವುದಕ್ಕೆ । ಹರಿನಾಮ ಕಲ್ಕಿ ಕಾಣೋ ಅನಾಚಾರ ಬಿಡಿಸುವುದಕ್ಕೆ । ಹರಿನಾಮ ಪ್ರಾಣ ಕಾಣೋ ಇಂದ್ರಿಯಂಗಳ ಬಲಕೆ । ಹರಿನಾಮ ವ್ಯಾಘ್ರ ಕಾಣೋ ಆಪತ್ತಮೃಗಂಗಳಿಗೆ । ಹರಿನಾಮ ಸಿಂಹ ಕಾಣೋ ಕ್ರೋಧವೆಂಬ ಗಜಕೆ । ಹರಿನಾಮ ಗಜ ಕಾಣೋ ಆಶಾವೆಂಬ ಕದಳಿಗೆ । ಹರಿನಾಮ ಶಸ್ತ್ರ ಕಾಣೋ ಕಾಮಬಲ ಖಂಡ್ರಿಪದಕ್ಕೆ । ಹರಿನಾಮ ವಿತ್ತ ಕಾಣೋ ಸತ್ಕರ್ಮ ಕೊಂಬುವುದಕ್ಕೆ । ಹರಿನಾಮಾಭರಣ ಕಾಣೋ ಶರೀರಾಲಂಕಾರಕ್ಕೆ । ಹರಿನಾಮಾಂಬರ ಕಾಣೋ ಭವವೆಂಬ ಸೀತಕ್ಕೆ । ಹರಿನಾಮ ವಜ್ರಪಂಜರ ಶರಣರ ಕುಲಕೋಟಿಗೆ । ಹರಿನಾಮ ನೆನೆದವರ

ಅಶುಭವ ಓಡಿಸುವುದು । ಹರಿನಾಮ ನಂಬಿದರೆ ಸರ್ವವು ದೃಷ್ಟಿಗೆ ಗೋಚರ । ಹರಿನಾಮ ಆವಾವಪೇಕ್ಷೆಯ ಕೊಡುವುದು । ಹರಿ ಮೂರುತಿ ನಮ್ಮ ವಿಜಯವಿಟ್ಠಲರೇಯಾ । ಹರಿಯೆಂದ ಮನುಜಂಗೆ ಹರುಷ ಪ್ರವಾಹ ಎನ್ನು ॥ ೧॥

... ಮಟ್ಟತಾಳ ...

ತೊಟ್ಟಿಲೊಳಗೆ ಶಿಶುವಿನ ಮೊಗ ನೋಡಿ । ತುಷ್ಟಳಾಗಿ ಜನನಿ ತೆಗೆದೆತ್ತಿ ಮೊಲೆ । ಗೊಟ್ಟು ಸಂತೈಸುವಳಾತೆರದಿ ಎನಗೆ । ವಿಠ್ಠಲ ವಿಠ್ಠಲನೆಂಬೋ ಜನನಿ ಇರಲು । ಕಷ್ಟಪಡುವದ್ಯಾಕೆ ಕಂಡದ್ದು ಹಂಬಲಿಸಿ । ಇಷ್ಟಮೂರುತಿ ರಂಗ ವಿಜಯವಿಠ್ಠಲರೇಯನ। ಪಟ್ಟಣ ಸೇರುವುದು ಒಂದೇ ನಾಮದಿಂದ ॥ ೨॥

... ತ್ರಿವಿಡಿತಾಳ ...

ಹರಿನಾಮವ ನೆನೆಸೆ ಆವಾವ ವಿಪತ್ತು । ಪರಿಹಾರವಾಗೋವು ಪ್ರತಿಪ್ರತಿ ಕ್ಷಣದಲ್ಲಿ। ಹರಿನಾಮದಿಂದಲಿ ತತ್ತ್ವೇಶ ಮೊದಲಾದ । ಸುರರೆಲ್ಲ ವಶವಾಗಿ ಇರುತಿಪ್ಪರೋ । ಪರಲೋಕದ ಮಾರ್ಗ ಪುರದ ಬೀದಿಯಂತೆ । ಅರೆಮರೆ ಇಲ್ಲದಲೆ ಕಾಣಿಸುವುದು ಸತ್ಯ । ಪರಬುದ್ಧಿ ಪ್ರತ್ಯಕ್ಷವಾಗುವುದು ಸತ್ಯ । ಪರಮಜ್ಞಾನಿಯಾಗಿ ಸುಖಿಸುವನವನು । ಎರಡೆಂಟು ದಿಕ್ಕಿನಲ್ಲಿ ಆಗುವ ವಿವರವ ವಿ- । ಸ್ತರವಾಗಿ ತಿಳಿವುದು ಗುಣಿಸಿದರೂ । ಹರಿನಾಮದಿಂದ ಬಂದ ಜ್ಞಾನಕೆ ಇನಿತು । ಚರಿಯ-ವಿಪ್ಪದೆಂದು ಶಂಕಿಸದಿರು । ಅರುಹುವೆ ಮನಕೆ ಅನುಭವ ವಾಗುವಂತೆ ನಿಂ- । ದಿರದೆ ಲಾಲಿಸುವುದು ಭಕುತಿಯಿಂದಾ । ನರನೊಬ್ಬ ಅಂಜನವ ಮಾಡಿದರಿಂದದು । ಕರತಳದಲ್ಲಿ ಪಚ್ಚಿಸಿ ಕೊಂಡರೆ । ಸರಿಸಾ ದೂರದಲಿದ್ದ ವಸ್ತುಕಾಣಿಸುವುದು । ಧರೆಯೊಳಗಿಂಥ ಈ ಜಡಕೆ ಈ ಸಾಮರ್ಥಿಕೆ । ಸ್ಥಿರವಾಗಿ ಇರಲಿಕೆ ಜ್ಞಾನ ದೃಷ್ಟಿಗೆ ಕಾಂಬೋ- । ದರಿದೇನೋ ಎಲೋ ಮನವೇ ಜಡ ಇಂದ್ರಿಯಂಗಳು । ನಿರುತದಲಿದ್ದರೇನು ಜ್ಞಾನ ಅಧಿಕವಾಗೆ । ಹೊರಗೆ ಒಳಗೆ ಮಾಳ್ಪದೆಲ್ಲ ಜ್ಞಾತ । ಪರಮಪುರುಷ ರಂಗ ವಿಜಯವಿಠ್ಠಲರೇಯನ । ಚರಣ ಧ್ಯಾನವ ಮಾಳ್ಪನೋಪಾಸನೆ ಬಲವೋ ॥ ೩॥

... ಅಟ್ಟತಾಳ ...

ಅನುಭವಿವಲ್ಲದ ಜ್ಞಾನದ ಫಲವೇನು । ಅನಿಮಿಷಮುನಿಜನ ಕೊಂಡಾಡಲ್ಯಾತಕೆ । ಘನತನವ್ಯಾತಕ್ಕೆ ಜ್ಞಾನಿಮನುಜನೆಂದು । ತೃಣಮಿಕ್ಕಾದದಕೆ ಸಾಧನ ಜನುಮವು ಯಾತಕ್ಕೆ । ನಿನಗೆ ನೀನೇ ನೋಡು ಜ್ಞಾನಕ್ಕೆ ಶ್ರೇಷ್ಠತ್ವ । ವನಜನಾಭನೆ ತಾನೇ ಜ್ಞಾನಕ್ಕೆ ಸಿಲುಕುವ । ಚಿನುಮಯ ರೂಪಗಳನೆ ತೋರಿಕೊಳುತ ಲಿಂಗ । ತನುವೆ ಪೋಗುವಂತೆ ಗುಣವಂತನ ಮಾಳ್ಪ । ಪ್ರಣತನಾಗಿರುವ ರಾಮಕೃಷ್ಣ ಗೋವಿಂದ ವಾ-। ಮನ ಮಧುಸೂದನ ಮುಕ್ಕುಂದ ಜನಾ । ರ್ದನ ಅಚ್ಯುತಾನಂತ ನಾಮ ಉಚ್ಚರಿಸಲು । ಉಣಲುಂಟು ಉಡಲುಂಟು ಏನೇನು ಬೇಡಿದ । ಮನೋಭಿಷ್ಟಿಯೆ ಉಂಟು ಮಾತು ಸತ್ಯವೆ ಉಂಟು । ಕನಸಿನೊಳಾದರೂ ಕಾಣಿಸವು ಪಾಪಾ । ಗಣಗಳೆಲ್ಲ ಕೇಳಿ ಜ್ಞಾನದ ಮಹಿಮೆ । ಜನನ ವಿದೂರ ನಮ್ಮ ವಿಜಯವಿಠ್ಠಲನಂಘ್ರಿ । ಮನದಲ್ಲಿ ನಿಲ್ಲಿಸಲು ಉತ್ಸಾಹ ಎಂದಿಗೂ ॥ ೪॥

... ಆದಿತಾಳ ...

ವಿದ್ಯದ ಬಲಕೇಳೋ ಸುಯಜ್ಞ ಮುನಿಬಾಲಕ । ಶುದ್ಧಾತ್ಮ ಕಾನನದಲ್ಲಿ ಪೋಗುತಿರೆ ಮಹಾ । ಕೃದ್ಧವ ತಾಳಿ ಇಪ್ಪತ್ತೆಂಟು ಪಿಶಾಚಿಗಳು । ಮೆದ್ದೆವೆಂದು ವೇಗಾ ಹರಿದೆದ್ದು ಓಡಿ ಬರಲು । ಖದ್ಯೋತನವರ್ನದಂತೆ ಜ್ಞಾನಿಯ ಕಾಂತಿಯಿಂದ । ಪೊದ್ದಿ ಭೀತಿಯಿಂದ ವಂದನೆ ಮಾಡಿ ನಮ್ಮ । ನುದ್ಧರಿಸು ಎಂದು ವಶವಾದರು ಕೇಳಿ । ಭದ್ರಗತಿಯ ಪಥವ ಸೇರಿದರು ಬಿಡದೆ । ಈ ಧರೆಯೊಳು ಭಕ್ಷಿಸಲು ಬಂದ ಕ್ರೂರರು । ಕ್ಷುದ್ರತನವ ಬಿಟ್ಟು ಗೆಳೆಯರಾದರು ನೋಡು । ಪದ್ಮನಾಭನ ಪೊಂದಿ ಜ್ಞಾನ ಸಂಪಾದಿಸಿದ । ಸದ್ಮುನಿಗೆ ಸಮಸ್ತ ಜಗತ್ತು ವಶಕರ । ಸಿದ್ಧಾಂತ ಪ್ರಮೇಯ ಇದೇ ಇದರಂತೆ ಚರಿಸಿದರೆ । ಇದ್ದಲ್ಲಿ ಸೌಕರ್ಯವೋ ಆವ ಮನುಜಗಾಗೆ । ಬುದ್ಧಿ ಪಾಲಿಸುವ ಪಾವನ್ನ ವಿಜಯವಿಠ್ಠಲನ್ನ । ಹೃದ್ಯದಲ್ಲಿ ಇಡಲು ನೆನೆದಂತೆ ಕಾರ್ಯ ॥೫॥

... ಜತೆ ...

ಮಾತು ಮಾತಿಗೆ ಹರಿಯ ನಾಮವೆ ಗತಿಯೆನ್ನು । ಗಾತುರ ನಿರ್ಮಲನಾ ವಿಜಯವಿಠ್ಠಲ ಪೊಲಿವಾ ॥ ೬॥

*****

## ಗೋಪೀಗೀತಮ್ (ಸಂಸ್ಕೃತ)

**ಗೋಪ್ಯಃ ಊಚುಃ ।** ಜಯತಿ ತೇऽಧಿಕಂ ಜನ್ಮನಾ ವ್ರಜಃ ಶ್ರಯತ ಇಂದಿರಾ ಸಾಧು ತತ್ರ ಹಿ । ದಯಿತ ದೃಶ್ಯತಾಂ ತ್ವಾದಿದೃಕ್ಷತಾಂ ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೆ ॥ ೧॥ ವ್ರಜಜನಾರ್ತಿಹನ್ವೀರಯೋಷಿತಾಂ ನಿಜಜನಸ್ಮಯಧ್ವಂಸನಸ್ಮಿತ । ಭಜ ಸಖೇ ಭವೇ ಕಿಂಕರೀಃ ಸ್ಮ ನೋ ಜಲರುಹಾನನಂ ಚಾರು ದರ್ಶಯನ್ ॥ ೨॥ ಶರದುದಾಶಯೇ ಸಾಧುಜಾತಸತ್ಸರಸಿಜೋದರ ಶ್ರೀಮುಷಾ ದೃಶಾ । ಸುರತನಾಥ ತೇ ಶುಲ್ಕದಾಸಿಕಾ ವರದ ನಿಘ್ನತೋ ನೇಹ ಕಿಂ ವಧಃ ॥ ೩॥ ವಿಷಜಲಾಶಯಾದ್ವ್ಯಾಲರಾಕ್ಷಸಾದ್ವರ್ಷ ಮಾರುತಾದ್ವೈದ್ಯುತಾನಲಾತ್ । ವೃಷಮಯಾದ್ಭಯಾದ್ವಿಶ್ವತೋಮುಖಾದ್ ವೃಷಭ ತೇ ವಯಂ ರಕ್ಷಿತಾ ಮುಹುಃ ॥ ೪॥ ಸ ಖಲು ಗೋಪಿಕಾನಂದನೋ ಭವಾನಖಿಲದೇಹಿನಾಮಂತರಾತ್ಮದೃಕ್। ವಿಖನಸಾರ್ಚಿತೋ ವಿಶ್ವಗುಪ್ತಯೇ ಸಖ ಉದೇಯಿವಾನ್ಸಾತ್ವತಾಂ ಕುಲೇ ॥ ೫॥ ವಿರಚಿತಾಭಯಂ ವೃಷ್ಣಿವರ್ಯ ತೇ ಶರಣಮೀಯುಷಾಂ ಸಂಸೃತೇರ್ಭಯಾತ್ । ಕರಸರೋರುಹಂ ಕಾಂತ ಕಾಮದಂ ಶಿರಸಿ ಧೇಹಿ ನಃ ಶ್ರೀಕರಗ್ರಹಂ ॥ ೬॥ ಪ್ರಣತದೇಹಿನಾಂ ಪಾಪಕರ್ಶನಂ ತೃಣಚರಾನುಗಂ ಶ್ರೀನಿಕೇತನಂ । ಫಣಿಫಣಾರ್ಪಿತಂ ತೇ ಪದಾಂಬುಜಂ ಕೃಣು ಕುಚೇಷು ನಃ ಕೃಂಧಿ ಹೃಚ್ಛಯಂ ॥ ೭॥ ಮಧುರಯಾ ಗಿರಾ ವಲ್ಗುವಾಕ್ಯಯಾ ಬುಧಮನೋಜ್ಞಯಾ ಪುಷ್ಕರೇಕ್ಷಣ। ವಿಧಿಕರೀರಿಮಾ ವೀರ ಮುಹ್ಯತೀರಧರಸೀಧು ೨೩ನಾಪ್ಯಾಯಯಸ್ವ ನಃ ॥ ೮॥ ತವ ಕಥಾಮೃತಂ ತಪ್ತಜೀವನಂ ಕವಿಭಿರೀಡಿತಂ ಕಲ್ಮಷಾಪಹಂ । ಶ್ರವಣಮಂಗಲಂ ಶ್ರೀಮದಾತತಂ ಭುವಿ ಗೃಣಂತಿ ತೇ ಭೂರಿದಾ ಜನಾಃ ॥ ೯॥ ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ ವಿಹರಣಂ ಚ ತೇ ಧ್ಯಾನಮಂಗಲಂ । ರಹಸಿ ಸಂವಿದೋ ಯಾ ಹೃದಿಸ್ಪೃಶಃಕುಹಕ ನೋ ಮನಃ ಕ್ಷೋಭಯಂತಿ

ಹಿ ॥ ೧೦॥ ಚಲಸಿ ಯದ್‌ವ್ರಜಾಚ್ಚಾರಯನ್ಪಶೂನ್ನಲಿನಸುಂದರಂ ನಾಥ ತೇ ಪದಂ । ಶಿಲತೃಣಾಂಕುರೈಃ ಸೀದತೀತಿ ನಃ ಕಲಿಲತಾಂ ಮನಃ ಕಾಂತ ಗಚ್ಛತಿ ॥ ೧೧॥ ದಿನಪರಿಕ್ಷಯೇ ನೀಲಕುಂತಲೈರ್ವನರುಹಾನನಂ ಬಿಭ್ರದಾವೃತಂ । ವನರಜಸ್ವಲಂ ದರ್ಶಯನ್ ಮುಹುರ್ಮನಸಿ ನಃ ಸ್ಮರಂ ವೀರ ಯಚ್ಛಸಿ॥೧೨॥ ಪ್ರಣತಕಾಮದಂ ಪದ್ಮಜಾರ್ಚಿತಂ ಧರಣಿಮಂಡನಂ ಧ್ಯೇಯಮಾಪದಿ । ಚರಣಪಂಕಜಂ ಶಂತಮಂ ಚ ತೇ ರಮಣ ನಸ್ತನೇಷ್ವರ್ಪಯಾಧಿಹನ್ ॥ ೧೩॥ ಸುರತವರ್ಧನಂ ಶೋಕನಾಶನಂ ಸ್ವರಿತವೇಣುನಾ ಸುಷ್ಠು ಚುಂಬಿತಂ । ಇತರರಾಗವಿಸ್ಮಾರಣಂ ನೃಣಾಂ ವಿತರ ವೀರ ನಸ್ತೇಽಧರಾಮೃತಂ ॥ ೧೪॥ ಅಟತಿ ಯದ್ಭವಾನಹ್ನಿ ಕಾನನಂ ತ್ರುಟಿಯುಗಾಯತೇ ತ್ವಾಮಪಶ್ಯತಾಂ । ಕುಟಿಲಕುಂತಲಂ ಶ್ರೀಮುಖಂ ಚ ತೇ ಜಡವದೀಕ್ಷತಾಂ ಪಕ್ಷ್ಮಕೃದ್ದೃಶಾಂ ॥ ೧೫॥ ಪತಿಸುತಾನ್ವಯ ಭ್ರಾತೃಬಾಂಧವಾನತಿವಿಲಂಘ್ಯ ತೇ ಹ್ಯಚ್ಯುತಾಗತಾಃ । ಗತಿವಿದಸ್ತವೋದ್ಗೀತಮೋಹಿತಾಃ ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥ ೧೬॥ ರಹಸಿ ಸಂವಿದಂ ಹೃಚ್ಛಯೋದಯಂ ಪ್ರಹಸಿತಾನನಂ ಪ್ರೇಮವೀಕ್ಷಣಂ । ಬೃಹದುರಃ ಶ್ರಿಯೋ ವೀರ ವೀಕ್ಷ್ಯ ತೇ ಮುಹುರತಿಸ್ಪೃಹಾ ಮುಹ್ಯತೇ ಮನಃ ॥ ೧೭॥ ವ್ರಜವನೌಕಸಾಂ ವ್ಯಕ್ತಿರಂಗ ತೇ ವೃಜಿನಹಂತ್ರ್ಯಲಂ ವಿಶ್ವಮಂಗಲಂ । ಭಜ ಮನಾಕ್ಚನಸ್ತ್ವತ್‌ಸ್ಪೃಹಾತ್ಮನಾಂ ಸ್ವಜನಹೃದ್ರುಜಾಂ ಯನ್ನಿಷೂದನಂ ॥ ೧೮॥

**ಶ್ರೀಶುಕ ಉವಾಚ ।** ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ । ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥ ೧೯॥ ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ । ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥ ೨೦॥

**॥ ಇತಿ ಶ್ರೀಮದ್ಭಾಗವತೇ ಗೋಪೀಗೀತಂ ಸಂಪೂರ್ಣಮ್ ॥**

*****

## ಕನ್ನಡ ಗೋಪಿಕಾಗೀತೆಗಳು

**೧)** ಒಪ್ಪಿತೋ ಹರೀ, ನಿಮ್ಮ ಚೆಲ್ವಿಕೇ । ಹೆಚ್ಚಿ ಗೋಕುಲಾ ಇಂದಿರಾನನೆ। ರಮಣನಾಥನೇ ಮಲಯದಾಯಕ । ಶ್ರೀಮ ಕೊಡುವುದೋ ಅಲ್ಲವೋದರ ॥೧॥ ಯಮುನೆಯಾ ರುಷಾ ಸರ್ಪದಾ ಭಯ । ವೃಷಭನಾ ಭಯ ರಾಕ್ಷಸಾ ಭಯ। ಏಳು ದಿವಸದ ಮಳೆಗಳಾ ಭಯ । ಗೆದ್ದೆವೋ ಹರೀ ನಿಮ್ಮ ಪರಿಯಲಿ ॥ ೨॥ ದರ್ಶನ ಮಾತ್ರದಿ ಪಾಪನಾಶನ । ಪದ್ಮಜಾರ್ಚಿತೋ ಧರಣಿಮಂಡಲ । ಅತ್ತೆ ಮಾವನಾ ಮಾತು ಕೇಳದೆ । ಚಿತ್ತಭ್ರಮೆಯಲಿ ಇತ್ತ ಬಂದೆವೋ ॥೩॥ ಬಂದೆವಲ್ಲದೇ ಕೃಷ್ಣ ವಿರಹದಿ । ಮಂದ ಮಾರುತ ಗಾಳಿ ಬೀಸಲು । ಕೃಷ್ಣ ಬಂದನೇ ಫಲವ ತಂದನೇ । ಸಖಿಯರೆಲ್ಲರೂ ಸಂತುಷ್ಟಪಟ್ಟರು ॥ ೪॥ ಪೀತಾಂಬ್ರಧಾರಿಯ ದಿವ್ಯಮಾಲಿಕೆ । ಕೃಷ್ಣರಾಯರ ಕೊರಳಿಗ್ಹಾಕಲು । ಇದು ಭಾಗವತವೆನ್ನಿ । ಇದು ಗೋಪಿಕಾಗೀತ ಇದು ಹೇಳಿ ಕೇಳಿದಂತಹ । ಸಜ್ಜನರಿಗೆ ಹಯವದನನು । ಮುಕ್ತಿಕೊಡುವನು ॥೫ ॥

**೨)** ಉದಯಕಾಲದೋಳ್ ಎದ್ದು ಗೋಪಿಯು । ದಧಿಯ ಮಥಿಸುವ ಎಂಬ ಸಮಯದಿ । ಉದರಗಣ್ಣನು ಎದ್ದು ತೊಟ್ಟಿಲೋಳ್ । ತೊದಲು ನುಡಿಗಳಿಂ ಕರೆದ ತಾಯಿಯ ॥ ೧॥ ನುಡಿಯ ಲಾಲಿಸಿ ನಳಿನ ನೇತ್ರನು । ಕರೆದ ಹಾಲನು ಕೊಡುವೆನೆಂದರೆ। ಕೊಡುವೆನೆಂದರೆ

ಕಣ್ಣಮುಚ್ಚನು । ಒಡನೆ ಮಲಗುವ ಮಲಗದೇಳುವ ॥ ೨॥ ನಿದ್ರೆ ತೀರದೆ ನೀ ಎದ್ದ ಕಾರಣ। ಬುದ್ಧಿ ಸಾಲದು ಮುದ್ದು ಮಗುವಿಗೆ । ಒದ್ದು ಕೆಲಸವಾ ತಿದ್ದಿ ಉನ್ಮತ । ಅಮ್ಮ ಬಾರಲೆ ಎನ್ನಗಲಬೇಡವೆ ॥ ೩॥ ಗುಮ್ಮ ಬರುತದೆ ಗುಸುಗುಸೆನುತದೆ। ಶ್ರೀದವಿಠಲನಾ ಶ್ರೀಲತಾಂಗಿಯೂ। ಮೋದಪಡಿಸುವಾ ಮಾನುನೀಯಳೇ । ವೇದಗೋಚರ ನೀ ಏಳಬೇಡವೋ। ಪಾದಕೆರಗುವೆ ಪವಡಿಸೆಂದಳು ॥ ೪॥

೩) ಶ್ರೀಲತಾಂಗಿರ ರಮಾಕೃಷ್ಣನು । ಬಾಲಲೀಲೆಯ ಜಗಕೆ ತೋರುತ ॥ ೧॥ ಆಡಿ ಪಾಡುತ ಕೂಡಿ ರಮಿಸುತ । ಗಾಡಿಕಾರನು ಅವಳ ಹೆಗಲನೇರಿಸಿ ॥೨॥ ಅಗರು ಕಸ್ತೂರೀ ಪೂಸಿ ಹೃದಯಕೇ । ಮೊಗರು ಕುಚಗಳ ಮುಖದ ಕಮಲವು ॥ ೩॥ ತಾನೆ ಸುಂದರೀ ಎಂದು ಗರ್ವಿಸೆ । ದೀನನಾಥನು ಅದೃಶ್ಯನಾದನು ॥ ೪॥ ಎತ್ತ ಪೋದನೋ ರಂಗ ಎನುತಲಿ । ಚಿತ್ತ ಭ್ರಮೆಯಲಿ ಹುಡುಕುತಿದ್ದರು ॥ ೫॥ ಎಲ್ಲಿ ಪೋದನೋ ಕೃಷ್ಣ ಎನುತಲಿ । ಮತ್ತೆ ಸಖಿಯರೂ ಹುಡುಕುತಿದ್ದರು ॥೬॥ ಸುತ್ತ ಗೋಕುಲಾದೊಳಗೆ ಸ್ತ್ರೀಯರೂ । ಮತ್ತೆ ಕೃಷ್ಣನ ಪಾದ ಕಾಣದೇ ॥ ೭॥ ಗಿಳಿಯು ಕೋಗಿಲೇ ಹಂಸ ಭೃಂಗವೇ। ನಳಿನ ನಾಭನ ಸುಳಿಪು ಕಂಡಿರಾ ॥ ೮॥ ಕಂದ ಮೂಲವೇ ಜಾಜಿ ವೃಕ್ಷವೇ । ಇಂದಿರೇಶನ ಸುಳಿವು ಕಂಡಿರಾ ॥ ೯॥ ಇಂದಿರೇಶನು ನಮ್ಮನ್ ವಂಚಿಸೀ । ಮಂದಭಾಗ್ಯರ ಮಾಡಿ ಪೋದನು॥೧೦॥ ಶ್ರುತಿಗೆ ಸಿಲುಕದ ದೋಷದೂರನೇ । ವ್ರತವ ಕೆಡಿಸಿದಿ ಎಲ್ಲಿಗ್ಹೋಗೋಣ ॥೧೧॥ ಇಷ್ಟು ಪರಿಯಲಿ ಸ್ತೋತ್ರ ಮಾಡಲು । ರಂಗರಾಯನು ಬಂದು ಸೇರಿದ ॥ ೧೨॥ ಬಹಳ ಪರಿಯಲಿ ಸ್ತೋತ್ರ ಮಾಡಲು । ಕೃಷ್ಣರಾಯನು ಬಂದು ಸೇರಿದ ॥ ೧೩॥ ಮದನನಯ್ಯನಾ ಮುದದಿ ನೆನೆದರೆ । ನದಿಯ ತೀರದಿ ವಿಜಯವಿಠ್ಠಲ ॥ ೧೪॥ ನದಿಯ ತೀರದ ತೀರ್ಥಪಾದನು । ಸಲಹಿ ಭಕುತರ ಪಾಲಿಸೂವನು ॥ ೧೫॥

*****

## ಶ್ರೀಮದ್ವಾದಿರಾಜಯತಿವಿರಚಿತಂ

## ಶ್ರೀಕೃಷ್ಣಾಷ್ಟಕಂ

ಪಾಲಯಾಚ್ಯುತ ಪಾಲಯಾಜಿತ ಪಾಲಯ ಕಮಲಾಲಯ । ಲೀಲಯಾ ಧೃತಭೂಧರಾಂಬುರುಹೋದರ ಸ್ವಜನೋದರ ॥ ಧ್ರುವ ॥ ಮಧ್ವಮಾನಸ ಪದ್ಮಭಾನುಸಮಂ ಸ್ಮರಪ್ರತಿಮಂ ಸ್ಮರ । ಸ್ನಿಗ್ಧನಿರ್ಮಲಶೀತಕಾಂತಿಲಸನ್ಮುಖಂ ಕರುಣೋನ್ಮುಖಂ ॥ ಹೃದ್ಯಕಂಬುಸಮಾನಕಂಧರಮಕ್ಷಯಂ ದುರಿತಕ್ಷಯಂ । ಸ್ನಿಗ್ಧಸಂಸ್ತುತ ರೂಪ್ಯಪೀಠಕೃತಾಲಯಂ ಹರಿಮಾಲಯಂ ॥ ೧॥ ಅಂಗದಾದಿ ಸುಶೋಭಿಪಾಣಿಯುಗೇನ ಸಂಕ್ಷುಭಿತೈನಸಂ । ತುಂಗಮಾಲ್ಯ ಮಣೀಂದ್ರ ಹಾರಸರೋರಸಂ ಖಲನೀರಸಂ॥ ಮಂಗಲಪ್ರದಮಂಥದಾಮವಿರಾಜಿತಂ ಭಜತಾಜಿತಂ । ತಂ ಗೃಣೇ ವರರೂಪ್ಯಪೀಠಕೃತಾಲಯಂ ಹರಿಮಾಲಯಂ ॥೨॥ ಪೀನರಮ್ಯತನೂದರಂ ಭಜ ಹೇ ಮನಃ ಶುಭ ಹೇ ಮನಃ । ಸ್ವಾನುಭಾವನಿದರ್ಶನಾಯ ದಿಶಂತಮರ್ಥ್ಯಸುಶಂತಮಂ ॥ ಆನತೋಽಸ್ಮಿ ನಿಜಾರ್ಜುನಪ್ರಿಯಸಾಧಕಂ ಖಲಬಾಧಕಂ । ಹೀನತೋಜ್ಝಿತ ರೂಪ್ಯಪೀಠಕೃತಾಲಯಂ ಹರಿಮಾಲಯಂ॥೩॥ ಹೈಮಕಿಂಕಿಣಿ-ಮಾಲಿಕಾರಶನಾಂಚಿತಂ ತಮವಂಚಿತಂ । ಕಮ್ರಕಾಂಚನವಸ್ತ್ರಚಿತ್ರಕಟಿಂ ಘನಪ್ರಭಯಾ ಘನಂ॥

ನವ್ಯನಾಗಕರೋಪಮೋರುಮನಾಮಯಂ ಶುಭಧೀಮಯಂ । ಸೌಮ್ಯಹಂ ವರರೂಪ್ಯಪೀಠಕೃತಾಲಯಂ ಹರಿಮಾಲಯಂ ॥ ೪॥ ವೃತ್ತಜಾನುಮನೋಜ್ಞ ಜಂಘಮ ಮೋಹದಂ ಪರಮೋಹದಂ । ರತ್ನಕಲ್ಪನಖತ್ವಿಷಾ ಹೃತಹೃತ್ತಮಸ್ತತಿಮುತ್ತಮಂ । ಪ್ರತ್ಯಹಂ ರಚಿತಾರ್ಚನಂ ರಮಯಾ ಸ್ವಯಾಽಽಗತಯಾ ಸ್ವಯಂ । ಚಿತ್ತ ಚಿಂತಯ ರೂಪ್ಯಪೀಠ ಕೃತಾಲಯಂ ಹರಿಮಾಲಯಂ॥೫॥ ಚಾರುಪಾದಸರೋಜಯುಗ್ಮರುಚಾಮರೋಚ್ಚಯ ಚಾಮರೋ -। ದಾರಮೂರ್ಧಜ ಭಾರಮಂಡಲರಂಜಕಂ ಕಲಿಭಂಜಕಂ ॥ ವೀರತೋಚಿತ ಭೂಷಣಂ ವರನೂಪುರಂ ಸ್ವತನೂಪುರಂ । ಧಾರಯಾತ್ಮನಿ ರೂಪ್ಯಪೀಠ ಕೃತಾಲಯಂ ಹರಿಮಾಲಯಂ ॥೬॥ ಶುಷ್ಕವಾದಿಮನೋಽತಿದೂರ- ತರಾಗವೋತ್ಸವದಾಗಮಂ। ಸತ್ಕವೀಂದ್ರವಚೋವಿಲಾಸಮಹೋದಯಂ ಮಹಿತೋದಯಂ॥ ಲಕ್ಷಯಾಮಿ ಯತೀಶ್ವರೈಃ ಕೃತಪೂಜನಂ ಗುಣಭಾಜನಂ । ಧಿಕ್ಕೃತೋಪಮರೂಪ್ಯಪೀಠ- ಕೃತಾಲಯಂ ಹರಿಮಾಲಯಂ ॥ ೭॥ ನಾರದಪ್ರಿಯಮಾವಿಶಾಂಬುರುಹೇಕ್ಷಣಂ ನಿಜರಕ್ಷಣಂ। ತಾರಕೋಪಮಚಾರುದೀಪಚ- ಯಾಂತರೇ ಗತಚಿಂತರೇ ॥ ಧೀರಮಾನಸ ಪೂರ್ಣಚಂದ್ರಸಮಾನಮಚ್ಯುತಮಾನಮ। ದ್ವಾರಕೋಪಮರೂಪ್ಯಪೀಠಕೃತಾಲಯಂ ಹರಿಮಾಲಯಂ ॥೮॥ ರೂಪ್ಯಪೀಠಕೃತಾಲಯಸ್ಯ ಹರೇಃ ಪ್ರಿಯಂ ದುರಿತಾಪ್ರಿಯಂ । ತತ್ಪದಾರ್ಚಕವಾದಿರಾಜಯತೀರಿತಂ ಗುಣಪೂರಿತಂ ॥ ಗೋಪ್ಯಮಷ್ಟಕಮೇತದುಚ್ಚಮುದೇ ಮಮಾಸ್ತ್ವಿಹ ನಿರ್ಮಮ । ಪ್ರಾಪ್ಯ ಶುದ್ಧಫಲಾಯ ತತ್ರ ಸುಕೋಮಲಂ ಹೃತಧೀಮಲಂ॥೯॥

**॥ಇತಿ ಶ್ರೀ ಮದ್ವಾದಿರಾಜಪೂಜ್ಯಚರಣ ವಿರಚಿತಂ**
**ಶ್ರೀಕೃಷ್ಣಾಷ್ಟಕಸ್ತೋತ್ರಂ ಸಂಪೂರ್ಣಂ॥**

೧. ಧ್ಯಾನವು ಕೃತಯುಗದಿ ಯಜನ। ಯಜ್ಞವು ತ್ರೇತಾಯುಗದಿ। ದಾನವಾಂತಕನ ದೇವತಾರ್ಚನೆಯು ದ್ವಾಪರಯುಗದಿ। ಆ ಮಾನವರಿಗೆಷ್ಟು ಫಲವೋ ಅಷ್ಟು ಫಲವು। ಕಲಿಯುಗದಿ ಗಾನದಲಿ ಕೇಶವ ಎನಲು। ಕೈಗೊಡುವನು ಶ್ರೀರಂಗವಿಠ್ಠಲ॥

೨. ಕಲಿಕಾಲಕೆ ಸಮಯುಗವಿಲ್ಲವಯ್ಯ । ಕಲುಷ ಹರಿಸಿ ಕೈವಲ್ಯವೀವುದಯ್ಯ। ಸಲೆ ನಾಮಕೀರ್ತನೆ ಸ್ಮರಣೆ ಸಾಕಯ್ಯ। ಸ್ಮರಿಸಲು ಸಾಯುಜ್ಯ ಪದವೀವುದಯ್ಯ। ಬಲವಂತ ಶ್ರೀರಂಗವಿಠಲನ ನೆನೆದರೆ । ಕಲಿಯುಗವೇ ಕೃತಯುಗವಾಗುವುದಯ್ಯ॥

# ಭಾಗ ೨

## ೧) ಶ್ರೀವಾದಿರಾಜತೀರ್ಥ ವಿರಚಿತ ಸುಂದರಕಾಂಡ

ರಾಗ : ಆನಂದ ಭೈರವಿ ಆಟ ತಾಳ

ಎಷ್ಟು ಸಾಹಸವಂತ ನೀನೇ ಬಲವಂತ । ಇಷ್ಟದಾಯಕ ಭಳಿಭಳಿರೆ ಹನುಮಂತ॥ ಅಟ್ಟುತ ಖಳರನು ಮೆಟ್ಟಿ ಸೀಳುತಲಿ । ಕುಟ್ಟಿ ಕೊಂಡಾಡುತ ಧಿಟ್ಟ ನೀನಹುದೊ ॥ ಪಲ್ಲ॥ ರಾಮರಪ್ಪಣೆಯಿಂದ ಶರಧಿಯ ದಾಟಿ । ಆ ಮಹಾ ಅಸುರೆಯ ಸೀಳಿ ಬಿಸಾಟಿ ॥ ಸ್ವಾಮಿ ಕಾರ್ಯವನುಕೂಲದಿ ಯೋಚಿಸಿ । ಪ್ರೇಮದಿ ನಡೆದನು ಆರೆಲೆಸಾಟಿ ॥ ೧ ॥ ದೂರದಿಂದ ಅಸುರನ ಪುರವನ್ನೆ ನೋಡಿ । ಮನದಿ ಶ್ರೀರಾಮರ ಸ್ಮರಣೆಯ ಮಾಡಿ ॥ ಹಾರುತ ಹರುಷದಿ ವರಿಸಿ ಲಂಕಿಣಿಯನು । ವಾರಿಜ ಮುಖಿಯಳ ಕಂಡು ಮಾತಾಡಿ ॥೨॥ ರಾಮರ ಕ್ಷೇಮವ ರಮಣಿಗೆ ಹೇಳಿ । ತಾಮಸ ಮಾಡದೆ ಮುದ್ರಿಕೆಯ ನೀಡಿ ॥ ಭೂಮಿಜೆ ಜಾನಕಿ ಕುರುಹು ನೀಡಲಾಗ । ಆ ಮಹಾ ವನದೊಳು ಫಲಗಳ ಬೇಡಿ ॥ ೩॥ ಕಣ್ಣಿಗೆ ಬೇಕಾದ ಹಣ್ಣನ್ನು ಸವಿದ್ಯೊ । ಹಣ್ಣಿನ ನೆವದಲಿ ಅಸುರರ ಬಡಿದ್ಯೊ ॥ ಟಣ್ಣನೆ ಟಣ್ಣನೆ ಹಾರಿ ನೆಗೆದಾಡುತ । ಬಣ್ಣಿಸಿ ಅಸುರರ ಬಲವನು ಮುರಿದ್ಯೊ ॥ ೪ ॥ ಶೃಂಗಾರ ವನದಲಿ ಇದ್ದ ರಾಕ್ಷಸರ । ಲಿಂಗವಳಿಸಿದ್ಯೊ ಅತಿಶಯಶೂರಾ ॥ ನುಂಗಿ ಅಸ್ತ್ರವನು ಅಕ್ಷಯ ಕುವರನು । ಭಂಗಿಸಿ ಬಿಸುಟಿದ್ಯೊ ಬಂದ ರಕ್ಕಸರಾ ॥ ೫ ॥ ದೂರ ಪೇಳುವರೆಲ್ಲಾ ರಾವಣನೊಡನೆ । ಚೀರುತ ಕರೆಸಿದ ಇಂದ್ರಜಿತುವನ್ನೆ ॥ ಚೋರ ಕಪಿಯನು ಹಿಡಿದು ತಾ ಎನ್ನುತ । ಶೂರರ ಕಳಿಸಿದ ನಿಜಸುತರೊಡನೆ ॥ ೬॥ ಹಿಡಿದನು ಇಂದ್ರಜಿತನು ಕಡುಕೋಪದಿಂದ । ಹೆಡಮುರಿಗೆ ಕಟ್ಟಿದ ಬ್ರಹ್ಮಾಸ್ತ್ರದಿಂದ ॥ ಗುಡುಗುಡುಗುಡುತ ಕಿಡಿಕಿಡಿ ಕಾರುತ । ನಡೆದನು ಲಂಕೆಯ ಅರಸನಿದ್ದೆಡೆಗೆ ॥ ೭ ॥ ಕಂಡ ರಾವಣನು ಉದ್ದಂಡ ಕಪಿಯನ್ನು । ಮಂಡೆಯ ತೂಗುತ ಮಾತನಾಡಿಸಿದ ॥ ಭಂಡ ಮಾಡುವೆನು ಬಿಡು ಸುಡು ಕಪಿಯನ್ನು । ಕಂಡು ದುರದುರನೆ ನೋಡಿದನಾಗ ॥ ೮ ॥ ಛಲವ್ಯಾಕೋ ನಿನಗಿಷ್ಟು ಎಲೆ ಕೋಡಗನೆ । ನೆಲೆಯಾವುದ್ಹೇಳೋ ನಿನ್ನೊಡೆಯನ ಹೆಸರನ್ನೆ ॥ ಬಲವಂತರಾಮರ ಬಂಟ ಬಂದಿಹೆನೋ । ಹಲವು ಮಾತ್ಯಾಕೋ ಹನುಮನೆ ನಾನು ॥ ೯ ॥ ಬಡರಾವಣ ನಿನ್ನ ಬಡಿದು ಹಾಕುವೆನು । ಎನ್ನೊಡೆಯನಪ್ಪಣೆಯಿಲ್ಲೆಂದು ತಾಳಿದೆನು ॥ ಪುಡಿ ಮಾಡುವೆನು ಪುಲ್ಲರಕ್ಕಸನೆ । ತೊಡೆವೆನೊ ನಿನ್ನ ಪಣೆ ಅಕ್ಷರವಾ ॥ ೧೦ ॥ ನಿನ್ನಂಥ ದೂತರು ರಾಮರ ಬಳಿಗೆ । ಇನ್ನೆಷ್ಟು ಮಂದಿ ಉಂಟು ಹೇಳೋ ನೀ ತ್ವರಿಯಾ ॥ ನನ್ನಂಥ ದೂತರು ನಿನ್ನಂಥ ಪ್ರೇತರು । ಇನ್ನೂರು ಮುನ್ನೂರು ಕೋಟಿ ಕೇಳರಿಯಾ ॥ ೧೧ ॥ ಕಡುಕೋಪದಿಂದಲಿ ಖೂಳ ರಾವಣನು । ಸುಡಿ ಸುಡಿ ಬಾಲವ ಸುತ್ತಿ ವಸನವನು ॥ ಒಡೆಯನ ಮಾತಿಗೆ ಗಡಿಬಿಡಿಯಿಲ್ಲದೆ । ಒಡನೆ ಮುತ್ತಿದರು ಗರಡಿಮನೆಯವರು ॥ ೧೨ ॥ ತಂದರು ವಸನವ ತಂಡ ತಂಡದಲೆ । ಒಂದೊಂದು ಮೂಟೆಯು ಎಂಭತ್ತು ಕೋಟಿ ॥ ಚಂದದಿ ಹರಳಿನ ತೈಲದೊಳದ್ದಿಸಿ । ನಿಂದ ಹನುಮನು ಬಾಲವ ಬೆಳೆಸುತ ॥ ೧೩॥ ಶಾಲು ಶಕಲಾತಿಯು ಸಾಲದೆ ಇರಲು । ಬಾಲೆಯ ವಸ್ತ್ರವ ಸೆಳೆದು ತಾರೆನಲು ॥ ಬಾಲವ ನಿಲ್ಲಿಸೆ ಬೆಂಕಿಯನಿಡುತಲೆ। ಕಾಲ ಮೃತ್ಯುವಿನ ಕೆಣಕಿದರಲ್ಲೆ ॥ ೧೪ ॥ ಕುಣಿಕುಣಿದಾಡುತ್ತ ಕೂಗಿ ಬೊಬ್ಬಿಡುತ । ಇಣಕಿಣಕಿ

ನೋಡುತ ಅಸುರರಣಕಿಸುತ ॥ ಝಣ ಝಣ ಝಣರೆನೆನ್ನುತ ಬಾಲದ ಗಂಟೆಯು । ಮನದಿ ಶ್ರೀರಾಮರ ಪಾದವ ನೆನೆಯುತ ॥ ೧೫ ॥ ಮಂಗಳಂ ಶ್ರೀರಾಮಚಂದ್ರ ಮೂರುತಿಗೆ । ಮಂಗಳಂ ಭೂಪತಿ ಚರಣಂಗಳಿಗೆ ॥ ಮಂಗಳವೆನುತ ಲಂಕೆಯ ಸುಟ್ಟು । ಭಂಗಿಸಿ ಅಸುರನ ಗಡ್ಡಕೆ ಹಿಡಿದ ॥ ೧೬॥ ಹತ್ತಿತು ಅಸುರನ ಗಡ್ಡ ಮೀಸೆಗಳು । ಸುತ್ತಿತು ಹೊಗೆಯು ಬ್ರಹ್ಮಾಂಡ ಕೋಟಿಯೊಳು ॥ ಚಿತ್ತದಿ ರಾಮರು ಕೋಪಿಸುವರೆಂದು । ಚಿತ್ರದಿ ನಡೆದನು ಅರಸನಿದ್ದೆಡೆಗೆ ॥೧೭॥ ಸೀತೆಯ ಕ್ಷೇಮವ ಶ್ರೀರಾಮಗ್ಹೇಳಿ । ಪ್ರೀತಿಯಿಂದ ಕೊಟ್ಟ ಕುರುಹ ಕರದಲ್ಲಿ ॥ ಸೇತುವೆಗಟ್ಟಿ ಚದುರಂಗ ಮಾರ್ಬಲ । ಮುತ್ತಿತು ಲಂಕೆಯ ಸೂರೆ ಗೈಯುತಲಿ ॥೧೮॥ ವೆಗ್ಗಳವಾಯಿತು ರಾಮರದಂಡು । ಮುತ್ತಿತು ಲಂಕೆಯ ಕೋಟೆಯ ಕಂಡು ॥ ಹೆಗ್ಗದ ಕಾಯ್ವರ ನುಗ್ಗು ಮಾಡುತಿರೆ । ಝಗ್ಗನೆ ಪೇಳ್ದರು ರಾವಣಗಂದು ॥ ೧೯॥ ರಾವಣ ಮೊದಲಾದ ರಾಕ್ಷಸರ ಕೊಂದು । ಭಾವಶುದ್ಧದಿ ವಿಭೀಷಣಗೆ ಬಾಳೆಂದು ॥ ದೇವಿ ಸೀತೆಯರನೊಡಗೊಂಡ ಅಯೋಧ್ಯದಿ । ದೇವ ಶ್ರೀರಾಮರು ರಾಜ್ಯವಾಳಿದರು॥೨೦॥ ಶಂಖ ದೈತ್ಯನ ಕೊಂದೆ ಶರಣು ಶರಣಯ್ಯ । ಶಂಖಗಿರಿಯಲಿ ನಿಂತ ಹನುಮಂತರಾಯ ॥ ಪಂಕಜಾಕ್ಷ ಶ್ರೀಹಯವದನನ ಕಟಾಕ್ಷದಿ । ಬಿಂಕದಿ ಪಡೆದೆಯೊ ಅಜನ ಪದವಿಯನ ॥೨೧॥

॥ ಶ್ರೀ ಗುರುಮಧ್ವೇಶಾರ್ಪಣ ಮಸ್ತು ॥

*****

## ೨) ಶ್ರೀ ಪ್ರಸನ್ನ ಶ್ರೀನಿವಾಸದಾಸ ಕೃತ ಸುಂದರಕಾಂಡ

## (ಶ್ರೀರಾಮ ಚರಿತಾಮೃತ )

ಜಯ ಜಯ ಜಯ ರಾಮಚಂದ್ರ । ಜಯ ರಾಮ ಭದ್ರ ಸರ್ವೇಶ । ಜಯ ಜಯ ಜಯ ರಾಮ ಸ್ವರತ । ಆಹ । ಜಯ ಸೀತಾರಮಣ ನೀ ಭಯಬಂಧ ಮೋಚಕ । ಜಲಜ ಸಂಭವ ಮುಖ ಸುರಸೇವ್ಯ ನಮೋ ನಮೋ ಜಯ ॥ ಪ॥ ಶಾಶ್ವತ ಸುಗುಣಾಬ್ಧಿ ರಾಮ । ಸರ್ವೇಶ್ವರನೆ ಬಲವೀರ್ಯ । ಸಂಪೂರ್ಣಾರ್ಣವ ನಿನ್ನ ನಮಿಸಿ । ಆಹ । ಶೀಘ್ರ ಆ ಗಿರಿಯೊತ್ತಿ ಹನುಮ ಹಾರಲು ಆಗ । ಸಾಗರ ಸರ್ವವೂ ಕಲಕಿ ಓಡಿತು ಕೂಡ ॥ ಜಯ ॥ ೧॥ ಹಿಂದೆ ಪರ್ವತಗಳ ಪಕ್ಷ । ಹನನ ಕಾಲದಿ ವಾಯು ತನ್ನ । ಹಿತದಿ ರಕ್ಷಿಸಿದನು ಎಂದು । ಆಹ । ಹಿಮಗಿರಿಸುತ ಮೈನಾಕನು ಮೇಲೆ ಬಂದಾಗ । ಹನುಮಗೆ ನಮಿಸಿ ವಿಶ್ರಮಿಸಿಕೊಳ್ಳೆಂದ ॥ ಜಯ ॥ ೨॥ ಶ್ರಮರಹಿತನು ಎಂದೂ ಹನುಮ । ಶ್ರಮ ನಿವಾರಣ ಅನಪೇಕ್ಷ । ಆಶ್ಲೇಷಿಸಿ ನಗವರನ । ಆಹ । ನಿಸ್ಸೀಮ ಪೌರುಷ ಬಲಯುತ ಹನುಮನು । ನಿಲ್ಲದೆ ಮುಂದೆ ತಾ ಸುರಸೆಯೊಳ್ ಹೊಕ್ ಹೊರಟ ॥ ಜಯ॥ ೩॥ ಪವನಜನ ನಿಜ ಬಲವ । ಪರೀಕ್ಷಿಸೆ ಸುರಸೆಯ ಸುರರು । ಪ್ರೇರಿಸಿ ವರವನ್ನು ಕೊಡಲು। ಆಹ । ಫಣಿಗಳ ತಾಯಿ ಅವಳು ಬಾಯಿ ತೆರೆಯಲು। ಪೊಕ್ಕು ಲೀಲೆಯಿಂ ಹನುಮ ಹೊರ ಹೊರಟ ॥ ಜಯ ॥ ೪॥ ಸುರರು ಆನಂದದಿ ಆಗ । ಸ್ತುತಿಸಿ ಹನುಮನ ಕೊಂಡಾಡಿ। ಸುರಿಯಲು ಪುಷ್ಪದ ಮಳೆಯ । ಆಹ । ಶೀಘ್ರ ಪವನಜನು ಮುಂದೆ ತಾ ಹೋಗುತ್ತ । ಸಿಂಹಿಕಾ ರಾಕ್ಷಸಿ ಛಾಯಾ ಗ್ರಹವ ಕಂಡ ॥ ಜಯ ॥ ೫॥ ಸರಸಿಜಾಸನ ವರ ಬಲದಿ । ಸಿಂಹಿಕಾ ಲಂಕಾ ಪೋಗುವರ । ಸೆಳೆದು ತಾ ನಿಗ್ರಹಿಸುವಳು। ಆಹ।

ಸೆಳೆಯೆ ಆ ರಾಕ್ಷಸಿ ಹನುಮನ ಛಾಯೆಯ । ಸೀಳಿದ ಹನುಮ ಅವಳ ಶರೀರದಿ ಪೊಕ್ಕು ॥ ಜಯ ॥ ೬॥ ತನ್ನನಿಸ್ಸೀಮ ಬಲವನು । ತೋರಿಸಿ ಈ ರೀತಿ ಹನುಮ । ಧುಮುಕಿದ ಲಂಬ ಪರ್ವತದಿ । ಆಹ । ತೋರ್ಪುದು ಲಂಕಾ ಪ್ರಕಾರದೊಳ್ ಈ ಗಿರಿ । ತನ್ನ ರೂಪವ ಸಣ್ಣ ಹನುಮ ಮಾಡಿದನಾಗ ॥ ಜಯ ॥ ೭॥ ಆಗಿ ಬಿಡಾಲದೊಲ್ ಸಣ್ಣ । ಅಸಿತ ಕಾಲದಿ ಪೋಗೆ ಪುರಿಗೆ। ಅಲ್ಲಿದ್ದ ಲಂಕಿಣಿ ತಡೆಯೇ । ಆಹ । ಅವಳ ಹನುಮ ಮುಷ್ಟಿಯಿಂದ ಕುಟ್ಟಿ ಜಯಿಸಿ। ಅನುಮತಿಯಿಂದಲ್ಲೆ ಲಂಕೆಯೊಳ್ ಪೋದ ॥ ಜಯ ॥ ೮॥ ಶೀಘ್ರ ಅಶೋಕ ವನದಲಿ । ಶಿಂಶುಪಾವೃಕ್ಷಮೂಲದಲಿ । ಸೀತಾ ಆಕೃತಿಯನು ಕಂಡ । ಆಹ । ಸೀತೆಗೆ ಏನೇನು ಭೂಷಣ ಉಂಟೋ । ಸೀತಾ ಆಕೃತಿಗೂ ಸಹ ಅದರವೊಲಿತ್ತು ॥ ಜಯ ॥ ೯॥ ಅವನಿಯೊಳು ನಿನ್ನ ವಿಡಂಬ । ಅರಿತು ಅನುಸರಿಸಿ ಹನುಮ । ಅದರಂತೆ ಚರಿಪಂಥಾವಳಿಗೆ । ಆಹ । ಅವಶ್ಯ ಮಾತುಗಳಾಡಿ ಅಂಗುಲೀಯಕವೀಯೆ । ಆಕೆ ಚೂಡಾಮಣಿ ನಿನಗೆಂದು ಕೊಟ್ಟಳು ॥ ಜಯ ॥ ೧೦॥ ಅರಿಯರು ರಾಕ್ಷಸರಿದನು । ಅಮರರು ಕಲಿಮುಖರೆಲ್ಲ । ಅವಲೋಕಿಸಿದರು ಈ ಕಾರ್ಯ । ಆಹ । ಅಮರರು ಲೋಕವಿಡಂಬವಿದೆಂದರಿಯೆ । ಅಧಮ ಕಲ್ಯಾದಿಗಳ್ ಮೋಹಿತರಾದರು ॥ ಜಯ ॥ ೧೧॥ ಕೃತಕೃತ್ಯನಾಗಿ ತಾ ಹನುಮ । ಕೋವಿದೋತ್ತಮ ಬಲವಂತ। ಕಾಣಿಸಿಕೊಳ್ಳುವ ಮನದಿ । ಆಹ । ಕಿಂಚಿತ್ತು ಭಯವೇನೂ ಇಲ್ಲದೆ ವನವನು । ಕಡಿದು ಧ್ವಂಸವ ಗೈದ ಆ ಶಿಂಶುಪವ ಬಿಟ್ಟು ॥ ಜಯ ॥ ೧೨॥ ಕುಜನ ರಾಕ್ಷಸರನು ಕೊಲ್ಲೆ । ಕೂಗಿ ಆರ್ಭಟಮಾಡೆ ಹನುಮ। ಕೇಳಿ ಚೇಷ್ಟೆಗಳ ರಾವಣನು । ಆಹ । ಕಪ್ಪು ಕಂಠನ ವರ ಆಯುಧಯುತರು । ಕೋಟಿ ಎಂಬತ್ತರ ಮೇಲ್ ಭೃತ್ಯರ ಕಳುಹಿದ ॥ ಜಯ॥ ೧೩॥ ಆರ್ಭಟದಿಂದ ಘೋಷಿಸುತ । ಅವರು ಆವರಿಸಿ ಹನುಮನ । ಆಯುಧಗಳ ಪ್ರಯೋಗಿಸಲು। ಆಹ । ಅತಿ ಬಲಯುತ ಪವನಜ ಮುಷ್ಟಿ ಪ್ರಹರದಿ । ಆ ವೀರರೆಲ್ಲರ ಹಿಟ್ಟು ಮಾಡಿದ ಬೇಗ ॥ ಜಯ ॥ ೧೪॥ ಕಡುಕೋಪದಿಂದ ರಾವಣನು । ಕಳುಹಿದನು ಏಳು ಮಂತ್ರಿ । ಕುವರರ ವರ ಬಲಯುತರ । ಆಹ । ಖಳರು ಈ ಏಳ್ವರ ಮೆಟ್ಟಿ ಪಿಷ್ಟವ ಮಾಡೆ । ಕುಮತಿ ರಾಕ್ಷಸ ಸೈನ್ಯ ತೃತಿಯ ಭಾಗವು ಹೋಯ್ತು ॥ ಜಯ ॥ ೧೫॥ ಅನುಪಮ ಬಲಕಾರ್ಯ ಕೇಳಿ । ಅಧಮ ರಾವಣ ತನ್ನ ಸುತನ । ಅಕ್ಷನ ಕಳುಹಲು ಹನುಮ । ಆಹ। ಅಕ್ಷನ ಚಕ್ರಾಕಾರದಿ ಎತ್ತಿ ಸುತ್ತಾಡಿ । ಅವನ ಅಪ್ಪಳಿಸಿ ನೆಲದಿ ಚೂರ್ಣ ಮಾಡಿದ ॥ ಜಯ ॥ ೧೬॥ ಅತಿ ದುಃಖದಿಂದ ರಾವಣನು । ಅಕ್ಷನಗ್ರಜ ಇಂದ್ರಜಿತನ । ಅಜಿತ ಹನುಮನಲಿ ಕಳುಹೆ । ಆಹ । ಇಂದ್ರಜಿತನ ಅಸ್ತ್ರಗಳ ವ್ಯರ್ಥಮಾಡಿ ತಾ । ಒಡಂಪಟ್ಟ ಸ್ವೇಚ್ಛದಿ ಹನುಮ ಬ್ರಹ್ಮಾಸ್ತ್ರಕೆ ॥ ಜಯ ॥ ೧೭॥ ರಾವಣನಲಿ ಕೊಂಡು ಪೋಗೆ । ರಾವಣ ಪ್ರಶ್ನೆಯ ಮಾಡೆ । ರಾಮಗೆ ನಮಿಸಿ ಹನುಮನು । ಆಹ । ರಘುವರ ರಾಮ ದುರಂತ ವಿಕ್ರಮ ಹರಿ। ರಾಕ್ಷಸಾಂತಕ ದೂತ ಮಾರುತಿ ತಾನೆಂದ ॥ ಜಯ ॥ ೧೮॥ ರಘುವರ ಪ್ರಿಯೆಯನು ಬೇಗ । ರಾಮಗರ್ಪಿಸಲೊಲ್ಲೆ ಎನ್ನೆ । ರಾಮ ಪ್ರಕೋಪದಿ ಅವನ । ಆಹ। ರಾಜ್ಯ ಮಿತ್ರ ಪುತ್ರ ಬಂಧು ಸರ್ವನಾಶ । ರಾಘವ ಮಾಡುವನೆಂದು ಪೇಳಿದನು ॥ ಜಯ ॥ ೧೯॥ ಅಜ ಶಿವ ಮೊದಲಾದ ಸರ್ವ । ಅಮರೇಶ್ವರರು ತಾವು ತಡಿಯೆ। ಅಶಕ್ತರು ರಾಮಬಾಣವನು । ಆಹ । ಅಂಥ ಬಾಣವ ಅಲ್ಪಶಕ್ತ ರಾವಣ ತಾಳೆ । ಅಸಮರ್ಥನೆಂದ ಪ್ರಭಂಜನ ಸುತನು ॥ ಜಯ ॥ ೨೦॥ ಪ್ರಭಂಜನ ಸುತಮಾತು ಕೇಳಿ ।

ಪ್ರಕುಪಿತನಾಗಿ ರಾವಣನು । ಪ್ರಯತ್ನಿಸೆ ಹನುಮನ ಕೊಲ್ಲೆ । ಆಹ । ಪ್ರಕೃಷ್ಟ ಮನದಿ ವಿಭೀಷಣ ಬುದ್ಧಿ ಪೇಳಲು । ಪುಚ್ಛಕ್ಕೆ ಬೆಂಕಿ ಹಚ್ಚೆಂದ ರಾಕ್ಷಸರಾಜ ॥ ಜಯ ॥ ೨೧॥ ಅತಿ ಭಾರ ವಸ್ತ್ರ ಕಟ್ಟುಗಳಿಂ । ಅಧಮರು ಸುತ್ತಿ ಬಾಲವನು । ಅಗ್ನಿಯ ತೀವ್ರದಿ ಹಚ್ಚೆ । ಆಹ । ಅಗ್ನಿಯ ವರಸಖ ವಾಯು ಆದುದರಿಂದ । ಅಂಜನೆಸುತ ನಿರಾಮಯನ ಸುಡಲೇ ಇಲ್ಲ ॥ ಜಯ ॥ ೨೨॥ ಅಧಮ ರಾಕ್ಷಸರ ಚೇಷ್ಟೆಗಳ । ಅಸಮ ಬಲಾಢ್ಯನು ಹನುಮ । ಅನುಭವಿಸಿ ಕುತೂಹಲದಿ । ಆಹ । ಅಲ್ಲಲ್ಲಿ ಹಾರಿ ಆ ಲಂಕಾಪುರಿಯ ಸುಟ್ಟು । ಅತಿ ಮುದದಲಿ ಗರ್ಜಿಸಿದ ರಾಮದೂತ ॥ ಜಯ ॥ ೨೩॥ ಅಧಮ ಸಪುತ್ರ ರಾವಣನ । ಅಲ್ಪ ತೃಣೋಪಮ ಮಾಡಿ । ಅವರೆದುರಿಗೆ ಪುರಿಸುಟ್ಟು । ಆಹ । ಅಬ್ಧಿಯ ದಾಟೆ ವಾನರರು ಪ್ರಪೂಜಿಸೆ । ಉತ್ತಮ ಮಧುವುಂಡು ಪ್ರಭುವೇ ನಿನ್ನಲಿ ಬಂದ ॥ ಜಯ ॥ ೨೪॥ ಸಮಸ್ತ ವಾನರವರರೊಡನೆ। ಸಮರ್ಥ ಹನುಮ ಧೀರ ಬಂದು। ಶುಭಸೂಚಕ ಚೂಡಾಮಣಿಯ। ಆಹ । ಶ್ರೀಶ ನಿನ್ನಯ ಪಾದದ್ವಂದ್ವದಿ ಇಟ್ಟು ತಾ । ಸನ್ನಮಿಸಿದ ಭಕ್ತಿಭರಿತ ಸರ್ವಾಂಗದಿ ॥ ಜಯ ॥ ೨೫॥ ಭಕ್ತಿ ಸವೈರಾಗ್ಯ ಜ್ಞಾನ ಪ್ರಜ್ಞಾ ಮೇಧಾ ಧೃತಿ ಸ್ಥಿತಿಯು । ಪ್ರಾಣ ಯೋಗ ಬಲ ಇಂಥಾ । ಆಹ । ಪ್ರಕೃಷ್ಟ ಸುಗುಣಗಳು ತುಂಬಿ ಇರುವವು ಈ । ಪ್ರಭಂಜನ ವಾಯು ಹನುಮನಲಿ ಸರ್ವದಾ ॥ ಜಯ ॥ ೨೬॥ ಸರ್ವೇಶ ರಾಮ ಅಗಾಧ । ಸದ್ಗುಣಾರ್ಣವ ನೀ ಹನುಮನ । ಸಂಪೂರ್ಣ ಭಕ್ತಿಗೆ ಮೆಚ್ಚೆ । ಆಹ । ಸಮಯವದಿಲ್ಲದೆ ನಿನ್ನನ್ನೇ ನೀ ಕೊಟ್ಟೆ । ಸುಪ್ರಮೋದದಿ ಹನುಮನ ಆಲಿಂಗನ ಮಾಡಿ ॥ ಜಯ ॥ ೨೭॥ ನೀ ನಿಂತು ನುಡಿಸಿದೀ ನುಡಿಯು । ನಿನ್ನಡಿಗಳಿಗೆ ಅರ್ಪಣೆಯು । ನಮ್ಮ ಮಾರುತಿ ಮನೋಗತನೆ । ಆಹ । ನೀರಜಾಸನ ತಾತ ಪ್ರಸನ್ನ ಶ್ರೀನಿವಾಸ। ನಿನಗೆ ಪ್ರೀತ್ಯಾಗಲೋ ಸುಹೃದ ಸಂತೃಪ್ತ ॥ ಜಯ ॥ ೨೮॥

**॥ ಇತಿ ಶ್ರೀಪ್ರಸನ್ನ ಶ್ರೀನಿವಾಸದಾಸರಾಜವಿರಚಿತೇ ಶ್ರೀರಾಮಚರಿತಾಮೃತೇ ಸುಂದರಕಾಂಡಂ ನಾಮ ಪಂಚಮೋಽಧ್ಯಾಯಃ ॥ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥**

## ೩) ಶ್ರೀ ಗುರುಗೋವಿಂದ ದಾಸಕೃತ

## ಭಾರತ ತಾತ್ಪರ್ಯ ನಿರ್ಣಯಾಂತರ್ಗತ ಸುಂದರಕಾಂಡ (ಭಾಮಿನೀಷಟ್ಪದಿ)

ಸಿರಿ ವಿರಿಂಚಿಯು ವಾಯು ಶೇಷನು । ಗರುಡ ರುದ್ರೇಂದ್ರಾದಿ ವಂದ್ಯನೆ । ಪರಮ ಅದ್ಭುತುಚಿಂತ್ಯಶಕ್ತನೆ ಜಗಕೆ ಕಾರಣನೆ ॥ ವರಸು ಅಭಯಪ್ರದನೆ ರಾಮನೆ । ದುರಿತಹರ ಸಿರಿಕೃಷ್ಣ ಕೃಷ್ಣನೆ । ವರಸುಜ್ಞಾನದ ಲಕ್ಷ್ಮೀಪತಿ ಹಯವದನ ನಮಿಸುವೆನು ॥ ೧॥ ಯತಿಯಕುಲ ಶಿರವಮಣಿ ಎನಿಪ ದಶ । ಮತಿ ಪದುಮನಾಭ ಪ್ರಭೃತಿಗಳು । ಯತಿಯು ಜಯತೀರ್ಥಾದಿಗಳಿಗಭಿವಂದಿಸುತ ಅನಿಶ ॥ ಸತತ ಹರಿಪಾದಾಂಬುರುಹಗಳ । ವರ್ತಿ ದಾಸಪುರಂದರಾದಿಪ್ರ । ಭೃತಿ ಪಾದಾಂಬುಜಕೆ ನಮಿಸುತ ಬಿತ್ತರಿಪೆ ಕೃತಿಯ ॥ ೨॥ ನಂದತೀರ್ಥ ಮುನೀಂದ್ರ ಸತ್ಕೃತ । ಅಂದ ಮಹಾಭಾರತದ ನಿರ್ಣಯ । ಸಿಂಧು ಗ್ರಂಥದಿ ರಾಮಚರಿತಾಮೃತದ ಭಾಗದಲಿ ॥ ಸಿಂಧು ದಾಟುತ ಸೀತೆ ವಾರ್ತೆಯ । ತಂದ ಸುಂದರಕಾಂಡ ಚರಿತೆಯ । ಅಂದ ಕನ್ನಡ ಪದ್ಯದಲಿ ಪೇಳ್ವುದನೆ ಕೇಳುವುದು ॥ ೩॥ ಲವಣ ಜಲಧಿಯ ಹಾರಲಿಚ್ಛಿಸಿ । ಪವನಜನು ಆದಿಯಲಿ ನಮಿಸಿದ । ಶಶ್ವದೇಕಪ್ರಕಾರ ವಿಸ್ತೃತ ಷಡ್ಗುಣಗಳೆನಿಪ ॥ ಐಶ್ವರ್ಯ ಪ್ರಭೆ

ಜ್ಞಾನ ತೇಜವು । ಸರ್ವಶಕ್ತ್ಯಾ ನಂದಮಹನಿಧಿ। ಸರ್ವ ಜಗದೀಶ್ವರ ನೆನಿಪ ಸಿರಿ ರಾಮಚಂದ್ರನಿಗೆ ॥೪॥ ಗಿರಿವರನ ಮಾಹೇಂದ್ರವನು ತನ । ಚರಣ ತಲದಿಂದೊತ್ತಿ ಅರ್ಣವ । ಮರುತಸುತನುಲ್ಲಂಘನದಿ ಜಲದುಬ್ಬಟೆಯು ಬಹಳ ॥ ಇರಲು ಜಲಚರ ನಿಚಯವೆಲ್ಲವು । ತರುನಿವಹ ಸಹ ಹಿಂಬದಿಯೆ ಬಹ । ಪರಿಯಲಾಯ್ತುದು ಅಬ್ಧಿತರಣದ ವೇಗಸೆಳತದಲಿ ॥ ೫॥ ಪವಿಯ ಪಿಡಿದಿಹ ಸುರಪನಿಂದಲಿ । ಪರ್ವತದ ಪಕ್ಕಗಳು ಛೇದಿಸೆ । ಪವನ ಮನ್ನಿಸಿ ಹಿಮಗಿರಿಯ ವಚನವನು ಕರುಣೆಯಲಿ ॥ ಪರ್ವತವ ಹಿಮಗಿರಿಯ ಸೂನುವ । ಲವಣ ಜಲಧಿಯೊಳೆಸೆದು ರಕ್ಷಿಸೆ । ಪವನನುಪಕೃತಿ ಮರೆಯದಲೆ ಮೇಲೆದ್ದ ಮೈನಾಕ ॥ ೬॥ ಗಿರಿಯ ಶೃಂಗಗಳಿಂದಲಂಕೃತ । ಗಿರಿಯಸೂನುವು ಕೊಸರಿ ಮೇಲಕೆ । ಬರುತ ಬೇಡಿದ ಮರುತತನಯನ ವಿಶ್ರಮಿಪುನೆನುತ ॥ ನಿರತ ಸೀಮಾತೀತ ವಿಕ್ರಮ । ಮರುತ ಶ್ರಮದಿಂ ರಹಿತ ತಾನಾ - । ಗಿರಲು ವಿಶ್ರಮಿಸದಲೆ ಅವನಾಲಿಂಗಿಸುತ ಹೊರಟ ॥ ೭॥ ಪೋಗುತಿರಲವನಂದು ಕಂಡನು । ನಾಗಜನನಿಯ ಸುರಸೆಯನು ಸುರ । ರಾಗ ವರಗಳನಿತ್ತು ಪ್ರೇಷಿಸೆ ಬಲದಪರೀಕ್ಷಾರ್ಥ ॥ ಸಾಗಿ ಬೀಳಲಿ ನಿನ್ನ ವದನದಿ । ವೇಗ ಬಯಸಿದ ವಸ್ತುವೆಲ್ಲವು । ಭೋಗವಾಗಲಿ ಎಂಬ ವಚನಕೆ ಹೊಕ್ಕನವಳಾಸ್ಯ ॥ ೮॥ ದೇವತೆಗಳಿತ್ತುರವ ಪಾಲಿಸಿ । ಆವ ಸುರಸೆಯ ಹರಣತೆಗೆಯದೆ। ತೀವರದಿ ಮುಖದಿಂದ ಹೊರಟನು ಇದುವೆ ಆಶ್ಚರ್ಯ । ಪಾವಮಾನಿಯ ಸಾಹಸಂಗಳ । ದೇವತತಿ ಕೊಂಡಾಡಿ ಗಗನದಿ । ಪೂವ ಮಳೆಯನು ಕರೆದು ಆನಂದಿಸಿದರೇನೆಂಬೆ ॥ ೯॥ ಕಾಯುತಿರೆ ಲಂಕೆಯನು ವೀರ ನಿ । ಕಾಯರನು ತಡೆಯಲ್ಕೆ ಬಹುವರ । ದಾಯಕನು ಎನೆ ಚತುರಮುಖ ವರದತ್ತಸಿಂಹಿಕೆಯು ॥ ಛಾಯೆ ಗ್ರಹವೆಂದೆನಿಸಿ ಮರುತನ । ಛಾಯೆಯನು ಆಕರ್ಷಿಸಲು ಆ । ವಾಯುಸುತ ಹೊಕ್ಕವಳ ಕಾಯವ ತಾನೆ ಛೇದಿಸಿದ॥೧೦॥ ಅಪರಿಮಿತ ಬಲವುಳ್ಳವನೆನುತ । ಕಪಿವರನು ಜಗಕೆ ತೋರಲು । ಗುಪಿತಳಾದರು ಚತುರಮೊಗವರದಿಂದ ಸಿಂಹಿಕೆಯ ॥ ವಿಪುಲ ದೇಹಿಯ ಅಸುವ ನೀಗುತ । ನಿಪುಣ ಲಂಬಿತ ಶಿಖರ ಮೆರೆಯುವ । ಸುಪುರ ಲಂಕೆಯ ಬಳಿವಿಡಿದ ತ್ರಿಕುಟಕ್ಕೆ ಹಾರಿದನು ॥ ೧೧॥ ಬೆಕ್ಕಿನಂದದಿ ಅಲ್ಪರೂಪವ । ಅಕ್ಕರದಿ ಕೈಕೊಂಡ ಪುರ ಒಳ । ಪೊಕ್ಕ ಸಂಜೆಲಿ ಅಂದು ಪುರದಭಿಮಾನಿ ಲಂಕಿನಿಯು ॥ ರಕ್ಕಸಿಯು ಅವರೋಧಿಸಲು ಕು । ಟ್ಟಿಕ್ಕಿ ನಿಜಮುಷ್ಟಿಯಲಿ ಅವಳನು । ಪೊಕ್ಕ ಮಾರುತಿ ಲಂಕೆಯನು ಅವಳನುಮತಿಯಗೊಂಡು ॥ ೧೨॥ ಅರಸಿ ಒಳಹೊರಗೆಲ್ಲ ಪುರದೊಳು । ಚರಿಸೆ ಕಂಡನು ವನವಶೋಕದಿ । ತರುವು ಶಿಂಶುಪಮೂಲದಲಿ ಕುಳಿತಿರುವ ಆಕೃತಿಯ ॥ ಪರಮ ಪುರುಷನು ರಾಮ ಹೃದ್ಗತ । ಅರಿತ ಹನುಮನು ಲೋಕನಟನೆಯ । ಚರಿಸಿ ಸಂವಿದ ಗೈದು ಸೀತೆಗೆ ಇತ್ತನಂಗುಲಿಯ ॥ ೧೩॥ ರಾಮಚೇಷ್ಟೆಯಪರಿ ವಿಡಂಬನ । ಭೂಮಿಜೆಯು ಚರಿಸುತ್ತ ತನ ಚೂ- । ಡಾಮಣಿಯ ರಾಮಗೆ ಕೊಡುವೆನೆಂದೆರಡು ರೂಪಾದ ॥ ಆ ಮಹಾಭರಣಗಳ ಲೊಂದನು । ಈ ಮರುತಸುತ ಕರಕಮಲದಲಿ । ಆ ಮಹಿಳೆ ಸೀತಾಕೃತಿಯು ಕೊಟ್ಟಳದ ಗೋಪ್ಯದಲಿ ॥ ೧೪॥ ನಿಶಿಚರರು ಇವರೆಂತು ಅರಿವರು । ಋಷಿಗಣವು ದೇವತೆಗಳಿವುಗಳ। ಹಸನದಲರಿವರಲ್ಲದೆ ಹನುಮ ಚರಿತ ವಿಡಂಬನ ॥ ಅಸುರ ಕಲಿಮುಖ ಮೋಹರಕೆ ಪುನ । ರೆಸಗಿದರೊಂಚನೆಗೆ ಈ ಮರು- । ತಸುತ ನಿರ್ಭಯ ಪೂರ್ಣ ಅರಿತವ ಪ್ರಕಟ ಇಚ್ಛಿಸಿದ ॥

೧೫॥ ವನರುಹಾಕ್ಷಿಯು ಸೀತೆಯಾಶ್ರಿತ । ವನವಶೋಕದಿ ಶಿಂಶುಪದ ತರು। ವನೊಂದನು ಹೊರತು ಪವನಜ ರಾವಣನ ವನವೆಲ್ಲ ॥ ಹನನ ಗೈಯ್ಯುತ ರಕ್ಕಸರ ನಾ। ಶನಕೆ ಇಚ್ಛಿಸಿ ಅರ್ಥಿಲಿ ಸಿಂಹ । ನಿನದವ ಗೈದು ಹೆಗ್ಗದವನೇರಿದನು ಮತ್ತವನು ॥ ೧೬॥ ವನವಿಲುಂಪನ ಕರ್ಮವನು ರಾ । ವಣನು ಕೇಳುತಲಿ ಕಪಿಚೇಷ್ಟಿತ । ವನಿಲಜನ ಪಿಡಿಯಲ್ಕೆ ಬಹು ಕಿಂಕರರಿಗಾದೇಶ ॥ ಅನುನಯದಿ ಕೊಡೆ ಹರನ್ವರದಿ ಮ- । ರಣ ರಹಿತರೆನೆ ಸುರರೊಳಿಹ ಆ। ತ್ಮನು ಪವನಜನ ಅತಿಬಲಿಯ ಮುಸುಕಿದರು ವೇಗದಲಿ ॥೧೭॥ ಯೂಥಪರು ಹತ್ತೆಂಟುಕೋಟಿ ಅ - । ಶೀತಿಸಾಸಿರ ಮುಖ್ಯರೊಡನೆಯು । ಹೇತಿಸಂಕುಲ ವಿವಿಧ ಪಿಡಿಯುತ ವಾನರೇಂದ್ರನನ॥ ಆತುಪಿಡಿಯುಲು ಮುಸುಕಿತಾಡಿಸೆ। ವಾತಸುತನವರೆಲ್ಲರನು ತಲ । ಘಾತದಲಿ ಚೂರ್ಣಪರಿಯಂತೆಸಗಿದನು ನಿಮಿಷದಲಿ ॥ ೧೮॥ ಹತ್ತು ತಲೆಯವನಿಂದ ಚೋದಿತ । ಕೃತ್ತಿವಾಸನ ವರದಿ ರಕ್ಷಿತ । ಮತ್ತೆ ಸಚಿವರ ಪುತ್ರರೆನಿಸುವ ಪರ್ವತೋಪಮರ ॥ ಸಪ್ತಪ್ರಮುಖರು ಅಗ್ರದಲಿ ಬರೆ । ಕುತ್ತಿದನು ಪದತಲದಿ ಅವರ ನಿ । ವೃತ್ತಿಯಾಯಿತು ರಕ್ಕಸನಬಲ ತೃತಿಯಭಾಗವಲೆ ॥ ೧೯॥ ರೂಕ್ಷನು ತನ ಅಸಮಪೌರುಷ । ರಾಕ್ಷಸಾಧಿಪನೆನಿಪ ರಾವಣ । ಈಕ್ಷಿಸುತ ಸಮಬಲಿಯು ತನಗೆಂದೆನಿಪ ಕುವರನನ ॥ ಪ್ರೇಕ್ಷಿಸಲು ಆಹವಕೆ ಲೋಕರ । ಸಾಕ್ಷಿಎನಿಸುವ ಪವನ ಸುತನನ । ತೀಕ್ಷ್ಣಣದ ಮಂತ್ರಾಸ್ತ್ರದಲಿ ಆ ಅಕ್ಷಕುವರೆಸೆದ ॥೨೦॥ ಬಲಿಯು ಹನುಮನ ಶರದ ಸಂಕುಲ । ಚಲಿಸದ್ಧೋಯಿತು ಹನುಮ ರಾವಣ।ಬಲಕೆಸಮನಹ ಮಂಡಮಧ್ಯಕ ಸುತನ ಈಕ್ಷಿಸುತ ॥ ತಿಳಿವೆ ಇವನನು ಸರ್ವ ರಾಕ್ಷಸ। ಬಸಲಮೂಹದಿ ತೃತಿಯಭಾಗವು। ಅಳಿವು ದಶಕಂಧರನ ಸಿರಿ ರಾಘವವ ಪಾಲೆನುತ ॥ ೨೧॥ ಮನದಿ ಯೋಚಿಸಿ ರಾವಣೋಪಮ । ತನಯ ಸುರಪನ ಶತ್ರುವೆನಿಪನ । ಹನನಗೈದಡೆ ತನ್ನವರು ಈತನ ಪರಾಕ್ರಮವ ॥ ಎನಿತು ಕಾಂಬರು ಎಂದು ಅಕ್ಷಯ । ತನಯನನ ಪದ ಪಿಡಿದು ಚಕ್ರ ಭ್ರ-। ಮಣ ಪರಿತಿರಿಗಿಸುತ ಧರೆಗಪ್ಪಳಿಸಿ ಹುಡಿಗೈದಾ ॥ ೨೨॥ ಅಂದು ತನ ಸುತನಕ್ಷಕುವರನ। ಕೊಂದ ವಾರ್ತೆಯ ಕೇಳಿ ರಕ್ಕಸ । ನೊಂದು ಮನದಲಿ ಕಂದನಗ್ರಜನಂದು ಮೋಹರಕೆ ॥ ಛಂದದಲಿ ಕಳುಹಲ್ಕೆ ಮಹಶರ । ವೃಂದಗಳ ಮಂತ್ರಾಸ್ತ್ರ ಯೋಜಿಸಿ । ಇಂದ್ರಜಿತು ಕಪಿವರಗೆ ಎಸೆದರು ಚಲಿಸಲಸಮರ್ಥ ॥೨೩॥ ಇಂತು ಅನುಪಮ ಮಾರುತಿಯ ಜಯ । ವೆಂತೆನುತ ದುಸ್ಸಹ ಸರುವರಿಗೆ । ಮಂತ್ರಿ ಸುತ ಬ್ರಹ್ಮಾಸ್ತ್ರವನು ಆ ಇಂದ್ರಜಿತು ಎಸೆಯೆ ॥ ಚಿಂತಿಸಿದ ಪವನಜ ನಿರಾಕುಲ । ಅಂತೆ ವಿಧಿ ಇತ್ತುರವು ಬಹು ಅತಿ । ಕ್ರಾಂತ ತನ್ನಿಂದೆನುತ ಬ್ರಹ್ಮನು ಮಾನನೀಯನಲೆ ॥ ೨೪ ॥ ಮನ್ನಿಸುತ ಬ್ರಹ್ಮಾಸ್ತ್ರವನು ತಾ । ನನ್ಯರಿಗೆ ಸಿಲುಕಿದೊಡು ಅವರೇಂ । ತನ್ನ ಮಾಳ್ಪರು ಸಂಭ್ರಮಲೆಂದೆನುತ ಪವನಜನು ॥ ಕಣ್ಣಿನಲಿ ಅದಕಾಂಬೆ ಮತ್ತಾ। ಕುನ್ನಿ ರಾವಣನನ್ನು ಕಾಣಲು । ಚೆನ್ನ ಹದವಿದು ಎಂದು ಬದ್ಧನ ಪರಿಯ ನಿಂತಿದ್ದ ॥ ೨೫ ॥ ಅಂದು ಕಪಿವರನನ್ಯ ಪಾಶದಿ । ಬಂಧಿಸಲು ರಕ್ಕಸರು ತಕ್ಷಣ । ಕುಂದು ಸಹಿಸದೆ ಮಂದಜಾಸನ ಲೋಕಸೇರಿತದು ॥ ನಿಂದ ಹನುಮನ ಪಿಡಿದು ರಕ್ಕಸ । ವೃಂದ ಒಯ್ಯುತ ನಿಶಿಯ ಚರರಿಗೆ

ಇಂದ್ರ ನೆನಿಪ ದಶಾಸ್ಯನಲ್ಲಿಗೆ ತಂದು ನಿಲಿಸಿದರು ॥ ೨೬ ॥ ಎಲವೊ ಕಪಿ ಎಲ್ಲಿಂದ ಬಂದೆಯೊ। ಎಲವೊ ದೂತನು ಆರಿಗೋ ನೀ । ಕಲಕಿ ವನ ಭಂಗವನು ರಾಕ್ಷಸ ಕುಲದ ಸಂಹರಕೇ॥ ಎಲವೊ ಕಾರಣ ಪೇಳು ಎನೆ ಅವ । ಒಲವಿನಿಂ ತನ ಪತಿಯು ರಾಮನ । ಬಳಿವಿಡಿದು ನಮಿಸುತ್ತ ಹನುಮನು ಉತ್ತರವ ಕೊಡುವ॥೨೭॥ ತಿಳಿವುದೆಲೊ ರಾವಣನ ಅತಿಶಯ । ಬಲಪರಾಕ್ರಮಿ ಎನಿಪ ರಾಮನ । ಆಳು ತಾ ಬಂದಿಹೆನು ಮಾರುತಿ ಎಂದು ಕರೆಯುವರು ॥ ಕುಲವ ನಿನ್ನದು ನಾಶಗೈಯಲು । ಬಲು ಸಮರ್ಥನು ನಾನೆ ಇರುವೆನು । ತಿಳಿಸುವೆ ಮಮ ಸ್ವಾಮಿ ಬಲವನು ಕೇಳು ನೀನೆಂದ ॥ ೨೮ ॥ ಸುಪ್ರಿಯಳು ರಾಮನಿಗೆ ಸೀತೆಯ । ಒಪ್ಪಿಸಲು ತಡಮಾಡಿದೊಡೆ ತವ । ಸುಪ್ರಿಯರು ಸುತ ಬಾಂಧವರ ಸಹ ವೇಗ ನಶಿಸುವೆಯೋ ॥ ಕುಪ್ಪಿತನು ಸಿರಿ ರಾಮ ಬಾಣವ ।ಅಪ್ಪುವಡೆ ಬ್ರಹ್ಮಾದಿ ನಿರ್ಜರ । ನಿಷ್ಫಲಿತರಿರೆ ಮಾಳ್ಪುದೇ ನೀನಲ್ಪ ಸಾರಕನು ॥ ೨೯ ॥ ಪ್ರಕುಪಿತನು ತಾನಾಗಿರಲು ಹರಿ । ಸಕಲ ಲೋಕ ಸುರಾಸುರೋರಗ। ನಿಖಿಲ ಅಚಿಂತ್ಯ ಮಹಿಮನ ಮುಂದೆ ನಿಲ್ಲಬಲ್ಲರೆನೆ ॥ ಸಕಲ ರಕ್ಕಸ ಅಧಿಪ ರಾವಣ ।ಸು ಕಪಿ ವಧೆಗೆವ ಪೇಳೆ ಅನುಜನು । ವಕ್ರ ನೀತಿ ನಿವಾರಿಸಲು ಪುಚ್ಛವನು ದಹಿಸೆಂದ ॥೩೦॥ ವಸ್ತ್ರ ಸಂಚಯದಿಂದ ಹನುಮನ। ಪುಚ್ಛಪರಿವೇಷ್ಟನದಿ ವಹ್ನಿಗೆ । ತುತ್ತು ಮಾಡಿದೊಡಾಗ್ಯು ದಹಿಸನು ಮರುತ ಸಖನಿರಲು ॥ ಇತ್ತ ರಕ್ಕಸ ಚೇಷ್ಟಿತೆಲ್ಲವು । ಹೊತ್ತು ಸಹಿಸಿದ ದೋಷ ದೂರನು । ತೃಪ್ತಿ ಯಿಂದಲಿ ಲಂಕೆಯನು ಸುಡೆ ಹನುಮ ಬಯಸಿದನು ॥ ೩೧॥ ವಿಶ್ವಕರ್ಮ ಕೃತವು ಲಂಕೆಯು । ವಿಶ್ವ ಪುಚ್ಛಾಗ್ನಿಯೊಳು ಇರುತಿಹ । ವಿಶ್ವತೇಜಸಿನಿಂದ ದಹನಾಯ್ತೆಂದು ತಿಳಿಯುವುದು ॥ ಸುವರ್ಣ ರತ್ನಗಳಿಂದ ಖಚಿತವು । ಸರ್ವ ರಕ್ಕಸ ಪ್ರಮುಖರಿಂ ಸಹ । ಸರ್ವ ದೆಶೆಯಿಂ ಪುರಿಯ ದಹಿಸುತ ಸಿಂಹರವಗೈದ ॥ ೩೨ ॥ ಅನಿಲ ಸುತ ರಾವಣನ ತತ್ಸುತ। ರನು ತೃಣ ಸಮ ಎಣಿಸುತಲಿ ರಾ- । ವಣಾದಿಯು ನೋಡುತಿರುತಿರೆ ಪತ್ತನವ ದಹಿಸುತ್ತ ॥ ಅನಿಸಲುತ ಭಸ್ಮಾಂತ ಐದಿಸಿ । ಅರ್ಣವನು ತಾ ಲಂಘಿಸುತ ಪುನಃ । ತನ್ನ ಜನರಿಂ ಸುಷ್ಠು ಪೂಜಿತನಾದ ಹನುಮಂತ ॥ ೩೩। ಸ್ವಾಮಿ ರವಿಜನ ಆಳ್ವಿಕೆಯೊಳಿಹ । ಆ ಮನೋಹರವೆನಿಪ ಮಧುವನ । ರಾಮಭೃತ್ಯನು ಕಪಿವರರ ಸಹ ತೃಪ್ತಿಯಿಂ ಮೆದ್ದು ॥ ಆ ಮಹಾ ಸರ್ವೇಶ್ವರನು ನಿ । ಸ್ಸೀಮ ಮಹಿಮನು ರಾಮಪದದಲಿ । ಆ ಮಣಿಯನಿಡುತವನು ಗೈದಷ್ಟಾಂಗನಮನವನು ॥ ೩೪ ॥ ಪುತ್ರ ಮಿತ್ರ ಕಳತ್ರರಿಂದಲು । ಭಕ್ತಿ ಅತಿಶಯವನ್ನೆ ಮಾಳ್ಪಗೆ । ಯುಕ್ತವಾದುದ ಕೊಡಲು ಬೇರೊಂದಿಲ್ಲವೆಂದೆನಿತ ॥ ಚಿತ್ತವಿಸಿ ಶ್ರೀರಾಮಚಂದ್ರನು । ತೆತ್ತು ತನ್ನನೆ ಅಪ್ಪಿ ಹನುಮನ । ಇತ್ತಪುದುಂಟೆ ಇದಕಧಿಕೆಂದು ತೋರ್ದ ಸಂತೃಪ್ತಿ ॥ ೩೫॥ ಹರಿಯ ಪಾದಗಳಲ್ಲೆ ಸಂಶ್ರಿತ । ಗುರುವರರ ಸಚ್ಚರಿತೆ ಅಮೃತವ । ಪರಮ ಆದರದಿಂದ ಪಠಿಸುವ ಶರಣ ಜನಗಳಿಗೆ॥ ವರಸುಭಕ್ತಿ ಜ್ಞಾನದಾಯಕ । ನಿರತ ಸರ್ವಾಭೀಷ್ಟ ಸಿದ್ಧಿಯು । ಗುರುಗಳಂತಸ್ಥಿತನು ಗುರುಗೋವಿಂದ ವಿಠಲೊಲಿವ ॥ ೩೬ ॥

॥ ಶ್ರೀ ಲಕ್ಷ್ಮೀ ಹಯಗ್ರೀವಃ ಪ್ರೀಯತಾಂ ॥

## ೪) ಶ್ರೀಸುಮಧ್ವವಿಜಯ ಸುಳಾದಿ

**ರಾಗ - ಮಾರವಿ** **ಧ್ರುವತಾಳ**

ಮುನಿಗಳ ಮಸ್ತಕರತುನಾ, ಭಾರತೀರಮಣಾ । ತೃಣ ಮೊದಲಾದ ವ್ಯಾಪ್ತನೆ ಪಾವನ ಶರೀರಾ । ಗುಣನಿಧಿ ಪವಮಾನಾ, ಪವಮಾನಾ, ಪಂಚಾಪವನಾ, । ಅಣು ಮಹತ್ತು ರೂಪಾನೆ, ಸನಕಾದಿಗಳ ಪ್ರೀಯಾ । ವನಜಜಾಂಡವನ್ನು ತಾಳವನೆ ಮಾಡಿ ಬಾರಿಸುವಾ । ಘನ ಸಮರ್ಥನೆ ಸಜ್ಜನಪಾಲಾ, ಶುಭ ಲೋಲಾ । ಅನಿಲ ಪ್ರಧಾನವಾಯು, ಹನುಮ ಭೀಮಾ ಮಧ್ವ । ಮುನಿ ಜ್ಞಾನ ದಾತಾ, ಕರಣ ಅಭಿಮಾನಿಗಳಾ । ಗಣನೆಮಾಡದೆ ಗೆದ್ದಾ, ಅನಿಮಿತ್ತ ಬಂಧುಜಗ-। ಜ್ಜನಕ ಚತುರಹಸ್ತಾ,ಮಿನಗುವ ಗದಾಪಾಣಿ । ದನುಜರಾ ಸದೆಬಡಿದಾ, ರಣರಂಗ ಧೀರಾ ಶೂರಾ । ಇನ ಮೊದಲಾದ ಠಾವಿನಲ್ಲಿ ಸರ್ವದಾ ತೇಜಾ । ವನಜಾರಿ ಕುಲಾಧೀಶಾ, ಮನ ಮುದ್ದು, ಪೂರ್ಣ ಪ್ರಜ್ಞಾ । ಪ್ರಣತಾರ್ತಿಹರ ಆರ್ಯಾ ಅನುಗಾಲಾ ಜಗದ್ಗುರು। ಜನುಮ ಜನುಮ ಸಾಧನ ಮಾಡಿಸುವ ಕರುಣಿ । ನೆನೆದವರಿಗೆ ಚಿಂತಾಮಣಿ ಸುರಧೇನು ತರುವೆ । ಪ್ರಣವ ಮೂರುತಿ ವಿಜಯವಿಠ್ಠಲ ನಾರಾ- । ಯಣನಂಘ್ರಿ ಗುಪ್ತಾದಲ್ಲಿ ಮನದೊಳೆಣಿಪಾ ಮೌನಿ ॥ ೧॥

**... ಮಟ್ಟತಾಳ ...**

ನಿನ್ನಾಧೀನವೇ ಲೋಕಾ, ನೀ ಹರಿಯಾಧೀನಾ । ನಿನ್ನ ಪ್ರೇರಣೆ ಜಗಕೆ, ನಿನಗೆ ಪ್ರೇರಣೆ ಹರಿ । ನಿನ್ನಾಧಾರ ನಮಗೆ, ನಿನಗಾಧಾರಾ ಹರಿ । ನಿನ್ನ ಬೆಳಕು ಜಗಕೆ ನಿನಗೆ ಬೆಳಕು ಹರಿ । ನಿನ್ನ ಧ್ಯಾನ ನಮಗೆ, ನಿನಗೆ ಹರಿಯ ಧ್ಯಾನಾ । ನಿನ್ನ ಸ್ತೋತ್ರವೇ ನಮಗೆ, ನಿನಗೆ ಹರಿಯ ಸ್ತೋತ್ರಾ। ನಿನ್ನ ಕಾಣೆವು ನಾವು, ನೀ ಹರಿ ಯನು ಕಾಣ್ವೆ । ನಿನ್ನ ಮಾಯವೇ ನಮಗೆ, ನಿನಗೆ ಹರಿಯ ಮಾಯಾ । ನಿನ್ನೊಳಗೆ ಹರಿ, ನೀನು ಹರಿಯೊಳಗೆ। ಅನ್ಯೋನ್ಯವಾಗಿ ಭಕ್ತರ ಮನದಲ್ಲಿ । ಕಣ್ಣಿಗೆ ಪೊಳೆವುತ್ತಾ ಪೊಳೆದಾಡುವ ಪ್ರಾಣಾ । ಚಿಣ್ಣವತಾರಾ ಶ್ರೀವಿಜಯವಿಠ್ಠಲಂಗೆ ಅ ।ಚ್ಛಿನ್ನ ಭಕ್ತನಾದಾ, ಸನ್ಯಾಸಿಗಳೊಡೆಯಾ ॥೨॥

**... ರೂಪಕತಾಳ ...**

ಕಲಿ ಮೊದಲಾದಾ ಖಳರು ಸತ್ಕರ್ಮಮಾಡುವಾ । ಹಳಿದು ಯೋಚನೆ ಮಾಡಿ ಮಣಿಮಂತನೆಂಬುವನಾ । ಬಲವಂತಾನಹುದೆಂದು, ಕರದು ಉಪದೇಶಿಸಿ। ಇಳೆಯೊಳು ಜನಿಸಿ ಭೇದಾರ್ಥ ಜ್ಞಾನವೆಲ್ಲಾ । ಅಳಿದು ಸಜ್ಜನರನ್ನು ಮಂದ ಮತಿಗಳ ಮಾಡಿ । ಕುಲ ಮರಿಯಾದೆಗಳ ಕೆಡಿಸಿ, ಜಗವಾ । ಬಲು ಮಿಥ್ಯಾವೆಂದು ಸ್ಥಾಪಿಸಿ, ಜೀವೇಶಗೆ ಐಕ್ಯಾ । ತಿಳಿಸಿ, ಪರಗತಿಯಾ ಮಾರ್ಗಾ ತೋರದಂತೆ । ಹೊಲೆಗೆಲಸ ಪೋಗೆಂದು, ಮನ್ನಿಸಿ ಮುದದಿಂದ । ಪೇಳಲು, ಹರುಷವ ತಾಳಿ ಖಳನು, ಮನ । ದೋಳು ನೆನೆದಾ ನಿಲಸಾ ನಿನ್ನ ಅಂದಿನ ವೈರಾ । ವಳಿತೆಂದು ಕೈಕೊಂಡು ವಿಜಯವಿಠ್ಠಲನ್ನಾ । ಸುಲಭ ಭಕ್ತರ ಮತಿ ಅಳಿದು ಬಿಡುವೆನೆಂದೂ ॥ ೩॥

**... ಝಂಪೆತಾಳ ...**

ಚರಣಡಿ ಎಂಬೊ ಗ್ರಾಮದಲಿ, ವಿವಶಳಾಗಿ । ಚರಿಸುವ ಸ್ತ್ರೀಯಳಲ್ಲಿ ಜನಿಸಿ ಬಂದೂ। ದುರುಳ ಸಂಕರನೆಂಬೋ ನಾಮದಲ್ಲಿ । ಧರೆಯೊಳಗೆ ಮೆರೆದು ಮನೋ ಕಾಯಾವಾಚಾದಲ್ಲಿ ತಾನಾಗ । ಎರಡೆಂಬೊ ವಾಕ್ಯವ ಪೇಳದಾಲೆ । ತಿರುಗಿದನು ಬಹುಬಗೆ ದುಃಶಾಸ್ತ್ರವನೆ ರಚಿಸಿ । ಶಿರಬಲಿತು ಧರ್ಮಗಳ ನಿರಾಕರಿಸಿ। ಪರಮಾತ್ಮಗೆ ನಿರ್ಗುಣ ಪೇಳಿ ಉತ್ತಮಾ । ಪರವೆಲ್ಲ ಜೀವದಲ್ಲಿ ಸಾಧಿ ಸುತ್ತಾ। ಇರಲು ಸಜ್ಜನರೆಲ್ಲಾ, ಹಸಗೆಟ್ಟು ಕೇವಲಾ । ಮೊರೆಯಿಡಲು ಹರಿ ಕರುಣ ದಿಂದಾ, ನೀನು । ಸುರರು ಪೊಗಳಲಾಗಿ, ವಿಜಯವಿಠ್ಠಲನಾಜ್ಞಾ । ಶಿರದಲಿ ಧರಿಸಿ, ಅವತರಿಸಿದಾ ವೃಕೋದರಾ ॥ ೪॥

**... ತ್ರಿಪುಟತಾಳ ...**

ಜನಿಸಿದೆ ಪರಮ ಶುಕ್ಲಾತ್ರಯನೆ ವೇಗದಿ ನಡು । ಮನೆಯ ಬ್ರಾಹ್ಮಣ ನಿಜನಾರಿಯಲ್ಲೀ। ತನಯಾಲೀಲೆಯತೋರಿ, ಹುರುಳಿಗುಗ್ಗರಿಮೆದ್ದು । ಜನನಿಗಾಶ್ಚರ್ಯವಾ ಮಿಗಿಲೆನಿಸಿ,। ಕುಣಿದಾಡಿ ಬಲಿವರ್ಧನನಾ ಸಂಗಡ ಪೋಗಿ। ಹುಣಸಿಬೀಜದಲ್ಲಿ ಸಾಲಾವನೆ ತಿದ್ದಿ । ತೃಣಮಾಡಿ ಶಿವಶಾಸ್ತ್ರಿಯನು ಸೋಲಿಸಿ ಆ । ಕ್ಷಣದಲ್ಲಿ ಯತಿಯಾದೆ, ಜನಕನಿಂದಾ । ಫಣಿಯಾದ್ಯರಿಗೆ ಗುರುವಾದಾ, ನಾರಿಯ ರಮಣಾ । ಅನುಸರಿಸಿ ಅಚ್ಯುತ ಪ್ರೇಕ್ಷನಲ್ಲಿ । ವಿನಯಾದಲಿ ಪೋಗಿ, ನಿಯತವಾಗಿ ಶಿಷ್ಯಾ। ತನ ಪಡೆದಿ, ಮಧ್ವಾಖ್ಯಾನಾಮದಲ್ಲಿ । ಅನಿಮಿಷ ನದಿದಾಟಿ, ಭೂಪತಿಯಾ ವಂಚಿಸಿ । ಬಿನಗು ಚೋರಾರನ್ನು ಮೋಸಾಗೊಳಿಸಿ ।ಮನೋವೇಗಾದಲಿ ಮಹಾ ಬದರಿಕಾಶ್ರಮದಲ್ಲಿ । ದನುಜಾರಿ ಇರೇ ಪೋಗಿ, ನಮಿಸಿ ವಿದ್ಯಾ । ಅನುವಾಗಿ ಕಲಿತು, ಸರ್ವದ ಅಲ್ಲಿದ್ದಾ ಸರ್ವಾ । ಮುನಿಗಳಿಂದಲಿ ಪೂಜೆಗೊಂಡು ತೆರಳೀ । ಜನುಮ-ರಹಿತವ್ಯಾಸಾ ಮುನಿಯನ್ನೆ ಕಂಡು ವಂ- । ದನೆಮಾಡಿ, ಎಂಟು ಮಳಲಾ ಮುಟ್ಟಿಗೆ । ಯನು ಪಡೆದು ಬಂದೆ ರಜತಪೀಠ ಪುರದಲ್ಲಿ । ಇನನಂತೆ ಪೊಳೆವಾ ಆನಂದತೀರ್ಥಾ । ಗುಣಪೂರ್ಣ ಅನಂತೇಶ್ವರಾ ವಿಜಯವಿಠಲನ್ನ । ಅನುದಿನ ನೆನೆಸುವಾ ವೈಷ್ಣವಾಚಾರ್ಯಾ ॥ ೫॥

**... ಅಟ್ಟತಾಳ ...**

ವಸುಧಿಯೊಳಗೆ ರಕ್ಕಸ ರೂಪ ಸಂಕರ । ಮಸದು ಮತ್ಸರಿಸಿ ತಾಮಸ ಶಾಸ್ತ್ರಗಳು। ನೆನಸೆ, ನಿರ್ಮಾಣಜ್ಞಾನಾ ಪುಶಿಯೆಂದು ವರದು । ವೊಲಿಸಿಕೊಂಡು ಅವರಿಗೆ ಭಸುಮಾವ ಬಡಿಸಿ । ವೆಕ್ಕಸಗಾಗಿರಾಲಿತ್ತ ಶ್ವಸನಾವತಾರನೆ । ನಸು ನಗುತ್ತಾ ವೇಗಾ, ದಶಪ್ರಕರಣ । ರಂಜಿಸುವ ಸೂತ್ರವೇ ನಾಲ್ಕು । ದಶ ಉಪನಿಷತ್ । ಎಸೆವಾ ಋಗ್ಗಾಗೀತಾ ಹಸನಾದೆರೆಡು ಭಾಷ್ಯಾ, ತ್ರಿಸತ್ತಾತ್ಪರ್ಯವು। ಎಸಳು, ಯಮಕ ಭಾರತಾಗಮಸದಾಚಾರ । ಕುಶಲಾಸ್ಮೃತಿ ದ್ವಾದಶಸ್ತೋತ್ರ ಕೃಷ್ಣಾಸು । ರಸ ಮಹಾರ್ನವಾ ಮಿಸಣಿಪ ತಂತ್ರಸಾರಾ । ವಸುದೇವ ಸುತ ಜನಿಸಿದ ನಿರ್ಣಯ ಮತ್ತೆ । ಋಷಿ ಕಲ್ಪ ನರಸಿಂಹ ಪೊಸ ಬಗೆ ನಖಸ್ತುತಿ । ನಿಷಿಕರನಂತೆ ಶೋಭಿಸುವಾ ಮೂವತ್ತೇಳು। ರಸಪೂರಿತವಾದ ದರುಶನ ಗ್ರಂಥಗಳು, ರ । ಚಿಸಿ ಏಕಾವಿಂಶತಿ ಅಸುರಾಭಾಷ್ಯಗಳಾ । ಖಂಡಿಸಿ ವಾದಿಗಳಾ ಭಂಗಿಸಿ ಸೋಲಿಸಿ ಚತು- । ರ್ದಶ ಲೋಕಕ್ಕೆ ದೇವಾ ಝುಷಕೇತು ಪಿತನೆಂದು । ಬೆಸಸಿ ಡಂಗುರವ ಹೊಯ್ಸಿ ಬಿರಿದಾನೆ ಎತ್ತಿಸಿ । ಸುಜನರಾ

## ೪) ಶ್ರೀಸುಮಧ್ವವಿಜಯ ಸುಳಾದಿ

**ರಾಗ - ಮಾರವಿ** **ಧ್ರುವತಾಳ**

ಮುನಿಗಳ ಮಸ್ತಕರತುನಾ, ಭಾರತೀರಮಣಾ । ತೃಣ ಮೊದಲಾದ ವ್ಯಾಪ್ತನೆ ಪಾವನ ಶರೀರಾ । ಗುಣನಿಧಿ ಪವಮಾನಾ, ಪವಮಾನಾ, ಪಂಚಾಪವನಾ, । ಅಣು ಮಹತ್ತು ರೂಪಾನೆ, ಸನಕಾದಿಗಳ ಪ್ರೀಯಾ । ವನಜಜಾಂಡವನ್ನು ತಾಳವನೆ ಮಾಡಿ ಬಾರಿಸುವಾ । ಘನ ಸಮರ್ಥನೆ ಸಜ್ಜನಪಾಲಾ, ಶುಭ ಲೋಲಾ । ಅನಿಲ ಪ್ರಧಾನವಾಯು, ಹನುಮ ಭೀಮಾ ಮಧ್ವ । ಮುನಿ ಜ್ಞಾನ ದಾತಾ, ಕರಣ ಅಭಿಮಾನಿಗಳಾ । ಗಣನೆಮಾಡದೆ ಗೆದ್ದಾ, ಅನಿಮಿತ್ತ ಬಂಧುಜಗ-। ಜ್ಜನಕ ಚತುರಹಸ್ತಾ,ಮಿನಗುವ ಗದಾಪಾಣಿ । ದನುಜರಾ ಸದೆಬಡಿದಾ, ರಣರಂಗ ಧೀರಾ ಶೂರಾ । ಇನ ಮೊದಲಾದ ಠಾವಿನಲ್ಲಿ ಸರ್ವದಾ ತೇಜಾ । ವನಜಾರಿ ಕುಲಾಧೀಶಾ, ಮನ ಮುದ್ದು, ಪೂರ್ಣ ಪ್ರಜ್ಞಾ । ಪ್ರಣತಾರ್ತಿಹರ ಆರ್ಯಾ ಅನುಗಾಲಾ ಜಗದ್ಗುರು। ಜನುಮ ಜನುಮ ಸಾಧನ ಮಾಡಿಸುವ ಕರುಣಿ । ನೆನೆದವರಿಗೆ ಚಿಂತಾಮಣಿ ಸುರಧೇನು ತರುವೆ । ಪ್ರಣವ ಮೂರುತಿ ವಿಜಯವಿಠ್ಠಲ ನಾರಾ- । ಯಣನಂಘ್ರಿ ಗುಪ್ತಾದಲ್ಲಿ ಮನದೊಳೆಣಿಪಾ ಮೌನಿ ॥ ೧॥

**... ಮಟ್ಟತಾಳ ...**

ನಿನ್ನಾಧೀನವೇ ಲೋಕಾ, ನೀ ಹರಿಯಾಧೀನಾ । ನಿನ್ನ ಪ್ರೇರಣೆ ಜಗಕೆ, ನಿನಗೆ ಪ್ರೇರಣೆ ಹರಿ । ನಿನ್ನಾಧಾರ ನಮಗೆ, ನಿನಗಾಧಾರಾ ಹರಿ । ನಿನ್ನ ಬೆಳಕು ಜಗಕೆ ನಿನಗೆ ಬೆಳಕು ಹರಿ । ನಿನ್ನ ಧ್ಯಾನ ನಮಗೆ, ನಿನಗೆ ಹರಿಯ ಧ್ಯಾನಾ । ನಿನ್ನ ಸ್ತೋತ್ರವೇ ನಮಗೆ, ನಿನಗೆ ಹರಿಯ ಸ್ತೋತ್ರಾ। ನಿನ್ನ ಕಾಣೆವು ನಾವು, ನೀ ಹರಿ ಯನು ಕಾಣ್ಬೆ । ನಿನ್ನ ಮಾಯವೇ ನಮಗೆ, ನಿನಗೆ ಹರಿಯ ಮಾಯಾ । ನಿನ್ನೊಳಗೆ ಹರಿ, ನೀನು ಹರಿಯೊಳಗೆ। ಅನ್ಯೋನ್ಯವಾಗಿ ಭಕ್ತರ ಮನದಲ್ಲಿ । ಕಣ್ಣಿಗೆ ಪೊಳೆವುತ್ತಾ ಪೊಳೆದಾಡುವ ಪ್ರಾಣಾ । ಚಿಣ್ಣವತಾರಾ ಶ್ರೀವಿಜಯವಿಠ್ಠಲಂಗೆ ಅ ।ಚ್ಛಿನ್ನ ಭಕ್ತನಾದಾ, ಸನ್ಯಾಸಿಗಳೊಡೆಯಾ ॥೨॥

**... ರೂಪಕತಾಳ ...**

ಕಲಿ ಮೊದಲಾದಾ ಖಳರು ಸತ್ಕರ್ಮಮಾಡುವಾ । ಹಳಿದು ಯೋಚನೆ ಮಾಡಿ ಮಣಿಮಂತನೆಂಬುವನಾ । ಬಲವಂತಾನಹುದೆಂದು, ಕರದು ಉಪದೇಶಿಸಿ। ಇಳೆಯೊಳು ಜನಿಸಿ ಭೇದಾರ್ಥ ಜ್ಞಾನವೆಲ್ಲಾ । ಅಳಿದು ಸಜ್ಜನರನ್ನು ಮಂದ ಮತಿಗಳ ಮಾಡಿ । ಕುಲ ಮರಿಯಾದೆಗಳ ಕೆಡಿಸಿ, ಜಗವಾ । ಬಲು ಮಿಥ್ಯಾವೆಂದು ಸ್ಥಾಪಿಸಿ, ಜೀವೇಶಗೆ ಐಕ್ಯಾ । ತಿಳಿಸಿ, ಪರಗತಿಯಾ ಮಾರ್ಗಾ ತೋರದಂತೆ । ಹೊಲೆಗೆಲಸ ಪೋಗೆಂದು, ಮನ್ನಿಸಿ ಮುದದಿಂದ । ಪೇಳಲು, ಹರುಷವ ತಾಳಿ ಖಳನು, ಮನ । ದೋಳು ನೆನೆದಾ ನಿಲಸಾ ನಿನ್ನ ಅಂದಿನ ವೈರಾ । ವಳಿತೆಂದು ಕೈಕೊಂಡು ವಿಜಯವಿಠ್ಠಲನ್ನಾ । ಸುಲಭ ಭಕ್ತರ ಮತಿ ಅಳಿದು ಬಿಡುವೆನೆಂದೂ ॥ ೩॥

... ಝುಂಪೆತಾಳ ...

ಚರಣಡಿ ಎಂಬೊ ಗ್ರಾಮದಲಿ, ವಿವಶಳಾಗಿ । ಚರಿಸುವ ಸ್ತ್ರೀಯಳಲ್ಲಿ ಜನಿಸಿ ಬಂದೂ। ದುರುಳ ಸಂಕರನೆಂಬೋ ನಾಮದಲ್ಲಿ । ಧರೆಯೊಳಗೆ ಮೆರೆದು ಮನೋ ಕಾಯಾವಾಚಾದಲ್ಲಿ ತಾನಾಗ । ಎರಡೆಂಬೊ ವಾಕ್ಯವ ಪೇಳದಾಲೆ । ತಿರುಗಿದನು ಬಹುಬಗೆ ದುಃಶಾಸ್ತ್ರವನೆ ರಚಿಸಿ । ಶಿರಬಲಿತು ಧರ್ಮಗಳ ನಿರಾಕರಿಸಿ। ಪರಮಾತ್ಮಗೆ ನಿರ್ಗುಣ ಪೇಳಿ ಉತ್ತಮಾ । ಪರವೆಲ್ಲ ಜೀವದಲ್ಲಿ ಸಾಧಿ ಸುತ್ತಾ। ಇರಲು ಸಜ್ಜನರೆಲ್ಲಾ, ಹಸಗೆಟ್ಟು ಕೇವಲಾ । ಮೊರೆಯಿಡಲು ಹರಿ ಕರುಣ ದಿಂದಾ, ನೀನು । ಸುರರು ಪೊಗಳಲಾಗಿ, ವಿಜಯವಿಠ್ಠಲನಾಜ್ಞಾ । ಶಿರದಲಿ ಧರಿಸಿ, ಅವತರಿಸಿದಾ ವೃಕೋದರಾ ॥ ೪॥

... ತ್ರಿಪುಟತಾಳ ...

ಜನಿಸಿದೆ ಪರಮ ಶುಕ್ಲಾತ್ರಯನೆ ವೇಗದಿ ನಡು । ಮನೆಯ ಬ್ರಾಹ್ಮಣ ನಿಜನಾರಿಯಲ್ಲೀ। ತನಯಾಲೀಲೆಯತೋರಿ, ಹುರುಳಿಗುಗ್ಗರಿಮೆದ್ದು । ಜನನಿಗಾಶ್ಚರ್ಯವಾ ಮಿಗಿಲೆನಿಸಿ,। ಕುಣಿದಾಡಿ ಬಲಿವರ್ಧನನಾ ಸಂಗಡ ಪೋಗಿ। ಹುಣಸಿಬೀಜದಲ್ಲಿ ಸಾಲಾವನೆ ತಿದ್ದಿ । ತೃಣಮಾಡಿ ಶಿವಶಾಸ್ತ್ರಿಯನು ಸೋಲಿಸಿ ಆ । ಕ್ಷಣದಲ್ಲಿ ಯತಿಯಾದೆ, ಜನಕನಿಂದಾ । ಫಣಿಯಾದ್ಯರಿಗೆ ಗುರುವಾದಾ, ನಾರಿಯ ರಮಣಾ । ಅನುಸರಿಸಿ ಅಚ್ಯುತ ಪ್ರೇಕ್ಷನಲ್ಲಿ । ವಿನಯಾದಲಿ ಪೋಗಿ, ನಿಯತವಾಗಿ ಶಿಷ್ಯಾ। ತನ ಪಡೆದಿ, ಮಧ್ವಾಖ್ಯಾನಾಮದಲ್ಲಿ । ಅನಿಮಿಷ ನದಿದಾಟಿ, ಭೂಪತಿಯಾ ವಂಚಿಸಿ । ಬಿನಗು ಚೋರಾರನ್ನು ಮೋಸಾಗೊಳಿಸಿ । ಮನೋವೇಗಾದಲಿ ಮಹಾ ಬದರಿಕಾಶ್ರಮದಲ್ಲಿ । ದನುಜಾರಿ ಇರೇ ಪೋಗಿ, ನಮಿಸಿ ವಿದ್ಯಾ । ಅನುವಾಗಿ ಕಲಿತು, ಸರ್ವದ ಅಲ್ಲಿದ್ದಾ ಸರ್ವಾ । ಮುನಿಗಳಿಂದಲಿ ಪೂಜೆಗೊಂಡು ತೆರಳೀ । ಜನುಮ-ರಹಿತವ್ಯಾಸಾ ಮುನಿಯನ್ನೆ ಕಂಡು ವಂ- । ದನೆಮಾಡಿ, ಎಂಟು ಮಳಲಾ ಮುಟ್ಟಿಗೆ । ಯನು ಪಡೆದು ಬಂದೆ ರಜತಪೀಠ ಪುರದಲ್ಲಿ । ಇನನಂತೆ ಪೊಳೆವಾ ಆನಂದತೀರ್ಥಾ । ಗುಣಪೂರ್ಣ ಅನಂತೇಶ್ವರಾ ವಿಜಯವಿಠಲನ್ನ । ಅನುದಿನ ನೆನೆಸುವಾ ವೈಷ್ಣವಾಚಾರ್ಯಾ ॥ ೫॥

... ಅಟ್ಟತಾಳ ...

ವಸುಧಿಯೊಳಗೆ ರಕ್ಕಸ ರೂಪ ಸಂಕರ । ಮಸದು ಮತ್ಸರಿಸಿ ತಾಮಸ ಶಾಸ್ತ್ರಗಳು। ನೆನಸೆ, ನಿರ್ಮಾಣಜ್ಞಾನಾ ಪುಶಿಯೆಂದು ವರದು । ವೊಲಿಸಿಕೊಂಡು ಅವರಿಗೆ ಭಸುಮಾವ ಬಡಿಸಿ । ವೆಕ್ಕಸಗಾಗಿರಾಲಿತ್ತ ಶ್ವಸನಾವತಾರನೆ । ನಸು ನಗುತ್ತಾ ವೇಗಾ, ದಶಪ್ರಕರಣ । ರಂಜಿಸುವ ಸೂತ್ರವೇ ನಾಲ್ಕು । ದಶ ಉಪನಿಷತ್ । ಎಸೆವಾ ಋಗ್ಭಾಗೀತಾ ಹಸನಾದೆರೆಡು ಭಾಷ್ಯಾ, ತ್ರಿಸತ್ತಾತ್ಪರ್ಯವು। ಎಸಳು, ಯಮಕ ಭಾರತಾಗಮಸದಾಚಾರ । ಕುಶಲಾಸ್ಮೃತಿ ದ್ವಾದಶಸ್ತೋತ್ರ ಕೃಷ್ಣಾಸು । ರಸ ಮಹಾರ್ನವಾ ಮಿಸಣಿಪ ತಂತ್ರಸಾರಾ । ವಸುದೇವ ಸುತ ಜನಿಸಿದ ನಿರ್ಣಯ ಮತ್ತೆ । ಋಷಿ ಕಲ್ಪ ನರಸಿಂಹ ಪೊಸ ಬಗೆ ನಖಸ್ತುತಿ । ನಿಷಿಕರನಂತೆ ಶೋಭಿಸುವಾ ಮೂವತ್ತೇಳು। ರಸಪೂರಿತವಾದ ದರುಶನ ಗ್ರಂಥಗಳು, ರ । ಚಿಸಿ ಏಕಾವಿಂಶತಿ ಅಸುರಾಭಾಷ್ಯಗಳಾ । ಖಂಡಿಸಿ ವಾದಿಗಳಾ ಭಂಗಿಸಿ ಸೋಲಿಸಿ ಚತು- । ರ್ದಶ ಲೋಕಕ್ಕೆ ದೇವಾ ಝುಷಕೇತು ಪಿತನೆಂದು । ಬೆಸಸಿ ಡಂಗುರವ ಹೊಯ್ಸಿ ಬಿರಿದಾನೆ ಎತ್ತಿಸಿ । ಸುಜನರಾ

ಉದ್ಧರಿಸಿ ಪೊಗಳಿಸಿಕೊಂಡು । ದಶ ದಿಕ್ಕಿನೊಳು ಕೀರ್ತಿ ಪಸರಿಸಿ ಮೆರೆವಾ ವಿ। ಕಸಿತಾವದನ ತ್ರಿದಶರ ಮನೋಹರಾ। ಹಸಿದವನಂತೆ ಭುಂಜಿಸಿದೆ ಕದಳಿ ಫಲ । ವಶವೇ ಪೊಗಳಲು ಮಾನಿಸಗೆ ನಿಮ್ಮ ಮಹಿಮೆ । ಶಶಿಕೋಟಿ ಲಾವಣ್ಯ ವಿಜಯವಿಠಲನಂಘ್ರಿ । ವಶಮಾಡಿಕೊಂಡಾ ಸಂತಸಜ್ಞಾನ ದಾತಾ ॥ ೬॥

... ಆದಿತಾಳ ...

ದುರುಳ ಮೋಹಕ ಶಾಸ್ತ್ರ ಗಿರಿಗೆ ಕುಲಿಶಾನೆನಿಸಿ । ತರಿದು ಸಿದ್ಧಾಂತ ಮತ ಪರಮತತ್ವವೇ। ತಾತ್ಪರ್ಯ ಗುಣತಾರತಮ್ಯ ಅರುಹಿ ಮುಕ್ತಿಗೆ ದಾರಿ । ಕರದು ಕರದೊಳು ತೋರಿ ಎರಡಾರು ಪುಂಡ್ರಾ ಮುದ್ರೆ । ಧಾರಣ ಮಾಡಿ ಪಾಮರರ ಪಾಲಿಸಿ ತಾಮಸರ ತಮಸಿಗೆ ಅಟ್ಟಿ । ಶಿರಿಪತಿ ಪ್ರೀತಿಬಡಿಸಿ ಶರಧಿಯೊಳಗೆ ಹಡಗಾ। ಬರುತಾ ನಿಲ್ಲಲು ನೋಡಿ ಕರದು ಗೋಪಿಚಂದನಾ । ಕರಣೆ ತೆಗೆದುಕೊಂಡು ಭರದಿ ದ್ವಾದಶ ಸ್ತೋತ್ರವ ಮಾಡುತಾ ಆ । ದರವಳಗುಳ್ಳಾ ಸೋ । ದರಮಾವನ ವೈರಿಯಾ ನಿರೀಕ್ಷಿಸಿ ಮಧ್ವ ಸರೋವರದಲಿ ತೊಳೆದು ನಿಂದಿರಿಸಿ ರಜತಾ ಪೀಠಾಪುರದಲಿ ಉತ್ಸಾಹದಿ ಸರಸದಲಿ ಪೂಜಿಸಿ । ತರುವಾಯರ್ಚನೆಗೆ ನಾಲ್ಕೆರಡು ಸನ್ಯಾಸಿಗಳಾ। ಕರಕಮಲದಿಂದ ಪಡೆದೆ ವರಮಧ್ವ ತಾಳ ಮಠ । ನರಸಿಂಹ ಸುಬ್ರಹ್ಮಣ್ಯ ಪರಮಕ್ಷೇತ್ರದಲಿ। ಇಬ್ಬರ ಯತಿಗಳ ಇಟ್ಟು ಪರಿ ಪರಿಯಿಂದ ಈ ಮೂರು ಕ್ಷೇತ್ರವಾ । ಸರ ಒಂದು ಬಿಡದೆ ಸಂಚರಿಸಿದ ಮಹಾ ಕಾಯ । ಸರಸಿಜನಾಭಾ ಮುನಿ ನರಹರಿಮಾಧವ । ವರ ಅಕ್ಷೋಭ್ಯ ಏಕೋದರ ವಿಷ್ಣುತೀರ್ಥ ಮಹಾರಣ ತ್ರಿವಿಕ್ರಮಾರ್ಯ ದುರಿತನಾಶನ ಭಗವ । ತ್ವರನಾದಾ ಸತ್ಯತೀರ್ಥ, ತರುವಾಯಾ ನಾರಾಯಣಾ । ಚಾರಿಯನು ಎಂಬೋ ಶಿಷ್ಯರನ ಪಡದು ಆ । ವರ ಗುರುಭಾವನೆ ಇದ್ದಿನಿತು । ಅರುಹಿ ಮೂಲ ರಾಮನ್ನ ಚರಣವನ್ನು ಭಜಿಸಿ । ಧರೆಯೊಳಗಿಟ್ಟು ಇಹಪರದಲ್ಲಿ ಬೋಧನೆಂಬೊ । ಚರಿತೆಯನ್ನು ತೋರಿಸಿ, ಮರಳಿ ಸುರರು ಕುಸುಮ । ವರುಷವ ಗರೆಯಲು ಬದರಿಗೆ ಪೋಗುತ ದಿವ್ಯಾ । ಕರಬೀಸಿ ಸತ್ಯತೀರ್ಥರ ತಿರುಗಿ ಸ್ಥಳಕಟ್ಟಿದೆ । ನಿರುತ ವೇದವ್ಯಾಸನ್ನ ಕರುಣಾವ ಸಂಪಾದಿಸಿ । ವರ ವಿದ್ಯಾ ಓದುವ ಪರಮಗುರುವೆ ಸತ್ಯಾ । ಕರದಂಡವನ್ನು ತಿರುಹಿ ನೆಲ್ಲುಬೆಳೆವಾ ಪರಿಯ ಮಾಡಿದ ಶಕ್ತಾ । ಪರಮಜ್ಞಾನಿ ವಿರಕ್ತಾ ಎರಗುವೆ ನಿನ್ನ ಲೀಲೆ । ಅರಿತಷ್ಟು ಪೇಳಿದೆ ಹಿರಿದು ವರ್ಣಿಸೆ ನಮ್ಮಾ। ಹಿರಿಯರು ಬಲ್ಲರಯ್ಯಾ ತರುಳತನದಲಿಂದಾ । ಗಿರಿಯಾ ಧುಮುಕಿದವನೆ ಸರಿಗಾಣೆ ನಿನಗೆಲ್ಲಿ। ಸರಿಗಾಣೆ ನಿನಗೆಲ್ಲಿ ಎರವು ಮಾಡದೆ ಎನ್ನಾಂ । ತರಿಯಾಮಿಲಿಪ್ಪಾ ಪರಿಪಾಲಿಸು ನಿಜ ಶರಣರೊಳಗೆ ಇಟ್ಟು ಜರಮರಣ ರಹಿತಾ ವಿಜಯವಿಠಲನ್ನಾ । ಎರಡೊಂದವತಾರಾ ಧರಿಸಿದ ಧರ್ಮಶೀಲಾ ॥ ೭॥

... ಜತೆ ...

ಅದ್ವೈತಮತ ಕೋಲಾಹಲ ರಿಪುಮಸ್ತಕಶೂಲಾ । ಮಧ್ವರಾಯಾ ವಿಜಯವಿಟ್ಠಲನ್ನ ಮಹಾಪ್ರೀಯಾ ॥ ೮॥

೫) ॥ ಶ್ರೀಜಯವಿಜಯದಾಸಾರ್ಯ ನಿಜಗೂಢದಾಸ ಶ್ರೀವರದ ಸುಂದರವೆಂಕಟೇಶ
(ಶಾ.ಶ. ೧೬೮೨ ವಿ. ಸಂವತ್ಸರದಲ್ಲಿ ಅಂದರೆ ಇಂದಿಗೆ ಸುಮಾರು ೨೩೬ ವರ್ಷಗಳ ಹಿಂದೆ) ವಿರಚಿತ॥

## ಕನ್ನಡ ಶ್ರೀಮದಣುಮಧ್ವವಿಜಯ

### ॥ ಮಂಗಳಾಚರಣ ಶ್ಲೋಕ ॥

**ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಮ್ ।**
**ಶ್ರೀವ್ಯಾಸಂ ಮಧ್ವಸಂಸೇವ್ಯಂ ಸಮಸ್ತಾಭೀಷ್ಟದಂ ಭಜೇ ॥**

(ಪಾಠಾಂತರ :- ನಮಾಮಿ ಜ್ಞಾನಸಿದ್ಧಯೇ)

### ಭಾಮಿನಿಷಟ್ಪದಿ

ಶ್ರೀವರಗೆ ವಂದಿಸುತ ಲಕ್ಷ್ಮೀ । ದೇವಿಯನು ಬಲಗೊಂಡು ಮಾರುತ । ದೇವ ಹನುಮದ್ಭೀಮಮಧ್ವರ ಪಾದಕೆರಗುತಲಿ ॥ ಆವ ತಾವರೆನಾಭ ಯತಿಗಳ। ಪಾವನದ ಪಾದಗಳ ನೆನೆಯುತ । ಕಾವನಯ್ಯನ ದಾಸವರ್ಗಕೆ ನಮಿಪೆನನುದಿನದಿ ॥ ೧॥ ರಾಮಣೀಯಕವಾದ ಭಕ್ತಿ । ಪ್ರಾಮೆಯದ ನವಮಾಲೆ ಎಂಬುವ । ಕಾಮಿತಾರ್ಥದ ಮಹತಿಯಾದಣುಮಧ್ವವಿಜಯ ಕೃತ ॥ ಧೀಮತರು ನಾರಾಯಣಾಖ್ಯ । ಸ್ವಾಮಿ ಮಧ್ವಾಣುಗರ ಸೂರಿಗೆ । ನೇಮದಿಂ ಕರ ಮುಗಿದು ಬರೆದುದನೊರವೆ ಕನ್ನಡದಿ ॥ ೨॥ ಸ್ನಾನ ಜಪ ತಪ ವೌನ ಧ್ಯಾನವ । ದಾನ ಯಜ್ಞ ವ್ಯಾಖ್ಯೆ ತೀರ್ಥವ । ತಾನಹಮ್ಮತಿಯೊಳಗೆಸಗಲಿಲ್ಲೇನು ಲಭಿಸುವದು ॥ ಜ್ಞಾನಿಗಳ ಸಹವಾಸ ಮಾಡದೆ । ಜ್ಞಾನಿ ಸದ್ಗುರು ಸೇವೆ ಗೈಯದೆ । ಜ್ಞಾನಸುಖಪೂರ್ಣಾಯುರೂಪರ ಮಹಿಮೆ ತಿಳಿಯದಲೆ ॥ ೩॥ ಇದು ಸದಾಪದ್ಧರಿಸಿ ಸಂಪದ । ಮುದದಲೀಯುವದೊದಗಿ ಮುಂಜಿವಿ । ಮದುವೆ ಶುಭಗಳನೇಕ ಮಧ್ವರ ಚರಿತೆ ಪಾಡ್ವವಗೆ ॥ ಇದು ಸುಧಾರಸವಿದೆ ಸುರದ್ರುಮ । ವಿದೆ ಸದಾಧ್ಯಾತ್ಮವಿದೆ ಜ್ಞಾನದ । ವಿದೆ ಸುಚಿಂತಾಮಣಿಯು ಮುಕ್ತಿದ ಪಠಿಸೆ ಭಕ್ತಿಯಲಿ ॥ ೪॥ ಶ್ರೀಶಪ್ರೀತಿಗೆ ಪೂಜ್ಯ ಪ್ರಾಣನೆ । ಕೇಸರೀವ್ಯಗನಿಂದಲಂಜನೆ। ಮೀಸಲಾದುದರದೊಳಗವತರಿಸಿದ ಸುರಶ್ಲಾಘ್ಯ ॥ ಪೇಶಲಾಚರ ಹನುಮನಾಮದಿ। ಶ್ರೀಶರಾಘವನಾಜ್ಞೆ ವಹಿಸುತ । ಲಾ ಸಮುದ್ರವ ದಾಟಿ ಸೀತೆಯ ವಾರ್ತೆಯನು ತಂದು ॥ ೫॥ ರಾಮ ಕಪಿಸಹ ಸೇತು ಮಾರ್ಗಸು । ಗಾಮಿ ಲಂಕಾಧೀಶ ದುಷ್ಟನ । ಭೀಮ ಮುಷ್ಟಿಲಿ ಹಿಟ್ಟು ಮಾಡುತ ಗಂಧಗಿರಿತಂದು ॥ ಕಾಮಿ ರಾವಣಹಂತೃ ಪುರಗಂ । ರಾಮ ಸೀತೆಯ ಪೂಜಿಸುತ್ತೀ । ನೇಮ ಕಿಂಪುರುಷದಲಿ ನೋಳ್ಪನೆ ಪ್ರಾಣ ರಕ್ಷಿಪುದು ॥ ೬॥ ಈ ಹನುಮನೇ ಭೀಮ ವಜ್ರದ । ದೇಹಿಯಿತರಾಭೇದ್ಯ ಚಕಿತ ಸ । ಮೂಹ ಶಾತೃಗಳಿಂದ ಕೃತಪ್ರಾಣಾ-ಪಹನಿರಸನಾ ॥ ಆ ಹಿಡಿಂಬನ ಸದೆದು ಲೀಲೆಲಿ । ಮಾಹ ವ್ಯಾಸರ ಕೃಷ್ಣೆ ಪೊಂದಿದೆ । ಆಹ್ವೆ ನೃಪಸೂಯವನು ಮಾಡ್ದೆ ಜರಾದಿಗಳ ಕೊಂದು ॥ ೭॥ ವನದಿ ಮಣಿಮಂತಾದಿ ದುಷ್ಟರ । ಹಣಿದು ಕೀಚಕಕುಲವ ದುರ್ಯೋ । ಧನ ಸಮಸ್ತರ ವಿಪಿನವಾಸಾನಂತರದಿ ಕೊಂದೂ ॥ ವಿನುತ ತನಪದ(ಸ್ವಪದಂ) ಪೊಂದಲಾ ರಿಪು । ಮಣಿಮಂತಾದಿಗಳೆದ್ದು ರೋಷದಿ। ಜನಿಸಿ ಜಗದಿ ಕುಶಾಸ್ತ್ರ ರಚಿಸಿರೆ ರಕ್ಷಿಸ್ಯೆ ಭೀಮಾ ॥ ೮॥ ರೌಪ್ಯಪೀಠಾನಂತದೇವ । ಪ್ರಾಪ್ಯನುತ್ಸವದಲ್ಲಿ ಸೂಚಿತ । ದೀಪ್ಯ ಸುರರರ್ಥನೆಯ ವಚನದಿ ಸುಜನರಜ್ಞಾನ ॥ ದೂರ್ಪಡಿಸಿ ಜ್ಞಾನಕ್ಕೆ

ಗುರುಮತಿ । ತಾಪ್ಯವರ ಮಧ್ಯಾಲಯದೊಳತಿ । ಗೌಪ್ಯದವತರ ವಾಸುದೇವಾಭಿಧನೆ ಪಾಲ್ಕುಡಿಯಲ್ ॥ ೯॥ ಗೋವುದಾನವನಿತ್ತ ವಿಪ್ರಗೆ । ತಾವು ಶಾಸ್ತ್ರಜ್ಞಾನ ಮುಕ್ತಿದ । ಸೇವಿಸಿದೆ ರೂಪ್ಯಾಲಯೇಶನ ಬ್ರಹ್ಮರಾಕ್ಷಸನಿಂ ॥ ತಾವು ಪೂಜ್ಯರದಾಗಿ ಸೋದರಿ । ಯಾವ ಬೆಯಿಸಿದ ಹುರಳಿ ತಿನಿಸಲು । ಕೇವಲದಿ ಸಂತೃಪ್ತ ಮುಖ್ಯಪ್ರಾಣ ಮೇ ಪ್ರಿಯತಾಂ ॥ ೧೦॥ ವಾಸುದೇವನು ಸುಮುಖ ಚಂದ್ರ ಸ । ದಾಸುಮಂದಸ್ಮಿತದಮೃತ ಕಲೆ । ಲೇಸು ರಸಪೂರಿತವ ಸಂಪದ್ಯುಕ್ತ ಕಲಭಾಷೆ ॥ ಗೈಸೆ ಗೋಪುಚ್ಛಾವಲಂಬನ । ವೀಸು ಮೊದಲೆನೆ ಬಾಲಲೀಲೆ ವಿ- । ಲಾಸದಿಂ ಜನರಂಜನದೊಳಾನಂದ ವೀಯುತಲಿ ॥ ೧೧॥ ತಂದೆಗೆತ್ತನು ಕೊಟ್ಟ ಧನಿಕನು । ಬಂದು ತಾಪವ ಕೊಡಲು ನಗುತಲಿ । ತಂದು ಬೀಜಗಳಿಂದ ಸಾಲವ ಹರಿದು ದುಃಖಹರ ॥ ಅಂದದವತಾರಾಸುದೇವನು। ಇಂದು ಭಗವಾನ್ವಾಸುದೇವನು। ತಂದೆಯಿಲ್ಲಿರ್ಪೆನ್ನಯ ಜ್ಞಾನಾಪದವ ಹರಿಸೈ ॥ ೧೨॥ ಮೂರು ವರ್ಷದ ವಾಸುದೇವನು। ಧೀರನೊಬ್ಬನೆ ಯೋಜನದ್ವಯ । ದೂರದಲ್ಲಿಹ ವಿಷ್ಣುದೇವಾಲಯಕೆ ಪೋಗಿಹನು ॥ ಶ್ರೀರಮಣಿ ದುರ್ಗಾಂಬೆ ಲಾಲಿತ । ಚಾರುಮಾತೃಕ ವರಣ ಪರಿಚಯ। ಮೀರಿದತಿ ವಿಸ್ಮಯವ ತಾತಗೆ ತೋರ್ದ ಮಹಮಹಿಮಾ ॥ ೧೩॥ ತಾನೆ ಪಂಡಿತನೆಂದು ತಿಳಿದಿಹ । ಮೇಣು ಶಿವಭಟ್ಟನನು ಸಭೆಯೊಳು। ಜಾಣ ಜಯಿಸಿದ ತಿಳಿಯಲಾರದ ಲಿಕುಚದರ್ಥವನು ॥ ತಾನು ತಂದೆಗೆ ಪೇಳ್ದವನ ಸು । ಮ್ಮಾನದಿಂದುಪನೀತನಾದನೆ । ಪ್ರಾಣ ಸುರರಿಂ ಪೂಜ್ಯನೆನ್ನಯ ತುತಿಗೆ ಗೋಚರಿಸೈ ॥ ೧೪॥ ಯಾವ ಬಾಲಕ ವಾಸುದೇವನು । ದೇವ ಸಜ್ಜನ ವೈರಿ ದೈತ್ಯನ । ಪಾವುಮಯನಂ ಜವ ಸದೆದುಪಾಧ್ಯಾಯರಂ ಜನರೋಲ್ ॥ ಸೇವೆಮಾಡ್ದನೊ ಸಕಲ ಮಿತ್ರರ । ಧಾವಿಸದೆ ದೂರಪ್ಲವನ ಜವ। ಗೈವ ಯುದ್ಧದ್ವಂದ್ವ ಮೊದಲಾದರಲಿ ಬಲಮೀರಲ್ ॥ ೧೫॥ ವಾಸುದೇವನು ತಮ್ಮುಪಾಧ್ಯಯ । ರಾ ಸುಮೂರ್ಖದ ಶಂಕೆ ಹರಿಸಲು । ಭಾಷಿಸುತ ಶ್ರುತಿಶುಚಿಯ ಗುರುಸುತನ ತಲೆನೋವ್ಕಳೆದ ॥ ಆಸು ಪರತತ್ವವನು ತಿಳಿದಿಹ । ವಾಸುದೇವನ ಸುರರು ಯಾಚಿಸ । ಲಾ ಸುಗುರುವಿಂ-ಗೈತರೆಯ ಪೇಳ್ದೆಮ್ಮ ರಕ್ಷಿಸಲಿ ॥ ೧೬॥ ಸನ್ಯಸದಿ ದೃಢ ಬುದ್ಧಿಯಿಂ ಹರಿ । ಯನ್ನನುಜ್ಞಗೆ ನಮಿಸಿ ಪೂರ್ವದಿ । ಚನ್ನೆ ದ್ರೌಪತಿಯರ್ಪಿತಾನ್ನ ಪವಿತ್ರ ಪ್ರಾಜ್ಞನಿಹ ॥ ಮುನ್ನೆ ಗುರ್ವಾಜ್ಞೆಯೊಳು ಹರಿ ಸಗು - । ಣೆನ್ನುತ ಸಮೀಚೀನ ತಪಕೆ ಪ್ರ । ಸನ್ನ ಹರಿವರ ಪಡೆದಣುಗನಿಂ ತತ್ವ ತಿಳಿಯೆಂಬ ॥ ೧೭॥ ಮಾನ್ಯರಚ್ಯುತಪ್ರೇಕ್ಷಯತಿಗಳು । ಘನ್ನ ಸರ್ವಜ್ಞ ಸ್ವಶಿಷ್ಯತೆ। ಯನ್ನು ಪಡೆದಿರೆ ತನ್ನಿಷೇಧವ ಮಾಡಲೆರಡು ಸಲ ॥ ತನ್ನ ಪಿತೃ - ಮಾತೃಗಳು ಬರುತಿರೆ । ಎನ್ನನುಜ ನಿಮ ಪಾಲಿಪೆಂದವ । ರನ್ನನುಗ್ರಹಿಸುತ ನಿರುತ್ತರಗೈದ ಮಾಂ ಅವತು ॥ ೧೮॥ ವಾಸುದೇವನು ಕೊಳುತಲಾ ಸ । ನ್ಯಾಸ ಪೂರ್ಣಪ್ರಜ್ಞ ನಾಮದ । ಲೇ ಶುಭಾಚಾರದಲಿ ಯತಿಕುಲತಿಲಕ ಹರಿಗೆರಗಲ್ ॥ ಈಶನಿವರಚ್ಯುತಗೆ ಕೊಡೆ ಕೊಂ । ಡಾಸುಸುರನದಿ ಈಶ್ವರಾಜ್ಞೆ । ಯೀ ಸರಸಿಗಂ ಬರಲು ಮಿಂದನೆ ಸುಜಯಪತ್ರಗ್ರಹಿ ॥ ೧೯॥ ಲೇಸು ಪೇಳ್ದಿಹನಿಷ್ಟಸಿದ್ಧಿಗೆ । ದೋಷ ಮೂವತ್ತೆರಡು ಜಗದಿ । ವ್ಯಾಸರರ್ಥ ಪ್ರವಚನ ಪುರಾಣೇತಿಹಾಸಗಳೊಳ್ ॥ ಭಾಸುರದ ಬುದ್ಧಿಯನು ಪ್ರಕಟಿಸಿ । ವ್ಯಾಸಕೃತಿಪೂರ್ಣಜ್ಞ ಋಜುಗಣ । ದೀಶನೆಮಗೀಯಲಿ ಸಮೀಚೀನದ ಶುಭಜ್ಞಾನಂ ॥ ೨೦॥ ಮೋಕ್ಷದಂ

ವರಶಾಸ್ತ್ರಕೃತ ಪ್ರಾಜ್ಞೇಕ್ಷ ಮುಖ್ಯಾನಂದ ತೀರ್ಥರೆ । ಲಕ್ಷಿಸದೆ ಅನುಮಾನ ವಾದಿಗಳನ್ನು ಗೆಲ್ಲುದಕೆ ॥ ಪ್ರೇಕ್ಷರನುಮಾತೀರ್ಥರನೆ ಒಂ। ದೇ ಕ್ಷಣದಿ ವಿದ್ಯಾಬ್ಧಿಯನ್ನು ಸು । ತೀಕ್ಷ್ಣಂ ಘನ ವಾದಿಸಿಂಹನ ಗೆಲ್ದು ದುರ್ಭಾಷ್ಯಂ ॥೨೧॥ ಖಂಡಿಸುತ ತಾಂ ಬ್ರಹ್ಮಸೂತ್ರಕೆ । ಮಂಡಿಸುತಲಚ್ಛೇದ್ಯದರ್ಥವ । ನಂಡಲಿದ ಪಿತ ಮಧ್ಯಗೇಹಗೆ ಮೋದವನೆ ಕೊಟ್ಟೆ ॥ ಶೌಂಡಭಾಷ್ಯವ ರಚಿಸಲಚ್ಯುತ । ಕೊಂಡೆಯಾಡಲು ಪ್ರಿಯಸಖನು ಯತಿ । ಕಂಡು ಯಾಚಿಸೆ ಸೂತ್ರಭಾವವ ಪೇಳ್ದವನೆ ಪೊರೆಯೈ ॥ ೨೨॥ ಯಮದಿಶೆಯ ಪಂಡಿತರ ಗೆಲ್ಲಲು। ಗಮನಿಸಿದ ಮಧ್ವರ ಪರೀಕ್ಷಿಸ । ಲಮಿತ ಕೇಳಿಯ ಕೊಡೆ ಪ್ರಭ ೕಕ್ತ ಪಯಸ್ವಿನಿಯ ಜವದಾ ॥ ಗಮನ ನೋಡುತನಂತಶಯನದಿ । ಕುಮತಿ ಕುದಪುಸ್ತೂರು ಸಂಕರ । ನಮಮ ತಕ್ಷಣ ಜಯಿಸಿ ಸಲೆ ಕನ್ಯಾಕುಮಾರ್ಯಾಖ್ಯ ॥೨೩॥ ತೀರ್ಥ ಪೊಂದಿಹ ಸೇತುವೆಯೊಳುರೆ । ಪೂರ್ತಿ ಅಪಹಾಸ್ಯದಲಿ ಸಂಕರ । ಧೂರ್ತನಂ ನೆಲ್ಲರನು ಜಯಿಸುತ ರಂಗನಾಥನನೂ ॥ ಅರ್ತಿಯಿಂ ನಮಿಸಿದನುದೀಚಿಗೆ। ಕೀರ್ತಿಯಿಂ ಜಗವಂದ್ಯ ಬರಲು ಯ । ಥಾರ್ಥದುಪನದಿತಟ ಸುರಾಲಯಗತನೆ ಸಲಹೆನ್ನ ॥೨೪॥ ವಿಶ್ವಪದಕೆ ಶತಾರ್ಥ ವರ್ಣಿಪ । ವಿಶ್ವಕುಶಲರು ದಾನಸೂಕ್ತದ । ನಿಶ್ಚಿತಾರ್ಥವ ಪೇಳಿ ದಿವ್ಯಜ್ಞಾನ ಪ್ರಚರಿಸುತ॥ ವಿಶ್ವವಿದುಷರನೆಲ್ಲ ಜಯಿಸಲು। ವಿಶ್ವವಖಿಲಜ್ಞರಿವರೆನಲವ । ಶಶ್ವದುಡುಪಿಗೆ ಬಂದು ಖಳಕುಲದಮನದ ಪ್ರತಿಜ್ಞಾ॥೨೫॥ ಭೀಮನಂತೆಯ ಮಾಡ್ದ ಗೀತೆಗೆ। ಆ ಮಹಾಭಾಷ್ಯವನೆ ರಚಿಸುತ । ಪ್ರೇಮದಿಂ ವರಗುರುಗಳರ್ಚಿಸಿ ಬದರಿಕಾಶ್ರಮಕೆ ॥ ನೇಮದಿಂದುತ್ತರಕೆ ಪೊರಡುತ । ಸ್ವಾಮಿ ಮಧ್ವರು ಮಿಂದ ತೀರ್ಥಗಳ್ । ವ್ಯೋಮನದಿ ಪಾವನವ ಗೈದನೆ ಮನದಿ ರಾಜಿಸಲಿ ॥ ೨೬॥ ಗಂಗೆ ನದಿಯನು ದಾಟಿ ಮಧ್ವರು। ಮಂಗಳದ ಕರ್ಮಾಚರಿಸುತು। ತ್ತುಂಗ ಬದರಿಗೆ ಪೋಗಿ ನಾರಾಯಣಗೆ ನಮಿಸುತಲಿ ॥ ಹಿಂಗದೇಕಾಂತದೊಳು ಗೀತೆಯ (ಭಾಷ್ಯವ) । ರಂಗಗರ್ಪಿಸಿ ಪುನಹ ಪ್ರವಚಿಸಿ । ದಂಗಸತ್ತಪ ವ್ಯಾಸಪ್ರೇರಣೆ ಶಿಷ್ಯರಿಗೆ ತಿಳುಹಲ್ ॥ ೨೭॥ ಕಾರ್ಯ ಲೇಖಿಸಿ ತೋರ್ದ ಹೊರಟನೆ । ಪ್ರೇರ್ಯ ತಮ ಹಸ್ತಾಭಿನಯದಲಿ। ಆರ್ಯ ಶಿಷ್ಯನ ತಿರುಗಿ ಕಳುಹಿದೆ ಹನುಮಭೀಮತೆರ॥ ಧೈರ್ಯ ಸುಪ್ರಭಾವವನೆ ತೋರ್ದ ಸು । ಕಾರ್ಯ ಹಿಮವದ್ಬದರಿಕಾಶ್ರಮ । ದಾರ್ಯ ವ್ಯಾಸರ ನೋಡ್ವವೆನ್ನಯ ಸಿರಿಯ ಪೆರ್ಚಿಸಲಿ ॥೨೮॥ ಯಾವ ಮಧ್ವರು ಸ್ವಾಶ್ರಮಾಗ್ರದ । ದೇವಮುನಿ ಮಹಗುಣದಿ ಮಾನಿತ । ದೇವ ಬದರೀಚಿತ್ರ ತರುತಲ ಋಷಿಸಮಾಜದಲಿ ॥ ಆವ ಪಾರಾಶರ ಮುನಿಗಳಿಂ । ದೇವಿ ಸತ್ಯವತೀಯಲುದಿಸಿದ । ದೇವ ಹರಿಯಂ ವೇದವ್ಯಾಸರ ನೋಡ್ವ ಹೃದ್ಗುಹನ ॥೨೯॥ ಆವ ಈ ವ್ಯಾಸರೆ ಸುಭಾರತ । ಕೇವಲ ಪುರಾಣೇತಿಹಾಸ ಸ -। ದಾವಲಿಯ ಸತ್‌ಬ್ರಹ್ಮಸೂತ್ರಾದಿಗಳ ಕರ್ತನು ಮೇಣ್ ॥ ದೇವ ಪಾಂಡವರಿಂಗೆ ಗುರುವಿಹ। ನಾವನಗಣಿತಗುಣನು ದೋಷವ । ಭಾವನಿತ್ಯನ ನೋಡ್ವ ಮಧ್ವರು ವ್ಯಾಸ ತೋಷಿಸಲಿ ॥ ೩೦॥ ಸರ್ವವಂದ್ಯ ಸುವಿಮಲಕುವಲಯ। ವರ್ಣ ಶ್ಯಾಮಲದಿಂ ವಿರಾಜಿಸು । ತಿರ್ವ ಜ್ಞಾನಾನಂದ ತೇಜೋಪರಮ ಗುಣಗಣದಿಂ । ಪೂರ್ಣ ಲಾವಣ್ಯದ ಸುರೂಪನು । ಸರ್ವ ಅಂಗದಿ ಶೋಭಮಾನನು । ವಿರ್ವ ಬಿಂಬೋಷ್ಠಂ ಪದಾಂಬುಜ ಶುಭಕಪಿಶಜಟನು ॥ ೩೧॥ ನಿರ್ವೃತಂ ಕೃಷ್ಣಾಜಿನಂಧರ । ಸರ್ವರೀಶಂ ವೇದವ್ಯಾಸಂ। ಶರ್ವ ಪಿತನಂ ನೋಡಿ ನಮಿಸಿದ ಮಧ್ವರೆಬ್ಬಿಸುತಾ ॥ ಉರ್ವರಾಲಿಂಗಿತ ತದಾಜ್ಞೆಲಿ ।

ಸರ್ವಮುನಿ ದುತ್ತಾಸನದಿ ಕುಳಿ -। ತಿರ್ವ ಮಧ್ವಮುನೀಷ್ಟಗುರುವರ್ಯರ್ನ್ನ ರಕ್ಷಿಸಲಿ ॥ ೩೨॥ ವ್ಯಾಸರಿಂದೇಕಾಂತದೊಳಗುಪ । ದೇಶದಿಂ ತಿಳಿದಾಶ್ರಮಾಂತರ । ವಾಸಿ ನಾರಾಯಣನ ಮಧ್ವರು ಪೊಂದಿ ತುತಿಸಿದರು ॥ ಮೇಶ ಸಕಲಜಗತ್ತುಕರ್ತನೆ । ಶ್ರೀಶಮತ್ಸ್ಯನೆ ಹಯಮುಖನೆ ಯವ। ನೀಶ ಕೂರ್ಮ ವರಾಹ ನರಹರಿ ತಾಪಸೇಂದ್ರ ಮನೊ ॥ ೩೩॥ ವಾಮನಂ ಬೌದ್ಧನೆನೆ ಸುಪರಶು। ರಾಮ ವ್ಯಾಸನೆ ರಾಮ ಕೃಷ್ಣ ಸು । ನಾಮನಿತರಾಸೂನು ಕಲ್ಕಿಯೆ ಯಜ್ಞ ಕಪಿಲಾದಿ ॥ ಸ್ವಾಮಿ ಧನ್ವಂತರಿಯೆ ಮೋಹಿನಿ । ಕಾಮದೆನುತಂ ಅಚಿರ ನೆನೆಯುವ । ಆ ಮಹಾವ್ಯಾಸರ ಸುಶಿಷ್ಯರ ನತಿಸಿ ನುತಿಸುವೆನು॥೩೪॥ ದತ್ತ ಸನತುಕುಮಾರ ಋಷಭನೆ । ಸ್ತುತ್ಯ ಹಂಸನು ಕೃಷ್ಣಧರ್ಮಜ । ಮತ್ತೆ ಹರಿನಾರಾಯಣಾಖ್ಯನು ಮುಕ್ತಿದಾಯಕನೂ॥ ಹತ್ತುನೂರು ಸಹಸ್ರವಗಣಿತ । ಉತ್ತುಮವತಾರವನೆ ತಾಳ್ದನಿ । ನಿತ್ತು ರೂಪಗಳಾರು ಹೃತ್ಕಮಲದಲಿ ಧರಿಸಿಹರೋ ॥ ೩೫॥ ತತ್ವಸೂಕ್ತಿಗೆ ವೇದಪತಿ ತಾ । ನತ್ಯಧಿಕ ಪ್ರಿಯಸೂತ್ರಗಳಿಗೆ ಸ । ದರ್ಥ ಬೋಧಿಪ ಭಾಷ್ಯ ರಚಿಸೆಂದಾಜ್ಞೆಯಂ ಗೈಯ್ದರ್ ॥ ಮುಕ್ತಿಯೋಗ್ಯರು ಸೇವಿಸುವ ವರ । ವಿತ್ತ ನಾರಾಯಣನು ಗಮನೋ - । ದ್ಯುಕ್ತ ಸದ್ಗುರು ವ್ಯಾಸನಾರಾಯಣರು ಮೇ ಗತಿದ ॥೩೬॥ ಮುಕ್ತಿದಾಯಕ ವೇದಪತಿಗಳ । ಉತ್ತುಮಾಜ್ಞೆಯ ಪಡೆದು ಮಧ್ವರು । ಮತ್ತೆ ಸ್ವಜನರ ಪೊಂದಿ ನಿಜಮಠದೊಳಗೆ ಬಹುಜನರ ॥ ಭ ಕ್ತಭಿಕ್ಷುವೆ ಹರಿಯ ಗುಣಗಳ। ವ್ಯಕ್ತ ಮಾಡುತ ಪರರ ಪಕ್ಷವ । ತ್ಯಕ್ತಗೈಯಿದ ಸದೃಶದ ಭಾಷ್ಯವ ಗಡನೆ ರಚಿಸಿದನೆ ॥ ೩೭॥ ಪುನಃ ಪೊರಟಲ್ಲಿಂದ ಗೋದೆಯೊ । ಳನುದಿನದಿ ಷಟ್ಶಾಸ್ತ್ರಿಗಳ ಗೆಲು । ತಿನಿತದಲ್ಲದೆ ಸಕಲ ಬುಧಕುಲವಿಜಯಿ ಮೇ ಗತಿದ ॥ ಘುನ ಬುಧಾವಳಿ ಜಯಿಪ ಪಂಡಿತ । ರಿನಿಯ ಶೋಭನಸೂರಿವರ್ಯನ । ಇನಿತು ಕೆಲ ಶಿಷ್ಯರ ಪಡೆದು ಪುನಹಾ ಉಡುಪಿಗೆ ಬರಲ್ ॥ ೩೮॥ ಸಖ್ಯರಾದಾ ಪಿರಿಯ ಯತಿಗುರು । ಮುಖ್ಯರಚ್ಯುತಗುರುಗಳಿಗೆ ಸಹ । ಮುಖ್ಯ ಭಾಷ್ಯವ್ಯಾಖ್ಯೆಯಿಂದಲಿ ಕಳೆದ ಕಲಿಮಲವಂ ॥ ಉಕ್ಕು ಯೌವನ ತ್ರಿದಶಜನರಿಂ । ಮಿಕ್ಕಿ ಚಲಿಸದ ಕೃಷ್ಣಪ್ರತಿಮೆಯ । ದಕ್ಕರದಿ ತಾನೋರ್ವ ತಂದುಡುಪಿಲಿ ಪ್ರತಿಷ್ಠಿಸಿದ ॥ ೩೯॥ ತಮ್ಮುಪಾಧ್ಯಯಸುತನ ಯಜ್ಞಕೆ। ಹಮ್ಮಿನಲಿ ವಿಘ್ನವನೆ ಮಾಡಿಹ । ನಮ್ಮಹ ಜರಾಘಟಿತ ವಿಪ್ರನ ನಿಗ್ರಹಿಸಿ ಯಜ್ಞ ॥ ಸುಮ್ಮನದಿ ಪೂರೈಸಿ ಪುನರು । ತ್ತುಮ್ಮ ವ್ಯಾಸರಿಗೆರಗಿ ಬದರಿಯಿಂ। ಘುಮ್ಮನುಡುಪಿಗೆ ಬಂದ ಮಧ್ವರೆ ಸಂಪ್ರಸನ್ನ ಭವ ॥ ೪೦॥ ಯಾವ ಮಧ್ವರು ರಾಜನೀಶ್ವರ। ದೇವನಪರಾಧಕ್ಕೆ ಪರವಶ । ವೀವ ತೆರಮಾಡಿದರೂ ಖನನಕೆ ಶಿಷ್ಯಸಹಿತಾಗಿ ॥ ನಾವೆಯಿಲ್ಲದೆ ಗಂಗೆ ದಾಟಲು। ಧಾವಿಸಿರಲಾ ತುರ್ಕ ರಾಜನು । ತಾ ವಶವ ಪಡೆದವನ ಭಾಷೆ ಯೊಳೊಮ್ಮೆ ಮಾರ್ಗದಲಿ ॥೪೧॥ ತಮ್ಮ ಘಾತಿಸಬಂದ ಚೋರರ । ಹಮ್ಮನಿಳಿಸಿ ಪರಸ್ಪರಹತರ। ತಮ್ಮ ಶಿಷ್ಯರುಪೇಂದ್ರರಿಂದೋಡಿಸಲು ಮತ್ತೊಮ್ಮೆ ॥ ಸುಮ್ಮನೇ ನಿಲುತ್ಯೋಗಬಲದಿಂ । ದಮ್ಮಹಿಯ ಕಳ್ಳರಿಗೆ ಶಿಲೆತೆರ । ಅಮ್ಮ ಶಿಷ್ಯರ ಸಹಿತ ತೋರ್ದ ಮಹೇಕ್ಷರೀಕ್ಷಿಪೆ ನಾ ॥೪೨॥ ವ್ಯಾಘ್ರರೂಪದ ದೈತ್ಯನೊರಸಿದೆ। ಶೀಘ್ರದಲಿ ನರಸಖನು ಕೊಡಲು ಸ । ಮಗ್ರ ಶುಕ್ಲ ಶಿಲಾಪ್ರತಿಮೆಗಳ ಭಾರತಾರ್ಥ ಬರೆ॥ ತಾ ಗ್ರಹಿಸಿ ವ್ಯಾಸಾಜ್ಞೆ ಸುರನದಿ । ಶೀಘ್ರದಿಂ ಸ್ತಂಭಿಸುತ ದಾಟಿದ । ನಗ್ರಶಾಖಾಧರೆಯ ಭೇದಿಸಿ ಗಂಗೆಪ್ರವಹಿಸುತ ॥ ೪೩॥ ಮೂರ್ತಿಮಂತದಿ ಮಠಕೆ

ಬರುತಲಿ । ಅರ್ತಿಯಿಂ ನಮಿಸಿದಳು ಮಧ್ವಗೆ । ಧೂರ್ತಯುವ ಬಹುಶಿಷ್ಯಜನ ಬರಲೇಕಕಾಲದಲಿ ॥ ಸ್ವಾರ್ಥಬಲ ಗರ್ವಿತ ನಿಜರ ಸಾ । ಮರ್ಥ್ಯ ಸಹಜದಿ ಗೆಲ್ದ ಮಧ್ವ ಸು । ಕೀರ್ತಿ ಗಳಿಸಿದ ವಿಜಯಿ ನಾ ತವ ಸ್ತೋತ್ರಗೈಯುವೆನು॥೪೪॥ ಇಂದ್ರಪುರಿಯತಿ ಮಾಯಿ ಖಂಡಿಸಿ । ಬಂದ ಪಂಡಿತರೆಲ್ಲರನು ಗೆಲಿ । ದಂದು ವೇದದಿ ಹರಿಗುಣದ ವ್ಯಾಖ್ಯಾನದಿಂದೆಸೆದಾ ॥ ಹಿಂದೆ ತಮ ಭೀಮಾವತಾರದ। ಛಂದ ಮಹಗದೆಯನ್ನು ಶಿಷ್ಯರಿ । ಗಿಂದು ತೋರ್ದನೆ ಶಿವನು ಪ್ರತ್ಯಕ್ಷದಲಿ ಪೂಜಿಸುವ॥೪೫॥ ತಂದ ಭಕ್ಷ್ಯಾದಿಗಳ ಭೋಜ್ಯನೆ । ಒಂದುಠಾವಿಲಿ ನಾಲ್ಕುಸಾವಿರ । ತಿಂದು ಮಹರಸ ಕೇಳಿ ತ್ರಿಂಶತಿ ಕುಂಭ ಪಾಲ್ಗುಡಿದಾ ॥ ಒಂದು ಕ್ಷಣನಿಂಪಾದ ಗಾಯನ । ದಿಂದ ಫಲಪುಷ್ಪಗಳ ಚಿಗುರಿಸಿ। ಲಂದದಿಂ ಸತ್ಪೂಜ್ಯ ಮಧ್ವರ ಪೊಂದಿ ಮೊರೆಯಿಡುವೆ॥೪೬॥ ಆದಿಶೇಷನು ಮಧ್ವಪ್ರವಚನ । ಮೋದವಾಲಿಸಿ ಸನಕ ಮುನಿಗಳಿ - । ಗಾದರದಿ ಪೇಳಿದನು ಮಧ್ವರ ಸಮಯಕೇ ಲಭ್ಯಂ ॥ ಆದುದಕೆ ಹೇಮಮಣಿ ಖಚಿತ । ಶ್ರೀದ ಸದನ ನಿರಸ್ತದೋಷವ । ದಾದ ಸಾಯುಜ್ಯಾದಿ ಮೋಕ್ಷದಿ ಸುಖವನನುಭವಿಪ ॥೪೭॥ ವಿವಿಧ ಪ್ರಾಕೃತ ಭೋಗ್ಯ ಸುಂದರಿ । ಯುವತಿಯರ ಭೋಗಿಸುತ ಸಲೆ ಮಾ । ಧವನ ನಿರುತದಿ ದರ್ಶಿಸುವ ಬ್ರಹ್ಮಾದಿ ಮುಕ್ತಗಣಾ ॥ ಅವಿಕೃತಾಲಂಕಾರ ರಸದೃಶ । ಭುವನವೀ ವೈಕುಂಠ ವರ್ಣಿಸಲ್ । ಜವದಿ ಮೋಕ್ಷದ ಶಾಸ್ತ್ರಕರ್ತರನುಗ್ರಹಿಸಲೆನ್ನ ॥ ೪೮॥ ವೇದ ವರವೇದಾಂತ ಪೂರ್ಣ ಸು । ಬೋಧ ಸಿಂಹವು ವಿವಿಧ ಮಾಯಾ । ವಾದಿ ದೈತ್ಯೇಂದ್ರರ ಕುಯುಕ್ತಿಯ ಭರದೊಳಬ್ಬರದಿಂ ॥ ಕಾದಲುರುಮದದಿಂದ ಕುತ್ಸಿತ । ವಾದ ಶರಭಾಷಣದಿ ಜಂಬುಕ। ನಾದ ಸಮಯದಿ ಪುಂಡರೀಕ ಕುವಾದಿಯಂ ಗೆಲ್ದು ॥ ೪೯॥ ವೇದವಾಕ್ಯವಚನೆಯ ಮಧ್ವರು । ಬೋಧಿಸಿದ ವಿಶ್ವಾಶ್ಚರಿಯ ಪುನ । ವಾದಿಸಲು ವ್ಯಾಘ್ರಾಖ್ಯ- ಮಾಯಿಯು ಬಂದಸೂಯದೊಳು ॥ ಸಾಧುಬುಧವರ ನಿಕರಮಧ್ಯದಿ । ವೇದಗಳ ವ್ಯಾಖ್ಯಾನ ಗೈದವ। ನಾದ ಹಾಸ್ಯನು ಮಧ್ವ ತವ ದಾಸಾನುದಾಸಾಃ ಸ್ಮಃ ॥ ೫೦॥ ಮಧ್ವರಾಯಯರ ಪ್ರೀತಿ ಶಿಷ್ಯನೊ । ಳಿದ್ದ ಗ್ರಂಥಗಳಪಹರಿಸಿದಾ। ಪದ್ಮತೀರ್ಥನು ಭಯದೊಳಿತರರ ಮುಂದು ಮಾಡಿರಲೂ ॥ ಪದ್ಮನೆಂಬುವ ಸೈಂಧವನ ಪರಿ । ಶುದ್ಧ ಗೋಗಣದಿಂದ ತಕ್ಷಣ। ಬದ್ಧಮಾಡಿದ ಮಧ್ವನೆಂಬುವ ಪಾರ್ಥವಾದದಲಿ ॥೫೧॥ ಮಧ್ವಶಿಷ್ಯರ ವಚನಶರಗಳ। ಸದ್ದು ಮಾಯ್ಗಳ ಹೃದಯ ಭೇದಿಸೆ । ಕ್ರುದ್ಧ ಮಾಯಾ ದೈತ್ಯ ನರಿಗಳು ಎದ್ದು ಓಡಲ್ಕೆ ॥ ಮಧ್ವಸಿಂಹದ ವಿಜಯಗರ್ಜನೆ । ಸದ್ದು ಜಗದಿ ಪ್ರಸಿದ್ಧವೇ ಶ್ರೀ । ಮಧ್ವರೇ ನಮ್ಮೆಲ್ಲರಿಗೆ ಜಯವಿತ್ತು ಪಾಲಿಸಲಿ ॥ ೫೨॥ ಶ್ರೀಲಕುಮಿಕಾಂತಾಂಘ್ರಿ ಸಂಗತ । ಶೀಲ ಶುಭತಮ ನವ ತರಂಗ ಸು । ಮಾಲೆಯೊಳವಿಚ್ಛಿನ್ನಗತಿ ಗಂಗಾಪ್ರವಾಹದವೋಲ್ ॥ ಮೇಲು ಪಡುವಣ ದಿಗ್ಗಮನ ಶುಭ । ಶೀಲ ನೃಪಜಯಸಿಂಹ ನಿಮ್ಮಯ । ಕಾಲಿಗೆರಗಿದ ಪೂಜ್ಯ ಮೂವತ್ತೆರಡು ಲಕ್ಷಣದಿಂ ॥೫೩॥ ಸರ್ವಸುಂದರ ಗಾತ್ರದಿಂ ತಾ । ಸರ್ವದರ್ಶನ ನಿಖಿಲ ಸದ್ಗುರು । ಶರ್ವಪಿತ ಸದ್ವಿಷ್ಣು ಮಂಗಳ ದೇವನಿಲಯದಿರೆ ॥ ಸರ್ವಶ್ರುತಿ ಶಾಸ್ತ್ರಾನುಚರನಿಹ । ನುರ್ವಿಯೊಳು ಲಿಕುಚಕುಲ ಸಂಭವ । ನಿರ್ವನು ತ್ರಿವಿಕ್ರಮನು ಪೊಂದಿದ ನಿಮ್ಮನಾಂ ತುತಿಪೆ ॥ ೫೪॥ ಪದ್ಮ ಕದ್ದಾ ಗ್ರಂಥ ನೃಪನಿಂ। ಲಬ್ಧವಾಗಲು ಲಿಕುಚ ಕವಿವರ । ಶುದ್ಧ ಮನದಿಂ ಸ್ತೋತ್ರಗೈದರು ಮಧ್ವರಾ ಗುಡಿಯೊಳ್॥

ಇದ್ದು ಲಕ್ಷ್ಮೀಪತಿಯ ಪ್ರೀತಿ । ವೃದ್ಧಿಗೋಸುಗ ದಿನದಿನದಿ ಪರಿ। ಶುದ್ಧ ಮನದಿಂದ್ರಿಯದಿ ಲೋಕದ ಶಿಕ್ಷಣಕೆ ಮುಖ್ಯ ॥ ೫೫॥ ವಿವಿಧ ಶುಭ ಕರ್ಮಗಳ ನೆಗಳುತ । ದಿವಸ ಕೆಲ ಕಳೆಯುತಲಿ ಸುರಗಣ । ವಿವರ ಶಾಲಿಗ್ರಾಮ ಪೂಜಾ ಶಿಲೆಗರೆದರಮೃತಂ ॥ ಕವಲ ಕರ್ಮವಿದಗ್ಧ ಗ್ರಂಥ । ಪ್ರವಚನಾಸಕ್ತರೆ ಸುಶಾಸ್ತ್ರ । ಪ್ರವರ ಪಾಠ ಪ್ರವಚನದ ಮಹಶಕ್ತಿ ಕೊಡಿರೆನಗೆ ॥ ೫೬॥ ಸ್ನಾನ ಮಾಧ್ಯಾಹ್ನಿಕವ ಗೈದು ಅ । ನೂನ ಬೋಧಾಭಿಷವ ದೇವಗೆ। ತಾನೆಸಗಿ ನಿರ್ಮಾಲ್ಯ ತೀರ್ಥವ ಪಾನಮಾಡುತಲಿ ॥ ಆನುತರಿದರ ತಂತ್ರಶಾಸ್ತ್ರಾದಿ । ತಾನು ವಿಷ್ಣುವ ತುಲಸಿಲರ್ಚಿಸಿ । ಕಾಣೆ ಸುಭಗರು ಭುಜಿಸಿದರು ನೈವೇದ್ಯ ಪರಮಾನ್ನ ॥ ೫೭॥ ವೇದಶಾಸ್ತ್ರ ವ್ಯಾಖ್ಯೆಯಿಂ ಸಂ । ಮೋದಿಸಿದ ನಾನಾ ಜನರ ಸಂ । ಧ್ಯಾದಿ ಕರ್ಮವಗೈದು ಗೋವಿಂದನ ಸುಲೀಲೆಗಳ ॥ ಬೋಧಿಸುತ ಭಾಗವತ ವ್ಯಾಖ್ಯೆಯ। ಗೈದ ಮಧ್ವರು ತಾಂ ನಿರುತದಲಿ । ಶ್ರೀದ ವೈಷ್ಣವಿ ಉರುಕಥೆಯ ಪೇಳಿಸಲಿ ಎಮ್ಮಿಂದ ॥ ೫೮॥ ಮಾನ್ಯಸದುಪನ್ಯಾಸ ಗೈದರು । ಧನ್ಯ ಮಧ್ವರು ಹರಿಯಮಿತಗುಣ । ಗಣ್ಯ ಬ್ರಹ್ಮ ಸುವಾಚ್ಯ ವರವೇದ್ಯೈಕವೇದ್ಯನವ॥ ಮುನ್ನೆ ವಿಶ್ವಕೆ ಕರ್ತೃ ಭಕ್ತರಿ । ಗಿನ್ನು ಶುಭಸುಖ ಮೋಕ್ಷ ಕೊಡುವನು । ಮಾನ್ಯ ಶ್ರುತಿಶತಸಹಿತ ಪರಮೋದಾರ ಯುಕ್ತಿಗಳಿಂ ॥ ೫೯॥ ಸಾಧಿಸುತ ಗುಹಸೂರಿ- ವರಸುತ । ನಾದ ವಿಕ್ರಮರನ್ನು ಜಯಿಸಿಹ । ಸಾಧು ವಿಕ್ರಮ ಶಿಷ್ಯರಾಗಲು ಸೂತ್ರಭಾಷ್ಯವನು । ಬೋಧಿಸಿದ ಶ್ರೀಪೂರ್ಣ ಬೋಧರು । ಬೋಧಿಸಲಿ ತಾನನುದಿನದಿ ಸ । ದ್ಬೋಧದುಪದೇಶದೊಳಗೆನ್ನನು ತೃಪ್ತಿಬಡಿಸುತಲಿ ॥೬೦॥ ಸೂತ್ರಭಾಷ್ಯಾದಿಗಳನೇಕ। ಸ್ತೋತ್ರ ಬಹುಸದ್ಗ್ರಂಥಕರ್ತರೆ । ಆ ತ್ರಿವಿಕ್ರಮರೆರೆಯೆ ಗ್ರಂಥಾಂತರವ ರಚಿಸೆಂದು । ಪೂರ್ತಿಯುಕ್ತ್ಯನುವ್ಯಾಖ್ಯ ರಚಿಸಿದೆ। ಗಾತ್ರಶೋಷಿಸಿ ತಪವಿರಕ್ತ ಸು । ಪಾತ್ರ ಮಹಸದ್ಗುಣಿಯ ಸೋದರ ವಿಷ್ಣುತೀರ್ಥರೆನೆ ॥ ೬೧॥ ಯತಿ ವಿರಕ್ತರ ಮಾಡ್ದು ಪ್ರೀತಿಯ। ಚತುರ ವಾದೀಂದ್ರಾಖ್ಯ ಶಿಷ್ಯನ । ಯತಿಯ ಮಾಡ್ದರು ಪದ್ಮನಾಭಾಭಿದಲಿ ಸದ್ಗುಣದಿಂ॥ ಇತರನೇಕ ಶ್ಲಾಘ್ಯಶಿಷ್ಯರ । ಯತಿಯ ಮಾಡುತ ಸದ್ಗೃಹಸ್ಥರು । ನತಿಸೆ ಶಿಷ್ಯರ ಮಾಡಿ ವಿಜಯಿಪ ಕಣ್ವತೀರ್ಥಬದಿ ॥ ೬೨॥ ಆವ ಶ್ರುತಿಪ್ರಾಮಾಣ್ಯ ರಕ್ಷಿಸ । ಲಾವ ಮುದ್ಗದ ಬೀಜ ಕ್ಷಣದೊಳ್ । ಗಾವನಂಕುರ, ಪುಷ್ಪಕೃತ ದೀಪ್ತಾಂಗುಲೀಯನಖಿಂ ॥ ಆವ ಸಾಸಿರ ಜನಕೆ ನೀಗದ । ಗ್ರಾವತಂದಾಗಮಕೆ ವಿವರಣ। ನಾವ ನಿಶ್ಚಲವಾಂಬುಧಿಯ ನಿಶ್ಶಬ್ದರವ ಗೈದಾ ॥ ೬೩॥ ಯಾವ ನಿಮ್ಮಂಗುಲಿಯನೆತ್ತಲ। ತೀವ ಬಲಚಣ ಗಂಡವಾಟರು । ಆವ ಪ್ರಾಗ್ವಾಟಾಖ್ಯ ನಂಗುಲಿ ಚಲಿಸಲಸಮರ್ಥರ್ ॥ ಗೈವೆ ಬಾಲೋದ್ಧೃತಿಗೆ ಲಾಘವ। ವಾವ ಶಸ್ತ್ರಕೆ ರೋಮ ಚಲಿಸದು । ಕೇವಲಿಂತಹ ಮಹಿಮೆ ಮಧ್ವರು ಮೇ ಮನೋ ಸಲತು ॥೬೪॥ ಹರಿಯ ಪಾರಂತಿಪನ ತೋಷಿಸಿ । ತ್ವರದಿ ಮಳೆಗರೆಸಿದನು ಸರಿದಾದಂ । ತರಕೆರಿಯ ತುಂಬಿಸಲು ಗ್ರೀಷ್ಮದಿ ತಮಗಹಿತ ಬಗೆಯಲ್ ॥ ಬರಲು ಪಾದಜ ನೃಪನ ಮೈತ್ರಿಯ । ಭರದಿ ಮಾಡುತ ವೈದ್ಯನಾಥನ । ಪುರಿಗೆ ಭಕ್ತೋನ್ನತಿಗೆ ಬಂದಿಹ ಕರ್ಮಕಾಂಡದಲಿ ॥ ೬೫॥ ಇರುವ ದುರ್ಗಮದರ್ಥ ಪೇಳುತ । ದುರುಳ ಕುಮತರ ಕುಲವ ಗೆಲ್ದನೆ । ತ್ವರದಿ ಕುಜನಾಸೂಯ ಜರಿಯುತ ಬಡವರಲ್ಪಾನ್ನ॥ ತರಲು ನಾಲ್ಮಡಿ ವೃದ್ಧಿಗೊಳಿಸಿದೆ । ಕರೆದ ಧನಿಕ ಮಹಾನ್ನವಲ್ಪದಿ । ನಿರುತ ಭುಂಜಿಪ ತೋಷಪಡಲೆನ್ನಲ್ಪ ಸೇವೆಗೆ ತಾಂ ॥ ೬೬॥ ವೃಷ್ಟಿ ಮೊದಲಾಗಿಹ ಮಹಾದ್ಭುತ । ಶ್ರೇಷ್ಠ

ವ್ಯಾಪಾರದ ನಿಯಾಮಕ । ನಿಷ್ಟಚರಿತನು ಸಕಲಸುರವರರಮರಸಭೆಯೊಳಗೆ ॥ ಸುಷ್ಠುಗಾನಿಪ ಗಂಧರ್ವರಿಂ । ದಷ್ಟು ಮುನಿಕುಲ ಸಕಲ ಕೌತುಕ । ದೃಷ್ಟಿಗೋಚರ ಸಂಸ್ತುತನು ಸುರವೃಕ್ಷಸುಮಕುಲದಿಂ ॥ ೭೭॥ ವೃಷ್ಟಿ ಮಾಡ್ದರು ಸುರರು ಆರ್ಯನಿ । ದುರ್ಷ್ಟ ಪ್ರಾಣೇಶಾವತಾರಗೆ । ಸೃಷ್ಟಿಯಲಿ ಮಧ್ವಾಭಿಧಾನದಲೆಸವ ಗುರುವರಗೆ ॥ ಶಿಷ್ಟಸಭೆ ಮಂಗಳಕೆ ರಾಜಿಪ । ನಿಷ್ಟತರೆ ದೆಸೆಯುವ ಹೃದಯದೋಳ್ । ವೈಷ್ಣವೋತ್ತಮ ಜಗದ ಸುಜನಾನಂದ ದಿಗ್ವಿಜಯಾ ॥ ೭೮॥ ಹೇಮ ಸದೃಶ ದಶಪ್ರಮತಿ ಯತಿ । ಯಾಮಹಾ ಸುಪರಾಕ್ರಮ ಶುಭಿ । ಸ್ತೋಮವಿದು ಶ್ರೀಮತ್ಸುಮಧ್ವವಿಜಯಸು ಗ್ರಂಥವನು॥ ನೇಮದಿಂದದರಿಂಗಿತಾರ್ಥವ । ಭ್ರಾಮಿಸದೆ ನೋಡಿದರೆ ಬಹುವಿಧ । ಕಾಮಿತಾರ್ಥದ ಭಾವದೀಪಿಕೆ ರಚನೆ ಮಾಡುತಲಿ ॥ ೭೯॥ ಪುನಹ ಶ್ರೀಮಧ್ವಾರ್ಯ ಮಹಿಮೆಯ । ನೆನೆಯೆ ಸಾಮರ್ಥ್ಯಪ್ರದಾಯಿನಿ। ಘನ ಸುಜನರ ಶ್ರವಣ ಭೂಷಣ ಮಧ್ವರಣುವಿಜಯಾ॥ ಎನುವದು ಪ್ರಮೇಯ ನವಮಾಲಿಕೆ । ಗುಣವಿರಾಜಿತ ಮಧ್ವಚರಿತೆ ಸು । ಗುಣಿವಿನುತ ನಾರಾಯಣಾಭಿಧ ಸೂರಿ ರಚಿಸಿಹೆನು ॥ ೭೦॥ ವಿಜಯನುತ್ಸವ ಸಮಯ ಮಹಜಯ । ವಿಜಯದಾಸಾರ್ಯೆವೇ ಯೆನ್ನೊಳು । ವಿಜಯದಿಂ ರಾಜಿಸುತ ಸುರರೊಡನೆಲಿಸಿ ಮಧ್ವೇಶಾ ॥ ವಿಜಯ ನುಡಿದರೆ ನುಡಿದೆನಿದು ಅಣು। ವಿಜಯ ಕೃಷ್ಣನ ಚರಣಕರ್ಪಿಪೆ । ವಿಜಯಪ್ರೀತನು ವರದಸುಂದರ ಶ್ರೀಶವೆಂಕಟನು ॥ ೭೧॥

॥ ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

***

## ೬) ಶ್ರೀಜಗನ್ನಾಥದಾಸರ ಶಿಷ್ಯ ಬಾದರಾಯಣ ವಿಠ್ಠಲ ಕೃತ ಅವತಾರತ್ರಯ ಮುಖ್ಯಪ್ರಾಣ ಸ್ತುತಿ

ಭಾರತೀರಮಣ ಭವಭಯವಿದೂರ ಭೂರಮಣ ಬಾದರಾಯಣ ವಿಠ್ಠಲನ ಮಂತ್ರಿ ॥ ಪ ॥ ಜನುಮ ಜನುಮದಿ ಸುಸಾಧನವ ಮಾಡಿಸುವ । ಅನಿಮಿತ್ಯಸಖ ಭಾವಿವಾಣಿಪತಿಯೆ। ಮನವಚನ ಕಾಯದಲಿ ನೆಲೆಸಿಪ್ಪ ಸದ್ಗುರುವೆ । ಅನಘಶಿರಿ ಬಾದರಾಯಣ ವಿಠ್ಠಲನ ಮಂತ್ರಿ ॥೧॥ ತತ್ತದಾಕಾರ ನೀನಾಗಿ ಹರಿಯಂತೆ ಸ । ರ್ವತ್ರದಲಿ ನೆಲೆಸಿದ್ದು ವಿಷ್ಣುಚರಣಾ । ನಿತ್ಯದಲಿ ಧೇನಿಸುವ ಜೀವಸಮುದಾಯದೊಳ। ಗುತ್ತಮ ಸುಬಾದರಾಯಣ ವಿಠ್ಠಲನ ಮಂತ್ರಿ ॥೨॥ ಪಾರ್ವತೀಪತಿ ಗುರುವೆ ದಯದಿ ಯೆನ್ನಲಿ ನೀನು । ಸರ್ವದಾ ನೆಲೆಸಿಪ್ಪ ಕಾರಣದಲಿ। ಊರ್ವಿಯೊಳು ಜನರೆನ್ನ ಕಂಡರಾದರಿಸುವರು । ಸರ್ವೇಶ ಬಾದರಾಯಣ ವಿಠ್ಠಲನ ಮಂತ್ರಿ ॥೩॥ ನೀನಿದ್ದ ಸ್ಥಳದಲ್ಲಿ ಹರಿ ತಾನು ನೆಲೆಸಿಪ್ಪ । ನೀನಿಲ್ಲದಾ ಸ್ಥಳವನ್ನು ಹರಿ ತ್ಯಜಿಸುವಾ । ನೀನೊಲಿಯೆ ಹರಿ ಒಲಿವ ನೀ ಮುನಿಯೆ ಹರಿ ಮುನಿವ । ಭಾನುನಿಭ ಬಾದರಾಯಣ ವಿಠ್ಠಲನ ಮಂತ್ರಿ ॥೪॥ ಆರೈದು ಕರಣದಲಿ ಹರಿಯೊಡನೆ ನೆಲೆಸಿದ್ದು । ತೋರಿಕೊಳ್ಳದೆ ಶುಭಾಶುಭ ಕ್ರಿಯೆಗಳಾ । ಶ್ರೀ ರಾಮದೂತ ನೀ ಮಾಡಿ ಮಾಡಿಸುತಿಪ್ಪೆ । ಧೀರ ಶ್ರೀ ಬಾದರಾಯಣ ವಿಠ್ಠಲನ ಮಂತ್ರಿ॥೫॥ ಬ್ರಹ್ಮಾಣಿ ಫಣಿಪ ಗರುಡಾಮರೇಶಾದಿ ಸುರ । ಸಮೂಹಕ್ಕೆಲ್ಲ ಪ್ರೇರಕನು ನೀನೇ । ಅಮ್ಮಮ್ಮ ನಿನಗಾನುಪಮ್ಮೆಗಾಣೆನು ಜಗದಿ । ಧರ್ಮಾತ್ಮ ಬಾದರಾಯಣ ವಿಠ್ಠಲನ ಮಂತ್ರಿ॥೬॥ ಸಜ್ಜನರು ಮಾಡಿದತಿ ದುಷ್ಕರ್ಮ ಫಲತೆಗೆದು ।

ದುರ್ಜನರಿಗುಣಿಸುವಿಯೊ ಹರಿ ಆಜ್ಞದಿ । ದುರ್ಜನರ ಶುಭಕರ್ಮಫಲವ ಸುಜನರಿಗುಣಿಪ। ಮಜ್ಜನಕ ಬಾದರಾಯಣ ವಿಠ್ಠಲನ ಮಂತ್ರಿ ॥ ೭ ॥ ಕ್ವಚಿತ್ಕಾಲಗಳಲ್ಲಿ ಕಲಿಯ ಆವೇಶ ಸುರ। ನಿಚಯದೊಳಗುಂಟೆಂದು ಪೇಳ್ವರೈ ಘಟೋ- । ತ್ಕಚನಯ್ಯ ನಿನ್ನ ಸ್ಮರಿಸಲು ಕಲಿಗೆ ಮೂರ್ಛೆ ಬಹು -। ದಚಲಸುಖ ಬಾದರಾಯಣ ವಿಠ್ಠಲನ ಮಂತ್ರಿ ॥ ೮ ॥ ಶುದ್ಧ ಸತ್ವಾತ್ಮಕ ಶರೀರ ನಿರ್ಲಿಪ್ತ ಹೃತ್ -। ಪದ್ಮ ಸಂಸ್ಥಾನ ಪದ ಮೂಲವಾಸೀ । ಅದ್ವೈತಮತವಿಪಿನವೀತಿಹೋತ್ರನೆ ಮೂಜಗ । ದಧ್ಯಾತ್ಮ ಬಾದರಾಯಣ ವಿಠ್ಠಲನ ಮಂತ್ರಿ ॥ ೯ ॥ ಅಣುಮಹದ್ರೂಪ ದಶಮತಿರಾಯ ನಿನ್ನ ಗುಣ । ಫಣಿಪ ದ್ವಿಸಹಸ್ರ ಜಿಹ್ವೆಗಳಿಂದಲಿ । ನೆನೆದು ಬಹುಭಕುತಿಯಲಿ ತುತಿಸುತಿರೆ ಬಣ್ಣಿಸ । ಲೆನಗಸದಳವೆ ಬಾದರಾಯಣ ವಿಠ್ಠಲನ ಮಂತ್ರಿ ॥ ೧೦ ॥ ಕಾಲಮೀರುವದೆಂದು ಅಳುತಿದ್ದ ಕಪಿಗಳನು। ಪಾಲಿಸಿದೆ ವೈದೇಹಿವಾರ್ತೆಯರುಹಿ । ವ್ಯಾಳ ಪಾಶವನಳಿದೆ ಸಂಜೀವನವ ತಂದು । ಕಾಲಾತ್ಮ ಬಾದರಾಯಣ ವಿಠ್ಠಲನ ಮಂತ್ರಿ ॥ ೧೧ ॥ ಲೋಕಹಿಂಸಕ ಬಕನ ಕೊಂದು ವಿಪ್ರನ ಮಗನ । ನೀ ಕಾಯ್ದೆ ಭೀಮ ಭಕ್ತರ ಬಾಂಧವಾ । ಕಾಕುಕೀಚಕ ಕುರುಪರನು ಮಡುಹಿ ಭೂಭಾರ । ನೀ ಕಳದೆ ಬಾದರಾಯಣ ವಿಠ್ಠಲನ ಮಂತ್ರಿ ॥ ೧೨ ॥ ಅಜ್ಞಾನ ಗಾಢಾಂಧಕಾರದೊಳು ಸಜ್ಜನರು । ಮಾರ್ಗವನೆ ಕಾಣದೆ ಬಳಲುತಿರಲೂ। ಸುರ್ಗುರುವೆ ಸುಜ್ಞಾನ ರವಿಯುದಯಗೈಸಿದ ಅಖಿ । ಳಜ್ಞ ಮುನಿ ಬಾದರಾಯಣ ವಿಠ್ಠಲನ ಮಂತ್ರಿ ॥ ೧೩॥ ನಿನ್ನಂಥ ಕರುಣಿಗಳನೆಲ್ಲೆಲ್ಲಿ ನಾ ಕಾಣೆ । ನಿನ್ನಡಿಗೆ ಶರಣೆಂದು ಬೇಡಿಕೊಂಬೆ। ನಿನ್ನ ದಾಸರದಾಸ್ಯ ನಿನ್ನ ಅಪರೋಕ್ಷ ಮತಿ । ಯನ್ನೆ ಕೊಡು ಬಾದರಾಯಣ ವಿಠ್ಠಲನ ಮಂತ್ರಿ ॥ ೧೪ ॥ ಮತ್ತೊಂದು ನಾನೊಲ್ಲೆ ಇದನೇ ಬೇಡುವೆನು ಇ - । ಪ್ಪತ್ತೊಂದು ಕುಭಾಷ್ಯವಿನಿಂದಕಾ । ಭೃತ್ಯನೆಂದೆನ್ನ ಸ್ವೀಕರಿಸು ಹರಿಯನು ತೋರು । ಶ್ರುತ್ಯುಕ್ತ ಬಾದರಾಯಣ ವಿಠ್ಠಲನ ಮಂತ್ರಿ ॥ ೧೫ ॥ ॥ ಶ್ರೀಕೃಷ್ಣಾರ್ಪಣಮಸ್ತು ॥

## ೭) ಶ್ರೀಗ್ರಂಥಮಾಲಿಕಾ ಮಧ್ವಸ್ತೋತ್ರ

**ರಾಗ : ಶಂಕರಾಭರಣ** **ತಾಳ : ಏಕತಾಳ**

ಜಯ ಜಯ ಜಯ ಮಧ್ವ ಜಯ ಜಯ ॥ ಜಯ ಮಧ್ವ ಮುನಿರಾಯ ನಿನ್ನ । ಚಾರು । ತೋಯಜಾಂಘ್ರಿಯಲಿ ನಾ ಶರಣ । ಆಹ । ಮಾಯೇಶನಿಗೆ ಪ್ರಿಯ ಮುಖ್ಯಪ್ರಾಣನೆ ಎನ್ನ । ಕಾಯ ವಾಙ್ಮನ ಕರ್ಮ ದೋಷ ಮನ್ನಿಸಿ ಕಾಯೋ ॥ ಜಯ ಜಯ॥ ಪ॥ ಭಾವಿ ವಿರಿಂಚ ಮಹೋಜ । ಜಯಾ । ದೇವಿ ಸಂಕರ್ಷಣ ತನೂಜ । ಸೂತ್ರ । ಸಂವಿದ್ ಬಲಾದಿ ಸುಭ್ರಾಜ । ಶ್ರದ್ಧಾ । ದೇವಿ ಹೃದಬ್ಜವಿರಾಜ । ಆಹ । ಇನಶಶಿ ಋಷಿಕುಲ ತಿಲಕ ಶ್ರೀವರನಂಘ್ರಿ। ವನರುಹ ನಿಷ್ಠ ಹನುಮ ಭೀಮ ಮಧ್ವ ॥ ಜಯ ಜಯ ॥೧॥ ಜಯತು ಶ್ರೀಹರಿ ರಾಮಚಂದ್ರ। ಭಕ್ತ । ಜಯದ ಮೋದದ ಅರ್ತಿ ಹಂತ । ಕೃಷ್ಣ । ಜಯತು ಕಾರುಣ್ಯ ಸಮುದ್ರ । ಭಕ್ತ । ಜಯದ ಕ್ಷೇಮದ ಜ್ಞಾನ ಸುಖದ। ಆಹ । ರಾಮ ವಚನ ಕಾರ್ಯರತ ಹನುಮಗೆ ನಮೋ । ನಮೋ ಕುರುಕುಲಹರ ಭೀಮ ಕೃಷ್ಣೇಷ್ಟಗೆ ॥ ಜಯ ಜಯ ॥ ೨॥ ಜಯತು ಶ್ರೀಹರಿ ವೇದವ್ಯಾಸ । ಭಕ್ತ । ಜಯದ ಹೃತ್ತಿಮಿರ ನಿರಾಸ । ಮಾಳ್ಪ । ಸೂರ್ಯ ಸ್ವಕಾಂತಿ ಪ್ರಕಾಶ ।

ಮಧ್ವರಾಯಗೆ ನಿಜಗುರು ಶ್ರೀಶ । ಆಹ । ವೈದಿಕಶಾಸ್ತ್ರದಿಂದಲೇ ವೇದ್ಯ ಶ್ರೀಶನ । ಹಿತದಿ ನಮಗೆ ತೋರ್ಪಾನಂದ ಮುನಿಗೆ ನಮೋ॥ ಜಯ ಜಯ ॥ ೩॥ ಅಸುರರು ಪುಟ್ಟಿ ಭೂಮಿಯಲಿ। ಸಾಧು । ಭೂಸುರರೆಂದು ತೋರುತಲಿ । ವೇದ । ಶಾಸ್ತ್ರಕ್ಕೆ ಅಪಾರ್ಥ ಪೇಳಿ । ಮೋಹವಶವಾಗೆ ಸುಜನರೆಲ್ಲ । ಆಹ । ಶ್ರೀಶನಾಜ್ಞೆಯ ತಾಳಿ ಮಧ್ವಾಭಿಧಾನದಿ। ಮೋಸ ದುರ್ಮತ ಧ್ವಾಂತ ಭಾಸ್ಕರನುದಿಸಿದಿ ॥ ಜಯ ಜಯ ॥ ೪॥ ಮಧ್ಯಗೇಹರ ಮನೆಯಲ್ಲಿ । ಮುಖ್ಯ । ವಾಯುವೆ ಶಿಶುರೂಪ ತಾಳಿ । ಬಾಲ। ವಯಸ್ಸಲ್ಲೇ ಯತಿವರ್ಯರಲ್ಲಿ । ಕೊಂಡಿ । ಸನ್ಯಾಸಸುಪ್ರಮೋದದಲಿ । ಆಹ । ಮಧ್ಯಗೇಹರ ಪುರುಷೋತ್ತಮತೀರ್ಥರ । ಭಾಗ್ಯಕ್ಕೆ ಎಣೆವುಂಟೇ ಮೂರ್ಲೋಕದೊಳಗೆ ॥ ಜಯ ಜಯ ॥ ೫॥ ಪುರುಷೋತ್ತಮಾಚ್ಯುತಪ್ರೇಕ್ಷ। ತೀರ್ಥ । ಗುರುಗಳ ಸೇವಿಸಿ ಮೋಕ್ಷ । ಮೋದ । ಉರುಗುಣಸಿಂಧು ನಿರ್ದೋಷ । ನಾದ । ಶಿರಿವರನು ಕಮಲಾಕ್ಷ । ಆಹ । ಭಾರಿ ಪ್ರಸಾದವ ದಯದಿ ಬೀರಲ್ಲೇವೆ । ದೊರೆಯುವದೆಂದು ಬೋಧಿಸಿದೆಯೋ ಮಧ್ವ ॥ ಜಯ ಜಯ॥೬॥ ಶ್ರೀಶ-ವೇದವ್ಯಾಸನಲ್ಲಿ । ಗೀತಾ । ಭಾಷ್ಯ ಸಮರ್ಪಿಸಿ ಅಲ್ಲಿ । ಉಪ। ದೇಶಕೊಂಡು ಮತ್ತಿಲ್ಲಿ । ಬಂದು । ವ್ಯಾಸನಭಿಪ್ರಾಯದಲ್ಲಿ । ಆಹ । ಸರಿಯಾದ ತತ್ವಬೋಧಕ ಗ್ರಂಥಗಳ । ಮಾಡಿ । ಬೀರಿದಿ ಅಧಿಕಾರಿಗಳಿಗೆ ನೀ ದಯದಿ ॥ ಜಯ ಜಯ ॥ ೭॥ ಮೂಲಗ್ರಂಥಗಳು ಮೂವ್ವತ್ತು । ಏಳು । ಳಾಳುಕ ಪ್ರಿಯತಮವಾದ್ದು। ಭಕ್ತಿ । ಶೀಲತ್ವ ಸುಖಜ್ಞಾನವಿತ್ತು । ಪರ । ದಲ್ಲಿ ಕೈವಲ್ಯ ತೋರುವುದು । ಆಹ । ಪುನರಪಿ ಬದರಿಗೆ ಪೋಗಿ ಶ್ರೀಶನ ಕಂಡು । ಧನ್ಯ । ಮನದಿ ಬಂದು ಶಾಸ್ತ್ರ ಬೋಧಿಸಿದಿ ॥ ಜಯ ಜಯ ॥ ೮॥ ಗೀತಾಭಾಷ್ಯವು ಸೂತ್ರಭಾಷ್ಯ । ಗೀತಾ । ತಾತ್ಪರ್ಯ ಸೂತ್ರಾಣು ಭಾಷ್ಯ। ವಿಷ್ಣು। ತತ್ವನಿರ್ಣಯ ಋಗ್ಭಾಷ್ಯ । ತತ್ವೋದ್ಯೋತ ಭಾಗವತ ತಾತ್ಪರ್ಯ । ಆಹ । ನಿರ್ಣಯ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ ಯಮಕ ಭಾರತ ಕರ್ಮ ನಿರ್ಣಯ ॥ ಜಯ ಜಯ ॥ ೯॥ ಸನ್ಯಾಯ ವಿವರಣ ತಂತ್ರ । ಸಾರ । ಅನುವ್ಯಾಖ್ಯಾನವು ಸದಾಚಾರ । ಸ್ಮೃತಿ । ಅನುತ್ತಮ ದ್ವಾದಶಸ್ತೋತ್ರ । ಯತಿ । ಪ್ರಣವ ಕಲ್ಪದಿ ಪ್ರಣವಸಾರ। ಆಹ । ಉಪನಿಷದ್ಭಾಷ್ಯವು ಹತ್ತು ಉತ್ಕೃಷ್ಟವು । ಷಟ್ಪ್ರಶ್ನಕಾಠಕ ಬೃಹದಾರಣ್ಯಾಖ್ಯ ॥ಜಯ ಜಯ ॥ ೧೦॥ ಮನನ ಮಾಡಲು ಐತರೇಯ । ಪುನಃ । ಶ್ರವಣ ಮಾಡಲು ತೈತಿರೀಯ। ಸಂ ಚಿಂತಿಸಲು ಈಶಾವಾಸ್ಯ। ಬಹು। ಘನವಿದ್ಯಾಯುತವು ಛಾಂದೋಗ್ಯ । ಆಹ । ಅಥರ್ವಣ ಮಾಂಡೂಕ್ಯ ತಲವಕಾರೋಕ್ತವು। ಸತತ ಸಂಸ್ಮರಣೀಯ ಜ್ಞಾನದಾಯಕವು ॥ ಜಯ ಜಯ ॥ ೧೧॥ ಕೃಷ್ಣಾಮೃತ ಮಹಾರ್ಣವದಿ। ಬಾಲ । ಕೃಷ್ಣಜಯಂತಿ ನಿರ್ಣಯದಿ । ಭಕ್ತಿ। ಜ್ಞಾನ ಸಾಧನವ ಬೋಧಿಸಿದಿ । ನರ । ಸಿಂಹನ ನಖಸ್ತುತಿ ಮುದದಿ। ಆಹ । ಪಠಿಸೆ ಭದ್ರದ ಕಥಾಲಕ್ಷಣದಲಿ ವಾದ । ಮಾಡುವ ಬಗೆ ತೋರ್ದಿ । ನೃಹರಿಯ ನಮಿಸಿ ॥ ಜಯ ಜಯ ॥ ೧೨॥ ಮಾಯಾ ಅವಿದ್ಯಾ ಆವೃತವು । ಬ್ರಹ್ಮ ಅಧ್ಯಸ್ಥ ಜಗತೆಂಬ ಮತವ । ತರಿದು । ಮಾಯಾವಾದ ಖಂಡನವ । ಮಾಡಿ । ನ್ಯಾಯ ಪ್ರಮಾಣ ಲಕ್ಷಣವ ।ಆಹ। ನುಡಿದು ಪ್ರಪಂಚ ಮಿಥ್ಯಾತ್ವಾನುಮಾನ ಖಂಡನವ

ಉಪಾಧಿಖಂಡನ ಸಹಗೈದಿ ॥ ಜಯ ಜಯ ॥ ೧೩॥ ತಾರತಮ್ಯ ಪಂಚಭೇದ । ಸತ್ಯ । ಹರಿಯೇ ಸರ್ವೋತ್ತಮ ಸುಹೃದ । ಶಿರಿ । ವರನೇ ಸ್ವತಂತ್ರ ಪ್ರಮೋದ । ಸ್ವಾಮಿ । ಸೃಷ್ಟಾ ಪಾತಾ ಅತ್ತಾ ತ್ರಾತ । ಆಹ । ತತ್ವ ವಿವೇಕವು ತತ್ವ ಸಂಖ್ಯಾನವು । ನಿತ್ಯ ಸುಪಠನೀಯ ಹರಿ ಸರ್ವೋತ್ಕರ್ಷ ॥ ಜಯ ಜಯ ॥ ೧೪॥ ನೀ ನಿಂತು ನುಡಿಸಿದೀ ನುಡಿಯು । ನಿನ್ನ। ಸನ್ನಿಧಾನದಿ ಸಮರ್ಪಣೆಯು । ನಾನು । ಏನೂ ಓದದ ಮಂದಮತಿಯು । ನೀನು । ಪೂರ್ಣಪ್ರಜ್ಞನು ಜೀವೋತ್ತಮನು । ಆಹ । ಎನ್ನ ಕೊರತೆಗಳ ನೀಗಿಸಿ ತ್ವತ್‌ಸ್ಥ ಶ್ರೀ । "ಪ್ರಸನ್ನ ಶ್ರೀನಿವಾಸ"ನ್ನೊಲಿಸೋ ಎನಗೆ ಜೀಯ ॥ ಜಯ ಜಯ ॥ ೧೫॥

**ಇತಿ ಶ್ರೀಪ್ರಸನ್ನ ಶ್ರೀನಿವಾಸದಾಸರಾಜ ವಿರಚಿತ ಶ್ರೀಗ್ರಂಥಮಾಲಿಕಾ ಮಧ್ವಸ್ತೋತ್ರ ಸಂಪೂರ್ಣ॥**

**॥ಶ್ರೀ ಕೃಷ್ಣಾರ್ಪಣಮಸ್ತು ॥**

### ೮) ಶ್ರೀವಾದಿರಾಜತೀರ್ಥ ವಿರಚಿತ ಲಘುವಾಯುಸ್ತುತಿ :

ಶ್ರೀಮದ್ವಿಷ್ಣ್ವಾಜ್ಞದಿಂ ಜನಿಸಿ ಪವನನು ಕೇಸರೀ ಕ್ಷೇತ್ರದಲ್ಲಿ ।
ಕಂಜಾಕ್ಷಿ ಸೀತೆಗಾಗಿ ಲವಣಜಲಧಿಯಂ ಲಂಘಿಸಿ ಲಂಕೆಯಲ್ಲಿ ॥ ೧ ॥

ಇದ್ದಂಥಾ ರಾವಣಂ ರಘುಪನ ಕರದಿಂದ ಭಂಗಿಸಿ ಭೂಜೆಯಿಂದ ।
ಕೂಡಿದ್ದಾ ರಾಘವಂ ಭಜಿಸಿ ಮೆರೆದನು ಕಿಂಪುರುಷ ಖಂಡದಲ್ಲಿ ॥ ೨ ॥

ಆ ವಾಯು ಭೀಮಾಗಿ ಹರವರನ ಬಲದಿಂ ಕೊಬ್ಬಿದಾ ಮಾಘದಂನು ।
ಕಿರ್ಮೀರಕೀಚಕಬಕಮುಖಖಳರಂ ದುಷ್ಟ ದುರ್ಯೋಧನನ್ನು ॥ ೩॥

ಕೊಂದು ರಾಜಾಶ್ವಮೇಧ ಪ್ರಮುಖ ಮಖಗಳಂ ಮಾಡಿ ಶ್ರೀ ಕೃಷ್ಣಾರ್ಪಣೆಂದು ।
ರಾಜಾಧಿರಾಜಾಗಿ ಸುಜನರಪತಿಯು ಮೆರೆದನು ಸಾಧು ಬಂಧು ॥ ೪ ॥

ಪ್ರಾಗ್ಜನ್ಮ ದ್ವೇಷದಿಂ ಕಲಿಯಲ್ಲಿ ಮಣಿಮಾನ್ ಸಂಕರಾಚಾರ್ಯನಾಗಿ ।
ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನದಿಂ ಎಲ್ಲರಂ ಕೆಡಿಸಲಾಗಿ ॥ ೫ ॥

ಅಜ್ಞಾನಆಖ್ಯಾನದಿಂ ಸುಜನರ ಮತಿಯು ಮ್ಲಾನವಂ ಪೊಂದಿರಲು ಆಗ ।
ಶ್ರೀಶಾಜ್ಞಾ ಶಿರದಿ ವಹಿಸಿ ಕುರುಕುಲಪತಿಯು ಆದನು ಮಧ್ವಸೂರ್ಯ ॥ ೬ ॥

ಸರ್ವಜ್ಞ ಶ್ರೀಶನೇವೆ ವಿಧಿಭವಮುಖರು ಶ್ರೀಹರಿದಾಸರೇವೆ ।
ಸತ್ಯೇವೆ ಈ ಜಗತು ಜನವು ತ್ರಿವಿಧವು ನಿತ್ಯ ಪಂಚ ಪ್ರಬೇಧ ॥ ೭ ॥

ಈಶಾಧೀನೇವೆ ಸರ್ವ ಶ್ರುತಿಗಿದನುಗುಣ ಅಂಥ ವೇದ ಪ್ರಮಾಣ ।
ಹೀಗೆಂದು ಮಧ್ವಸೂರ್ಯನು ತಿಳಿಸಿ ಸುಜನಕೆ ಇತ್ತನು(ಆದನು) ದಿವ್ಯ ಮೋದ ॥ ೮ ॥

ಕೇಳೆಲವೋ ಮಾಯವಾದಿ ಸಕಲ ಸುರಪನು ಎಂದಿಗಲ್ಪಜ್ಞನಲ್ಲ ।
ಜಿಜ್ಞಾಸ್ಯ ಬ್ರಹ್ಮನಾರಾಯಣ ಸಕಲ ಜಗತ್ಪರಿಮಿತಿಯನ್ನು ಬಲ್ಲ ॥ ೯ ॥

ನೀನರಿಯೋ ನಿನ್ನ ನಾರಿ ಹಗಲು ಇರುಳಲಿ ಜಾರವ ಮಾಡವ್ಪೋದು ।
ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನವಂ ಹ್ಯಾಂಗೆ ನೀ ಆಡವೋದು ॥ ೧೦ ॥

ಮಾಯಾವಾದಿಗೆ ಮಾನಹೀನಜನಕೆ ಶುದ್ಧಿಲ್ಲದಾ ನಾಯಿಗೆ ।
ಮಾಯಿ ಸಂಕರಗೆ ಸಮೀರನ ಗದಾ ಪೆಟ್ಟಿಂದಲೇ ಮುಕ್ತಿಯು ॥ ೧೧ ॥

ನಿತ್ಯಅಂಧಂತಮ ಆಹೋದು ಎಂದು ಅಜ್ಞಾನವಂ ವರ್ಜಿಸಿ ।
ಶ್ರೀಮುದ್ರಾಸಹ ಗೋಪಿಸುಚಂದನಂ ದೇಹಂಗಳಲ್ಲ್ಯರ್ಚಿಸಿ ॥ ೧೨ ॥

**॥ ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ವಾದಿರಾಜ ಕೃತ ಕನ್ನಡ ಲಘುವಾಯುಸ್ತುತಿ ಸಂಪೂರ್ಣ ॥**

## ೯. ಶ್ರೀ ಪ್ರಸನ್ನ ಶ್ರೀನಿವಾಸದಾಸ ಕೃತ
## ಶ್ರೀ ಸೌಭಾಗ್ಯ ಸಪ್ತತ್ರಿಂಶತಿ (ಬ್ರಹ್ಮವಾಯು ಋಜುಗಳ ಸ್ತೋತ್ರ)
### (ಇದರ ಪಠಣದಿಂದ ಸಕಲ ಸೌಭಾಗ್ಯ ಪ್ರಾಪ್ತಿಯಾಗುತ್ತದೆ.)

**॥ ಶ್ರೀ ಗುರುಭ್ಯೋ ನಮಃ ॥**

ಶರಣು ವಿಧಿ ವಾಣೀ ಶರಣು ಧೃತಿ ಶ್ರದ್ಧೇಶ। ಶರಣು ಋಜುವರ್ಯರಲಿ ಶರಣು ಶರಣಾದೆ ॥ಪ.॥ ಮೀನಕೂರ್ಮ ಕ್ರೋಡ ನರಸಿಂಹ ವಟುರೂಪ । ರೇಣುಕಾತ್ಮಜ ರಾಮ ಶ್ರೀ ಕೃಷ್ಣ ಜಿನಜ ॥ ವಿಷ್ಣುಯಶಸ್ಸುತ ಅಜಿತ ಶ್ರೀಶನಿಗೆ ಪ್ರಿಯತಮ । ಅನುಪಮ ಜೀವೋತ್ತಮರ ಚರಣಕಾನಮಿಪೆ ॥೧॥ ಪುರುಷವಿಧಿ ಕಾಲವಿಧಿ ವಾಸುದೇವೋತ್ಪನ್ನ । ವಿರಿಂಚ ಮಹತ್ತತ್ವತನು ಅನಿರುದ್ಧ ಜಾತ ॥ ನಾರಾಯಣ ನಾಭಿಕಮಲಜ ಚತುರ್ಮುಖನು । ಸರಸ್ವತೀಪತಿ ರುದ್ರ ತಾತನಿಗೆ ನಮಿಪೆ ॥೨॥ ಈ ನಾಲ್ಕು ಬ್ರಹ್ಮನ ಅವತಾರದಲ್ಲಿ ಶುಕ್ಲ। ಶೋಣಿತ ಸಂಬಂಧ ಇಲ್ಲವೇ ಇಲ್ಲ ॥ ಜ್ಞಾನಾದಿ ಐಶ್ವರ್ಯದಲಿ ಯಾರು ನಾಲ್ಮಗಗೆ । ಎಣೆ ಇಲ್ಲ ಹದಿನಾಲ್ಕು ಲೋಕದಲಿ ಎಲ್ಲೂ ॥೩॥ ಭಯವು, ಅಜ್ಞಾನವು, ಸಂಶಯವು ಇವಗಿಲ್ಲ । ಸತ್ಯ ಲೋಕಾಧಿಪನು ಸುರರ ಅಧ್ಯಕ್ಷ ॥ ಹಯಮುಖ ತ್ರಿವೃತ್ತುರೀಯ ಹಂಸ ಇತರಾಸೂನು। ತೋಯಜಾಕ್ಷ ಕೇಶವನ ಪ್ರಥಮ ಪ್ರತಿಬಿಂಬ ॥೪॥ ಜಗಜ್ಜನ್ಮಾದ್ಯಷ್ಟಕ ಕರ್ತನ ನಿಯಮನದಿ । ಜಗವ ಪಡೆದಿಹ ಬ್ರಹ್ಮಸತ್ವವಿಗ್ರಹನು॥ ಖಗಪ ಭುಜಗಪ ಶಿವಾದ್ಯನಂತ ಜೀವೋತ್ತಮನು । ಅಘರಹಿತ ತಾರಕ ಗುರು ಶತಾನಂದ ॥೫॥ ಅವನಿಯಲಿ ಅವತಾರ ಬ್ರಹ್ಮದೇವನಿಗಿಲ್ಲ। ಭಾವಿ ಬ್ರಹ್ಮನು ಮುಖ್ಯ ವಾಯುದೇವ ॥ ದೇವೀಜಯಾ ಸಂಕರುಷಣಾತ್ಮಜನು ಈ । ಭುವಿಯಲ್ಲಿ ತೋರಿಹನು ಹರಿಯ ಪ್ರಥಮಾಂಗ॥೬॥ ಧೃತಿ ಪ್ರಭಂಜನ ವಾಯು ಸ್ಮರ ಭರತ ಗುರುವರನು । ಮಾತರಿಶ್ವನು ಸೂತ್ರ ಪವಮಾನ ಪ್ರಾಣ ॥ ಎದುರು ಸಮರಿಲ್ಲ ಈ ಬ್ರಹ್ಮ ಧಾಮನಿಗೆಲ್ಲೂ । ಸದಾ ನಮೋ ಭಾರತೀರಮಣ ಮಾಂ ಪಾಹಿ ॥೭॥ ರಥ ನಾಭಿಯಲಿ ಅರವೋಲ್ ಪ್ರಾಣನಲಿ ಸರ್ವವೂ । ಪ್ರತಿಷ್ಠಿತವೂ ಜೀವರ ದೇಹಕಾಧಾರ ॥ ತ್ರಾತಪೋಷಕ ಸರ್ವವಶಿ ಪ್ರಜ್ಞಾಶ್ರೀದನು । ತತ್ವಾದಿ ದೇವ ವರಿಷ್ಠ ಚೇಷ್ಟಕನು ॥೮॥ ಶ್ರೀಶ ಹಂಸಗೆ ಪ್ರಿಯ ಶ್ವಾಸ ಜಪ ಪ್ರವೃತ್ತಿಸುವ । ಬಿಸಜಜಾಂಡವ ಹೊತ್ತುಕೊಂಡು ಇರುತಿಹನು ॥ ಅಸಮ ಸಾಮರ್ಥ್ಯದಿ ಸರ್ವ ಕ್ರಿಯೆ ಮಾಡಿಸುವ । ಶಾಸ್ತನಾಗಿಹ ಪಂಚ ಅವರ ಪ್ರಾಣರಿಗೆ ॥ ೯॥ ಬಲ ಜ್ಞಾನಾದಿಗಳಲ್ಲಿ ಹ್ರಾಸವಿಲ್ಲವೂ ಇವಗೆ । ಎಲ್ಲ

ಅವತಾರಗಳು ಸಮವು ಅನ್ಯೂನ॥ ಶುಕ್ಲ ಶೋಣಿತ ಸಂಬಂಧ ಇಲ್ಲವೇ ಇಲ್ಲ । ಇಳಿಯಲಿ ಜನಿಸಿಹ ಹನುಮ, ಭೀಮ ಮಧ್ವ ॥೧೦॥ ವಾಯುದೇವನ ಒಲಿಸಿಕೊಳ್ಳದ ಜನರಿಗೆ । ಭಯ ಬಂಧ ನಿವೃತ್ತಿಯು ಸದ್ಗತಿಯು ಇಲ್ಲ । ಮಾಯಾ ಜಯೇಶನ ಪರಮ ಪ್ರಸಾದವು । ವಾಯು ಒಲಿದರೆ ಉಂಟು ಅನ್ಯಥಾ ಇಲ್ಲ ॥೧೧॥ ಶ್ರೀರಾಮಚಂದ್ರನು ಒಲಿದ ಸುಗ್ರೀವಗೆ । ಮಾರುತಿಯ ಒಲಿಸಿಕೊಂಡವನವನೆಂದು ॥ ಮಾರುತಿಯ ಒಲಿಸಿಕೊಳ್ಳದ ವಾಲಿ ಬಿದ್ದನು । ಕರ್ಣನೂ ಹಾಗೇವೇ ಅರ್ಜುನನು ಗೆದ್ದ ॥೧೨॥ ರಾಮನಿಗೆ ಸನ್ನಮಿಸಿ ವನದಿ ದಾಟುತ ಹನುಮ । ಶ್ರಮರಹಿತನು ಸುರಸೆಯನು ಜಯಿಸೆ ಸುರರು ॥ ಪೂಮಳೆ ಕರೆಯಲು ಸಿಂಹಿಕೆಯನು ಸೀಳಿ । ಧುಮುಕಿದ ಲಂಕೆಯಲಿ ಲಂಕಿಣಿಯ ಬಡಿದ ॥೧೩॥ ರಾಮಪ್ರಿಯೆಗುಂಗುರವ ಕೊಟ್ಟು ಚೂಡಾರತ್ನ । ರಾಮಗೋಸ್ಕರ ಕೊಂಡು ವನವ ಕೆಡಹಿ ॥ ಶ್ರಮ ಇಲ್ಲದೆ ಅಕ್ಷಯಾದಿ ಅಧಮರ ಕೊಂದು । ರಾಮದೂತನು ಹನುಮ ಲಂಕೆಯ ಸುಟ್ಟ ॥೧೪॥ ಶ್ರೀರಾಮನಲಿ ಬಂದು ನಮಿಸಿ ಚೂಡಾಮಣಿಯ । ಚರಣದಿ ಇಡೆ ರಾಮ ಹನುಮನ ಕೊಂಡಾಡಿ ॥ ಸರಿಯಾದ ಬಹುಮಾನ ಯಾವುದು ಇಲ್ಲೆಂದು । ಶ್ರೀರಾಮ ತನ್ನನ್ನೇ ಇತ್ತಾಲಿಂಗನದಿ ॥೧೫॥ ಮೂಲ ರೂಪವ ನೆನೆದ ಲಕ್ಷ್ಮಣನ ಎತ್ತಲು । ಕೈಲಾಗದೆ ರಾವಣನು ಸೆಳೆಯೆ ಆಗ ॥ ಲೀಲೆಯಿಂದಲಿ ಎತ್ತಿ ರಾಮನಲಿ ತಂದನು । ಬಲವಂತ ಹನುಮ ಶೇಷಗುತ್ತಮತಮನು ॥ ೧೬॥ ಮೃತ ಸಂಜೀವಿನಿಯಾದಿ ಔಷಧಿ ಶೈಲವನು । ತಂದು ಸೌಮಿತ್ರಿ ಕಪಿಗಳಿಗೆ ಅಸು ಇತ್ತ ॥ ಮುಂದಾಗಿ ಪೋಗಿ ಶ್ರೀರಾಮ ಬರುವುದು ಪೇಳಿ। ಕಾಯ್ದ ರಾಮಾನುಜನ ಅಗ್ನಿಮುಖದಿಂದ ॥೧೭॥ ಇತರರು ಮಾಡಲು ಅಶಕ್ಯ ಸೇವೆ ಹನುಮ । ಗೈದಿ ಮೋಕ್ಷವು ಸಾಲ್ದು ಏನು ಕೊಡಲೆನ್ನೆ॥ ಸದಾ ಸರ್ವ ಜೀವರಿಂದಧಿಕ ಭಕ್ತಿ ಒಂದೇ । ಕೇಳ್ದ ಶ್ರೀರಾಮನ್ನ ವೈರಾಗ್ಯ ನಿಧಿಯು ॥೧೮॥ ಗಂಡು ಶಿಶು ಬೀಳಲು ಗುಂಡು ಪರ್ವತ ಒಡೆದು । ತುಂಡು ನೂರಾಯಿತು ಕಂಡಿಹರು ಅಂದು ಬೊ- ॥ ಮ್ಮಾಂಡದಲಿ ಪ್ರಚಂಡ ಭೀಮಗೆ ಸಮ । ಕಂಡಿಲ್ಲ ಕೇಳಿಲ್ಲ ನೋಡಿ ಭಾರತವ ॥೧೯॥ ಉಂಡು ತೇಗಿದ ಗರಳ ತಿಂಡಿಯ ಭೀಮನು । ಉಂಡು ಹಾಲಾಹಲವ ಹಿಂದೆ ಈ ವಾಯು ॥ ಹಿಂಡಿ ಸ್ವಲ್ಪವ ಮುಕ್ಕಣ್ಣಗೆ ಕೊಟ್ಟವನು । ಬಂಡು ಮಾತಲ್ಲವಿದು ಕೇಳಿ ವೇದವನು ॥೨೦॥ ಅರಗು ಮನೆಯಿಂದ್ಹೊರಟು ಸೇರಿ ವನವನು ಅಲ್ಲಿ । ಕ್ರೂರ ಹಿಡಿಂಬನ ಕೊಂದವನ ಸೋದರಿ ॥ ಭಾರತಿಯುಕ್ಸ್ವರ್ಗ ಶಿರಿಯು ಹಿಡಿಂಬಿಯ । ಕರಪಿಡಿದ ಭೀಮನು ಅನುಪಮ ಬಲಾಢ್ಯ ॥ ೨೧ ॥ ಬಕ ಕೀಚಕ ಜರಾಸಂಧಾದಿ ಅಸುರರು । ಲೋಕ ಕಂಟಕರನ್ನ ಕೊಂದು ಬಿಸುಟು ॥ ಲೋಕಕ್ಕೆ ಕ್ಷೇಮವ ಒದಗಿಸಿದ ಈ ಅಮಿತ । ವಿಕ್ರಮ ಭೀಮನಿಗೆ ಸಮರಾರು ಇಲ್ಲ ॥೨೨॥ ಕಲಿ ಕಲಿಪರಿವಾರ ದುರ್ಯೋಧನಾದಿಗಳ। ಬಲವಂತ ಭೀಮನು ಬಡಿದು ಸಂಹರಿಸಿದ ॥ ಕಲಿಹರ ಸುಜನಪಾಲ ಭೀಮ ಸಾಮ್ರಾಟನ । ಕಾಲಿಗೆ ಎರಗುವೆ ದ್ರೌಪದೀಪತಿಗೆ ॥೨೩॥ ಮಾಲೋಲ ಕೃಷ್ಣನ ಸುಪ್ರೀತಿಗಾಗಿಯೇ । ಬಲ ಕಾರ್ಯಗಳ ಮಾಡಿ ಅರ್ಪಿಸಿದ ಭೀಮ ॥ ಕಲಿಯುಗದಿ ಈ ಭೀಮ ಅವತಾರ ಮಾಡಿಹನು । ಕಲಿಮಲಾಪಹ ಜಗದ್ಗುರು ಮಧ್ವನಾಗಿ ॥೨೪॥ ಹನುಮಂತನ ಮುಷ್ಟಿ,

ಭೀಮಸೇನನ ಗದೆ । ದಾನವಾರಣ್ಯವ ಕೆಡಹಿದ ತೆರದಿ ॥ ಆಮ್ನಾಯಸ್ಮೃತಿ ಯುಕ್ತಿಯುತ ಮಧ್ವ ಶಾಸ್ತ್ರವು । ವೇನಾದಿಗಳ ಕುಮತ ತರಿದು ಸುಜನರ ಕಾಯ್ತು ॥೨೫॥ ಇಳಿಯ ಸುಜನರ ಭಾಗ್ಯ ಶ್ರುತಿ ಪುರಾಣಂಗಳು । ಪೇಳಿದಂತೆ ಕೊಂಡ ಯತಿರೂಪ ವಾಯು ॥ ಮೇಲಾಗಿ ಇದ್ದ ನಮ್ಮ ಅಜ್ಞಾನ ಕತ್ತಲೆಯ । ತೊಲಗಿಸಿದನು ಈ ಮಧ್ವಾಖ್ಯ ಸೂರ್ಯ ॥೨೬॥ ದುರ್ವಾದ ಕುಮತಗಳು ಸಜ್ಜನರ ಮನ ಕೆಡಿಸೆ । ತತ್ವವಾದವ ಅರುಪಿ ಸಜ್ಜನರ ಪೊರೆದ ॥ ಮೂವತ್ತು ಮೇಲೇಳು ಗ್ರಂಥ ಚಿಂತಾಮಣಿ । ಸುವರ್ಣ ಕುಂದಣ ಪದಕ ಯೋಗ್ಯರಿಗೆ ಇತ್ತ॥೨೭॥ ದುಸ್ತರ್ಕ ದುರ್ಮತ ಬಿಸಿಲಲ್ಲಿ ಬಾಡುವ । ಸಸಿಗಳು ಸಾತ್ವಿಕ ಅಧಿಕಾರಿಗಳಿಗೆ ॥ ಹಸಿ ನೀರು ನೆರಳು ಈ ಮಾಧ್ವ ಮೂವತ್ತೇಳು। ಸಚ್ಛಾಸ್ತ್ರ ಪೀಯೂಷ ಗೋಕಲ್ಪ ತರುವು ॥೨೮॥ ಮೂಢ ಅಧಮರ ದುಷ್ಟ ಮತಗಳ ಸಂಪರ್ಕದಿ । ಈಡಿಲ್ಲದ ಮೋದಪ್ರದ ಜ್ಞಾನ ಕಳಕೊಂಡು ॥ ಬಡತನದಲಿ ನರಳುವ ಸಜ್ಜನರ ಪೋಷಿಪುದು । ನೋಡಿ ಈ ಸುರಧೇನು ಮಾಧ್ವ ಮೂವತ್ತೇಳ ॥೨೯॥ ಬಿಲ್ವಪ್ರಿಯ ಶಿವ ಈಡ್ಯ ಸಾರಾತ್ಮ ಕೃಷ್ಣನ । ಚೆಲ್ವಉಡುಪಿ ಕ್ಷೇತ್ರದಲಿ ನಿಲ್ಲಿರಿಸಿ ॥ ಎಲ್ಲ ಭಕ್ತರ ಕಾವ ಸುಖಮಯ ಜಗತ್ಕರ್ತ । ಮೂಲರಾಮನ ಸಾಧು ಜನರಿಗೆ ಕಾಣಿಸಿದ ॥೩೦॥ ಮಹಿದಾಸ ಬೋಧಿಸಿದ ತತ್ವವನು ವಿವರಿಸುತ । ಮಹಂತ ಪೂರ್ಣಪ್ರಜ್ಞ ಬದರೀಗೆ ತೆರಳಿ ॥ ಮಹಿಶಿರಿಕಾಂತ ಶ್ರೀವ್ಯಾಸನ ಬಳಿ ಇಹನು । ಅಹರಹ ಪ್ರೇಮದಿಂ ಸಂಸ್ಮರಿಸೆ ತೋರ್ವ॥೩೧॥ ರಾಮ ಕೃಷ್ಣ ವ್ಯಾಸ ಜಾನಕೀಸತ್ಯಾ । ರುಕ್ಮಿಣೀ ಅಂಭ್ರಣಿ ಪ್ರಿಯತಮ ಹನುಮ ॥ ಭೀಮ ಮಹಾ ಪುರುಷೋತ್ತಮ ದಾಸರಿಗೆ । ನಮಿಪೆ ವಿಪಶೇಷ ಶಿವಾದ್ಯಮರ ಸನ್ನತರ್ಗೆ ॥೩೨॥ ಚತುರ್ಮುಖ ವರವಾಯು ಸರಸ್ವತಿ ಭಾರತಿಗೆ। ಸದಾ ಶ್ರೀಹರಿಯಲ್ಲಿ ಭಕ್ತಿ ಅಚ್ಛಿನ್ನ ॥ ಅತಿರೋಹಿತ ಜ್ಞಾನ ಪ್ರಾಚುರ್ಯರಾಗಿಹರು । ಸಾಧಾರಣವಲ್ಲ ಋಜುಗಳ ಮಹಿಮೆ ॥೩೩॥ ಋಜುಗಳ ರಾಜೀವ ಚರಣಗಳಿಗಾ ನಮಿಪೆ । ಭುಜಗಶಯ್ಯನಲಿ ಭಕ್ತಿ ಸಹಜ ಇವರಲ್ಲಿ ॥ ಭುಜಗ ಭೂಷಣಾದಿಗಳಿಗಧಿಕತಮ ಬಲಜ್ಞಾನ । ತ್ರಿಜಗಮಾನ್ಯರು ತ್ರಿಗುಣ ತಾಪವರ್ಜಿತರು ॥೩೪॥ ಅಪರೋಕ್ಷ ಋಜುಗಣಕೆ ಅನಾದಿಯಾಗಿಯೇ ಉಂಟು । ತಪ್ಪದೇ ಶತಕಲ್ಪ ಸಾಧನವ ಗೈದು ॥ ಶ್ರೀಪನ ಅಪರೋಕ್ಷ ಇನ್ನೂ ವಿಶೇಷದಿ । ಲಭಿಸಿ ಕಲ್ಯಾದಿ ಸುನಾಮ ಧರಿಸುವರು ॥೩೫॥ ಕಲ್ಯಾದಿ ಪೆಸರಲ್ಲಿ ಪ್ರತಿ ಒಂದು ಕಲ್ಪದಲು । ಅಕಳಂಕ ಇವರು ಬಹು ಸುವಿಶೇಷ ಸಾಧನದಿ ॥ ಭಕ್ತ್ಯಾದಿ ಗುಣಕ್ರಮದಿ ಅಧಿಕ ಅಭಿವ್ಯಕ್ತಿಯಂ। ಮುಖ್ಯ ವಾಯು ಬ್ರಹ್ಮ ಪದವ ಪೊಂದುವರು ॥೩೬॥ ಈ ಬ್ರಹ್ಮಾದಿಗಳೊಳು ಇದ್ದು ಕೃತಿಮಾಡಿಸುವ । ಶಿರಿಸಹ ತ್ರಿವೃನ್ನಾಮ "ಪ್ರಸನ್ನ ಶ್ರೀನಿವಾಸ" ॥ ಸುಹೃದ ಸೌಭಾಗ್ಯದಗೆ ಜಯ ಜಯತು ಅರ್ಪಿತವು । ಹರಿವಾಯು ನುಡಿಸಿದಿದು ಜಯತು ಹರಿವಾಯು ॥೩೭॥

॥ಇತಿ ಪ್ರಸನ್ನ ಶ್ರೀನಿವಾಸ ದಾಸರಾಜ ವಿರಚಿತ ಸೌಭಾಗ್ಯ ಸಪ್ತ ತ್ರಿಂಶತಿ ಸಂಪೂರ್ಣಂ॥

॥ ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ॥

## ಭಾಗ ೩

## ನವಗ್ರಹಸ್ತೋತ್ರಮ್

೧) ಅಸ್ಯ ಶ್ರೀನವಗ್ರಹಸ್ತೋತ್ರಮಂತ್ರಸ್ಯ ವೇದವ್ಯಾಸ ಋಷಿಃ। ಅನುಷ್ಟುಪ್ ಛಂದಃ। ಮಮ ಗ್ರಹಾನುಕೂಲಾರ್ಥಂ ನವಗ್ರಹಸ್ತೋತ್ರಜಪೇ ವಿನಿಯೋಗಃ ॥ ಓಂ (ಶ್ರೀಂ) ಜಪಾಕುಸುಮಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಮ್ । ತಮೋಽರಿಂ ಸರ್ವಪಾಪಘ್ನಂ ಪ್ರಣತೋಽಸ್ಮಿ ದಿವಾಕರಮ್ ॥೧॥ ದಧಿಶಂಖತುಷಾರಾಭಂ ಕ್ಷೀರೋದಾರ್ಣವಸನ್ನಿಭಮ್ । ನಮಾಮಿ ಶಶಿನಂ ದೇವಂ (ಸೋಮಂ) ಶಂಭೋರ್ಮುಕುಟಭೂಷಣಮ್ ॥ ೨॥ ಧರಣೀಗರ್ಭಸಂಭೂತಂ ವಿದ್ಯುತ್ತೇಜಃಸಮ ಪ್ರಭಮ್ । ಕುಮಾರಂ ಶಕ್ತಿಹಸ್ತಂ ತಂ ಮಂಗಲಂ ಪ್ರಣಮಾಮ್ಯಹಮ್ ॥ ೩॥ ಪ್ರಿಯಂಗುಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಮ್ । ಸೌಮ್ಯಂ ಸೌಮ್ಯಗುಣೋಪೇತಂ ನಮಾಮಿ ಶಶಿನಃ ಸುತಮ್ ॥ ೪॥ ದೇವಾನಾಂ ಚ ಋಷೀಣಾಂ ಚ ಗುರುಂ ಕಾಂಚನಸನ್ನಿಭಮ್ । ಬುದ್ಧಿಭೂತಂ ತ್ರಿಲೋಕೇಶಂ ತಂ ನಮಾಮಿ ಬೃಹಸ್ಪತಿಮ್ ॥ ೫॥ ಹೇಮಕುಂಭಂ ಮೃಣಾಲಾಭಂ ದೈತ್ಯಾನಾಂ ಪರಮಂ ಗುರುಮ್ । ಸರ್ವಶಾಸ್ತ್ರಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಮ್ ॥೬॥ ನೀಲಾಂಜನ-ಸಮಾಭಾಸಂ ರವಿಪುತ್ರಂ ಯಮಾಗ್ರಜಮ್। ಛಾಯಾಮಾರ್ತಾಂಡಸಂಭೂತಂ ತಂ ನಮಾಮಿ ಶನೈಶ್ಚರಮ್ ॥೭॥ ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯವಿಮರ್ದನಮ್ । ಸಿಂಹಿಕಾಗರ್ಭಸಂಭೂತಂ ತಂ ರಾಹುಂ ಪ್ರಣಮಾಮ್ಯಹಮ್ ॥೮॥ ಪಲಾಶಪುಷ್ಪಸಂಕಾಶಂ ತಾರಕಾಗ್ರಹಮಸ್ತಕಮ್ । ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಮ್ ॥೯॥ ಇದಂ ವ್ಯಾಸಮುಖೋದ್ಗೀತಂ ಪಠಿಷ್ಯಂತಿ ಸಮಾಹಿತಾಃ । ದಿವಾ ವಾ ಯದಿ ವಾ ರಾತ್ರೌ ತೇಷಾಂ ಶಾಂತಿರ್ಭವಿಷ್ಯತಿ ॥೧೦॥ ಐಶ್ವರ್ಯಮತುಲಂ ತೇಷಾಮಾರೋಗ್ಯಂ ಪುಷ್ಟಿವರ್ಧನಮ್ । ನರನಾರೀನೃಪಾಣಾಂ ಚ ಭವೇದ್ದುಃಸ್ವಪ್ನನಾಶನಮ್ ॥೧೧॥ ಗ್ರಹನಕ್ಷತ್ರಜಾಃ ಪೀಡಾಃ ತಸ್ಕರಾಗ್ನಿಸಮುದ್ಭವಾಃ। ತಾಃ ಸರ್ವಾಃ ಪ್ರಶಮಂ ಯಾಂತಿ ವ್ಯಾಸೋ ಬ್ರೂತೇ ನ ಸಂಶಯಃ ॥೧೨॥

**॥ ಇತಿ ಶ್ರೀವೇದವ್ಯಾಸವಿರಚಿತಂ ನವಗ್ರಹಸ್ತೋತ್ರಂ ಸಂಪೂರ್ಣಮ್ ॥**

೨) ಭಾಸ್ವಾನ್ಮೇ ಭಾಸಯೇತ್ ತತ್ವಂ ಚಂದ್ರಶ್ಚಾಹ್ಲಾದಕೃದ್ಭವೇತ್ । ಮಂಗಲೋ ಮಂಗಲಂ ದದ್ಯಾತ್ ಬುಧಶ್ಚ ಬುಧತಾಂ ದಿಶೇತ್ ॥ ೧॥ ಗುರುರ್ಮೇ ಗುರುತಾಂ ದದ್ಯಾತ್ ಕವಿಶ್ಚ ಕವಿತಾಂ ದಿಶೇತ್ । ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇಽರ್ಪಯೇತ್ ॥೨॥ ರಾಹುರ್ಮೇ ರಹಯೇದ್ರೋಗಂ ಗ್ರಹಾಸ್ಸಂತು ಕರಗ್ರಹಾಃ । ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥ ೩॥ ಶನೇ ದಿನಮಣೇಃ ಸೂನೋ ಸ್ವನೇಕಗುಣಸನ್ಮಣೇ । ಅನಿಷ್ಟಂ ಹರ ಮೇಽಭೀಷ್ಟಂ ಕುರು ಮಾ ಕುರು ಸಂಕಟಂ ॥ ೪॥ ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ । ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥ ೫॥

**॥ ಇತಿ ಶ್ರೀಮದ್ವಾದಿರಾಜಪೂಜ್ಯಚರಣವಿರಚಿತಂ ನವಗ್ರಹಸ್ತೋತ್ರಂ ಸಂಪೂರ್ಣಂ ॥**

## ೩) (ನವ)ಗ್ರಹ ಸ್ತೋತ್ರಗಳು (ತತ್ವಸುವ್ವಾಲಿ)

**ಶ್ರೀಸೂರ್ಯ ಸ್ತುತಿ :** ಆದಿತ್ಯದೇವ ತ್ವತ್ಪಾದಯುಗಳಕೆ ಅಭಿವಾದನವ ಮಾಳ್ಪೆ ಅನುದಿನ। ಅನುದಿನದಿ ಸಜ್ಜನರ ವ್ಯಾಧಿಗಳ ಕಳೆದು ಸುಖವೀಯೋ ॥ ೧॥ ಸಂಜ್ಞಾರಮಣ ನಿನಗೆ ವಿಜ್ಞಾಪಿಸುವೆನು ಸರ್ವಜ್ಞ ನೀನೆಂದು ಸರ್ವತ್ರ । ಸರ್ವತ್ರ ಎನಗೆ ಬ್ರಹ್ಮಜ್ಞಾನ ಭಕುತಿ ಕರುಣಿಸೋ ॥೨॥ ಸೂರಿಗಮ್ಯನೆ ವಾಕ್ ಶರೀರಬುದ್ಧಿಜವಾದಪಾರದೋಷಗಳ ಎಣಿಸದೆ । ಎಣಿಸದೆ ಭಗವಂತನಾರಾಧನೆಯನಿತ್ತು ಕರುಣಿಸೊ ॥೩॥ **ಶ್ರೀಚಂದ್ರ ಸ್ತುತಿ :** ರೋಹಿಣೀರಮಣ ಮದ್ದೇಹಗೇಹಾದಿಗಳ ಮೋಹಪರಿಹರಿಸಿ ಮನದಲ್ಲಿ। ಮನದಲ್ಲೆನಗೆ ಗರುಡವಾಹನನ ಸ್ಮರಣೆಯನು ಕರುಣಿಸೋ ॥ ೧॥ ಕ್ಷೀರಾಬ್ಧಿಜಾತ ಮಾರಾರಿಮಸ್ತಕಸದನ ವಾರಿಜೋದ್ಭವನ ಆವೇಶ । ಆವೇಶ ಪಾತ್ರ ಪರಿಹಾರ ಗೈಸೆನ್ನ ಭವತಾಪ ॥೨॥ ದತ್ತದೂರ್ವಾಸಾನುಜಾತ್ರಿ - ಸಂಭವನೆ ತ್ವದ್ಭೃತ್ಯ ನಾನಯ್ಯ ಎಂದೆಂದೂ । ಎಂದೆಂದು ಪ್ರಾರ್ಥಿಸುವೆ ಹೃತ್ತಿಮಿರ ಕಳೆದೆನ್ನ ಸಂತೈಸೋ ॥೩॥ **ಶ್ರೀಅಂಗಾರಕ ಸ್ತುತಿ :** ಕೋಲಭೂನಂದನ ಪ್ರವಾಳಸಮವರ್ಣ ಕರವಾಳ ಸಮಖೇಟ ನಿಶ್ಶಂಕ । ನಿಶ್ಶಂಕಪಾಣಿ ಗುರುಮೌಳಿ ನೀ ಎನ್ನ ಸಂತೈಸೋ ॥ ೧॥ ಮಂಗಳಾಹ್ವಯನೆ ಸರ್ವೇಂಗಿತಜ್ಞನೆ ಅಂತರಂಗದಲಿ ಹರಿಯ ನೆನೆವಂತೆ । ನೆನೆವಂತೆ ಕರುಣಿಸೊ ಅಂಗಾರವರ್ಣ ಅನುದಿನ ॥ ೨॥ ಭೌಮರಾಜನೆ ತ್ವನ್ಮಹಾಮಹಿಮೆ ತುತಿಸಲ್ಕೆ ಪಾಮರನಿಗಳವೇ ಎಂದೆಂದು । ಎಂದೆಂದು ಸಜ್ಜನರ ಕಾಮಿತಾರ್ಥವನು ಕರುಣಿಸೋ ॥ ೩॥ **ಶ್ರೀಬುಧ ಸ್ತುತಿ :** ಬುಧನೆ ನೀ ಸುಗುಣವಾರಿಧಿ ಎಂದು ಬಿನ್ನೈಪೆ ಕ್ಷುಧೆಯ ಪರಿಹರಿಸಿ ಸುಜ್ಞಾನ । ಸುಜ್ಞಾನ ಸದ್ಭಕ್ತಿ ಸುಧೆಯ ಪಾನವನು ಕರುಣಿಸೋ ॥ ೧॥ ಚಂದ್ರನಂದನ ಸತತ ವಂದಿಸುವೆ ಮನ್ಮನದ ಸಂದೇಹ ಬಿಡಿಸಯ್ಯ ಮಮ ದೈವ । ಮಮ ದೈವ ಸರ್ವ ಗೋವಿಂದನಹುದೆಂದು ತಿಳಿಸಯ್ಯ ॥೨॥ ತಾರಾತ್ಮಜನೆ ಮಚ್ಛರೀರದೊಳು ನೆಲೆಗೊಂಡು ತೋರೊ ಸಜ್ಜನರ ಸನ್ಮಾರ್ಗ । ಸನ್ಮಾರ್ಗತೋರಿ ಉದ್ಧಾರಗೈಸೆನ್ನ ಭವದಿಂದ ॥ ೩॥ **ಶ್ರೀಗುರುಸ್ತುತಿ :** ನುತಿಸಿ ಬೇಡುವೆ ಬೃಹಸ್ಪತಿ ಗುರುವೆ ಎನ್ನ ದುರ್ಮತಿಯ ಪರಿಹರಿಸಿ ಸುಜ್ಞಾನ । ಸುಜ್ಞಾನವಿತ್ತು ಶ್ರೀಪತಿಯ ತೋರೆನ್ನ ಮನದಲ್ಲಿ ॥೧॥ ಸುರರಾಜಗುರುವೆ ತ್ವಚ್ಚರಣಾರವಿಂದಗಳಿಗೆರಗಿ ಬಿನ್ನೈಪೆ ಇಳೆಯೊಳು। ಇಳೆಯೊಳುಳ್ಳಖಿಳ ಬ್ರಾಹ್ಮಣರ ಸಂತೈಸೋ ದಯದಿಂದ ॥ ೨॥ ತಾರಾರಮಣನೆ ಮದ್ವಾರ ನಿನ್ನದು ಮಹಾಕಾರುಣಿಕ ನೀನೆಂದು ಬಿನ್ನೈಪೆ । ಬಿನ್ನೈಪೆ ದುರಿತವ ನಿವಾರಿಸಿ ತೋರೋ ತವ ರೂಪ ॥೩॥ **ಶ್ರೀಶುಕ್ರ ಸ್ತುತಿ :** ಶಕ್ರಾರಿಗಳ ಗುರುವೆ ಶುಕ್ರಮುನಿರಾಯಾ ದರಚಕ್ರಾಬ್ಜಪಾಣಿ ಗುಣರೂಪ । ಗುಣರೂಪ ವ್ಯಾಪಾರ ಪ್ರಕ್ರಿಯವ ತಿಳಿಸೋ ಪ್ರತಿದಿನ ॥೧॥ ಕವಿಕುಲೋತ್ತಂಸ ಭಾರ್ಗವ ಬೇಡಿಕೊಂಬೆ ಭಾಗವತ ಭಾರತವೆ ಮೊದಲಾದ । ಮೊದಲಾದ ಶಾಸ್ತ್ರಗಳ ಶ್ರವಣಸುಖವೆನಗೆ ಕರುಣಿಸೋ ॥೨॥ ನಿಗಮಾರ್ಥಕೋವಿದನೆ ಭೃಗುಕುಲೋತ್ತಂಸ ಕೈ ಮುಗಿದು ಬೇಡುವೆನೋ ದೈವಜ್ಞ । ದೈವಜ್ಞ ಹರಿಯ ಓಲಗದಲ್ಲಿ ಬುದ್ಧಿ ಇರಲೆಂದೂ ॥೩॥ **ಶ್ರೀಶನಿ ಸ್ತುತಿ :** ತರಣಿನಂದನ ಶನೈಶ್ಚರ ನಿನ್ನ ಪಾದಾಬ್ಜಕೆರಗಿ ಬಿನ್ನೈಪೆ ಬಹುಜನ್ಮ । ಬಹುಜನ್ಮಕೃತಪಾಪ ಪರಿಹಾರಮಾಡಿ ಸುಖವೀಯೋ ॥ ೧॥ ಛಾಯಾತನುಜ ಮನಃಕಾಯಕ್ಲೇಶಗಳಿಂದ ಆಯಾಸ ಪಡುವಂಥ ಸಮಯದಿ । ಸಮಯದಲಿ ಲಕ್ಷ್ಮೀನಾರಾಯಣನ ಸ್ಮರಣೆ ಕರುಣಿಸೋ ॥ ೨॥ ಇದನೆ ಬೇಡುವೆ

ಪದೋಪದಿ ಪುಷ್ಕರನ ಗುರುವೆ ಹೃದಯ ವದನದಲಿ ಹರಿಮೂರ್ತಿ । ಹರಿಮೂರ್ತಿ ಕೀರ್ತನೆಗಳೊದಗಲೆನಗೆಂದು ಬಿನ್ನೈಪೆ ॥ ೩॥ ಅಹಿಕಪಾರತ್ರಿಕದಿ ನೃಹರಿದಾಸರ ನವಗ್ರಹದೇವತೆಗಳು ದಣಿಸೋರೆ । ಧಣಿಸೋರೆ ಇವರನ್ನು ಅಹಿತರೆಂದೆನುತ ಕೆಡಬೇಡಿ ॥ ೪॥ ಜಗನ್ನಾಥವಿಠ್ಠಲನ ಬದಿಗರಿವರಹುದೆಂದು ಹಗಲಿರುಳು ಬಿಡದೆ ನುತಿಸುವ । ನುತಿಸುವ ಮಹಾತ್ಮರಿಗೆ ಸುಗತಿಗಳನ್ನಿತ್ತು ಸಲಹೋರು ॥ ೫॥

*****

## ಸಂಧಿಮಾಲಾಸಂಧಿ

**ರಾಗ : ಮುಖಾರಿ, ಆದಿತಾಳ**

ಹರಿಕಥಾಮೃತಸಾರಸಂಧಿಗ । ಳರುಹುವೆನು ತತ್ಕೃತ ಮಹಾತ್ಮರ । ಚರಣಕರುಣಾ ಬಲವಿರಲು ಸನ್ಮಂಗಳಾಚರಣಾ ॥ ಸರಸಸಂಧಿಯ ಪೇಳ್ದ ಸುಜನರಿ। ಪುರುಷಕೊಡುವುದು ಯೆಂದು ಪರಮಾ । ದರದಿ ಕರುಣಾಸಂಧಿವ್ಯಾಪ್ತ ಸುಸಂಧಿ ಭೋಜನದಾ ॥ ೧॥ ಸಂಧಿಸುಖದ ವಿಭೂತಿ ಸಿರಿಗೋ । ವಿಂದನಾಜ್ಞದಿ ಪೇಳಿದರು ಆ । ನಂದ ನೀಡುವ ಪಂಚಮಹಾಯಜ್ಞದ ಸುಸಂಧಿಯನ ॥ ಛಂದದಿಂದಲಿ ಪಂಚತನ್ಮಾ। ತ್ರೆಂದು ಕರಿಸುವ ಸಂಧಿ ಪೇಳ್ದರು । ಇಂದಿರೇಶನ ಪ್ರೀತಿ ಬಡಿಸುವ ಮಾತೃಕಾಸಂಧೀ ॥ ೨॥ ವರ್ಣಪ್ರಕ್ರಿಯಸಂಧಿ ಸುಜನರ । ಕರ್ಣಗಳಿಗತಿಶ್ರಾವ್ಯ ವೆನಿಪುದು । ತೂರ್ಣದಲಿ ಸರ್ವಪ್ರತೀಕಧ್ಯಾನಪ್ರಕ್ರಿಯವಾ ॥ ನಿರ್ಣೈಸಿದರು ನಾಡಿಯನು ಸಂ। ಪೂರ್ಣ ಗುಣನಾಮಸಂಧಿಯನು । ಸ್ವರ್ಣನಾಭಿಪ್ರಮುಖ ಜೀವನಪ್ರಕ್ರಿಯಾ ಸಂಧಿ ॥ ೩॥ ವಾಸುದೇವನ ಕರುಣದಿಂದಲಿ । ಶ್ವಾಸಸಂಧಿಯ ಪೇಳಿದರು । ಜಗದೀಶನಿಂದಲಿ ದತ್ತಸ್ವಾತಂತ್ರ್ಯಾಖ್ಯಸಂಧಿಯನಾ ॥ ಲೇಸೆನಿಪ ಸ್ವಾತಂತ್ರವಿಭಜನ । ದಾಸರು ಸಾರಿದರೆಲ್ಲ ಬಿಂಬೋ। ಪಾಸನದ ಸಂಧಿಯನು ಹರಿಯ ಸ್ತೋತ್ರಸಂಧಿಯನ ॥ ೪॥ ಸುಗುಣತರತಮಭಾವಸಂಧಿಯು। ಮಿಗಿಲು ಆವೇಶಾವತಾರವ । ನಗಧರನ ಭಕ್ತಾಪರಾಧಸಹಿಷ್ಣುಸಂಧಿಯನಾ ॥ ಹಗಲು ಇರುಳೆನ್ನದೆಲೆ ಪಿರಿಯುರು । ಬಗೆಬಗೆಯ ಶಾಸ್ತ್ರವನು ಶೋಧಿಸಿ । ಸುಗತಿಪ್ರದ ಬೃಹತ್ತಾರತಮ್ಯದ ಸಾಧನದ ಸಂಧೀ ॥ ೫॥ ದೇವನಂಘ್ರಿಯ ನೆನೆವುತಲಿ ಕ್ರೀ । ಡಾವಿಲಾಸವರೋಹ ಸಂಧಿಯು । ದೇವತಾನುಕ್ರಮಣಿಕಾ ವಿಘ್ನೇಶಸಂಧಿಯನ॥ ಭಾವವುಳ್ಳಣುತಾರತಮ್ಯವ । ತಾ ವಿರಚಿಸುತ ದೈತ್ಯತರತಮ । ಭಾವ ನೈವೇದ್ಯಪ್ರಕರಣದ ಸಂಧಿ ಪೇಳಿದರು ॥ ೬॥ ನೀರಜಾಕ್ಷನ ನೆನೆದು ಕಕ್ಷ । ತಾರತಮ್ಯದ ಸಂಧಿ ಪೇಳುತ । ಶ್ರೀರಮಣಗರ್ಪಿಸುತಲಿರೆ ಭೀಮೇಶವಿಠ್ಠಲನ ॥ ಚಾರುಚರಣವ ನೆನವುತನುದಿನ । ಧಾರುಣೀಯೊಳು ಮೆರೆದ ನಮ್ಮ ॥ ಗುರುದೊರೆಜಗನ್ನಾಥಾಖ್ಯ ದಾಸರ ನೆನೆವೆನನವರತಾ ॥೭॥ **ಶ್ರೀಮತ್ ಜಗನ್ನಾಥದಾಸರಾಯರ ಶಿಷ್ಯ ಭೀಮೇಶದಾಸರಿಂದ ವಿರಚಿತ ಸಂಧಿಮಾಲಾ ಸಂಧಿ ಸಮಾಪ್ತ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

# ಭಾಗ ೪

## ಅ) ಹಾಡುಗಳು

### ರುಕ್ಮಿಣಿಯ ಓಲೆ

ಓಲೆ ಬರೆವ ನೆವ ಮಾಡಿ ತಾಯಿ ಮಗ್ಗಲು ಬಿಟ್ಟಳು ತೂಗೊ ಮಂಚದಿ ಸಾಗಿಬಾಗಿ ಮಾನುಣಿ ಬ್ಯಾರೆ ಮಲಿಗ್ಯಾಳು । ಬೆಳಗು ಜಾವದಿ ಉಲುವು ತಗ್ಗಿಸಿ ಮಡದಿ ಗುಡಿಗೆ ನಡೆದಳು॥

ಗೋವುಳಾಗ ಓಲೆ ಬರೆವುದು ಮಹಾಲಕ್ಷ್ಮಿ ನಿಮಗೆ ಅರುಹಿದೆ । ಅಷ್ಟು ಮಾನ್ಯವ ಸಹಿಸಿಕೊಂಬುವ ಹೆಚ್ಚಿನ ಸಾಮರ್ಥ್ಯ ಯಾವಗೂ ಮುಟ್ಟಲಿಕ್ಕೆ ಅಳವಿಲ್ಲವ । ಅಂಬಿಕಾ ದೇವಿಗೆ ರುಕ್ಮಿಣಿ ನಂಬಿ ಕೈಯ್ಯ ಮುಗಿದಳು । ರಂಗಗೋಲೆ ಬರೆದೆನೆಂದರೆ ಮುಂದೆ ಮಸಿಯು ಇಲ್ಲವೆ॥

ಖಾರ ಬಾರದ ಖಜಾನಿಗೆ ಕೀಲಿಕುಲ್ಪಿಗಳಾದವು । ಅಂಬಿಕಾ ದೇವಿಗೆ ಎರಗಿ ನಂಬಿ ಕೈಯ್ಯ ಮುಗಿದಳು । ಬಂಗಾರದ ಕರ್ತು ಹಿಡಿದು ರಂಗಗ ಓಲೆ ಬರೆದಳು । ಆರೆವಾಲಿ ಒಂದು ಬರೆದಳು ಮ್ಯಾಲೆ ಫಾರ್ಸಿ ಬರೆದಳು । ಗೋವುಳಾನ ಹೊರ್ತಾಗಿ ಅಕ್ಷರ ಬ್ಯಾರೆ ಮಂದಿಗೆ ತಿಳಿಯದು । ತೆಲಗು ಬರೆದಳು, ಬೆಡಗು ಬರೆದಳು, ನಡುವೆ ಕನ್ನಡ ಬರೆದಳು। ಒಡೆಯನ ಹೊರ್ತಾಗಿ ಅಕ್ಷರ ಬದಲ ಮಂದಿಗೆ ತಿಳಿಯದು । ಅರಳು ಗಾಳಗ ನಾಭ ಬರೆದಳು ಮುಡಿಯ ಭಾವಾ ಬರೆದಳು । ಒಡೆಯ ಕೃಷ್ಣರು ನೋಡಿಕೊಂಡರೆ ಮರಳು ಆಗ್ಹೊಂಗೆ ಬರೆದಳು । ದ್ವಾರಕಾ ಪಟ್ಟಣದಲ್ಲಿ ಭ ೀಗನೆಲ್ಲ ತಗ್ಗಿಸುವೆ ಸೋಳ ಸಹಸ್ರ ಗೋಪಿಕೀಯರ ಮಾನ ಭಂಗವ ಮಾಡುವೆ । ತಂದೆತಾಯಿ ಆಣೆ ನಿಮಗೆ, ತಂಗಿ ಸುಭದ್ರೆ ಆಣೆ । ಅಂಭುಜನಾಭ ಬಾರನೆಂದು ಮಂದಿ ಆಣೆ ಹಾಕ್ಯಾಳು । ತಾಯಿ ದೇವಕಿ ಆಣೆ ನಿಮಗ, ಹಿರಿಯಣ್ಣ ಬಲರಾಮನಾಣೆ । ಕೃಷ್ಣ ನೀವು ಆಳುವಂಥಹ ಆಕಳಾಣಿ ಹಾಕ್ಯಾಳು। ಚಂದ್ರ ಸೂರ್ಯರ ಆಣೆ ನಿಮಗ ನಾರದಾ ಮುನಿ ಗುರುಗಳಾಣೆ, ಕೃಷ್ಣ ನೀವು ಏರುವಂಥ ಪಕ್ಷಿ ಆಣಿ ಹಾಕ್ಯಾಳು । ತೆತ್ತೀಸಕೋಟಿ ದೇವಾದಿ ದೇವತೆಗಳಷ್ಟು ಮಂದಿ ಆಣೆ ನಿಮಗ, ಕೃಷ್ಣ ನೀವು ಊದುವಂಥ ಕೊಳಲ ಆಣಿ ಹಾಕ್ಯಾಳು । ಗಿರಿಯ ವೆಂಕಟೇಶ ನಿಮ್ಮ ನೆರೆದ ಪರಸಿಗೆ ಆಣಿ, ಸರ್ವಜನರ ಆಣಿ ಹಾಕಿ ಸಾಕ್ಷಾತ್ ಓಲೆ ಬರೆದಳು॥

ಓಲೆ ಬರೆದು ಘಳಿಗೆ ಮಾಡಿ ಬ್ರಾಹ್ಮಣನ ಕೈಯಲ್ಲಿ ಕೊಟ್ಟು ನಿನ್ನ ನಂಬಿದೇನೊ ನಾನು ಎರಡು ಬಗೆಯಲು ಬೇಡವೋ । ಮಹಾಲಕ್ಷ್ಮೀ ತಾಯಿ ನಿಮ್ಮ ಮ್ಯಾಲೆ ಹುಸಿದರೆ ತಾಯಿ ಮ್ಯಾಲೆ ಹುಸಿದ ಹಾಂಗೆ ಆಯಿತು ಆಣಿ ಕೊಟ್ಟನು ಬ್ರಾಹ್ಮಣ ॥

ನಂದಗೋಪನ ಮುಂದೆ ಓಲೆ ಇಂದು ತೋರಿಸ ಬೇಡವೊ । ಅಂಗನೆಯರು ಕಡಿಮೆಯಂದು ತನ್ನ ಕಂದಗೆ ಬುದ್ಧಿ ಹೇಳ್ಯಾನು । ನಾದಿನಿ ಸುಭದ್ರೆಗೆ ಓಲೆ ಒದಿ ತೋರಿಸಬೇಡವೋ । ಮಾನಿನೀಯರು ಕಡಿಮೆಯೆಂದು ಸೋದರಗೆ ಬುದ್ಧಿ ಹೇಳ್ಯಾಳು । ಅತ್ತಿ ದೇವಕಿ ಮುಂದೆ ಓಲೆ ಬಿಚ್ಚಿ ತೋರಿಸ ಬೇಡವೊ । ಕಾಳಗದ ಹೆಣ್ಣೆಂದು ಬಹಳ ಪರಿಯಿಂದ ಹೇಳ್ಯಾಳು । ಸತ್ಯಭಾಮೆಯ ಮುಂದೆ ಓಲೆ ಬಿಚ್ಚಿ ತೋರಿಸಬೇಡವೊ । ಸಿಟ್ಟಿನವಳು ಕಂಡರಾಕೆ ಥಟ್ಟನೆ ಹರಿದ್ಹಾಕ್ಯಾಳು । ಗೋವುಳಾನ ಒಳಗೆ ಕರೆದು ಓಲೆಯನ್ನು ಓದಿಸೋ ಬಹಳ ಪರಿಯಿಂದ

ಹೇಳಿಕೊಂಡು ಸ್ವಾಮಿಗೆನ್ನ ಕೂಡಿಸೋ । ಆದಿಕೇಶವಾನಂತಶಯನ ಧೀರ ವೆಂಕಟರಾಯಗ ಮಾವನ ಕೊಂದ ಮಧುಸೂದನನಿಗೆ ಓಲೆಯನ್ನು ಕಳಿಸ್ಯಾಳೋ ॥

ಆಲದ ಎಲೆಯ ಮೇಲೆ ತಾ ಮಲಗಿದ್ದ ಜೋಡಾಗಿ ಬದಿಯಲ್ಲಿ ನಾ ಕುಳಿತಿದ್ದೆ ಭೂಮಿ ಮ್ಯಾಲೆ ಹುಟ್ಟು ನಾರಿ ನಿನ್ನ ಮಾತು ಮೀರೋದಿಲ್ಲೆಂದಿದ್ದಾ ॥ ಹ್ಯಾಂಗೆ ಮಾಡಲಂಬಿಕೆ ॥ ಇಪ್ಪಿಯ ಎಲೆ ಮೇಲೆ ತಾ ಮಲಗಿದ್ದ ಜತ್ತಾಗಿ ಬದಿಯಲಿ ನಾ ಕುಳತಿದ್ದೆ ಸೃಷ್ಟಿ ಮ್ಯಾಲೆ ಹುಟ್ಟು ಮಿತ್ರಿ ನಿನ್ನ ಮಾತು ಮೀರೋದಿಲ್ಲೆಂದಿದ್ದ ॥ ಹ್ಯಾಂಗೆ ... ॥ ಗೋಕುಲದೊಳಗೆ ಬೆಳೆಯುತ್ತಿದ್ದಾ ಆಕಳ ಹಿಂಡನ್ನು ಕಾಯುತ್ತಿದ್ದ ಆಕೆ ಗೊಲ್ಲತಿ ಮಾನಭಂಗವ ಮಾಡಿ ಸಾಕ್ಷಾತ್ ಕೂಸಿನ್ನ ಕೊಟ್ಟಾತಾ ॥ ಹ್ಯಾಂಗ.... ॥ ದೇವಕಿಯ ಹೊಟ್ಟೆಯಲ್ಲಿ ಹುಟ್ಟುವೆನೆಂದ ಮಾವನ ಮಧುರೆಯಲಿ ಕೊಲ್ಲುವೆನೆಂದ । ತಾತನ ಸೆರೆಯ ಬಿಡಿಸುವೆನೆಂದ ಆ ಕಾಲಕ್ಕೆ ನಿನ್ನ ಆಳ್ವೆನೆಂದಿದ್ದಾ॥ ಹ್ಯಾಂಗಾ .... ॥

ಅಷ್ಟರೊಳಗೆ ಅಧಿಕಾರಿ ನೀ ಎಂದ ಅಷ್ಟ ಭಾವದಲಿ ಅತಿಸುಂದರಿಯೆಂದಾ ಕೊಟ್ಟ ಭಾಷೆಗೆ ತಪ್ಪೋದಿಲ್ಲೆಂದಿದ್ದಾ ರುಕ್ಮಿಣಿಯಾಗಿ ಹುಟ್ಟಿ ಬಾ ಅಂದಿದ್ದಾ ॥ಹ್ಯಾಂಗ.... ॥ ವಾರಿಜನಾಭನ ಮಡದ್ಯಾದೆನೆಂದೆ ದ್ವಾರಕಾಪಟ್ಟಣದ ವಡೆತ್ಯಾದೆನೆಂದೆ ಸೋಳಸಾವಿರ ಮಂದಿ ಸವತ್ಯಾದೆನೆಂದೆ ಆ ಪಾರಿಜಾತವ ಮುಡಿದೆನೆಂದಿದ್ದೆ ॥ ಹ್ಯಾಂಗ.... ॥ ಓಲೆಯ ವಳಿತಾಗಿ ಬರೆದಿದ್ದೇನಿಲ್ಲೊ ದೇಹದಲಿ ಸ್ಮರಣೆ ಇತ್ತೋ ಇಲ್ಲೊ ವಾರಿಜನಾಭನು ಊರೊಳಗಿಲ್ಲೋ । ಕೊಟ್ಟ ಉತ್ತರ ಮುಟ್ಟಿತೋ ಇಲ್ಲೋ । ಕೃಷ್ಣ ತಾ ಓದಿಕೊಂಡಾನಿಲ್ಲೊ ಸತ್ಯಭಾಮೆ ಬರಗೊಡಿಸಲಿಲ್ಲೊ ಕೆಟ್ಟ ಶಕುನವಾದಾವೆಲ್ಲೋ ॥ ಹ್ಯಾಂಗ.... ॥ ಓಲೆಯ ಒಳಿತಾಗಿ ಬರೆದಿದ್ದೆ, ಬ್ರಾಹ್ಮಣ ಮುಂದಾಗಿ ಕಳೆಸಿದ್ದೆ ॥ ಮ್ಯಾಲೈದು ದಿನ ಲಗ್ನ ಅವಧಿಟ್ಟು ಹೇಳಿದ್ದೆ, ಹೋದ ಬ್ರಾಹ್ಮಣ ಬರಲೇ ಇಲ್ಲ ॥ ಹ್ಯಾಂಗ .... ॥ ಆಗ ಬ್ಯಾಗನೆ ಆಗೋದು ಸೌರಣಿ ಹಂದರ ಹಾಕೋರು, ತೋರಣ ಕಟ್ಟೋರು, ಮಂದಿ ಬಳಗ, ಬಂದು ನೆರೆಯೋರು, ದೇವರೂಟಗಳಾಗುವುದು ॥ ಹ್ಯಾಂಗ.... ॥ ಬೆಳಗಿಗೆ ಲಗ್ನ ಒದಗಿ ಬಂತು ಬೆಳಗಾಗಲೇ ನಾಳೆ ಘಳಗಿಗೆ ಬಂತು ಮದುಮಗನೆಂಬ ಶಿಶುಪಾಲ ಮದುಮಗನಾಗಿ ಬರುತಾನಿಲ್ಲಿಗೆ ಹ್ಯಾಂಗೆ...॥ ಬೆಳಗಿಗೆ ಲಗ್ನ ಇದಿರು ಗೊಳ್ಳೋರು ಬಡಿಯೋರು ಭೇರಿ ಹಿಡಿಯೋರು ಕಾಳಿ । ಮಿಡಿವೋರು ಬಾಣ ಬೀಜಂ ಕೇಳಲಾರೆನೆ ಆ ಶಬ್ದ ಕಿವಿಗೊಟ್ಟು ॥ ಹ್ಯಾಂಗ ... ॥ ಬಿಚ್ಚುಗತ್ತಿಯ ಹಿಡಿಯತೀನಿ ಕಟ್ಟಿದೋಲಗಕ ಹಾಯತೀನಿ । ಕೆಟ್ಟ ಜೀವ ಕಳಕೋತೀನಿ ವರವ ಕೊಡಂಬಿಕೆ ಒಂದ್ವರವ ಕೊಡ ॥

ಧ್ವನಿ ॥ ಜಾಣೆ ನಾ ಕೊಡುವ ವರವು ಕಾಣಬಾರದು ನಿನಗ ನಾಳೆ ಮುಂಜಾನೆ ಕೃಷ್ಣ ಬಂದು ಕಾಳಗ ಮಾಡಿ ಕಟ್ಟಿಗೊಂಡು ಹೋಗುತಾನ ॥ ಕಾಡ ಬ್ಯಾಡ ರುಕ್ಮಿಣಿ ॥ ವಾರಿಜನಾಭನ ವರ್ತಮಾನ ತರುತಾನ ಕೇಳ್ಹೋಗ ರುಕ್ಮಿಣಿ ॥ ಹೊತ್ತೇರಿ ಮುಂಜಾನೆ ಬರುವ, ಚಕ್ರ ಕೈಯಲ್ಲಿ ಹಿಡಿದಿರುವ ಅಷ್ಟು ದಂಡು ದರ್ಬಲ ಸಹಿತಾಗಿ ಕೃಷ್ಣ ಬಂದು ನಿನ್ನ ಕರಕೊಂಡು ಹೋಗುತಾನ ॥ ಕಾಡ ಬ್ಯಾಡ ರುಕ್ಮಿಣಿ ॥

ಹೊತ್ತೇರಿ ಮುಂಜಾನೆ ಎದ್ದು ಕೃಷ್ಣನ ಮಾರಿ ಕಂಡದ್ದುಂಟಾದರೆ ಮುತ್ತು ಸೂರಿ ಮಾಡಿ ನಿನ್ನ ಹೊಸ್ತಿಲ ದಾಟಿ ಹೋಗುತೀನಿ ॥ ವರವ ಕೊಡಂಬಿಕೆ ಒಂದ್ವರವ ಕೊಡ ॥ ಅಷ್ಟರೊಳಗ ಅಧಿಕಾರಿ ಅಷ್ಟ ಭಾವದಲಿ ಅತಿ ಸುಂದರಿ ಸೃಷ್ಟಿಯೊಳಗೆ ನಿನ್ನಂಥ ಅತಿ ಚೆಲುವ ಯಾರಿಲ್ಲೆಂದು ಮೆಚ್ಚಿ ಕಾಗದ ನಾಲ್ಕು ಕೊಟ್ಟಾನು ಬ್ರಾಹ್ಮಣ ॥

ಬ್ರಾಹ್ಮಣನಾಡಿದ ನುಡಿಯ ಕೇಳಿ ಬಹಳ ಸಂತೋಷ ಮನಸೀಲೆ ತಾಳಿ । ವಾರಿಜನಾಭನು ನಿಲುವ ಗನ್ನಡಿ ಹಿಡಿದು ಮಾತಾಡುತಿದ್ದ ಮೆಚ್ಯಾಳೇನೋ ಎನಗೆ ಬಂದಾಳೇನೋ ರುಕ್ಮಿಣಿ ॥ ತಮ್ಮಣ್ಣ ಮಾಡಿದ ವರವ ತನ್ನ ಮನಸಿಗೆ ಬಾರದ್ಹೋಗಿ ಎನ್ನಲ್ಲಿ ಕಾಗದ ಕಳಿಸ್ಯಾಳು ಹೆಣ್ಣಿನ ಗುಣ ತಿಳಿಯದು ॥ ಒಲ್ಲೆನ್ಹೋಗೋ ಬ್ರಾಹ್ಮಣ ॥ ಮಾನುನಿ ರುಕ್ಮಿಣಿ ದೇವಿ ಮನಸು ಒಲಿಯದಿದ್ದರೆ ಮಾನಹೀನನಾಗಿ ತಿರುಗಿ ಬರಬೇಕಾದೀತು ॥ ಒಲ್ಲೆನ್ಹೋಗೋ ಬ್ರಾಹ್ಮಣ ॥

ಕಣ್ಣಿನಿಂದ ಕಡು ಚಲ್ವಿಕೆ ರುಕ್ಮಿಣಿ ದೇವಿ ನಿನ್ನ ಮದುವೆ ಆಗುವೆನೆಂದು ಅನ್ನವ ತೊರೆದು ಬಿಟ್ಟಾಳು ಬಾರಯ್ಯ ಗೋವಾಳ ॥

ಅನ್ನವ ತೊರೆಯ ಬ್ಯಾಡನ್ನು ಕಣ್ಣೀರು ತೆಗಿಯಬ್ಯಾಡನ್ನು ಇಂದಿಗೆ ಒಂದು ದಿನ ವ್ಯಾಳ್ಯವ ಕಳೆದರೆ ॥ ನಾಳೆ ಮುಂಜಾನೆ ಒಳಗೆ ಬರುತಾನಂತ ಹೇಳ್ಹೋಗೋ ಬ್ರಾಹ್ಮಣ॥ ಕಷ್ಟದಿ ಕೊರಗ ಬ್ಯಾಡನ್ನು ದುಃಖದಿ ಪ್ರಲಾಪ ಮಾಡಬ್ಯಾಡನ್ನು । ಇಂದಿಗೊಂದುದಿನ ವ್ಯಾಳ್ಯವ ಕಳೆದರೆ ಮುಂಜಾನೆ ಒಳಗೆ ಬರುತಾನಂತ ಹೇಳ್ಹೋಗೋ ಬ್ರಾಹ್ಮಣ ॥

ಕಣ್ಣು ಸನ್ನೆಯ ಮಾಡುತಿದ್ದ ಕನ್ನಡಿಗೆ ಕೈಯ ಬೀಸುತಿದ್ದ । ನಿನ್ನ ಗಂಡನ ವರ್ತಮಾನವನ್ನು ಓದಿಕೋ ರುಕ್ಮಿಣಿ ಅಂತಿದ್ದ । ಆಗ ಬಂದನು ಬ್ರಾಹ್ಮಣ ತಾ ಬ್ಯಾಗ ಬಂದನು ಬ್ರಾಹ್ಮಣ ॥ ಬ್ರಾಹ್ಮಣನಾಡಿದ ನುಡಿಯ ಕೇಳಿ ಬಹಳ ಸಂತೋಷ ಮನಸೀಲೆ ತಾಳಿ। ಆಗ ಬ್ರಾಹ್ಮಣನಿಗೆ ನುಡಿದಾಳು ಏನಂದ್ಯೋ ಬ್ರಾಹ್ಮಣ ॥ ಮಾತಿನಿಂದ ಮನ್ನಿಸಿದನಮ್ಮ ಪ್ರೀತಿಯಿಂದ ನಿನ್ನ ಕೇಳಿದನಮ್ಮ । ಆಕೆ ಲಕ್ಷಣ ನೋಡಿದನಮ್ಮ ತತಕಾಲಕ್ಕೆ ಬರುತ್ತಾನಮ್ಮ॥ ಬರುತಾನಮ್ಮ ಬರುತಾನೆ ॥ ಮಂದಿಕುದುರೆ ಕಟ್ಯಾನಿಲ್ಲೋ ದಂಡು ದರ್ಬಲ ತರುತಾನಿಲ್ಲೋ। ರಂಭೆ ರುಕ್ಮಿಣಿಯ ಗೆದ್ದು ಮಂದಿಯ ದಾಟಿ ಹೋಗುತಾನಿಲ್ಲೋ ಏನಂದ್ಯೋ ಬ್ರಾಹ್ಮಣ॥

ಮಂದಿ ಕುದುರೆ ಕಟ್ಯಾನಮ್ಮ, ದಂಡು ದರ್ಬಲ ತರುತಾನಮ್ಮ ರಂಭೆ ರುಕ್ಮಿಣಿಯಗೆದ್ದು ಮಂದಿಯ ದಾಟಿ ಹೋಗುತಾನಮ್ಮ ॥ ಬರತಾನಮ್ಮ ಬರತಾನ॥

**ಧ್ವನಿ ॥** ನಾರಿ ರುಕ್ಮಿಣಿ ದೇವಿ ತಾಯಿ ಹೊರನ ವಾರಿಜಾಕ್ಷಿ । ನಿನ್ನ ನಾನು ಓಣಿ ಓಣಿ ಹುಡುಕಿ ಬಂದೆ ॥ **ಬಾರವ್ವ ಮನೆಗೆ ಬಾ** ॥ ರಂಭೆಯರ ಒಡಗೂಡಿ ಅಂಬಿಕಾದೇವಿ ಪೂಜೆ ಮಾಡಿ ಗೊಂಬಿ ಮನಿ ಕಟ್ಟಿ ನೀ ಆಡುತಿದ್ದೀ ॥ ಬಾರವ್ವ....॥

ಕಣ್ಣಿನಿಂದ ಕಡುಚೆಲ್ವಿಕೆ ರುಕ್ಮಿಣಿದೇವಿ ನಿನ್ನ ಬೇಡಿಕೊಂಡು ನಾನು ಹನ್ನೆರಡು ಹರಕೆ ಹೊತ್ತೆ ॥ ಬಾರವ್ವ.. ॥ ದ್ವಾರಕೆಯ ಕೃಷ್ಣಗ ಸೋಳಸಾವಿರ ಮಂದಿ ಮಾಡುವುದು ಬಹಳ ಪ್ರಲಾಪ ಏನು ಸುಖಬಟ್ಟಿ ಯವ್ವಾ ॥ ಬಾರವ್ವ...॥ ದ್ವಾರಕೆಯ ಕೃಷ್ಣಗ ನನ್ನ ಕೈಲಿ ಮಾಲಿ ಹಾಕಿಸಿಕೊಂಡು ಸೋಳಸಾವಿರ ಮಂದಿ ಗೋಪೇರ ಮನೆಯ ಬಾನಗಿತ್ತಿಯ ಮಾಡಲೊಲ್ಲನ್ಯಾಕ॥ ಒಲ್ಲೆನಾ ಶಿಶುಪಾಲನ್ನ ॥ ಕನ್ನಿಕೆ ಆಡಿದ ನುಡಿಯ ಕೇಳಿ ಕಣ್ಣೀರು ಸೆರಗೀಲೆ ಒತ್ತಿ ಸುಮ್ಮನೆ ।

ಒಳಗೆ ಬಂದು ಗಂಡನ ಮುಂದೆ ಹೇಳುತ್ತಿದ್ದಳು ॥ ಬರವಲ್ಲಾಳು ರುಕ್ಮಿಣಿ ॥ ಕೃಷ್ಣ ಎಂಬುದು ಆತನ ಹೆಸರು ರುಕ್ಮಿಣಿ ಎಂಬುದು ಈಕೆಯ ಹೆಸರು ॥ ಒಪ್ಪುವುದು ಬಹಳ ಜನರೊಳಗೆ ಕೆಟ್ಟ ಮಗ ಕೇಳಲೊಲ್ಲಾನು ॥ ಏನಮಾಡಲೆಂದನು ॥ ಕೆಂಪಿನಿಂದ ಕಡಿ ಚೆಲ್ಲಿಕೆ ಸಂಪಿಗೆ ತೆನೆಯ ಹೋಲುವ ರಂಭೆ ರುಕ್ಮಿಣಿ ದೇವಿ ನಿನ್ನ ಮಂಚಕ್ಕೆ ಒಪ್ಪುವಂಥ ಪುರುಷನ್ನ ತಂದೀನಿ ಬಾರವ್ವ ಮನೆಗೆ ಬಾ ॥ ಹನ್ನೆರಡು ವರುಷದ ಕನ್ಯಾ ಕನ್ನಿಕೆ ಹದಿನಾರು ವರ್ಷದ ಮದುಮಗನ ತಂದೀನಿ॥ ಬಾರವ್ವ ಮನೆಗೆ ಬಾ ॥ ನಾರಿಯರ ಮನೆಯ ಪೊಕ್ಕು ಅಲ್ಲಿ ಹಾಲು ವೊಸರು ಸವಿದು ಬಾಯಿ ಬಡಿಸಿಕೊಂಬುವ ಇಂಥಾ । ಮಾನಹೀನ ಗೊಲ್ಲಗ ಮನಸೊಲಿಯ ಬ್ಯಾಡವ್ವ ಬಾರವ್ವ ಮನೆಗೆ ಬಾ ॥ ನಾರಿ ರುಕ್ಮಿಣಿ ದೇವಿ ನಿನ್ನ ಧಾರಿಯೆರೆದು ಗೆಲುವಷ್ಟೊತ್ತಿಗೆ ಕಾಳಗ ಎಷ್ಟು ಆಗತುವ ಕತ್ತಿ ಎಷ್ಟು ಹೀರಿತಾವ ॥ ಬಾರವ್ವ...॥ ರುಕ್ಮನಾಡಿದ ನುಡಿಯ ಕೇಳಿ ರುಕ್ಮಿಣಿ ಮನಸೀಲೆ ತಿಳಿದು ಕೃಷ್ಣಗ ಮಾಲಿ ಹಾಕಿ ನಾನು ಅತ್ತ ಹೋದಮೇಲೆ ಕಾಳಗ ಯಾಕ ಆಗತಾವ ಕತ್ತಿ ಯಾಕ ಹಿರೀತಾವ ॥ ಓಲೆ ಒಯ್ದಂಥ ಬ್ರಾಹ್ಮಣ ಸಾರಿದ ಬದಿಯಲ್ಲಿ ನಿಂತು ॥ ನಾಳೆ ಸ್ವಾಮಿಯು ಬರುವುದು ಖರೆ ಬಹಳ ಛಲ ಮಾಡಬೇಡ ॥ ಹವಳದ ಎಳೆಯಿಂದ ಸುರಿಗಿ ಹರದೇರು ತಂದು ಸುತ್ತುತಿರಲು । ಗಿರಿ ವೆಂಕಟೇಶನ ಮಡದಿಯೆಂದು ಹರದೇರು ಹಾಡ್ಯಾರು ಸುತ್ತಿದರು। ಮೊದಲಗಿತ್ತಿಯಾದಳು ॥ ಮುತ್ತಿನ ಎಳೆಯಿಂದ ಸುರಗಿ ಮಿತ್ರೇರು ತಂದು ಸುತ್ತುತಿರಲು । ಪಕ್ಷಿವಾಹನನ ಮಡದಿಯೆಂದು ಮಿತ್ರೇರು ಹಾಡ್ಯಾರು ಸುತ್ತಿದರು । ಮೊದಲಗಿತ್ತಿಯಾದಳು॥ ಮೊದಲಗಿತ್ತಿಯಾದಳು ಎಂದವರ ನುಡಿ ಕೇಳಿ ಕೆಂಡವಾದನು ರುಕ್ಮನು । ಇಂಥ ಭಂಢ ಗೇಡಿ ಗೊಲ್ಲನ ಹೆಸರು ತಂದೀರೆನುತಲಿ ಕ್ರೋಧವಾದನು ರುಕ್ಮನು । ಘಳಿಗಿ ಬಟ್ಟಲ ಮುಳಗಿಬಂತು ಬೆಳಗಾಗಲೇ ನಾಳೆ ಘಳಿಗೀಗೆ ಬಂತು ತಡಮಾಡದಲೆ ನೀವು ಕನ್ನಿಕೆಯ ಹೊರಗೆ ತನ್ನೀರೆನುತಲಿ ಬ್ರಾಹ್ಮಣರೆಲ್ಲರು ನುಡಿದರು। ಬ್ರಾಹ್ಮಣರಾಡಿದ ನುಡಿಯ ಕೇಳಿ ಕ್ರೋಧವಾದಳು ರುಕ್ಮಿಣಿ ॥ ವೇದ ಪುಸ್ತಕ ಹಿಡಿದು ಓಣಿ ಓಣಿ ತಿರುಗತೀರಿ ॥ ತಿಳಿಯದೆ ನಿಮಗೆ ತಿಳಿಯದೆ ॥ ದಾರ ಭಾಗ್ಯ ದಾರಿಗೆ ॥ ರಂಭೆ ರುಕ್ಮಿಣಿ ದೇವಿ ನೀನು ಅಂಬಿಕಾ ದೇವಿ ಪೂಜೆಗೆ ಹೋಗುವಿಯೇನ ಅಂದಣವ ತರೆಸಿ ಕೊಡಲೇನ ಸಂಗಡ ನಾನು ಅಲ್ಲಿಗೆ ಬರಲೇನ ॥ ಅಲ್ಲಿಗೆ ಬರಲೇನ ॥ ಅಷ್ಟ ಆಯುಷ್ಯವಂತನಾಗು ಹೆತ್ತ ತಾಯಿಗೆ ಒಬ್ಬ ಮಗನಾಗು ಲಕ್ಷ್ಮೀದೇವಿಯ ತವರು ಮನೆಯಾಗಿ ಸುಖದಲ್ಲೇ ಇರು ಬರಬ್ಯಾಡಲ್ಲಿಗೆ ಬರಬ್ಯಾಡ ಬಲಿಗೆ ಸಿಗಬ್ಯಾಡ ॥ ದೀರ್ಘ ಆಯುಷ್ಯವಂತನಾಗು ಹಡೆದ ತಾಯಿಗೆ ಒಬ್ಬ ಮಗನಾಗು ಮಡದಿ ರುಕ್ಮಿಣಿ ತವರು ಮನೆಯಾಗಿ ಸುಖದಲ್ಲೇ ಇರು ॥ ಬರಬ್ಯಾಡಲ್ಲಿಗೆ ಬರಬ್ಯಾಡ ಬಲಿಗೆ ಸಿಗಬ್ಯಾಡ ॥ ಆದಿದೇವತೆಯ ಪೂಜೆಯನ್ನು ನಾರಿ ರುಕ್ಮಿಣಿ ಮಾಡಿದಳು । ವಾರಿಜನಾಭನ ಗಂಡನ ಪಡೆದಳು ಮ್ಯಾಲೆ ಜನಕೆ ಸಂತೋಷ ಹೆಚ್ಚಿತು ॥ ಅಂಬಿಕಾ ದೇವಿಯ ಪೂಜೆಯನ್ನು ನಂಬಿ ಮಾಡಿದಳು ಮಂಗಳಾರತಿ ಎತ್ತುವ ಸಮಯಕ್ಕೆ ರಂಗ ರಥವ ಇಳಿದನು। ಹಿಂದಕ್ಕೆ ತಿರುಗಿ ನೋಡಿದಳು ರಂಗಗ ಮಾಲೆ ಹಾಕಿದಳು ॥ ಅಂಬಿಕೆಗೆ ಮುತ್ತು ಸೂರಿ ಮಾಡಿ ರಂಭೆ ರಥವ ಏರಿದಳು ॥ ನಾರಿ ರುಕ್ಮಿಣಿ ದೇವಿ ಸ್ವಯಂವರವ ಹೇಳಿ ಕೇಳಿದವರಿಗೆ ಧೀರ ಹಯವದನ ಒಲಿವನು ಮ್ಯಾಲೆ ಜನಕೆ ಸಂತೋಷ ಹೆಚ್ಚೀತು ॥ ಚಿಂತೆ ಬಿಟ್ಟೀತಾಕೀಗೆ ॥

## ೧) ಶ್ರೀವಾದಿರಾಜಕೃತ ಶ್ರೀಶ್ರೀನಿವಾಸ ಕಲ್ಯಾಣ

ಸ್ತ್ರೀಯರೆಲ್ಲಾರು ಬನ್ನಿರೇ ಶ್ರೀನಿವಾಸನ ಪಾಡಿರೇ । ಜ್ಞಾನಿಗುರುಗಳಿಗೊಂದಿಸಿ ಮುಂದೆ ಕಥೆಯ ಪೇಳ್ವೆನು । ಗಂಗಾತೀರದಿ ಋಷಿಗಳು ಒಂದು ಯಾಗವ ಮಾಡಿದರು। ಬಂದು ನಾರದರಲ್ಲಿಗೆ ನಿಂತು ಯಾರಿಗೆಂದು ಕೇಳಿದರು । ಅರಿತು ಬರಬೇಕೆನ್ನುತಾ ಆ ಮುನಿಯು ತೆರಳಿದಾ । ಭೃಗುಮುನಿಯು ತೆರಳಿದಾ । ನಂದಗೋಪನ ಮಗನ ಕಂದನ ಮಂದಿರಕಾಗೆ ಬಂದನು । ವೇದಗಳನೆ ಓದುತಾ ಹರಿಯ ಕೊಂಡಾಡುತ । ಅಲ್ಲಿ ಇರುವ ಬ್ರಹ್ಮನ ನೋಡಿ ಕೈಲಾಸಕ್ಕೆ ಪೋದನು । ಕಂಬುಕಂಠನು ಕಾಂತೆ ಪಾರ್ವತಿ ಕಲಿತಿರುವುದನೆ ಕಂಡನು । ಸೃಷ್ಟಿಯೊಳಗೆ ಇವನ ಲಿಂಗ ಶ್ರೇಷ್ಠವಾಗಲೆಂದನು । ವೈಕುಂಠಕ್ಕೆ ಪೋದನು ವಾಸುದೇವನ ಕಂಡನು । ಕೆಟ್ಟ ಕೋಪದಿಂದ ಒದೆಯೆ ಎಷ್ಟು ನೊಂದಿತೆಂದನು । ಥಟ್ಟನೆ ಬಿಸಿನೀರಿನಿಂದ ನೆಟ್ಟನೆ ಪಾದ ತೊಳೆದನು । ಬಂದ ಕಾರ್ಯವಾಯಿತೆಂದು ಅಂದು ಮುನಿಯು ತೆರಳಿದಾ । ಭೃಗುಮುನಿಯು ತೆರಳಿದಾ । ಬಂದು ನಿಂತು ಸಭೆಯೊಳಗೆ ಇಂದಿರೇಶನ ಪೊಗಳಿದಾ । ಪತಿಯ ಕೂಡ ಕಲಹವಾಡಿ ಕೊಲ್ಹಾಪುರಕ್ಕೆ ಪೋದಳು । ಸತಿಯು ಪೋಗೆ ಪತಿಯು ಹೊರಟು ಗಿರಿಯಲ್ಲಿ ಸೇರಿದಾ । ಹುತ್ತದೊಳಗೆ ಹತ್ತು ಸಾವಿರ ಗುಪ್ತದಿಂದ ಇದ್ದನು । ಬ್ರಹ್ಮಧೇನುವಾದನು ರುದ್ರ ವತ್ಸನಾದನು। ಗೋವು ಮುಂದೆ ಮಾಡಿಕೊಂಡು ಗೋಪಸತಿಯು ಹೊರಟಳು । ಕೋಟಿ ಹೊನ್ನು ಬಾಳ್ವದು ಕೊಡವ ಹಾಲು ಕರೆವುದು । ಪ್ರೀತಿಯಿಂದ ತಂದುಕೊಂಡನು ತನ್ನ ಮನೆಗೆ ಚೋಳನು । ಒಂದು ದಿವಸ ಕಂದಗ್ಹಾಲು ಛಂದದಿಂದ ಕೊಡಲಿಲ್ಲ । ಅಂದು ರಾಯನ ಮಡದಿ ಕೋಪಿಸಿ ಬಂದು ಗೋಪನ ಬಡಿದಳು । ಧೇನು ಮುಂದೆ ಮಾಡಿಕೊಂಡು ಗೋಪ ಹಿಂದೆ ನಡೆದನು। ಕಾಮಧೇನು ಕರೆಯೆ ಹಾಲು ಹರಿಯ ಶಿರದಿ ಬಿದ್ದಿತು । ಕಷ್ಟ ನಮಗೆ ಬಂದಿತೆಂದು ಪೆಟ್ಟು ಬಡಿಯೆ ಹೋದನು । ಕೃಷ್ಣ ಮನದಲ್ಲ್ಯೋಚಿಸಿ ಕೊಟ್ಟ ತನ್ನ ಶಿರವನು । ಏಳು ತಾಳೆ ಮರದ ಉದ್ದ ಏಕವಾಗಿ ಹರಿಯಿತು । ರಕ್ತವನ್ನೇ ಕಂಡು ಗೋಪ ಮತ್ತೆ ಸ್ವರ್ಗಕ್ಕೇರಿದ। ಕಷ್ಟವೆಲ್ಲಾ ನೋಡಿ ಗೋವು ಅಷ್ಟು ಬಂದು ಹೇಳಿತು । ಥಟ್ಟನೆ ರಾಯ ಎದ್ದು ಗಿರಿಗೆ ಬಂದು ಬೇಗ ಸೇರಿದ । ತಂದೆ ತಾಯಿ ಬಂಧು ಬಳಗ ಕಂದ ನಮಗಿಲ್ಲೆಂದನು। ಎಷ್ಟು ಕಷ್ಟ ಕೊಟ್ಟನಿವನು ಯಾವ ಪಾಪಿ ಮಾಡಿದ । ಇಷ್ಟು ಕಷ್ಟ ಕೊಟ್ಟವಾಗೆ ಭ್ರಷ್ಟ ಪಿಶಾಚಿಯಾಗೆಂದ । ಪೆಟ್ಟು ವೇದನೆ ತಾಳಲಾರದೆ ಬೃಹಸ್ಪತೀಯ ಕರೆಸಿದಾ । ಅರುಣೋದಯದಲ್ಲೆದ್ದು ಔಷಧಕ್ಕೆ ಪೋಗೆಂದ। ಅರುಣೋದಯದೋಳೆದ್ದು ಔಷಧಕ್ಕೆ ಪೋದನು । ಕ್ರೋಡರೂಪಿ ಹರಿಯ ಕಂಡು ಕೂಡಿ ಮಾತಾಡಿದ । ಇರುವುದಕ್ಕೆ ನಮಗೆ ಸ್ಥಳವು ಏರ್ಪಾಡಾಗಬೇಕೆಂದ । ನೂರು ಪಾದ ಭೂಮಿ ಕೊಟ್ಟರೆ ಮೊದಲು ಪೂಜೆ ನಿಮಗೆಂದಾ । ಪಾಕಪಕ್ವ ಮಾಡ್ವದಕ್ಕೆ ಆಕೆ ಬಕುಲೆ ಬಂದಳು । ಇತ್ತ ಆಕಾಶರಾಜ ಪುತ್ರನಿಲ್ಲದೆ ಚಿಂತಿಸಿದ । ಪುತ್ರಕಾಮೇಷ್ಟಿ ಮಾಡಿ ಪದ್ಮಾವತಿಯ ಪಡೆದನು। ಪದ್ಮಾವತಿಯು ಗೆಳತಿಯರ್ ಕೂಡಿ ವನಕೆ ನಡೆದು ಬಂದಳು । ನಾರದರು ನೋಡಿ ಶ್ರೀನಿವಾಸಗೆ ಸ್ತ್ರೀಯಾಗುವಿ ಎಂದರು । ಭಾನುಕೋಟಿತೇಜನು ಬೇಟೆಯಾಡ ಹೊರಟನು । ಮಂಡೆಬಾಚಿ ಗೊಂಡೆನ್ಹಾಕಿ ದುಂಡುಮಲ್ಲಿಗೆ ಮುಡಿದನು । ಕರ್ಣಕುಂಡಲ ಕದುಪಿನಲ್ಲಿ ಕಸ್ತೂರಿ ತಿಲಕನಿಟ್ಟನು। ಹಾರ ಪದಕ ಕೊರಳಲ್ಲಿ ಹಾಕಿ ಕೀಲುಕಂಕಣನಿಟ್ಟನು । ಪಟ್ಟೆನುಟ್ಟು ಧಿಟ್ಟ

ಕಟ್ಟಿ ಪೀತಾಂಬರವನ್ನೊದ್ದನು । ಢಾಳು ಕತ್ತಿ ಉಡಿಯಲ್ಲಿ ಸಿಕ್ಕಿಸಿ ಜೋಡು ಕಾಲಿಗೆ ಮೆಟ್ಟಿದನು। ಅಂಗುಲಿಗೆ ಉಂಗುರ ರಂಗ ಶೃಂಗಾರವಾದನು । ಕರದಿ ವೀಳ್ಯೆವನ್ನೆ ಪಿಡಿದು ಕನ್ನಡಿಯನ್ನೆ ನೋಡಿದ । ಕನಕ ಭೂಷಣವಾದ ಕುದುರೆ ಕಮಲನಾಭ ಏರಿದ । ಕರಿಯನಟ್ಟಿ ಹರಿಯು ಬರಲು ನಾರಿಯರೆಲ್ಲ ನೋಡಿದರು। ಇಲ್ಲಿ ಯಾವ ಬರುವನೋ ದೂರ ಪೋಗು ಎಂದರು । ನಾರಿಯೇರು ಇರುವ ಸ್ಥಳದಿ ಏನು ಕಾರ್ಯ ಎಂದರು । ಎಷ್ಟು ಹೇಳಿದರು ಕೇಳ್ದ ಕೃಷ್ಣ ಕುದುರೆಯನ್ನು ಬಿಟ್ಟನು । ಕಲ್ಲು ಮಳೆಯ ಕರೆದರು ಕುದುರೆ ಕೆಳಗೆ ಬಿದ್ದಿತು । ಕೇಶ ಬಿಚ್ಚಿ ವಾಸುದೇವ ಶೇಷಗಿರಿಯ ಸೇರಿದ । ಪರಮಾನ್ನ ಮಾಡಿದ್ದೇನೆ ಉಣ್ಣು ಏಳು ಎಂದಳು । ಅಮ್ಮ ಎನಗೆ ಅನ್ನ ಬೇಡ ಎನ್ನ ಮಗನು ವೈರಿಯು । ಕಣ್ಣಿಲ್ಲಾದೆ ದೇವತೆಯ ನಿರ್ಮಾಣವ ಮಾಡಿದ । ಯಾವ ದೇಶ ಯಾವಳಾಕೆ ಎನಗೆ ಪೇಳು ಎಂದಳು । ನರನಾರಾಯಣರ ಪುರಕೆ ಪೋಗಿ ರಾಮಕೃಷ್ಣರ ಪೂಜಿಸಿ । ಗುಂಜಿ ಮಣಿಯು ಕೊರಳಲ್ಲಿ ಹಾಕಿ ಕೂಸು ಕೊಂಕಳಲ್ಲೆತ್ತಿಕೊಂಡು । ಧರಣಿದೇವಿಗೆ ಕಣಿಯನ್ಹೇಳಿ ಗಿರಿಗೆ ಬಂದು ಸೇರಿದಾ । ನಾರಿಯೇರ ಕೂಡಿಕೊಂಡು ಆಕೆ ಬಕುಲೆ ಬಂದಳು । ಬನ್ನಿರೆಮ್ಮ ಸದನಕೆ ಎನ್ನುತಾ ಕರೆದು ಮಾತಾಡಿದರು। ತಂದೆ ತಾಯಿ ಬಂಧು ಬಳಗ ಹೊನ್ನು ಹಣ ಉಂಟೆಂದಿರಿ । ಇಷ್ಟು ಪರಿಯಲ್ಲಿದ್ದವಗೆ ಕನ್ಯೆಯಾಕೆ ದೊರಕಿಲ್ಲಾ । ದೊಡ್ಡವಳಿಗೆ ಮಕ್ಕಳಿಲ್ಲ ಮತ್ತೆ ಮದುವೆ ಮಾಡ್ವೆವು ॥ ಗುರುಗಳನ್ನೆ ಕರೆಸಿದ ಮದುವೆ ಓಲೆ ಬರೆಸಿದ । ಬೃಹಸ್ಪತೀಯ ಕರೆಸಿದಾ ಲಗ್ನಪತ್ರಿಕೆ ಬರೆಸಿದ। ಶುಕಾಚಾರ್ಯರ ಕರೆಸಿದ ಮದುವೆ ಓಲೆ ಬರೆಸಿದ । ವಲ್ಲಭೇನ್ನ ಕರೆವುದಕ್ಕೆ ಕೊಲ್ಹಾಪುರಕೆ ಪೋಗೆಂದ । ಅಷ್ಟ ವರ್ಗವನ್ನೇ ಮಾಡಿ ಅಷ್ಟು ದೇವರ ನೆನೆಸಿದಾ। ಲಕ್ಷ್ಮೀಸಹಿತ ಪಕ್ಷಿ ಏರಿ ಅಷ್ಟು ಮಂದಿ ಬಂದರು । ಅಷ್ಟು ಜನ ಭೋಜನ ಮಾಡಿ ಲಕ್ಷ್ಮೀಸಹಿತ ಬಂದರು । ಬ್ರಹ್ಮ ಮೊದಲು ಮಾಡಿಕೊಂಡು ಬೇಗ ಹೊರಟು ಬಂದರು । ಗರುಡನ್ಹೆಗಲನೇರಿಕೊಂಡು ಶ್ರೀನಿವಾಸನು ಬಂದನು। ಕನಕ ಭೂಷಣವಾದ ಮಂಟಪ ಕಮಲನಾಭ ಏರಿದ । ಕಮಲನಾಭಗೆ ಕನ್ಯಾಮಣಿಯ ಕನ್ಯಾದಾನ ಮಾಡಿದ । ಪಂಕಜಾಕ್ಷ ಪದ್ಮಾವತಿಗೆ ಮಾಂಗಲ್ಯವ ಕಟ್ಟಿದ । ಕಮಲನಾಭ ಕಾಂತೆ ಕೈಗೆ ಕಂಕಣವ ಕಟ್ಟಿದ । ಶ್ರೀನಿವಾಸನ ಮದುವೆ ನೋಡಲು ಸ್ತ್ರೀಯರೆಲ್ಲರು ಬನ್ನಿರೇ । ಪದ್ಮಾವತಿಯ ಮದುವೆ ನೋಡಲು ಮುದ್ದು ಬಾಲೇರು ಬನ್ನಿರೇ । ಲಕ್ಷ ತಪ್ಪು ಎನ್ನೊಳುಂಟು ಪಕ್ಷಿವಾಹನ ಸಲುಹೆನ್ನ । ಕೋಟಿ ತಪ್ಪು ಎನ್ನೊಳುಂಟು ಕುಸುಮನಾಭ ಸಲುಹೆನ್ನ । ಶಂಕೆ ಇಲ್ಲದೆ ವರವ ಕೊಡುವ ವೆಂಕಟೇಶ ಸಲಹೆನ್ನ । ಭಕ್ತಿಯಿಂದ ಹೇಳಿ ಕೇಳ್ದವರಿಗೆ ಮುಕ್ತಿ ಕೊಡುವ ಶ್ರೀಹಯವದನನು ॥

### ಅನಂತಾದ್ರೀಶಕೃತ ವೆಂಕಟೇಶ ಪಾರಿಜಾತ

೧) ಮಂಗಳಂ ಜಯ ಮಂಗಳಂ ॥ ಪ॥ ವರವೈಕುಂಠದಿ ಬಂದವಗೆ ವರಗಿರಿಯಲಿ ಸಂಚರಿಸಿದವಗೆ । ವರಹದೇವನಾ ಅನುಸರಿಸಿ ಸ್ವಾಮಿ ಪುಷ್ಕರಿಣಿ ತೀರದಲ್ಲಿರುವವಗೆ ॥ ೧॥ ಸರಸದಿ ಬೇಟೆಗೆ ಹೊರಟವಗೆ ಸರಸಿಜಾಕ್ಷಳ ಕಂಡವಗೆ। ಮರುಳಾಟದಿ ತಾ ಪರವಶನಾಗುತ ಕೊರವಿ ವೇಶ ಧರಿಸಿರುವವಗೆ ॥ ೨॥ ಗಗನರಾಜನ ಪುರಕ್ಹೋದವಗೆ ಬಗೆ ಬಗೆ ನುಡಿಗಳ ನುಡಿದವಗೆ । ಅಗವಾಸಿಗೆ ನಿನ್ನ ಮಗಳನು ಕೊಡು ಎಂದು ಗಗನರಾಜನ ಸತಿಗ್ಹೇಳಿದವಗೆ ॥ ೩॥ ತನ್ನ ಕಾರ್ಯ ತಾ ಮಾಡಿದವಗೆ ಇನ್ನೊಬ್ಬರ ಹೆಸರು ಹೇಳಿದವಗೆ । ಮುನ್ನ ಮದುವೆ

ನಿಶ್ಚಯವಾಗಿರಲು ತನ್ನ ಬಳಗ ಕರೆಸಿರುವವಗೆ ॥ ೪॥ ಎತ್ತಿ ನಿಬ್ಬಣ ಹೊರಟವಗೆ ನಿತ್ಯ ತೃಪ್ತನಾಗಿರುವವಗೆ । ಉತ್ತರಾಣಿಯ ಓಗರನುಂಡು ತೃಪ್ತನಾಗಿ ತೇಗಿರುವವಗೆ ॥ ೫॥ ಒದಗಿ ಮುಹೂರ್ತಕೆ ಬಂದವಗೆ ಸದಯ ಹೃದಯನಾಗಿರುವವಗೆ । ಮುದದಿಂದಲಿ ಶ್ರೀಪದುಮಾವತಿಯಳ ಮದುವೆ ಮಾಡಿಕೊಂಡ ಮದುಮಗಗೆ ॥ ೬॥ ಕಾಂತೆಯಿಂದ ಸಹಿತಾದವಗೆ ಸಂತೋಷದಿ ಕುಳಿತಿರುವವಗೆ । ಸಂತತ ಶ್ರೀಮದನಂತಾದ್ರೀಶಗೆ ಶಾಂತ ಮೂರುತಿ ಸರ್ವೋತ್ತಮಗೆ ॥ ೭॥ ಮಂಗಳಂ ಜಯ ಮಂಗಳಂ ॥

೨) ಮಂಗಳಂ ಜಯ ಮಂಗಳಂ ॥ ಪ ॥ ಜಲದಲಿ ಮತ್ಸ್ಯವತಾರನಿಗೆ ನಗವ ಬೆನ್ನಿಲೆ ಪೊತ್ತ ಕೂರ್ಮನಿಗೆ । ವರಹವತಾರದಿ ಧರಣಿಯ ಪೊತ್ತಿಹ ತರಳನ ಕಾಯ್ದಿಹ ಶ್ರೀನರಸಿಂಹಗೆ ॥ ೧॥ ಭೂಮಿಯ ದಾನವ ಬೇಡಿದವಗೆ ಆ ಮಹಾಸುರರ ಗೆಲಿದವಗೆ । ರಾಮನಿಗೆ ಶ್ರೀರಾಮಗೆ ಸತ್ಯಭಾಮೆಯರಸ ಗೋಪಾಲಗೆ ॥ ೨॥ ಬತ್ತಲೆ ನಿಂತಿಹ ಬೌದ್ಧನಿಗೆ ಉತ್ತಮ ಹಯವನೇರಿದ ಕಲ್ಕಿಗೆ । ಹತ್ತವತಾರದಿ ಭಕ್ತರ ಸಲಹುವ ಕರ್ತೃ ಶ್ರೀಪುರಂದರ ವಿಠ್ಠಲಗೆ ॥ ೩॥ ಮಂಗಳಂ ಜಯ ಮಂಗಳಂ ॥ **॥ ಶ್ರೀನಿವಾಸಕಲ್ಯಾಣಂ ಸಂಪೂರ್ಣಂ ॥**

## ೨) ಶ್ರೀಪುರಂದರದಾಸಕೃತ ಶ್ರೀಶ್ರೀನಿವಾಸ ಕಲ್ಯಾಣ

ವೈಕುಂಠಪತಿ ತಾನು ವೈಕುಂಠವನೆ ಬಿಟ್ಟು ವೆಂಕಟಾದ್ರಿಗೆ ಹೋಗಿ ಶ್ರೀಕಾಂತ ನಿಂತ ॥ ನಾಲ್ಕು ಕಡೆಯೂ ನೋಡಿ ವಲ್ಮೀಕವನೆ ಕಂಡು ಏಕಾಂತಸ್ಥಳವೆಂದು ಬಹುಕಾಲವಲ್ಲಿದ್ದ ॥೧॥ ಚೋಳಭೃತ್ಯನು ಶಿರವನೊಡೆದ ಗಾಯವ ನೋಡಿ ತಾಳಲಾರದೆ ಸ್ವಾಮಿ ಗುರುಗಳನೆ ಕರೆಸಿ ॥ ಹೇಳಿದೌಷಧ ಮಾಡಿ ಕ್ರೋಡರೂಪಿಯ ಕಂಡು ಕೇಳಿ ಸ್ಥಳವನೆ ಕೊಂಡು ಲೀಲೆ ತೋರುತಲಿ ॥ ೨ ॥ ಇರುತಿರಲು ಒಂದಿನ ತುರಗವನೆ ಸ್ಮರಿಸುತಲಿ ತುರಗ ಬರಲು ಕಂಡು ಮುದದಿ ತಾನೇರಿ ॥ ಪರಿಪರಿ ಮೃಗಗಳ ಅಡವಿಯಲಿ ಕೊಂದು ಕರುಣಸಾಗರ ಒಂದು ವನವ ಕಂಡನು ॥ ೩ ॥ ವನದಲ್ಲಿ ವನಜಾಕ್ಷಿ ರಾಜಪುತ್ರಿಯ ಕಂಡು ಮನಕೆ ಬಂದಂತಾಡಿ ಕಲಹ ಮಾಡಿದರು। ಮನಸಿಜಪಿತ ತಾನು ಅಶ್ವವ ಕಳಕೊಂಡು ಘನವಾದ ಗಿರಿ ಏರಿ ಮಲಗಿದ ಹರಿಯು ॥ ೪ ॥ ನಗಧರ ಮಲಗಲು ಬಕುಳಾವತಿಯು ಆಗ ಬಗೆಬಗೆ ಕೇಳಲು ಶೋಕದಿಂ ನುಡಿದ ॥ ಗಗನರಾಜನ ಪುತ್ರಿ ಪದ್ಮಾವತಿಯ ಕಂಡು ಹಗಲು ಇರಳು ಆಕೆ ಮುಖವ ಸ್ಮರಿಸುವೆನು ॥ ೫ ॥ ಅವಳಿಗೋಸುಗವಾಗಿ ಇದ್ದಲ್ಲಿಗೆ ಹೋದೆ ಅವಳಿಂದ ಎನ್ನಶ್ವ ಹತವಾಯಿತಮ್ಮ ॥ ಅವಳ ಹೊರತು ಎನ್ನ ಪ್ರಾಣವೇ ನಿಲ್ಲದು ಅವಳ ಘಟನೆಯ ನೀನು ಮಾಡಬೇಕಮ್ಮ ॥ ೬ ॥ ಅಂದ ಮಾತನು ಕೇಳಿ ಬಕುಳಾವತಿಯು ಆಗ ಆನಂದದಿಂ ರಾಜಪುರಕೆ ತೆರಳಿದಳು ॥ ಸುಂದರಿಯರ ಕಾರ್ಯ ಸ್ಥಿರವಾಗದೆಂದು ಚೆಂದುಳ್ಳ ಸ್ತ್ರೀರೂಪ ಧರಿಸಿದನು ಹರಿಯು ॥ ೭ ॥ ಕೊರವಂಜಿ ತಾನಾಗಿ ನೃಪನ ಪುರಕ್ಹೋಗಿ ಧರಣಿದೇವಿಯ ಮುಂದೆ ಶಕುನ ಹೇಳಿದನು ॥ ತಿರುಗಿ ಬರಲಾತಗೆ ಮಗಳ ಕೊಡುವೆನೆಂದು ಹರಿಗೆ ನಿಶ್ಚಯಮಾಡಿ ಶುಕರ ಕಳುಹಿಸಿದನು ॥ ೮ ॥ ತಾಪಸೋತ್ತಮ ಬಂದು ಪತ್ರವನೆ ಕೊಡಲು ಶ್ರೀಪತಿಯು ತಾನೋದಿ ಬೆನ್ನಿಂದೆ ಬರೆದ ॥ ಆ ಪರಮವಂದ್ಯ ತಾ ಸುರಸ್ತೋಮವನೆ ಕರೆಸಿ ಈ ಪರಿ ವೈಭೋಗ ಮಾಡಿದ ಹರಿಯು ॥ ೯ ॥ ಆ ಕ್ಷಣದಲಿ ತಾನು ತರಣಿಯನ ಕರೆಸಿ ಇಕ್ಷುಚಾಪನ ಮಾತೆ

ಬಳಿಗೆ ಪೋಗೆಂದ ॥ ತಕ್ಷಣದಲ್ಲಿ ಸೂರ್ಯ ಹೋಗಿ ನಿಲ್ಲಲು ಹರಿಯ ಆಕ್ಷೇಮವನೆ ಕೇಳಿ ತೆರಳಿದಳು ಬೇಗ ॥ ೧೦ ॥ ಬಂದ ಸತಿಯಳ ಕೂಡಿ ಮಂದಿರಕೆ ಪೋಗಿ ಹಿಂದೆ ಹೇಳಿದ ವಾಕ್ಯ ನಡೆಸೆಂದ ಹರಿಯು ॥ ಸಂದೇಹವಿಲ್ಲಧೇ ಸ್ವಾಮಿ ನಡೆಸೆಂದು ಇಂದಿರಾದೇವಿಯು ನುಡಿದಳು ಹರಿಗೆ ॥ ೧೧ ॥ ಸ್ವಸ್ತಿವಾಚನ ಮಾಡಿ ಕುಲದೇವರನಿಟ್ಟು ಪ್ರಸ್ಥವ ಮಾಡಿದ ದ್ವಿಜರ ಸ್ತೋಮಕ್ಕೆ॥ ಮರುದಿನ ಲಕ್ಷ್ಮೀಶ ರಾಜನ ಆ ಪುರಕೆ ಸುರಸ್ತೋಮವನೆ ಕೂಡಿ ತೆರಳಿ ಬಂದ ॥ ೧೨ ॥ ಬರುವ ಕೃಷ್ಣನ ಕಂಡು ಶುಕಮುನಿ ಸಂಸ್ತುತಿಸಿ ಹರಿಗೆ ಭೋಜನವನ್ನು ಮುದದಿ ಮಾಡಿಸಿದ॥ ಅಕಳಂಕಮಹಿಮನು ಬಂದ ವಾರ್ತೆಯ ಕೇಳಿ ಸಕಲ ಜನರ ಕೂಡಿ ಕರೆಯೆ ರಾಜ ॥ ೧೩ ॥ ಮುದದಿಂದ ಎದುರುಗೊಂಡು ಪರಿಮಳ ಪೂಸಿ ಸದಮಲಹೃದಯನ ಕರೆತಂದರು ಮನೆಗೆ ॥ ಪದ್ಮನಾಭನ ಪೀಠದಲ್ಲಿ ಕುಳ್ಳಿರಿಸಿ ಮಧುರ ಮಾತಿಲಿ ತನ್ನ ತರುಣಿ ಒಡಗೂಡಿ ॥ ೧೪ ॥ ಹೇಮ ಕುಂಭಗಳಿಂದ ದ್ವಿಜರ ಕೈಯೊಳು ಸ್ವಾಮಿಪುಷ್ಕರಣಿಯ ತೋಯವನ್ನೆ ತರಿಸಿ ॥ ಹೇಮತಟ್ಟೆಯಲ್ಲಿ ಸ್ವಾಮಿ ಪಾದವನ್ನಿಟ್ಟು ಪ್ರೇಮದಿಂದಭಿಷೇಕ ಮಾಡಿದನು ರಾಜ ॥ ೧೫ ॥ ಚಿನ್ನದ ಕಿರೀಟ ಆಭರಣವನ್ನಿಟ್ಟು ಕನ್ಯದಾನವ ಮಾಡಿ ಧನ್ಯನಾದ ॥ ತನ್ನ ಮಗಳನೆ ಶ್ರೀನಿವಾಸಗೆ ಒಪ್ಪಿಸಿ ಉನ್ನತ ಪದವಿಯಂ ಚೆನ್ನಾಗಿ ಪಡೆದ ॥ ೧೬ ॥ ಮಾವನಪ್ಪಣೆಗೊಂಡು ಮೈದಗೊಸ್ತ್ರವ ಕೊಟ್ಟು ಭಾವಶುದ್ಧದಿ ತನ್ನ ಮಾವಗೊಂದಿಸಿದ ॥ ಯಾವಾಗ ಕರೆದರೂ ಬರುವೆನು ನಾನೆಂದು ಪಾವನ್ನ ಮಾಡೆಂದು ಧರಣಿಗೊಂದಿಸಿದ ॥ ೧೭ ॥ ಅಷ್ಟಗೋಪುರ ಏರಿ ಕಣ್ಣಿಟ್ಟು ನೋಡುತಲಿ ಎಷ್ಟು ಹೇಳಲಿ ಈಕೆ ಸುಕೃತಫಲವೆಂತೋ ॥ ಅಜರುದ್ರ ಮೊದಲಾದ ಸುರರು ದ್ವಿಜರೆಲ್ಲ ಸುಜನರಂದಣವೇರಿ ಪುರಕೆ ಸಾಗಿದರು ॥ ೧೮ ॥ ಆರು (ಮೂರು)ತಿಂಗಳು ಮೀರಿ ಗಿರಿಗೆ ಪೋಗುವೆನೆಂದು ಧೀರ ತಾ ನಿಂತಾನೆ ಕುಂಭಜರಾಶ್ರಮದಿ ॥ ಧರೆಯೊಳು ಅಣಕೇರಿ ಸುರಪತಿ ಪ್ರಿಯನಾದ ಸುಗುಣವೆಂಕಟರನ್ನ ಪುರಂದರವಿಠಲ ॥ ೧೯ ॥ ॥ ಶ್ರೀಕೃಷ್ಣಾರ್ಪಣಮಸ್ತು ॥

## ೩) ಪ್ರಸನ್ನಶ್ರೀನಿವಾಸದಾಸವಿರಚಿತ ಶ್ರೀಶ್ರೀನಿವಾಸ ಕಲ್ಯಾಣ

ಜಯ ಜಯ ಜಯ ಶ್ರೀನಿವಾಸ ಜಯ ಶಾಂತಿ ಕೃತಿ ಮಾಯ ಶ್ರೀಶ ಭಯಬಂಧ - ಮೋಚಕ ಜೀಯಾ । ಆಹಾ ! ಸುಂದರ ಚಿನ್ಮಯಾನಂದ ಜ್ಞಾನಾತ್ಮನೆ ಮಂದಜಭವ ಸುರವೃಂದ ಸಂಸೇವ್ಯ ॥ ಪ. ॥ ಸುರಸರೀತಾ ತೀರದಿಂದ ಸುರಮುನಿ ಭೃಗು ಬಂದು ನಿನ್ನ ಪರಸಮರಹಿತನೆಂದರಿತ । ಆಹಾ ! ಸಿರಿಯು ನಿನ್ನ ಭಾವವನುಸರಿಸಿ ಬೇಗ ಕರವೀರ ಪುರಪೋಗೆ ಗಿರಿಪೊತ್ತು ಪೊಕ್ಕೆಯೋ ॥ ೧ ॥ ಮೇರುಸುತನೆ ಹಾಟಕಾದ್ರಿ ವೀರಭಕುತ ವೃಷಭಾದ್ರಿ ಕೀರುತಿ ಇತ್ತಿತಂಜನಗೆ । ಆಹಾ ! ಸರಿಸೃಪಾಯ ವರಿಸಿದ ಸೌರಭ್ಯಗಿರಿಯಿದು ವರ ವೆಂಕಟಾದ್ರಿಯು ಹರಿತು ವಿಪ್ರನ ತಾಪ ॥ ೨ ॥ ನೀನಿದ್ದ ಸ್ಥಳವೆ ವೈಕುಂಠ ನಿನಗಾರು ಸರಿಯುಂಟೋ ಶ್ರೀಶ ದೀನ ಸುಜನರಿಗೆ ನೆಂಟ । ಆಹಾ ! ಧೇನು ಪಾಲ್ಕರೆಯಲು ಪಾಲಕ ಹೊಡೆಯಲು ದೀನರಕ್ಷ ನೀನು ಶಿರಸಿತ್ತು ಪೊರೆದೆ ॥ ೩ ॥ ಏಳು ತಾಳದ ಉದ್ದ ರಕ್ತ ತಾಳಲಾರದೆ ಬಿದ್ದ ಗೋಪ ಚೋಳರಾಯಗೆ ಕೊಟ್ಟ ಶಾಪ । ಆಹಾ ! ಪೇಳಬಲ್ಲನೆ ನಿನ್ನ ಅತಿಶಯ ಲೀಲೆಯ ಶೀಲ ಸುರಗುರು ಚಿಕಿತ್ಸೆಯ ಯ್ಯೆದಿದೆ ॥ ೪ ॥ ಸ್ವಗತ ಭೇದವಿಲ್ಲದಂಥ ಸ್ವಚ್ಛ ಚಿತ್ಸುಖಮಯನಂತ ಸ್ವನಿರ್ವಾಹಕ ವಿಶೇಷ । ಆಹಾ ! ಶ್ವೇತ ವರಾಹನ ಸಂವಾದದಿಂದಲೇ ಸ್ವೀಕರಿಸಿದೆ ಸ್ಥಳ

ಮೊದಲು ಪೂಜೆಯ ಕೊಟ್ಟು || ೫ || ಸರಸ್ವತಿ ಸ್ವಾಮಿ ಪುಷ್ಕರಿಣಿ ಸುರಮುನಿ ನರರಿಗೆ ಸ್ನಾನ ಪರಸುಖ ಮಾರ್ಗ ಸೋಪಾನ । ಆಹಾ ! ಸುರತಟಿ ಮೊದಲಾದ ತೀರ್ಥಗಳೆಲ್ಲವು ಸರಿತಾವಾಗಿರುತಿರೆ ಈ ಸ್ವಾಮಿತೀರ್ಥದಿ || ೬ || ಆದಿ ಕಾರಣ ನಿನ್ನ ಲೀಲ ಮೋದ ಸಂಭ್ರಮವನ್ನು ನೋಡೇ ಕಾದುಕೊಂಡಿಹರೋ ಕೋವಿದರು । ಆಹಾ ! ಸಾಧು ಸಂಭಾವಿತ ಬಕುಳಾದೇವಿಯು ಗೈದ ಸ್ವಾದು ಭೋಜ್ಯವನುಂಬ ನಿತ್ಯ ಸಂತೃಪ್ತ || ೭ || ಮಂಗಳ ಚಿನ್ಮಯ ರಂಗ ಅನಂಗನಯ್ಯನೇ ಮೋಹನಾಂಗ ತುಂಗ ಮಹಿಮನೆ ಶುಭಾಂಗ । ಆಹಾ ! ಭಂಗಾರ ಕುದುರೆ ಮೇಲ್ ಅಂಗನೇರಲಿ ಬಂದೆ ಶೃಂಗಾರವೇನೆಂಬೆ ಎಂದಿಗೂ ಸ್ವರಮಣ || ೮ || ತೋಂಡಮಾನ ರಾಯನಣ್ಣಾ ಚಂಡ ಭೂಪನು ಆಕಾಶ ಕಂಡನು ಕಮಲದೊಳ್ ಶಿಶುವ । ಆಹಾ ! ಅಂಡ ಅಖಿಲಕೋಟಿ ಅಸಮ ಈ ಶಿಶು ನಿನ್ನ ಹೆಂಡತಿ ಧರಣಿಯು ಕೊಂಡಳು ಮಗಳಾಗಿ || ೯ || ಮೂಲೇಶ ನಿನ್ನಯ ರಾಣಿ ಮೂಲ ಪ್ರಕೃತಿ ಗುಣಮಾನಿ ಕೀಲಾಲ ಭವ ಭವ ತಾಯಿ । ಆಹಾ! ಶೀಲ ಭೂಪಾಲನ ಸುತೆ ಪದ್ಮಾವತಿಯೆಂದು ಬಾಲೇರು ಸಹ ಪುಷ್ಪವನಕೆ ಬಂದಿಹಳೋ || ೧೦ || ಮಹಿದೇವಿ ಕಮಲವಾಸಿನಿಯೂ ಬಹಿನೋಟಕೆ ರಾಜಸುತೆಯು ಬಹು ಚಿತ್ರ ಪುಷ್ಪವ ಕೊಯ್ಯೆ । ಆಹಾ ! ಮಹತಿಪಾಣಿಯು ವಯೋ ರೂಪದಲಿ ಬಂದು ಅಹಿತಲ್ಪ ಶ್ರೀಶನೆ ಪತಿಯೆಂದು ನುಡಿದಾ || ೧೧ || ಹಾಟಕ ಗಿರಿಯಿಂದ ನೀನು ಬೇಟೆಯಾಡುವ ರೂಪ ತಾಳಿ ಘೋಟಕವೇರಿ ಸಂಭ್ರಮದಿ । ಆಹಾ ! ಆಟವಾಡುವ ಬಾಲೆ ಬಳಿಯಲ್ಲಿ ಬಂದು ನೀ ನಾಟಕವಾಡಿದ್ದು ಪಾಡಲರಿಯೆನೋ || ೧೨ || ನಿತ್ಯ ನಿರ್ಮಲ ಅವಿಕಾರ ಮರ್ತ್ಯಾರು ಮೋಲು ನೀ ನಟಿಸೋ ಕೃತ್ಯಗಳರಿವೋರು ಯಾರೋ । ಆಹಾ ! ಭೃತ್ಯವತ್ಸಲ ನೀನು ಬಕುಳೆಯ ಬಳಿ ಪೇಳಿ ಸತ್ಯ ಸಂಕಲ್ಪ ನಿನ್ನ ಸಂದೇಶ ಕಳುಹಿದೆ || ೧೩ || ಪೊಂದಿದೆ ಪುಲ್ಕಶಿ ರೂಪ ಮಂದಜಭವ ಶಿಶುವಾಗೆ ನಂದಿನಿಧರ ಯಷ್ಟಿಯಾಗೆ । ಆಹಾ ! ಮಂದಜ ಭವನಾಂಡ ಗುಣಗುಲ್ಮ ಮಾಡಿಸೀ ಕಂಧರದಲಿ ಗುಂಜು ಕಂಬುಸರವ ತೊಟ್ಟೆ || ೧೪ || ನಾರಾಯಣ ಪುರಿಯಲ್ಲಿ ಮಾರನೈಯ್ಯ ನಿನ್ನ ಸುಗುಣ ವಾರಿಧಿ ಪೊಕ್ಕಳು ಪದುಮೆ । ಆಹಾ ! ಪುರದಿ ಧರುಣಿದೇವಿ ಪುತ್ರಿಗೆ ಜ್ವರವೆಂದು ಪರಿಪರಿ ಪರಿಹಾರ ಪೊರದು ನೋಡಿದರಾಗ || ೧೫ || ಶುದ್ಧ ಸುಂದರ ಸುಖಕಾಯ ವೃದ್ಧಪೋಲ್ ಕಶಿ ವೇಷಧಾರಿ ಬದ್ಧ ತೋಕರ ಬಳಿ ಪೋದೆ । ಆಹಾ ! ಇದ್ದ ಸುದ್ದಿಯ ಅಪದ್ಧವಿಲ್ಲದೆ ಪೇಳಿ ಮುದ್ದು ಪದ್ಮೆಗೆ ಅನಿರುದ್ಧನೆ ಪತಿಯೆಂದೆ || ೧೬ || ವಹಿಸಿ ನಿನ್ನಾಶ್ವಾಸನ ಬಕುಳ ಮಹದೇವನಾಲಯದಿಂದ ಮಹಿಳೆಯರ ಸಹ ಕೂಡಿ । ಆಹಾ ! ಮಹಿದೇವಿಯಲಿ ಪೋಗಿ ವಿಹಿತ ಮಾತುಗಳಾಡಿ ಬಹು ಶುಭವಾರ್ತೆಯ ತಂದು ಪೇಳಿದಳೋ || ೧೭ || ಶುಕಮುನಿ ಕರ ಪ್ರದವಾದ ಆಕಾಶ-ನೃಪ ಲಗ್ನಪತ್ರ ಸ್ವೀಕರಿಸಿದೆ ಬಹುಹಿತದಿ । ಆಹಾ ! ವಾಗೀಶ ಶಶಿಧರ ನಾಗೇಶ ಸೌಪರ್ಣಿ ನಾಕೇಶ ಮೊದಲಾದ ಸುರರನ್ನು ಕರೆದೆ || ೧೮ || ಶಿಷ್ಟ ಸನ್ಮುನಿ ಜನಕೂಟ ತುಷ್ಟಿ ಸುಮನ ಸಮೂಹ ಶ್ರೇಷ್ಠ ಸುಗಂಧಿಯ ಗಮನ। ಆಹಾ ! ಸೃಷ್ಟ್ಯಾದಿ ಕರ್ತ ನಿನ್ನ ಸುಮಹೋತ್ಸವ ನೋಡಿ ಇಷ್ಟಾರ್ಥ ಪಡೆವೋರೂ ಎಷ್ಟೆಂಬೆ ವಿಭುವೆ || ೧೯|| ಮಾಯ ಜಯೇಶ ಶ್ರೀವತ್ಸ ಛಾಯೇಶಗುಪಾಯ ಪೇಳಿ ತೋಮಜೆಯನು ಕರೆತಂದೆ । ಆಹಾ ! ಮಾಯ ಜಯ ಶಿರಿಕೃತಿ ಶಾಂತಿ ನಿನ್ನಿಂದ ವಿಯೋಗರಹಿತಳು ಎಂದೆಂದು ಎಲ್ಲೆಲ್ಲು || ೨೦ || ಬೃಹದಣುವಿಗೆ ಸತ್ತ್ವಪ್ರದನೆ ಸುದೃಢ ಸಂತೃಪ್ತ ಸುಖಾಬ್ಧೆ ದೃಢ ವ್ರತ ಶುಕಮುನಿಗೊಲಿದೆ ।

ಆಹಾ ! ಬೃಹತಿ ಫಲಾನ್ನವನುಂಡು ಪುಷ್ಕದಿ ಗೃಹಬಾಹಿರದಿ ಇದ್ದ ಜನರ ತೃಪ್ತಿಸಿದೆ ॥ ೨೧ ॥ ಸುಜನರಿಗಾನಂದದಾತ ದ್ವಿಜರೂಢ ಜಗದೀಶ ನೀನು ಅಜ ಸುರರೊಡಗೂಡಿ ಬರೆ । ಆಹಾ ! ಅಜಿತ ಚಿನ್ಮಯ ನಿನ್ನ ಆಕಾಶನೃಪ ನೋಡಿ ನಿಜವಾಗಿ ಕೃತಕೃತ್ಯ ಧನ್ಯ ತಾನೆಂದ ॥ ೨೨ ॥ ಅಜರಾಮರ ಮಂದಿರವ್ವೋಲ್ ಮನೆಯು ಪ್ರಭುವಲಿಸುವ ದಿವ್ಯ ಸಭೆಯು ನಿಜಭಕ್ತ ಜನಪರ ಗುಂಪು। ಆಹಾ ! ದ್ವಿಜರ ವೇದಗಾನ ವಾದ್ಯ ಘೋಷಿಸಲಾಗ ನಿಜಪತಿ ಪದ್ಮೆಗೆ ಮಾಂಗಲ್ಯ ಧರಿಸಿದೆ ॥ ೨೩ ॥ ಸುರಮುನಿಜನ ಮೂರು ವಿಧಕೆ ತರತಮ ಯೋಗ್ಯತೆಯರಿತು ಪರಿಪರಿ ಸಾಧನವಿತ್ತೆ । ಆಹಾ ! ನೀರುಹಜಾಂಡವು ನಿನ್ನ ಅಧೀನವು ಸಿರಿ ಭೂಧರೆಯ ಶ್ರೀನಿವಾಸ ದಯಾನಿಧೆ ॥ ೨೪ ॥ ನೀನಿಂತು ನುಡಿಸಿದ ನುಡಿಯು ನಿನ್ನಡಿಗಳಿಗೆ ಅರ್ಪಣೆಯು ಚನ್ನ ಮಾರುತ ಮನೋಗತನೆ । ಆಹಾ ! ವನರುಹಾಸನ ಗುರು ಪ್ರಸನ್ನ ಶ್ರೀನಿವಾಸ ನಿನಗೆ ಪ್ರೀತ್ಯಾಗಲೋ ಸುಹೃದ ಸಂತೃಪ್ತ ॥ ೨೫ ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಏರಿ ವೆಂಕಟೇಶದಾಸಕೃತ ಶ್ರೀನಿವಾಸ ಕಲ್ಯಾಣದ ಫಲಸ್ತುತಿ

ಕೇಳಿ ಸಜ್ಜನರೆಲ್ಲ ಈ ಬಿನ್ನಪವಾ ! ಕೇಳಿ ಶೌನಕಾದಿ ಮುಖ್ಯರು ಈ ಕಥೆಯ ಸೂತರಿಗೆ ಪರಮ ಸಂತೋಷದಿಂದೆರಗಿ ಗುರುದಕ್ಷಿಣೆಯನು ಕೊಟ್ಟು ಭೂರಿ ಕೀರ್ತಿಯನು ವೈಕುಂಠಲೋಕಾದಿಗಳ ಪಡೆದರವರು । ಶ್ರೀಕಮಲಜಾಕ್ಷನಾ ದಯದಿಂದ ನಾನು । ಮಾಡಿದೆನು ನವರಾತ್ರಿಯಲ್ಲಿ ಈ ಗ್ರಂಥ ಮಾಡೆಂದು ಹರಿಯಾಜ್ಞೆ ಹಿಂಗೆ ಸ್ವಪ್ನದಲಿ ಶ್ರೀನಿವಾಸಾ ಪದ್ಮಿಣಿಯರ ಮದುವೆಯ ಗಾನರೂಪದಿ ಕಥೆಯ ರಚನೆಯನು ಮಾಡು । ವಾಕು ಕೊಡುವೆನು ಝಡತಿ ಬರೆಯೋ ಕುವರಾನೇ ಏಕ ಚಿತ್ತದಿ ಮಾಡು ಯೋಚನೆಯು ಬೇಡಾ । ವರಗಳನೆ ನಿನ್ನ ಗ್ರಂಥಕೆ ಕೊಡುವೆ ನಾನೂ ಪರಮ ಭಕ್ತಿಯಲಿ ಹರಿದಿವುಸಗಾಳಲ್ಲಿಶನಿವಾರದಾ ದಿವಸ ನೇಮದಿಂದೇವೆ ಘನವಾದ ನವರಾತ್ರಿಯಲ್ಲಿ ಪ್ರತಿದಿವಸಾ ಯಾವಾಗ ಭಕ್ತಿ ಪುಟ್ಟುವುದೋ ಆ ವ್ಯಾಳೆ ದೇವರಾ ಮುಂದೆ ಉತ್ತಮ ಕ್ಷೇತ್ರದಲ್ಲಿ ಯಾವ ಪುರುಷ ಸ್ತ್ರೀಯರು ಪಠಣಾದಿಗಳೂ ಭಾವದಿಂದಲೆ ಬಂದು ಮಾಡಿದವರಿಗೆಲ್ಲಾ ಪೂರ್ಣ ಸಂಪತ್ತು ಪೂರ್ಣಾಯುಷ್ಯವನ್ನು ಧೀರ ಜ್ಞಾನಾದಿಗಳು ಸತ್ಪುತ್ರರನ್ನು ಯಾರೇನಪೇಕ್ಷಿಸುವರೋ ಪ್ರತಿದಿನಾಕ್ಕೆ ಜ್ಞಾನಿಗಳರಸ ನಾ ಕೊಟ್ಟು ಅವರಿಗೆ ಪ್ರತ್ಯಕ್ಷವಾಗಿ ವೈಕುಂಠಾದಿಗಳು ಸತ್ಯವಾಗಿ ಕೊಡುವೆ ಸಂದೇಹ ಬೇಡಾ । ಮೂರು ತಿಂಗಳಿಗೆ ಎನ್ನಲ್ಲಿ ಭಕ್ತಿಯ ಕೊಡುವೆ । ಆರು ತಿಂಗಳಿಗೆ ಕೇಳಿದ್ದೆಲ್ಲಾ ಕೊಡುವೆ । ಯಾರು ಪುಸ್ತಕ ಬರೆದು ಪೂಜಿಸುವ್ವೊರೋ ನೀರಜಾಕ್ಷನು ನಾನು ಲಕ್ಷ್ಮೀ ಸಹಿತಾಗಿ ಅವರ ಮನೆಯೊಳಗಿರುವೆನೂ ಸತ್ಯ ಕೇಳೋ ಧರೆಯೊಳಗೆ ಇದನ್ಯಾರು ನಿಂದಿಸುವರೋ ಪರಮ ನರಕದಲಿ ಬೀಳುವ್ವೊರವರು ಸತ್ಯ ! ವರ ಭಕ್ತಿಯಿಂದೊಂದು ಬಾರಿ ಪಾಡಿದರೆ ವರಕನ್ನಿಕೇ ದಾನ ಮಾಡಿದಾ ಪುಣ್ಯ । ತ್ವರೆಯಿಂದ ಮಾಡೆಂದು ವರಗಳನೆ ಕೊಟ್ಟು ಬರಿದಾಗ ಮಾತು ಶ್ರೀಹರಿ ಸತ್ಯವಲ್ಲೀ । ಬರಿದೇ ಪೂರೆತೀ ಗ್ರಂಥ ಮಾಡಿದವನಲ್ಲ, ಧೀರ ಜ್ಞಾನಿಗಳಿಗೆ ರಾಜಹಂಸಗಳು ನೀರು ಮಿಶ್ರಿತ ಕ್ಷೀರ ತೆಗೆದು ಕೊಂಡಂತೆ ಇರುವದನ್ನಾ ಕೈಯ್ಯ ತಪ್ಪುಗಳ ಬಿಟ್ಟು ಗುರುವರದ ಏರಿ ವೆಂಕಟನ ದಯದಿಂದ ದುರುಳರಿಂದಲಿ ಎನಗೆ ಏನಾಗತಕ್ಕದ್ದು ॥

## ಶ್ರೀವಾದಿರಾಜರ ಲಕ್ಷ್ಮೀಶೋಭನ ಹಾಡು

### (ರಾಗ - ಪಂತುವರಾಳಿ, ಧ್ರುವತಾಳ)

ಶೋಭಾನವೆನ್ನೀರೆ ಸುರರೊಳು ಸುಭಗನಿಗೆ । ಶೋಭಾನವೆನ್ನೀ ಸುಗುಣನಿಗೆ ॥ ಶೋಭಾನವೆನ್ನೀರೆ ತ್ರಿವಿಕ್ರಮರಾಯಗೆ । ಶೋಭಾನವೆನ್ನೀ ಸುರಪ್ರಿಯಗೆ ॥ ಶೋಭಾನೆ॥ ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ । ಪಕ್ಷಿವಾಹನ್ನಗೆರಗುವೆ ॥ ಪಕ್ಷಿವಾಹನ್ನಗೆರಗುವೆ ಅನುದಿನ । ರಕ್ಷಿಸಲಿ ನಮ್ಮ ವಧೂವರರ ॥ ೧॥ ಪಾಲಸಾಗರವನ್ನು ಲೀಲೆಯಲಿ ಕಡೆಯಲು। ಬಾಲೆ ಮಹಲಕ್ಷುಮಿ ಉದಿಸಿದಳು ॥ ಬಾಲೆ ಮಹಲಕ್ಷುಮಿ ಉದಿಸಿದಳಾದೇವಿ । ಪಾಲಿಸಲಿ ನಮ್ಮ ವಧೂವರರ ॥ ೨॥ ಬೊಮ್ಮನ ಪ್ರಳಯದಲಿ ತನ್ನರಸಿಯೊಡಗೂಡಿ । ಸುಮ್ಮನೆಯಾಗಿ ಮಲಗಿರ್ದ ॥ ನಮ್ಮ ನಾರಾಯಣಗು ಈರಮ್ಮೆಗಡಿಗಡಿಗು । ಜನ್ಮವೆಂಬೋದು ಅವತಾರ ॥೩॥ ಕಂಬುಕಂಠದ ಸುತ್ತ ಕಟ್ಟಿದ ಮಂಗಳಸೂತ್ರ । ಅಂಬುಜವೆರಡು ಕರಯುಗದಿ ॥ ಅಂಬುಜವೆರಡು ಕರಯುಗದಿ ಧರಿಸಿ ಪೀ- । ತಾಂಬರವನ್ನುಟ್ಟು ಮೆರೆದಳು ॥ ೪॥ ಒಂದು ಕರದಿಂದ ಅಭಯವನೀವಳೆ ಮ - । ತ್ತೊಂದು ಕೈಯಿಂದ ವರಗಳ ॥ ಕುಂದಿಲ್ಲದಾನಂದ ಸಂದೋಹ ಉಣಿಸುವ । ಇಂದಿರೆ ನಮ್ಮ ಸಲಹಲಿ ॥ ೫॥ ಪೊಳೆವ ಕಾಂಚಿಯ ದಾಮ ಉಲಿವ ಕಿಂಕಿಣಿಗಳು । ನಲಿವ ಕಾಲಂದುಗೆ ಘಲಕೆನಲು ॥ ನಳನಳಿಸುವ ಮುದ್ದು ಮೊಗದ ಚೆಲುವೆ ಲಕ್ಷುಮಿ । ಸಲಹಲಿ ನಮ್ಮ ವಧೂವರರ ॥ ೬॥ ರನ್ನದ ವೊಲೆಗಟ್ಟು ಚಿನ್ನದಾಭರಣಗಳ। ಚೆನ್ನೆ ಮಹಲಕ್ಷುಮಿ ಧರಿಸಿದಳೆ ॥ ಚೆನ್ನೆ ಮಹಲಕ್ಷುಮಿ ಧರಿಸಿದಳಾ ದೇವಿ ತನ್ನ । ಮನ್ನೆಯ ವಧೂವರರ ಸಲಹಲಿ ॥ ೭॥ ಕುಂಭಕುಚದ ಮೇಲೆ ಇಂಬಿಟ್ಟ ಹಾರಗಳು । ತುಂಬಿ ಗುರುಳ ಮುಖಕಮಲ ॥ ತುಂಬಿಗುರುಳ ಮುಖಕಮಲದ ಮಹಲಕ್ಷುಮಿ ಜಗ । ದಂಬೆ ವಧೂವರರ ಸಲಹಲಿ ॥ ೮॥ ಮುತ್ತಿನ ಓಲೆಯನಿಟ್ಟಳೆ ಮಹಲಕ್ಷುಮಿ । ಕಸ್ತೂರಿತಿಲಕ ಧರಿಸಿದಳೆ ॥ ಕಸ್ತೂರಿತಿಲಕ ಧರಿಸಿದಳಾ ದೇವಿ ಸ - । ರ್ವತ್ರ ವಧೂವರರ ಸಲಹಲಿ ॥ ೯॥ ಅಂಬುಜನಯನಗಳ ಬಿಂಬಾಧರದ ಶಶಿ -। ಬಿಂಬದಂತೆಸೆವ ಮೂಗುತಿ ಮಣಿಯ॥ ಬಿಂಬ-ದಂತೆಸೆವ ಮೂಗುತಿಮಣಿಯ ಮಹಲಕ್ಷುಮಿ । ಉಂಬುದಕೀಯಲಿ ವಧೂವರರ್ಗೆ ॥ ೧೦॥ ಮುತ್ತಿನಕ್ಷತೆಯಿಟ್ಟು ನವರತ್ನದ ಮುಕುಟವ। ನೆತ್ತಿಯ ಮೇಲೆ ಧರಿಸಿದಳೆ ॥ ನೆತ್ತಿಯ ಮೇಲೆ ಧರಿಸಿದಳಾ ದೇವಿ ತನ್ನ । ಭಕ್ತಿಯ ಜನರ ಸಲಹಲಿ ॥ ೧೧॥ ಕುಂದ ಮಂದಾರ ಜಾಜಿ ಕುಸುಮಗಳ ವೃಂದವ । ಚೆಂದದ ತುರುಬಿಲಿ ತುರುಬಿದಳೆ॥ ಕುಂದವರ್ಣದ ಕೋಮಲೆ ಮಹಲಕ್ಷುಮಿ ಕೃಪೆ - । ಯಿಂದ ವಧೂವರರ ಸಲಹಲಿ ॥ ೧೨॥ ಎಂದೆಂದೂ ಬಾಡದ ಅರವಿಂದದ ಮಾಲೆಯ । ಇಂದಿರೆ ಪೊಳೆವ ಕೊರಳಲ್ಲಿ ॥ ಇಂದಿರೆ ಪೊಳೆವ ಕೊರಳಲ್ಲಿ ಧರಿಸಿದಳೆ ಅವ - । ಳಿಂದು ವಧೂವರರ ಸಲಹಲಿ ॥ ೧೩॥ ದೇವಾಂಗ ಪಟ್ಟೆಯ ಮೇಲು ಹೊದ್ದಿಕೆಯ । ಭಾವೆ ಮಹಲಕ್ಷುಮಿ ಧರಿಸಿದಳೆ ॥ ಭಾವೆ ಮಹಲಕ್ಷುಮಿ ಧರಿಸಿದಳಾ ದೇವಿ ತನ್ನ । ಸೇವಕ ಜನರ ಸಲಹಲಿ ॥೧೪॥ ಈ ಲಕ್ಷುಮಿ ದೇವಿಯ ಕಾಲುಂಗುರ ಘಲಕೆನಲು । ಲೋಲಾಕ್ಷಿ ಮೆಲ್ಲನೆ ನಡೆತಂದಳು ॥ ಸಾಲಾಗಿ ಕುಳ್ಳಿರ್ದ ಸುರರ ಸಭೆಯ ಕಂಡು । ಆಲೋಚಿಸಿದಳು ಮನದಲ್ಲಿ ॥ ೧೫॥ ತನ್ನ ಮಕ್ಕಳ ಕುಂದ ತಾನೇ ಪೇಳುವುದಕ್ಕೆ ।

ಮನ್ನದಿ ನಾಚಿ ಮಹಲಕ್ಷ್ಮಿಮಿ ॥ ತನ್ನಾಮದಿಂದಲಿ ಕರೆಯದೆ ಒಬ್ಬೊಬ್ಬರ। ಉನ್ನಂತ ದೋಷಗಳೆಣಿಸಿದಳು ॥ ೧೭॥ ಕೆಲವರು ತಲೆಯೂರಿ ತಪಗಯ್ದು ಪುಣ್ಯವ । ಗಳಿಸಿದ್ದರೇನೂ ಫಲವಿಲ್ಲ ॥ ಜ್ವಲಿಸುವ ಕೋಪದಿ ಶಾಪವ ಕೊಡುವರು । ಲಲನೆಯನಿವರು ಒಲಿಸುವರೇ ॥ ೧೭॥ ಎಲ್ಲ ಶಾಸ್ತ್ರಗಳೋದಿ ದುರ್ಲಭ ಜ್ಞಾನವ । ಕಲ್ಲಿಸಿ ಕೊಡುವ ಗುರುಗಳು। ಬಲ್ಲಿದ ಧನಕ್ಕೆ ಮರುಳಾಗಿವರಿಬ್ಬರು । ಸಲ್ಲದ ಪುರೋಹಿತಕೊಳಗಾದರು ॥ ೧೮॥ ಕಾಮನಿರ್ಜಿತನೊಬ್ಬ ಕಾಮಿನಿಗೆ ಸೋತೊಬ್ಬ । ಭಾಮಿನಿಯ ಹಿಂದೆ ಹಾರಿದವ॥ ಕಾಮಾಂಧನಾಗಿ ಮುನಿಯ ಕಾಮಿನಿಗೈಯ್ದಿದನೊಬ್ಬ। ಕಾಮದಿಂ ಗುರುತಲ್ಪ ಗಾಮಿಯೊಬ್ಬ ॥ ೧೯॥ ನಶ್ವರೈಶ್ವರ್ಯವ ಬಯಸುವನೊಬ್ಬ ಪರ। ರಾಶ್ರಯಿಸಿ ಬಾಳುವ ಈಶ್ವರನೊಬ್ಬ ॥ ಹಾಸ್ಯವ ಮಾಡಿ ಹಲ್ಲ ಉದುರುಸಿ ಕೊಂಡೊವನೊಬ್ಬ ಅ । ದೃಶ್ಯಾಂಘ್ರಿಯೊಬ್ಬ ಒಕ್ಕಣ್ಣನೊಬ್ಬ ॥ ೨೦॥ ಮಾವನ ಕೊಂದೊಬ್ಬ ಮರುಳಾಗಿಹನು ಗಾಢ ಹಾರ್ವನ ಕೊಂದೊಬ್ಬ ಬಳಲಿದ ॥ ಜೀವರ ಕೊಂದೊಬ್ಬ ಕುಲಗೇಡೆಂದೆನಿಸಿದ । ಶಿವನಿಂದೊಬ್ಬ ಬಯಲಾದ ॥ ೨೧॥ ಧರ್ಮವುಂಟೊಬ್ಬನಲಿ ಹೆಮ್ಮೆಯ ಹೆಸರಿಗೆ । ಅಮ್ಮಮ್ಮ ತಕ್ಕ ಗುಣವಿಲ್ಲ ॥ ಕ್ಷಮ್ಮೆಯ ಬಿಟ್ಟೊಬ್ಬ ನರಕದಲಿ ಜೀವರ । ಮರ್ಮವ ಮೆಟ್ಟಿ ಕೊಲಿಸುವ ॥ ೨೨॥ ಖಳನಂತೆ ಒಬ್ಬ ತನಗೆ ಸಲ್ಲದ ಭಾಗ್ಯವ । ಬಲ್ಲಿದಗಂಜಿ ಬರಿಗೈದ ॥ ದುರ್ಲಭ ಮುಕ್ತಿಗೆ ದೂರವೆಂದೆನಿಸುವ ಪಾ । ತಾಳ ತಳಕ್ಕೆ ಇಳಿದ ಗಡ ॥ ೨೩॥ ಎಲ್ಲರಾಯುಷ್ಯವ ಶಿಂಶುಮಾರದೇವ । ಸಲ್ಲೀಲೆಯಿಂದ ತೊಲಗಿಸುವ ॥ ಒಲ್ಲೆ ನಾನಿವರ ನಿತ್ಯ ಮುತ್ತೈದೆಯೆಂದು । ಬಲ್ಲವರೆನ್ನ ಭಜಿಸುವರು ॥ ೨೪॥ ಪ್ರಕೃತಿಯ ಗುಣದಿಂದ ಕಟ್ಟುವಡೆದ ನಾನಾ । ವಿಕೃತಿಗೊಳಗಾಗಿ ಭವದಲ್ಲಿ ॥ ಸುಖದುಃಖವುಂಬ ಬೊಮ್ಮಾದಿ ಜೀವರು । ದುಃಖಕ್ಕೆ ದೂರಳೆನಿಪ ಎನಗೆಣೆಯೆ ॥ ೨೫॥ ಒಬ್ಬನಾವನ ಮಗ ಮತ್ತೊಬ್ಬನಾವನ ಮೊಮ್ಮಗ । ಒಬ್ಬನಾವನಿಗೆ ಶಯನಾಹ ॥ ಒಬ್ಬನಾವನ ಪೊರರುವ ಮತ್ತಿಬ್ಬರಾವನಿಗಂಜಿ । ಅಬ್ಬರದಲಾವಾಗ ಸುಳಿವರು ॥ ೨೬॥ ಒಬ್ಬನಾವನ ನಾಮಕಂಜಿ ಬೆಚ್ಚುವ ಗಾಢ । ಸರ್ಬರಿಗಾವ ಅಮೃತವ ॥ ಸರ್ಬರಿಗಾವ ಅಮೃತವನುಣಿಸುವ ಅವ । ನೊಬ್ಬನೆ ನಿರನಿಷ್ಟ ನಿರವದ್ಯ ॥ ೨೭॥ ನಿರನಿಷ್ಟ ನಿರವದ್ಯ ಎಂಬ ಶ್ರುತ್ಯರ್ಥವ । ಒರೆದು ನೋಡಲು ನರಹರಿಗೆ ॥ ನರಕಯಾತನೆ ಸಲ್ಲ ದುರಿತಾತಿದೂರನಿಗೆ । ಮರುಳ ಮನ ಬಂದಂತೆ ನುಡಿಯದಿರು ॥ ೨೮॥ ಒಂದೊಂದು ಗುಣಗಳು ಇದ್ದಾವು ಇವರಲ್ಲಿ । ಸಂದಣಿಸಿವೆ ಬಹು ದೋಷ ॥ ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು। ಇಂದಿರೆ ಪತಿಯ ನೆನೆದಳು ॥ ೨೯॥ ದೇವರ್ಷಿ ವಿಪ್ರರ ಕೊಂದು ತನ್ನುದರದೊಳಿಟ್ಟು । ತೀವಿರ್ದ ಹರಿಗೆ ದುರಿತವ ॥ ಭಾವಜ್ಞರೆಂಬರೆ ಆಲದೆಲೆಯ ಮೇಲೆ । ಶಿವನ ಲಿಂಗವ ನಿಲಿಸುವರೆ॥೩೦॥ ಹಸಿ ತೃಷೆ ಜರೆ ಮರಣ ರೋಗ ರುಜಿನಗಳೆಂಬ । ಅಸುರ ಪಿಶಾಚಿಗಳ ಭಯವೆಂಬ ॥ ವ್ಯಸನ ಬರಬಾರದು ಎಂಬ ನಾರಾಯಣನಿಗೆ । ಪಶು ಮೊದಲಾಗಿ ನೆನೆಯದು ॥ ೩೧॥ ತಾ ದುಃಖಿಯಾದರೆ ಸುರರಾರ್ತಿಯ ಕಳೆದು । ಮೋದವೀವುದಕ್ಕೆ ಧರೆಗಾಗಿ ॥ಮಾಧವ ಬಾಹನೆ ಕೆಸರೊಳು ಮುಳುಗಿದ ಪರರ । ಬಾಧಿಪ ಕೆಸರ ಬಿಡಿಸುವನೆ ॥ ೩೨ ॥ ಬೊಮ್ಮನಾ-ಲಯದಲ್ಲಿ ಇದ್ದವಗೆ ಲಯವುಂಟೆ । ಜನ್ಮಲಯವಿಲ್ಲದವನಿಗೆ ॥ ಅಮ್ಮಿಯನುಣಿಸಿದ್ದ ಯಶೋದೆಯಾಗಿದ್ದಳೆ । ಅಮ್ಮ ಇವಗೆ ಹಸಿ ತೃಷೆಯುಂಟೆ ॥ ೩೩॥ ಆಗ ಭಕ್ಷ್ಯ ಭೋಜ್ಯವಿತ್ತು

ಪೂಜಿಸುವ । ಯೋಗಿಗೆ ಉಂಟೇ ಧನಧಾನ್ಯ। ಆಗ ದೊರಕೊಂಬುದೇ ಪಾಕಮಾಡುವ ವಹ್ನಿ ಮ- । ತ್ತಾಗಲೆಲ್ಲಿಹುದು ವಿಚಾರಿಸಿರೋ ॥ ೩೪॥ ರೋಗವನೀವ ವಾತ ಪಿತ್ತ ಶ್ಲೇಷ್ಮ । ಆಗ ಕೂಡುವುದೇ ರಮೆಯೊಡನೆ ॥ ಭೋಗಿಸುವವಗೆ ದುರಿತವ ನೆನೆವರೆ । ಈ ಗುಣನಿಧಿಗೆ ಎಣೆಯುಂಟೆ ॥ ೩೫॥ ರಮ್ಮೆದೇವಿಯರನಪ್ಪಿ-ಕೊಂಡಿಪ್ಪುದು । ರಮ್ಮೆಯರಸಗೆ ರತಿ ಕಾಣಿರೊ॥ ಅಮ್ಮೋಘವೀರ್ಯವು ಚಲಿಸಿದರೆ ಪ್ರಳಯದಲಿ । ಕುಮ್ಮಾರರ್ ಯಾಕೆ ಜನಿಸರು॥೩೬॥ ಏಕತ್ರ ನಿರ್ಣೀತ ಶಾಸ್ತ್ರಾರ್ಥ ಪರತ್ರಾಪಿ । ಬೇಕೆಂಬ ನ್ಯಾಯವ ತಿಳಿದುಕೊ ॥ ಶ್ರೀಕೃಷ್ಣನೊಬ್ಬನೆ ಸರ್ವದೋಷಕ್ಕೆ ಸಿ। ಲುಕನೆಂಬುದು ಸಲಹಲಿಕೆ ॥ ೩೭॥ ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ। ಸಲ್ಲದು ರೋಗ ರುಜಿನವು ॥ ಬಲ್ಲ ವೈದ್ಯರ ಕೇಳಿ ಅಜೀರ್ತಿಮೂಲವೆಲ್ಲ । ಇಲ್ಲ ಸಮಸ್ತ ರುಜಿನವು॥೩೮॥ ಇಂಥಾ ಮೂರುತಿಯ ಒಳಗೊಂಬ ನರಕ ಬಹು । ಭ್ರಾಂತ ನೀನೆಲ್ಲಿಂದ ತೋರಿಸುವೆಲೊ ॥ ಸಂತೆಯ ಮರುಳ ಹೋಗೆಲೋ ನಿನ್ನ ಮಾತ । ಸಂತರು ಕೇಳಿ ಸೊಗಸರು ॥೩೯॥ ಶ್ರೀನಾರಾಯಣರ ಜನನೀಜನಕರ । ನಾನೆಂಬ ವಾದೀ ನುಡಿಯೆಲೊ ॥ಜಾಣರದರಿಂದರಿಯ ಮೂಲರೂಪವ ತೋರಿ । ಶ್ರೀನರಸಿಂಹ ಅವತಾರ ॥ ೪೦॥ ಅಂಬುಧಿಯ ಉದಕದಲಿ ಒಡೆದು ಮೂಡಿದ ಕೂರ್ಮ । ನೆಂಬ ಶ್ರೀಹರಿಯ ಪಿತನಾರು ॥ ಎಂಬ ಶ್ರೀಹರಿಯ ಪಿತನಾರು ಅದರಿಂದ ಸ್ವ । ಯಂಭುಗಳೆಲ್ಲ ಅವತಾರ ॥ ೪೧॥ ದೇವಕಿಯ ಗರ್ಭದಲಿ ದೇವನವತರಿಸಿದ । ಭಾವವನು ಬಲ್ಲ ವಿವೇಕಿಗಳು ॥ ಈ ವಸುಧೆಯೊಳಗೆ ಕೃಷ್ಣಗೆ ಜನ್ಮವ ಆವ ಪರಿಯಲ್ಲಿ ನುಡಿವೆಯೊ ॥ ೪೨॥ ಆವಳಿಸುವಾಗ ಯಶೋಧಾದೇವಿಗೆ । ದೇವ ತನ್ನೊಳಗೆ ಹುದುಗಿದ್ದ । ಭುವನವೆಲ್ಲವ ತೋರಿದುದಿಲ್ಲವೆ । ಆ ವಿಷ್ಣು 'ಗರ್ಭದೊಳಡಗುವನೆ ॥ ೪೩॥ ಆನೆಯ ಮಾನದಲಿ ಅಡಗಿಸಿದವರುಂಟೆ । ಅನೇಕ ಕೋಟಿ ಅಜಾಂಡವ । ಅಣುರೇಣು ಕೂಪದಲಿ ಆಳ್ದ ಶ್ರೀಹರಿಯ । ಜನನಿ ಜಠರವು ಒಳಗೊಂಬುದೆ ॥ ೪೪॥ ಅದರಿಂದ ಕೃಷ್ಣನಿಗೆ ಜನ್ಮವೆಂಬುದು ಸಲ್ಲ । ಮದನನಿವನ ಕುಮಾರನು ॥ ಕದನದಿ ಕಣೆಗಳ ಇವನೆದೆಗೆಸೆವನೆ। ಸುದತೇರಿಗಿವನಿಂತು ಸಿಲುಕುವನೆ ॥ ೪೫॥ ಅದರಿಂದ ಕೃಷ್ಣನಿಗೆ ಪರನಾರೀಸಂಗವ ಕೋ- । ವಿದರಾದ ಬುಧರು ನುಡಿವಾರೆ ॥ ಸದರವೆ ಈ ಮಾತು ಸರ್ವವೇದಂಗಳು। ಮುದದಿಂದ ತಾವು ಸ್ತುತಿಸುವವು ॥ ೪೬॥ ಎಂದ ಭಾಗವತದ ಚೆಂದದ ಮಾತನು। ಮಂದ ಮಾನವ ಮನಸಿಗೆ ॥ ತಂದುಕೊ ಜಗಕ್ಕೆ ಕೈವಲ್ಯವೀವ ಮು- । ಕುಂದಗೆ ಕುಂದು ಕೊರತೆ ಸಲ್ಲ ॥ ೪೭॥ ಹತ್ತು ವರ್ಷದ ಕೆಳಗೆ ಮಕ್ಕಳಾಟಿಕೆಯಲ್ಲಿ । ಚಿತ್ತಸ್ತ್ರೀಯರಿಗೆ ಎರಗುವುದೆ ॥ ಅರ್ಥಿಯಿಂದರ್ಚಿಸಿದ ಗೋಕುಲದ ಕನ್ಯೆಯರ । ಸತ್ಯಸಂಕಲ್ಪ ಬೆರೆತಿದ್ದ ॥ ೪೮॥ ಹತ್ತು ಮತ್ತಾರು ಸಾಸಿರ ಸ್ತ್ರೀಯರಲ್ಲಿ । ಹತ್ತು ಹತ್ತೆನಿಪ ಕ್ರಮದಿಂದ ॥ ಪುತ್ರರ ವೀರ್ಯದಲಿ ಸೃಷ್ಟಿಸಿದವರುಂಟೆ । ಅರ್ತಿಯ ಸೃಷ್ಟಿ ಹರಿಗಿದು ॥ ೪೯॥ ರೋಮರೋಮಕೂಪ ಕೋಟಿ ವೃಕಂಗಳ । ನಿರ್ಮಿಸಿ ಗೋಪಾಲರ ತೆರಳಿಸಿದ ॥ ನಮ್ಮ ಶ್ರೀಕೃಷ್ಣ ಮಕ್ಕಳ ಸೃಜಿಸುವ ಮ। ಹಿಮ್ಮೆ ಬಲ್ಲವರಿಗೆ ಸಲಹಲಿಕೆ ॥೫೦॥ ಮಣ್ಣನೇಕೆ ಮೆದ್ದೆಯೆಂಬ ಯಶೋದೆಗೆ । ಸಣ್ಣ ಬಾಯೊಳಗೆ ಜಗಂಗಳ ॥ ಕಣ್ಣಾರೆ ತೋರಿದ ನಮ್ಮ ಶ್ರೀಕೃಷ್ಣನ । ಘನ್ನತೆ ಬಲ್ಲವರ ಸಲಹಲಿಕೆ ॥೫೧॥ ನಾರದ ಸನಕಾದಿ ಮೊದಲಾದ ಯೋಗಿಗಳು । ನಾರಿಯರಿಗೆ ಮರುಳಾಹರೆ ॥ ಓರಂತೆ

ಶ್ರೀಕೃಷ್ಣನಡಿಗಡಿಗೆರಗುವರೆ । ಆರಾಧಿಸುತ್ತ ಭಜಿಸುವರೆ ॥ ೫೨॥ ಅಂಬುಜಸಂಭವ ತ್ರಿಯಂಬಕ ಮೊದಲಾದ । ನಂಬಿದವರಿಗೆ ವರವಿತ್ತ ॥ ಸಂಭ್ರಮದ ಸುರರು ಎಳ್ಳಷ್ಟು ಕೋಪಕ್ಕೆ । ಇಂಬಿದ್ದರಿವನ ಭಜಿಸುವರೆ ॥ ೫೩॥ ಆವನಂಗುಷ್ಠವ ತೊಳೆದ ಗಂಗಾದೇವಿ । ಪಾವನಳೆನಿಸಿ ಮೆರೆಯಳೆ ॥ ಜೀವನ ಸೇರುವ ಪಾಪವ ಕಳೆವಳು । ಈ ವಾಸುದೇವಗೆ ಎಣೆಯುಂಟೆ ॥ ೫೪॥ ಕಿಲ್ಬಿಷವಿದ್ದರೆ ಅಗ್ರಪೂಜೆಯನು । ಸರ್ಬ ರಾಯರ ಸಭೆಯೊಳಗೆ ॥ ಉಬ್ಬಿದ ಮನದಿಂದ ಧರ್ಮಜ ಮಾಡುವನೆಲೆ । ಕೊಬ್ಬದಿರೆಲೋ ಪರವಾದಿ ॥ ೫೫॥ ಸಾವಿಲ್ಲದ ಹರಿಗೆ ನರಕಯಾತನೆ ಸಲ್ಲ । ಜೀವಂತರಿಗೆ ನರಕದಲಿ ॥ ನೋವನೀವನು ನಿಮ್ಮ ಯಮದೇವನು । ಗೋವಾ ನೀ ಹರಿಯ ಗುಣವರಿಯ ॥ ೫೬॥ ನರಕವಾಳುವ ಯಮಧರ್ಮರಾಯ ತನ್ನ । ನರಜನ್ಮದೊಳಗೆ ಪೊರಳಿಸಿ ॥ ಮರಳಿ ತನ್ನರಕದಲಿ ಪೊರಳಿಸಿ ಕೊಲುವನು । ಕುರು ನಿನ್ನ ಕುಹಕ ಕೊಳದಲ್ಲ ॥೫೭॥ ಬೊಮ್ಮನ ನೂರು ವರ್ಷ ಪರಿಯಂತ ಪ್ರಳಯದಲಿ । ಸುಮ್ಮನೆಯಾಗಿ ಮಲಗಿಪ್ಪ ॥ ನಮ್ಮ ನಾರಾಯಣಗೆ ಹಸಿ ತೃಷೆ ಜರೆ ಮರಣ ದು-। ಷ್ಕರ್ಮ ದುಃಖಗಳು ತೊಡಸುವರೆ ॥ ೫೮॥ ರಕ್ಕಸರಸ್ತ್ರಗಳಿಂದ ಗಾಯವಡೆಯದ । ಅಕ್ಷಯ ಕಾಯದ ಶ್ರೀಕೃಷ್ಣ ॥ ತುಚ್ಛ ಯಮಭಟರ ಶಸ್ತ್ರ ಕಳುಕುವನಲ್ಲ । ಹುಚ್ಚ ನೀ ಹರಿಯ ಗುಣವರಿಯ ॥ ೫೯॥ ಕಿಚ್ಚ ನುಂಗಿದನು ನಮ್ಮ ಶ್ರೀಕೃಷ್ಣನು । ತುಚ್ಛ ನರಕದೊಳು ಅನಲನಿಗೆ ॥ ಬೆಚ್ಚುವನಲ್ಲ ಅದರಿಂದಿವಗೆ ನರಕ । ಮೆಚ್ಚುವರಲ್ಲ ಬುಧರೆಲ್ಲ ॥ ೬೦॥ ಮನೆಯಲ್ಲಿ ಕ್ಷಮೆಯ ತಾಳ್ದ ವೀರ ಭಟ । ರಣರಂಗದಲ್ಲಿ ಕ್ಷಮಿಸುವನೆ ॥ ಅಣುವಾಗಿ ನಮ್ಮ ಹಿತಕೆ ಮನದೊಳಗಿನ ಕೃಷ್ಣ । ಮುನಿವ ಕಾಲಕ್ಕೆ ಮಹತ್ತಾಹ॥೬೧॥ ತಾಯ ಪೊಟ್ಟೆಯಿಂದ ಮೂಲ ರೂಪವ ತೋರಿ । ಆಯುಧ ಸಹಿತ ಪೊರವಂಟ ॥ ನ್ಯಾಯಕೋವಿದರು ಪುಟ್ಟಿದನೆಂಬರೆ । ಬಾಯಿಗೆ ಬಂದಂತೆ ಬೊಗುಳದಿರು॥೬೨॥ ಉಟ್ಟ ಪೀತಾಂಬರ ತೊಟ್ಟ ಭೂಷಣಂಗಳು । ಇಟ್ಟ ನವರತ್ನದ ಮುಕುಟವು ॥ ಮೆಟ್ಟಿದ ಕುರುಹ ಎದೆಯಲ್ಲಿ ತೋರಿದ ಶ್ರೀ । ವಿಟ್ಠಲ ಪುಟ್ಟಿದ-ನೆನಬಹುದೆ ॥ ೬೩॥ ಋಷಭ್ಹಂಸಮೇಷಮಹಿಷಮೂಷಿಕವಾಹನವೇರಿ ಮಾ । ನಿಸರಂತೆ ಸುಳಿವ ಸುರರೆಲ್ಲ॥ ಎಸೆವ ದೇವೇಶಾನರ ಸಹಸಕ್ಕೆ ಮಣಿದರು। ಕುಸುಮನಾಭನಿಗೆ ಸರಿಯುಂಟೆ ॥ ೬೪॥ ಒಂದೊಂದು ಗುಣಗಳು ಇದ್ದಾವು ಇವರಲ್ಲಿ । ಸಂದಣಿಸಿವೆ ಬಹು ದೋಷ ॥ ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು । ಇಂದಿರೆಪತಿಯ ನೆನೆದಳು ॥ ೬೫॥ ಇಂತು ಚಿಂತಿಸಿ ರಮೆ ಸಂತರಾಮನ ಪದವ । ಸಂತೋಷ ಮನದಿ ನೆನೆವುತ್ತ ॥ ಸಂತೋಷಮನದಿ ನೆನೆವುತ್ತ ತನ್ನ ಶ್ರೀ । ಕಾಂತನಿದ್ದೆಡೆಗೆ ನಡೆದಳು ॥ ೬೬॥ ಕಂದರ್ಪ ಕೋಟಿಗಳ ಗೆಲುವ ಸೌಂದರ್ಯದ । ಚೆಂದವಾಗಿದ್ದ ಚೆಲುವನ॥ ಇಂದಿರೆ ಕಂಡು ಇವನೆ ತನಗೆ ಪತಿ । ಯೆಂದವನ ಬಳಿಗೆ ನಡೆದಳು ॥ ೬೭॥ ಇತ್ತರದ ಸುರರ ಸುತ್ತ ನೋಡುತ್ತ ಲಕ್ಷ್ಮೀ। ಚಿತ್ತವ ಕೊಡದೆ ನಸುನಗುತ ॥ ಚಿತ್ತವ ಕೊಡದೆ ನಸುನಗುತ ಬಂದು ಪುರು- । ಷೋತ್ತಮನ ಕಂಡು ನಮಿಸಿದಳು ॥ ೬೮॥ ನಾನಾ ಕುಸುಮಗಳಿಂದ ಮಾಡಿದ ಮಾಲೆಯ । ಶ್ರೀನಾರಿ ತನ್ನ ಕರದಲ್ಲಿ ॥ ಪೀನ ಕಂಧರದ ತ್ರಿವಿಕ್ರಮರಾಯನ । ಕೊರಳಿನ ಮೇಲಿಟ್ಟು ನಮಿಸಿದಳು ॥ ೬೯॥ ಉಟ್ಟ ಪೊಂಬಟ್ಟೆಯು ತೊಟ್ಟಾಭರಣಂಗಳು । ಇಟ್ಟ ನವರತ್ನದ ಮುಕುಟವು ॥ ದುಷ್ಟಮರ್ದನನೆಂಬ ಕಡೆಯ ಪೆಂಡೆಗಳ । ವಟ್ಟಿದ್ದ ಹರಿಗೆ

ವಧುವಾದಳು ॥ ೨೦॥ ಕೊಂಬುಚಿಂಗಹಳೆಗಳು ತಾಳಮದ್ದಳೆಗಳು । ತಂಬಟೆ ಭೇರಿ ಪಟಹಗಳು ॥ ಭೊಂ ಭೊಂ ಎಂಬ ಶಂಖ ಡೊಳ್ಳು ಮೌರಿಗಳು । ಅಂಬುಧಿಯ ಮನೆಯಲ್ಲೆಸೆದವು ॥ ೨೧॥ ಅರ್ಘ್ಯಪಾದ್ಯಾಚಮನ ಮೊದಲಾದ ಷೋಡಶಾ - । ನರ್ಘ್ಯ ಪೂಜೆಯಿತ್ತನಳಿಯಂಗೆ ॥ ಒಗ್ಗಿದ ಮನದಿಂದ ಧಾರೆಯೆರೆದನೆ ಸಿಂಧು । ಸದ್ಗತಿಯಿತ್ತು ಸಲಹೆಂದ ॥ ೨೨॥ ವೇದೋಕ್ತ ಮಂತ್ರ ಪೇಳಿ ವಸಿಷ್ಠ ನಾರದ ಮೊದ । ಲಾದ ಮುನೀಂದ್ರರು ಮುದದಿಂದ ॥ ವಧೂವರರ ಮೇಲೆ ಶೋಭನದಕ್ಷತೆಯನು । ಮೋದವೀವುತ್ತ ತಳೆದರು ॥ ೨೩॥ ಸಂಭ್ರಮದಿಂದಂಬರದಿ ದುಂದುಭಿ ಮೊಳಗಲು । ತುಂಬುರು ನಾರದರು ತುತಿಸುತ್ತ ॥ ತುಂಬುರು ನಾರದರು ತುತಿಸುತ್ತ ಪಾಡಿದರು ಪೀ - । ತಾಂಬರಧರನ ಮಹಿಮೆಯ ॥೨೪॥ ದೇವನಾರಿಯರೆಲ್ಲ ಬಂದೊದಗಿ ಪಾಠಕರು । ಓವಿ ಪಾಡುತ್ತ ಕುಣಿದರು ॥ ದೇವತರುವಿನ ಹೂವಿನ ಮಳೆಗಳ । ಶ್ರೀವರನ ಮೇಲೆ ಕರೆದರು ॥ ೨೫॥ ಮುತ್ತು ರತ್ನಗಳಿಂದ ಕೆತ್ತಿಸಿದ ಹಸೆಯ ನವ । ರತ್ನ ಮಂಟಪದಿ ಪಸರಿಸಿ ॥ ರತ್ನಮಂಟಪದಿ ಪಸರಿಸಿ ಕೃಷ್ಣನ । ಮುತ್ತೈದೆಯರೆಲ್ಲ ಕರೆದರು ॥ ೨೬॥ ಶೇಷಶಯನನೆ ಬಾ ದೋಷದೂರನೆ ಬಾ। ಭಾಸುರಕಾಯ ಹರಿಯೆ ಬಾ ॥ ಭಾಸುರಕಾಯ ಹರಿಯೆ ಬಾ ಶ್ರೀಕೃಷ್ಣ ವಿ - । ಲಾಸದಿಂದೆಮ್ಮ ಹಸೆಗೆ ಬಾ ॥ ೨೭॥ ಕಂಜಲೋಚನನೆ ಬಾ ಮಂಜುಳಮೂರ್ತಿ ಬಾ । ಕುಂಜರವರದಾಯಕನೆ ಬಾ॥ ಕುಂಜರವರದಾಯಕನೆ ಬಾ ಶ್ರೀಕೃಷ್ಣ ನಿ - । ರಂಜನ ನಮ್ಮ ಹಸೆಗೆ ಬಾ ॥ ೨೮॥ ಆದಿಕಾಲದಲಿ ಆಲದೆಲೆಯ ಮೇಲೆ । ಶ್ರೀದೇವಿಯರೊಡನೆ ಪವಡಿಸಿದ ॥ ಶ್ರೀದೇವಿಯರೊಡನೆ ಪವಡಿಸಿದ ಶ್ರೀಕೃಷ್ಣ । ಮೋದದಿಂದೆಮ್ಮ ಹಸೆಗೆ ಬಾ ॥ ೨೯॥ ಆದಿ ಕಾರಣನಾಗಿ ಆಗ ಮಲಗಿದ್ದು । ಮೋದ ಜೀವರ ತನ್ನ ಉದರದಲಿ ॥ ಮೋದಜೀವರ ತನ್ನುದರದಲಿ ಇಂಬಿಟ್ಟ ಅ -। ನಾದಿಮೂರುತಿಯೆ ಹಸೆಗೆ ಬಾ ॥ ೩೦॥ ಚಿನ್ಮಯವೆನಿಪ ನಿಮ್ಮ ಮನೆಗಳಲ್ಲಿ ಜ್ಯೋ- । ತಿರ್ಮಯವಾದ ಪದ್ಮದಲ್ಲಿ ॥ ರಮ್ಮೆಯರೊಡಗೂಡಿ ರಮಿಸುವ ಶ್ರೀಕೃಷ್ಣ । ನಮ್ಮ ಮನೆಯ ಹಸೆಗೆ ಬಾ ॥ ೩೧॥ ನಾನಾವತಾರದಲಿ ನಂಬಿದ ಸುರರಿಗೆ । ಆನಂದವೀವ ಕರುಣಿ ಬಾ ॥ ಆನಂದವೀವ ಕರುಣಿ ಬಾ ಶ್ರೀಕೃಷ್ಣ । ಶ್ರೀನಾರಿಯೊಡನೆ ಹಸೆಗೇಳು ॥ ೩೨॥ ಬೊಮ್ಮನ ಮನೆಯಲ್ಲಿ ರನ್ನಪೀಠದಿ ಕುಳಿತು । ಒಮ್ಮನದಿ ನೇಹವ ಮಾಡುವ ॥ ನಿರ್ಮಲ ಪೂಜೆಯ ಕೈಗೊಂಬ ಶ್ರೀಕೃಷ್ಣ ಪ -। ರಮ್ಮ ಮೂರುತಿಯೇ ಹಸೆಗೆ ಬಾ ॥ ೩೩॥ ಮುಖ್ಯಪ್ರಾಣನ ಮನೆಯಲ್ಲಿ ಭಾರತಿಯಾಗ । ಲಿಕ್ಕಿ ಬಡಿಸಿದ ರಸಾಯನವ ॥ ಸಕ್ಕರೆಗೂಡಿದ ಪಾಯಸ ಸವಿಯುವ । ರಕ್ಕಸವೈರಿಯೇ ಹಸೆಗೆ ಬಾ ॥ ೩೪॥ ರುದ್ರನ ಮನೆಯಲ್ಲಿ ರುದ್ರಾಣಿದೇವಿಯರು । ಭದ್ರಮಂಟಪದಿ ಕುಳ್ಳಿರಿಸಿ ॥ ಸ್ವಾದ್ವನ್ನಗಳನು ಬಡಿಸಲು ಕೈಗೊಂಡ। ಮುದ್ದು ನರಸಿಂಹ ಹಸೆಗೆ ಬಾ ॥ ೩೫॥ ಗರುಡನ ಮೇಲೇರಿ ಗಗನ ಮಾರ್ಗದಲ್ಲಿ । ತರತರದಿ ಸ್ತುತಿಪ ಸುರಸ್ತ್ರೀಯರ ॥ ಮೆರೆವ ಗಂಧರ್ವರ ಗಾನವ ಸವಿಯುವ । ನರಹರಿ ನಮ್ಮ ಹಸೆಗೆ ಬಾ ॥ ೩೬॥ ನಿಮ್ಮಣ್ಣನ ಮನೆಯ ಸುಧರ್ಮ ಸಭೆಯಲ್ಲಿ । ಉಮ್ಮೆಯರಸ ನಮಿಸಿದ ॥ ಧರ್ಮರಕ್ಷಕನೆನಿಪ ಕೃಷ್ಣ ಕೃಪೆಯಿಂದ ಪ - । ರಮ್ಮ ಮೂರುತಿಯೆ ಹಸೆಗೆ ಬಾ ॥೩೭॥

ಇಂದ್ರನ ಮನೆಗ್ಹೋಗಿ ಅದಿತಿಗೆ ಕುಂಡಲವಿತ್ತು । ಅಂದದ ಪೂಜೆಯ ಕೈಗೊಂಡು ॥ ಅಂದದ ಪೂಜೆಯ ಕೈಗೊಂಡು ಸುರ ತರುಪ । ಇಂದಿರೆಗಿತ್ತ ಹರಿಯೆ ಬಾ ॥ ೮೮॥ ನಿಮ್ಮ ನೆನೆವ ಮುನಿಹೃದಯದಲಿ ನೆಲೆಸಿದ । ಧರ್ಮ ರಕ್ಷಕನೆನಿಸುವ ॥ ಸಮ್ಮತವಾಗಿದ್ದ ಪೂಜೆಯ ಕೈಗೊಂಡ ನಿ- । ಸ್ಸೀಮ ಮಹಿಮ ಹಸೆಗೆ ಬಾ ॥೮೯॥ ಮುತ್ತಿನ ಸತ್ತಿಗೆಯ ನವರತ್ನದ ಚಾಮರ । ಸುತ್ತನಲಿವ ಸುರಸ್ತ್ರೀಯರ ॥ ನೃತ್ಯವ ನೋಡುತ ಚಿತ್ರವಾದ್ಯಂಗಳ ಸಂ-। ಪತ್ತಿನ ಹರಿಯೆ ಹಸೆಗೆ ಬಾ ॥ ೯೦॥ ಎನಲು ನಗುತ ಬಂದು ಹಸೆಯ ಮೇಲೆ । ವನಿತೆ ಲಕ್ಷ್ಮಿಯೊಡಗೂಡಿ॥ ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು । ದಿನದುತ್ಸವ ನಡೆಸಿದರು ॥ ೯೧॥ ಅತ್ತೇರೆನಿಪ ಗಂಗೇ ಯಮುನೆ ಸರಸ್ವತಿ ಭಾ- । ರತಿ ಮೊದಲಾದ ಸುರಸ್ತ್ರೀಯರು ॥ ಮುತ್ತಿನಾಕ್ಷತೆಯನು ಶೋಭಾನವೆನುತ ತಮ್ಮ । ಅರ್ತಿಯಳಿಯಗೆ ತಳೆದರು ॥ ೯೨॥ ರತ್ನದಾರುತಿಗೆ ಸುತ್ತ ಮುತ್ತನೆ ತುಂಬಿ । ಮುತ್ತೈದೆಯರೆಲ್ಲ ಧವಳದ ॥ ಮುತ್ತೈದೆಯರೆಲ್ಲ ಧವಳದ ಪದನ ಪಾ- । ಡುತ್ತಲೆತ್ತಿದರೆ ಸಿರಿವರಗೆ ॥ ೯೩॥ ಬೊಮ್ಮ ತನ್ನರಸಿ ಕೂಡೆ ಬಂದೆರಗಿದ ಉಮ್ಮೆಯರಸ ನಮಿಸಿದ ॥ ಅಮ್ಮರರೆಲ್ಲರು ಬಗೆ ಬಗೆ ಉಡುಗೊರೆಗಳ । ರಮ್ಮೆಯರಸಗೆ ಸಲಿಸಿದರು ॥ ೯೪॥ ಸತ್ಯಲೋಕದ ಬೊಮ್ಮ ಕೌಸ್ತುಭರತ್ನವನಿತ್ತ । ಮುಕ್ತಸುರರು ಮುದದಿಂದ ॥ ಮುತ್ತಿನ ಕಂಠೀಸರವ ಮುಖ್ಯಪ್ರಾಣನಿತ್ತ । ಮಸ್ತಕಮಣಿಯ ಶಿವನಿತ್ತ ॥ ೯೫॥ ತನ್ನರಸಿ ಕೂಡೆ ಸವಿನುಡಿ ನುಡಿವಾಗ ವ- । ದನದಲ್ಲಿದ್ದಗ್ನಿ ಕೆಡದಂತೆ ॥ ವಹ್ನಿ ಪ್ರತಿಷ್ಠೆಯ ಮಾಡಿ ಅವನೊಳಗಿದ್ದ । ತನ್ನಾಹುತಿಯಿತ್ತ ಸುರರಿಗೆ ॥ ೯೬॥ ಕೊಬ್ಬಿದ ಖಳರೋಡಿಸಿ ಅಮೃತಾನ್ನ ಊಟಕ್ಕೆ । ಉಬ್ಬಿದ ಹರುಷದಲಿ ಉಣಿಸಲು ॥ ಉಬ್ಬಿದ ಹರುಷದಲಿ ಉಣಿಸಬೇಕೆಂದು ಸಿಂಧು । ಸರ್ಬರಿಗೆಡೆಯ ಮಾಡಿಸಿದ ॥ ೯೭॥ ಮಾವನ ಮನೆಯಲ್ಲಿ ದೇವರಿಗೌತಣವ ದಾ-। ನವರು ಕೆಡಿಸದೆ ಬಿಡರೆಂದು ದಾ - ॥ ನವರು ಕೆಡಿಸದೆ ಬಿಡರೆಂದು ಶ್ರೀಕೃಷ್ಣ । ದೇವ ಸ್ತ್ರೀವೇಷವ ಧರಿಸಿದ ॥ ೯೮॥ ತನ್ನ ಸೌಂದರ್ಯ-ದಿಂದುನ್ನಂತಮಡಿಯಾದ ಲಾ- । ವಣ್ಯದಿಂ ಮೆರೆವ ನಿಜ ಪತಿಯ ॥ ಹೆಣ್ಣು ರೂಪವ ಕಂಡು ಕನ್ಯೆ ಮಹಲಕ್ಷ್ಮಿ ಇವ - । ಗನ್ಯರೇಕೆಂದು ಬೆರಗಾದಳು ॥ ೯೯॥ ಲಾವಣ್ಯಮಯವಾದ ಹರಿಯ ಸ್ತ್ರೀವೇಷಕ್ಕೆ । ಭಾವುಕಿಯರೆಲ್ಲ ಮರುಳಾಗೆ ॥ ಮಾವರ ಸುಧೆಯ ಕ್ರಮದಿಂದ ಬಡಿಸಿ ತನ್ನ । ಸೇವಕ ಸುರರಿಗುಣಿಸಿದ ॥ ೧೦೦॥ ನಾಗನ ಮೇಲೆ ತಾ ಮಲಗಿದ್ದಾಗ । ಆಗಲೆ ಜಗವ ಜತನದಿ॥ ಆಗಲೆ ಜಗವ ಜತನದಿ ಧರಿಸೆಂದು । ನಾಗಬಲಿಯ ನಡೆಸಿದ ॥ ೧೦೧॥ ಕ್ಷುಧೆಯ ಕಳೆವ ನವರತ್ನದ ಮಾಲೆಯ । ಮುದದಿಂದ ವಾರಿಧಿ ವಿಧಿಗಿತ್ತ॥ ಚದುರ ಹಾರವ ವಾಯುದೇವರಿಗಿತ್ತ । ವಿಧುವಿನ ಕಲೆಯ ಶಿವಗಿತ್ತ ॥ ೧೦೨॥ ಶಕ್ರ ಮೊದಲಾದ ದಿಕ್ಪಾಲಕರಿಗೆ। ಸೊಕ್ಕಿದ ಚೌದಂತ ಗಜಂಗಳ ॥ ಉಕ್ಕಿದ ಮನದಿಂದ ಕೊಟ್ಟ ವರುಣ ಮದು - । ಮಕ್ಕಳಾಯುಷ್ಯವ ಬೆಳೆಸೆಂದ ॥ ೧೦೩॥ ಮತ್ತೆ ದೇವೇಂದ್ರಗೆ ಪಾರಿಜಾತವನಿತ್ತ। ಚಿತ್ತವ ಸೆಳೆವಪ್ಸರಸ್ತ್ರೀಯರ ॥ ಹತ್ತುಸಾವಿರ ಕೊಟ್ಟ ವರುಣದೇವ ಹರಿ । ಭಕ್ತಿಯ ಮನದಲ್ಲಿ ಬೆಳೆಸೆಂದ ॥ ೧೦೪॥ ಪೊಳೆವ ನವರತ್ನದ ರಾಶಿಯ ತೆಗೆತೆಗೆದು । ಉಳಿದ ಅಮರರಿಗೆ ಸಲಿಸಿದ॥ ಉಳಿದ ಅಮರರಿಗೆ ಸಲಿಸಿದ ಸಮುದ್ರ । ಕಳುಹಿದನವರವರ ಮನೆಗಳಿಗೆ ॥ ೧೦೫॥ ಉನ್ನಂತ ನವರತ್ನಮಯವಾದ ಅರಮನೆಯ । ಚೆನ್ನೇಮಗಳಿಂದ ವಿರಚಿಸಿ ॥ ತನ್ನ ಅಳಿಯನಿಗೆ ಸ್ಥಿರ ಮಾಡಿಕೊಟ್ಟವ । ಇನ್ನೊಂದು ಕಡೆಯಡಿ ಇಡದಂತೆ ॥ ೧೦೬॥ ಹಯವದನ ತನ್ನ ಪ್ರಿಯಳಾದ ಲಕ್ಷ್ಮಿಗೆ । ಜಯವಿತ್ತ ಕ್ಷೀರಾಂಬುಧಿ ಯಲ್ಲಿ ॥ ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀ ಕೃಷ್ಣ । ದಯದಿ ನಮ್ಮೆಲ್ಲರ ಸಲಹಲಿ ॥ ೧೦೭॥ ಈ ಪದನ ಮಾಡಿದ ವಾದಿರಾಜ ಮುನಿಗೆ ।

ಶ್ರೀಪತಿಯಾದ ಹಯವದನ॥ ತಾಪವ ಕಳೆದು ತನ್ನ ಶ್ರೀಚರಣ ಸ - । ಮೀಪದಲ್ಲಿಟ್ಟು ಸಲಹಲಿ ॥ ೧೦೮॥ ಇಂತು ಸ್ವಪ್ನದಲಿ ಕೊಂಡಾಡಿಸಿಕೊಂಡ ಲಕ್ಷ್ಮೀ । ಕಾಂತನ ಕಂದನೆನಿಸಿದ॥ ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿ । ಪಂಥದಿ ಪೇಳಿದ ಪದವಿದು ॥ ೧೦೯॥ ಶ್ರೀಯರಸ ಹಯವದನಪ್ರಿಯ ವಾದಿರಾಜ । ರಾಯ ರಚಿಸಿದ ಪದವಿದು ॥ ಆಯುಷ್ಯ ಭವಿಷ್ಯ ದಿನದಿನಕೆ ಹೆಚ್ಚುವುದು ನಿ- । ರಾಯಾಸದಿಂದ ಸುಖಿಪರು ॥ ೧೧೦॥ ಬೊಮ್ಮಾನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ ಕ್ರಮ್ಮಾದಿ ಮಾಡೀ ವಿನೋದಿಸುವ ॥ ನಮ್ಮ ನಾರಾಯಣಗೂ ಈ ರಮ್ಮೆಗಡಿಗಡಿಗೂ । ಅಸುರಮ್ಮೋಹನವೇ ನರನಟನೆ ॥ ೧೧೧॥ ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ । ಮದುಮಕ್ಕಳಿಗೆ ಮುದವಹುದು ॥ ವಧುಗಳಿಗೆ ಓಲೆ ಭಾಗ್ಯ ದಿನ ದಿನಕೆ ಹೆಚ್ಚುವುದು । ಮದನನಯ್ಯನ ಕೃಪೆಯಿಂದ ॥ ೧೧೨॥ ಶೋಭಾನವೆನ್ನಿರೆ ಸುರರೊಳು ಸುಭಗನಿಗೆ । ಶೋಭಾನವೆನ್ನೀ ಸುಗುಣನಿಗೆ ॥ ಶೋಭಾನವೆನ್ನೀರೆ ತ್ರಿವಿಕ್ರಮರಾಯಗೆ । ಶೋಭಾನವೆನ್ನೀ ಸುರಪ್ರಿಯಗೆ ॥ ಶೋಭಾನೆ ॥

ಹಡಗಿನೊಳಗಿಂದ ಬಂದ ಕಡು ಮುದ್ದು ಕೃಷ್ಣಗೆ ಕಡಗೋಲನೇಣ ಪಿಡಿದವಗೆ । ಕಡಗೋಲ ನೇಣ ಪಿಡಿದ ದೇವಕಿ ತನಯಗಾರುತಿಯಾ ಬೆಳಗೀರೇ ॥ ಶೋಭಾನೆ ॥ ೧॥ ಮಧ್ವ ಸರೋವರದಿ ಶುದ್ಧ ಪೂಜೆಯಗೊಂಬ ಮುದ್ದು ರುಕ್ಮಿಣೀಯರಸಗೆ । ಮುದ್ದು ರುಕ್ಮಿಣಿ ಅರಸ ಶ್ರೀಕೃಷ್ಣಗೆ ಮುತ್ತಿನಾರುತಿಯಾ ಬೆಳಗೀರೇ ॥ ಶೋಭಾನೆ ॥ ೨ ॥ ಆಚಾರ್ಯರ ಕೈಯಿಂದ ಅಧಿಕ ಪೂಜೆಯಗೊಂಬ ಕಾಂತೆ ರುಕ್ಮಿಣೀಯರಸಗೆ । ಕಾಂತೆ ರುಕ್ಮಿಣೀ ಅರಸು ಶ್ರೀಕೃಷ್ಣಗೆ ಕಾಂಚನದಾರುತಿ ಬೆಳಗೀರೇ ॥ ಶೋಭಾನೆ ॥ ೩॥ ಪಾಂಡವರ ಪ್ರೀಯಗೆ ಕೌರವರ ಮದಹನಗೆ ಸತ್ಯಭಾಮೆಯರಸಗೆ । ಸತ್ಯಭಾಮೆಯ ಅರಸು ಶ್ರೀಕೃಷ್ಣಗೆ ನವರತ್ನದಾರುತಿಯ ಬೆಳಗೀರೇ ॥ ಶೋಭಾನೆ ॥ ೪॥ ಸೋದರ ಮಾವನ ಮಥುರೇಲಿ ಮಡುಹಿದ ತಾಯಿಯ ಸೆರೆಯ ಬಿಡಿಸಿದ । ತಾಯಿಯ ಸೆರೆಯ ಬಿಡಿಸಿದ ವಸುದೇವತನಯಗಾರುತಿಯ ಬೆಳಗೀರೆ ॥ ಶೋಭಾನೆ ॥ ೫॥ ಮುತ್ತೈದೆ ನಾರಿಯರು ಮುತ್ತಿನಾರುತಿಯನ್ನು ಹತ್ತಾವತಾರ ಹಯವದನ । ಹತ್ತಾವತಾರ ಹಯವದನ ದೇವನಿಗೆ ಹೊಸ ಮುತ್ತಿನಾರುತಿಯ ಬೆಳಗೀರೆ ॥ಶೋಭಾನೆ ॥೬॥

*****

## ಉರುಟಣೆ ಹಾಡು

ಲಕ್ಷುಮಿ ರಮಣನಿಗೆ ಮಾಡಿದಳು ಉರುಟಣೆಯಾ । ಇಳೆಯೊಳು ಅತಿ ಜಾಣೆ । ಸುಂದರ ಫಣಿವೇಣಿ ॥ಪ॥ ಮಚ್ಛ ಕಚ್ಛಪ ಕಿರನೆ । ಕೇಸರಿಯಂದದ ಮುಖನೆ । ಸ್ವಚ್ಛ ಮುಖವ ತೋರ್‍ಯೆ । ಕುಂಕುಮ ಹಚ್ಚುವೆನು ॥೧॥ ಬಲಿಯ ದಾನವ ಬೇಡಿ । ಇಳೆಯ ಈರಡಿ ಮಾಡಿ । ಅಳೆದಡಿಗಳ ತೋರ್‍ಯೆ । ಅರಿಸಿನ ಹಚ್ಚುವೆನು ॥೨॥ ದುರುಳ ಕ್ಷತ್ರಿಯರನ್ನು । ಕೊರಳ ತರಿದ ಹರಿಯೇ । ಹರುಷದಿಂ ಕೊರಳ ತೋರ್‍ಯೆ । ಗಂಧವ ಹಚ್ಚುವೆನು ॥೩॥ ದಶರಥನಲಿ ಜನಿಸಿ । ದಶಮುಖನ ಸಂಹರಿಸಿ । ಶಶಿಮುಖಿಯ ತಂದವನೆ । ಕುಸುಮವ ಮುಡಿಸುವೆನು ॥೪॥ ಹದಿನಾರು ಸಾಸಿರ । ಸುದತಿಯರ ಆಳಿದನೆ । ಪದುಮಕರವ ತೋರ್‍ಯೆ । ವೀಳ್ಯವ ಕೊಡುವೆನು ॥೫॥ ವಸನರಹಿತನಾಗಿ । ವಸುಧೆಯ ತಿರುಗಿದೆ । ಬಿಸಜನಾಭನೆ ನಿನಗೆ । ವಸನವ ಹೊದಿಸುವೆನು ॥೬॥ ವರ ತುರಗವನೇರಿ । ಕಲಿಯ ಸಂಹರಿಸಿದೆ । ವರ ಹಯವದನನೆ ನಿನಗೆ । ಆರತಿ ಎತ್ತುವೆನು ॥೭॥

*****

## ಶ್ರೀವೆಂಕಟೇಶಸ್ತವರಾಜ

**(ಸೂಚನೆ : ಮೊದಲು ಶ್ರೀವೆಂಕಟೇಶ ಸ್ತವರಾಜವನ್ನು ಹೇಳಿ ನಂತರ ಲಕ್ಷ್ಮೀ ಹೃದಯವನ್ನು ಅಂದು ಪುನಃ ಶ್ರೀವೆಂಕಟೇಶ ಸ್ತವರಾಜವನ್ನು ಹೇಳಬೇಕು.)**

ಶ್ರೀರಮಣ ಸರ್ವೇಶ ಸರ್ವಗ । ಸಾರಭೋಕ್ತ ಸ್ವತಂತ್ರ ಸರ್ವದ -। ಪಾರಮಹಿಮೋ-ದಾರ ಸದ್ಗುಣಪೂರ್ಣಗಂಭೀರ ॥ ಸಾರಿದವರಘ ದೂರಗೈಸೀ । ಸೂರಿಜನರಿಗೆ ಸೌಖ್ಯನೀಡುವ । ಧೀರವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೧॥ ಘನ್ನ ಮಹಿಮಾಪನ್ನಪಾಲಕ । ನಿನ್ನ ಹೊರತಿನ್ನನ್ಯದೇವರ । ಮನ್ನದಲಿ ನಾ ನೆನಿಸೆನೆಂದಿಗು ಬನ್ನ ಬಡಿಸದಿರು ॥ ಎನ್ನ ಪಾಲಕ ನೀನೆ ಇರುತಿರೆ । ಇನ್ನು ಭವಭಯವೇಕೆ ಎನಗೆ । ಚನ್ನವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೨॥ ಲಕುಮಿ ಬೊಮ್ಮ ಭವಾಮರೇಶರು । ಭಕುತಿಪೂರ್ವಕ ನಿನ್ನ ಭಜಿಸೀ ಸಕಲಲೋಕಕೆ ನಾಥರೆನಿಪರೊ ಸರ್ವಕಾಲದಲಿ ॥ ನಿಖಿಳಜೀವರ ಪೊರೆವೊ ದೇವನೆ । ಭಕುತಿ ನೀ ಯೆನಗೀಯದಿರಲು । ವ್ಯಕುತವಾಗ್ಯಪಕೀರ್ತಿ ಬಪ್ಪದೊ ಶ್ರೀನಿಕೇತನನೆ ॥ ೩॥ ಯಾಕೆ ಪುಟ್ಟಿದೊ ಕರುಣ ಎನ್ನೊಳು । ಸಾಕಲಾರೆಯ ನಿನ್ನ ಶರಣನ । ನೂಕಿಬಿಟ್ಟರೆ ನಿನಗೆ ಲೋಕದಿ ಖ್ಯಾತಿ ಬಪ್ಪುವುದೇ ॥ ನೋಕನೀಯನೆ ನೀನೆ ಎನ್ನನು । ಜೋಕೆಯಿಂದಲಿ ಕಾಯೊ ಬಿಡದೆ । ಏಕದೇವನು ನೀನೆ ವೆಂಕಟ ಶೇಷಗಿರಿವಾಸ ॥ ೪ ॥ ಅಂಬುಜಾಂಬಕ ನಿನ್ನ ಪದಯುಗ । ನಂಬಿಕೊಂಡೀ ಪರಿಯಲಿರುತಿರೆ । ಡೊಂಬೆಗಾರನ ತೆರದಿ ನೀ ನಿರ್ಭಾಗ್ಯ ಸ್ಥಿತಿತೋರೆ ॥ ಬಿಂಬಮೂರುತಿ ನಿನ್ನ ಕರಗತ । ಕಂಬುವರವೇ ಗತಿಯೊ ವಿಶ್ವ । ಕುಟುಂಬಿ ಎನ್ನನು ಸಲಹೊ ಸಂತತ ಶೇಷಗಿರಿವಾಸ ॥ ೫ ॥ ಸಾರಶಿರಿವೈಕುಂಠ ತ್ಯಜಿಸೀ । ಧಾರುಣೀಯೊಳು ಗೊಲ್ಲನಾಗೀ । ಚೋರಕರ್ಮವ ಮಾಡಿ ಬದುಕಿಹದಾರಿಗರಿಕಿಲ್ಲ ॥ ಸಾರಿಪೇಳುವೆ ನಿನ್ನ ಗುಣಗಳ - । ಪಾರವಾಗಿರುತಿಹವೊ ಜನರಿಗೆ । ಧೀರ ವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೬ ॥ ನೀರ ಮುಳುಗೀ ಭಾರಪೊತ್ತೂ । ಧಾರುಣೀತಳವಗೆದು ಸಿಟ್ಟಿಲಿ । ಕ್ರೂರನುದರವ ಶೀಳಿ ಕರುಳಿನ ಮಾಲೆ ಧರಿಸಿದರೂ ॥ ಪೋರ ವಿಪ್ರ ಕುಠಾರಿ ವನವನ । ಚಾರಿ ಗೋಪ ದಿಗಂಬರಾ-ಶ್ವವ । ಏರಿ ಪೋದರೂ ಬಿಡೆನೊ ವೆಂಕಟಶೇಷಗಿರಿವಾಸ ॥ ೭ ॥ ಲಕ್ಷ್ಮಿನಾಯಕ ಸಾರ್ವಭೌಮನೆ। ಪಕ್ಷಿವಾಹನ ಪರಮಪುರುಷನೆ । ಮೋಕ್ಷದಾಯಕ ಪ್ರಾಣಜನಕನೆ ವಿಶ್ವವ್ಯಾಪಕನೆ ॥ ಅಕ್ಷಯಾಂಬರವಿತ್ತಿ ವಿಜಯನ । ಪಕ್ಷಪಾತವ ಮಾಡಿ ಕುರುಗಳ । ಲಕ್ಷ್ಯಮಾಡದೆ ಕೊಂದೆಯೋ ಶ್ರೀಶೇಷಗಿರಿವಾಸ ॥ ೮ ॥ ಹಿಂದೆ ನೀ ಪ್ರಹ್ಲಾದ ಗೋಸುಗ । ಎಂದು ನೋಡದ ರೂಪಧರಿಸೀ। ಬಂದು ದೈತ್ಯನ ಒಡಲ ಬಗೆದೂ ಪೊರೆದೆ ಬಾಲಕನ ॥ ತಂದೆತಾಯ್ಗಳ ಬಿಟ್ಟು ವಿಪಿನದಿ । ನಿಂದು ತಪಿಸುವ ಪಂಚವತ್ಸರ । ಕಂದನಾ ಧ್ರುವಗೊಲಿದು ಪೊರೆದೆಯೊ ಶೇಷಗಿರಿವಾಸ ॥೯॥ ಮಡುವಿನೊಳಗಿಹ ಮಕರಿ ಕಾಲನು । ಪಿಡಿದು ಬಾಧಿಸೆ ಕರಿಯು ತ್ರಿಜಗ - । ದ್ವಡೆಯ ಪಾಲಿಸೊ ಎನಲು ತಕ್ಷಣ ಬಂದು ಪಾಲಿಸಿದೆ ॥ ಮಡದಿಮಾತನು ಕೇಳಿ ಬಲುಪರಿ । ಬಡವಬ್ರಾಹ್ಮಣ ಧಾನ್ಯಕೊಡಲು । ಪೊಡವಿಗಸದಳ ಭಾಗ್ಯನೀಡಿದೆ ಶೇಷಗಿರಿವಾಸ ॥ ೧೦ ॥ ಪಿಂತೆ ಮಾಡಿದ ಮಹಿಮೆಗಳ ನಾ - । ನೆಂತು ವರ್ಣಿಸಲೇನುಫಲ ಶ್ರೀ - । ಕಾಂತ ಎನ್ನನು ಪೊರೆಯೆ ಕೀರುತಿ ನಿನಗೆ ಫಲವೆನಗೆ ॥ ಕಂತುಜನಕನೆ ಎನ್ನ ಮನಸಿನ । ಅಂತರಂಗದಿ ನೀನೆ



ಶ್ರೀ ಶ್ರೀನಿವಾಸ ಪದ್ಮಾವತೀ



ಶ್ರೀ ಕೊಲ್ಹಾಪೂರ ಮಹಾಲಕ್ಷ್ಮೀ



ಶ್ರೀ ಕಲ್ಲೂರ ಮಹಾಲಕ್ಷ್ಮೀ




**ಶ್ರೀ ಅಷ್ಟ ಮಹಾಲಕ್ಷ್ಮೀ ದರ್ಶನ**

ಸರ್ವದ । ನಿಂತು ಪ್ರೇರಣೆ ಮಾಳ್ಪೆ ಸರ್ವದ ಶೇಷಗಿರಿವಾಸ ॥ ೧೧ ॥ ಶ್ರೀನಿವಾಸನೆ ಭಕ್ತಪೋಷನೆ। ಜ್ಞಾನಿಕುಲಗಳಿಗಭಯದಾಯಕ । ದೀನಬಾಂಧವ ನೀನೆ ಎನಮನದರ್ಥ ಪೂರೈಸೊ ॥ ಅನುಪಮೋಪಮಜ್ಞಾನ ಸಂಪದ । ವಿನಯ-ಪೂರ್ವಕವಿತ್ತು ಪಾಲಿಸೊ । ಜನುಮ ಜನುಮಕೆ ಮರೆಯ ಬೇಡವೋ ಶೇಷಗಿರಿವಾಸ ॥ ೧೨ ॥ ಮದವು ಮತ್ಸರ ಲೋಭಮೋಹವು । ಒದಗಬಾರದು ಎನ್ನ ಮನದಲಿ । ಪದುಮನಾಭನೆ ಜ್ಞಾನಭಕ್ತಿ ವಿರಕ್ತಿ ನೀನಿತ್ತು॥ ಹೃದಯ ಮಧ್ಯದಿ ನಿನ್ನರೂಪವು । ವದನದಲಿ ತವ ನಾಮಮಂತ್ರವು । ಸದಯ ಪಾಲಿಸು ಬೇಡಿಕೊಂಬೆನೊ ಶೇಷಗಿರಿವಾಸ ॥ ೧೩ ॥ ಅಂದನುಡಿ ಪುಸಿಯಾಗಬಾರದು । ಬಂದ ಭಾಗ್ಯವು ಪೋಗಬಾರದು । ಕುಂದು ಬಾರದೆ ನಿನ್ನ ಕರುಣವು ದಿನದಿ ವರ್ಧಿಸಲಿ ॥ ನಿಂದೆ ಮಾಡುವ ಜನರ ಸಂಗವು । ಎಂದಿಗಾದರು ದೊರೆಯ ಬಾರದು । ಎಂದು ನಿನ್ನನು ಬೇಡಿಕೊಂಬೆನೊ ಶೇಷಗಿರಿವಾಸ ॥ ೧೪॥ ಏನು ಬೇಡಲಿ ಎನ್ನ ದೇವನೆ। ಸಾನುರಾಗದಿ ಎನ್ನ ಪಾಲಿಸೊ । ನಾನವಿಧವಿಧ ಸೌಖ್ಯ ನೀಡುವುದಿಹಪರಂಗಳಲಿ ॥ ಶ್ರೀನಿವಾಸನೆ ನಿನ್ನ ದಾಸಗೆ । ಏನು ಕೊರತಿಲ್ಲೆಲ್ಲಿ ನೋಡಲು । ನೀನೆ ನಿಂತೀವಿಧದಿ ಪೇಳಿಸು ಶೇಷಗಿರಿವಾಸ ॥ ೧೫ ॥ ಆರು ಮುನಿದವರೇನು ಮಾಳ್ಪರೊ । ಆರು ವೊಲಿದವರೇನು ಮಾಳ್ಪರೊ । ಆರು ನೇಹಿಗರಾರು ದ್ವೇಷಿಗಳಾರುದಾಶಿನರು ॥ ಕ್ರೂರ ಜೀವರ ಹಣಿದು ಸಾತ್ವಿಕ । ಧೀರ ಜೀವರ ಪೊರೆದು ನಿನ್ನಲಿ । ಸಾರ ಭಕುತಿಯನಿತ್ತುಪಾಲಿಸೊ ಶೇಷಗಿರಿವಾಸ ॥ ೧೬ ॥ ನಿನ್ನ ಸೇವೆಯನಿತ್ತು ಎನಗೇ । ನಿನ್ನ ಪದಯುಗ ಭಕ್ತಿನೀಡೀ । ನಿನ್ನ ಗುಣಗಣ ಸ್ತವನ ಮಾಡುವ ಜ್ಞಾನ ನೀನಿತ್ತು ॥ ಎನ್ನ ಮನದಲಿ ನೀನೆ ನಿಂತೂ । ಘನ್ನ ಕಾರ್ಯವ ಮಾಡಿ ಮಾಡಿಸು । ಧನ್ಯನೆಂದೆನಿಸೆನ್ನ ಲೋಕದಿ ಶೇಷಗಿರಿವಾಸ ॥ ೧೭ ॥ ಜಯ ಜಯತು ಶಠ ಕೂರ್ಮರೂಪನೆ । ಜಯ ಜಯತು ಕಿಟಿ ಸಿಂಹ ವಾಮನ । ಜಯ ಜಯತು ಭೃಗುರಾಮ ರಘುಕುಲಸೋಮ ಶ್ರೀರಾಮ ॥ ಜಯ ಜಯತು ಶಿರಿ ಯದುವರೇಣ್ಯನೆ । ಜಯ ಜಯತು ಜಯ ಮೋಹಬುದ್ಧನೆ । ಜಯ ಜಯತು ಕಲಿಕಲ್ಮಷಘ್ನನೆ ಕಲ್ಕಿನಾಮಕನೆ ॥ ೧೮ ॥ ಕರುಣಸಾಗರ ನೀನೆ ನಿಜಪದ । ಶರಣವತ್ಸಲ ನೀನೆ ಶಾಶ್ವತ । ಶರಣಜನಮಂದಾರ ಕಮಲಾಕಾಂತ ಜಯವಂತ ॥ ನಿರುತ ನಿನ್ನನು ನುತಿಸಿ ಪಾಡುವೆ । ವರದ ಗುರುಜಗನ್ನಾಥವಿಠಲ। ಪರಮ ಪ್ರೇಮದಿ ಪೊರೆಯೊ ಎನ್ನನು ಶೇಷಗಿರಿವಾಸ ॥ ೧೯ ॥

## ಶ್ರೀಲಕ್ಷ್ಮೀಹೃದಯ

ಶ್ರೀಮನೋಹರೆ ಲಕುಮಿ ತವ ಪದ । ತಾಮರಸಯುಗ ಭಜಿಪೆ ನಿತ್ಯದಿ । ಸೋಮಸೋದರಿ ಪರಮಮಂಗಳೆ ತಪ್ತ ಕಾಂಚನಳೆ ॥ ಸೋಮಸೂರ್ಯಸು-ತೇಜೊರೂಪಳೆ। ಹೇಮಸನ್ನಿಭಪೀತವಸನಳೆ । ಚಾಮಿಕರಮಯ ಸರ್ವಭೂಷಣ ಜಾಲಮಂಡಿತಳೆ ॥ ೧ ॥ ಬೀಜಪೂರಿತ ಹೇಮಕಲಶವ । ರಾಜಮಾನ ಸುಹೇಮ-ಜಲಜವ । ನೈಜಕರದಲಿ ಪಿಡಿದುಕೊಂಡು ಭಕುತಜನತತಿಗೆ ॥ ಮಾಜದಲೆ ಸಕಲೇಷ್ಟ ನೀಡುವ । ರಾಜಮುಖಿ ಮಹದಾದಿ ವಂದ್ಯಳೆ । ಮೂಜಗತ್ತಿಗೆ ಮಾತೆ ಹರಿವಾಮಾಂಕದೊಳಗಿಪ್ಪೆ ॥ ೨ ॥ ಶ್ರೀಮಹತ್ತರಭಾಗ್ಯಮಾನಿಯೆ । ಸ್ತೌಮಿ ಲಕುಮಿಯನಾದಿ ಸರ್ವಸು । ಕಾಮಫಲಗಳನೀವ ಸಾಧನಸುಖವ ಕೊಡುತಿಪ್ಪ ॥ ಕಾಮಜನನಿಯೆ ಸ್ಮರಿಪೆ ನಿತ್ಯದಿ । ಪ್ರೇಮಪೂರ್ವಕ ಪ್ರೇರಿಸೆನ್ನನು । ಹೇ ಮಹೇಶ್ವರಿ ನಿನ್ನ

ವಚನವ ಧರಿಸಿ ಭಜಿಸುವೆನು ॥ ೩ ॥ ಸರ್ವಸಂಪದವೀವ ಲಕುಮಿಯೆ । ಸರ್ವಭಾಗ್ಯವನೀವ ದೇವಿಯೆ । ಸರ್ವಮಂಗಳವೀವ ಸುರವರಸಾರ್ವಭೌಮಿಯಳೆ ॥ ಸರ್ವಜ್ಞಾನವ-ನೀವ ಜ್ಞಾನಿಯೆ। ಸರ್ವಸುಖಫಲದಾಯಿ ಧಾತ್ರಿಯೆ । ಸರ್ವಕಾಲದಿ ಭಜಿಸಿ ಬೇಡಿದೆ ಸರ್ವಪುರುಷಾರ್ಥ ॥ ೪॥ ನತಿಪೆ ವಿಜ್ಞಾನಾದಿ ಸಂಪದ । ಮತಿಯ ನಿರ್ಮಲ ಚಿತ್ರವಾಕ್ಪದ ॥ ತತಿಯ ನೀಡುವದ್ಯನಗೆ ಸರ್ವದ ಸರ್ವಗುಣಪೂರ್ಣೆ ॥ ನತಿಪ ಜನರಿಗನಂತ ಸೌಖ್ಯವ । ನತಿಶಯದಿ ನೀನಿತ್ತ ವಾರ್ತೆಯು। ವಿತತವಾಗಿಹದೆಂದು ಬೇಡಿದೆ ಭಕ್ತವತ್ಸಲಳೆ ॥ ೫ ॥ ಸರ್ವಜೀವರ ಹೃದಯವಾಸಿನಿ । ಸರ್ವಸಾರಸುಭ ೯ಕ್ತಿ ಸರ್ವದ । ಸರ್ವವಿಶ್ವದಲಂತರಾತ್ಮಕೆ ವ್ಯಾಪ್ತೆ ನಿರ್ಲಿಪ್ತೆ ॥ ಸರ್ವವಸ್ತು ಸಮೂಹದೊಳಗೆ। ಸರ್ವಕಾಲದಿ ನಿನ್ನ ಸಹಿತದಿ । ಸರ್ವಗುಣ ಸಂಪೂರ್ಣ ಶ್ರೀಹರಿ ತಾನೆ ಇರುತಿಪ್ಪ ॥೬॥ ತರಿಯೇ ನೀ ದಾರಿದ್ರ ಶೋಕವ । ಪರಿಯೆ ನೀನಜ್ಞಾನ ತಿಮಿರವ । ಇರಸು ತ್ವತ್ಪದಪದ್ಮ ಮನ್ಮನೊಸರಸಿ ಮಧ್ಯದಲಿ ॥ ಚರರ ಮನಸಿನ ದುಃಖಭಂಜನ । ಪರಮಕಾರಣವೆನಿಪ ನಿನ್ನಯ । ಕರುಣಪೂರ್ಣಕಟಾಕ್ಷದಿಂದಭಿಷೇಕ ನೀ ಮಾಡೆ ॥೭॥ ಅಂಬ ಎನಗೆ ಪ್ರಸನ್ನಳಾಗೀ । ತುಂಬಿ ಸೂಸುವ ಪರಮಕರುಣಾ । ವೆಂಬ ಪೀಯುಷಕಣದಿ ತುಂಬಿದ ದೃಷ್ಟಿ ತುದಿಯಿಂದ ॥ ಅಂಬುಜಾಕ್ಷಿಯೆ ನೋಡಿ ಎನ ಮನಿ । ತುಂಬಿಸೀಗಲೆ ಧಾನ್ಯಧನಗಳ । ಹಂಬಲಿಸುವೆನು ಪಾದಪಂಕಜ ನಮಿಪೆನನವರತ ॥ ೮ ॥ ಶಾಂತಿನಾಮಕೆ ಶರಣಪಾಲಕೆ । ಕಾಂತಿನಾಮಕೆ ಗುಣಗಣಾಶ್ರಯೆ । ಕ್ಷಾಂತಿನಾಮಕೆ ದುರಿತನಾಶಿನಿ ಧಾತ್ರಿ ನಮಿಸುವೆನು ॥ ಭ್ರಾಂತಿನಾಶನಿ ಭವದ ಶ್ರಮದಿಂ। ಶ್ರಾಂತನಾದೆನು ಭವದಿ ಎನಗೆ ನಿ । ಶಾಂತ ಧನನಿಧಿಧಾನ್ಯಕೋಶವನಿತ್ತು ಸಲಹುವದು ॥ ೯ ॥ ಜಯತು ಲಕ್ಷ್ಮೀ ಲಕ್ಷಣಾಂಗಿಯೆ । ಜಯತು ಪದ್ಮಾ ಪದ್ಮವಂದ್ಯಳೆ। ಜಯತು ವಿದ್ಯಾನಾಮೆ ನಮೋ ನಮೋ ವಿಷ್ಣುವಾಮಾಂಕೆ॥ ಜಯಪ್ರದಾಯಕೆ ಜಗದಿ ವಂದ್ಯಳೆ । ಜಯತು ಜಯ ಚನ್ನಾಗಿ ಸಂಪದ । ಜಯವೆ ಪಾಲಿಸು ಎನಗೆ ಸರ್ವದ ನಮಿಪೆನನವರತ ॥ ೧೦ ॥ ಜಯತು ದೇವೀ ದೇವಪೂಜ್ಯಳೆ । ಜಯತು ಭಾರ್ಗವಿ ಭದ್ರರೂಪಳೆ । ಜಯತು ನಿರ್ಮಲಜ್ಞಾನವೇದ್ಯಳೆ ಜಯತು ಜಯ ದೇವಿ ॥ ಜಯತು ಸತ್ಯಾಭೂತಿಸಂಸ್ಥಿತೆ । ಜಯತು ರಮ್ಯಾ ರಮಣ ಸಂಸ್ಥಿತೆ । ಜಯತು ಸರ್ವಸುರತ್ನನಿಧಿಯೊಳಗಿಪ್ಪೆ ನಿತ್ಯದಲಿ ॥ ೧೧ ॥ ಜಯತು ಶುದ್ಧಾ ಕನಕಭಾಸಳೆ । ಜಯತು ಕಾಂತಾ ಕಾಂತಿಗಾತ್ರಳೆ । ಜಯತು ಜಯ ಶುಭ ಶಾಂತೆ ಶೀಘ್ರದೆ ಸೌಮ್ಯಗುಣರಮ್ಯೆ ॥ ಜಯತು ಜಯಗಳ ದಾಯಿ ಸರ್ವದ । ಜಯವೆ ಪಾಲಿಸು ಸರ್ವಕಾಲದಿ । ಜಯತು ಜಯ ಜಯ ದೇವಿ ನಿನ್ನನು ವಿಜಯ ಬೇಡಿದೆನು ॥ ೧೨ ॥ ಆವ ನಿನ್ನಯ ಕಳೆಗಳಿಂದಲಿ । ಆ ವಿರಿಂಚಿಯು ರುದ್ರ ಸುರಪತಿ । ದೇವವರಮುಖಜೀವರೆಲ್ಲರು ಸರ್ವಕಾಲದಲಿ ॥ ಜೀವಧಾರಣೆ ಮಾಡೊರಲ್ಲದೆ । ಆವ ಶಕ್ತಿಯು ಕಾಣೆನವರಿಗೆ । ದೇವಿ ನೀ ಪ್ರಭು ನಿನ್ನ ಶಕ್ತಿಲಿ ಶಕ್ತರೆನಿಸುವರು ॥ ೧೩ ॥ ಆಯು ಮೊದಲಾಗಿಪ್ಪ ಪರಮಾ -। ದಾಯ ಸೃಷ್ಟಿಸುಪಾಲನಾದಿ ಸ್ವ - । ಕೀಯ ಕರ್ಮವ ಮಾಡಿಸುವಿ ನಿನಗಾರು ಸರಿಯುಂಟೆ ॥ ತೋಯಜಾಲಯೆ ಲೋಕನಾಥಳೆ। ತಾಯಿ ಎನ್ನನು ಪೊರೆಯೆ ಎಂದು । ಬಾಯಿ ಬಿಡುವೆನು ನೋಕನೀಯನ ಜಾಯೆ ಮಾಂ ಪಾಹಿ ॥೧೪॥ ಬೊಮ್ಮ ಎನ್ನಯ ಫಣೆಯ ಫಲಕದಿ । ಹಮ್ಮಿನಿಂದಲಿ ಬರೆದ ಲಿಪಿಯನು । ಅಮ್ಮ

ಅದನನು ತೊಡೆದು ನೀ ಬರಿ ಬ್ಯಾರೆ ವಿಧದಿಂದ ॥ ರಮ್ಯವಾಗಿಹ ನಿನ್ನ ಕರುಣಾ -। ಹರ್ಮ್ಯದೊಳಗಿರುತಿಪ್ಪ ಭಾಗ್ಯವ । ಘಮ್ಮನೇ ದೊರೆವಂತೆ ಈ ಪರಿ ನಿರ್ಮಿಸೋತ್ತಮಳೆ ॥ ೧೫॥ ಕನಕಮುದ್ರಿಕೆ ಪೂರ್ಣಕಲಶವ । ಎನಗೆ ಅರ್ಪಿಸು ಜನುಮ ಜನುಮದಿ । ಜನನಿ ಭಾಗ್ಯದಭಿಮಾನಿ ನಿನಗಭಿ ನಮಿಸಿ ಬಿನ್ನೈಪೆ ॥ ಕನಸಿಲಾದರು ಭಾಗ್ಯಹೀನನು । ಎನಿಸಬಾರದು ಎನ್ನ ಲೋಕದಿ । ಎನಿಸು ಭಾಗ್ಯದ ನಿಧಿಯು ಪರಿಪರಿ ಉಣಿಸು ಸುಖಫಲವಾ ॥ ೧೬ ॥ ದೇವಿ ನಿನ್ನಯ ಕಳೆಗಳಿಂದಲಿ । ಜೀವಿಸುವದೀ ಜಗವು ನಿತ್ಯದಿ । ಭಾವಿಸೀಪರಿ ಎನಗೆ ಸಂತತ ನಿಖಿಳ ಸಂಪದವ ॥ ದೇವಿ ರಮ್ಯಮುಖಾರವಿಂದಳೆ । ನೀ ವಲಿದು ಸೌಭಾಗ್ಯ ಪಾಲಿಸು । ಸೇವಕಾಧಮನೆಂದು ಬ್ಯಾಗನೆ ಒಲಿಯೇ ನೀ ಎನಗೆ ॥ ೧೭ ॥ ಹರಿಯ ಹೃದಯದಿ ನೀನೆ ನಿತ್ಯದಿ । ಇರುವ ತೆರದಲಿ ನಿನ್ನ ಕಳೆಗಳು । ಇರಲಿ ಎನ್ನಯ ಹೃದಯ ಸದನದಿ ಸರ್ವಕಾಲದಲಿ॥ ನಿರುತ ನಿನ್ನಯ ಭಾಗ್ಯ ಕಳೆಗಳು । ಬೆರೆತು ಸುಖಗಳ ಸಲಿಸಿ ಸಲಹಲಿ । ಶಿರಿಯೆ ಶ್ರೀಹರಿ-ರಾಣಿ ಸರಸಿಜನಯನೆ ಕಲ್ಯಾಣಿ ॥ ೧೮ ॥ ಸರ್ವಸೌಖ್ಯಪ್ರದಾಯಿ ದೇವಿಯೆ। ಸರ್ವಭಕ್ತರಿಗಭಯ ದಾಯಿಯೆ । ಸರ್ವಕಾಲದಲಚಲಕಳೆಗಳ ನೀಡು ಎನ್ನಲ್ಲಿ ॥ ಸರ್ವಜಗದೊಳು ನನ್ನ ನಿನ್ನಯ। ಸರ್ವಸುಕಳಾಪೂರ್ಣನೆನಿಸೀ । ಸರ್ವವಿಭವದಿ ಮೆರೆಸು ಸಂತತ ವಿಘ್ನವಿಲ್ಲದಲೆ ॥ ೧೯ ॥ ಮುದದಿ ಎನ್ನಯ ಫಾಲದಲಿ ಸಿರಿ । ಪದುಮೆ ನಿನ್ನಯ ಪರಮ ಕಳೆಯೂ । ವದಗಿ ಸರ್ವದ ಇರಲಿ ಶ್ರೀವೈಕುಂಠಗತಲಕ್ಷ್ಮಿ॥ ಉದಯವಾಗಲಿ ನೇತ್ರಯುಗಳದಿ । ಸದಯ ಮೂರ್ತಿಯೆ ಸತ್ಯಲೋಕದ । ಚದುರೆ ಲಕುಮಿಯೆ ಕಳೆಯು ವಾಕ್ಯದಿ ನಿಲಿಸಲನವರತ ॥ ೨೦॥ ಶ್ವೇತದಿವಿಯೊಳಗಿರುವ ಲಕುಮಿಯೆ । ನೀತವಾಗಿಹ ಕಳೆಯು ನಿತ್ಯದಿ । ಮಾತೆ ಎನ್ನಯ ಕರದಿ ಸಂತತ ವಾಸವಾಗಿರಲಿ ॥ ಪಾಥೊನಿಧಿಯೊಳಗಿಪ್ಪ ಲಕುಮಿಯೆ । ಜಾತಕಳೆಯು ಮಮಾಂಗದಲಿ ಸಂ -। ಪ್ರೀತಿಪೂರ್ವಕವಿರಲಿ ಸರ್ವದ ಪಾಹಿ ಮಾಂ ಪಾಹಿ ॥ ೨೧ ॥ ಇಂದುಸೂರ್ಯರು ಎಲ್ಲಿತನಕಾ । ಕುಂದದಲೆ ಇರುವರೋ ಶಿರಿ । ಇಂದಿರೇಶನು ಯಾವ ಕಾಲದ ತನಕ ಇರುತಿಪ್ಪ । ಇಂದಿರಾತ್ಮಕ ಕಳೆಯ ರೂಪಗ- । ಳಂದಿನದ ಪರಿಯಂತರಿಪ್ಪವು । ಕುಂದುಯಿಲ್ಲದೆ ಎನ್ನ ಬಳಿಯಲೆ ತಾವೆ ನೆಲಸಿರಲಿ ॥ ೨೨ ॥ ಸರ್ವಮಂಗಳೆ ಸುಗುಣ ಪೂರ್ಣಳೆ। ಸರ್ವದೈಶ್ವರ್ಯಾದಿ ಮಂಡಿತೆ । ಸರ್ವದೇವಗಣಾಭಿವಂದ್ಯಳೆ ಆದಿ ಮಹಲಕ್ಷ್ಮೀ ॥ ಸರ್ವಕಳೆಸಂಪೂರ್ಣೆ ನಿನ್ನಯ । ಸರ್ವಕಳೆಗಳು ಎನ್ನ ಹೃದಯದಿ । ಸರ್ವಕಾಲದಲಿರಲಿ ಎಂದು ನಿನ್ನ ಪ್ರಾರ್ಥಿಸುವೆ ॥ ೨೩ ॥ ಜನನಿ ಎನ್ನಜ್ಞಾನತಿಮಿರವ । ದಿನದಿನದಿ ಸಂಹರಿಸಿ ನಿನ್ನದು । ನೆನಿಸಿ ಧ್ಯಾನವ ಮಾಳ್ಪ ನಿರ್ಮಲಜ್ಞಾನ ಸಂಪದವ ॥ ಕನಕಮಣಿಧನಧಾನ್ಯಬಾಗ್ಯವ । ತನಿತು ನೀ ಎನಗಿತ್ತು ಪಾಲಿಸು । ಮಿನುಗುತಿಹ ಘನವಾದ ನಿನ್ನಯ ಕಳೆಯು ಶೋಭಿಸಲಿ ॥ ೨೪ ॥ ನಿರುತ ತಮತತಿಹರಿಪ ಸೂರ್ಯನ । ತೆರದಿ ಕ್ಷಿಪ್ರದಿ ಹರಿಸಲಕ್ಷ್ಮಿಯ । ಸರಕು ಮಾಡದೆ ತರಿದು ಓಡಿಸು ದುರಿತರಾಶಿಗಳ ॥ ಪರಿಪರಿಯ ಸೌಭಾಗ್ಯ ನಿಧಿಯನು । ಹರುಷದಿಂದಲಿ ನೀಡಿ ಎನ್ನನು । ಧರಧರದಿ ಕೃತಕೃತ್ಯನಿಳಿಯೊಳಗೆನಿಸು ದಯದಿಂದ ॥ ೨೫ ॥ ಅತುಳಮಹದೈಶ್ವರ್ಯಮಂಗಳ । ತತಿಯು ನಿನ್ನಯ ಕಳೆಗಳೊಳಗೇ । ವಿತತವಾಗಿ ವಿರಾಜಮಾನದಲಿಪ್ಪ ಕಾರಣದಿ ಶ್ರುತಿಯು ನಿನ್ನಯ ಮಹಿಮೆ ತಿಳಿಯದು । ತುತಿಸಬಲ್ಲೆನೆ

ತಾಯಿ ಪೇಳ್ವುದು । ಮತಿವಿಹೀನನು ನಿನ್ನ ಕರುಣಕೆ ಪಾತ್ರನೆನಿಸಮ್ಮ ॥ ೨೬ ॥ ನಿನ್ನ ಮಹದಾವೇಶಭಾಗ್ಯಕೆ । ಎನ್ನ ಅರ್ಹನ ಮಾಡು ಲಕುಮಿಯೆ । ಘನ್ನತರ ಸೌಭಾಗ್ಯನಿಧಿ ಸಂಪನ್ನನೆನಿಸೆನ್ನ ॥ ರನ್ನೆ ನಿನ್ನಯ ಪಾದಕಮಲವ । ಮನ್ನದಲಿ ಸಂಸ್ತುತಿಸಿ ಬೇಡುವೆ । ನಿನ್ನ ಪರತರ ಕರುಣ ಕವಚವ ತೊಡಿಸಿ ಪೊರೆಯಮ್ಮ ॥ ೨೭ ॥ ಪೂತನರನನು ಮಾಡಿ ಕಳೆಗಳ । ವ್ರಾತದಿಂದಲಿ ಎನ್ನ ನಿಷ್ಠವ । ಘಾತಿಸೀಗಲೆ ಎನಗೆ ಒಲಿದೂ ಬಂದು ಸುಳಿ ಮುಂದೆ ॥ ಮಾತೆ ಭಾರ್ಗವಿ ಕರುಣಿ ನಿನ್ನಯ । ನಾಥನಿಂದೊಡಗೂಡಿ ಸಂತತ । ಪ್ರೀತಳಾಗಿರು ಎನ್ನ ಮನೆಯೊಳು ನಿಲ್ಲು ನೀ ಬಿಡದೆ ॥ ೨೮ ॥ ಪರಮಶಿರಿವೈಕುಂಠಲಕುಮಿಯೆ । ಹರಿಯ ಸಹಿತದಲೆನ್ನ ಮುಂದಕೆ। ಹರುಷಬಡುತಲಿ ಬಂದು ಶೋಭಿಸು ಕಾಲ ಕಳೆಯದಲೆ ॥ ವರದೆ ನಾ ಬಾರೆಂದು ನಿನ್ನನು। ಕರೆದೆ ಮನವನು ಮುಟ್ಟಿ ಭಕುತಿಯ । ಭರದಿ ಬಾಗಿದ ಶಿರದಿ ನಮಿಸುವೆ ಕೃಪೆಯ ಮಾಡೆಂದು ॥೨೯॥ ಸತ್ಯಲೋಕದ ಲಕುಮಿ ನಿನ್ನಯ । ಸತ್ಯಸನ್ನಿಧಿಯೆನ್ನ ಮನೆಯಲಿ। ನಿತ್ಯ ನಿತ್ಯದಿ ಪೆರ್ಚಿ ಹಬ್ಬಲಿ ಜಗದಿ ಜನತತಿಗೆ ॥ ಅತ್ಯಧಿಕ ಆಶ್ಚರ್ಯ ತೋರಿಸಿ । ಮರ್ತ್ಯರೋತ್ತಮನೆನಿಸಿ ನೀ ಕೃತ । ಕೃತ್ಯನೀಪರಿ ಮಾಡಿ ಶಿರಿ ಹರಿಗೂಡಿ ನಲಿದಾಡೆ ॥ ೩೦ ॥ ಕ್ಷೀರವಾರಿಧಿ ಲಕುಮಿಯೇ ಪತಿ । ನಾರಸಿಂಹನ ಕೂಡಿ ಬರುವುದು । ದೂರ ನೋಡದೆ ಸಾರೆಗರೆದು ಪ್ರಸಾದ ಕೊಡು ಎನಗೆ ॥ ವಾರಿಜಾಕ್ಷಿಯೆ ನಿನ್ನ ಕರುಣಾ । ಸಾರಪೂರ್ಣ-ಕಟಾಕ್ಷದಿಂದಲಿ । ಬಾರಿಬಾರಿಗೆ ನೋಡಿ ಪಾಲಿಸು ಪರಮ ಪಾವನ್ನೆ ॥ ೩೧ ॥ ಶ್ವೇತದ್ವೀಪದ ಲಕುಮಿ ತ್ರಿಜಗ -। ನ್ಮಾತೆ ನೀ ಎನಮುಂದೆ ಶೀಘ್ರದಿ । ನಾಥನಿಂದೊಡಗೂಡಿ ಬಾರೆ ಪ್ರಸನ್ನ ಮುಖಕಮಲೆ ॥ ಜಾತರೂಪ ಸುತೇಜರೂಪಳೆ। ಮಾತರಿಶ್ವಮುಖಾರ್ಚಿತಾಂಘ್ರಿಯೆ । ಜಾತರೂಪೋದರಾಂಡ ಸಂಘಕೆ ಮಾತೆ ಪ್ರಖ್ಯಾತೆ ॥ ೩೨ ॥ ರತ್ನಗರ್ಭನ ಪುತ್ರಿ ಲಕುಮಿಯೆ । ರತ್ನಪೂರಿತ ಭಾಂಡನಿಚಯವ । ಯತ್ನಪೂರ್ವಕ ತಂದು ಎನ್ನಯ ಮುಂದೆ ನೀ ನಿಲ್ಲು ॥ ರತ್ನಖಚಿತ ಸುವರ್ಣಮಾಲೆಯ। ರತ್ನಪದಕದ ಹಾರ ಸಮುದಯ । ಜತ್ನದಿಂದಲಿ ನೀಡಿ ಸರ್ವದ ಪಾಹಿ ಪರಮಾಪ್ತೆ ॥ ೩೩ ॥ ಎನ್ನ ಮನಿಯಲಿ ಸ್ಥೈರ್ಯದಿಂದಲಿ । ಇನ್ನು ನಿಶ್ಚಲಳಾಗಿ ನಿಂತಿರು । ಉನ್ನತಾದ್ಯೈಶ್ವರ್ಯ ವೃದ್ಧಿಯಗೈಸು ನಿರ್ಮಲಳೆ॥ ಸನ್ನುತಾಂಗಿಯೆ ನಿನ್ನ ತುತಿಪೆ ಪ್ರ-। ಸನ್ನ ಹೃದಯದಿ ನಿತ್ಯ ನೀ ಪ್ರಹ -। ಸನ್ಮುಖಿದಿ ಮಾತಾಡು ವರಗಳ ನೀಡು ನಲಿದಾಡು ॥ ೩೪॥ ಶಿರಿಯೆ ಶಿರಿ ಮಹಭೂತಿದಾಯಕೆ। ಪರಮೆ ನಿನ್ನೊಳಗಿಪ್ಪ ಸುಮಹ -। ತ್ತರ ನವಾತ್ಮಕ ನಿಧಿಗಳೂರ್ಧ್ವಕೆ ತಂದು ಕರುಣದಲಿ ॥ ಕರದಿ ಪಿಡಿದದನೆತ್ತಿ ತೋರಿಸಿ। ತ್ವರದೀ ನೀ ಯೆನಗಿತ್ತು ಪಾಲಿಸು । ಧರಣಿರೂಪಳೆ ನಿನ್ನ ಚರಣಕೆ ಶರಣು ನಾ ಮಾಳ್ಪೆ ॥ ೩೫ ॥ ವಸುಧೆ ನಿನ್ನೊಳಗಿಪ್ಪ ವಸುವನು । ವಶವ ಮಾಳ್ಪುದು ಎನಗೆ ಸರ್ವದ । ವಸುಸುದೋಗ್ಧ್ರಿಯು ಎಂಬ ನಾಮವು ನಿನಗೆ ಇರುತಿಹದು ॥ ಅಸಮಮಹಿಮಳೆ ನಿನ್ನ ಶುಭತಮ । ಬಸುರಿನೊಳಗಿರುತಿಪ್ಪ ನಿಧಿಯನು । ಬೆಸೆಸು ಈಗಲೇ ಹಸಿದು ಬಂದಗೆ ಅಶನವಿತ್ತಂತೆ ॥ ೩೬ ॥ ಹರಿಯ ರಾಣಿಯೆ ರತ್ನಗರ್ಭಳೆ । ಸರಿಯು ಯಾರೀ ಸುರರ ಸ್ತೋಮದಿ । ಸರಸಿಜಾಕ್ಷಿಯೆ ನಿನ್ನ ಬಸಿರೊಳಗಿರುವ ನವನಿಧಿಯ ॥ ಮೆರೆವ ಹೇಮದ ಗಿರಿಯ ತೆರದಲಿ । ತೆರೆದು ತೋರಿಸಿ ಸಲಿಸು ಎನಗೆ । ಪರಮಕರುಣಾಶಾಲಿ ನಮೋ ನಮೋ ಎಂದು ಮೊರೆ ಪೊಕ್ಕೆ ॥ ೩೭ ॥ ರಸತಳದ ಶಿರಿ ಲಕುಮಿ ದೇವಿಯೆ । ಶಶಿಸಹೋದರಿ

ಶೀಘ್ರದಿಂದಲಿ । ಅಸಮ ನಿನ್ನಯ ರೂಪ ತೋರಿಸು ಎನ್ನ ಪುರದಲ್ಲಿ ॥ ಕುಸುಮಗಂಧಿಯೆ ನಿನ್ನನರಿಯೆನು। ವಸುಮತೀ ತಳದಲ್ಲಿ ಬಹುಪರಿ । ಪೊಸತು ಎನಿಪುದು ನಿನ್ನ ಒಲುಮೆಯು ಸಕಲ ಜನತತಿಗೆ ॥ ೩೮ ॥ ನಾಗವೇಣಿಯೆ ಲಕುಮಿ ನೀ ಮನೊ -। ವೇಗದಿಂದಲಿ ಬಂದು ಎನ್ನಯ । ಜಾಗು ಮಾಡದೆ ಶಿರದಿ ಹಸ್ತವನಿಟ್ಟು ಮುದದಿಂದ ॥ ನೀಗಿಸೀ ದಾರಿದ್ರ ದುಃಖವ। ಸಾಗಿಸೀ ಭವಭಾರಪರ್ವತ । ತೂಗಿಸೂ ನೀ ಯನ್ನ ಸದನದಿ ಕನಕಭಾರಗಳಾ ॥ ೩೯ ॥ ಅಂಜಬೇಡವೊ ವತ್ಸ ಎನುತಲಿ । ಮಂಜುಳೋಕ್ತಿಯ ನುಡಿದು ಕರುಣಾ । ಪುಂಜ ಮನದಲಿ ಬಂದು ಶೀಘ್ರದಿ ಕಾರ್ಯ ಮಾಡುವುದು । ಕಂಜಲೋಚನೆ ಕಾಮಧೇನು ಸು -। ರಂಜಿಪಾಮರತರುವು ಎನಿಸುವಿ । ಸಂಜಯಪ್ರದಳಾಗಿ ಸಂತತ ಪಾಹಿ ಮಾಂ ಪಾಹಿ ॥ ೪೦ ॥ ದೇವಿ ಶೀಘ್ರದಿ ಬಂದು ಭೂಮೀ- । ದೇವಿಸಂಭವೆ ಎನ್ನ ಜನನಿಯೆ । ಕಾಮನಯ್ಯನ ರಾಣಿ ನಿನ್ನಯ ಭೃತ್ಯ ನಾನೆಂದು ॥ ಭಾವಿಸೀಪರಿ ನಿನ್ನ ಪುಡಕಿದೆ । ಸೇವೆ ನೀ ಕೈಕೊಂಡು ಮನ್ಮನೊ। ಭಾವಪೂರ್ತಿಸಿ ಕರುಣಿಸೆನ್ನನು ಶರಣು ಶರಣೆಂಬೆ ॥ ೪೧ ॥ ಜಾಗರೂಕದಿ ನಿಂತು ಮತ್ತೇ । ಜಾಗರೂಕದಿ ಎನಗೆ ನಿತ್ಯದಿ। ತ್ಯಾಗಭೋಗಕೆ ಯೋಗ್ಯವೆನಿಪಾಕ್ಷಯ್ಯ ಹೇಮಮಯ ॥ ಪೂಗಕನಕ ಸಂಪೂರ್ಣಘಟಗಳ । ಯೋಗಮಾಳ್ಪುದು ಲೋಕಜನನೀ । ಈಗ ಎನ್ನಯ ಭಾರ ನಿನ್ನದು ಕರೆದು ಕೈಪಿಡಿಯೆ ॥ ೪೨ ॥ ಧರಣಿಗತ ನಿಕ್ಷೇಪಗಳನು । ದ್ಧರಿಸಿ ನೀ ಎನ ಮುಂದೆ ಸೇರಿಸಿ । ಕಿರಿಯ ನಗೆಮೊಗದಿಂದ ನೋಡುತ ನೀಡು ನವನಿಧಿಯ ॥ ಸ್ಥಿರದಿ ಎನ ಮಂದಿರದಿ ನಿಂತೂ । ಪರಮಂಗಳ ಕಾರ್ಯ ಮಾಡಿಸು । ಶಿರಿಯೆ ನೀನೇ ಒಲಿದು ಪಾಲಿಸು ಮೋಕ್ಷ ಸುಖ ಕೊನಿಗೆ ॥ ೪೩ ॥ ನಿಲ್ಲೆ ಲಕುಮಿ ಸ್ಥೈರ್ಯಭಾವದಿ। ನಿಲ್ಲು ರತ್ನಹಿರಣ್ಯ ರೂಪಳೆ । ಎಲ್ಲ ವರಗಳನಿತ್ತು ಎನಗೆ ಪ್ರಸನ್ನ ಮುಖಳಾಗು ॥ ಎಲ್ಲು ಇರುತಿಹ ಕನಕ ನಿಧಿಗಳ । ನೆಲ್ಲನೂ ನೀ ತಂದು ನೀಡ್ವುದೈ । ಫುಲ್ಲಲೋಚನೆ ತೋರಿ ನಿಧಿಗಳ ತಂದು ಪೊರೆಯಮ್ಮ ॥ ೪೪ ॥ ಇಂದ್ರಲೋಕದಲಿದ್ದ ತೆರದಲಿ । ನಿಂದ್ರು ಎನ್ನಯ ಗೃಹದಿ ನಿತ್ಯದಿ । ಚಂದ್ರವದನೆಯೆ ಲಕುಮಿ ದೇವಿ ನೀಡೆ ಎನಗಭಯ॥ನಿಂದ್ರಲಾರೆನು ರುಣದ ಬಾಧೆಗೆ। ತಂದ್ರಮತಿ ನಾನಾದೆ ಭವದೊಳು-। ಪೇಂದ್ರವಲ್ಲಭೆ ಅಭಯ ಪಾಲಿಸು ನಮಿಪೆ ಮಜ್ಜನನಿ ॥ ೪೫ ॥ ಬದ್ಧ ಸ್ನೇಹ ವಿರಾಜಮಾನಳೆ। ಶುದ್ಧ ಜಾಂಬೂನದದಿ ಸಂಸ್ಥಿತೆ । ಮುದ್ದು ಮೋಹನಮೂರ್ತಿ ಕರುಣದಿ ನೋಡೆ ನೀ ಎನ್ನ ॥ ಬಿದ್ದೆ ನಾ ನಿನ ಪಾದಪದುಮಕೆ । ಉದ್ಧರಿಪುದೆಂದು ಬೇಡಿದೆನನಿ - । ರುದ್ಧರಾಣಿ ಕೃಪಾಕಟಾಕ್ಷದಿ ನೋಡೆ ಮಾತಾಡೆ ॥೪೬॥ ಭೂಮಿಗತ ಶಿರಿದೇವಿ ಶೋಭಿತೆ । ಹೇಮಮಯೆ ಎಲ್ಲೆಲ್ಲಿ ಇರುತಿಹೆ। ತಾಮರಸ ಸಂಭೂತೆ ನಿನ್ನಯ ರೂಪ ತೋರೆನಗೆ ॥ ಭೂಮಿಯಲಿ ಬಹುರೂಪದಿಂದಲಿ । ಪ್ರೇಮಪೂರ್ವಕ ಕ್ರೀಡೆಗೈಯುತ । ಹೇಮಮಯ ಪರಿಪೂರ್ಣ ಹಸ್ತವ ಶಿರದ ಮೇಲಿರಿಸು ॥ ೪೭ ॥ ಫಲಗಳೀವ ಸುಭಾಗ್ಯ ಲಕುಮಿಯೆ । ಲಲಿತ ಸರ್ವ ಪುರಾಧಿವಾಸಿಯೆ । ಕಲುಷಶೂನ್ಯಳೆ ಲಕುಮಿದೇವಿಯೆ ಪೂರ್ಣ ಮಾಡೆನ್ನ ॥ ಕುಲಜೆ ಕುಂಕುಮಶೋಭಿಫಾಲಳೆ । ಚಲಿತಕುಂಡಲಕರ್ಣಭೂಷಿತೆ । ಜಲಜಲೋಚನೆ ಜಾಗ್ರಕಾಲದಿ ಸಲಿಸು ಎನಗಿಷ್ಟ ॥ ೪೮ ॥ ತಾಯಿ ಛಂದದಲಂದಯೋಧ್ಯದಿ । ದಯದಿ ನೀನೇ ನಿಂತು ಪಟ್ಟಣ । ಭಯವ ಓಡಿಸಿ ಜಾಗು ಮಾಡದೆ ಮತ್ತೆ ಮುದದಿಂದ ॥ ಜಯವ ನೀಡಿದ ತೆರದಿ ಎನ್ನಾ । ಲಯದಿ ಪ್ರೇಮದಿ ಬಂದು

ಕೊಡ್ಡುದು । ಜಯಪ್ರದಾಯಿನಿ ವಿವಿಧ ವೈಭವದಿಂದ ಒಡಗೂಡಿ ॥ ೪೯ ॥ ಬಾರೆ ಲಕುಮೀ ಎನ್ನ ಸದನಕೆ । ಸಾರಿದೆನು ತವಪಾದ ಪದುಮಕೆ । ತೋರಿ ಯೆನ್ನಯ ಗೃಹದಿ ನೀನೆ ಸ್ಥಿರದಿ ನೆಲೆಸಿದ್ದು ॥ ಸಾರಕರುಣಾರಸವು ತುಂಬಿದ । ಚಾರು ಜಲರುಹನೇತ್ರಯುಗ್ಮಳೆ । ಪಾರುಗಾಣಿಸು ಪರಮ ಕರುಣಿಯೆ ರಿಕ್ತತನದಿಂದ ॥ ೫೦ ॥ ಶಿರಿಯೆ ನಿನ್ನಯ ಹಸ್ತಕಮಲವ । ಶಿರದಿ ನೀನೇ ಇರಿಸಿ ಎನ್ನನು । ಕರುಣವೆಂಬಾಮೃತದ ಕಣದಲಿ ಸ್ನಾನ ಗೈಸಿನ್ನು ॥ ಸ್ಥಿರದಿ ಸ್ಥಿತಿಯನು ಮಾಡು ಸರ್ವದ । ಸರ್ವರಾಜ ಗೃಹಸ್ಥ ಲಕುಮಿಯೆ । ತ್ವರದಿ ಮೋದದಿ ಯುಕ್ತಳಾಗಿರು ಎನ್ನ ಮುಂದಿನ್ನು ॥ ೫೧ ॥ ನೀನೆ ಆಶೀರ್ವದಿಸಿ ಅಭಯವ । ನೀನೆ ಎನಗೇ ಇತ್ತು ಸಾದರ । ನೀನೆ ಎನ ಶಿರದಲ್ಲಿ ಹಸ್ತವನಿರಿಸು ಕರುಣದಲಿ ॥ ನೀನೆ ರಾಜರ ಗೃಹದ ಲಕ್ಷ್ಮಿಯು । ನೀನೆ ಸರ್ವ ಸುಭಾಗ್ಯ ಲಕ್ಷ್ಮಿಯು । ಹೀನವಾಗದೆ ನಿನ್ನ ಕಳೆಗಳ ವೃದ್ಧಿ ಮಾಡಿನ್ನು ॥ ೫೨ ॥ ಆದಿಸಿರಿ ಮಹಲಕುಮಿ ವಿಷ್ಣುನ ಮೋದಮಯವಾಮಾಂಕ ನಿನಗನು । ವಾದ ಸ್ವ ಸ್ಥಳವೆಂದು ತಿಳಿದು ನೀನೆ ನೆಲೆಸಿದ್ದಿ ॥ ಆದಿದೇವಿಯೆ ನಿನ್ನ ರೂಪವ । ಮೋದದಿಂದಲಿ ತೋರಿ ಎನ್ನೊಳು । ಕ್ರೋಧವಿಲ್ಲದೆ ನಿತ್ಯ ಎನ್ನನು ಪೊರಿಯೆ ಕರುಣದಲಿ ॥ ೫೩॥ ಒಲಿಯೆ ನೀ ಮಹಲಕುಮಿ ಬೇಗನೆ । ಒಲಿಯೆ ಮಂಗಳಮೂರ್ತಿ ಸರ್ವದ । ನಲಿಯೆ ಚಲಿಸದೆ ಹೃದಯ ಮಂದಿರದಲ್ಲಿ ನೀ ನಿರುತ ॥ ಲಲಿತವೇದಗಳೆಲ್ಲಿತನಕಾ । ತಿಳಿದು ಹರಿಗುಣ ಪಾಡುತಿಪ್ಪವೋ । ಜಲಜಲೋಚನ ವಿಷ್ಣು ನಿನ್ನೊಳು ಅಲ್ಲಿ ನೀನಿಪ್ಪೆ ॥ ೫೪ ॥ ಅಲ್ಲಿ ಪರ್ಯಂತರದಿ ನಿನ್ನಯ । ಎಲ್ಲ ಕಳೆಗಳು ಎನ್ನ ಮನಿಯಲಿ । ನಿಲ್ಲಿಸೀ ಸುಖವ್ರಾತ ನೀಡುತ ಸರ್ವಕಾಲದಲಿ ॥ ಎಲ್ಲ ಜನಕಾಹ್ಲಾದ ಚಂದಿರ । ಕುಲ್ಲದೇ ಶುಭಪಕ್ಷ ದಿನದೊಳು । ನಿಲ್ಲದಲೆ ಕಳೆವೃದ್ಧಿ ಎಯ್ದುವ ತೆರದಿ ಮಾಡೆನ್ನ ॥೫೫॥ ಶಿರಿಯೆ ನೀ ವೈಕುಂಠ ಲೋಕದಿ । ಶಿರಿಯೆ ನೀ ಪಾಲ್ಗಡಲ ಮಧ್ಯದಿ । ಇರುವ ತೆರದಲಿ ಎನ್ನ ಮನಿಯೊಳು ವಿಷ್ಣು ಸಹಿತಾಗಿ ॥ ನಿರುತ ಜ್ಞಾನಿಯ ಹೃದಯ ಮಧ್ಯದಿ । ಮಿರುಗುವಂದದಲೆನ್ನ ಸದನದಿ । ಹರಿಯ ಸಹಿತದಿ ನಿತ್ಯ ರಾಜಿಸು ನೀಡಿ ಕಾಮಿತವ ॥ ೫೬ ॥ ಶ್ರೀನಿವಾಸನ ಹೃದಯಕಮಲದಿ । ನೀನೆ ನಿಂತಿರುವಂತೆ ಸರ್ವದ । ಆ ನರಾಯಣ ನಿನ್ನ ಹೃದಯದಿ ಇರುವ ತೆರದಂತೆ ॥ ನೀನು ನಾರಾಯಣನು ಇಬ್ಬರು । ಸಾನುರಾಗದಿ ಎನ್ನ ಮನದೊಳು । ನ್ಯೂನವಾಗದೆ ನಿಂತು ಮನೊರಥ ಸಲಿಸಿ ಪೊರೆಯೆಂದೆ ॥ ೫೭ ॥ ವಿಮಲತರ ವಿಜ್ಞಾನ ವೃದ್ಧಿಯ । ಕಮಲೆ ಎನ್ನಯ ಮನದಿ ಮಾಳ್ಪುದು । ಅಮಿತ ಸುಖ ಸೌಭಾಗ್ಯ ವೃದ್ಧಿಯ ಮಾಡು ಮಂದಿರದಿ ॥ ರಮೆಯೆ ನಿನ್ನಯ ಕರುಣ ವೃದ್ಧಿಯ । ಸಮನದಿಂದಲಿ ಮಾಡು ಎನ್ನಲಿ । ಅಮರಪಾದಪೆ ಸ್ವರ್ಣವೃಷ್ಟಿಯ ಮಾಡು ಮಂದಿರದಿ ॥ ೫೮ ॥ ಎನ್ನ ತೆಜನವ ಮಾಡದಿರು ಸುರ । ರನ್ನೆ ಆಶ್ರಿತ ಕಲ್ಪಭೂಜಳೆ । ಮುನ್ನ ಭಕ್ತರ ಚಿಂತಾಮಣಿ ಸುರಧೇನು ನೀನಮ್ಮ ॥ ಘನ್ನ ವಿಶ್ವದ ಮಾತೆ ನೀನೆ ಪ್ರ - । ಸನ್ನಳಾಗಿರು ಎನ್ನ ಭವನದಿ । ಸನ್ನುತಾಂಗಿಯೆ ಪುತ್ರ ಮಿತ್ರ ಕಳತ್ರಜನ ನೀಡೆ ॥ ೫೯॥ ಆದಿಪ್ರಕೃತಿಯೆ ಬೊಮ್ಮನಾಂಡಕೆ । ಆದಿಸ್ಥಿತಿಲಯಬೀಜಭೂತಳೆ । ಮೋದಚಿನ್ಮಯಗಾತ್ರೆ ಪ್ರಾಕೃತದೇಹವರ್ಜಿತಳೆ ॥ ವೇದವೇದ್ಯಳೆ ಬೊಮ್ಮನಾಂಡವ । ಆದಿಕೂರ್ಮದ ರೂಪದಿಂದಲ-। ನಾದಿಕಾಲದಿ ಪೊತ್ತು ಮೆರೆವದು ಏನು ಚಿತ್ರವಿದು ॥ ೬೦ ॥ ವೇದಮೊದಲು ಸಮಸ್ತ ಸುರರು । ವೇದಸ್ತೋಮಗಳಿಂದ ನಿನ್ನಯಾ । ಗಾಧ-ಮಹಿಮವ ಪೊಗಳೆನೆಂದರೆ ಶಕ್ತರವರಲ್ಲ । ಓದುಬಾರದ ಮಂದಮತಿ ನಾ । ನಾದ

ಕಾರಣ ಶಕ್ತಿ ಇಲ್ಲವು । ಬೋಧದಾಯಕೆ ನೀನೆ ಸ್ತವನವ ಗೈಸು ಎನ್ನಿಂದ ॥ ೬೧ ॥ ಮಂದನಿಂದಲಿ ಸುಗುಣವೃಂದವ । ಛಂದದಲಿ ನೀ ನುಡಿಸಿ ಎನ್ನಯ । ಮಂದಮತಿಯನು ತರಿದು ನಿರ್ಮಲ ಜ್ಞಾನಿ ಎಂದೆನಿಸು ॥ ಇಂದಿರೆಯೆ ತವ ಪಾದಪದುಮದ । ದ್ವಂದ್ವ ಸ್ತುತಿಸುವ ಶಕುತಿಯಿತ್ತು। ಕುಂದುಬಾರದ ಕವಿತೆ ಪೇಳಿಸು ಎಂದು ವಂದಿಪೆನು ॥ ೬೨॥ ವತ್ಸನೊಚನವ ಕೇಳೆ ನೀ ಶಿರಿ । ವತ್ಸಲಾಂಛನ ವಕ್ಷಮಂದಿರೆ । ತುಚ್ಛ ಮಾಡದೆ ಮನಕೆ ತಂದೂ ನೀನೆ ಪಾಲಿಪುದು ॥ ಸ್ವಚ್ಛವಾಗಿಹ ಸಕಲ ಸಂಪದ । ಉತ್ಸಹದಿ ನೀ ನೀಡಿ ಮನ್ಮನೊ -। ಇಚ್ಛೆ ಪೂರ್ತಿಸು ಜನನಿ ಬೇಡುವೆ ನೀನೆ ಸರ್ವಜ್ಞೆ ॥ ೬೩ ॥ ನಿನ್ನ ಮೊರೆಯನು ಎಯ್ದಿಪೂರ್ವದಿ । ಧನ್ಯರಾದರು ಧರಣಿಯೊಳಗಾ । ಪನ್ನಪಾಲಕೆ ಎಂದು ನಿನ್ನನು ನಂಬಿ ಮೊರೆವೊಕ್ಕೆ । ನಿನ್ನ ಭಕುತಗನಂತ ಸೌಖ್ಯವು । ನಿನ್ನಲೇ ಪರಭಕುತಿ ಅವನಿಗೆ । ನಿನ್ನ ಕರುಣಕೆ ಪಾತ್ರನಾಗುವನೆಂದು ಶ್ರುತಿಸಿದ್ಧ ॥೬೪॥ ನಿನ್ನ ಭಕುತಗೆ ಹಾನಿ ಇಲ್ಲವು । ಬನ್ನಬಡಿಸುವರಿಲ್ಲವೆಂದಿಗು । ಮುನ್ನಭವಭಯವಿಲ್ಲವೆಂದಾ ಶ್ರುತಿಯು ಪೇಳುವುದು ॥ ಎನ್ನ ಕರುಣಾಬಲವು ಅವನಲಿ । ಘನ್ನವಾಗೀ ಇರುವುದೆಂಬಾ। ನಿನ್ನ ವಚನವ ಕೇಳಿ ಈ ಕ್ಷಣ ಪ್ರಾಣ-ಧರಿಸಿಹೆನು ॥ ೬೫ ॥ ನಾನು ನಿನ್ನಾಧೀನ ಜನನಿಯೆ । ನೀನು ಎನ್ನಲಿ ಕರುಣ ಮಾಳ್ಪುದು । ಹೀನಬಡತನ ದೋಷ ಕಳೆದೂ ನೀನೆ ನೆಲೆಸಿದ್ದೂ ॥ ಮಾನ ಮನಿ ಧನ ಧಾನ್ಯ ಭಕುತಿ । ಜ್ಞಾನ ಸುಖ ವೈರಾಗ್ಯ ಮೂರುತಿ । ಧ್ಯಾನ ಮಾನಸಪೂಜೆ ಮಾಡಿಸು ನೀನೆ ಎನ್ನಿಂದ ॥ ೬೬ ॥ ನಿನ್ನ ಅಂತಃ ಕರುಣದಿಂದಲಿ। ಮುನ್ನ ನಾನೇ ಪೂರ್ಣಕಾಮನು । ಇನ್ನು ಆಗುವೆ ಪರಮಭಕ್ತ ಕುಚೇಲನಂದದಲಿ ॥ ಬಿನ್ನೈಪೈ ತವ ಪಾದಪದ್ಮಕೆ । ಬನ್ನ ನಾ ಬಡಲಾರೆ ದೇವೀ । ಎನ್ನ ನೀ ಕರಪಿಡಿದು ಪಾಲಿಸು ರಿಕ್ತತನದಿಂದ ॥ ೬೭ ॥ ಕ್ಷಣವು ಜೀವಿಸಲಾರೆ ನಿನ್ನಯ । ಕರುಣವಿಲ್ಲದೆ ಅವನಿತಳದಲಿ । ಕ್ಷಣಿಕ ಫಲಗಳ ಬಯಸಲಾರೆನೆ ಮೋಕ್ಷ ಸುಖದಾಯಿ ॥ ಗಣನೆ ಮಾಡದೆ ನೀಚದೇವರ । ಹಣಿದು ಬಿಡುವೀ ಬಾಧೆ ಕೊಟ್ಟರೆ । ಪಣವ ಮಾಡುವೆ ನಿನ್ನ ಬಳಿಯಲಿ ಮಿಥ್ಯವೇನಿಲ್ಲ ॥ ೬೮ ॥ ತನಯನಲಿ ವಾತ್ಸಲ್ಯದಿಂದಲಿ । ಜನಿತ ಪಾಲಲಿ ತುಂಬಿ ತುಳುಕುವ। ಸ್ತನವನಿತ್ತಾದರಿಸಿ ಉಣಿಸುವ ಜನನಿ ತೆರನಂತೆ ॥ ನಿನಗೆ ಸುರರೊಳು ಸಮರ ಕಾಣೆನು । ಅನಿಮಿಶೇಷರ ಪಡೆದು ಪಾಲಿಸಿ । ದಿನದಿನದಿ ಸುಖವಿತ್ತು ಪಾಲಿಸು ಕರುಣವಾರಿಧಿಯೇ ॥೬೯ ॥ ಏಸುಕಲ್ಪದಿ ನಿನಗೆ ಪುತ್ರನೋ । ಆಸುಕಲ್ಪದಿ ಮಾತೆ ನೀನೆ । ಲೇಶವಿದಕನುಮಾನವಿಲ್ಲವು ಸಕಲ ಶ್ರುತಿಸಿದ್ಧ ॥ ಲೇಸು ಕರುಣಾಸಾರವೆನಿಸುವ । ಸೂಸುವಾಮೃತ ಧಾರದಿಂದಲಿ । ಸೋಸಿನಿಂದಭಿಷೇಕ ಗೈದಭಿಲಾಷೆ ಸಲಿಸಮ್ಮ ॥ ೭೦॥ ದೋಷಮಂದಿರನೆನಿಪ ಎನ್ನಲಿ । ಲೇಶ ಪುಡಕಲು ಗುಣಗಳಿಲ್ಲ ವಿ । ಶೇಷದೃಷ್ಟಿ ಸುಪಾಂಸುಕಣಗಳ ಗಣನೆ ಬಹುಸುಲಭ ॥ ರಾಶಿಯಂದದಲಿಪ್ಪ ಎನ್ನಘ । ಸಾಸಿರಾಕ್ಷಗಶಕ್ಯ ಗಣಿಸಲು । ಏಸು ಪೇಳಲಿ ತಾಯೆ ತನಯನ ತಪ್ಪು ಸಹಿಸಮ್ಮ ॥ ೭೧॥ ಪಾಪಿಜನರೊಳಗಗ್ರಗಣ್ಯನು । ಕೋಪಪೂರಿತ ಚಿತ್ತಮಂದಿರ । ಈ ಪಯೋಜಭವಾಂಡ ಪುಡುಕಿದರಾರು ಸರಿಯಿಲ್ಲ ॥ ಶ್ರೀಪನರಸಿಯೆ ಕೇಳು ದೋಷವು । ಲೋಪವಾಗುವ ತೆರದಿ ಮಾಡೀ । ರಾಪು ಮಾಡದೇ ಸಲಹು ಶ್ರೀಹರಿಣಿ ಕಲ್ಯಾಣಿ ॥ ೭೨ ॥

ಕರುಣಶಾಲಿಯರೊಳಗೆ ನೀ ಬಲು । ಕರುಣಶಾಲಿಯು ಎಂದು ನಿನ್ನಯ । ಚರಣಯುಗಕಭಿನಮಿಸಿ ಸಾರ್ದೆನು ಪೊರೆಯೆ ಪೊರೆಯೆಂದು ॥ ಹರಣ ನಿಲ್ಲದು ಹಣವು ಇಲ್ಲದೆ । ಶರಣರನುದಿನ ಪೊರೆವೊ ದೇವಿ ಸು- । ಪರಣವಾಹನರಾಣಿ ಎನ್ನನು ಕಾಯೆ ವರವೀಯೆ ॥ ೭೩ ॥ ಉದರ ಕರ ಶಿರ ಟೊಂಕಸೂಲಿಯ । ಮೊದಲೆ ಸೃಷ್ಟಿಯ ಗೈಯ್ಯದಿರಲಾ - । ಷಧದ ಸೃಷ್ಟಿಯು ವ್ಯರ್ಥವಾಗುವ ತೆರದಿ ಜಗದೊಳಗೆ ॥ ವಿಧಿಯು ಎನ್ನ ಸೃಜಿಸದಿದ್ದರೆ । ಪದುಮೆ ನಿನ್ನ ದಯಾಳುತನವೂ । ಪುದುಗಿಪೋದಿತು ಎಂದು ತಿಳಿದಾ ಬೊಮ್ಮ ಸೃಜಿಸಿದನು ॥ ೭೪॥ ನಿನ್ನ ಕರುಣವು ಮೊದಲೊ ದೇವಿಯೆ । ಎನ್ನ ಜನನವು ಮೊದಲೊ ಪೇಳ್ವದು । ಮುನ್ನ ಇದನ ವಿಚಾರಗೈದು ವಿತ್ತ ಎನಗೀಯೆ ॥ ಘನ್ನ ಕರುಣಾನಿಧಿಯು ಎನುತಲಿ । ಬಿನ್ನಹವ ನಾ ಮಾಡಿ ಯಾಚಿಪೆ । ಇನ್ನು ನಿಧಿಯನು ಇತ್ತು ಪಾಲಿಸು ದೂರ ನೋಡದಲೆ ॥ ೭೫॥ ತಂದೆ ತಾಯಿಯು ನೀನೆ ಲಕುಮೀ । ಬಂಧು ಬಳಗವು ನೀನೆ ದೇವೀ । ಹಿಂದೆ ಮುಂದೇ ಎನಗೆ ನೀನೇ ಗುರುವು ಸದ್ಗತಿಯು ॥ ಇಂದಿರೆಯೆ ಎನ ಜೀವಕಾರಿಣಿ । ಸಂದೇಹ ಎನಗಿಲ್ಲ ಪರಮಾ ॥ ನಂದ ಸಮುದಯ ನೀಡೆ ಕರುಣವ ಮಾಡೆ ವರನೀಡೆ ॥೭೬॥ ನಾಥಳೆನಿಸುವಿ ಸಕಲ ಲೋಕಕೆ। ಖ್ಯಾತಳೆನಿಸುವಿ ಸರ್ವಕಾಲದಿ । ಪ್ರೀತಳಾಗಿರು ಎನಗೆ ಸಕಲವು ನೀನೆ ನಿಜವೆಂದೆ ॥ ಮಾತೆ ನೀನೇ ಎನಗೆ ಹರಿ ನಿಜ । ತಾತ ಈರ್ವರು ನೀವೆ ಇರಲೀ । ರೀತಿಯಿಂದಲಿ ಭವದಿ ತೊಳಲಿಪುದೇನು ನಿಮ ನ್ಯಾಯ ॥ ೭೭॥ ಆದಿಲಕುಮಿ ಪ್ರಸನ್ನಳಾಗಿರು । ಮೋದಜ್ಞಾನ ಸುಭಾಗ್ಯ ಧಾತ್ರಿಯೇ । ಭೇದಿಸಜ್ಞಾನಾದಿ ದೋಷವ ತ್ರಿಗುಣವರ್ಜಿತಳೆ ॥ ಸಾದರದಿ ನೀ ಕರೆದು ಕೈಪಿಡಿ । ಮಾಧವನ ನಿಜರಾಣಿ ನಮಿಸುವೆ । ಬಾಧೆಗೊಳಿಸುವ ರುಣವ ಕಳೆದೂ ಶಿರಿಯೆ ಪೊರೆಯೆಂದೆ ॥೭೮॥ ವಚನಜಾಡ್ಯವ ಕಳೆವ ದೇವಿಯೆ । ಎಚೆಯೆ ನೂತನ ಸ್ಪಷ್ಟ ವಾಕ್ಪದ । ನಿಚಯ ಪಾಲಿಸಿ ಎನ್ನ ಜಿಹ್ವಾಗ್ರದಲಿ ನೀ ನಿಂತು ॥ ರಚನೆ ಮಾಡಿಸು ಎನ್ನ ಕವಿತೆಯ । ಪ್ರಚುರವಾಗುವ ತೆರದಿ ಮಾಳ್ಪದು । ಉಚಿತವೇ ಸರಿ ಏನು ಪೇಳ್ವದು ತಿಳಿಯೆ ಸರ್ವಜ್ಞೆ ॥೭೯॥ ಸರ್ವಸಂಪದದಿಂದ ರಾಜಿಪೆ । ಸರ್ವತೇಜೋರಾಶಿಗಾತ್ರೆಯೇ । ಸರ್ವರುತ್ತಮ ಹರಿಯ ರಾಣಿಯೆ ಸರ್ವರುತ್ತಮಳೆ ॥ ಸರ್ವಸ್ಥಳದಲಿ ದೀಪ್ಯಮಾನಳೆ। ಸರ್ವವಾಕ್ಯಕೆ ಮುಖ್ಯ ಮಾನಿಯೆ । ಸರ್ವಕಾಲದಲೆನ್ನ ಜಿಹ್ವದಿ ನೀನೆ ನಟಿಸುವುದು ॥ ೮೦ ॥ ಸರ್ವವಸ್ತುಪರೋಕ್ಷ ಮೊದಲೂ । ಸರ್ವ ಮಹಾಪುರುಷಾರ್ಥದಾತಳೇ । ಸರ್ವಕಾಂತಿಗಳೊಳಗೆ ಶುಭಲಾವಣ್ಯದಾಯಕಳೆ ॥ ಸರ್ವಕಾಲದಿ ಸರ್ವಧಾತ್ರಿಯೆ । ಸರ್ವರೀತಿಲಿ ಸುಮುಖಿಯಾಗೀ। ಸರ್ವಹೇಮಸುಪೂರ್ಣೆ ಎನ್ನಯ ನಯನದೊಳಗೆಸೆಯೆ ॥ ೮೧ ॥ ಸಕಲಮಹ ಪುರುಷಾರ್ಥದಾಯಿನಿ । ಸಕಲ ಜಗವನು ಪೆತ್ತ ಜನನಿಯೆ । ಸಕಲರೀಶ್ವರಿ ಸಕಲ ಭಯಗಳ ನಿತ್ಯ ಸಂಹಾರಿ ॥ ಸಕಲ ಶ್ರೇಷ್ಠಳೆ ಸುಮುಖಿಯಾಗೀ । ಸಕಲ ಭಾವವ ಧರಿಸಿ ಸರ್ವದ । ಸಕಲ ಹೇಮಸುಪೂರ್ಣೆ ಎನ್ನಯ ನಯನದೊಳಗೆಸೆಯೆ ॥ ೮೨ ॥ ಸಕಲ ವಿಧ ವಿಘ್ನಾಪಹಾರಿಣಿ । ಸಕಲ ಭಕ್ತೋದ್ಧಾರಕಾರಿಣಿ । ಸಕಲ ಸುಖ ಸೌಭಾಗ್ಯದಾಯಿನಿ ನೇತ್ರದೊಳಗೆಸೆಯೆ ॥ ಸಕಲ ಕಲೆಗಳ ಸಹಿತ ನಿನ್ನಯ । ಭಕುತನಾದವನೆಂದು ಸರ್ವದ । ವ್ಯಕುತಳಾಗಿರು ಎನ್ನ ಹೃದಯದ

ಕಮಲಮಧ್ಯದಲಿ ॥ ೮೩ ॥ ನಿನ್ನ ಕರುಣಾಪಾತ್ರನಾಗಿಹ । ಎನ್ನಗೋಸುಗ ನೀನೆ ತ್ವರದಿ । ಪ್ರಸನ್ನಳಾಗ್ಯಧಿದೇವಗಣನುತೆ ಸುಗುಣಪರಿಪೂರ್ಣೆ ॥ ಎನ್ನ ಪೆತ್ತಿಹ ತಾಯೆ ಸರ್ವದ । ಸನ್ನಿಹಿತಳಾಗೆನ್ನ ಮನಿಯೊಳು । ನಿನ್ನ ಪತಿಸಹವಾಗಿ ಸರ್ವದ ನಿಲಿಸು ಶುಭದಾಯಿ ॥ ೮೪ ॥ ಎನ್ನ ಮುಖದಲಿ ನೀನೆ ನಿಂತೂ । ಘನ್ನನಿವನೆಂದೆನಿಸಿ ಲೋಕದಿ । ಧನ್ಯ ಧನ್ಯನ ಮಾಡು ವರಗಳ ನೀಡು ನಲಿದಾಡು ॥ ಅನ್ಯನಾ ನಿನಗಲ್ಲ ದೇವೀ । ಜನ್ಯನಾದವನೆಂದು ತಿಳಿದೂ । ಅನ್ನ ವಸನವು ಧಾನ್ಯ-ಧನವನು ನೀನೆ ಎನಗೀಯೆ ॥ ೮೫ ॥ ವತ್ಸ ಕೇಳೆಲೊ ಅಂಜಬೇಡವೋ। ಸ್ವಚ್ಛ ಎನ್ನಯ ಕರವ ಶಿರದಲಿ । ಇಚ್ಛೆಪೂರ್ವಕ ನೀಡ್ವೆ ನಡಿ ಸರ್ವತ್ರ ನಿರ್ಭಯದಿ ॥ ಉತ್ಸಹಾತ್ಮ ಮನೋऽನುಕಂಪಿಯೆ । ಪ್ರೋತ್ಸಹದಿ ಕಾರುಣ್ಯ ದೃಷ್ಟಿಲಿ । ತುಚ್ಛಮಾಡದೆ ವೀಕ್ಷಿಸೀಗಲೆ ಲಕ್ಷ್ಮಿ ಒಲಿ ಎನಗೆ ॥ ೮೬ ॥ ಮುದದಿ ಕರುಣ ಕಟಾಕ್ಷ ಜನರಿಗೆ । ಉದಯವಾಗಲು ಸಕಲ ಸಂಪದ । ಒದಗಿ ಬಪ್ಪುವು ಮಿಥ್ಯವಲ್ಲವು ಬುಧರ ಸಮ್ಮತವು ॥ ಅದಕೆ ನಿನ್ನಯ ಪದವ ನಂಬಿದೆ । ಮುದದಿ ಎನ್ನಯ ಸದನದಲಿ ನೀ । ನೊದಗಿ ಭಾಗ್ಯದ ನಿಧಿಯ ಪಾಲಿಸು ಪದುಮೆ ನಮಿಸುವೆನು ॥ ೮೭ ॥ ರಾಮೆ ನಿನ್ನಯ ದೃಷ್ಟಿ ಲೋಕಕೆ । ಕಾಮಧೇನೆಂದೆನಿಸಿ ಕೊಂಬುದು । ರಾಮೆ ನಿನ್ನಯ ಮನಸು ಚಿಂತಾರತ್ನ ಭಜಿಪರಿಗೆ ॥ ರಾಮೆ ನಿನ್ನಯ ಕರದ ದ್ವಂದ್ವವು ಕಾಮಿತಾರ್ಥವ ಕೇಳ್ವ ಜನರಿಗೆ । ಕಾಮಪೂರ್ತಿಪ ಕಲ್ಪವೃಕ್ಷವು ತಾನೆ ಎನಿಸಿಹುದು ॥ ೮೮ ॥ ನವವೆನಿಪ ನಿಧಿ ನೀನೆ ಇಂದಿರೆ । ತವ ದಯಾಭಿಧ ರಸವೆ ಎನಗೇ । ಭವದಿ ದೇವಿ ರಸಾಯನವೆ ಸರಿ ಸರ್ವಕಾಲದಲಿ ॥ ಭುವನಸಂಭವೆ ನಿನ್ನ ಮುಖವೂ । ದಿವಿಯೊಳ್[illegible]ವ ಚಂದ್ರನಂದದಿ । ವಿವಿಧ ಕಳೆಗಣಪೂರ್ಣವಾಗ್ಯಖಿಳಾರ್ಥ ಕೊಡುತಿಹುದು ॥ ೮೯ ॥ ರಸದ ಸ್ಪರ್ಶದಲಿಂದ ಲೋಹವು । ಮಿಸುಣೆ ಭಾವವ ಐದೊ ತೆರದಲಿ । ಅಸಮ ಮಹಿಮಳೆ ನಿನ್ನ ಕರುಣ ಕಟಾಕ್ಷನೋಟದಲಿ ॥ ವಸುಧಿ ತಳದೊಳಗಿಪ್ಪ ಜೀವರ । ಅಶುಭಕೋಟಿಗಳೆಲ್ಲ ಪೋಗೀ। ಕುಸುಮಗಂಧಿಯೆ ಮಂಗಳೋತ್ಸವ ಸತತವಾಗುವದು ॥ ೯೦ ॥ ನೀಡು ಎಂದರೆ ಇಲ್ಲವೆಂಬುವ। ರೂಢಿ ಜೀವರ ಮಾತಿಗಂಜುತ । ಬೇಡಿಕೊಂಬುದಕೀಗ ನಿನ್ನನು ಶರಣು ಪೊಂದಿದೆನು ॥ ನೋಡಿ ಕರುಣ ಕಟಾಕ್ಷದಿಂ । ದಯ ಮಾಡಿ ಮನದಭಿಲಾಷೆ ಪೂರ್ತಿಸಿ । ನೀಡು ಎನಗಖಿಳಾರ್ಥ ಭಾಗ್ಯವ ಹರಿಯ ಸಹಿತದಲಿ ॥ ೯೧ ॥ ಕಾಮಧೇನು ಸುಕಲ್ಪತರು ಚಿಂ-। ತಾಮಣೀ ಸಹವಾಗಿ ನಿನ್ನಯ । ಕಾಮಿತಾರ್ಥಗಳೀವ ಕಳೆಗಳೆನಿಸಿ ಇರುತಿಹವು ॥ ರಾಮೆ ನಿನ್ನಯ ರಸರಸಾಯನ । ಸ್ತೋಮದಿಂ ಶಿರಪಾದ ಪಾಣೀ । ಪ್ರೇಮಪೂರ್ವಕ ಸ್ಪರ್ಶವಾಗಲು ಹೇಮವಾಗುವುದು ॥ ೯೨॥ ಆದಿವಿಷ್ಣುನ ಧರ್ಮಪತ್ನಿಯೆ । ಸಾದರದಿ ಹರಿ ಸಹಿತ ಎನ್ನಲಿ । ಮೋದದಿಂದಲಿ ಸನ್ನಿಧಾನವ ಮಾಡೆ ಕರುಣದಲಿ । ಆದಿಲಕ್ಷ್ಮಿಯೆ ಪರಮನುಗ್ರಹ । ವಾದ ಮಾತ್ರದಿ ಎನಗೆ ಪದೊಪದೆ । ಆದುಪುದು ಸರ್ವತ್ರ ಸರ್ವದ ನಿಧಿಯ ದರ್ಶನವು ॥ ೯೩ ॥ ಆವ ಲಕ್ಷ್ಮೀಹೃದಯ ಮಂತ್ರವ । ಸಾವಧಾನದಿ ಪಠಣಗೈವನೊ । ಆವಕಾಲದಿ ರಾಜ್ಯಲಕ್ಷ್ಮಿಯನೈದು ಸುಖಿಸುವನು॥ ಆವ ಮಹಾದಾರಿದ್ರದೋಷಿಯು । ಸೇವಿಸೇ ಮಹ ಧನಿಕನಾಗುವ । ದೇವಿ ಅವನಾಲಯದಿ ಸರ್ವದ ಸ್ಥಿರದಿ ನಿಲಿಸುವಳು ॥ ೯೪ ॥ ಲಕುಮಿಹೃದಯದ ಪಠಣೆ ಮಾತ್ರದಿ । ಲಕುಮಿ ತಾ ಸಂತುಷ್ಟಳಾಗೀ । ಸಕಲ ದುರಿತಗಳಳಿದು ಸುಖಸೌಭಾಗ್ಯ ಕೊಡುತಿಹಳು ॥ ವಿಕಸಿತಾನನೆ

ವಿಷ್ಣುವಲ್ಲಭೆ । ಭಕುತಜನರನು ಸರ್ವಕಾಲದಿ । ವ್ಯಕುತಭಾಗ್ಯವರನ್ನು ಪೊರೆವಳು ತನಯರಂದದಲಿ ॥ ೯೫ ॥ ದೇವಿ ಹೃದಯವು ಪರಮಗೋಪ್ಯವು । ಸೇವಕನಿಗಖಿಳಾರ್ಥ ಕೊಡುವುದು । ಭಾವಪೂರ್ವಕ ಪಂಚಸಾವಿರ ಜಪಿಸೆ ಪುನಶ್ಚರಣ॥ ಈ ವಿಧಾನದಿ ಪಠಣೆ ಮಾಡಲು । ತಾ ಒಲಿದು ಸೌಭಾಗ್ಯ ನಿಧಿಯನು । ತೀವ್ರದಿಂದಲಿ ಕೊಟ್ಟು ಸೇವಕರಲ್ಲಿ ನಿಲಿಸುವಳು ॥ ೯೬ ॥ ಮೂರು ಕಾಲದಿ ಜಪಿಸಲುತ್ತುಮ । ಸಾರಭಕುತಿಲಿ ಒಂದು ಕಾಲದಿ । ಧೀರಮಾನವ ಪಠಿಸಲವನಖಿಳಾರ್ಥವೈದುವನು ॥ ಆರು ಪಠಣವಗೈಯ್ಯಲಿದನನು । ಭೂರಿ-ಶ್ರವಣವ ಗೈದಮಾನವ । ಬಾರಿ ಬಾರಿಗೆ ಧನವ ಗಳಿಸುವ ಶಿರಿಯ ಕರುಣದಲಿ ॥ ೯೭ ॥ ಶ್ರೀಮಹತ್ತರ ಲಕ್ಷ್ಮಿಗೋಸುಗ । ಈ ಮಹತ್ತರ ಹೃದಯಮಂತ್ರವ । ಪ್ರೇಮಪೂರ್ವಕ ಭಾರ್ಗವಾರದ ರಾತ್ರಿ ಸಮಯದಲಿ ॥ ನೇಮದಿಂದಲಿ ಪಂಚ ವಾರವ । ಕಾಮಿಸೀಪರಿ ಪಠಣೆ ಮಾಡಲು । ಕಾಮಿತಾರ್ಥವನ್ನೈದಿ ಲೋಕದಿ ಬಾಳ್ವ ಮುದದಿಂದ ॥ ೯೮ ॥ ಶಿರಿಯ ಹೃದಯ ಸುಮಂತ್ರದಿಂದಲಿ । ಸ್ಮರಿಸಿ ಅನ್ನವ ಮಂತ್ರಿಸಿಡಲೂ । ಶಿರಿಯಪತಿ ತಾನವರ ಮಂದಿರದೊಳಗೆ ಅವತರಿಪ ॥ ನರನೆ ಆಗಲಿ ನಾರಿಯಾಗಲಿ । ಶಿರಿಯ ಹೃದಯಸುಮಂತ್ರದಿಂದಲಿ । ನಿರುತ ಮಂತ್ರಿತ ಜಲವ ಕುಡಿಯಲು ಧನಿಕ ಪುಟ್ಟುವನು ॥ ೯೯ ॥ ಅವನಾಶ್ವಿಜ ಶುಕ್ಲಪಕ್ಷದಿ । ದೇವಿಉತ್ಸವಕಾಲದೊಳು ತಾ । ಭಾವಶುದ್ಧಿಲಿ ಹೃದಯಜಪ ಒಂದಧಿಕ ದಿನದಿನದಿ ॥ ಈ ವಿಧಾನದಿ ಜಪವ ಮಾಡಲು । ಶ್ರೀವರದಿ ಸಂಪದವನ್ನೈದುವ । ಶ್ರೀವನಿತೆ ತಾ ಕನಕ ವೃಷ್ಟಿಯ ಕರೆವಳನವರತ ॥ ೧೦೦ ॥ ಆವ ಭಕುತನು ವರುಷ ದಿನದಿನ । ಭಾವಶುದ್ಧಿಲಿ ಎಲ್ಲ ಪೊತ್ತೂ। ಸಾವಧಾನದಿ ಹೃದಯಮಂತ್ರವ ಪಠಿಸಲವನಾಗ ॥ ದೇವಿಕರುಣಕಟಾಕ್ಷದಿಂದಲಿ । ದೇವ ಇಂದ್ರನಿಗಧಿಕನಾಗುವ । ಈ ವಸುಂಧರೆ-ಯೊಳಗೆ ಭಾಗ್ಯದ ನಿಧಿಯು ತಾನೆನಿಪ ॥ ೧೦೧॥ ಶ್ರೀಶಪದದಲಿ ಭಕುತಿ ಹರಿಪದ । ದಾಸಜನಪದ ದಾಸಭಾವವ । ಈ ಸುಮಂತ್ರಗಳರ್ಥ ಸಿದ್ಧಿಯು ಗುರುಪದ ಸ್ಮೃತಿಯು । ಲೇಸುಜ್ಞಾನ ಸುಬುದ್ಧಿ ಪಾಲಿಸು। ವಾಸವಾಗಿರು ಎನ್ನ ಮನಿಯಲಿ । ಈಶ ಸಹ ಎನತಾಯೆ ಉತ್ತಮಪದವು ನೀ ಸಿರಿಯೇ ॥ ೧೦೨ ॥ ಧರಣಿ ಪಾಲಕನೆನಿಸು ಎನ್ನನು । ಪುರುಷರುತ್ತಮನೆನಿಸು ಸರ್ವದ । ಪರಮವೈಭವ ನಾನವಿಧವಾದಾರ್ಥಸಿದ್ಧಿಗಳಾ ॥ ಪಿರಿದು ಕೀರ್ತಿಯ ಬಹಳ ಭೋಗವ। ಪರಮ ಭಕ್ತಿ ಜ್ಞಾನ ಸುಮತಿಯ । ಪರಿಮಿತಿಲ್ಲದೆಯಿತ್ತು ಪುನರಪಿ ಸಲಹು ಶ್ರೀದೇವಿ ॥ ೧೦೩॥ ವಾದಮಾಡೊದಕರ್ಥಸಿದ್ಧಿಯು । ಮೋದತೀರ್ಥರ ಮತದಿ ದೀಕ್ಷವು । ಸಾದರದಿ ನೀನಿತ್ತು ಪಾಲಿಸು ವೇದದಭಿಮಾನಿ ॥ ಮೋದದಲಿ ಪುತ್ರಾರ್ಥ ಸಿದ್ಧಿಯು । ಓದದಲೆ ಶಿರಿಬ್ರಹ್ಮವಿದ್ಯವು। ಆದಿಭಾರ್ಗವಿಯಿತ್ತು ಪಾಲಿಸು ಜನ್ಮ ಜನ್ಮದಲಿ ॥ ೧೦೪॥ ಸ್ವರ್ಣವೃಷ್ಟಿಯ ಎನ್ನ ಮನೆಯಲಿ। ಕರೆಯೆ ಧಾನ್ಯಸಮೃದ್ಧಿ ದಿನದಿನ । ಭರದಿ ನೀ ಕಲ್ಯಾಣ ವೃದ್ಧಿಯ ಮಾಡೆ ಸಂಭ್ರಮದಿ ॥ ಶಿರಿಯೆ ಅತುಳ ವಿಭೂತಿವೃದ್ಧಿಯ । ಹರುಷದಿಂದಲಿ ಗೈದು ಧರೆಯೊಳು । ಮೆರೆಯೆ ಸಂತತ ಉಪಮೆಯಿಲ್ಲದೆ ಹರಿಯ ನಿಜರಾಣೀ ॥ ೧೦೫ ॥ ಮಂದಹಾಸ ಮುಖಾರವಿಂದಳೆ । ಇಂದುಸೂರ್ಯರ ಕೋಟಿ ಭಾಸಳೆ । ಸುಂದರಾಂಗಿಯೆ ಪೀತವಸನಳೆ ಹೇಮಭೂಷಣಳೇ ॥ ಕುಂದುಯಿಲ್ಲದ ಬೀಜಪೂರಿತ । ಛಂದವಾದ ಸುಹೇಮಕಲಶಗ -। ಳಿಂದ ನೀನೊಡಗೂಡಿ

ಕುಂದುಯಿಲ್ಲದ ಬೀಜಪೂರಿತ । ಛಂದವಾದ ಸುಹೇಮಕಲಶಗ -। ಳಿಂದ ನೀನೊಡಗೂಡಿ ತೀವ್ರದಿ ಬರುವುದೆನ ಮನಿಗೆ ॥ ೧೦೬ ॥ ನಮಿಪೆ ಶ್ರೀಹರಿರಾಣಿ ನಿನಪದ । ಕಮಲಯುಗಕನವರತ ಭಕುತಿಲಿ । ಕಮಲೆ ನಿನ್ನಯ ವಿಮಲಕರಯುಗ ಎನ್ನ ಮಸ್ತಕದಿ॥ ಮಮತೆಯಿಂದಲಿ ಇಟ್ಟು ನಿಶ್ಚಲ । ಅಮಿತಭಾಗ್ಯವ ನೀಡೆ ತ್ವರದೀ । ಕಮಲಜಾತಳೆ ರಮೆಯೆ ನಮೋ ನಮೋ ಮಾಳ್ಪೆನನವರತಾ ॥ ೧೦೭ ॥ ಮಾತೆ ನಿನ್ನಯ ಜಠರಕಮಲ ಸು-। ಜಾತನಾಗಿಹ ಸುತನ ತೆರದಲಿ ॥ ಪ್ರೀತಿಪೂರ್ವಕ ಭಾಗ್ಯನಿಧಿಗಳನಿತ್ತು ನಿತ್ಯದಲಿ ॥ ನೀತಭಕುತಿ ಜ್ಞಾನಪೂರ್ವಕ। ದಾತ ಗುರುಜಗನ್ನಾಥ-ವಿಠಲನ । ಪ್ರೀತಿಗೊಳಿಸುವ ಭಾಗ್ಯ ಪಾಲಿಸಿ ಪೊರೆಯೆ ನೀ ಯೆನ್ನ॥೧೦೮॥

**(ಪುನಃ ಶ್ರೀ ವೆಂಕಟೇಶಸ್ತವರಾಜವನ್ನು ಪಠಿಸಬೇಕು)**

॥ ಗುರ್ವಂತರ್ಗತಭಾರತೀರಮಣ ಮುಖ್ಯ ಪ್ರಾಣಾಂತರ್ಗತ ರಾಮ ನರಹರಿ ಕೃಷ್ಣ ಕೃಷ್ಣಾಭಿನ್ನ ಶ್ರೀಲಕ್ಷ್ಮೀವೆಂಕಟೇಶ್ವರಃ ಪ್ರೀಯತಾಂ ಪ್ರೀತೋ ಭವತು ॥ ಶ್ರೀಕೃಷ್ಣಾರ್ಪಣಮಸ್ತು॥

**॥ ಶ್ರೀವೆಂಕಟೇಶ ಸ್ತವರಾಜ ಸಹಿತ ಲಕ್ಷ್ಮೀ ಹೃದಯವು ಸಮಾಪ್ತವಾಯಿತು ॥**

*****

## ವೈವಾಹ ಸುಳಾದಿ

### ...ಧ್ರುವತಾಳ...

ವೈವಾಹ ಮಾಡಿದೆ ವಿಭವ ಪೂರ್ವಕದಿಂದ । ಆವದು ಇದಕೆ ಸಮವೆಂದು ತಿಳಿದು। ಭಾವದಲ್ಲಿ ಹಿಗ್ಗಿ ಬಳಲಿದರೆ ಇದಕೆ । ಭಾವಜ್ಞರಾದವರು ಮೆಚ್ಚುವರೇ । ಯೇ ತ್ವೇವ ವಿದ್ಯಯಾ ಕುರುತೇ ಶ್ರದ್ಧಯಾ । ತದ್ವೈವ ವೀರ್ಯವತ್ತರಂ ಭವತಿ ಇತ್ಯುಪನಿಷದ್ । ಯದ್ವೈವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ । ತದ್ವೈವ ವೀರ್ಯವತ್ತರಂ ಭವತಿ। ಏವಮಾದಿಗಳು ಈಪರಿ ವರಲುತಿರೆ ಅ-। ಭಾವ ಜ್ಞಾನದಿಂದ ಅಹಂಕಾರದಿ । ಸಾವಿರ ಸಂಖ್ಯವಾದ ಕ್ರತುಗಳು ಮಾಡಲೇಕೆ । ದೇವ ದೇವನು ದೃಷ್ಟಿಯಿಂದ ನೋಡಾ । ಅವನಿಯೊಳಗೆ ಅಲ್ಪರ ಮಧ್ಯ ಕೀರ್ತಿ । ಬಾಹೋವದಲ್ಲದೆ ಅದರಿಂದೇನಾಹದೊ । ಕೇವಲ ಶ್ರಮದಿಂದ ಅರ್ಥ ಸಂಪಾದಿಸಿ। ಆವಾದು ಸಾಲದದಕೆ ಋಣವ ಮಾಡಿ । ಧಾವಂತ ಈಪರಿ ಘಟನವಾದ ಕರ್ಮ । ಪಾವನ್ನವಾದ ಪುಣ್ಯ ವಾಗದಿರೆ । ಭುವನದಲ್ಲಿ ಬರಿದೆ ಆಯಾಸಬಡಲೇಕೆ । ವೈವಾಹ ಮಾಡುವ ವಿಧಿ ಬ್ಯಾರುಂಟು । ಆವಾವ ಕರ್ಮದಿಂದ ಮೂರೇಳು ಗೋತ್ರದವರು । ಪವಿತ್ರರಾಗುವರು ಪಾಪದಿಂದ । ಸಾವಧಾನದಿ ಕೇಳು ಭಕುತಿಯಿಂದಲಿ ಮನವೆ । ನೋವು ನಿನಗಾಗದು ಭವದಲಿಂದ। ಕಾವ ಕರುಣನಿಧಿ ಗುರು ವಿಜಯ ವಿಠ್ಠಲರೇಯಾ । ಸೇವಕನೆಂದವಗೆ ಸುಖವೀವನೋ ॥ ೧॥

### ... ಮಟ್ಟತಾಳ ...

ಮಕ್ಕಳು ಎನಗಾರು ಅವರಿಗೆ ನಾನಾರು । ರಕ್ಕಸಾಂತಕ ತಾನೆ ಕರ್ಮಾನು ಬಂಧದಲಿ । ಮುಖ್ಯವಾಗಿ ತನ್ನ ಕ್ಲಿಪ್ತಾನು ಸಾರದಲಿ । ಅಕ್ಕರದಿಂದಲಿ ಆತ್ಮಜಗೆ ಪಿತನು । ಸೌಖ್ಯದ ನಿಮಿತ್ತ ಸತಿ ಮನೆ ಧನ ಪಶು । ಮಿಕ್ಕಾದವೆಲ್ಲ ಇತ್ತಿಹ್ಯ ತೆರದಂತೆ । ಮಕ್ಕಳು ಮೊದಲಾದ ಸಂಪದವಿಯ ತಾನೆ ಆ -। ಸಕ್ಕುತಿಯಿಂದಲಿ ಎನಗೆ ಇತ್ತಿಹನೆಂತೆಂದದು। ಮುಕ್ಕುಂದನಾರಾಧನಿಗೆ

ವಿಷ್ಣುವಲ್ಲಭೆ । ಭಕುತಜನರನು ಸರ್ವಕಾಲದಿ । ವ್ಯಕುತಳಾಗ್ಯವರನ್ನು ಪೊರೆವಳು ತನಯರಂದದಲಿ ॥ ೯೫ ॥ ದೇವಿ ಹೃದಯವು ಪರಮಗೋಪ್ಯವು । ಸೇವಕನಿಗಖಿಳಾರ್ಥ ಕೊಡುವುದು । ಭಾವಪೂರ್ವಕ ಪಂಚಸಾವಿರ ಜಪಿಸೆ ಪುನಶ್ಚರಣ॥ ಈ ವಿಧಾನದಿ ಪಠಣೆ ಮಾಡಲು । ತಾ ವಲಿದು ಸೌಭಾಗ್ಯ ನಿಧಿಯನು । ತೀವ್ರದಿಂದಲಿ ಕೊಟ್ಟು ಸೇವಕರಲ್ಲಿ ನಿಲಿಸುವಳು ॥ ೯೬ ॥ ಮೂರು ಕಾಲದಿ ಜಪಿಸಲುತ್ತುಮ । ಸಾರಭಕುತಿಲಿ ಒಂದು ಕಾಲದಿ । ಧೀರಮಾನವ ಪಠಿಸಲವನಖಿಳಾರ್ಥವ್ಯೆದುವನು ॥ ಆರು ಪಠಣವಗ್ಯೆಯ್ಯಲಿದನನು । ಭೂರಿ-ಶ್ರವಣವ ಗೈದಮಾನವ । ಬಾರಿ ಬಾರಿಗೆ ಧನವ ಗಳಿಸುವ ಶಿರಿಯ ಕರುಣದಲಿ ॥ ೯೭ ॥ ಶ್ರೀಮಹತ್ತರ ಲಕ್ಷ್ಮಿಗೋಸುಗ । ಈ ಮಹತ್ತರ ಹೃದಯಮಂತ್ರವ । ಪ್ರೇಮಪೂರ್ವಕ ಭಾರ್ಗವಾರದ ರಾತ್ರಿ ಸಮಯದಲಿ ॥ ನೇಮದಿಂದಲಿ ಪಂಚ ವಾರವ । ಕಾಮಿಸೀಪರಿ ಪಠಣೆ ಮಾಡಲು । ಕಾಮಿತಾರ್ಥವನ್ನೆದಿ ಲೋಕದಿ ಬಾಳ್ವ ಮುದದಿಂದ ॥ ೯೮ ॥ ಶಿರಿಯ ಹೃದಯ ಸುಮಂತ್ರದಿಂದಲಿ । ಸ್ಮರಿಸಿ ಅನ್ನವ ಮಂತ್ರಿಸಿಡಲೂ । ಶಿರಿಯಪತಿ ತಾನವರ ಮಂದಿರದೊಳಗೆ ಅವತರಿಪ ॥ ನರನೆ ಆಗಲಿ ನಾರಿಯಾಗಲಿ । ಶಿರಿಯ ಹೃದಯಸುಮಂತ್ರದಿಂದಲಿ । ನಿರುತ ಮಂತ್ರಿತ ಜಲವ ಕುಡಿಯಲು ಧನಿಕ ಪುಟ್ಟುವನು ॥ ೯೯ ॥ ಅವನಾಶ್ವಿಜ ಶುಕ್ಲಪಕ್ಷದಿ । ದೇವಿಉತ್ಸವಕಾಲದೊಳು ತಾ । ಭಾವಶುದ್ಧಿಲಿ ಹೃದಯಜಪ ಒಂದಧಿಕ ದಿನದಿನದಿ ॥ ಈ ವಿಧಾನದಿ ಜಪವ ಮಾಡಲು । ಶ್ರೀವರದಿ ಸಂಪದವನ್ಯೆದುವ । ಶ್ರೀವನಿತೆ ತಾ ಕನಕ ವೃಷ್ಟಿಯ ಕರೆವಳನವರತ ॥ ೧೦೦ ॥ ಆವ ಭಕುತನು ವರುಷ ದಿನದಿನ । ಭಾವಶುದ್ಧಿಲಿ ಎಲ್ಲ ಪೊತ್ತೂ। ಸಾವಧಾನದಿ ಹೃದಯಮಂತ್ರವ ಪಠಿಸಲವನಾಗ ॥ ದೇವಿಕರುಣಕಟಾಕ್ಷದಿಂದಲಿ । ದೇವ ಇಂದ್ರನಿಗಧಿಕನಾಗುವ । ಈ ವಸುಂಧರೆ-ಯೊಳಗೆ ಭಾಗ್ಯದ ನಿಧಿಯು ತಾನೆನಿಪ ॥ ೧೦೧॥ ಶ್ರೀಶಪದದಲಿ ಭಕುತಿ ಹರಿಪದ । ದಾಸಜನಪದ ದಾಸಭಾವವ । ಈ ಸುಮಂತ್ರಗಳರ್ಥ ಸಿದ್ಧಿಯು ಗುರುಪದ ಸ್ಮೃತಿಯು । ಲೇಸುಜ್ಞಾನ ಸುಬುದ್ಧಿ ಪಾಲಿಸು। ವಾಸವಾಗಿರು ಎನ್ನ ಮನಿಯಲಿ । ಈಶ ಸಹ ಎನತಾಯೆ ಉತ್ತಮಪದವು ನೀ ಸಿರಿಯೇ ॥ ೧೦೨ ॥ ಧರಣಿ ಪಾಲಕನೆನಿಸು ಎನ್ನನು । ಪುರುಷರುತ್ತಮನೆನಿಸು ಸರ್ವದ । ಪರಮವೈಭವ ನಾನವಿಧವಾದಾರ್ಥಸಿದ್ಧಿಗಳಾ ॥ ಪಿರಿದು ಕೀರ್ತಿಯ ಬಹಳ ಭೋಗವ। ಪರಮ ಭಕ್ತಿ ಜ್ಞಾನ ಸುಮತಿಯು । ಪರಿಮಿತಿಲ್ಲದೆಯಿತ್ತು ಪುನರಪಿ ಸಲಹು ಶ್ರೀದೇವಿ ॥ ೧೦೩॥ ವಾದಮಾಡೊದಕರ್ಥಸಿದ್ಧಿಯು । ಮೋದತೀರ್ಥರ ಮತದಿ ದೀಕ್ಷವು । ಸಾದರದಿ ನೀನಿತ್ತು ಪಾಲಿಸು ವೇದದಭಿಮಾನಿ ॥ ಮೋದದಲಿ ಪುತ್ರಾರ್ಥ ಸಿದ್ಧಿಯು । ಓದದಲೆ ಶಿರಿಬ್ರಹ್ಮವಿದ್ಯವು। ಆದಿಭಾರ್ಗವಿಯಿತ್ತು ಪಾಲಿಸು ಜನ್ಮ ಜನ್ಮದಲಿ ॥ ೧೦೪॥ ಸ್ವರ್ಣವೃಷ್ಟಿಯ ಎನ್ನ ಮನೆಯಲಿ। ಕರೆಯೆ ಧಾನ್ಯಸಮೃದ್ಧಿ ದಿನದಿನ । ಭರದಿ ನೀ ಕಲ್ಯಾಣ ವೃದ್ಧಿಯ ಮಾಡೆ ಸಂಭ್ರಮದಿ ॥ ಶಿರಿಯೆ ಅತುಳ ವಿಭೂತಿವೃದ್ಧಿಯ । ಹರುಷದಿಂದಲಿ ಗೈದು ಧರೆಯೊಳು । ಮೆರೆಯೆ ಸಂತತ ಉಪಮೆಯಿಲ್ಲದೆ ಹರಿಯ ನಿಜರಾಣೀ ॥ ೧೦೫ ॥ ಮಂದಹಾಸ ಮುಖಾರವಿಂದಳೆ । ಇಂದುಸೂರ್ಯರ ಕೋಟಿ ಭಾಸಳೆ । ಸುಂದರಾಂಗಿಯೆ ಪೀತವಸನಳೆ ಹೇಮಭೂಷಣಳೇ ॥ ಕುಂದುಯಿಲ್ಲದ ಬೀಜಪೂರಿತ । ಛಂದವಾದ ಸುಹೇಮಕಲಶಗ -। ಳಿಂದ ನೀನೊಡಗೂಡಿ

ಕುಂದುಯಿಲ್ಲದ ಬೀಜಪೂರಿತ । ಛಂದವಾದ ಸುಹೇಮಕಲಶಗ -। ಳಿಂದ ನೀನೊಡಗೂಡಿ ತೀವ್ರದಿ ಬರುವುದೆನ ಮನಿಗೆ ॥ ೧೦೬ ॥ ನಮಿಪೆ ಶ್ರೀಹರಿರಾಣಿ ನಿನಪದ । ಕಮಲಯುಗಕನವರತ ಭಕುತಿಲಿ । ಕಮಲೆ ನಿನ್ನಯ ವಿಮಲಕರಯುಗ ಎನ್ನ ಮಸ್ತಕದಿ॥ ಮಮತೆಯಿಂದಲಿ ಇಟ್ಟು ನಿಶ್ಚಲ । ಅಮಿತಭಾಗ್ಯವ ನೀಡೆ ತ್ವರದೀ । ಕಮಲಜಾತಳೆ ರಮೆಯೆ ನಮೋ ನಮೋ ಮಾಳ್ಪೆನನವರತಾ ॥ ೧೦೭ ॥ ಮಾತೆ ನಿನ್ನಯ ಜಠರಕಮಲ ಸು-। ಜಾತನಾಗಿಹ ಸುತನ ತೆರದಲಿ ॥ ಪ್ರೀತಿಪೂರ್ವಕ ಭಾಗ್ಯನಿಧಿಗಳನಿತ್ತು ನಿತ್ಯದಲಿ ॥ ನೀತಭಕುತಿ ಜ್ಞಾನಪೂರ್ವಕ। ದಾತ ಗುರುಜಗನ್ನಾಥ-ವಿಠಲನ । ಪ್ರೀತಿಗೊಳಿಸುವ ಭಾಗ್ಯ ಪಾಲಿಸಿ ಪೊರೆಯೆ ನೀ ಯೆನ್ನ॥೧೦೮॥

**(ಪುನಃ ಶ್ರೀ ವೆಂಕಟೇಶಸ್ತವರಾಜವನ್ನು ಪಠಿಸಬೇಕು)**

॥ ಗುರ್ವಂತರ್ಗತಭಾರತೀರಮಣ ಮುಖ್ಯ ಪ್ರಾಣಾಂತರ್ಗತ ರಾಮ ನರಹರಿ ಕೃಷ್ಣ ಕೃಷ್ಣಾಭಿನ್ನ ಶ್ರೀಲಕ್ಷ್ಮೀವೆಂಕಟೇಶ್ವರಃ ಪ್ರೀಯತಾಂ ಪ್ರೀತೋ ಭವತು ॥ ಶ್ರೀಕೃಷ್ಣಾರ್ಪಣಮಸ್ತು॥

**॥ ಶ್ರೀವೆಂಕಟೇಶ ಸ್ತವರಾಜ ಸಹಿತ ಲಕ್ಷ್ಮೀ ಹೃದಯವು ಸಮಾಪ್ತವಾಯಿತು ॥**

*****

## ವೈವಾಹ ಸುಳಾದಿ

### ...ಧ್ರುವತಾಳ...

ವೈವಾಹ ಮಾಡಿದೆ ವಿಭವ ಪೂರ್ವಕದಿಂದ । ಆವದು ಇದಕೆ ಸಮವೆಂದು ತಿಳಿದು। ಭಾವದಲ್ಲಿ ಹಿಗ್ಗಿ ಬಳಲಿದರೆ ಇದಕೆ । ಭಾವಜ್ಞರಾದವರು ಮೆಚ್ಚುವರೇ । ಯೇ ತ್ವೇವ ವಿದ್ಯಯಾ ಕುರುತೇ ಶ್ರದ್ಧಯಾ । ತದ್ಯೈವ ವೀರ್ಯವತ್ತರಂ ಭವತಿ ಇತ್ಯುಪನಿಷದ್ । ಯದ್ಯೆವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ । ತದ್ಯೈವ ವೀರ್ಯವತ್ತರಂ ಭವತಿ। ಏವಮಾದಿಗಳು ಈಪರಿ ವರಲುತಿರೆ ಅ-। ಭಾವ ಜ್ಞಾನದಿಂದ ಅಹಂಕಾರದಿ । ಸಾವಿರ ಸಂಖ್ಯವಾದ ಕ್ರತುಗಳು ಮಾಡಲೇಕೆ । ದೇವ ದೇವನು ದೃಷ್ಟಿಯಿಂದ ನೋಡಾ । ಅವನಿಯೊಳಗೆ ಅಲ್ಪರ ಮಧ್ಯ ಕೀರ್ತಿ । ಬಾಹೋವದಲ್ಲದೆ ಅದರಿಂದೇನಾಹದೊ । ಕೇವಲ ಶ್ರಮದಿಂದ ಅರ್ಥ ಸಂಪಾದಿಸಿ। ಆವಾದು ಸಾಲದದಕೆ ಋಣವ ಮಾಡಿ । ಧಾವಂತ ಈಪರಿ ಘಟನವಾದ ಕರ್ಮ । ಪಾವನ್ನವಾದ ಪುಣ್ಯ ವಾಗದಿರೆ । ಭುವನದಲ್ಲಿ ಬರಿದೆ ಆಯಾಸಬಡಲೇಕೆ । ವೈವಾಹ ಮಾಡುವ ವಿಧಿ ಬ್ಯಾರುಂಟು । ಆವಾವ ಕರ್ಮದಿಂದ ಮೂರೇಳು ಗೋತ್ರದವರು । ಪವಿತ್ರರಾಗುವರು ಪಾಪದಿಂದ । ಸಾವಧಾನದಿ ಕೇಳು ಭಕುತಿಯಿಂದಲಿ ಮನವೆ । ನೋವು ನಿನಗಾಗದು ಭವದಲಿಂದ। ಕಾವ ಕರುಣನಿಧಿ ಗುರು ವಿಜಯ ವಿಠ್ಠಲರೇಯಾ । ಸೇವಕನೆಂದವಗೆ ಸುಖವೀವನೋ ॥ ೧॥

### ... ಮಟ್ಟತಾಳ ...

ಮಕ್ಕಳು ಎನಗಾರು ಅವರಿಗೆ ನಾನಾರು । ರಕ್ಕಸಾಂತಕ ತಾನೆ ಕರ್ಮಾನು ಬಂಧದಲಿ । ಮುಖ್ಯವಾಗಿ ತನ್ನ ಕ್ಲಿಪ್ತಾನು ಸಾರದಲಿ । ಅಕ್ಕರದಿಂದಲಿ ಆತ್ಮಜಗೆ ಪಿತನು । ಸೌಖ್ಯದ ನಿಮಿತ್ತ ಸತಿ ಮನೆ ಧನ ಪಶು । ಮಿಕ್ಕಾದವೆಲ್ಲ ಇತ್ತಿಹ್ಯ ತೆರದಂತೆ । ಮಕ್ಕಳು ಮೊದಲಾದ ಸಂಪದವಿಯ ತಾನೆ ಆ -। ಸಕ್ಕುತಿಯಿಂದಲಿ ಎನಗೆ ಇತ್ತಿಹನೆಂತೆಂದದು। ಮುಕ್ಕುಂದನಾರಾಧನಿಗೆ

ಉಪಕರಣಗಳೆನ್ನು । ಕಕ್ಕುಲಾತಿಯಲಿಂದ ನನ್ನದೆಂಬೊ ಭ್ರಾಂತಿ । ಸಿಕ್ಕದಲೆ ಗುಣಿಸು ಕಲಿಕೃತ ಮೋಹವನು । ಧಿಕ್ಕರಿಸು ಜ್ಞಾನ ಬಾಹುಳ್ಯದಿ ಸತತ । ವಿಕ್ರಮದಿಂದಲ್ಲಿ ಇಂದ್ರಿಯ ಗ್ರಾಮಗಳು। ಆಕ್ರಮಿಸಿ ಬರಲು ಪ್ರಾಪ್ತವಾದ ಮೋಹ । ಪ್ರಖ್ಯಾತಗರ್ಪಿಸುವದು ಸಂಶಯ ಮಾಡದಲೆ । ಭಕ್ತಿ ಪೂರ್ವಕದಿಂದ ಅರ್ಚಿಸು ಜ್ಞಾನದಲಿ । ಭೋಕ್ತಸಾರ ಗುರು ವಿಜಯ ವಿಠ್ಠಲರೇಯ । ದಕ್ಕುವನು ಇದನು ಗ್ರಹಿಸಿದ ನರನಿಗೆ ॥ ೨ ॥

... ತ್ರಿವಿಡಿ ತಾಳ ...

ಹೃದಯದೊಳಗೆ ಹರಿ ಪ್ರೇರಿಸಿದದರೊಳು । ಮುದದಿ ನುಡಿವೆ ಗುರು ಕೃಪಾಬಲದಿ । ಒದಗಿ ಕೇಳುವದು ವರನ ಲಕ್ಷಣವನ್ನು ಈ । ವಿಧದಿ ಚಿಂತಿಸುವದು ಗುಪ್ತದಿಂದ । ಅಧಮ ಜನರುಗಳಿಗೆ ಅಂತು ತಿಳಿಯಗೊಡದೆ । ಪದೊಪದಿಗೆ ನಿನ್ನ ಹೃದಯದಲ್ಲಿ । ಪದುಮನಾಭನು ಆವರವರ ನಾಮರೂಪ ಬಿ - । ಡದೆ ಧರಿಸಿಹನೆಂಬೊ ಕೃತ್ಯದಿಂದ । ವಧುವರ ಶಬ್ದವಾಚ್ಯ ವಾಸುದೇವನೆ ಸರಿ । ಇದರೊಳು ಸೂಕ್ಷ್ಮ ಉಂಟು ಗ್ರಹಿಸುವದು । ಪದುಮ ಸಂಭವ ವಾಯು ಖಗ ಅಹಿಪೇಶ ಸುರಪ । ಮದನ ಪ್ರಾಣನಿರುದ್ಧ ಮನು ಗುರು । ಸಾದಕ್ಷ ಪ್ರಚೇಶ್ವರ ಪ್ರವಹ ಯಮ ಶಶಿ । ಆದಿತ್ಯ ವರುಣಾದಿ ಸುರರೆಲ್ಲರು । ಕಾದುಕೊಂಡಿಪ್ಪರು ದೇವನ ಅನುಜ್ಞದಿ । ಸಾದರದಲಿ ತಿಳಿವರ ವಿಚ್ಛಾರ । ಬದರ ಸಂಕಾಶ ಗುರು ವಿಜಯ ವಿಠ್ಠಲರೇಯನ । ಪದಗಳರ್ಚಿಪದಕ್ಕೆ ಇದೇ ದ್ವಾರವು ॥ ೩ ॥

... ರೂಪಕ ತಾಳ ...

ಸುರಮುನಿ ಮೊದಲಾದ ಋಷಿಯ ಜನರೆಲ್ಲ । ಸರಿಯದೆ ನಿಂದಿಹರೂ ಸೂಕ್ಷ್ಮದಿಂದ। ಸುರಗಾಯಕ ವಿಡಿದು ನರ ನದಿ ಪರ್ವತ । ಪರಮ ಪವಿತ್ರ ಸಪ್ತ ವನಧಿಗಳು । ಅರಸು ತನ್ನಯ ನಿಜ ಭೃತ್ಯರಿಂದಲಿ ಕೂಡಿ । ಇರುವೊ ಸೊಬಗಿನಂತೆ ಹರಿಯು ತನ್ನ । ಪರಿವಾರ ಸಹ ವ್ಯಾಪ್ತಿ ವಿಭೂತಿ ಎನಿಸುವ । ಕಾರಣ ಕಾರ್ಯ ರೂಪದಿಂದ ನಿಂದು । ವರನಲ್ಲಿ ಇಪ್ಪನು ತತ್‌ಶಬ್ದ ವಾಚ್ಯದಿ । ನರನೆ ಈ ಪರಿ ತಿಳಿದು ಪೂಜಿಸದನ । ಇರಲಿ ಇದನು ಇತ್ತ ಮುಂದಣದಲಿ ಕೇಳೊ । ಪರಮ ಮಂಗಳವಾದ ವಧುಗಳಲ್ಲಿ । ಶಿರಿದೇವಿ ಭಾರತಿ ಸರಸ್ವತಿ ಷಣ್ಮಹಿಷಿ । ಗಿರಿಜೆ ವಾರುಣಿ ಸೌಪರಣಿ ಶಚಿ । ಸ್ಮರನಾರ್ಧಾಂಗಿನಿ ಪ್ರಾಣಿ ತಾರಾ ಮಾನವಿ ಉಷಾ । ವರ ದಾಕ್ಷಾಯಣಿ ಪ್ರಾವಹಿ ಶ್ಯಾಮಲಾರು । ತಾರಾ ಸುಜ್ಞ ಹರಿಪಾದದಿಂದ ಉದುಭವಿಸಿದ । ಪರಮೆ-ಪಾವನ್ನೆ ಸ್ತ್ರೀಯರುಂಟು । ಸಿರಿಪತಿ ಅದರಂತೆ ಸ್ತ್ರೀರೂಪವನೆ ಧರಿಸಿ । ಪರಿ ವ್ಯಾಪ್ತನಾಗಿದ್ದ ಸ್ತ್ರೀಯರಲ್ಲಿ । ತರುವಾಯದಲಿ ಸ್ಥೂಲ ಬೊಮ್ಮಾಂಡದೊಳಿದ್ದ । ಹರಿ ಸಿರಿ ಮೊದಲಾದ ದಿವಿಜರನ್ನು । ಶರೀರದಲಿ ತಂದು ಐಕ್ಯಚಿಂತಿಸಿ ಈ । ತೆರದಿ ತಿಳಿದು ಪರಮ ಭಕುತಿಯಿಂದ । ವರ ವಧು ಗಳಿಗಾಗಿ ಪರಿಪರಿ ವಸ್ತುಗಳ । ಪರಿಯ ಚಿಂತಿಸಿ ಹರಿಸಿರಿಗರ್ಪಿಸು। ಸಿರಿದೇವಿ ಮೊದಲಾದ ಸ್ತ್ರಿಯರಲಂಕರಿಸಿ। ಪರಮ ಭಕುತಿಯಿಂದ ನಾರಾಯಣಗೆ ।

ಸಿರಿದೇವಿಗರ್ಪಿಸು ವಿಧಿವಾಯು । ಸುರರಿಗರ್ಪಿಸು ಅವರವರ ಸ್ತ್ರೀಯರ - । ವರವರಲ್ಲಿ ಕೂಡಿಸು ವಿಧಿ ಪೂರ್ವಕ । ಪರಮ ಪುರುಷ ಹರಿ ತುಷ್ಟನಾಹ । ದುರುಳ ಮರ್ದನ ಗುರು ವಿಜಯ ವಿಠ್ಠಲರೇಯ । ಪರಮ ಯಶಸ್ಸು ನೀವ ಇಹಪರದಿ ।।೪।।

... ಝಂಪಿ ತಾಳ ...

ದೇಹವೆಂಬೊ ಕ್ಷೇತ್ರ ಸನ್ನಿಧಾನದಲ್ಲಿ । ಲೋಹಿತಾಕ್ಷನೆಂಬೊ ಪಾತ್ರಗಳು । ಅವ್ಯಾಹತಸ್ಥಾನ ವೈದಿಸು ನಿನ್ನ । ಸಹವಾಗಿ ಮೂರೇಳು ಗೋತ್ರದವರ । ಸಹಸ್ರರೂಪ ಗುರು ವಿಜಯ ವಿಠ್ಠಲರೇಯನ । ಮೋಹ ನಿನಗಾಗುವದು ಆವಕಾಲ ।। ೫ ।।

... ಅಟ್ಟತಾಳ ...

ಇನಿತು ಲಕ್ಷಣದಿಂದಲಿ ಚತುರ್ಥದಿನದಲ್ಲಿ । ಏನೇನು ಮಾಡ ತಕ್ಕದ್ದೆಲ್ಲ । ದನುಜಾರಿಗೆ ಇದು ಉಪಚಾರವೆಂದೆನ್ನು । ನೀನು ಕೊಡುವದೆಲ್ಲ ನೀನು ಕೊಂಬುವ-ದೆಲ್ಲ । ಅನ್ವಯಿಸು ಬಿಂಬನ ಪಾದ ಸನ್ನಿಧಿಯಲ್ಲಿ । ಇನಿತು ಮಾಡುವ ಮನೆಯಲ್ಲಿ ಸುರರೆಲ್ಲ । ವನಜಾಕ್ಷನಾಜ್ಞದಿ ಶುಭವೆ ಕೊಡುತಿಪ್ಪರು । ಇನ ಶಶಿಮಂಡಲ ಪರಿಯಂತ ತಿಳಿಯವ । ಘನರಾಶಿ ಗಣಿತಾದಿನಿತು ಸತ್ಪುಣ್ಯವ । ಜನಿಸುವದದರಿಂದ ಬರಿದೆ ಮಾತುಗಳಲ್ಲ । ಅನುಮಾನ ಇದಕಿಲ್ಲ ಶ್ರುತಿ ಸ್ಮೃತಿ ವಾಕ್ಯವು । ವನಜಾಧಿಪತಿ ಗುರು ವಿಜಯ ವಿಠ್ಠಲಂಗೆ । ಮನೆಯವನೆನಿಸುವಿ ಇದರಿಂದ ಆವಾಗ ।। ೬।।

... ಆದಿತಾಳ ...

ಈ ಪರಿಮಾಡುವದೆ ಶುಭಲಗ್ನವೆನಿಪದು । ಈ ಪರಿ ಮಾಡಿದವನ ವಂಶವೆ ಸದ್ವಂಶ। ಈ ಪರಿ ತಿಳಿದವನ ಗೋತ್ರವೆ ಅಭಿವೃದ್ಧಿ । ಈ ಪರಿ ತಿಳಿದವನ ಮನೆಯಲ್ಲಿ ಸರ್ವಕಾಲ । ಲೋಪವಾಗದಂತೆ ಶುಭಜಾಲ ವಾಗುಪದು । ಈ ಪರಿ ತಿಳಿಯದಲೆ ಶತಸಂಖ್ಯ ಕನ್ಯಾದಾನ । ಅಪಾರ ಮಾಡಲ್ಯಾಕೆ ಅವಗಿಲ್ಲ ಪುಣ್ಯವನ್ನು । ಶ್ರೀಪತಿ ಮೆಚ್ಚದಿಹ ನಾನಾ ವಿಧ ಕರ್ಮ ಜಾಲ । ಪಾಪ ನಿವರ್ತಿಗೆ ಕಾರಣವಲ್ಲ ಕೇಳೋ । ಸುಪ್ರಕಾಶವಾದ ಮಾಣಿಕ್ಯ ಮಾರಿಕೊಂಡು। ಅಲ್ಪವಾದ ಅಜಿವಾನ ಪ್ರಾಪ್ತಿ ಮಾಡಿಕೊಂಡಂತೆ । ಅಪಾರ ಮಹಿಮನ ಅನುಸಂಧಾನ ವಿಲ್ಲದೆ। ವ್ಯಾಪಾರದಿಂದ ಬಂದ ಕ್ಷುದ್ರವಾದ ಪುಣ್ಯವನ್ನು । ಕೋಪಾದಿ ದ್ವಾರದಿಂದ ದೈತ್ಯರು ಕೊಂಬುವರು । ಈ ಪರಿ ತಿಳಿದವನ ಜನುಮವೆ ಸಫಲವೆನ್ನು । ಅಪವರ್ಗದಾತ ಗುರು ವಿಜಯ ವಿಠ್ಠಲ-ರೇಯಾ । ಕಾಪಾಡುವನು ಸತತ ಈಪರಿ ಗ್ರಹಿಸಿದವರ ।। ೭ ।।

... ಜತೆ ...

ಮದುವೆ ಎನಿಪದಿದು ಸಿರಿ ನಾರಾಯಣರಿಗೆ । ಪದವಿಗೆ ಸೋಪಾನ ಗುರು ವಿಜಯ ವಿಠ್ಠಲ ವಲಿವಾ । ।। ಶ್ರೀ ಗುರು ಮಧ್ವೇಶಾರ್ಪಣಮಸ್ತು।।

*****

ಉಪಕರಣಗಳೆನ್ನು । ಕಕ್ಕುಲಾತಿಯಲಿಂದ ನನ್ನದೆಂಬೊ ಭ್ರಾಂತಿ । ಸಿಕ್ಕದಲೆ ಗುಣಿಸು ಕಲಿಕೃತ ಮೋಹವನು । ಧಿಕ್ಕರಿಸು ಜ್ಞಾನ ಬಾಹುಳ್ಯದಿ ಸತತ । ವಿಕ್ರಮದಿಂದಲ್ಲಿ ಇಂದ್ರಿಯ ಗ್ರಾಮಗಳು। ಆಕ್ರಮಿಸಿ ಬರಲು ಪ್ರಾಪ್ತವಾದ ಮೋಹ । ಪ್ರಖ್ಯಾತಗರ್ಪಿಸುವದು ಸಂಶಯ ಮಾಡದಲೆ । ಭಕ್ತಿ ಪೂರ್ವಕದಿಂದ ಅರ್ಚಿಸು ಜ್ಞಾನದಲಿ । ಭೋಕ್ತಸಾರ ಗುರು ವಿಜಯ ವಿಠ್ಠಲರೇಯ । ದಕ್ಕುವನು ಇದನು ಗ್ರಹಿಸಿದ ನರನಿಗೆ ॥ ೨ ॥

... ತ್ರಿವಿಡಿ ತಾಳ ...

ಹೃದಯದೊಳಗೆ ಹರಿ ಪ್ರೇರಿಸಿದದರೊಳು । ಮುದದಿ ನುಡಿವೆ ಗುರು ಕೃಪಾಬಲದಿ । ಒದಗಿ ಕೇಳುವದು ವರನ ಲಕ್ಷಣವನ್ನು ಈ । ವಿಧದಿ ಚಿಂತಿಸುವದು ಗುಪ್ತದಿಂದ । ಅಧಮ ಜನರುಗಳಿಗೆ ಅಂತು ತಿಳಿಯಗೊಡದೆ । ಪದೊಪದಿಗೆ ನಿನ್ನ ಹೃದಯದಲ್ಲಿ । ಪದುಮನಾಭನು ಆವರವರ ನಾಮರೂಪ ಬಿ - । ಡದೆ ಧರಿಸಿಹನೆಂಬೊ ಕೃತ್ಯದಿಂದ । ವಧುವರ ಶಬ್ದವಾಚ್ಯ ವಾಸುದೇವನೆ ಸರಿ । ಇದರೊಳು ಸೂಕ್ಷ್ಮ ಉಂಟು ಗ್ರಹಿಸುವದು । ಪದುಮ ಸಂಭವ ವಾಯು ಖಗ ಅಹಿಪೇಶ ಸುರಪ । ಮದನ ಪ್ರಾಣನಿರುದ್ಧ ಮನು ಗುರು । ಸಾದಕ್ಷ ಪ್ರಚೇಶ್ವರ ಪ್ರವಹ ಯಮ ಶಶಿ । ಆದಿತ್ಯ ವರುಣಾದಿ ಸುರರೆಲ್ಲರು । ಕಾದುಕೊಂಡಿಪ್ಪರು ದೇವನ ಅನುಜ್ಞದಿ । ಸಾದರದಲಿ ತಿಳಿವರ ವಿಚ್ಯಾರ । ಬದರ ಸಂಕಾಶ ಗುರು ವಿಜಯ ವಿಠ್ಠಲರೇಯನ । ಪದಗಳರ್ಚಿಪದಕ್ಕೆ ಇದೇ ದ್ವಾರವು ॥ ೩ ॥

... ರೂಪಕ ತಾಳ ...

ಸುರಮುನಿ ಮೊದಲಾದ ಋಷಿಯ ಜನರೆಲ್ಲ । ಸರಿಯದೆ ನಿಂದಿಹರೂ ಸೂಕ್ಷ್ಮದಿಂದ। ಸುರಗಾಯಕ ವಿಡಿದು ನರ ನದಿ ಪರ್ವತ । ಪರಮ ಪವಿತ್ರ ಸಪ್ತ ವನಧಿಗಳು । ಅರಸು ತನ್ನಯ ನಿಜ ಭೃತ್ಯರಿಂದಲಿ ಕೂಡಿ । ಇರುವೊ ಸೊಬಗಿನಂತೆ ಹರಿಯು ತನ್ನ । ಪರಿವಾರ ಸಹ ವ್ಯಾಪ್ತಿ ವಿಭೂತಿ ಎನಿಸುವ । ಕಾರಣ ಕಾರ್ಯ ರೂಪದಿಂದ ನಿಂದು । ವರನಲ್ಲಿ ಇಪ್ಪನು ತತ್‌ಶಬ್ದ ವಾಚ್ಯದಿ । ನರನೆ ಈ ಪರಿ ತಿಳಿದು ಪೂಜಿಸದನ । ಇರಲಿ ಇದನು ಇತ್ತ ಮುಂದಣದಲಿ ಕೇಳೊ । ಪರಮ ಮಂಗಳವಾದ ವಧುಗಳಲ್ಲಿ । ಶಿರಿದೇವಿ ಭಾರತಿ ಸರಸ್ವತಿ ಷಣ್ಮಹಿಷಿ । ಗಿರಿಜೆ ವಾರುಣಿ ಸೌಪರಣಿ ಶಚಿ । ಸ್ಮರನಾರ್ಧಾಂಗಿನಿ ಪ್ರಾಣಿ ತಾರಾ ಮಾನವಿ ಉಷಾ । ವರ ದಾಕ್ಷಾಯಣಿ ಪ್ರಾವಹಿ ಶ್ಯಾಮಲಾರು । ತಾರಾ ಸುಜ್ಞ ಹರಿಪಾದದಿಂದ ಉದುಭವಿಸಿದ । ಪರಮೆ-ಪಾವನ್ನೆ ಸ್ತ್ರೀಯರುಂಟು । ಸಿರಿಪತಿ ಆದರಂತೆ ಸ್ತ್ರೀರೂಪವನೆ ಧರಿಸಿ । ಪರಿ ವ್ಯಾಪ್ತನಾಗಿದ್ದ ಸ್ತ್ರೀಯರಲ್ಲಿ । ತರುವಾಯದಲಿ ಸ್ಥೂಲ ಬೊಮ್ಮಾಂಡದೊಳಿದ್ದ । ಹರಿ ಸಿರಿ ಮೊದಲಾದ ದಿವಿಜರನ್ನು । ಶರೀರದಲಿ ತಂದು ಐಕ್ಯಚಿಂತಿಸಿ ಈ । ತೆರದಿ ತಿಳಿದು ಪರಮ ಭಕುತಿಯಿಂದ । ವರ ವಧು ಗಳಿಗಾಗಿ ಪರಿಪರಿ ವಸ್ತುಗಳ । ಪರಿಯ ಚಿಂತಿಸಿ ಹರಿಸಿರಿಗರ್ಪಿಸು। ಸಿರಿದೇವಿ ಮೊದಲಾದ ಸ್ತ್ರಿಯರಲಂಕರಿಸಿ। ಪರಮ ಭಕುತಿಯಿಂದ ನಾರಾಯಣಗೆ ।

ಸಿರಿದೇವಿಗರ್ಪಿಸು ವಿಧಿವಾಯು । ಸುರರಿಗರ್ಪಿಸು ಅವರವರ ಸ್ತ್ರೀಯರ - । ವರವರಲ್ಲಿ ಕೂಡಿಸು ವಿಧಿ ಪೂರ್ವಕ । ಪರಮ ಪುರುಷ ಹರಿ ತುಷ್ಟನಾಹ । ದುರುಳ ಮರ್ದನ ಗುರು ವಿಜಯ ವಿಠ್ಠಲರೇಯ । ಪರಮ ಯಶಸ್ಸು ನೀವ ಇಹಪರದಿ ॥೪॥

... ಝಂಪಿ ತಾಳ ...

ದೇಹವೆಂಬೊ ಕ್ಷೇತ್ರ ಸನ್ನಿಧಾನದಲ್ಲಿ । ಲೋಹಿತಾಕ್ಷನೆಂಬೊ ಪಾತ್ರಗಳು । ಅವ್ಯಾಹತಸ್ಥಾನ ವೈದಿಸು ನಿನ್ನ । ಸಹವಾಗಿ ಮೂರೇಳು ಗೋತ್ರದವರ । ಸಹಸ್ರರೂಪ ಗುರು ವಿಜಯ ವಿಠ್ಠಲರೇಯನ । ಮೋಹ ನಿನಗಾಗುವದು ಆವಕಾಲ ॥ ೫ ॥

... ಅಟ್ಟತಾಳ ...

ಇನಿತು ಲಕ್ಷಣದಿಂದಲಿ ಚತುರ್ಥದಿನದಲ್ಲಿ । ಏನೇನು ಮಾಡ ತಕ್ಕದ್ದೆಲ್ಲ । ದನುಜಾರಿಗೆ ಇದು ಉಪಚಾರವೆಂದೆನ್ನು । ನೀನು ಕೊಡುವದೆಲ್ಲ ನೀನು ಕೊಂಬುವ-ದೆಲ್ಲ । ಅನ್ವಯಿಸು ಬಿಂಬನ ಪಾದ ಸನ್ನಿಧಿಯಲ್ಲಿ । ಇನಿತು ಮಾಡುವ ಮನೆಯಲ್ಲಿ ಸುರರೆಲ್ಲ । ವನಜಾಕ್ಷನಾಜ್ಞದಿ ಶುಭವೆ ಕೊಡುತಿಪ್ಪರು । ಇನ ಶಶಿಮಂಡಲ ಪರಿಯಂತ ತಿಳಿಯವ । ಘನರಾಶಿ ಗಣಿತಾದಿನಿತು ಸತ್ಪುಣ್ಯವ । ಜನಿಸುವದದರಿಂದ ಬರಿದೆ ಮಾತುಗಳಲ್ಲ । ಅನುಮಾನ ಇದಕಿಲ್ಲ ಶ್ರುತಿ ಸ್ಮೃತಿ ವಾಕ್ಯವು । ವನಜಾಧಿಪತಿ ಗುರು ವಿಜಯ ವಿಠ್ಠಲಂಗೆ । ಮನೆಯವನೆನಿಸುವಿ ಇದರಿಂದ ಆವಾಗ ॥ ೬॥

... ಆದಿತಾಳ ...

ಈ ಪರಿಮಾಡುವದೆ ಶುಭಲಗ್ನವೆನಿಪದು । ಈ ಪರಿ ಮಾಡಿದವನ ವಂಶವೆ ಸದ್ವಂಶ। ಈ ಪರಿ ತಿಳಿದವನ ಗೋತ್ರವೆ ಅಭಿವೃದ್ಧಿ । ಈ ಪರಿ ತಿಳಿದವನ ಮನೆಯಲ್ಲಿ ಸರ್ವಕಾಲ । ಲೋಪವಾಗದಂತೆ ಶುಭಜಾಲ ವಾಗುಪದು । ಈ ಪರಿ ತಿಳಿಯದಲೆ ಶತಸಂಖ್ಯ ಕನ್ಯಾದಾನ । ಅಪಾರ ಮಾಡಲ್ಯಾಕೆ ಅವಗಿಲ್ಲ ಪುಣ್ಯವನ್ನು । ಶ್ರೀಪತಿ ಮೆಚ್ಚದಿಹ ನಾನಾ ವಿಧ ಕರ್ಮ ಜಾಲ । ಪಾಪ ನಿವರ್ತಿಗೆ ಕಾರಣವಲ್ಲ ಕೇಳೋ । ಸುಪ್ರಕಾಶವಾದ ಮಾಣಿಕ್ಯ ಮಾರಿಕೊಂಡು। ಅಲ್ಪವಾದ ಅಜಿವಾನ ಪ್ರಾಪ್ತಿ ಮಾಡಿಕೊಂಡಂತೆ । ಅಪಾರ ಮಹಿಮನ ಅನುಸಂಧಾನ ವಿಲ್ಲದೆ। ವ್ಯಾಪಾರದಿಂದ ಬಂದ ಕ್ಷುದ್ರವಾದ ಪುಣ್ಯವನ್ನು । ಕೋಪಾದಿ ದ್ವಾರದಿಂದ ದೈತ್ಯರು ಕೊಂಬುವರು । ಈ ಪರಿ ತಿಳಿದವನ ಜನುಮವೆ ಸಫಲವೆನ್ನು । ಅಪವರ್ಗದಾತ ಗುರು ವಿಜಯ ವಿಠ್ಠಲ-ರೇಯಾ । ಕಾಪಾಡುವನು ಸತತ ಈಪರಿ ಗ್ರಹಿಸಿದವರ ॥ ೭ ॥

... ಜತೆ ...

ಮದುವೆ ಎನಿಪದಿದು ಸಿರಿ ನಾರಾಯಣರಿಗೆ । ಪದವಿಗೆ ಸೋಪಾನ ಗುರು ವಿಜಯ ವಿಠ್ಠಲ ವಲಿವಾ । ॥ ಶ್ರೀ ಗುರು ಮಧ್ವೇಶಾರ್ಪಣಮಸ್ತು॥

*****

## ಶ್ರೀವೇದವ್ಯಾಸದೇವರ ಸ್ತೋತ್ರ

**ರಾಗ - ಭೈರವಿ** **ತಾಳ - ಅಟ್ಟ**

ಶ್ರೀಶ ವೇದವ್ಯಾಸನಾದನು । ಶ್ರೀಶ ವೇದವ್ಯಾಸನಾಗಲು । ಸಾಸಿರನಯನ ಸಾಸಿರವದನ। ಸಾಸಿರಕರ ಮಿಕ್ಕ ಸುರರೆಲ್ಲ ತು -। ತಿಸಿ ಹಿಗ್ಗುತ ಹಾರೈಸಲಂದು ॥ ಪ. ॥ ದರ್ಪಕಜನಕ ಸರ್ಪತಲ್ಪನಾಗಿ । ತಪ್ಪದನುಗಾಲ ಇಪ್ಪ ವಾರಿಧೀಲಿ । ಒಪ್ಪದಿಂದಲಿ ಕಂದರ್ಪ ಹರನಯ್ಯಾ । ಸುಪ್ಪಾ ವರ್ಣನದಂತೆ ನೊಪ್ಪಗೊಂಡು ॥ ಇಪ್ಪತ್ತು ಲಕ್ಷ ಯೋಜನದಗಲಿಪ್ಪ । ಅಪ್ಪನ ಅರಮನೆ ದರ್ಪಣದಂತೆ ತಾ । ರಾಪಥ ಮೀರದಂತಿಪ್ಪುದು ನೋಡಿ ಸ । ಮೀಪಕ್ಕೆ ವಾಣೀಶ ಬಪ್ಪವೇಗಾ ॥ ೧ ॥ ಬಂದು ಬಿನ್ನೈಸಿದ ಮಂದಮತಿ ಕಲಿ । ಯಿಂದ ಪುಣ್ಯವೆಲ್ಲ ಹಿಂದಾಯಿತೆನೆ ಮು -। ಕುಂದ ಭಕ್ತನಿಗೆ ಒಂದೆ ಮಾತಿನಲ್ಲಾ-। ನಂದ ಬಡಿಸಿ ಪೋಗೆಂದು ಪೇಳೆ ॥ ಅಂದು ಸುಯೋಜನ ಗಂಧಿಯ ಗರ್ಭದೊ -। ಳಿಂದವತರಿಸಿ ಪೊಂದಿದ ಅಜ್ಞಾನ । ಅಂಧಕಾರವೆಲ್ಲ ಹಿಂದು ಮಾಡಿ ಸುರ । ಸಂದೋಹ ಪಾಲಿಸಿ ನಿಂದ ದೇವಾ ॥೨॥ ಕೆಂಜೆಡೆವೊಪ್ಪೆ ಕೃಷ್ಣಾಂಜಿನ ಹಾಸಿಕೆ । ಕಂಜನಾಪ್ತನಂದದಿ ರಂಜಿಸುವ ಕಾಯ । ಮಂಜುಳ ಸುಜ್ಞಾನಪುಂಜನು ವಜ್ರರಾ । ಪಂಜರನೊ ನಿತ್ಯ ಅಂಜಿದಗೆ ॥ ಸಂಜೆಯಾ ತೋರಿ ಧನಂಜಯ ಶಿಷ್ಯರಿ । ಗಂಜದಂತೆ ಕರಕಂಜವ ತಿರುಹಿ। ಮಂಜುಳಭಾಷವ ನಿರಂಜನ ಪೇಳಿದ । ಕುಂಜರ ವೈರಿಯ ಭಂಜನನಯ್ಯ ॥ ೩ ॥ ಗಂಗಾತೀರದಲ್ಲಿ ಶೃಂಗಾರಉಪವ -। ನಾಂಗಳದರೊಳು । ಸಿಂಗಗೋಮಯ ಭು -। ಜಂಗ ಮೂಷಕ ಮಾತಂಗ ಸಾರಮೇಯಾ । ಕೊಂಗ ಹಂಗ ಸರ್ವಾಂಗ ರೋಮ ॥ ತುಂಗ ಶರಭ ವಿಹಂಗ ಶಾರ್ದೂಲ ಸಾ -। ರಂಗ ಕುರಂಗ ಕೂಳಿಂಗ ಪಾಳಂಗ ಪ್ಲ-। ವಂಗ ತುರಂಗ ಪತಂಗ ಭೃಂಗಾದಿ ತ -। ರಂಗವು ತುಂಬಿರೆ ಮಂಗಳಾಂಗ ॥ ೪ ॥ ಬದರೀ ಬೇಳಲು ಕಾದರಿ ಕಾಮರಿ । ಮಧು ಮಾಧವಾಳ ಅದುಭೂತ ತೆಂಗು । ಕದಳಿ ತಾಪಸಿ ಮಾದ ಕದಂಬ ಚೂ -। ತದ ತರು ದ್ರಾಕ್ಷಿಯು ಮೃದು ಜಂಬೀರವು ॥ ಬಿದಿರು ಖರ್ಜೂರ ಮುದದಿ ದಾಳಿಂಬ । ತುದಿ ಮೊದಲು ಫಲದ ವೃಕ್ಷ ನಾನಾ । ಪಾದಪಲತೆಯು ಪೊದೆ ಪಲ್ಲಯಿಸಿ । ಇದೆ ಆರು ಋತು ಸದಾನಂದ ॥ ೫ ॥ ವನದ ನಡುವೆ ಮುನಿಗಳೊಡೆಯಾ। ಮಿನುಗುತ್ತಿರಲಾ ಕಾನನ ಸುತ್ತಲು । ಆನನವ ತೂಗುತ್ತ ಧ್ವನಿ ಎತ್ತಿ ಬಲು । ಗಾನ ಪಾಡಿದವು ಗುಣದಲ್ಲಿ ॥ ಕುಣಿದು ಖಗಾದಿ ಗಣಾನಂದದಿಂದಿರೆ । ವನನಿಕರ ಮೆಲ್ಲನೆ ಮಣಿದು ನೆ -। ಲನ ಮುಟ್ಟುತಿರೆ ಅನಿಮಿಷರು ನೋ -। ಡನಿತ್ತಾಚ್ಚರಿಯನು ಪೇಳೆ ॥ ೬॥ ಮೌನಿ ನಾರದನು ವೀಣೆ ಕೆಳಗಿಟ್ಟು । ಮೌನವಾದನು ಬ್ರಹ್ಮಾಣಿ ತಲೆದೂಗಿ । ತಾ ನಿಂದಳಾಗ ಗೀರ್ವಾಣ ಗಂಧರ್ವರು । ಗಾನವ ಮರೆದಿದೇನೆನುತ ॥ ಮೇನಕಿ ಊರ್ವಶಿ ಜಾಣೇರು ತಮ್ಮಯ । ವಾಣಿ ತಗ್ಗಿಸಿ ನರ್ತನೆಯ ನಿಲ್ಲಿಸಿ । ದೀನರಾದರು ನಿಧಾನಿಸಿ ಈಕ್ಷಿಸಿ ।ಏಣಿಸುತ್ತಿದ್ದರು ಶ್ರೀನಾಥನಾ ॥ ೭ ॥ ನಮೋ ನಮೋಯೆಂದು ಅಮರ ಹಸ್ತ । ಕಮಲ ಮುಗಿದು ನಮಗೆ ನಿಮ್ಮಯ । ಅಮಲಗುಣ ನಿಗಮದಿಂದೆಣಿಸೆ । ಕ್ರಮ ಗಾಣೆವು ಉತ್ತಮ ದೇವ ॥ ಕೂರ್ಮ ಖಗಮೃಗ ಸಮವೆನಿಸಿ ಅ। ಮಮ ಕುಣಿಸಿದ ತಮವ ಹಾರಿಸಿ । ಚಮತ್ಕಾರದಲ್ಲಿ ನಾನಾ ನಮುಗೊರವಿತ್ತ । ರಮೆಯರಸ ಆಗಮನುತ ॥ ೮ ॥

ಇದನು ಪಠಿಸೆ ಸದಾ ಭಾಗ್ಯವಕ್ಕು । ಮದವಳಿದಘವುದಧಿ ಬತ್ತೋದು । ಸದನದಲ್ಲೀಗಾ ಮದುವೆ ಮುಂಜೆ ಬಿಡದಲಾಗೋವು ಶುಭದಲ್ಲಿಗೆ । ಪದೋಪದಿಗೆ ಸಂಪದವಿಗೆ ಜ್ಞಾನ। ನಿಧಿ ಪೆಚ್ಚುವದು ಹೃದಯ ನಿರ್ಮಳ । ಬದರಿನಿವಾಸ ವಿಜಯ ವಿಠ್ಠಲ । ಬದಿಯಲ್ಲೇ ಬಂದು ವೊದಗುವಾ ॥ ೯ ॥

**ಆ) ಮಂತ್ರಗಳು**

**i.** ಕೆಳಗಿನ ಮಂತ್ರಗಳಲ್ಲಿ ಯಾವುದಾದರೂ ಒಂದನ್ನು ಗುರೂಪದೇಶ ಪೂರ್ವಕ ಪಡೆದು ಶುಚಿಯಲ್ಲಿದ್ದು ನಿತ್ಯ ಪಠಿಸಬೇಕು. ಪ್ರತಿಯೊಂದು ಮಂತ್ರದ ಒಟ್ಟು ಜಪಸಂಖ್ಯೆ ೧೦,೦೦೦.

೧) **ಕಾತ್ಯಾಯನಿ ಮಹಾಮಾಯೆ ಮಾಹಾಯೋಗಿನ್ಯಧೀಶ್ವರಿ ।**
**ನಂದಗೋಪಸುತಂ ಕೃಷ್ಣಂ ಪತಿಂ ಮೇ ಕುರು ತೇ ನಮಃ ॥ - ಭಾಗವತ ಸ್ಕಂಧ ೧೦.**

೨) **ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರಪ್ರಿಯಭಾಮಿನಿ ।**
**ವಿವಾಹಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿ ಮೇ ॥**

೩) **ಸರ್ವಮಂಗಲದಾತಾರೌ ಪಾರ್ವತೀಪರಮೇಶ್ವರೌ ।**
**ಗಣೇಶಸ್ಕಂಧಸಂಯುಕ್ತೌ ವಂದೇ ವಾಂಛಿತಸಿದ್ಧಯೇ ॥**

***

**ii. ಸರ್ವಕಾರ್ಯಸಿದ್ಧಿಗಾಗಿ ಪಠಿಸಬೇಕಾದ ಶ್ರೀಲಕ್ಷ್ಮಿಯ ಅಷ್ಟೋತ್ತರ ಶತನಾಮ ಸ್ತೋತ್ರವು**

**॥ಶ್ರೀ ಶ್ರಿಯೈ ನಮಃ॥ ಮಹಾಲಕ್ಷ್ಮ್ಯಷ್ಟೋತ್ತರ ಶತನಾಮಸ್ತೋತ್ರಂ ॥**

ವಂದೇ ಪದ್ಮಕರಾಂ ಪ್ರಸನ್ನವದನಾಂ ಸೌಭಾಗ್ಯದಾಂ ಭಾಗ್ಯದಾಂ
ಹಸ್ತಾಭ್ಯಾಮಭಯಪ್ರದಾಂ ಮಣಿಗಣೈರ್ನಾನಾವಿಧೈರ್ಭೂಷಿತಾಂ।
ಭಕ್ತಾಭೀಷ್ಟಫಲಪ್ರದಾಂ ಹರಿಹರಬ್ರಹ್ಮಾದಿಭಿಸ್ಸೇವಿತಾಂ
ಪಾರ್ಶ್ವೇ ಪಂಕಜಶಂಖಮುಖ್ಯನಿಧಿಭಿರ್ನಿತ್ಯಂ ಸದಾ ಲಕ್ಷ್ಮಿಭಿಃ ॥೧॥

ಮಾತರ್ನಮಾಮಿ ಕಮಲೇ ಕಮಲಾಯತಾಕ್ಷಿ
ಶ್ರೀವಿಷ್ಣುಹೃತ್ಕಮಲವಾಸಿನಿ ವಿಶ್ವಮಾತಃ।
ಕ್ಷೀರೋದಜೇ ಕಮಲಕೋಮಲಗರ್ಭಗೌರಿ
ದೇವಿ ಪ್ರಸೀದ ಸತತಂ ನಮತಾಂ ಶರಣ್ಯೇ ॥೨॥

ಸರಸಿಜನಯನೇ ಸರೋಜಹಸ್ತೇ
ಧವಳತರಾಂಶುಕಗಂಧಮಾಲ್ಯಶುಭ್ರೇ
ಭಗವತಿ ಹರಿವಲ್ಲಭೇ ಮನೋಜ್ಞೇ
ತ್ರಿಭುವನತಾಪಹರೇ ಪ್ರಸೀದ ಮಹ್ಯಂ ॥೩॥

ಪ್ರಕೃತಿಂ ವಿಕೃತಿಂ ವಿದ್ಯಾಂ ಸರ್ವಭೂತಹಿತಾಂ ಪರಾಂ|
ವಾಚಂ ವಿಭೂತಿಂ ಸುರಭಿಂ ನಮಾಮಿ ಪ್ರಣವಾತ್ಮಿಕಾಂ ||೧||

ಶ್ರದ್ಧಾಂ ಪದ್ಮಾಲಯಾಂ ಪದ್ಮಾಂ ಶುಚಿಂ ಸ್ವಾಹಾಂ ಸ್ವಧಾಂ ಸುಧಾಂ|
ನಮಾಮಿ ಧರ್ಮನಿಲಯಾಂ ಕರುಣಾಂ ಲೋಕಮಾತರಂ ||೨||

ಪದ್ಮಪ್ರಿಯಾಂ ಪದ್ಮಹಸ್ತಾಂ ಪದ್ಮಾಕ್ಷೀಂ ಪದ್ಮಸುಂದರೀಂ|
ಪದ್ಮೋದ್ಭವಾಂ ಪದ್ಮಮುಖೀಂ ಪದ್ಮನಾಭಪ್ರಿಯಾಂ ರಮಾಂ ||೩||

ಪದ್ಮಮೂಲಾಧರಾಂ ದೇವೀಂ ಪದ್ಮಿನೀಂ ಪದ್ಮಗಂಧಿನೀಂ|
ಪುಣ್ಯಗಂಧಾಂ ಸುಪ್ರಸನ್ನಾಂ ಪ್ರಸಾದ ಸಮುಖೀಂ ಪ್ರಭಾಂ ||೪||

ನಮಾಮಿ ಕಮಲಾಂ ಕಾಂತಾಂ ಕಾಮಾಂ ಕ್ಷೀರೋದಸಂಭವಾಂ|
ಅನುಗ್ರಹಪರಾಮೃದ್ಧಿಮನಘಾಂ ಹರಿವಲ್ಲಭಾಂ ||೫||

ಅಶೋಕಾಮಮೃತಾಂ ದೀಪ್ತಾಂ ವಿಶೋಕಾಂ ಶೋಕನಾಶಿನೀಂ|
ನಮಾಮಿ ಚಂದ್ರವದನಾಂ ಚಂದ್ರಾಂ ಚಂದ್ರಸಹೋದರೀಂ ||೬||

ಚತುರ್ಭುಜಾಂ ಚಂದ್ರರೂಪಾಮಿಂದಿರಾಮಿಂದುಶೀತಲಾಂ|
ಆಹ್ಲಾದಜನನೀಂ ತುಷ್ಟಿಂ ಶಿವಾಂ ಶಿವಕರೀಂ ಸತೀಂ ||೭||

ವಿಮಲಾಂ ವಿಶ್ವಜನನೀಂ ಪುಷ್ಟಿಂ ದಾರಿದ್ರ್ಯನಾಶಿನೀಂ |
ಪ್ರೀತಿಂ ಪುಷ್ಕರಿಣೀಂ ಶಾಂತಾಂ ಶುಕ್ಲಮಾಲ್ಯಾಂಬರಾಂ ಶ್ರಿಯಂ ||೮||

ಭಾಸ್ಕರೀಂ ಬಿಲ್ವನಿಲಯಾಂ ವರಾರೋಹಾಂ ಯಶಸ್ವಿನೀಂ |
ವಸುಂಧರಾಮುದಾರಾಂಗಾಂ ಹರಿಣೀಂ ಹೇಮಮಾಲಿನೀಂ ||೯||

ಧನಧಾನ್ಯಕರೀಂ ಸಿದ್ಧಿಂ ಸೀತಾಂ ಸೌಮ್ಯವರಪ್ರದಾಂ|
ನೃಪವೇಶ್ಮಗತಾನಂದಾಂ ವೀರಲಕ್ಷ್ಮೀಂ ಶುಭಪ್ರದಾಂ ||೧೦||

ಶುಭಾಂ ಹಿರಣ್ಯಪ್ರಾಕಾರಾಂ ಸಮುದ್ರತನಯಾಂ ಜಯಾಂ|
ನಮಾಮಿ ಮಂಗಳಾಂ ದೇವೀಂ ವಿಷ್ಣುವಕ್ಷಸ್ಸ್ಥಲಸ್ಥಿತಾಂ ||೧೧||

ವಿಷ್ಣುಪತ್ನೀಂ ಪ್ರಸನ್ನಾಕ್ಷೀಂ ನಾರಾಯಣಸಮಾಶ್ರಿತಾಂ|
ದಾರಿದ್ರ್ಯಧ್ವಂಸಿನೀಂ ದೇವೀಂ ಸರ್ವೋಪದ್ರವಹಾರಿಣೀಂ ||೧೨||

ವನದುರ್ಗಾಂ ಮಹಾಕಾಲೀಂ ಬ್ರಹ್ಮವಿಷ್ಣುಶಿವಾತ್ಮಿಕಾಂ |
ತ್ರಿಕಾಲಜ್ಞಾನಸಂಪನ್ನಾಂ ನಮಾಮಿ ಪರಮಾಂಬಿಕಾಂ ||೧೩||

ವಾಗೀಶ್ವರೀಂ ವರಾಪಾಂಗಾಂ ದೇವಕೀಂ ದೇವಮಾತರಂ|
ಸಿದ್ಧಲಕ್ಷ್ಮೀಂ ಮಹಾವಿದ್ಯಾಂ ನಮಾಮಿ ಭುನೇಶ್ವರೀಂ ||೧೪||

ಲಕ್ಷ್ಮೀಂ ಕ್ಷೀರಸಮುದ್ರರಾಜತನಯಾಂ ಶ್ರೀರಂಗಧಾಮೇಶ್ವರೀಂ
ದಾಸೀಭೂತಸಮಸ್ತ ದೇವವನಿತಾಂ ಲೋಕೈಕದೀಪಾಂಕುರಾಂ |
ಶ್ರೀಮನ್ಮಂದಕಟಾಕ್ಷಲಬ್ಧವಿಭವ ಬ್ರಹ್ಮೇಂದ್ರಗಂಗಾಧರಾಂ
ತ್ವಾಂ ತ್ರೈಲೋಕ್ಯಕುಟುಂಬಿನೀಂ ಸರಸಿಜಾಂ ವಂದೇ ಮುಕುಂದಪ್ರಿಯಾಂ||೧೫||

**||ಇತಿ ಶ್ರೀ ವರಾಹಪುರಾಣಾಂತರ್ಗತಾ ಲಕ್ಷ್ಮೀಸ್ತುತಿಃ ಸಮಾಪ್ತಾ||**

## ಜಗದ್ಗುರು ಶ್ರೀಮದ್ವಿಜಯೀಂದ್ರತೀರ್ಥ ಶ್ರೀಪಾದ ವಿರಚಿತವಾದ ದುರಿತಾಪಹಾರ ಸ್ತೋತ್ರದ (ಪಾಪ ವಿಮೋಚನ ಸ್ತುತಿ) ಕನ್ನಡಾನುವಾದ

**ರಾಜಾ. ಶ್ರೀ. ಗುರುರಾಜಾಚಾರ್ಯರು, ಮಂತ್ರಾಲಯ**

**ರಾಗ - ಮೋಹನ ಪಲ್ಲವಿ** **ತಾಳ - ಝಂಪೆ**

ನಾ ಮಾಡಿದಪರಾಧ ಮನಮುಟ್ಟಿ ಪೇಳುವೆನು । ಕ್ಷಮೆಯರಸ ನೀ ಎನ್ನ ಕ್ಷಮಿಸಿ ಕೇಳಯ್ಯ ॥ಪ॥ ಸ್ವಾಮಿ ! ನಾನೊಂದು ಸಂವತ್ಸರದಿ ತಿಲಮಾತ್ರ । ಒಮ್ಮೆಯಾದರು ಸುಕೃತ ಮಾಡಲಿಲ್ಲ ॥ ನೆಮ್ಮದಿಯೋಳಾದರಾಂ ಯಾಮ ಯಾಮದಿ ಸಕಲ । ಇಂದ್ರಿಯದಿ ಅಘಗಳನು ಮಾಡುವೆ ಮುಕುಂದ ॥೧॥ ನಿನ್ನ ಕಲ್ಯಾಣ ಗುಣಗಣಗಳಾಶ್ರವಣದಿಂ । ಜನ್ಯ ವಾದಾನಂದ ಭರದಿ ಮಮ ಶಿರವು ॥ ಒಮ್ಮೆಯಾದರೂ ಕಂಪಿಸದಲೇ ಪ್ರಭು ಬಂಧುಗಳ । ದುರ್ಗುಣವ ಕೇಳಿ ನಿಃಶಂಕೆಯಿಂ ಚಲಿಸುವುದು ॥೨॥ ಪುಣ್ಯಶ್ಲೋಕನೇ! ನಿನ್ನ ಶುಭಚರಿತೆ ಕೇಳಲು । ಎನ್ನ ಕರ್ಣಂಗಳು ಯತ್ನಿಸುವುದಿಲ್ಲ ॥ ಮುನ್ನ ವ್ಯಭಿಚಾರ, ಪ್ರಾಪಂಚಿಕವೇ ಮೊದಲಾದ । ಅನ್ಯ ವಿಷಯವ ಕೇಳಲಾದರದಿ ಯತ್ನಿಪುದು ॥೩॥ ಮಾಧವನೇ ! ಸಚ್ಛಾಸ್ತ್ರದವಲೋಕನಕೆ ಎನ್ನಾ-। ಸಾಧು ನಯನಗಳೆರಡು ಯತ್ನಿಸುವುದಿಲ್ಲ॥ ಆದರಾಬಾಲನರ್ತಕಿ ಗಣಿಕೆಯರ ನಾಟ್ಯ । ಮೋದದಿಂದೀಕ್ಷಿಸಲು ತವಕಿಪುದು ಸತತ॥೪॥ ಶ್ರೀಶ ತವ ಪದ ಪದುಮದ್ವಯ ದೊಳರ್ಪಿತಮಾದ । ಪುಷ್ಪಗಂಧಗಳ ನಾಸಿಕೆಯಿಂದ ಮೂಸಿಲ್ಲ ॥ ಲೇಸಾಗಿ ಹರಿಚರಣಕರ್ಪಿಸದ ಕುಸುಮಗಳ । ಹೇಸಿ ಗಂಧಗಳ ನಾನಾಘ್ರಾಣಿಸಿಹೆ ದೇವ ॥೫॥ ನರಹರಿಯೆ! ಅಚ್ಯುತ ಮಾಧವೇಶ ಕೃಷ್ಣ । ಹರಿ ವರದ ಗೋವಿಂದ ಮುಕುಂದನಾಮಗಳ ॥ ಉಚ್ಚರಿಸದಲೇ ಎನ್ನ ದುಷ್ಟ ಜಿಹ್ವೆಯು ಮತ್ತೆ । ಅವರ ಭಗಲಿಂಗ ಶಬ್ದಗಳನುಚ್ಚರಿಸುವುದಯ್ಯಾ ॥೬॥ ಇಂದಿರೇಶನೇ! ಸಕಲಗುಣ ಪೂರ್ಣ ಶ್ರೇಷ್ಠನೆ । ಎಂದಿಗೂ ಭಕುತಿಯಿಂದೆನ್ನ ಕರಗಳು ನಿನ್ನ । ಮಂದಿರದ ಮಾರ್ಜನಾದಿಗಳ ಮಾಡುವುದಿಲ್ಲ । ಮುಂದು ದುರ್ವಸ್ತುಗಳ ಸ್ವೀಕರಿಸಲೆತ್ನಿಪುದು॥೭॥ ಮಧ್ವಪತಿಯರ್ಪಣಕೆ ಸಲ್ಲದಾಧಮನಿರುತಾ - । ಶುದ್ಧಮಯವೃಂತಾಕ ಪಲಾಂಡು ಮೊದಲಾದನು ॥ ಶ್ರದ್ಧೆಯಿಂ ಭಜಿಸುತಿಹ ಎನ್ನ, ಹರಿಗರ್ಪಿಸದ । ಶುದ್ಧಾನ್ನ ರಹಿತವಾದುದರಕಿಗೋ ಧಿಕ್ಕಾರ ॥೮॥ ಮೋದದಿಂದಲಿ ನಿತ್ಯ ಜಾರವನಿತಾಸದನ -। ಕಾದರದಿ ತ್ವರೆಯುಳ್ಳ ಚರಣದಿಂ ಪೋಗುವೆನು॥ ಮಾಧವನೇ ! ಕಿಂತು ತವ ಆಲಯಂಗಳ ಕುರಿತು । ಎಂದೆಂದು ಪೋಗದಲೇ ಅತಿದುರಾಗ್ರಹಿಯಾದೆ ॥೯॥ ಸಕಲ ಇಂದ್ರಿಯಗಳಲಿ ಮನ ಒಂದು ವರವೆಂದು । ನಿಖಿಲ ವಾದಾಗಮ ಸ್ಮೃತಿ ಪ್ರಮಿತವಾಗಿಹುದು ॥ ಸ್ವಾಮಿ! ಈ ಮನ ಜಯಿಪ ಮನುಜಗಿಂದ್ರಿಯ

ಜಯವು । ನಿಯಮವಾಗಿಹುದೆಂದು ಜನಾನುಭವ ವಿಹುದಯ್ಯ ॥೧೦॥ ಚತುರವಿಧ ನಾಶರಹಿತನೆ ! ಕೃಷ್ಣದೇವ ನಿಜ - । ಭಕ್ತರನು ಭವವಾರ್ಧಿಯಿಂದ ತರಿಸುವ ನಿನ್ನ ॥ ಅರಿತಿರುವ ಮನದಿ ಧ್ಯಾನಿಸದಿರುವೆನೆಂದು । ಪೂರ್ವೋಕ್ತ ಭವಸಾಗರವ ದಾಟಲೆತ್ನವು ಇಲ್ಲ ॥೧೧॥ ವಾಸುದೇವನೆ ! ಎನ್ನ ಪಾಪತತಿಗಾನರಕ । ವಾಸವೇ ಫಲವಾಗೆ ಮೂರು ಲೋಕದಿ ಎನಗೆ ॥ ಈಸು ಸಮ ಸುಖಿಗಳಾರಿಲ್ಲ ಕೇಳಾದರೇ । ದೋಷಿಯಾದೆನ್ನಘದ ಫಲದಿ ತಮ ಕಾದಿಹುದು॥೧೨॥ ಒಡೆಯ ಸುಖದನುಭವ ಪಡೆಯಲೋಸುಗ ನಿರುತ । ಕಡುಪಾಪ ಕಾರ್ಯಗಳ ಎಸಗುತಿಲ್ಲವೋ, ದೇವ ॥ ಪೊಡವಿಯೊಳು ನಿನ್ನ ಶುಭ ನಾಮಕಿಹ ಅಘನಾಶ । ದೃಢಕೀರ್ತಿ ಪರಿಕಿಸಲು ಮಾಡುತಿಹೆನಯ್ಯ ॥೧೩॥ ಶ್ರೀಪತಿಯೆ ! ನಿಜಭಕುತರೊಳು ವಾಸಿಸುವರೆಂಬ । ಕೋಪದಿಂ ಪಾಪದ ನಿಯಾಮಕಾಸುರರಿಗೆ ॥ ತಾಪಕೊಡಲೆನ್ನಿಂದ ಅಶುಭಕರ್ಮವ ಗೈಸಿ । ಸುಪ್ರಕಾಶಿಸಿ ನಿಖಿಲ ನಿಯಾಮಕನೆ ವಿಹರಿಸುವೆ ॥೧೪॥ ಕೇಶವನೆ ದೇವ ಪಾಪಪ್ರಚುರನಾದೆನಗೆ । ಈಷಿತೆಂದಾದರೂ ಪುಣ್ಯ ಘಟಿಸಿದೊಡೆ ॥ ಆ ಸುಕೃತ ನಾಗ್ಯೆದ ಇತರಾಘತತಿಯಿಂದ । ನಶಿಸುವುದು ಅಘಹರಿಸಿ ಕೃತಕೃತ್ಯ ವೆನಿಸುವುದು ॥೧೫॥ ವಂದನೀಯನೇ ! ಸುಕೃತಮಯ ಶರೀರನೆ, ಸ್ವಾಮಿ । ಅಂದದಾ ಪುಣ್ಯಗಳು ಉಭಯ ವಿಧದಿಂದೆನಗೆ ॥ ಇಂದು ಕಾಲನ ಭಯದಿಂ ಪಾರಾಗುವಾ ಪರಿಯ । ಮುಂದು ಪೇಳಯ್ಯ ಬಹು ಭೀರುವಾದೆನಗೆ ॥೧೬॥ ಮಾನವರ ಮಧ್ಯದೊಳು ಅತುಲ ವೈಷ್ಣವ ಜನುಮ । ನಿನ್ನ ಕೃಪೆಯಿಂ ಪಡೆದು ಕ್ಷಣ ಜೀವಿಯಾದರೂ ॥ ಧನ್ಯನಾನಾಕಲ್ಪ ಜೀವಿಸುವೆನೆಂದರಿತು। ವನ್ಯ ಪಶು ಚಂಡಾಲರಂದದೋಲ್ ಚರಿಸುವೆನು ॥೧೭॥ ಶತವರುಷ ಮಾನವರಿಗಾಯುವೆಂಬುವ ಶಾಸ್ತ್ರ -। ಪ್ರಥೆಯಿಹುದು ಮತ್ತೆನಗೆ ಉಪಯೋಗ ಸ್ವಲುಪಿಲ್ಲ॥ ಶತವರುಷದಲಿ ಸರ್ವರಾತ್ರಿ ಜಲಹೋಮದೋಲ್ । ವ್ಯರ್ಥವಾಗುವುದು ಮೇಣ್ ಪರ್ಯಾಪ್ತವೆನಿಸದೋ ॥೧೮॥ ಈಶ ! ಹಗಲಿನೊಳಾದಿ ಅಂತ್ಯವಿಂಶತಿ ವರುಷ। ಶೈಶವದಿ ಮತ್ತೆ ವಾರ್ಧಿಕ್ಯ ಸ್ಥಿತಿಯಿಂದ ॥ ಆಶೆಯಿಂ ಕ್ರೀಡಿಸುತ ಮುಂದೆ ವ್ಯಾಧಿಗಳಿಂದ। ಲೇಸಾಗಿ ಕಳೆಯುವೆನೋ ಮೂಢಮತಿಯಿಂದ ॥೧೯॥ ಇಳೆಯೊಳಗೆ ಸುಕೃತಮಯ ಭರತವರ್ಷದಿ ಪ್ರಭುವೆ!॥ ಉಳಿದ ಮಧ್ಯಮಕಾಲ ಶ್ರೇಷ್ಠವಾದುದು ಸ್ವಾಮಿ ॥ ಕಾಲವೀಪರಿಯನತಿ ಪಾಪ ಬುದ್ಧಿಗಳಿಂದ । ಕಳೆವೆನಗೆ ಪಶುಹೋಲೆಯಗಿಹುದೇ ವ್ಯತ್ಯಾಸ॥೨೦॥ ಪರಮ ಪಾವಿತ್ರ್ಯತರ ಭಾರತಾವನಿಯೊಳಗೆ । ತರುಣಿ ಧನ ತನುಜಾತ ಮುಖರೊಳಗೆ ಎನಗಿರುವ ॥ ಉರು ಮೋಹವನು ಬಿಡಿಸಿ ದೇವ ನಿನ್ನಯ ಪಾದ। ಸರಸಿಜದಿ ರತಿ ಒಂದು ದಿನವಾದರೀಯಯ್ಯ ॥೨೧॥ ಇನಿತು ಇಂದಿರೆಯಿಂದ ಎಣಿಸಲಸದಳವಾದ । ನಿನ್ನ ಸದ್ಗುಣನಿಚಯ ಎನ್ನ ಪಾಪದ ತತಿಯು ॥ ಮುನ್ನ ಆ ವಸ್ತುವೃಂದವು ಎರಡು ವಿಧವೆಂದು । ಮಾನ್ಯ ಜ್ಞಾನಿಗಳೆಲ್ಲ ಪೇಳುವರು ಜಗದೊಳಗೆ ॥೨೨॥ ಪರಲೋಕದೊಳು ಬಹುಲ ಸೌಖ್ಯದಾಯಕವಾದ । ನಿರವಧಿಕ ಶ್ರಮಸಾಧ್ಯವಾದುಪಾಯಗಳನ್ನು ॥ ಪರಿಶ್ರಮದ ಭೀರುತನದಿಂದ ಮಾಡದೆ ನಾನು । ಪರದಿ ದುಃಖಾನುಭವಿಯಾಗದಿರುವೆನೆ ? ದೇವ ! ॥೨೩॥ ಧರಣಿಯೊಳು ಶ್ರಮಭಾಗಿ ಪಾಪ ಮಾಡುತಲಿರುವ ನರರನೇಕರು ಇಹರು ಆದರೆನ್ನಘ ಸದೃಶ ॥ ಪರಿಪರಿಯ ಪಾಪಗಳ ಮಾಡುವಾ ಮಾನವರು । ಆರಿಲ್ಲ ಕೇಳಯ್ಯ ಇಲ್ಲ ಮತ್ತಿಲ್ಲ ॥೨೪॥ ದೇವ ನಿನಗಾನು ವಂದವ ಪ್ರದಕ್ಷಿಣೆ

ನಿಜದಿ । ಆವಡಾಂಭಿಕ ವಿಲ್ಲದಲೆ ಸ್ತೋತ್ರ ಮಾಡಿಲ್ಲ ॥ ಭಾವ ಭಕ್ತಿಗಳಿಂದ ಗುರುಸೇವೆಗೈದಿಲ್ಲ। ಈ ವಿಧದೊಳಿರೆ ಶಾಸ್ತ್ರ ಶ್ರವಣ ವಾಗುವುದೆಂತು? (ಇಂತಿರಲು ಸಚ್ಛಾಸ್ತ್ರ ಶ್ರವಣವಾಗುವುದೆಂತು) ॥೨೫॥ ಮೋಕ್ಷದಾಯಕ! ಬಹುಲವಾಕ್ಯತತಿಯಿಂದೇನು ?। ಮುಖ್ಯ ವಚನವ ಪೇಳ್ವೆ ಲಾಲಿಸರವಿಂದಾಕ್ಷ ॥ ಲೋಕತ್ರಯದೊಳಿರುವ ಪಾಪಗಳು ತಾವೆಲ್ಲ । ಕಾಕುಮಾನವನಾದ ಎನ್ನನಾಶ್ರಯಿಸಿಹುವು॥೨೬॥ ಸ್ವಾಮಿ ! ನಿನ್ನಯ ದಯವು ಇಲ್ಲದಲೆ ಪ್ರಕೃತವಾ-। ದೀ ಮಹಾಪಾಪ ಸಮುದಯದಿಂದ ಮೋಚನವು ॥ ಭೂಮಿಯೊಳಗಾವುದರ ದೆಶೆಯಿಂದ ಆಗುದದು । "ಕಮಲೇಶ!" ನಿನಗೆ ನಾ ನಮಿಪೆ ದಯೆತೋರು ॥೨೭॥ ವಿಜಯೀಂದ್ರರೆಂಬ ಯತಿವರರು ದುರಿತವಿನಾಶ । ಭುಜಗಪರ್ಯಂಕ ಮುರಹರನ ಸ್ತುತಿಯನ್ನು ॥ ನಿಜಜನರನ್ನುದ್ಧರಿಸೆ ರಚಿಸಿಹರು ಇದನಾವ । ಸುಜನ ಪಠಿಸಲು ದುರಿತ ರಹಿತನಾಗುವನು॥೨೮॥ ವರಜಯೀಂದ್ರರ ದಯದಿ ರಚಿತ ಅನುವಾದವಿದ । ಪರಮ ಭಗವದ್ಭಕ್ತರೆಲ್ಲ ಪಠಿಸಲು ಮುದದಿ। ದುರಿತ ನಾಶವಗೈದು ಮಂಗಳವ ತಂದಿತ್ತು । ನಿರುತ ಭಕುತರ ಕಾಯ್ವ "ವಿಜಯ ಕಮಲೇಶ" ।

**॥ಇಲ್ಲಿಗೆ ಪಾರಾಯಣ ಪ್ರಕರಣವು ಸಮಾಪ್ತವಾಯಿತು॥**

**॥ಶ್ರೀಕೃಷ್ಣಾರ್ಪಣಮಸ್ತು ॥**

**ರಾಗ ಸಾರಂಗ** **ಝಂಪಿ ತಾಳ**

ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ । ಇದ್ದರೇನು ಇಲ್ಲದಿದ್ದರೇನು ॥ಪ.॥

ಮಧ್ವಮತವೇ ಮತವು ಸಕಲ ಶ್ರುತಿಸಮ್ಮತವು। ಮಧ್ವರಾಯರ ಧ್ಯಾನ ಅಮೃತಪಾನಾ॥ ಮಧ್ವರಾಯರ ಲೀಲೆ ನವರತ್ನದಾ ಮಾಲೆ। ಮಧ್ವರಾಯರ ಸ್ಮರಣೆ ಕುಲಕೋಟಿ ಉದ್ಧರಣೆ॥೧॥

ಮಧ್ವರಾಯರ ಕಥೆಯು ಕೇಳಲು ದುರಿತಹತ । ಮಧ್ವರಾಯರ ಭಕುತಿ ಮಾಡೆ ಮುಕುತಿ। ಮಧ್ವರಾಯರ ಸ್ತೋತ್ರ ಮಾಡಿದವ ಸತ್ಪಾತ್ರ। ಮಧ್ವರಾಯರ ಭಜನೆ ದುಷ್ಕರ್ಮತ್ಯಜನೆ॥೨॥

ಮಧ್ವರಾಯರ ದಾಸ ಆದವನೆ ನಿರ್ದೋಷ। ಮಧ್ವರಾಯರ ಭಂಟ ಜಗಕೆ ನೆಂಟಾ। ಮಧ್ವರಮಣ ವಿಜಯವಿಠ್ಠಲನ ಕಿಂಕರನಾದ। ಮಧ್ವರಾಯರ ಕರುಣ ಪಡೆದವನೆ ಶರಣ॥೩॥

# ೫. ಮಾಸಧರ್ಮಗಳು ಮತ್ತು ವ್ರತ ಪ್ರಕರಣ

ಚೈತ್ರದಿಂದ ಫಾಲ್ಗುಣದ ವರೆಗಿನ ೧೨ ತಿಂಗಳುಗಳಲ್ಲಿ ಪ್ರತಿ ತಿಂಗಳಿನಲ್ಲಿ ಆಚರಿಸಬೇಕಾದ ವಿಶಿಷ್ಟ ಧರ್ಮ ಹಾಗೂ ವ್ರತಗಳ ಬಗ್ಗೆ ಈ ಪ್ರಕರಣದಲ್ಲಿ ವಿವರಿಸಲಾಗಿದೆ. ಸಂಪ್ರದಾಯದಿಂದ ಬಂದ ಧರ್ಮಾಚರಣೆಗಳು ಲೋಪವಾಗದಿರಲೆಂಬ ಉದ್ದೇಶದಿಂದಲೂ ಮತ್ತು ಸಾಧಕ ಸಾಧಕಿಯರಿಗೆ ಇವುಗಳ ಪರಿಚಯವಿದ್ದರೆ ಮನೆಯಲ್ಲಿ ಹಿರಿಯರು ಮಾಡುತ್ತಿದ್ದ ವ್ರತಾಚರಣೆಗಳನ್ನು ತಾವೂ ಮಾಡಬೇಕೆಂಬ ಮನಃಪ್ರವೃತ್ತಿಯು ಎಂದಾದರೊಮ್ಮೆ ಉಂಟಾದೀತು, ಆಗ ಈ ಪ್ರಕರಣವು ಅವರಿಗೆ ಹೆಚ್ಚು ಉಪಯುಕ್ತವೆನಿಸೀತು ಎಂಬ ಉದ್ದೇಶದಿಂದಲೂ ಇಲ್ಲಿ ಪ್ರತಿಯೊಂದು ಮಾಸದ ಧರ್ಮಗಳನ್ನು ಮತ್ತು ಕೆಲವು ವ್ರತಗಳನ್ನು ಸಂಕ್ಷೇಪದಲ್ಲಿ ಕೊಡಲಾಗಿದೆ.

(ನಮ್ಮಿಂದ ಪ್ರಕಟಿತವಾದ ೧) ಚೈತ್ರಮಾಸ ಮಹಾತ್ಮೆ ೨) ವೈಶಾಖ ಮಾಸ ಮಹಾತ್ಮೆ ೩) ಜ್ಯೇಷ್ಠ ಮಾಸ ಮಹಾತ್ಮೆ ೪) ಆಷಾಢ ಮಾಸ ಮಹಾತ್ಮೆ ೫) ಶ್ರಾವಣ ಮಾಸ ಮಹಾತ್ಮೆ ೬) ಭಾದ್ರಪದ ಮಾಸ ಮಹಾತ್ಮೆ ೭) ಆಶ್ವಿನ ಮಾಸ ಮಹಾತ್ಮೆ ೮) ಕಾರ್ತಿಕ ಮಾಸ ಮಹಾತ್ಮೆ ೯) ಮಾರ್ಗಶೀರ್ಷ ಮಾಸ ಮಹಾತ್ಮೆ ೧೦) ಪುಷ್ಯ ಮಾಸ ಮಹಾತ್ಮೆ ೧೧) ಮಾಘ ಮಾಸ ಮಹಾತ್ಮೆ ೧೨) ಫಾಲ್ಗುಣ ಮಾಸ ಮಹಾತ್ಮೆ ೧೩) ಚಾತುರ್ಮಾಸ್ಯ ಮಹಾತ್ಮೆ ೧೪) ಅಧಿಕ ಮಾಸ ಮಹಾತ್ಮೆ ೧೫) ಧನುರ್ಮಾಸ ಮಹಾತ್ಮೆ ೧೬) ಏಕಾದಶೀ ಮಹಾತ್ಮೆ — ಈ ಹದಿನಾರು ಪುಸ್ತಕಗಳಲ್ಲಿ ಮಾಸಧರ್ಮಗಳನ್ನು, ವ್ರತಗಳನ್ನು ಅವುಗಳ ಹಿನ್ನೆಲೆಯಾಗಿರುವ ಕಥಾನಕಗಳನ್ನು ಮತ್ತು ಮಾಸ ಮಹಾತ್ಮೆಗಳನ್ನು ವಿಸ್ತಾರವಾಗಿ ಕೊಟ್ಟಿದೆ. ಹೆಚ್ಚಿನ ವಿವರಗಳನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯುಳ್ಳವರು ಈ ಪುಸ್ತಕಗಳನ್ನು ಅವಲೋಕಿಸಬಹುದು.)

## ಅ) ಪ್ರತಿಮಾಸದ ವಿಶೇಷಧರ್ಮಗಳು

### ೧. ಚೈತ್ರಮಾಸ

#### ೧) ಯುಗಾದಿ (ಶುದ್ಧ ಪ್ರತಿಪದಾ)

(i) ಇದು ಹೊಸವರ್ಷದ ಆರಂಭದ ಹಬ್ಬದ ದಿನ. ಈ ದಿನ ಬೆಳಿಗ್ಗೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ ಪ್ರಾತಃ ಸ್ತೋತ್ರ, ಹಾಡುಗಳನ್ನು (ಸಾಧನ ದೀಪಿಕಾದ ಆಹ್ನೀಕ ಪ್ರಕರಣದಲ್ಲಿ ಕೊಟ್ಟಿದೆ.) ಪಠಿಸಿ ಮನೆಯಲ್ಲಿ ಹಿರಿಯರಿಗೆ ವಂದಿಸಬೇಕು. ತಲೆಗೆ ಎಣ್ಣೆಯನ್ನು ಹಚ್ಚಿಕೊಂಡು ಮಂಗಲ ಸ್ನಾನವನ್ನು ಮಾಡಿ (ಎರಕೊಂಡು) ಹೊಸ ವಸ್ತ್ರಗಳನ್ನುಟ್ಟು ಆಭರಣಗಳಿಂದ ಅಲಂಕೃತರಾಗಬೇಕು. ದೇವರ ನೈವೇದ್ಯಕ್ಕೆ ಮಡಿಯಿಂದ ಹಬ್ಬದ ಅಡಿಗೆ ಮಾಡಬೇಕು. ದೇವರಿಗೆ ನಿವೇದಿಸಿದ ಬೇವು ಬೆಲ್ಲವನ್ನು ಹಿರಿಯರಿಂದ ಸ್ವೀಕರಿಸಿ ಮುಂದಿನ ಮಂತ್ರವನ್ನು ಹೇಳುತ್ತ ತಿನ್ನಬೇಕು- **ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ । ಸರ್ವಾರಿಷ್ಟವಿನಾಶಾಯ ನಿಂಬಕಂದಲಭಕ್ಷಣಮ್ ॥**

(ii) **ಪ್ರಪಾದಾನ** - ಇವತ್ತಿನಿಂದ ಒಂದು ತಿಂಗಳು ಪ್ರತಿದಿನ ಒಂದು ಜಲಕುಂಭವನ್ನು ವಸ್ತ್ರದಿಂದ ಮುಚ್ಚಿ ' **ಏಷ ಧರ್ಮಘಟೋ ದತ್ತೋ ಬ್ರಹ್ಮವಿಷ್ಣುಶಿವಾತ್ಮಕಃ । ಅಸ್ಯ ಪ್ರದಾನಾತ್ಸಕಲಾ ಮಮ ಸಂತು ಮನೋರಥಾಃ ॥** ಎಂಬ ಮಂತ್ರದಿಂದ ಶ್ರೋತ್ರಿಯ ಬ್ರಾಹ್ಮಣನಿಗೆ ದಾನಮಾಡಬೇಕು. ನಿತ್ಯ ನೀರಿನಿಂದ ತುಂಬಿದ ಕೊಡವನ್ನು ದಾನಮಾಡುವದಾಗದಿದ್ದರೆ ಒಂದು ಕೊಡ ನೀರನ್ನಾದರೂ ಕೊಡಬೇಕು. ಇದಕ್ಕೆ ಪ್ರಪಾದಾನ ಎಂದು ಹೆಸರು.

(iii) **ಪಂಚಾಂಗ ಶ್ರವಣ** - ಸಾಯಂಕಾಲ ಶ್ರೋತ್ರಿಯ ಬ್ರಾಹ್ಮಣನು ಅಥವಾ ಮನೆಯಲ್ಲಿ ಹಿರಿಯರು ಪಂಚಾಂಗ ವಾಚನ ಮಾಡುವಾಗ ಹೊಸ ವರ್ಷದ ರಾಜಾದಿಗಳನ್ನು ತಿಳಿದುಕೊಂಡು ವರ್ಷ ಫಲಗಳನ್ನು ಶ್ರವಣಮಾಡಬೇಕು.

**೨) ಗೌರೀ ತದಿಗೆ (ಶುದ್ಧ ತದಿಗೆ) -**

ಇದು ಚೈತ್ರ ಗೌರೀ ತದಿಗೆ. ಈ ದಿನ ತೊಟ್ಟಿಲು ಗೌರೀ ಕೂಡಿಸಿ ವೈಶಾಖ ಶುದ್ಧ ತದಿಗೆಯ ವರೆಗೆ ಪೂಜಿಸಬೇಕು. ಮುತ್ತೈದೆಯರಿಗೆ ಪಾನಕ ಕೋಸಂಬರಿ ಕೊಡಬೇಕು. ಹೊಸತಾಗಿ ಲಗ್ನವಾದ ಸುಮಂಗಲೆಯರು ಪ್ರತಿವರ್ಷ ಇಂದಿನಿಂದ ಒಂದು ತಿಂಗಳು ಪ್ರತಿದಿನ ಮುತ್ತೈದೆಯರ ಕಾಲು ತೊಳೆದು ಅವರಿಗೆ ಪಾನಕ ಕೋಸಂಬರಿಕೊಟ್ಟು ನಮಸ್ಕರಿಸಬೇಕು. ಹೀಗೆ ೫ ವರ್ಷ ಮಾಡಬೇಕು. ಈ ತಿಂಗಳಿನಲ್ಲಿ ಒಂದು ದಿನ (ಮಂಗಳವಾರ, ಶುಕ್ರವಾರ, ಶ್ರೀರಾಮನವಮೀ, ದಶಮೀ, ದ್ವಾದಶೀ ಅಥವಾ ಹುಣ್ಣಿಮೆ (ಶ್ರೀಹನುಮಜಯಂತೀ) ಇವುಗಳಲ್ಲಿ ಎಂದಾದರೂ ಒಂದು ದಿನ ) ದೊಡ್ಡ ಗೌರೀ ಕೂಡಿಸಿ "ಹೂವಿಳ್ಯ" ಮಾಡಬೇಕು.

**೩) ಶ್ರೀ ರಾಮನವಮೀ ( ಶುದ್ಧ ನವಮೀ)-**

ಈ ದಿನ ಹಗಲು ೧೨ ಗಂಟೆಗೆ ಶ್ರೀರಾಮನ ಜನ್ಮ . ಶ್ರೀರಾಮನ ಜನ್ಮೋತ್ಸವವನ್ನು ಸಂಭ್ರಮದಿಂದ ಆಚರಿಸಬೇಕು. ' **ಕೌಸಲ್ಯಾಗರ್ಭಸಂಭೂತ ಸದಾ ಸೌಮಿತ್ರಿವತ್ಸಲ । ಜಾನಕೀಸಹಿತೋ ರಾಮ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ಕೌಸಲ್ಯಾನಂದನೋ ವೀರ ರಾವಣಾಸುರಮರ್ದನ । ಸೀತಾಪತೇ ನಮಸ್ತುಭ್ಯಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥** ಎಂಬ ಮಂತ್ರಗಳಿಂದ ಶ್ರೀರಾಮದೇವರಿಗೆ ಅರ್ಘ್ಯವನ್ನು ಫಲಪುಷ್ಪಜಲಪೂರ್ಣವಾದ ಶಂಖದಿಂದ ಕೊಡಬೇಕು. ಶ್ರೀರಾಮಜನ್ಮೋತ್ಸವವನ್ನು ಶ್ರೀರಾಮಮಂದಿರಗಳಲ್ಲಿ ಆಚರಿಸುವಂತೆ ಮನೆಯಲ್ಲಿಯೂ ಆಚರಿಸಬೇಕು.

**೪) ಪೌರ್ಣಿಮಾ -**

(i) **ಶ್ರೀಹನುಮಜಯಂತೀ** - ಶ್ರೀಹನುಮಜಯಂತಿಯ ಉತ್ಸವವನ್ನು ಬೆಳಿಗ್ಗೆ ಸರಿಯಾಗಿ ಸೂರ್ಯೋದಯಕ್ಕೆ ಆಚರಿಸಬೇಕು. ಶ್ರೀಹನುಮಂತ ದೇವರ ಗುಡಿಗೆ ಹೋಗಿ ಅಲ್ಲಿ ಜನ್ಮೋತ್ಸವವನ್ನು ಆಚರಿಸುವಂತೆ ಮನೆಯಲ್ಲಿಯೂ ಆಚರಿಸಬೇಕು.

(ii) **ವೈಶಾಖ ಸ್ನಾನ** - ಇಂದಿನಿಂದ ಒಂದು ತಿಂಗಳು ಅಂದರೆ ವೈಶಾಖ ಹುಣ್ಣಿಮೆಯ ವರೆಗೆ ವೈಶಾಖ ಸ್ನಾನ ಪ್ರಾರಂಭ. **ವೈಶಾಖಂ ಸಕಲಂ ಮಾಸಂ ಮೇಷಸಂಕ್ರಮಣೇ ರವೇಃ । ಪ್ರಾತಃ ಸನಿಯಮಾ (ಮಃ) ಸ್ನಾಸ್ಯೇ ಪ್ರೀಯತಾಂ ಮಧುಸೂದನಃ ॥ ಮಧುಹಂತುಃ ಪ್ರಸಾದೇನ**

**ಬ್ರಾಹ್ಮಣಾನಾಮನುಗ್ರಹಾತ್ । ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಮ್ ॥ ಮಾಧವೇ ಮೇಷಗೇ ಭಾನೌ ಮುರಾರೇ ಮಧುಸೂದನ । ಪ್ರಾತಃಸ್ನಾನೇನ ಮೇ ನಾಥ ಫಲದೋ ಭವ ಪಾಪಹನ್ ॥** ಎಂಬ ಮಂತ್ರದಿಂದ ಒಂದು ತಿಂಗಳು ಅರುಣೋದಯ ಕಾಲದಲ್ಲಿ ಮಾಸನಿಯಾಮಕ ಮಧುಸೂದನನ ಪ್ರೀತ್ಯರ್ಥ ಪ್ರತಿದಿನ ವೈಶಾಖಸ್ನಾನವನ್ನು ಮಾಡಬೇಕು.

**೫) ಚಂದ್ರಲಾದೇವೀ ಉತ್ಸವ (ಕೃಷ್ಣಪಕ್ಷ ಪಂಚಮೀ)**

*****

## ೨. ವೈಶಾಖ ಮಾಸ

**೧) ಅಕ್ಷಯ ತೃತೀಯಾ (ಶುದ್ಧ ತದಿಗಿ)**

(i) ಇವತ್ತು ಚೈತ್ರಗೌರಿಗೆ ನೈವೇದ್ಯ ನಂತರ ವಿಸರ್ಜನೆ. ಇವತ್ತಿನಿಂದ ಶುದ್ಧ ದಶಮಿಯ ವರೆಗೆ ನಿತ್ಯ ಸಂಜೆ " ಶ್ರೀವೆಂಕಟೇಶ ಪಾರಿಜಾತ " ಹಾಡನ್ನು ಹೇಳಬೇಕು.

(ii) ಇವತ್ತು ಪರಶುರಾಮ ಜಯಂತಿ. ಪ್ರದೋಷಕಾಲದಲ್ಲಿ ಶ್ರೀಪರಶುರಾಮದೇವರನ್ನು ಪೂಜಿಸಿ '**ಜಮದಗ್ನಿಸುತೋ ವೀರ ಕ್ಷತ್ರಿಯಾಂತಕರ ಪ್ರಭೋ । ಗೃಹಾಣಾರ್ಘ್ಯಂ ಮಯಾ ದತ್ತಂ ಕೃಪಯಾ ಪರಮೇಶ್ವರ ॥**' ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

**ಅಕ್ಷಯ ತೃತೀಯಾ** ದಿನವು ಸಾಡೇತೀನ ಶ್ರೇಷ್ಠಮುಹೂರ್ತಗಳಲ್ಲಿ ಒಂದು. ಇಂದಿನ ದಿನ ಯಾವುದೇ ಶುಭಕಾರ್ಯಗಳನ್ನು ಪ್ರಾರಂಭಿಸಬಹುದು.

**೨)ಶ್ರೀವೆಂಕಟೇಶ ಕಲ್ಯಾಣ ಮಹೋತ್ಸವ (ಶುದ್ಧ ದಶಮೀ) -**

ಇವತ್ತು ಶ್ರೀವೆಂಕಟೇಶ ಪದ್ಮಾವತಿಯರ ವಿವಾಹ ಮಹೋತ್ಸವವನ್ನು ವೈಭವದಿಂದ ಆಚರಿಸಬೇಕು. ಮನೆಯಲ್ಲಿ ಶ್ರೀವೆಂಕಟೇಶ ಪಾರಿಜಾತ ಹಾಡಿನ ಮಂಗಳ ಮತ್ತು ಶ್ರೀವೆಂಕಟೇಶ ಮಹಾತ್ಮೆ ಪುರಾಣ ಮಂಗಳ ನೆರವೇರಿಸಬೇಕು.

**೩) ಶ್ರೀವೇದವ್ಯಾಸ ಜಯಂತೀ (ಶುದ್ಧ ದ್ವಾದಶೀ)-**

ಈ ದಿನ ಮಹಾವಿಷ್ಣುವು ಪರಾಶರರಿಂದ ಸತ್ಯವತೀದೇವಿಯಲ್ಲಿ ಶ್ರೀವೇದವ್ಯಾಸರಾಗಿ ಅವತಾರ ಮಾಡಿದ ಶುಭದಿನ. ಈ ದಿನ ಶ್ರೀವೇದವ್ಯಾಸರ ಪೂಜೆ ಶ್ರೇಷ್ಠವಾದದ್ದು. ಈ ದ್ವಾದಶೀ ದಿನದ ವಸಂತ ಪೂಜೆಯು ಶ್ರೀವೇದವ್ಯಾಸದೇವರಿಗೆ ಅತಿ ಪ್ರೀತಿಕರ.

**೪) ಶ್ರೀನೃಸಿಂಹ ಜಯಂತೀ (ಶುದ್ಧ ತ್ರಯೋದಶೀ) -**

ಪ್ರದೋಷಕಾಲದಲ್ಲಿ ಶ್ರೀನೃಸಿಂಹ ದೇವರ ಪ್ರಾದುರ್ಭಾವವಾಗಿರುವುದರಿಂದ ಆ ಸಮಯಕ್ಕೆ ಶ್ರೀನೃಸಿಂಹ ಜಯಂತೀ ಉತ್ಸವವನ್ನು ಆಚರಿಸಬೇಕು ಮತ್ತು "**ಪರಿತ್ರಾಣಾಯ ಸಾಧೂನಾಂ ಧ್ಯಾತೋ ವಿಷ್ಣುರ್ನೃಕೇಸರೀ । ಗೃಹಾಣಾರ್ಘ್ಯಂ ಮಯಾ ದತ್ತಂ ಸಲಕ್ಷ್ಮೀ-ನೃಹರೇ ಸ್ವಯಮ್ ॥** ಎಂದು ಹೇಳುತ್ತ ಶ್ರೀನೃಸಿಂಹದೇವರಿಗೆ ಅರ್ಘ್ಯವನ್ನು ಕೊಡಬೇಕು. ಶ್ರೀನೃಸಿಂಹದೇವರ ಹಾಡು ಸುಳಾದಿಗಳನ್ನು ಹೇಳಬೇಕು. ಭಾಗವತ ಸಪ್ತಮ ಸ್ಕಂಧ ಪುರಾಣ ಶ್ರವಣ ಮಾಡಬೇಕು. ಇವತ್ತು ಮಧ್ಯಾಹ್ನ ಸಾಯಂಕಾಲ ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಬೇಕು.

೫) ಪೌರ್ಣಿಮಾ -

ಚೈತ್ರ ಹುಣ್ಣಿಮೆಯಿಂದು ಪ್ರಾರಂಭಿಸಿದ ವೈಶಾಖಸ್ನಾನವನ್ನು ಇಂದು ಸಮಾಪ್ತಿಗೊಳಿಸಬೇಕು.

*****

೩. ಜ್ಯೇಷ್ಠ ಮಾಸ

೧) ಗಂಗಾದಶಹರಾವ್ರತ (ಶುದ್ಧ ಪ್ರತಿಪದಾ) -

ಇವತ್ತಿನಿಂದ ಶುದ್ಧ ದಶಮಿಯ ವರೆಗೆ ಗಂಗಾ ದಶಹರಾವ್ರತ ಇರುವುದರಿಂದ ಪ್ರತಿದಿನ ಗಂಗಾ ಪೂಜೆ ಮಾಡಬೇಕು.

೨) ಗಂಗಾದಶಹರಾವ್ರತ ಸಮಾಪ್ತಿ (ಶುದ್ಧ ದಶಮೀ) -

ಇಂದು ಭಾಗೀರಥಿಯು ಸ್ವರ್ಲೋಕದಿಂದ ಧರೆಗಿಳಿದು ಬಂದ ದಿನ. ಭಾಗೀರಥಿಗೆ ವಿಶೇಷ ಪೂಜೆ ನೈವೇದ್ಯ ಸಮರ್ಪಣೆ ಮಾಡಬೇಕು.

೩) ಶ್ರೀತ್ರಿವಿಕ್ರಮ ಪೂಜಾ (ಶುದ್ಧ ತ್ರಯೋದಶೀ)-

ಈ ದಿನ ಶ್ರೀತ್ರಿವಿಕ್ರಮದೇವನ ಪೂಜೆ ಮಾಡಿ **"ದೇವ ದೇವ ಹೃಷೀಕೇಶ ಸಂಸಾರಾರ್ಣವತಾರಕ । ಉದಕುಂಭಪ್ರದಾನೇನ ಯಾಸ್ಯಾಮಿ ಪರಮಾಂ ಗತಿಮ್ ॥ "** ಎಂಬ ಮಂತ್ರದಿಂದ ನೀರು ತುಂಬಿದ ಕೊಡ ಮತ್ತು ಸಕ್ಕರೆ ಬ್ರಾಹ್ಮಣರಿಗೆ ದಾನ ಮಾಡಬೇಕು.

೪) ಹುಣ್ಣಿಮೆ (ಕಾರಹುಣ್ಣಿಮೆ)

ವಟಸಾವಿತ್ರೀವ್ರತವನ್ನು ಆಚರಿಸುವ ಹೆಣ್ಣು ಮಕ್ಕಳು ಈ ದಿನ ವಟಸಾವಿತ್ರೀ ಪೂಜೆಯನ್ನು ಮಾಡಿ ಕಥಾಶ್ರವಣ ಮಾಡಬೇಕು. ಈ ವ್ರತದ ಪದ್ಧತಿ ಇಲ್ಲದವರು ಇಂದು ಸಾಯಂಕಾಲ ವಟಸಾವಿತ್ರಿಯ ಹಾಡನ್ನು ಹೇಳಿ ಸಾಧ್ಯವಾದಷ್ಟು ಮುತ್ತೈದೆಯರಿಗೆ ಅರಿಷಿಣ ಕುಂಕುಮ ಕೊಟ್ಟು ನೀರಲಹಣ್ಣು ಅಥವಾ ಮಾವಿನಹಣ್ಣು ಉಡಿ ತುಂಬಬೇಕು. ಈ ವ್ರತಾನುಷ್ಠಾನದಿಂದ ಸ್ತ್ರೀಯರಿಗೆ ಸೌಮಂಗಲ್ಯಾಭಿವೃದ್ಧಿ ಆಗುವದು.

೫) ಅಮಾವಾಸ್ಯೆ (ಮಣ್ಣೆತ್ತಿನ ಅಮಾವಾಸ್ಯೆ)

ಈ ದಿನ ಮನೆಯಲ್ಲಿ ಮಣ್ಣಿನಿಂದ ಎತ್ತುಗಳನ್ನು ಮಾಡಿ ದೇವರ ಪೂಜೆಯ ಸಮಯದಲ್ಲಿ ಪೂಜೆ ಮಾಡಬೇಕು. ನೈವೇದ್ಯಕ್ಕೆ ಹೂರಣದ ಕುಚ್ಚಿದ ಕಡಬು ಮಾಡಬೇಕು.

*****

೪. ಆಷಾಢಮಾಸ

೧) (i) ಚಾತುರ್ಮಾಸ್ಯ ವ್ರತಾರಂಭ (ಶುದ್ಧ ಏಕಾದಶೀ) -

ಇವತ್ತಿನಿಂದ ಕಾರ್ತಿಕ ಶುದ್ಧ ಏಕಾದಶೀ ಅಂದರೆ ನಾಲ್ಕು ತಿಂಗಳು ಚಾತುರ್ಮಾಸ್ಯ ವ್ರತ ಪ್ರಾರಂಭ. ಇವತ್ತಿನ ದಿನದಲ್ಲಿ ಗುರುಗಳಿಂದ ತಪ್ತಮುದ್ರಾ ಧಾರಣೆ ಮಾಡಿಸಿಕೊಂಡು ಚಾತುರ್ಮಾಸ್ಯವ್ರತಮಹಂ ಕರಿಷ್ಯೇ ಎಂದು ಸಂಕಲ್ಪ ಪೂರ್ವಕ ಚಾತುರ್ಮಾಸ್ಯ ವ್ರತಧಾರಣ ಮಾಡಬೇಕು. ನಂತರ **'ಸುಪ್ತೇ ತ್ವಯಿ ಜಗನ್ನಾಥೇ ಜಗತ್ಸುಪ್ತಂ ಭವೇದಿದಮ್ ।** ವಿಬುದ್ಧೇ

**ತ್ವಯಿ ಬುದ್ಧ್ಯೇತ ತತ್ಸರ್ವಂ ಸಚರಾಚರಂ ॥** ' ಎಂಬ ಮಂತ್ರದಿಂದ ಪ್ರಾರ್ಥಿಸಿ ಕೈ ಜೋಡಿಸಿಕೊಂಡು **'ಚತುರೋ ವಾರ್ಷಿಕಾನ್ಮಾಸಾನ್ ದೇವಸ್ಯೋತ್ಥಾಪನಾವಧಿ । ಶ್ರಾವಣೇ ವರ್ಜಯೇ ಶಾಕಂ ದಧಿ ಭಾದ್ರಪದೇ ತಥಾ ॥ ದುಗ್ಧಮಾಶ್ವಯುಜೇ ಮಾಸಿ ಕಾರ್ತಿಕೇ ದ್ವಿದಲಂ ತಥಾ । ಇಮಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರು ಮೇಽಚ್ಯುತ ॥ ಇದಂ ವ್ರತಂ ಮಯಾ ದೇವ ಗೃಹೀತಂ ಪುರತಸ್ತವ ॥ ನಿರ್ವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ತೇ ರಮಾಪತೇ ॥ ಗೃಹೀತೇಽಸ್ಮಿನ್ ವ್ರತೇ ದೇವ ಪಂಚತ್ವಂ ಯದಿ ಮೇ ಭವೇತ್ । ತದಾ ಭವತು ಸಂಪೂರ್ಣಂ ಪ್ರಸಾದಾತ್ತೇ ಜನಾರ್ದನ ॥** ಎಂಬ ಮಂತ್ರವನ್ನು ಹೇಳಿ ಚಾತುರ್ಮಾಸ್ಯ ವ್ರತವನ್ನು ಪ್ರಾರಂಭಿಸಬೇಕು. ಚಾತುರ್ಮಾಸ್ಯ ವ್ರತಧಾರಣೆ ಪ್ರಾರಂಭಕ್ಕೆ ಮಾಡಬೇಕಾದ ಸಂಕಲ್ಪ ಮತ್ತು ಸಮರ್ಪಣೆಗಳನ್ನು ಫಾಲ್ಗುಣಮಾಸ ಧರ್ಮಗಳ ನಂತರ ಬರುವ 'ವ್ರತ ವಿಭಾಗ'ದಲ್ಲಿ ಕೊಡಲಾಗಿದೆ.

(ii) ಹೊಸದಾಗಿ ಲಗ್ನವಾದ ಸುಮಂಗಲೆಯರು ಚಾತುರ್ಮಾಸ್ಯದಲ್ಲಿ ಪ್ರತಿದಿನ ದೇವರ ಜಗುಲಿಯ ಮುಂದೆ ಗೋಪದ್ಮವನ್ನು ಹಾಕಬೇಕು. ಹೀಗೆ ಮೊದಲಿನ ೫ ವರ್ಷ ಹಾಕಬೇಕು.

**೨) ಶಾಕವ್ರತ -**

ಆಷಾಢ ಶುದ್ಧ ದ್ವಾದಶಿಯಿಂದ ಶ್ರಾವಣ ಶುದ್ಧ ದಶಮಿಯವರೆಗೆ ಶಾಕವ್ರತ.

ಚಾತುರ್ಮಾಸ್ಯದಲ್ಲಿ ಮಾಡಬೇಕಾದ ವ್ರತಗಳು ದಾನ ಧರ್ಮಗಳ ಬಗ್ಗೆ ನಮ್ಮಿಂದ ಪ್ರಕಟಿತವಾದ "ವರಾಹ ಪುರಾಣಾಂತರ್ಗತ "ಶ್ರೀಚಾತುರ್ಮಾಸ್ಯ ಮಹಾತ್ಮೆ" ಯನ್ನು ನೋಡಬಹುದು. ಶಾಕವ್ರತ ಸಂಕಲ್ಪ ಹಾಗೂ ಸಮರ್ಪಣೆ ಮಂತ್ರಗಳನ್ನು ವ್ರತವಿಭಾಗದಲ್ಲಿ ಕೊಡಲಾಗಿದೆ.

**೩) ಅಶೂನ್ಯ ಶಯನ ವ್ರತ (ಕೃಷ್ಣ ದ್ವಿತೀಯಾ)-**

ಈ ದಿನ ಚಂದ್ರೋದಯ ಸಮಯಕ್ಕೆ ಲಕ್ಷ್ಮೀ ನಾರಾಯಣರ ಪ್ರತಿಮೆಯನ್ನು ಹಾಸಿಗೆಯಲ್ಲಿಟ್ಟು **"ಪತ್ನೀ ಭರ್ತುರ್ವಿಯೋಗಂ ಚ ಭರ್ತಾ ಭಾರ್ಯಾಸಮುದ್ಭವಮ್ । ನಾಪ್ನುವಂತಿ ಯಥಾ ದುಃಖಂ ದಾಂಪತ್ಯಾನಿ ತಥಾ ಕುರು॥** ಎಂಬ ಮಂತ್ರದಿಂದ ಪ್ರಾರ್ಥಿಸಿ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು. ಈ ವ್ರತವನ್ನುಈ ದಿನದಲ್ಲಿ ಪ್ರಾರಂಭಿಸಿ ಮುಂದೆ ಶ್ರಾವಣ, ಭಾದ್ರಪದ ಮತ್ತು ಆಶ್ವೀನ ಮಾಸಗಳ ಕೃಷ್ಣಪಕ್ಷ ದ್ವಿತೀಯಾ ದಿನಗಳಲ್ಲಿ ಹೀಗೆಯೇ ಪೂಜಿಸಿ ಕೊನೆಗೆ ಪ್ರತಿಮೆಯನ್ನು ಹಾಸಿಗೆಯೊಡನೆ ಬ್ರಾಹ್ಮಣರಿಗೆ ದಾನ ಮಾಡಬೇಕು. ಈ ವ್ರತಾಚರಣೆಯಿಂದ ದಾಂಪತ್ಯ ಸುಖವು ಏಳು ಜನ್ಮಗಳ ವರೆಗೆ ಅಖಂಡವಾಗಿರುತ್ತದೆ.

**೪) ಮೊದಲನೇ ಮಂಗಳಗೌರೀ ಪೂಜೆ ( ಕೃಷ್ಣ ದ್ವಾದಶೀ) -**

ಹೊಸದಾಗಿ ಲಗ್ನವಾದ ಸುಮಂಗಲೆಯರಿಂದ ಈ ದಿನ ಮೊದಲ ವರ್ಷದ ಶ್ರೀಮಂಗಳಗೌರೀ ಪೂಜೆಯನ್ನು ಮಾಡಿಸಬೇಕು.

**೫) ದಿವಶೀ ಗೌರೀ ಪೂಜೆ (ಅಮಾವಾಸ್ಯೆ) -**

(i) ಹೊಸ ಸುಮಂಗಲೆಯರು ಈ ದಿನ ಸಾರಿಸಿ ರಂಗವಲ್ಲೀ ಹಾಕಿ ಮೇಲೆ ಒಂದು ಮಣೆಯನ್ನಿಟ್ಟು ಆ ಮಣೆಯ ಮೇಲೆ ಪೂಜೆಗಾಗಿ ದಿವಶೀ ಗೌರಿಯನ್ನು ಮತ್ತು

ಮಂಗಳಗೌರಿಯನ್ನು ಇಟ್ಟುಕೊಳ್ಳಬೇಕು. ಒಂದು ಖೊಬ್ಬರಿ ಬಟ್ಟಲು, ೧೦ ಅಡಿಕೆ ಬೆಟ್ಟಗಳು, ಹತ್ತು ವಿಳೇದೇಲಿ, ಹತ್ತು ಎಳೆಯ ದಾರ ಇಟ್ಟು ಗೌರಿಯನ್ನು ಪೂಜಿಸಬೇಕು. ಗೌರಿಗೆ ಹೂರಣದ ಹತ್ತು ಕುಚ್ಚಿದ ಕಡಬು ನಿವೇದಿಸಬೇಕು. ಅನಂತರ ಹತ್ತು ಎಳೆದಾರಕ್ಕೆ ಹತ್ತು ಗಂಟು ಹಾಕಿ ಸುಮಂಗಲೆಯರು ತಮ್ಮ ಕೊರಳಲ್ಲಿ ಹಾಕಿಕೊಂಡು ದಿವಶೀ ಗೌರಿಗೆ ಹತ್ತು ಹೂರಣದ ಆರುತಿಮಾಡಬೇಕು. ಲಗ್ನವಾಗದಿರುವ ಕನ್ಯೆಯರು ೫ ಎಳೆಯ ದಾರವನ್ನು ಗೌರಿಗೆ ಏರಿಸಿ ಪೂಜೆ ಮಾಡಿ ನಂತರ ದಾರಕ್ಕೆ ೫ ಗಂಟು ಹಾಕಿ ತಮ್ಮ ಕೊರಳಲ್ಲಿ ಹಾಕಿಕೊಂಡು ೫ ಹೂರಣದ ಆರುತಿ ಮಾಡಬೇಕು. ನಂತರ ತಲಬಾಗಿಲಿನ ಹೊಸ್ತಿಲಿನ ಮೇಲೆ ವಿಳೇದೆಲಿ, ಅಡಿಕೆಬೆಟ್ಟ, ಮತ್ತು ಎರಡು ಕುಚ್ಚಿದ ಕಡಬುಗಳನ್ನು ಇಟ್ಟು ತಮ್ಮ ಅಣ್ಣ ಅಥವಾ ತಮ್ಮನ ಕೈಯಿಂದ ಆ ಕುಚ್ಚಿದ ಕಡಬುಗಳನ್ನು ಗುದ್ದಿಸಿ ಒಡಿಸಬೇಕು. ಇದಕ್ಕೆ **''ಭಂಡಾರ ಒಡಿಸುವುದು''** ಎಂದು ಕರೆಯುವರು. ಒಡೆಸಿದ ಕುಚ್ಚಿದ ಕಡಬುಗಳನ್ನು, ಪೂಜೆ ಮಾಡಿದವರು ಗೌರಿಯ ಪ್ರಸಾದವೆಂದು ಸ್ವೀಕರಿಸಬೇಕು. ಮದುವೆ ಆಗಿ ಹತ್ತು ವರುಷಗಳ ವರೆಗೆ ಈ ರೀತಿ ಪ್ರತಿವರ್ಷ ಮಾಡಬೇಕು. ಮದುವೆ ಆಗದವರು ಈ ದಿನ ಕೊಂತಿ ಮಾಲಿಂಗನನ್ನು ಮಾಡಿ ಪೂಜಿಸಬೇಕು.

(ii) **ಅಮಾವಾಸ್ಯೆ** - ಈ ದಿನ ದಿವಶೀಗೌರೀ ಹಾಡನ್ನು ಅನ್ನಬೇಕು.

**೬) ಕರ್ಕ ಸಂಕ್ರಮಣ - ದಕ್ಷಿಣಾಯನ ಪರ್ವ ಪುಣ್ಯಕಾಲ:** ಸಂಕ್ರಮಣಕ್ಕಿಂತ ಪೂರ್ವದಲ್ಲಿ ೨೦ ಘಳಿಗೆ ಸಂಕ್ರಮಣ ಪುಣ್ಯಕಾಲವಿರುವುದು. ಆಗ ಸ್ನಾನ, ತರ್ಪಣ, ದಾನಾದಿಗಳನ್ನು ಮಾಡಬೇಕು.

*****

## ೫. ಶ್ರಾವಣ ಮಾಸ

### ೧) ಶ್ರಾವಣ ಶುಕ್ರವಾರ -

ಈ ದಿನ ಪ್ರತಿಪದಾ ಬಂದಿದ್ದರೆ ಅಥವಾ ಎಂದು ಮೊದಲು ಶುಕ್ರವಾರ ಬರುವದೋ ಅಂದಿನಿಂದ ಒಂದು ತಿಂಗಳುವರೆಗೆ ಪ್ರತಿ ಶುಕ್ರವಾರ, ಒಂದು ಗಡಿಗೆಯ (ಶುದ್ಧ ತಂಬಿಗೆಯ) ಮೇಲೆ ಶಂಖ, ಚಕ್ರ, ಪದ್ಮ, ಸ್ವಸ್ತಿಕ, ಮತ್ತು ಶ್ರೀ ಮಹಾಲಕ್ಷ್ಮೀಯ ಮುಖವನ್ನು ಬರೆದು ಒಳಗೆ ಅಕ್ಕಿ, ಅಡಿಕೆ ಬೆಟ್ಟ, ಅರಿಷಿಣ ಕುಂಕುಮ, ಅರಿಷಿಣ ಬೇರು, ಕರಿಮಣಿ ಮುಂತಾದವುಗಳನ್ನು ಹಾಕಿ ಮೇಲೆ ಮುಚ್ಚಳ ಮುಚ್ಚಿ, ಮಂಗಳಸೂತ್ರ ಕಟ್ಟಿ ಅಲಂಕೃತವಾದ ಮಂಟಪದಲ್ಲಿ ಅಕ್ಕಿ ಹಾಕಿ ಅದರ ಮೇಲೆ ಸಂಕಲ್ಪಪೂರ್ವಕ ಆ ಅಲಂಕೃತ ಗಡಿಗೆಯನ್ನು ಸ್ಥಾಪಿಸಬೇಕು. ನಂತರ ಅದರಲ್ಲಿ ವಿಧಿಪೂರ್ವಕ ಲಕ್ಷ್ಮೀದೇವಿಯನ್ನು ಆಹ್ವಾನಿಸಿ ಅರಿಷಿಣ, ಕುಂಕುಮ, ಗೆಜ್ಜೆವಸ್ತ್ರ, ಹೂವುಗಳನ್ನು ಏರಿಸಿ ತೀರ್ಥ, ಗಂಧಾಕ್ಷತೆಗಳಿಂದ ಪೂಜಿಸಬೇಕು. ದೇವರಿಗೆ ನಿವೇದಿಸಿದ ಭಕ್ಷ್ಯಗಳನ್ನು ಶುಕ್ರವಾರ ಮಹಾಲಕ್ಷ್ಮೀಗೆ ನಿವೇದಿಸಿ ಹೂರಣದ ಆರುತಿಯನ್ನು ಮಾಡಬೇಕು.

ಮನೆಯಲ್ಲಿ ಶುಕ್ರವಾರ ಗೌರೀ (ಮಹಾಲಕ್ಷ್ಮೀ) ಪೂಜೆಯ ಸಂಪ್ರದಾಯವಿಲ್ಲದವರು 'ವರಮಹಾಲಕ್ಷ್ಮೀ ಪೂಜೆ' ಇದ್ದವರು ವ್ರತಧಾರಣ ಮಾಡಿದ್ದರೆ ಶ್ರಾವಣದಲ್ಲಿಯ ೨ ನೇಯ ಶುಕ್ರವಾರ ವರಮಹಾಲಕ್ಷ್ಮೀ ಪೂಜೆಯನ್ನು ವೈಭವದಿಂದ ಆಚರಿಸಬೇಕು. ಪೂಜೆ ಮಾಡುವಾಗ ಲಕ್ಷ್ಮೀ ಹಾಡುಗಳನ್ನು ಹೇಳಬೇಕು. ( ಲಕ್ಷ್ಮೀ ಹಾಡುಗಳಿಗೆ ನಾವು ಪ್ರಕಟಿಸಿದ **ವರಮಹಾಲಕ್ಷ್ಮೀ ವ್ರತ, ಕಥಾ ಹಾಗೂ ಹಾಡುಗಳು** ಎಂಬ ಪುಸ್ತಕವನ್ನು ನೋಡಬಹುದು). ವರಮಹಾಲಕ್ಷ್ಮೀಗೆ

೧೬ ಎಳೇ ಗೆಜ್ಜೆವಸ್ತ್ರವನ್ನು ಏರಿಸಬೇಕು. ವರಮಹಾಲಕ್ಷ್ಮೀಯ ಕಲಶದ ಪಕ್ಕದಲ್ಲಿ ೧೬ ಎಳೆಯ ಒಂದು ಚಿಕ್ಕ ದಾರವನ್ನು ಇಡಬೇಕು. ಇದಲ್ಲದೇ ೧೬ ಎಳೆಯ ಇನ್ನೊಂದು ಉದ್ದ ದಾರವನ್ನು ವರಮಹಾಲಕ್ಷ್ಮೀಯ ಹತ್ತಿರವಿಟ್ಟು ಪೂಜಿಸಿ ನಂತರ ಪೂಜೆಮಾಡುವ ಸ್ತ್ರೀಯು ತನ್ನ ಕೊರಳಲ್ಲಿ ಕಟ್ಟಿಕೊಂಡು ವರಮಹಾಲಕ್ಷ್ಮೀಗೆ ೧೬ ಹೂರಣದ ಆರುತಿ ಮಾಡಬೇಕು. ಮುತ್ತೈದೆಗೆ ಮರದ ಬಾಗಿಣ ಕೊಡಬೇಕು. ಸಂಜೆ ಸಂಪತ್ ಶುಕ್ರವಾರ ಹಾಡನ್ನು ಹಾಗೂ ೫ ಶುಕ್ರವಾರ ಹಾಡನ್ನು ಅನ್ನಬೇಕು.

**೨) ಶ್ರಾವಣ ಶನಿವಾರ –**

ಈ ಮಾಸದಲ್ಲಿ ಬರುವ ಪ್ರತಿ ಶನಿವಾರ ನುಚ್ಚು ಕಟ್ಟಂಬಲಿ, ಹೆಸರು ಹಿಂಡಿ ಪಲ್ಲೆ, ಜೋಳದ ಹಿಟ್ಟಿನ ಬಟ್ಟಲುಗಡಬು ಮಾಡಿ ದೇವರಿಗೆ ನಿವೇದಿಸಿ ನಂತರ ಶುಕ್ರವಾರ ಲಕ್ಷ್ಮೀಗೆ ನಿವೇದಿಸಬೇಕು. ಸಂಜೆ ಸಂಪತ್ ಶನಿವಾರ ಹಾಡನ್ನು ಅನ್ನಬೇಕು.

**೩) ಶ್ರಾವಣ ಶನಿವಾರ-ಭಾನುವಾರ -**

ಈ ಮಾಸದ ಪ್ರತಿ ಶನಿವಾರ ಹಾಗೂ ಭಾನುವಾರಗಳಂದು ಹನುಮಂತ, ಅಶ್ವತ್ಥವೃಕ್ಷ, ನರಸಿಂಹ ಹಾಗೂ ಶನ್ಯೈಶ್ಚರರ ಪೂಜೆ ಮಾಡಬೇಕು.

**೪) ಶ್ರಾವಣ ಸೋಮವಾರ –**

ಈ ಮಾಸದಲ್ಲಿ ಬರುವ ಎಲ್ಲ ಸೋಮವಾರ ದಿನ ಈಶ್ವರನ ಪೂಜೆ ಮಾಡಿ 'ಶಿವಪಾರಿಜಾತ' ಹಾಡನ್ನು ಹೇಳಬೇಕು.

**೫) ಶ್ರಾವಣ ಮಂಗಳವಾರ -**

ಹೊಸದಾಗಿ ಮದುವೆಯಾದವರು ಈ ಮಾಸದ ಮೊದಲನೆಯ ಮಂಗಳವಾರ ಮಂಗಳಗೌರೀ ಪೂಜೆಯನ್ನು ಪ್ರಾರಂಭಿಸಿ ಪ್ರತಿ ಮಂಗಳವಾರ ಗೌರೀ ಪೂಜೆಯನ್ನು ಮಾಡಬೇಕು. ನೈವೇದ್ಯಕ್ಕೆ ಕರಿಗಡಬು, ಭಕ್ಷ್ಯಗಳನ್ನು ಮಾಡಬೇಕು. ನಂತರ ೫ ಎಳೆಯ ದಾರವನ್ನು ಪೂಜಿಸಿ ೫ ಗಂಟು ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು. ನಂತರ ೫ ಕಡ್ಡಿ ಬತ್ತಿ ಆರುತಿ ಆಮೇಲೆ ೫ ಹೂರಣದ ಆರುತಿ ಮಾಡಬೇಕು. ಈ ರೀತಿ ೫ ವರ್ಷ ಪೂಜೆ ಮಾಡುವದು ಇರುತ್ತದೆ. ಪ್ರತಿ ಮಂಗಳವಾರ ಮಂಗಳಗೌರೀ ಹಾಡು ಹೇಳಬೇಕು.

**೬) ಶ್ರಾವಣ ಬುಧವಾರ ಹಾಗೂ ಗುರುವಾರ -**

ಬುಧ - ಬೃಹಸ್ಪತಿಯೆಂದು ಎರಡು ಗೊಂಬೆಗಳನ್ನು ಮಾಡಿ ಶ್ರಾವಣ ಮಾಸದ ಪ್ರತಿ ಬುಧವಾರ ಹಾಗೂ ಗುರುವಾರ ಪೂಜಿಸಬೇಕು. ಸಂಜೆ ಬುಧ ಬೃಹಸ್ಪತಿ ಹಾಡು ಹೇಳಬೇಕು.

**೭) ನಾಗರಚೌತಿ (ಶ್ರಾವಣ ಶುದ್ಧ ಚತುರ್ಥೀ) –**

ಸುಮಂಗಲೆಯರು ಹಾವಿನ ಹುತ್ತು ಇದ್ದಲ್ಲಿ ಹೋಗಿ (ಕಲ್ಲಿನ ) ನಾಗನನ್ನು ಕರಿಕೆ ಪತ್ರಿ, ಹೂಗಳಿಂದ ಪೂಜಿಸಿ ಚಿಗಳಿ, ತಂಬಿಟ್ಟು, ನೆಲಗಡಲೆಗಳನ್ನು ನಿವೇದಿಸಿ, ನಾಗನಿಗೆ ಹಾಲು ಹಾಕಬೇಕು. ಈ ದಿನ ಊಟ ಮಾಡದೇ ಫಲಾಹಾರ ಸೇವಿಸಬೇಕು. (ನಾಗನಿಗೆ ಏರಿಸುವ ಗೆಜ್ಜೆ ವಸ್ತ್ರಕ್ಕೆ ಕುಂಕುಮ ಹಚ್ಚದೇ ಅರಿಷಿಣ ಮಾತ್ರ ಹಚ್ಚಬೇಕು.)

**೮) ನಾಗರ ಪಂಚಮೀ (ಶುದ್ಧ ಪಂಚಮೀ) -**

ಹೊಸದಾಗಿ ಲಗ್ನವಾದ ಸುಮಂಗಲೆಯರು ಮನೆಯಲ್ಲಿ ಮಣ್ಣಿನಿಂದ ೯ ಹೆಡೆ ನಾಗನನ್ನು ಮಾಡಿ ಮಣೆಯ ಮೇಲೆ ಕೂಡಿಸಿ ಹತ್ತಿರ ೯ ಎಳೆಯ ದಾರವನ್ನಿಟ್ಟು ಪೂಜಿಸಬೇಕು. ನಾಗನಿಗೆ ೯ ಕುಚ್ಚಿದ ಕಡಬುಗಳನ್ನು ನಿವೇದಿಸಿ ದಾರಕ್ಕೆ ೯ ಗಂಟು ಹಾಕಿ ತಮ್ಮ ಕೊರಳಲ್ಲಿ ಹಾಕಿಕೊಂಡು ನಾಗನಿಗೆ ೯ ಹೂರಣದ ಆರುತಿ ಮಾಡಬೇಕು. ಪುರುಷರೂ ಯಥಾವಿಧಿ ನಾಗಪೂಜೆಯನ್ನು ಮಾಡಬೇಕು.

**೯) ಶಿರಿಯಾಳ ಷಷ್ಠೀ ಪೂಜೆ (ಶುದ್ಧ ಷಷ್ಠೀ)–**

ನಾಗನನ್ನು ಮಾಡಿದ ಮಣ್ಣಿನಿಂದ ಒಂದು ತೊಟ್ಟಿಲು, ಅದರಲ್ಲಿ ಎರಡು ಗೊಂಬೆಗಳನ್ನು ಮಾಡಿಟ್ಟು ಪೂಜಿಸಬೇಕು. ದೇವರಿಗೆ ನಿವೇದಿಸಿದ ಮೊಸರು ಬುತ್ತಿ, ಶೇವಗೆಯ ಪಾಯಸ, ಕರ್ಚಿಕಾಯಿಗಳನ್ನು ಶಿರಿಯಾಳ ಶೆಟ್ಟಿಗೆ ನಿವೇದಿಸಬೇಕು. ಹೊಸದಾಗಿ ಲಗ್ನವಾದವರು ಮೊದಲನೆಯ ವರ್ಷ ೫ ಮನೆಗಳಿಗೆ ಈ ಪದಾರ್ಥಗಳನ್ನು ಬೀರಿಸಬೇಕು. ೨ನೆಯ ವರ್ಷ ೧೦ ಮನೆಗಳು, ೩ನೆಯ ವರ್ಷ೧೫, ೪ನೇಯ ವರ್ಷ೨೦, ಹಾಗೂ ೫ನೆಯ ವರ್ಷ ೨೫ ಮನೆಗಳಂತೆ ೫ ವರ್ಷ ಮಕ್ಕಳಿದ್ದ ಮನೆಗಳಿಗೆ ಬೀರಿಸಬೇಕು. ಸಂಜೆ ಶಿರಿಯಾಳ ಷಷ್ಠಿಯ ಹಾಡುಗಳನ್ನು ಅನ್ನಬೇಕು.

**೧೦) ಶುದ್ಧ ದ್ವಾದಶೀ -**

ಶಾಕವ್ರತ ಸಮರ್ಪಣೆ ದಧಿವ್ರತಾರಂಭ.

(i) ಈ ದಿನದಲ್ಲಿ ಶಾಕವ್ರತ ಸಂಪೂರ್ಣ ಫಲಕ್ಕಾಗಿ '**ಉಪಾಯನಮಿದಂ ದೇವ ವ್ರತಸಂಪೂರ್ತಿಹೇತವೇ । ಶಾಕಂ ತು ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥**' ಎಂಬ ಮಂತ್ರದಿಂದ ಬ್ರಾಹ್ಮಣನಿಗೆ ದಕ್ಷಿಣೆಯೊಂದಿಗೆ ಶಾಕ ದಾನವನ್ನು ಮಾಡಬೇಕು.

(ii) ಇಂದಿನಿಂದ ಭಾದ್ರಪದ ಶುದ್ಧ ದಶಮಿಯ ವರೆಗೆ ದಧಿವ್ರತ (ದಧಿ ನಿಷಿದ್ಧ).

**೧೧) ಶ್ರೀಗುರುಸಾರ್ವಭೌಮರ ಆರಾಧನೆ (ಶ್ರಾವಣ ಕೃಷ್ಣ ಪ್ರತಿಪದಾ, ದ್ವಿತೀಯಾ, ತೃತೀಯಾ)-**

ಈ ಮೂರು ದಿನಗಳಲ್ಲಿ ಶ್ರೀರಾಘವೇಂದ್ರತೀರ್ಥ-ಗುರುಸಾರ್ವಭೌಮರ ಆರಾಧನೆಯನ್ನು ವೈಭವದಿಂದ ಹಾಗೂ ಭಕ್ತಿಯಿಂದ ಆಚರಿಸಬೇಕು. ಶ್ರೀರಾಯರ ಮೇಲೆ ಹರಿದಾಸರು ರಚಿಸಿದ ಹಾಡುಗಳನ್ನು ಸುಳಾದಿಗಳನ್ನು ಹೇಳುತ್ತ ತಾರತಮ್ಯ ಭಜನೆ ಮುಂತಾದವುಗಳನ್ನು ಮಾಡುತ್ತ ಮೂರು ದಿನ ಶ್ರೀರಾಯರ ಆರಾಧನೆಯನ್ನು ಮಾಡಬೇಕು.

**೧೨) ಶ್ರೀ ಕೃಷ್ಣಜಯಂತೀ (ಕೃಷ್ಣಾಷ್ಟಮೀ) -**

ಮಣ್ಣಿನಿಂದ ಗೋಕುಲ ಹಾಗೂ ತೊಟ್ಟಿಲನ್ನು ಮಾಡಿ ಒಳಗೆ ಶ್ರೀ ಕೃಷ್ಣ ಬಲರಾಮರನ್ನು ಮಲಗಿಸಬೇಕು. ನಂದ ಗೋಪ-ಯಶೋದೆ, ವಸುದೇವ -ದೇವಕೀ, ರೋಹಿಣೀ, ಸುಭದ್ರಾ, ಕಾಮಧೇನು, ಕಲ್ಪವೃಕ್ಷ, ಕತ್ತೆ, ಕಾಗಿ, ಗೋಪಿಯರು, ಪೌರಾಣಿಕ ಬ್ರಾಹ್ಮಣ ಇವರನ್ನು ಮಣ್ಣಿನಿಂದ ಮಾಡಿ ಗೋಕುಲದಲ್ಲಿಟ್ಟು ಪೂಜಿಸಬೇಕು. ಪೂಜಾ ನಂತರ ಶ್ರೀಕೃಷ್ಣ ಹಾಗೂ ಚಂದ್ರರಿಗೆ ಅರ್ಘ್ಯಗಳನ್ನು ಕೊಡಬೇಕು. ವಿವರಗಳಿಗೆ ವ್ರತ ವಿಭಾಗ ನೋಡಿರಿ.

**ಕೃಷ್ಣಾರ್ಘ್ಯಮಂತ್ರ - ಜಾತಃ ಕಂಸವಧಾರ್ಥಾಯ ಭೂಭಾರಹರಣಾಯ ಚ । ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥ ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ । ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥** ಈ ಮಂತ್ರದಿಂದ ಶ್ರೀ ಕೃಷ್ಣನಿಗೆ ಹಾಲು ನಂತರ ನೀರಿನ ಅರ್ಘ್ಯಗಳನ್ನು ಕೊಡಬೇಕು. ಆಮೇಲೆ ಚಂದ್ರಪ್ರಾರ್ಥನೆ ಮತ್ತು ಚಂದ್ರನಿಗೆ ಅರ್ಘ್ಯ. **ಚಂದ್ರಪ್ರಾರ್ಥನಾ ಮಂತ್ರಃ - ಜ್ಯೋತ್ಸ್ನಾಪತೇ ನಮಸ್ತುಭ್ಯಂ ನಮಸ್ತೇ ಜ್ಯೋತಿಷಾಂ ಪತೇ । ನಮಸ್ತೇ ರೋಹಿಣೀಕಾಂತ ಸುಧಾಕುಂಭ ನಮೋಽಸ್ತು ತೇ ॥** ಈ ಮಂತ್ರದಿಂದ ಚಂದ್ರನನ್ನು ಪ್ರಾರ್ಥಿಸಿ ಅರ್ಘ್ಯವನ್ನು ಕೊಡಬೇಕು.

**ಚಂದ್ರಾರ್ಘ್ಯಮಂತ್ರ - ಕ್ಷೀರೋದಾರ್ಣವಸಂಭೂತ ಅತ್ರಿನೇತ್ರ ಸಮುದ್ಭವ । ಗೃಹಾಣಾರ್ಘ್ಯಂ ಮಯಾ ದತ್ತಂ (ಶಶಾಂಕೇಂದೋ) ರೋಹಿಣ್ಯಾ ಸಹಿತೋ ಮಮ ॥** ಈ ಮಂತ್ರದಿಂದ ಪುಷ್ಪ, ಫಲ, ಗಂಧಗಳ ಸಮೇತ ಶಂಖದಲ್ಲಿ ನೀರನ್ನು ತುಂಬಿಸಿಕೊಂಡು ಚಂದ್ರನಿಗೆ ಅರ್ಘ್ಯವನ್ನು ಕೊಟ್ಟು ಶ್ರೀ ಕೃಷ್ಣನನ್ನು ಸ್ತುತಿಸಬೇಕು. ವಿವರಗಳಿಗೆ ವ್ರತವಿಭಾಗವನ್ನು ನೋಡಿರಿ.

*****

## ೬. ಭಾದ್ರಪದ ಮಾಸ

**೧) (i) ಸ್ವರ್ಣಗೌರೀ ವ್ರತ (ಶುದ್ಧ ತೃತೀಯಾ)-**

ಸ್ವರ್ಣಗೌರೀ ಪೂಜೆಯನ್ನು ಮಾಡಿ ಹಾಡನ್ನು ಅನ್ನಬೇಕು.

(ii) ಹರಿತಾಲಿಕಾ ಗೌರೀ ವ್ರತವನ್ನೂ ಇವತ್ತೇ ಆಚರಿಸಬೇಕು.

**೨) ಗಣೇಶ ಚತುರ್ಥೀ ( ಶುದ್ಧ ಚತುರ್ಥೀ) -**

ಈ ದಿನ ಶ್ರೀಗಣೇಶನನ್ನು ಮಣ್ಣು, ಬೆಳ್ಳಿ ಅಥವಾ ಬಂಗಾರದಿಂದ ನಿರ್ಮಿತವಾದ ವಿಗ್ರಹದಲ್ಲಿ ಪೂಜಿಸಬೇಕು. ನೈವೇದ್ಯಕ್ಕೆ ೨೧ ಮೋದಕಗಳನ್ನು ಮಾಡಬೇಕು. ಶ್ರೀಗಣೇಶನ ಪೂಜೆಯಿಂದ ಸರ್ವವಿಘ್ನಗಳೂ ದೂರಾಗುತ್ತವೆ. ಈ ದಿನ ಚಂದ್ರೋದಯ ಕಾಲದಲ್ಲಿ ಚಂದ್ರನನ್ನು ನೋಡಿದರೆ ಇಲ್ಲದಿರುವ ಅಪವಾದವು ಬರುತ್ತದೆ. ಚಂದ್ರದರ್ಶನ ದೋಷ ಪರಿಹಾರಕ್ಕಾಗಿ " **ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ । ಸುಕುಮಾರಕ ಮಾ ರೋದೀಃ ತವ ಹ್ಯೇಷಃ ಶಮಂತಕಃ ॥** ಎಂಬ ಶ್ಲೋಕವನ್ನು ಪಠಿಸಬೇಕು ಮತ್ತು ಸಂಜೆ ಸ್ಯಮಂತಕೋಪಾಖ್ಯಾನ ಹಾಡನ್ನು ಹೇಳಬೇಕು.

### ಶ್ರೀವಾದಿರಾಜ ವಿರಚಿತ ಶಮಂತಕೋಪಾಖ್ಯಾನ

ಕರಿಗೊರಳಿನ ಗಜಮುಖನ ಗಣಪತಿಯ ಬಲಗೊಂಬೆ । ಮುದದಿಂದ ಪೇಳ್ವೆನು ಜಾಂಬುವಂತಿಯರ ಸ್ವಯಂವರವ ॥ಪ॥ಎಲ್ಲಾ ಕಥೆಗಳಂತಲ್ಲ ಬಲ್ಲವರಿಗಳವಲ್ಲ ಒಳ್ಳೆಯದಿದು ಪುರಾಣದ ಸುರವೇದಗಳು ॥ ನೋಡ್ಯಾಡುವ ಕಥೆಯಲ್ಲ ಭಾಗವತದ ದಶಮೇಲು ಓದಿ ಹೇಳಿ ಕೇಳಿದವರಿಗೆ ಕರುಣಾಮೃತವು ॥ ತಾನೊಬ್ಬ ಸತ್ರಜಿತರಾಯ ಸೂರ್ಯನ ಪ್ರಾರ್ಥನೆ ಮಾಡಿ । ಶಮಂತಕ ರತ್ನವ ಪಡೆದನು ಉತ್ತುಮದಿಂದ । ಕಾಮಧೇನುವು ಈ ರತ್ನ ಕಲ್ಪವೃಕ್ಷವು ಈ ರತ್ನ। ಬೇಡಿದಿಷ್ಟಾರ್ಥವ ಕೊಡುತಿಹುದೀ ರತ್ನ । ಇಂತೀಪರಿ ರತ್ನವನು ತನ್ನ ಅಂತರಂಗದೊಳಿರಿಸಿ । ಕಂತುಪಿತನೋಲಗಕ ನಡೆದನು ಸತ್ರಜಿತರಾಯ ॥ ಹರಿ ಶೋಧಿಸಿದನು

ಈ ರತ್ನ ತಾ ಕಂಡನು ಶ್ರೀಕೃಷ್ಣ । ಕೊಡು ಸತ್ರಜಿತರಾಯ ಈ ರತ್ನವನೆಂತೆಂದ ॥ ಸೃಷ್ಟಿಗಿಂತ್ಹಿರಿಯಳೇ ಶಿರಿಯೇ ಭಕ್ತವತ್ಸಲ ನರಹರಿಯೇ । ರತ್ನವು ನಿನಗೇನು ಪಾವನ ನನಗಿರಬೇಕೆಂದ ॥ ಇರುತಿರೆ ಪ್ರಸೇನರಾಯ ಧರಿಸಿದ ಆ ರತ್ನವನು । ಘನತುರಗವನೇರಿ ಹೊರಟನು ವನ ಬೇಟೆಯ ನಾಡ ॥ ಬಂದನು ಪ್ರಸೇನರಾಯ ನಿಂತನು ಕಾನನದಲ್ಲಿ। ರತ್ನದ ಬೆಳಕು ಹೊಳೆದಿತು ಸಿಂಹನ ಗೃಹದಲ್ಲಿ॥ ಬಂದಿತು ಆ ಸಿಂಹನಾಗ ಕೊಂದಿತು ಪ್ರಸೇನರಾಯನ। ಕೊಂಡೋಡಿತು ರತ್ನವ ಜಾಂಬುವಂತನ ಗೃಹದೊಳಗೆ ॥ ಒಂದಿನ ಆ ಜಾಂಬುವಂತನು ಬಂದನು ವನ ಬೇಟೆಯ ನಾಡ । ಗದಾಯುದ್ಧವ ಮಾಡಿ ಗೈಲಿದೊಯ್ದನು ಆ ರತ್ನವನು ॥ ಶೂರವುಳ್ಳ ಸತ್ರಾಜಿತರಾಯ ತಾ ಧರಿಸಿದ ರತ್ನವನು । ಕಾಣದಲೆ ಕಳಕಳಸಿ ಮೂರ್ಛಿತನಾದ ॥ ಒಳಸಂಗಡಲಿದ್ದ ಪತಿಗೆ ಬಾಲೆ ನುಡಿದಳು ಒಂದು ಮಾತು । ಕಿರಿಯ ಪ್ರಸೇನನು ಕೊಂಡೊಯ್ದನು ಆ ರತ್ನವನು ॥ ಕಿರಿ ಹೋದ ಪಥ ಹಿಡಿದು ಮರುಳಾದೆನು ಜೀವನದಿ। ಕುದುರೆಯ ಹೆಜ್ಜೆ ಪುರದಲ್ಲಿ ಹುಡುಕುತ ಸಾಗಿದರು ॥ ಕಾಡಿಸಿ ಬೇಡಿದನಾಗ ನಾ ಕೊಡದಲೆ ಮರುಳಾದೆ । ಜೀವಕೆ ಗುರಿಮಾಡಿತು ಈ ರತ್ನವು ॥ ಸತ್ರಾಜಿತ ತಾ ಹೀಗೆನಲು ಕೃಷ್ಣರಾಯರು ತಾವು ಕೇಳಿ । ಅಟ್ಟಿದರು ಚರರನ್ನೀಕ್ಷಣ ಕರೆತನ್ನಿರೆನುತ ॥ ರಂಗನಲ್ಲದೆ ನಮ್ಮ ಗೃಹದೊಳಗೆ ಲಂಡರು ದಾರಿಲ್ಲೆನುತ । ಪಶುಪಾಲಿಪ ತಮ್ಮನ ಕೊಲಿಸಿದನೆಂದು ಮರುಗಿದನು ॥ ಕೃಷ್ಣನಲ್ಲದೆ ನಮ್ಮ ಗೃಹದೊಳು ದುಷ್ಟರು ದಾರಿಲ್ಲೆನುತ । ಜೀವಕ ಗುರಿ ಮಾಡಿತು ಈ ರತ್ನವನು ॥ ಸತ್ರಜಿತ ತಾ ಹೀಗೆನಲು ಕೃಷ್ಣರಾಯರು ತಾವು ಕೇಳಿ । ಅಟ್ಟಿದರು ಚರರನ್ನೀಕ್ಷಣ ಕರೆತನ್ನಿರೆನುತ ॥ ಪರಿಚಾರಕರು ಹೀಂಗೆನಲು ಸತ್ರಾಜಿತನ ಕಾಣುತಲೆ । ಬಾರಯ್ಯ ಎಂದು ಕುಳ್ಳಿರಿಸಿ ॥ ಏನಯ್ಯ ನಮ್ಮ ಮೇಲೆ ದೂರುಗಳಿಂದ ಮರಳಿ । ನೀ ಎನ್ನ ಕೇಳಿದರೆ ನಾ ಕೊಡುವೆನು ರತ್ನವನು ॥ ಛಲ ಮಾಡಿ ಕೊಲಿಸಬಹುದೇ ಕಿರಿಯನ ಪಾರ್ಥನ ಸಖನೇ । ಕೊಂದಿಲ್ಲ ಕಿರಿಯನ್ನ ಕಂಡಿಲ್ಲ ರತ್ನವನು । ಕೊಂದದ್ದುಂಟಾದರೆ ಬಲರಾಮನ ಕೊಂದ್ಹಾಂಗ । ಅಣ್ಣ ಬಲರಾಮನೇ ಕೇಳೈ ನಮ್ಮ ಬೃಹಸ್ಪತಿ ಬಲಗಳನು । ಅನ್ಯಾಯದ ಕಳೆಯಿಟ್ಟನು ಸತ್ರಾಜಿತ ನಮಗೆ ॥ ಅನ್ಯ ದ್ರವ್ಯವ ಅನ್ಯ ಸ್ತ್ರೀಯರ ಕಣ್ಣಿಲೆ ನೋಡಲಿಬಹುದು । ಸುಮ್ಮನೆ ದುರ್ಜನರು ದೂರುವರು ನಮಗೆ ॥ ಗಜೇಂದ್ರ ಚವತಿಯ ದಿವಸ ಚಂದ್ರನ ಕಂಡ ಕಾರಣದಿ। ಅಪನಿಂದ್ಯದ ಕಳೆ ಇಟ್ಟನು ಸತ್ರಜಿತ ನಮಗೆ॥ ಕದ್ದಾದರೆ ಇರಬಹುದು ಅಪನಿಂದ್ಯವ ತಾಳಲಾರೆ । ಇದ್ದಲ್ಲಿಗೆ ಹೋಗಿ ತರುವೆನು ಆ ರತ್ನವನು ॥ ಪುಲ್ಲಲೋಚನ ನರಹರಿಯು ತನ್ನ ಜನನಿಯ ಚರಣಕ್ಕೆರಗಿ । ಎಲ್ಲಿದ್ದರು ಬಾಹೆನು ಏಳನೆ ದಿವಸಕ್ಕೆಂದು॥ ಆನೆ ಕುದುರೆ ಮಂದಿ ಸಾಲು ಸಹಿತವಾಗಿ ಮಾರ್ಬಲವು । ತೀವ್ರದಿಂದಲಿ ಹೊರಟಿತು ಅಂತಣ ಸಾಲೇರಿ ॥ ಬಿಲ್ವದ್ವಾರದ ಪಥ ಹಿಡಿದು ಮುಂದೆ ನಡೆದನು ಶ್ರೀ ಕೃಷ್ಣ । ಹಿಂದೆ ನಡೆದಿತು ಬಲರಾಮನ ಮಾರ್ಬಲವು ॥ ನೀರಲ ಕಿತ್ತಳೆ ದಾಳಿಂಬ ಬಾಳೇಹಣ್ಣು ನಾರಂಗಿಗಳು । ಸುರಹೊನ್ನು ಶಾವಂತಿಗಿ ವನಗಳ ನೋಡಿ ॥ ಗಚ್ಚಿನ ಕೋಟೆಗಳನ್ನು ಮುತ್ತಿನ ಅಗಸಿಯ ಗೋಡೆ । ಜಾಂಬುವನ ಪುರದ ವಿಸ್ತಾರವ ಕಂಡು ಬೆರಗಾದ ॥ ಉಪ್ಪರಿಗೆ ಅರಮನೆಯು ಸುತ್ತು ಚಿತ್ರದ ಚಾವಡಿಯು । ಒಪ್ಪುತಿದ್ದವು ವೃಂದಾವನ ಬಾಗಿಲ ಮುಂದೆ॥ ಕರದಲಿ ಚಕ್ರವ ಹಿಡಿದು ಮುಂದೆ ನಡೆದನು ಶ್ರೀಕೃಷ್ಣ । ಹಿಂದೆ ನಡೆದಿತು ಬಲರಾಮನ ಮಾರ್ಬಲವು ॥

ರಂಭೆಯ ಕಂಠಸ್ಥಳದಲ್ಲಿ ಕಂಡನು ಹರಿ ರತ್ನವನು । ಕೊಂಡೊಯ್ದರೆ ಕಳುವೆನಿಸುವುದು ಪ್ರಸಿದ್ಧಿ॥ ರಂಗನ ಕಂಡಳು ಶಿಶಿವಿ ? ಕಂಗೆಟ್ಟಳು ಇವಗಂಜಿ । ಕರೆತಂದಳು ಜನನಿಯ ನಿಂತಿರುವ ಶ್ರೀ ಹರಿಯ ॥ ಯಾರಯ್ಯ ನಮ್ಮ ಗೃಹದೊಳು ಯಾರಿಲ್ಲಿ ಬರಲಿಕ್ಕೆ ತಕ್ಕವರು । ತೀವ್ರದಿಂದ ನೋಡಬನ್ನಿರೆಂದು ಕರೆತಂದಳು ಪತಿಯ ॥ ದೇವತಾರ್ಚನೆಗೆ ಕುಳಿತಿರ್ದ ಜಾಂಬವನು ಲಗುಬಗೆಯಿಂದ । ತಾ ಬಂದ ಕಂಡಾಕ್ಷಣದಿ ಮುಷ್ಟಿಯುದ್ಧವ ಮಾಡಿದನು ॥ ಮುಷ್ಟಿಯುದ್ಧವ ಮಾಡಿ ಮೂರು ದಿವಸಕೆ ಥಟ್ಟನೆ ಘಾಯವ ತಾಕಿ । ನೆಟ್ಟಗೆ ಏಳನೆ ದಿವಸಕ ಮೂರ್ಛಿತನಾದ॥ ನಾರಾಯಣ ರಾಮ ರೂಪವ ತೋರಿದನಾ ಜಾಂಬುವಗೆ । ತ್ರಾಹಿ ತ್ರಾಹಿ ಎಂದನು ಜಾಂಬುವನು ಅತಿ ಹರುಷದಲಿ ॥ ಜಾಂಬುವನ ಸತಿ ಬಂದು ಸ್ವಾಮಿ ಚರಣಕ್ಕೆರಗಿದಳು. । ಒಲಿದು ರಂಗಯ್ಯ ಕರುಣಿಸೆಂದು ಚರಣಕ್ಕೆರಗಿದಳು ॥ ಕಾಯ್ದಿ ಅಜಗಜಧರನ ಕಾಯ್ದಿ ವಿಭೀಷಣನ । ಪುಂಡಲೀಕನ ಕಾಯ್ದಿ ಅಂಬರೀಷ ರುಕ್ಮಾಂಗದರನ್ನು ॥ ಈ ಪರಿ ಭಕ್ತರನೆಲ್ಲ ನೀ ಕಾಯ್ದೆ ಕರುಣಾಕೃಪಾಳು । ನೀ ಸಲಹಬೇಕೆಂದು ಭಕ್ತಿಯಿಂದ ಚರಣಕ್ಕೆರಗಿದರು ॥ ಬಂಗಾರದ ಗದ್ದಿಗೆಯನ್ಹಾಕಿ ರಂಗರಾಯನ ಕುಳ್ಳಿರಿಸಿ । ಛಂದುಳ್ಳಾರ್ಚನೆ ಅರ್ಘ್ಯ ಪ್ರದಾನ ಮಾಡಿದರು। ಮುತ್ತಿನ ಗದ್ದೆಯನ್ಹಾಕಿ ಕೃಷ್ಣರಾಯರ ಕುಳ್ಳಿರಿಸಿ । ಅರ್ಥಿಯಿಂದ ಅರ್ಚನೆ ಅರ್ಘ್ಯ ಪ್ರದಾನ ಮಾಡಿದರು ॥ ಅಗರು ಚಂದನ ಶ್ರೀಗಂಧ ಮೈಗೆ ಲೇಪನ ಮಾಡಿದರು ॥ ಸುರಹೊನ್ನು ಶಾವಂತಿಗೆ ಸರಗಳನ್ಹಾಕಿ ॥ ನೀರಲ ಕಿತ್ತಳೆ ದಾಳಿಂಬ ಬಾಳೆಹಣ್ಣು ನಾರಂಗಿಗಳನ್ನು । ರಂಗಗೆ ನಲಿನಲಿಯುತ ಆರೋಗಣೆ ಮಾಡಿದರು ॥ ಖಂಡ ಸಕ್ಕರೆ ನೊರೆಹಾಲು ಬೆಣ್ಣೆ ಖರ್ಜೂರ ದಧಿ ಪಾಲು । ಕೃಷ್ಣಗೆ ನಲಿನಲಿಯುತ ಆರೋಗಣೆ ಮಾಡಿದರು ॥ ರಂಭಿ ಸಹಿತವಾಗಿ ಜಾಂಬುವನು ಇಂದು ಆಲೋಚನೆ ಮಾಡಿದನು । ಇಂದಿರಾರಮಣನಿಗೆ ಮಗಳನು ಕೊಡಬೇಕೆನುತ ॥ ಮಿತ್ರೆ ಸಹಿತವಾಗಿ ಜಾಂಬುವನು ಮತ್ತೆ ಆಲೋಚನೆ ಮಾಡಿ । ದೇವಾಧಿದೇವಗೆ ಮಗಳನ ಕೊಡಬೇಕೆನುತ ॥ ರಾಜ್ಯನಾಳುವ ರಾಯನ ನೋಡಿ ಮಗಳನ ಕೊಡು ಜಾಂಬುವನೆ । ಬೇಡ ನಾ ಬಡವನು ಜಾಂಬುವಂತಿಗೆ ವರನಲ್ಲ ॥ ಸೃಷ್ಟಿನಾಳುವ ರಾಯನ ನೋಡಿ ಪುತ್ರಿಯ ಕೊಡು ಜಾಂಬುವನೇ। ಮತ್ತೆ ನಾ ಬಡವನು ಜಾಂಬುವಂತಿಗೆ ವರನಲ್ಲ । ಸ್ವಾಮಿ ನಿಮ್ಮಂಥ ವರಗಳನು ಭೂಮಂಡಲದೊಳು ನಾ ಕಾಣೆ ॥ ನಾ ಮಾಡಿದ ಪುಣ್ಯವು ಫಲಿಸಿತು ಎಂದ॥ ಅಂದ ಮಾತನು ಕೇಳುತಲೆ ಮುಂದೆ ಹಂದರ ಹಾಕಿದರು । ಇಂದಿರೆ ರಮಣಗೆ ಧಾರೆಯ ನೆರೆದರು ರತ್ನವ ಸಹಿತ ॥ ಜಾಂಬುವತಿಗೆ ಕಲೆತರು ನೂರಾ ಒಂದು ಸಾವಿರ ಮಂದಿ । ತೀವ್ರದಿಂದ ಹೊರಟರು ಅಂದಣ ಸಾಲೇರಿ ॥ ಸ್ವಪ್ನವ ಕಂಡಳು ರುಕ್ಮಿಣಿ ಅತ್ತಿಗೆ ಹೇಳಬೇಕೆನುತಲೆ। ಭಕ್ತಿಯ ದೇವಕೀದೇವಿಯ ಚರಣಕೆರಗಿದಳು ॥ ಅತ್ತಿಗೆ ಕೇಳಿರಿ ಸ್ವಪ್ನದಲಿ ಇಟ್ಟಾಭರಣಗಳೆಲ್ಲಾ । ಪ್ರತಿಯಾಗಿರುವುದ ಕಂಡೆನು ಸ್ವಪ್ನದಲಿಂದು ॥ ಒಳ್ಳೇದಲೆ ಮಹಾಲಕ್ಷ್ಮಿ ಒಲ್ಲದ ಶ್ರೀಕೃಷ್ಣನು ತಾ । ಇನ್ನೊಬ್ಬಳ ಮಡದಿಯ ತರುವನು ಶ್ರೀಕೃಷ್ಣನು ಎಂದು ॥ ಏಳು ದಿವಸಕ ಬಾಹೆನೆಂದು ಹೇಳಿ ಹೋದನು ಶ್ರೀಕೃಷ್ಣ । ಈರೇಳು ದಿವಸವಾಯಿತು ಬರಲಿಲ್ಲವೆಂದು ಮರುಗಿದರು ॥ ನಾವೆಲ್ಲರು ಕೂಡಿಕೊಂಡು ಊರ ಮುಂದಿನ ದುರ್ಗಿಯನು । ಷೋಡಶ ಉಪಚಾರ ಪೂಜೆಯ ಮಾಡೋಣವೆಂದರು ॥ ಹವಳದ ಪಾಲಕಿಯೊಳಗೆ ಹರವ ರುಕ್ಮಿಣಿ ಕುಳಿತು । ಸಡಗರದಿಂದ್ಹಿಡಿದವ ಬಿರುದಿನ ಕಾಳಿಗಳ ॥ ಮುತ್ತಿನ ಪಾಲಕಿಯೊಳಗೆ ಮಿತ್ರೆ ದೇವಕೀ ದೇವಿ

ಕುಳಿತು । ಚರ್ಚರದಿಂದ್ಹಿಡಿದವ ಬಿರುದಿನ ಕಾಳಿಗಳ ॥ ರನ್ನದ ಪಾಲಕಿಯೊಳಗೆ ರಂಗನ ಮಡದರು ಕುಳಿತು । ಸಂಭ್ರಮದಿಂದ್ಹಿಡಿದವ ಬಿರುದಿನ ಕಾಳಿಗಳ ॥ ವೇದವ ಗೆಲಿದವ ಬಂದ ಭೂಮಿಯ ಪೊತ್ತವ ಬಂದ । ದೇವಾಧಿದೇವನು ಬಂದನೆಂದ್ಹಿಡಿದವ ಬಿರುದಿನ ಕಾಳಿ॥ ವರಾಹಾವತಾರನು ಬಂದ ನರಮೃಗರೂಪ ತಾ ಬಂದ । ಕರಿರಾಜಗೊಲಿದವ ಬಂದನೆಂದು ಹಿಡಿದವ ಕಾಳಿ ॥ ಚೀರುವ ಕಾಳಿಯ ಧನಿಯ ತಾ ಕೇಳಿದ ಬಲರಾಮ । ತೀವ್ರದಿಂದ ದ್ವಾರಾವತಿಯನು ಶೃಂಗರಿಸಿ॥ ತಾಯಿಯ (ತಂದೆಯ) ಕಂಡಾಕ್ಷಣದಿ ಬಂದು ಚರಣಕ್ಕೆರಗಿದನು । ಬಂದ ದುರಿತವ ದೂರಾಗಲಿ ಎಂದ್ಹರಿಸಿ ॥ ಅಂದಣ ಇಳಿದಳು ದೇವಕಿ ಕಂದನ ಬಿಗಿದಪ್ಪಿದಳು । ಬಂದ ದುರಿತಗಳೆಲ್ಲ ದೂರಾಗಲಿ ಎಂದ್ಹರಿಸಿ ॥ ನಾರಿ ಸಹಿತವಾಗಿ ಹರಿ ತಾನು ತೂಗುಮಂಚದ ಮೇಲೆ ಕುಳಿತು । ತಂಗಿ ಸುಭದ್ರಾದೇವಿ ತೊಳೆದಳು ಶ್ರೀಹರಿಪಾದ ॥ ಕಾಲು ತೊಳೆವರೆ ಕೈಕಡಗ ತೀವ್ರದಿಂದ ಮಾಡಿಸಿ ಕೊಡುವೆನು । ನಾ ಕೊಡುವೆನು ಉಡುಗೊರೆ ಅತಿ ಹರಷದಲೆಂದಾ ॥ ಕಡಗವ ನಾನೊಲ್ಲೆಂದ್ಲು ಒಡಲ್ಲೊಂದು ಮಾತಾಡಿದಳು । ಕೊಡಬೇಕು ಕುವರಗೆ ನಿನ್ನ ಮಗಳೆಂದ್ಲು ॥ ಹೆಣ್ಣು ಕೊಡುವೆನು ನಿನ್ನ ಮನಿಗೆ ಅಮ್ಮ ಕೇಳ್ಯೆ ಸುಭದ್ರಾ । ಹಣ್ಣು ಹಂಪಲ ತಿಂದು ಬೆಳೆದರು ನಿಮ್ಮವರೆಂದ ॥ ಆಟವ ಕಲಿಸಿದ ಅರ್ಜುನ ಆಕಳ ಕಾಯ್ದು ಸಹದೇವ । ದೇಶದ ತೇಜಿಯನ್ಹಿಡಿದ ನಕುಲಕೇಳೆಂದ ॥ ಹಿರಿಯಣ್ಣ ಧರ್ಮರಾಯ ಪಗಡಿಯ ಜೂಜುಗಳಾಡಿ । ಅಡಿಗೆಯ ಮಾಡಿದ ಭೀಮಸೇನ ಕೇಳೆಂದಾ ॥ ಅಣ್ಣ ನಿನ್ನ ದಯವೊಂದಿರಲಿ ಚಿನ್ನದ ಮದುವೆಯ ಮಾಡುವೆ । ಮಾರಿ ಸಣ್ಣದು ಮಾಡಿ ನುಡಿದಳು ಸರ್ವೋತ್ತಮಗ ॥ ಸ್ವಾಮಿ ನಿನ್ನ ದಯವೊಂದಿರಲಿ ಬಾಲನ ಮದುವೆಯ ಮಾಡುವೆ । ಮಾರಿ ಬಾಡಿಸಿ ನೋಡಿದಳು ಸರ್ವೋತ್ತಮಗ ॥ ಅಂದ ಮಾತನು ಕೇಳುತಲೆ ಕೋಪವೇಕಮ್ಮಾ ಸುಭದ್ರಾ । ನಾ ಸಾರಥಿಯಾಗಿ ಸಲಹುವೆ ಪಾಂಡವ್ರೈವರನೆಂದಾ॥ ನಾಗಲೋಕಗಳಿಗ್ಹೋಗಿ ನಾ ತಂದೆನು ರತ್ನವನು । ಹಿಡಿ ಸತ್ರಾಜಿತರಾಯ ಈ ರತ್ನವನೆಂದಾ ॥ ಸತ್ಯ ಲೋಕಕೆ ಹೋಗಿ ಮತ್ತೆ ತಂದೆನು ರತ್ನವನು । ತಕ್ಕೊ ಸತ್ರಾಜಿತರಾಯ ಈ ರತ್ನವನೆಂದಾ॥ ಸ್ವಾಮಿ ನನ್ನದು ತಪ್ಪೆಂದಾ ಸರ್ವಾಪರಾಧಿ ನಾ ಎಂದಾ । ಎನ್ನ ಪುತ್ರಿಯ ಕೊಡುವೆನು ಎನ್ನ ಅಪರಾಧ ಕ್ಷಮಿಸಿ ॥ ಕೃಷ್ಣ ನನ್ನದು ತಪ್ಪೆಂದ ಸರ್ವಾಪರಾಧಿ ನಾ ಎನ್ನ । ಪುತ್ರಿಯ ಕೊಡುವೆನು ಎನ್ನ ಅಪರಾಧ ಕ್ಷಮಿಸಿ । ನನಗೆ ನೀ ಕದ್ದಿ ಎಂದೀ ಅಪನಿಂದ್ಯವ ಕಳೆಕಟ್ಟಿದಿ । ನಿನ್ನ ಮಗಳಿಗೆ ಮುಳುವನೇ ಮಾಡಿದಿ ರಾಯ ಕೇಳೆಂದಾ ॥ ಕೃಷ್ಣ ನೀ ಕದ್ದಿ ಎಂದು ಅನ್ಯಾಯದ ಕಳೆಕಟ್ಟಿದಿ । ನಿನ್ನ ಮಗಳಿಗೆ ಮುಳುವನೇ ಮಾಡಿದಿ ರಾಯ ಕೇಳೆಂದ ॥ ಬಂಗಾರದ ತೊಡಿಗೆಗಳನ್ನು ಮಾಡಿಸ್ಯಾರು ಸತ್ಯಭಾಮೆಯಗೆ । ರಂಗಗ ಧಾರೆಯನೆರೆದರು ರತ್ನವ ಸಹಿತ ॥ ಮುತ್ತಿನ ತೊಡಿಗೆಗಳನ್ನು ಮಾಡಿಸ್ಯಾರು ಸತ್ಯಭಾಮಾಗೆ । ಕೃಷ್ಣಗ ಧಾರೆಯನೆರೆದರು ರತ್ನವು ಸಹಿತ ॥ ರಂಗಜಾಂಬುವಂತಿಯರ ಕಲ್ಯಾಣ ಹಿಂಗದೆ ಹೇಳಿ ಕೇಳಿದವರಿಗೆ । ಚೌತಿಯ ಚಂದ್ರನ ಕಂಡ ನಿಂದ್ಯ ಪರಿಹಾರಾಗುವುದು ॥ ಕೃಷ್ಣ ಸತ್ಯಭಾಮೆಯರ ಕಲ್ಯಾಣ ತಪ್ಪದೆ ಹೇಳಿಕೇಳಿದವರಿಗೆ । ಪುತ್ರ ಸಂತಾನವ ಕೊಡುವನು ಉಡುಪಿಯ ನಿಲಯ । ಸ್ವಾದಿಯ ಪುರದಲ್ಲಿರುವ ದೇವ ಹಯವದನರ ಮೆರೆವ । ವಾದಿರಾಜರು ಮಾಡಿದರೀ ಕಥೆಯ ವಿಸ್ತಾರವನು ॥

॥ ಸ್ಯಮಂತಕೋಪಾಖ್ಯಾನ ಸಮಾಪ್ತ ॥

(ಸೂಚನೆ: ಈ ಉಪಾಖ್ಯಾನದಲ್ಲಿ ತಿದ್ದುಪಡಿ ಇದ್ದರೆ ತಿಳಿಸಬಹುದು)

**೩) ಋಷಿ ಪಂಚಮೀ (ಶುದ್ಧ ಪಂಚಮೀ) -**

ರಜಸ್ಸುನಿಂತ ಮೇಲೆ ಋಷಿ ಪಂಚಮೀ ವ್ರತವನ್ನು ಧಾರಣ ಮಾಡಿದ ಸ್ತ್ರೀಯರು ಈ ದಿನ ಉಪವಾಸದಿಂದ ಇರಬೇಕು. ಬೆಳಿಗ್ಗೆ ನದೀ , ಸರೋವರ,ಮುಂತಾದ ಯಾವುದಾದರೊಂದು ಜಲಾಶಯಕ್ಕೆ ಹೋಗಿ ೧೦೮ ಉತ್ತರಾಣಿ ಕಡ್ಡಿಗಳಿಂದ ಹಲ್ಲು ತಿಕ್ಕಿಕೊಳ್ಳಬೇಕು. ನಂತರ ಸಂಕಲ್ಪಪೂರ್ವಕ ಪ್ರತಿಸಲ ಒಂದು ಉತ್ತರಾಣಿ ದಳವನ್ನು ತಲೆಯ ಮೇಲೆ ಇಟ್ಟುಕೊಂಡು ಒಂದೊಂದು ತಂಬಿಗೆ ನೀರನ್ನು ಹಾಕಿಕೊಳ್ಳುತ್ತಾ ೧೦೮ ಸಲ ಸ್ನಾನ ಮಾಡಬೇಕು. ಸ್ನಾನಾನಂತರ ಶುಭ್ರವಸ್ತ್ರಗಳನ್ನು (ಬಿಳಿ ಬಣ್ಣದ ಋಷಿಪಂಚಮೀ ಸೀರೆ ಕುಪ್ಪಸ) ಉಟ್ಟುಕೊಂಡು ಅರುಂಧತೀ ಸಹಿತ ಸಪ್ತಋಷಿಗಳನ್ನು ಆಚಾರ್ಯರು ಹೇಳುವ ಕ್ರಮದಲ್ಲಿ ವಿಧಿಪೂರ್ವಕ ಪೂಜಿಸಬೇಕು. ಋಷಿಪಂಚಮೀ ವ್ರತ ಕಥಾ ಶ್ರವಣ ಮಾಡಬೇಕು. ಮರುದಿನ ಷಷ್ಠೀ ಬೆಳಿಗ್ಗೆ ಪೂಜಾದಿ ನಂತರ ಬ್ರಾಹ್ಮಣ ದಂಪತಿಗಳಿಗೆ ಮರದ ಬಾಗಿಣ ಕೊಟ್ಟು ಭ ೀಜನ ಮಾಡಿಸಿ ತಾವು ಪಾರಣೆ ಮಾಡಬೇಕು. ಈ ವ್ರತಾನುಷ್ಠಾನದಿಂದ ಸ್ತ್ರೀಯರಿಗೆ ರಜಸ್ವಲೆಯಾಗುತ್ತಿದ್ದ ಕಾಲದಲ್ಲಿ ಮನೆಯಲ್ಲಿರುವ ಪಾತ್ರೆಗಳ ಸ್ಪರ್ಶ ಮುಂತಾದವುಗಳಿಂದ ಬಂದಿರುವ ದೋಷಗಳು ದೂರವಾಗುತ್ತವೆ. ಈ ವ್ರತವನ್ನು ಎಂಟು ವರ್ಷಗಳ ವರೆಗೆ ಪ್ರತಿವರ್ಷ ಮಾಡಿ ಕೊನೆಗೆ ಉದ್ಯಾಪನೆಯನ್ನು ಆಚರಿಸಬೇಕು. ಉದ್ಯಾಪನೆಯನ್ನು ಎಂಟು ವರ್ಷಗಳ ಒಳಗೂ ಮಾಡಬಹುದು.

ತಾಯಿಯು ಈ ವ್ರತಾನುಷ್ಠಾನ ಮಾಡದೇ ಅಥವಾ ಉದ್ಯಾಪನೆ ಮಾಡದೇ ಮೃತಳಾಗಿದ್ದರೆ ಮಗನು ಈ ವ್ರತವನ್ನು ಧಾರಣಮಾಡಿ ಉದ್ಯಾಪನೆ ಮಾಡಬಹುದು.

ರಜಸ್ಸು ನಿಲ್ಲದಿರುವ ಸ್ತ್ರೀಯರೂ (ಒಳಗಿದ್ದಾಗ) ಇವತ್ತು ಋಷಿ ಪಂಚಮಿ ಪೂಜೆ ಮಾಡಿದ ಸ್ಥಳಕ್ಕೆ ಹೋಗಿ ಅರುಂಧತೀ ಸಹಿತ ಸಪ್ತಋಷಿಗಳ ದರ್ಶನ ಮಾಡಿಕೊಂಡು ಋಷಿಪಂಚಮೀ ವ್ರತದ ಕಥೆಯನ್ನು ಶ್ರವಣ ಮಾಡಬೇಕು. ಈ ದಿನ ಅವರು ಎತ್ತು ಮುಟ್ಟದ ಪದಾರ್ಥಗಳಿಂದ ತಯಾರಿಸಿದ ಕೇವಲ ಫಲಾಹಾರವನ್ನು ಸೇವಿಸಬೇಕು. ಮರುದಿನ ಪಾರಣೆ.

**೪) ಜ್ಯೇಷ್ಠಾದೇವೀ ಪೂಜಾ (ಶುದ್ಧ ಸಪ್ತಮೀ, ಅಷ್ಟಮೀ, ನವಮೀ) -**

ಜ್ಯೇಷ್ಠಾದೇವೀ ಪೂಜೆಗಾಗಿ ಒಂದು ಕಲಶವನ್ನು ಇಟ್ಟುಕೊಂಡು ಅದರಲ್ಲಿ ಹಾಕಬೇಕಾದ ಪದಾರ್ಥಗಳು ೧. ಅಕ್ಕಿ, ೨. ಖೊಬ್ಬರಿ ಬಟ್ಟಲು, ೩. ಅಡಿಕೆ ಬೆಟ್ಟ, ೪. ೧೬ ಎಳೆಯ ಎರಡು ದಾರಗಳು, ೫. ೮ ಎಳೆಯ ಒಂದು ದಾರ, ೬. ೭ ಎಳೆಯ ಒಂದು ದಾರ, ೭. ೫ ಎಳೆಯ ಒಂದು ದಾರ ಮತ್ತು ೮. ಗಂಡು ಮಕ್ಕಳ ೫ ಎಳೆಯ ಒಂದು ದಾರ, ೯. ಲಗ್ನವಾಗದ ಕನ್ಯೆಯರು ೫ ಎಳೆಯ ಒಂದು ದಾರ. ಅನುರಾಧಾ ನಕ್ಷತ್ರದ (ಸಪ್ತಮಿಯ) ದಿನ ಈ ಕಲಶದಲ್ಲಿ ಜ್ಯೇಷ್ಠಾದೇವಿಯನ್ನು ಆವಾಹಿಸಿ, ಜ್ಯೇಷ್ಠಾ ನಕ್ಷತ್ರದ (ಅಷ್ಟಮಿಯ) ದಿನ ಪೂಜೆ ಮಾಡಿ , ಮೂಲಾ ನಕ್ಷತ್ರದ (ನವಮಿಯ) ದಿನ ವಿಸರ್ಜಿಸಬೇಕು. ನವಮಿಯ ದಿನ ದೋರಬಂಧನ. (ಕಳಶದಲ್ಲಿಯ ದಾರಗಳ ಬಂಧನ). ಜ್ಯೇಷ್ಠಾದೇವಿಯ ಹಾಡುಗಳನ್ನು ಹೇಳಬೇಕು. ಶ್ರಾವಣ ಶುಕ್ರವಾರ ಪೂಜೆಯ ನಿಯಮವಿದ್ದವರು ಶುಕ್ರವಾರ ಗೌರಿಯ ಹತ್ತಿರವೇ ಜ್ಯೇಷ್ಠಾ ದೇವಿಯನ್ನು ಪ್ರತಿಷ್ಠಾಪಿಸಿ ಪೂಜಿಸಬೇಕು.

೫) ಶುದ್ಧ ನವಮಿಯಿಂದ ಹುಣ್ಣಿಮೆಯ ವರೆಗೆ ಶ್ರೀಭಾಗವತ ಸಪ್ತಾಹ . ಈ ಅವಧಿಯಲ್ಲಿ ಶ್ರೀಭಾಗವತ ಪುರಾಣ ಕಥನ ಅಥವಾ ಶ್ರವಣ ಮಾಡಬೇಕು .

**೬) ವಿಷ್ಣು ಪಂಚಕ ವ್ರತಾರಂಭ (ಶುದ್ಧ ಏಕಾದಶೀ, ದ್ವಾದಶೀ)-**

ಈ ಮಾಸದ ಶುಕ್ಲಪಕ್ಷದ ಏಕಾದಶೀ ಅಥವಾ ದ್ವಾದಶೀ ದಿನದಲ್ಲಿ ಶ್ರವಣ ನಕ್ಷತ್ರವು ಬಂದಿದ್ದರೆ ವಿಷ್ಣುಪ್ರೀತ್ಯರ್ಥವಾಗಿ ವಿಷ್ಣುಪಂಚಕ ವ್ರತವನ್ನು ಪ್ರಾರಂಭಿಸಬೇಕು. ಪ್ರತಿ ತಿಂಗಳಿನಲ್ಲಿ ೫ ಉಪವಾಸಗಳಂತೆ ೧೨ ತಿಂಗಳು ಈ ವ್ರತವನ್ನಾಚರಿಸಿ ಉದ್ಯಾಪನೆ ಮಾಡಬೇಕು. ವ್ರತದ ಸಂಕಲ್ಪ ಹಾಗೂ ತರ್ಪಣಗಳಿಗೆ ವ್ರತವಿಭಾಗ ನೋಡಿರಿ.

**೭) ಕ್ಷೀರ ವ್ರತಾರಂಭ, ವಾಮನ ಜಯಂತೀ, ವಿಷ್ಣುಪರಿವರ್ತನೋತ್ಸವ (ಶುದ್ಧ ದ್ವಾದಶೀ)**

i) ಈ ದಿನ ದಧಿವ್ರತವನ್ನು ದೇವರಿಗೆ ಸಮರ್ಪಿಸಿ ದಧಿದಾನವನ್ನು ಮಾಡಿ ಕ್ಷೀರವ್ರತವನ್ನು ಸಂಕಲ್ಪಿಸಬೇಕು. ಭಾದ್ರಪದ ಶುದ್ಧ ದ್ವಾದಶಿಯಿಂದ ಆಶ್ವೀನ ಶುದ್ಧ ದಶಮಿಯ ವರೆಗೆ ಕ್ಷೀರವ್ರತ (ಹಾಲು ನಿಷಿದ್ಧ, ಹಾಲಿನ ವಿಕಾರವಾದ ಮೊಸರು ಮುಂತಾದವುಗಳಿಗೆ ದೋಷವಿಲ್ಲ). ಹಿಂದಿನ ವ್ರತದ ಸಮರ್ಪಣೆ ಮತ್ತು ಈ ವ್ರತದ ಪ್ರಾರಂಭದ ಸಂಕಲ್ಪಗಳಿಗೆ ವ್ರತವಿಭಾಗ ನೋಡಿರಿ.

(ii) **ವಾಮನ ಜಯಂತೀ** - ದ್ವಾದಶೀ ಬೆಳಿಗ್ಗೆ " **ನಮಸ್ತೇ ಪದ್ಮನಾಭಾಯ ನಮಸ್ತೇ ಜಲಶಾಯಿನೇ। ತುಭ್ಯಮರ್ಘ್ಯಂ ಪ್ರಯಚ್ಛಾಮಿ ಬಾಲವಾಮನರೂಪಿಣೇ ॥** ಈ ಮಂತ್ರದಿಂದ ಶ್ರೀವಾಮನದೇವರಿಗೆ ಅರ್ಘ್ಯಕೊಡಬೇಕು. ಬಾಲಬ್ರಹ್ಮಚಾರಿಯನ್ನು ಆಮಂತ್ರಿಸಿ ಭೋಜನ ಮಾಡಿಸಬೇಕು.

(iii) **ವಿಷ್ಣುಪರಿವರ್ತನೋತ್ಸವ**- ಈ ದಿನ ಸಂಧ್ಯಾಕಾಲದಲ್ಲಿ ವಿಷ್ಣುವನ್ನು ಪೂಜಿಸಿ " **ವಾಸುದೇವ ಜಗನ್ನಾಥ ಪ್ರಾಪ್ತೇಯಂ ದ್ವಾದಶೀ ತವ । ಪಾರ್ಶ್ವೇನ ಪರಿವರ್ತಸ್ವ ಸುಖಂ ಸ್ವಪಿಹಿ ಮಾಧವ ॥** " ಎಂಬ ಮಂತ್ರದಿಂದ ಪ್ರಾರ್ಥಿಸಬೇಕು. ಯೋಗನಿದ್ರೆಯಲ್ಲಿರುವ ವಿಷ್ಣುವು ಈ ದಿನ ಇನ್ನೊಂದು ಮಗ್ಗುಲಿಗೆ ಹೊರಳಿ ಮಲಗುತ್ತಾನೆ.

**೮) ಅನಂತ ಚತುರ್ದಶೀ ವ್ರತ (ಶುದ್ಧ ಚತುರ್ದಶೀ) -**

ಶ್ರೀಅನಂತನವ್ರತ ಗ್ರಹಣ ಮಾಡಿದವರು ಶ್ರೀ ಅನಂತನ ಪೂಜೆ ಮಾಡಬೇಕು. ಸ್ನಾನಾಹ್ನಿಕ ಆದ ಮೇಲೆ ಪೂಜೆ ಪ್ರಾರಂಭಿಸುವ ಮೊದಲಿಗೆ ಹಿಂದಿನ ವರ್ಷ ತೆಗೆದಿಟ್ಟ ದಾರವನ್ನು ಗಂಡಸರು ಬಲಗೈಗೆ ಮತ್ತು ಹೆಂಗಸರು ಕೊರಳಲ್ಲಿ ಹಾಕಿಕೊಂಡು ಶ್ರೀಅನಂತಪದ್ಮನಾಭನ ಪೂಜೆ ಮಾಡಬೇಕು. ಹೊಸ ದಾರಗಳನ್ನು ದೇವರ ಕಲಶದೊಂದಿಗೆ ಇಟ್ಟುಪೂಜಿಸಬೇಕು. ಅನಂತನ ಪೂಜೆಯಾದ ಮೇಲೆ ವ್ರತಕಥಾ ಶ್ರವಣ ಮಾಡಬೇಕು. ಎಲ್ಲ ಪೂಜೆಯು ಮುಗಿದ ನಂತರ ಆಮಂತ್ರಿತರಾದ ಬ್ರಾಹ್ಮಣ ದಂಪತಿಗಳಿಗೆ ಅನಂತನ ದಾರವನ್ನು ದಕ್ಷಿಣೆ ಸಹಿತ ಕೊಟ್ಟು ಮುತ್ತೈದೆಗೆ ಮರದ ಬಾಗಿನ ಬ್ರಾಹ್ಮಣನಿಗೆ ವಾಯನ ದಾನ ಕೊಡಬೇಕು. ಆಮೇಲೆ ಯಜಮಾನ ದಂಪತಿಯರು ಹಿರಿಯರಿಂದ ಆಶೀರ್ವಾದ ಪೂರ್ವಕ ಆನಂತನ ದಾರವನ್ನು ಸ್ವೀಕರಿಸಿ ಗಂಡಸರು ಮತ್ತು ಹೆಂಗಸರು ಮೇಲೆ ಹೇಳಿದಂತೆ ಧರಿಸಿ ಹಳೆಯ ದಾರಗಳನ್ನು ವಿಸರ್ಜಿಸಿ ಮನೆಯಲ್ಲಿ ಚಿಕ್ಕವರಿಗೆ ಅವುಗಳನ್ನು ಆ ದಿನ ಧರಿಸಲು ಕೊಡಬಹುದು. ಹೊಸ ದಾರಗಳನ್ನು ಕಟ್ಟಿಕೊಂಡು

ತೀರ್ಥಪ್ರಾಶನ ಭೋಜನಾದಿಗಳನ್ನು ಮಾಡಿದ ನಂತರ ಮನೆಯಲ್ಲೇ ಅವುಗಳನ್ನು ಮುಂದಿನ ವರ್ಷಕ್ಕಾಗಿ ಕೃಷ್ಣಾಜಿನ ಪೆಟ್ಟಿಗೆಯಲ್ಲಿ ಹಾಕಿ ತೆಗೆದಿಡಬೇಕು. (ವರ್ಷ ಮಧ್ಯದಲ್ಲಿ ಗ್ರಹಣ ಬಂದಿದ್ದರೆ ಅವುಗಳನ್ನು ತೋಯಿಸಿ ಶುದ್ಧಿ ಮಾಡಬೇಕು). ಸಂಜೆ ಅನಂತನ ಹಾಡು ಹೇಳಬೇಕು.

**೯) ಅನಂತನ ಹುಣ್ಣಿಮೆ -** ಈ ದಿನ ಭಾಗವತ ಪ್ರೋಷ್ಠಪದೀ ಸಪ್ತಾಹದ ಮಂಗಳ.

**೧೦) ಪಕ್ಷಮಾಸ -** ಭಾದ್ರಪದ ಕೃಷ್ಣ ಪ್ರತಿಪದೆಯಿಂದ ಅಮವಾಸ್ಯೆಯವರೆಗೆ ಪಕ್ಷಮಾಸ ಪ್ರಯುಕ್ತ ಗಂಡಸರು ನಿತ್ಯ ತಿಲತರ್ಪಣ ಕೊಡಬೇಕು. ಕೆಲವರು ಪ್ರತಿದಿನ ಪಿಂಡ ಪ್ರದಾನ ಮಾಡುವರು.

**೧೧) ಅವಿಧವಾ ನವಮಿ (ಕೃಷ್ಣಪಕ್ಷ ನವಮೀ)-**

ಗಂಡನಿರುವಾಗಲೇ ಮೃತಳಾದ ಸ್ತ್ರೀಯ ಗಂಡಸು ಮಕ್ಕಳು ತಂದೆಯು ಜೀವಂತ ಇರುವ ವರೆಗೆ ತಾಯಿಯ ಶ್ರಾದ್ಧವನ್ನು ಮಾಡುವ ದಿನ. ಅಂದು ಸೊಸೆಯು ಮನೆಗೆ ಮುತ್ತೈದೆಯನ್ನು ಊಟಕ್ಕೆ ಆಮಂತ್ರಿಸಿ ಅವಳಿಗೆ ಸೀರೆ ಸಹಿತ ಮರದ ಬಾಗಿಣ ಕೊಡಬೇಕು.

*****

**೭. ಆಶ್ವೀನ ಮಾಸ**

**೧) ನವರಾತ್ರಾರಂಭ-**

(i) ಶುದ್ಧ ಪ್ರತಿಪದೆಯಿಂದ ನವಮಿಯ ವರೆಗೆ ಮಾಡುವ ಪೂಜೆಯು ನವರಾತ್ರ ಪೂಜೆ ಎನಿಸುತ್ತದೆ. ಪ್ರತಿಪದೆ ಮನೆಯಲ್ಲಿ ಸಂಕಲ್ಪಪೂರ್ವಕ ತುಪ್ಪದ ದೀಪ ಮತ್ತು ಎಣ್ಣೆ ದೀಪವನ್ನು ಹಚ್ಚಿ ನವಮಿಯ ವರೆಗೆ ಅಖಂಡವಾಗಿ ಹಚ್ಚಿಡಬೇಕು. ಪ್ರತಿದಿನ ಸಾಯಂಕಾಲ ವೆಂಕಟೇಶ ಪಾರಿಜಾತ (ಕಲ್ಯಾಣ) ಹಾಡುಗಳನ್ನು ಹೇಳಬೇಕು. ಈ ನವರಾತ್ರಿಯಲ್ಲಿ ವೆಂಕಟೇಶ ಮಹಾತ್ಮೆ ಪುರಾಣ ಶ್ರವಣ ಮಾಡಬೇಕು.

(ii) ಗಜಗೌರೀ ವ್ರತವನ್ನು ವಿಧಿಪೂರ್ವಕ ಆಚರಿಸಬೇಕು.

**೨) ಉಪಾಂಗಲಲಿತಾ ವ್ರತ (ಶುದ್ಧ ಪಂಚಮೀ)-** ಉಪಾಂಗಲಲಿತಾವ್ರತವನ್ನು ಭಕ್ತಿಯಿಂದ ಆಚರಿಸಬೇಕು.

**೩) ಸರಸ್ವತೀ ಪೂಜೆ, ಶ್ರೀ ವೇದವ್ಯಾಸ ಪೂಜೆ, ದುರ್ಗಾಪೂಜೆ (ಶುದ್ಧ ಅಷ್ಟಮೀ) -**

ಈ ಪೂಜೆಗಳನ್ನು ವಿಧಿಪೂರ್ವಕ ಭಕ್ತಿಯಿಂದ ಮಾಡಬೇಕು.

**೪) ಆಯುಧ ಪೂಜೆ, ಸಂಜೆ ವೇದವ್ಯಾಸರಿಗೆ ಮಂಗಳಾರತಿ (ಶುದ್ಧ ನವಮೀ)-** ಇಂದು ಬೆಳಿಗ್ಗೆ ಆಯುಧ, ವಾಹನಗಳ ಪೂಜೆ ಮಾಡಿ ಸಂಜೆ ಶ್ರೀವೇದವ್ಯಾಸರಿಗೆ ಮಂಗಳಾರುತಿ ಮಾಡಬೇಕು.

**೫) ವಿಜಯ ದಶಮೀ, ಶಮೀಪೂಜೆ, ಶೀಗೀ ಗೌರೀ ಪೂಜೆ (ಶುದ್ಧ ದಶಮೀ)-**

(i) ವಿಜಯದಶಮೀ ಶಮೀ ಪೂಜೆ- ಬೆಳಿಗ್ಗೆ ದೇವರಿಗೆ ಶಮೀಪತ್ರಗಳನ್ನು ಏರಿಸಿ ಪೂಜಿಸಬೇಕು. ಅಪರಾಹ್ನ ಕಾಲದಲ್ಲಿ ಗ್ರಾಮದಿಂದ ಈಶಾನ್ಯದಿಕ್ಕಿನಲ್ಲಿರುವ ಶಮೀವೃಕ್ಷವಿದ್ದಲ್ಲಿಗೆ ಮನೆಯ ಹಿರಿಯರೊಂದಿಗೆ ಹೋಗಿ ಶಮೀವೃಕ್ಷದ ಪೂಜೆಯನ್ನು ಮಾಡಬೇಕು.

**ಅಮಂಗಳಾನಾಂ ಶಮನೀಂ ಶಮನೀಂ ದುಷ್ಕೃತಸ್ಯ ಚ।**
**ದುಃಖಪ್ರಣಾಶಿನೀಂ ಧನ್ಯಾಂ ಪ್ರಪದ್ಯೇಽಹಂ ಶಮೀಂ ಶುಭಾಮ್ ॥**

ಎಂಬ ಮಂತ್ರದಿಂದ ಪೂಜಿಸಿ

**ಶಮೀ ಶಮಯತೇ ಪಾಪಂ ಶಮೀ ಲೋಹಿತಕಂಟಕಾ ।**
**ಕರಿಷ್ಯಮಾಣಯಾತ್ರಾಯಾಂ ಯಥಾಕಾಲಂ ಸುಖಂ ಮಯಾ ।**
**ಶತ್ರುನಿರ್ವಿಘ್ನಕರ್ತ್ರೀ ತ್ವಂ ಭವ ಶ್ರೀರಾಮಪೂಜಿತೇ ॥**
**ಶಮೀ ಶಮಯತೇ ಪಾಪಂ ಶಮೀ ಶತ್ರುವಿನಾಶಿನೀ ।**
**ಅರ್ಜುನಸ್ಯ ಧನುರ್ಧಾರಿ ರಾಮಸ್ಯ ಪ್ರಿಯದರ್ಶಿನೀ ॥**
**ಶಮೀ ಕಮಲಪತ್ರಾಕ್ಷೀ ಶಮೀ ಕಂಟಕಹಾರಿಣೀ ।**
**ಅವರೋಹಂತು ಮೇ ಪಾಪಂ ಆಯುಃ ಪ್ರಾಣಾಂಸ್ತು ರಕ್ಷತು ॥**

ಈ ಮಂತ್ರಗಳಿಂದ ಪ್ರಾರ್ಥಿಸಬೇಕು. ಅನಂತರ ಎಲ್ಲ ಹಿರಿಯರಿಗೆ ಶಮೀಪತ್ರವನ್ನು ಕೊಟ್ಟು ನಮಸ್ಕರಿಸಬೇಕು ಚಿಕ್ಕವರಿಂದ ಸ್ವೀಕರಿಸಿ ಅವರಿಗೆ ಆಶೀರ್ವದಿಸಬೇಕು.

(ii) **ಶೀಗೀ ಗೌರೀ ಪೂಜೆ** - ಸಾಯಂಕಾಲ ಶೀಗೀ ಗೌರಿಯನ್ನು ಕೂಡಿಸಿ ಹಣ್ಣಿನ ಆರುತಿಯನ್ನು ಮಾಡಬೇಕು.

**೫) ದ್ವಿದಲ ವ್ರತಾರಂಭ, ಕ್ಷೀರದಾನ (ಶುದ್ಧ ದ್ವಾದಶೀ) -**

ಈ ದ್ವಾದಶಿ-ಯಿಂದ ಕಾರ್ತಿಕ ಶುದ್ಧ ದಶಮಿಯ ವರೆಗೆ ದ್ವಿದಳ ವ್ರತ (ಬೇಳೆಕಾಳು ಇತ್ಯಾದಿ ನಿಷಿದ್ಧ). ಕ್ಷೀರದಾನ ಮಾಡಬೇಕು. ಸಮರ್ಪಣೆ ಹಾಗೂ ಸಂಕಲ್ಪಗಳಿಗೆ ವ್ರತ ವಿಭಾಗ ನೋಡಿರಿ.

**೬) ಕೋಜಾಗರ ವ್ರತ , ರಾತ್ರಿ ಲಕ್ಷ್ಮೀ ಪೂಜೆ, ಇಂದ್ರ ಪೂಜಾ, ಅಕ್ಷ ಕ್ರೀಡಾ (ಶುದ್ಧ ಚತುರ್ದಶೀ)-**

ಈ ದಿನ ಸೂರ್ಯಾಸ್ತವಾದ ಮೇಲೆ ಅಕ್ಕಿಯ ರಾಶಿಯಲ್ಲಿ ಪದ್ಮಾಸನದಲ್ಲಿ ಸ್ಥಾಪಿಸಿದ ಲಕ್ಷ್ಮೀದೇವಿಯನ್ನು ಪೂಜಿಸಿ ನಂತರ ದೇವೇಂದ್ರನನ್ನು ಪೂಜಿಸಬೇಕು. ರಾತ್ರಿ ಮನೆಯ ಜನರೊಂದಿಗೆ ಅಕ್ಷ ಕ್ರೀಡಾ (ಪಗಡೆಯಾಟ , ದ್ಯೂತ) ಆಡುತ್ತ ಜಾಗರಣೆ ಮಾಡಬೇಕು. ಈ ಪೂಜೆಯಿಂದ ಪ್ರೀತಳಾದ ಮಹಾಲಕ್ಷ್ಮಿಯು ಅಖಂಡ ಸೌಭಾಗ್ಯ ಸಂಪತ್ತುಗಳನ್ನು ಕೊಡುವಳು.

**೭) ಕಾರ್ತಿಕ ಸ್ನಾನ (ಪೌರ್ಣಿಮಾ)-**

ಆಶ್ವೀನ ಮಾಸ ಪೌರ್ಣಿಮೆಯಿಂದ ಒಂದು ತಿಂಗಳು ಅಂದರೆ ಕಾರ್ತಿಕ ಪೌರ್ಣಿಮೆಯ ವರೆಗೆ ಬೆಳಿಗ್ಗೆ ಕಾರ್ತಿಕ ಸ್ನಾನ ಆರಂಭ. ಪ್ರತಿದಿನ ಅರುಣೋದಯ ಕಾಲದಲ್ಲಿ ತೀರ್ಥಾದಿಗಳಿಗೆ ಹೋಗಿ (ಅಥವಾ ಮನೆಯಲ್ಲಿಯೇ) ಕಾರ್ತಿಕಸ್ನಾನ ಸಂಕಲ್ಪವನ್ನು ಮಾಡಿ '**ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ । ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**' ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಅನಂತರ '**ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಃಸ್ನಾನಂ ಜನಾರ್ದನ । ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾ**

**ಸಹ ॥ ಧ್ಯಾತ್ವಾಹಂ ತ್ವಾಂ ಚ ದೇವೇಶ ಜಲೇಽಸ್ಮಿನ್ ಸ್ನಾತುಮುದ್ಯತಾ(ತಃ)। ತವ ಪ್ರಸಾದಾತ್ಪಾಪಂ ಮೇ ದಾಮೋದರ ವಿನಶ್ಯತು ॥'** ಈ ಮಂತ್ರಗಳನ್ನು ಹೇಳಿ ಸ್ನಾನ ಮಾಡಬೇಕು. ಅನಂತರ **'ನಿತ್ಯನೈಮಿತ್ತಿಕೇ ಕೃಷ್ಣ ಕಾರ್ತಿಕೇ ಪಾಪನಾಶನೇ । ಗೃಹಾಣಾರ್ಘ್ಯಂ ಮಯಾ ದತ್ತಂ ರಾಧಯಾ ಸಹಿತೋ ಹರೇ ॥'** ಎಂಬ ಮಂತ್ರದಿಂದ ಎರಡು ಅರ್ಘ್ಯಗಳನ್ನು ಕೊಡಬೇಕು. ಸ್ನಾನಾಹ್ನಿಕ ಆದ ಮೇಲೆ ತುಳಸೀ ಮುಂದೆ ದೀಪವನ್ನು ಹಚ್ಚಿಟ್ಟು ದಾಮೋದರ ಸ್ತೋತ್ರವನ್ನು ಪಠಿಸಬೇಕು.

## || ದಾಮೋದರ ಸ್ತೋತ್ರಂ||

ಮತ್ಸ್ಯಾಕೃತಿಧರ ಜಯ ದೇವೇಶ ವೇದವಿಬೋಧಕ ಕೂರ್ಮಸ್ವರೂಪ|
ಮಂದರಗಿರಿಧರ ಸೂಕರರೂಪ ಭೂಮಿವಿಧಾರಕ ಜಯ ದೇವೇಶ ||೧||

ಕಾಂಚನಲೋಚನ ನರಹರಿರೂಪ ದುಷ್ಟಹಿರಣ್ಯಕ ಭಂಜನ ಜಯ ಭೋ|
ಜಯ ಜಯ ವಾಮನ ಬಲಿವಿಧ್ವಂಸಿನ್ ದುಷ್ಟಕುಲಾಂತಕ ಭಾರ್ಗವರೂಪ ||೨||

ಜಯ ವಿಶ್ರವಸಃಸುತವಿಧ್ವಂಸಿನ್ ಜಯ ಕಂಸಾರೆ ಯದುಕುಲತಿಲಕ|
ಜಯ ವೃಂದಾವನಚರ ದೇವೇಶ ದೇವಕಿನಂದನ ನಂದಕುಮಾರ ||೩||

ಜಯ ಗೋವರ್ಧನಧರ ವತ್ಸಾರೇ ಧೇನುಕಭಂಜನ ಜಯ ಕಂಸಾರೇ|
ರುಕ್ಮಿಣಿನಾಯಕ ಜಯ ಗೋವಿಂದ ಸತ್ಯಾವಲ್ಲಭ ಪಾಂಡವಬಂಧೋ ||೪||

ಖಗವರವಾಹನ ಜಯಪೀಠಾರೇ ಜಯ ಮುರಭಂಜನ ಪಾರ್ಥಸಖೇ ತ್ವಮ್|
ಭೌಮವಿನಾಶಕ ದುರ್ಜನಹಾರಿನ್ ಸಜ್ಜನಪಾಲಕ ಜಯ ದೇವೇಶ ||೫||

ಶುಭಗುಣಗಣಪೂರಿತ ವಿಶ್ವೇಶ ಜಯ ಪುರುಷೋತ್ತಮ ನಿತ್ಯವಿಬೋಧ|
ಭೂಮಿಭರಾಂತಕಕಾರಣರೂಪ ಜಯ ಖರಭಂಜನ ದೇವವರೇಣ್ಯ ||೬||

ವಿಧಿಭವಮುಖಸುರಸತತಸುವಂದಿತ ಸಚ್ಚರಣಾಂಬುಜ ಕಂಜಸುನೇತ್ರ|
ಸಕಲಸುರಾಸುರನಿಗ್ರಹಕಾರಿನ್ ಪೂತನಿಮಾರಣ ಜಯ ದೇವೇಶ ||೭||

ಯದ್ಭ್ರೂವಿಭ್ರಮಮಾತ್ರಾತ್ತದಿದಂ ಆಕಮಲಾಸನಶಂಭುವಿಪಾದ್ಯಂ|
ಸೃಷ್ಟಿಸ್ಥಿತಿಲಯಮೃಚ್ಛತಿ ಸರ್ವಂ ಸ್ಥಿರಚರವಲ್ಲಭ ಸ ತ್ವಂ ಜಯ ಭೋ ||೮||

ಜಯ ಯಮಲಾರ್ಜುನಭಂಜನಮೂರ್ತೇ ಜಯ ಗೋಪೀಕುಚಕುಂಕುಮಿತಾಂಗ (ಕುಂಕುಮಾಂಕಿತಾಂಗ)|
ಪಾಂಚಾಲೀ ಪರಿಪಾಲನ ಜಯ ಭೋ ಜಯ ಗೋಪೀಜನರಂಜನ ಜಯ ಭೋ ||೯||

ಜಯ ರಾಸೋತ್ಸವರತ ಲಕ್ಷ್ಮೀಶ ಸತತಸುಖಾರ್ಣವ ಜಯ ಕಂಜಾಕ್ಷ|
ಜಯ ಜನನೀಕರಪಾಶಸುಬದ್ಧ ಹರಣಾನ್ನವನೀತಸ್ಯ ಸುರೇಶ ||೧೦||

ಬಾಲಕ್ರೀಡನಪರ ಜಯ ಭೋ ತ್ವಂ ಮುನಿವರವಂದಿತಪದಪದ್ಮೇಶ|
ಕಾಲಿಯಫಣಿಫಣಮರ್ದನ ಜಯ ಭೋ ದ್ವಿಜಪತ್ನ್ಯರ್ಪಿತಮತ್ಸಿ ವಿಭೋಽನ್ನಂ ||೧೧||

ಕ್ಷೀರಾಂಬುಧಿಕೃತನಿಲಯನ ದೇವ ವರದ ಮಹಾಬಲ ಜಯ ಜಯ ಕಾಂತ|
ದುರ್ಜನಮೋಹಕ ಬುದ್ಧಸ್ವರೂಪ ಸಜ್ಜನಬೋಧಕ ಕಲ್ಕಿಸ್ವರೂಪ ||೧೨||
ಜಯ ಯುಗಕೃತದುರ್ಜನವಿಧ್ವಂಸಿನ್ ಜಯ ಜಯ ಜಯ ಭೋ ಜಯ ವಿಶ್ವಾತ್ಮನ್||೧೩||
ಇತಿ ಮಂತ್ರಂ ಪಠನ್ನೇವ ಕುರ್ಯಾನ್ನೀರಾಜನಂ ಬುಧಃ|
ಘಟಿಕಾದ್ವಯಶಿಷ್ಟಾಯಾಂ ಸ್ನಾನಂ ಕುರ್ಯಾದ್ಯಥಾವಿಧಿ|
ಅನ್ಯಥಾ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ||೧೪||

**||ಇತಿ ಶ್ರೀ ದಾಮೋದರ ಸ್ತೋತ್ರಮ್||**

ಈ ಮಾಸದಲ್ಲಿ ದೀಪದಾನವು ವಿಶೇಷಫಲಪ್ರದವಾಗಿದೆ. ದೇವರ ಮುಂದೆ ರಂಗವಲ್ಲಿಯಿಂದ ಅಲಂಕರಿಸುವ ಸ್ತ್ರೀಯರಿಗೆ ಏಳು ಜನ್ಮಗಳಲ್ಲಿ ವೈಧವ್ಯವಿಲ್ಲ. ಸೂರ್ಯಾಸ್ತವಾದ ಮೇಲೆ ಮನೆಯ ಸಮೀಪದಲ್ಲಿ ಮರದ ಮೇಲೆ ಮಧ್ಯದಲ್ಲಿ ದೊಡ್ಡ ಆಕಾಶದೀಪ ಮತ್ತು ಸುತ್ತಲೂ ಸಣ್ಣ ಆಕಾಶದೀಪಗಳನ್ನು **"ದಾಮೋದರಾಯ ನಭಸಿ ತುಲಾಯಾಂ ದೋಲಯಾ ಸಹ । ಪ್ರದೀಪಂ ತೇ ಪ್ರಯಚ್ಛಾಮಿ ನಮೋ ಅನಂತಾಯ ವೇಧಸೇ॥"** ಎಂಬ ಮಂತ್ರದಿಂದ ಸಮರ್ಪಿಸಿದರೆ ಸಂಪತ್ ಪ್ರಾಪ್ತಿಯಾಗುತ್ತದೆ.

**೮) ಗೋವತ್ಸ ದ್ವಾದಶೀ ( ಕೃಷ್ಣ ದ್ವಾದಶೀ) -**

ಈ ದಿನ ಕರು ಸಹಿತವಾಗಿರುವ ಹಾಲುಕರೆಯುವ ಗೋವನ್ನು ಪೂಜಿಸಿ **'ಕ್ಷೀರೋದಾರ್ಣವಸಂಭೂತೇ ಸುರಾಸುರನಮಸ್ಕೃತೇ। ಸರ್ವದೇವಮಯೀ ಮಾತರ್ಗೃಹಾಣಾರ್ಘ್ಯಂ ನಮೋಽಸ್ತು ತೇ ॥** ಎಂಬ ಮಂತ್ರದಿಂದ ಗೋವಿನ ಕಾಲಿನಲ್ಲಿ ಅರ್ಘ್ಯವನ್ನು ಕೊಡಬೇಕು. ಆಮೇಲೆ ಗೋವಿಗೆ ಗೋಗ್ರಾಸ ಕೊಟ್ಟು ಪಾಪಗಳನ್ನು ಕಳೆದು ಇಷ್ಟಾರ್ಥಗಳನ್ನು ಪೂರೈಸುವಂತೆ ಪ್ರಾರ್ಥಿಸಬೇಕು.

**೯) ಜಲಪೂರಣ ತ್ರಯೋದಶೀ (ನೀರು ತುಂಬುವ ಹಬ್ಬ), ಯಮದೀಪ-ದಾನ (ಕೃಷ್ಣ ತ್ರಯೋದಶೀ) -**

ಅಪಮೃತ್ಯು ಪರಿಹಾರಕ್ಕಾಗಿ ಈ ದಿನ ಸೂರ್ಯಾಸ್ತವಾದ ಕೂಡಲೇ ಯಮದೇವರ ಪ್ರೀತಿಗಾಗಿ ಮನೆಯ ಹೊರಗೆ ದಕ್ಷಿಣಾಭಿಮುಖವಾಗಿ ದೀಪವನ್ನಿಡಬೇಕು. ರಾತ್ರಿಯಲ್ಲಿ ಗಂಗಾಪೂಜೆಗೆ ಅಲಂಕೃತ-ವಾದ ಕೊಡಗಳಲ್ಲಿ ನೀರನ್ನು ತುಂಬಿ ಆ ಕೊಡಗಳ ಸುತ್ತಲೂ ಮಹಾಲಿಂಗನ ಬಳ್ಳಿ ಸುತ್ತಿ ಗೆಜ್ಜೆ ವಸ್ತ್ರ ಏರಿಸಬೇಕು. ರಾತ್ರಿಯಲ್ಲಿ ಮಡಿಯಿಂದ ಅಡಿಗೆ ಮಾಡಿ ನೈವೇದ್ಯಕ್ಕೆ ಶಾವಿಗೆ ಪಾಯಸ ಮಾಡಬೇಕು. ದೇವರಿಗೆ ನಿವೇದಿಸಿ ಗಂಗಾ ಪೂಜೆಯನ್ನು ಮಾಡಿ ಆರುತಿ ಮಾಡಬೇಕು. ಈ ರೀತಿ ಪೂಜಿಸಿದ ನೀರನ್ನು ಗಂಗಾಜಲವೆಂದು ಭಾವಿಸಿ ಮರುದಿನ ನಾರೀಕೃತ ನೀರಾಜನದ ನಂತರ ಅಭ್ಯಂಜನಕ್ಕೆ ಉಪಯೋಗಿಸಬೇಕು.

**೧೦) ನರಕ ಚತುರ್ದಶೀ (ಕೃಷ್ಣ ಚತುರ್ದಶೀ)-**

ಬೆಳಿಗ್ಗೆ ಹಿರಿಯ ಸುಮಂಗಲೆಯರು ಮನೆಯಲ್ಲಿ ಎಲ್ಲರನ್ನು ಕೂಡಿಸಿ ಸಂಭ್ರಮದಿಂದ ಆರುತಿಯನ್ನು ಮಾಡಬೇಕು. ನಂತರ ಆರುತಿ ಮಾಡಿದ ಸುಮಂಗಲೆಯರು ಈ ಮೊದಲು

ಆರುತಿ ಮಾಡಿಸಿಕೊಂಡ ಸುಮಂಗಲೆಯರಿಂದ ತಾವೂ ಆರುತಿ ಮಾಡಿಸಿಕೊಳ್ಳಬೇಕು. ಆರುತಿಯ ಕಾರ್ಯಕ್ರಮದ ನಂತರ ಎಲ್ಲರೂ ಮುತ್ತೈದೆಯರಿಂದ ಎಣ್ಣೆ ಹಚ್ಚಿಸಿಕೊಂಡು ಅಭ್ಯಂಜನ ಮಾಡಬೇಕು. ಎಣ್ಣೆ ಹಚ್ಚಿಸಿಕೊಳ್ಳುವಾಗ "**ಅಶ್ವತ್ಥಾಮಾ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ । ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥**" ಎಂದು ಅಶ್ವತ್ಥಾಮಾದಿಗಳನ್ನು ಸ್ಮರಿಸಬೇಕು.

ಕಾರ್ತಿಕ ವ್ರತಧಾರಣ ಮಾಡಿದವರಿಗೆ, ಯತಿಗಳಿಗೆ, ಹಾಗೂ ವಿಧವೆಯರಿಗೆ ಇತರ ದಿನಗಳಲ್ಲಿ ಅಭ್ಯಂಜನ ನಿಷೇಧವಿದ್ದರೂ ನರಕಚತುರ್ದಶಿಯ ದಿನ ಅಭ್ಯಂಜನ ಮಾಡದಿದ್ದರೆ ಏಳು ಜನ್ಮಗಳ ವರೆಗೆ ದಾರಿದ್ರ್ಯ ಬರುವುದರಿಂದ ಎಲ್ಲರೂ ಈ ದಿನ ಅವಶ್ಯ ಅಭ್ಯಂಜನ ಮಾಡಲೇಬೇಕು. ಅಭ್ಯಂಗ ಸ್ನಾನ ಮುಗಿದ ಕೂಡಲೇ ತಿಲಕಧಾರಣೆಯನ್ನು ಮಾಡಿಕೊಂಡು ಕಾರ್ತಿಕ ಸ್ನಾನವನ್ನು ಮಾಡಬೇಕು.

**೧೧) ಲಕ್ಷ್ಮೀಪೂಜೆ ಮತ್ತು ಅಲಕ್ಷ್ಮೀ ನಿಸ್ಸಾರಣ (ಅಮಾವಾಸ್ಯೆ)-**

ರಾತ್ರಿಯಲ್ಲಿ ಲಕ್ಷ್ಮೀಪೂಜೆ ಮಾಡಬೇಕು. ಪೂಜೆ ಮಾಡುವಾಗ ಲಕ್ಷ್ಮೀ ಹಾಡುಗಳನ್ನು ಹೇಳಬೇಕು. (ಶ್ರೀ ಲಕ್ಷ್ಮಿಯ ಹಾಡುಗಳಿಗೆ ನಮ್ಮಿಂದ ಮುದ್ರಿಸಲ್ಪಟ್ಟ "**ಶ್ರೀ ವರಮಹಾಲಕ್ಷ್ಮೀವ್ರತ ಕಥಾ ಹಾಗೂ ಹಾಡುಗಳು**" ಎಂಬ ಪುಸ್ತಕವನ್ನು ನೋಡಬಹುದು).

**೮. ಕಾರ್ತಿಕಮಾಸ**

**೧) ಬಲಿಪ್ರತಿಪತ್ (ಶುದ್ಧ ಪ್ರತಿಪದೆ)-**

(i) ಈ ದಿನವೂ ಸುಮಂಗಲೆಯರು ಮನೆಯಲ್ಲಿ ಹಿರಿಯರನ್ನು ಹಾಗೂ ಚಿಕ್ಕವರನ್ನು ಕೂಡಿಸಿ ದೀಪಾರುತಿ ಮಾಡಬೇಕು. ಅರುಣೋದಯಕಾಲದಲ್ಲಿ ಮತ್ತು ರಾತ್ರಿ ದ್ಯೂತವನ್ನಾಡಬೇಕು (ಪಗಡೆಯಾಟ).

(ii) **ಗೋಪೂಜೆ ಮತ್ತು ಗೋವರ್ಧನ ಪೂಜೆ-**

ಪ್ರಾತಃಕಾಲ ಗೋಪೂಜೆ ಮಾಡಬೇಕು. ಮತ್ತು ಗೋಮಯದಿಂದ ಗೋವರ್ಧನ ಪರ್ವತವನ್ನು ಮಾಡಿ ಬಣ್ಣದಿಂದ ಬರೆದು ಪೂಜಿಸಬೇಕು. "**ಗೋವರ್ಧನಧರಾಧಾರ ಗೋಕುಲತ್ರಾಣಕಾರಕ । ಬಹುಬಾಹುಕೃತಚ್ಛಾಯ ಗವಾಂ ಕೋಟಿಪ್ರದ ಪ್ರಭೋ॥**" ಎಂಬ ಮಂತ್ರದಿಂದ ಪ್ರಾರ್ಥಿಸಬೇಕು.

**೨) ಯಮದ್ವಿತೀಯಾ (ಶುದ್ಧ ದ್ವಿತೀಯಾ)-**

ಈ ದಿನ ಭಗಿನಿಯ ಮನೆಗೆ ಅನುಜರು ಹೋಗಿ ಊಟ ಮಾಡಬೇಕು. ಭಗಿನಿಯರನ್ನು ಸತ್ಕರಿಸಬೇಕು. ಇದರಿಂದ ಅವೈಧವ್ಯ ಪ್ರಾಪ್ತಿ.

**೩) ಭಗಿನೀ ತೃತೀಯಾ (ಶುದ್ಧ ತೃತೀಯಾ) -**

ಈ ದಿನ ಸುಮಂಗಲೆಯರು ಬೆಳಿಗ್ಗೆ ಎಣ್ಣೆ ಹಚ್ಚಿಕೊಂಡು ಎರೆದುಕೊಳ್ಳಬೇಕು. ಅಣ್ಣ-ತಮ್ಮಂದಿರು ಲಗ್ನವಾದ ತಮ್ಮ ಅಕ್ಕ ಅಥವಾ ತಂಗಿಯರನ್ನು ತಮ್ಮ ಮನೆಗೆ ಆಮಂತ್ರಿಸಿ, ಲಗ್ನವಾಗದಿದ್ದವರನ್ನೂ ಮನೆಯಲ್ಲಿಯೇ ಆಮಂತ್ರಿಸಿ ವಿಶೇಷವಾಗಿ ಭೋಜನ ಮಾಡಿಸಿ ಅವರಿಗೆ ಆಹೇರಿ ಉಡುಗೊರೆ ಕೊಡಬೇಕು ಮತ್ತು ಹಿರಿಯರಿಂದ ಆಶೀರ್ವಾದ ಪಡೆಯಬೇಕು.

**೪) ಶುದ್ಧ ಚವತಿ** - ಈ ದಿನ ಮೊಮ್ಮಕ್ಕಳು ತಮ್ಮ ಅಜ್ಜಿಗೆ ಉಡುಗೊರೆ ಕೊಡಬೇಕು.

**೫) ಪಾಂಡವ ಪಂಚಮೀ (ಶುದ್ಧ ಪಂಚಮೀ)-**

ಈ ದಿನ ಆಕಳ ಶೆಗಣೆಯಿಂದ ಎರಡು ಪಂಚಪಾಂಡವರನ್ನು ಮಾಡಿ ಮನೆಯ ಪ್ರವೇಶದ್ವಾರದ ಎರಡೂ ಬದಿಗೆ ಒಂದೊಂದು ಇಡಬೇಕು. (ಪಾಂಡವರನ್ನು ಮಾಡುವ ವಿಧಾನವನ್ನು ಮನೆಯಲ್ಲಿಯ ಹಿರಿಯರಿಂದ ತಿಳಿಯಬೇಕು.) ಅಲ್ಲಿ ಪಾಂಡವರನ್ನು ಆಹ್ವಾನಿಸಿ ಮೇಲೆ ಆಕಳ ಮೊಸರನ್ನು ಹಾಕಿ ಅರಿಷಿಣ ಕುಂಕುಮ, ಚೆಂಡುಹೂ, ಗೆಜ್ಜೆ ವಸ್ತ್ರಗಳನ್ನೇರಿಸಿ ಪೂಜಿಸಬೇಕು.

**೬) ಕಾರ್ತಿಕ ಶುದ್ಧ ಏಕಾದಶೀ** - ಇಂದು ಚಾತುರ್ಮಾಸ್ಯ ವ್ರತ ಸಮಾಪ್ತಿ.

**೭) ಉತ್ಥಾನ ದ್ವಾದಶೀ, ತುಲಸೀ ವಿವಾಹ (ಶುದ್ಧ ದ್ವಾದಶೀ)-**

(i) ಚಾತುರ್ಮಾಸ್ಯದ ವ್ರತ ಸಮಾಪ್ತಿಯಾಗಿದ್ದರಿಂದ ಈ ದಿನ ಬೆಳಿಗ್ಗೆ ವಿವಿಧ ಕಾಯಿಪಲ್ಯೆ, ಬೇಳೆಯ ಹೂರಣದ ಹೋಳಿಗೆ ಮುಂತಾದ ಪದಾರ್ಥಗಳನ್ನು ದೇವರ ನೈವೇದ್ಯಕ್ಕೆ ಸಿದ್ಧಪಡಿಸಬೇಕು. ಇಂದು ತುಳಸೀ ವಿವಾಹವಿದ್ದ ಪ್ರಯುಕ್ತ ವಿವಾಹದ ಅಡಿಗೆಯನ್ನು ಮಾಡಬೇಕು. **ಉತ್ತಿಷ್ಠೋತ್ತಿಷ್ಠ ಗೋವಿಂದ ತ್ಯಜ ನಿದ್ರಾಂ ಜಗತ್ಪತೇ । ತ್ವಯಿ ಸುಪ್ತೇ ಜಗತ್ಸುಪ್ತಂ ಉತ್ಥಿತೇ ಚೋತ್ಥಿತಂ ಜಗತ್ ॥** ಎಂಬ ಮಂತ್ರದಿಂದ ದೇವರನ್ನು ಎಬ್ಬಿಸಬೇಕು. ದಂಪತ್ತು ಭೋಜನ ಮಾಡಿಸಬೇಕು. ಸಾಯಂಕಾಲ ತುಲಸೀ ವಿವಾಹವನ್ನು ಸಂಭ್ರಮದಿಂದ ಆಚರಿಸಿ ಆಮಂತ್ರಿತರಾದ ಬ್ರಾಹ್ಮಣ ಸುವಾಸಿನಿಯರಿಗೆ ಫಲ ತಾಂಬೂಲಗಳನ್ನು ಕೊಟ್ಟು ಸತ್ಕರಿಸಬೇಕು.

(ii) ಶಿವ-ಪಾರ್ವತಿ ಗೌರಿಯನ್ನು ಕೂಡಿಸಿ ಹುಣ್ಣಿಮೆಯ ವರೆಗೆ ನಿತ್ಯ ಸಾಯಂಕಾಲ ಹಣ್ಣಿನ ಆರುತಿ ಮಾಡಬೇಕು. ಹುಣ್ಣಿವೆ ನೈವೇದ್ಯ ಮಾಡಿ ವಿಸರ್ಜಿಸಬೇಕು.

(iii) ಸಂಜೆ ಹಕ್ಕಿಗಳು ಹಾರಿ ಗೂಡು ಸೇರುವ ಹೊತ್ತಿಗೆ ೩೩ ಎಳೆ ಬತ್ತಿಗಳ ಎರಡು ದೀಪಗಳನ್ನು ಹಚ್ಚಿಡಬೇಕು. ಈ ದೀಪಗಳಿಗೆ ಹಕ್ಕಿ-ಬಕ್ಕಿ ದೀಪಗಳೆಂದು ಹೆಸರು.

**೮) ವೈಕುಂಠ ಚತುರ್ದಶೀ (ಶುದ್ಧ ಚತುರ್ದಶೀ)-**

(i) ಬೆಳಿಗ್ಗೆ ೧೦೮ ಎಳೆ ದಾರ ತೆಗೆದು ಒಂದು ಪೂಟು ಉದ್ದ ಬತ್ತಿಯನ್ನು ಮಾಡಿ ತುಪ್ಪದಲ್ಲಿ ತೋಯಿಸಿ ಪ್ರಣತಿಯಲ್ಲಿಟ್ಟು ದೀಪವನ್ನು ಹಚ್ಚಿಡಬೇಕು. ಈ ಬತ್ತಿಗೆ ವೈಕುಂಠ ಬತ್ತಿ ಅಥವಾ ಶೇಷಬತ್ತಿ ಎಂದು ಹೆಸರು.

(ii) ಧಾತ್ರೀ ಭೋಜನ, ವನಭೋಜನ- ಕಾರ್ತಿಕ ಶುಕ್ಲ ತ್ರಯೋದಶೀ, ಚತುರ್ದಶೀ, ಪೌರ್ಣಿಮಾ, ಅಥವಾ ಕಾರ್ತಿಕ ಬಹುಳ ಪಂಚಮೀ ದಿನಗಳಲ್ಲಿ ನೆಲ್ಲಿಯ ಮರದ ಕೆಳಗೆ ದಾಮೋದರನನ್ನು ಸ್ಥಾಪಿಸಿ, ಪೂಜಿಸಿ, ಹೋಮಹವನಾದಿಗಳನ್ನುಮಾಡಿ ಧಾತ್ರಿಯನ್ನು ಪೂಜಿಸಬೇಕು. ದೇವರ ಪೂಜೆ, ನೈವೇದ್ಯ, ವೈಶ್ವದೇವ, ಬಲಿಹರಣ, ಹಸ್ತೋದಕ ಸಮರ್ಪಣಾದಿಗಳು ಮುಗಿದ ನಂತರ ಆಮಂತ್ರಿತರಾದ ಬ್ರಾಹ್ಮಣ ಸುವಾಸಿನಿಯರೊಂದಿಗೆ ಎಲ್ಲರೂ ನೆಲ್ಲಿಯ ಗಿಡದ ಕೆಳಗೆ ಕುಳಿತು ಉಲ್ಲಾಸದಿಂದ ಸುಗ್ರಾಸ ಭೋಜನ ಮಾಡಬೇಕು.

ಆದಿತ್ಯವಾರ ಚತುರ್ದಶೀ ಬಂದರೆ ಆ ದಿನ ಧಾತ್ರೀ ಭೋಜನ ಮಾಡದೇ ಮರುದಿನ ಮಾಡಬೇಕು.

**೯) ಗೌರೀ ಹುಣ್ಣಿವೆ** - ಇವತ್ತಿನ ದಿನ ಗೌರೀ ಪೂಜೆ ಮಾಡಬೇಕು.

*****

## ೯. ಮಾರ್ಗಶೀರ್ಷಮಾಸ

**೧) ಸ್ಕಂದ, ಸುಬ್ರಹ್ಮಣ್ಯ, ಚಂಪಾ ಷಷ್ಠೀ (ಶುದ್ಧ ಷಷ್ಠೀ)** -

ಈ ದಿನ ಸುಬ್ರಹ್ಮಣ್ಯ ಸ್ತೋತ್ರ, ಸಹಸ್ರನಾಮಾವಳಿಗಳನ್ನು ಪಠಿಸಬೇಕು. ಬಾಲ ಬ್ರಹ್ಮಚಾರಿಗಳನ್ನು ಆಮಂತ್ರಿಸಿ ಅವರಿಗೆ ವಸ್ತ್ರಾದಿಗಳನ್ನು ಕೊಟ್ಟು ಭೋಜನ ಮಾಡಿಸಬೇಕು.

**೨) ಧನುರ್ಮಾಸ ವ್ರತ** - ವಿವರಕ್ಕೆ ವ್ರತ ವಿಭಾಗ ನೋಡಿರಿ (ಪುಟ ೨೮೧-೨೮೨).

*****

## ೧೦. ಪುಷ್ಯಮಾಸ -

**೧)** ಸುಮಂಗಲೆಯರು ಮಕರ ಸಂಕ್ರಮಣದ ಭೋಗಿಯ ದಿನ ಅಡಿಗೆಯ ಎಲ್ಲ ಸಾಮಾನುಗಳನ್ನು, ಅರಿಷಿಣ, ಕುಂಕುಮ, ಎಣ್ಣೆ, ಹಣಿಗೆ, ಕನ್ನಡಿ, ಮುಂತಾದ ಸಾಮಾನುಗಳನ್ನು ಮರದಲ್ಲಿ ಇಟ್ಟು ಅಭ್ಯಂಜನ ಸ್ನಾನಕ್ಕಿಂತ ಮೊದಲು ಸುಮಂಗಲೆಯರಿಗೆ ಮರದ ಬಾಗಿನ ಕೊಡಬೇಕು. ಈ ದಿನ ೯ ಅಡಿಕೆ ಬೆಟ್ಟ, ೯ ವೀಳ್ಯದೆಲೆಗಳನ್ನು ೯ ಜನ ಸುಮಂಗಲೆಯರಿಗೆ ಕೊಡಬೇಕು.

**೨)** ಮಕರ ಸಂಕ್ರಮಣ ಬೆಳಿಗ್ಗೆ ಎಲ್ಲರೂ ಎಳ್ಳು ಹಚ್ಚಿಕೊಂಡು ಸ್ನಾನಮಾಡಬೇಕು. ಎಳ್ಳು ಬೆಲ್ಲ ನೈವೇದ್ಯಕ್ಕಿಡಬೇಕು. ಸಂಜೆ ಮನೆಯಲ್ಲಿರುವ ಚಿಕ್ಕ ಮಕ್ಕಳಿಗೆ ಎರಡನೆಯ ವರ್ಷದಿಂದ ೫ ವರ್ಷಗಳ ವರೆಗಾದ ದೃಷ್ಟಿದೋಷ ಪರಿಹಾರಕ್ಕಾಗಿ ಎಲ್ಲ ತರಹದ ಹಣ್ಣುಗಳು, ಖೊಬ್ಬರಿ ತುಂಡುಗಳು, ಬೆಂಡು ಮತ್ತು ಬತ್ತಾಸ ಸೇರಿಸಿ ಚುರುಮರಿಯಿಂದ ಎರಿಯಬೇಕು. ಇದಕ್ಕೆ **"ಕರೀ ಎರೆಯುವದು"** ಎಂದೆನ್ನುವರು. ೧ ವರ್ಷದ ಮಗುವಿಗೆ ರಥಸಪ್ತಮಿ ದಿನವೇ ಕರೀ ಎರೆಯಬೇಕು.

**೩)** ಲಗ್ನವಾದ ಸುಮಂಗಲೆಯರು ಮಕರ ಸಂಕ್ರಮಣದ ದಿನ ಮೊದಲನೆಯ ವರ್ಷ ಖೊಬ್ಬರಿ ಬಟ್ಟಲದಲ್ಲಿ ಸಕ್ಕರಿ ಹಾಕಿ ಮಸಾಲೆಯ ಸಾಮಾನುಗಳು, ಎಳ್ಳು, ತುಪ್ಪ, ಬೆಣ್ಣೆ ಹಾಗೂ ಬೆಲ್ಲ ಇವುಗಳನ್ನು ಮೊದಲನೆಯ ವರ್ಷ ಮಾತ್ರ ರಥಸಪ್ತಮಿಯ ದಿನವೇ ೫ ಮನೆಗಳಿಗೆ ಹೋಗಿ ಮುತ್ತೈದೆಯರಿಗೆ ಬೀರಿಸಬೇಕು. ಎರಡನೆಯ ವರ್ಷದಿಂದ ೫ನೆಯ ವರ್ಷದವರೆಗೆ ಒಂದು ಸಣ್ಣ ಮಣ್ಣಿನ ಕುಳ್ಳಿಯಲ್ಲಿ ಗಜ್ಜರಿ ಹೋಳು, ಕಡ್ಲಿ ಬುಡ್ಡಿ, ಕಬ್ಬಿನ ತುಣುಕು ಹಾಗೂ ದಕ್ಷಿಣೆಗಳನ್ನಿಟ್ಟು ಕುಳ್ಳಿಯನ್ನು ಮುಚ್ಚಳದಿಂದ ಮುಚ್ಚಿ ಇದರೊಂದಿಗೆ ಮಸಾಲೆ ಸಾಮಾನು, ಎಳ್ಳು, ತುಪ್ಪ, ಎಣ್ಣೆ ಹಾಗೂ ಬೆಲ್ಲ ಇವುಗಳನ್ನು ೨ನೆಯ ವರ್ಷ ೧೦, ೩ನೆಯ ವರ್ಷ ೧೫, ೪ನೆಯ ವರ್ಷ ೨೦ ಹಾಗೂ ೫ನೆಯ ವರ್ಷ ೨೫ ಮನೆಗಳಿಗೆ ಹೋಗಿ ಮುತ್ತೈದ್ಯೆಯರಿಗೆ ಬೀರಿಸಬೇಕು.

**೪) ಮಾಘಸ್ನಾನ (ಪೌರ್ಣಿಮಾ)-**

(i) ಇವತ್ತಿನಿಂದ ಒಂದು ತಿಂಗಳು ಅಂದರೆ ಮಾಘ ಮಾಸದ ಪೌರ್ಣಿಮೆಯ ವರೆಗೆ ಒಂದು ತಿಂಗಳು ಪ್ರತಿದಿನ ನದೀ ಮುಂತಾದ ತೀರ್ಥಗಳಲ್ಲಿ ಅಥವಾ ಮನೆಯಲ್ಲಿಯೇ ಮಾಸನಿಯಾಮಕ ಶ್ರೀಮಾಧವನ ಪ್ರೀತ್ಯರ್ಥವಾಗಿ ಅರುಣೋದಯಕ್ಕೆ ಸರಿಯಾಗಿ ಮಾಘಸ್ನಾನವನ್ನು ಮಾಡಬೇಕು.

**ಮಾಘಸ್ನಾನಮಿದಂ ಪೂರ್ಣಂ ಸ್ನಾಸ್ಯೇಽಹಂ ದೇವ ಮಾಧವ ।**
**ತೀರ್ಥಸ್ಯಾಸ್ಯ ಜಲೇ ನಿತ್ಯಮಿತಿ ಸಂಕಲ್ಪ್ಯ ಚೇತಸಿ ॥** ಎಂದು ಸಂಕಲ್ಪಿಸಬೇಕು.
**ದುಃಖದಾರಿದ್ರ್ಯನಾಶಾಯ ಶ್ರೀವಿಷ್ಣೋಸ್ತೋಷಣಾಯ ಚ ।**
**ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ ।**
**ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ ॥**

ಎಂದು ಪಠಿಸುತ್ತ ಮೌನದಿಂದ ಸ್ನಾನಮಾಡಬೇಕು.

(ii) ಲಗ್ನವಾಗದ ಕನ್ಯೆಯರು ಇವತ್ತಿನಿಂದ ಒಂದು ತಿಂಗಳವರೆಗೆ ಮೌನಗೌರೀ ಪೂಜೆಯನ್ನು ಮಾತನಾಡದೇ ಮೌನದಿಂದ ಮಾಡಬೇಕು. ಎರಡು ಅರಿಷಿಣ ಬೇರು (ಮಕ್ಕಳ ಬೇರು) ಗಳಿಗೆ ಕರಿಮಣಿ ಕಟ್ಟಿ ಒಂದು ಜತೆ ಹಳದಿ ವಸ್ತ್ರ ಉಡಿಸಿ ಮಣೆಯ ಮೇಲಿಡಬೇಕು. ಹೊನ್ನಂಬರಿ ಹೂವು ಏರಿಸಿ ಪೂಜಿಸಬೇಕು. ಪೂಜೆಯ ನಂತರ ೫ ಇಡೀ ಅಕ್ಕಿ ಕಾಳುಗಳನ್ನು ಸೂರ್ಯನಿಗೆ ಏರಿಸಿದ ನಂತರ ಮಾತನಾಡಲು ಪ್ರಾರಂಭಿಸಬೇಕು. ಈ ತಿಂಗಳು ಊಟಮಾಡುವಾಗಲೂ ಮಾತನಾಡಬಾರದು. ಸಂಜೆ ಸೂರ್ಯಾಸ್ತದ ಮೊದಲೇ ಊಟ ಮುಗಿಸಬೇಕು.

*****

**೧೧. ಮಾಘಮಾಸ –**

**೧) ಶ್ರೀಮಧ್ವನವರಾತ್ರಿ- (ಶುದ್ಧ ಪ್ರತಿಪದೆ ಯಿಂದ ಶುದ್ಧ ನವಮಿಯ ವರೆಗೆ) -**

ಈ ನವರಾತ್ರಿಯಲ್ಲಿ ಪ್ರತಿದಿನ ಶ್ರೀಸುಮಧ್ವವಿಜಯ ಪ್ರವಚನವನ್ನು ಶ್ರವಣಮಾಡಬೇಕು. ಅವತಾರತ್ರಯ ಸುಳಾದಿ, ಶ್ರೀಮುಖ್ಯಪ್ರಾಣ, ಹನುಮ, ಭೀಮ, ಮಧ್ವರ ಸ್ತುತಿಪರವಾದ ಹಾಡು ಹಾಗೂ ಸುಳಾದಿಗಳನ್ನು ಹೇಳಬೇಕು. ಗಂಡಸರು ಶ್ರೀಸುಮಧ್ವವಿಜಯ ಪಾರಾಯಣ ಮಾಡಬೇಕು.

**೨) ರಥಸಪ್ತಮೀ -**

ಈ ದಿನ ಪ್ರಾತಃಕಾಲ ಸ್ನಾನಮಾಡುವಾಗ ಏಳು ಎಕ್ಕೆ ಎಲೆಗಳನ್ನು ತೆಗೆದುಕೊಂಡು ಒಂದೊಂದೇ ಎಲೆಯನ್ನು ಗಂಡಸರು ತಲೆಯ ಮೇಲಿಟ್ಟುಕೊಂಡು ಒಂದು ಎಲೆಗೆ ಒಂದು ಸಲ ಮುಳುಗಿ ನದಿ ಅಥವಾ ಜಲಾಶಯದಲ್ಲಿ ಸ್ನಾನಮಾಡಬೇಕು. ಮನೆಯಲ್ಲಾದರೆ ಎಕ್ಕಿ ಎಲೆಗಳನ್ನು ತಲೆಯ ಮೇಲಿಟ್ಟುಕೊಂಡು ಮೇಲೆ ನೀರು ಹಾಕಿಕೊಳ್ಳಬೇಕು. ಹೆಂಗಸರು ಹೆಗಲ ಮೇಲಿಟ್ಟುಕೊಂಡು ಸ್ನಾನ ಮಾಡಬೇಕು. ಸ್ನಾನಮಾಡುವಾಗ ಅನ್ನುವ ಮಂತ್ರ-

ಯದಾಜನ್ಮಕೃತಂ ಪಾಪಂ ಮಯಾ ಜನ್ಮಸು ಜನ್ಮಸು ।
ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥
ಏತಜ್ಜನ್ಮಕೃತಂ ಪಾಪಂ ಯಚ್ಚ ಜನ್ಮಾಂತರಾರ್ಜಿತಮ್ ।
ಮನೋವಾಕ್ಕಾಯಜಂ ಯಚ್ಚ ಜ್ಞಾತಾಜ್ಞಾತೇ ಚ ಯೇ ಪುನಃ ॥
ಇತಿ ಸಪ್ತವಿಧಂ ಪಾಪಂ ಸ್ನಾನಾನ್ಮೇ ಸಪ್ತಸಪ್ತಿಕೇ ।
ಸಪ್ತವ್ಯಾಧಿಸಮಾಯುಕ್ತಂ ಹರ ಮಾಕರಿ ಸಪ್ತಮಿ ॥
ಸಪ್ತಸಪ್ತಿವಹ ಪ್ರೀತ ಸಪ್ತಲೋಕಪ್ರದೀಪನ ।

**ಸಪ್ತಮೀಸಹಿತೋ ದೇವ ಗೃಹಾಣಾರ್ಘ್ಯಂ ದಿವಾಕರ ॥** ಎಂಬ ಮಂತ್ರದಿಂದ ಸೂರ್ಯದೇವನಿಗೆ ಅರ್ಘ್ಯವನ್ನು ಕೊಡಬೇಕು. ಈ ದಿನ ಸೂರ್ಯನಾರಾಯಣನಿಗೆ ವಿಶೇಷ ಪೂಜೆಯನ್ನು ಸಲ್ಲಿಸಬೇಕು.

**೩) ಶ್ರೀಮಧ್ವನವಮೀ (ಶುದ್ಧ ನವಮೀ)-**

ಶ್ರೀ ಮಧ್ವಾಚಾರ್ಯರು ತಮ್ಮ ಅವತಾರ ಕಾರ್ಯಗಳನ್ನು ಮುಗಿಸಿದ ಮೇಲೆ ದೇವತೆಗಳಿಂದ ಪ್ರಾರ್ಥಿತರಾಗಿ ಬದರಿಕಾಶ್ರಮದಲ್ಲಿರುವ ಶ್ರೀವೇದವ್ಯಾಸರ ಸನ್ನಿಧಿಗೆ ಪ್ರಯಾಣ ಬೆಳೆಸಿದ ದಿನವೇ ಶ್ರೀಮಧ್ವನವಮೀ. ಈ ದಿನ ಎಲ್ಲರೂ ಅವತಾರತ್ರಯ ಸುಳಾದಿ, ಶ್ರೀಮಧ್ವಾಚಾರ್ಯರ ಹಾಡುಗಳು ಮುಂತಾದವುಗಳನ್ನು ಪಠಿಸಿ ಆದಿಗುರುಗಳ ಅನುಗ್ರಹ ಸಂಪಾದನೆಗೆ ವಿವಿಧ ಸೇವೆಗಳನ್ನು ಸಲ್ಲಿಸಬೇಕು. ಗಂಡಸರು ಶ್ರೀಸುಮಧ್ವವಿಜಯ ಪಾರಾಯಣದ ಮಂಗಲವನ್ನು ಮಾಡಬೇಕು.

**೪) ಶುದ್ಧ ತ್ರಯೋದಶೀ -**

ಈ ದಿನದಲ್ಲಿ ಸುವಾಸಿನೀ ಸ್ತ್ರೀಯರು ಸುಮಂಗಲೆ-ಯರನ್ನು ಮನೆಗೆ ಆಮಂತ್ರಿಸಿ ಅವರಿಗೆ ಮರದ ಬಾಗಿನವನ್ನು ಕೊಡುವರು. ಇದರಿಂದ ಸೌಭಾಗ್ಯ ಪ್ರಾಪ್ತಿಯಾಗುತ್ತದೆ.

**೫) ಮಕರ ಸಂಕ್ರಾಂತಿ ಉತ್ತರಾಯಣ ಪರ್ವ ಪುಣ್ಯಕಾಲ -** ಈ ಪುಣ್ಯ ಕಾಲದಲ್ಲಿ ಷಟ್ ತಿಲಕರ್ಮಗಳಾದ ತಿಲಸ್ನಾನ, ತಿಲತೈಲದಿಂದ ದೀಪಹಚ್ಚುವುದು, ತಿಲಧೇನು ದಾನ, ತಿಲಹೋಮ, ದೇವಋಷಿ ಪಿತೃಗಳಿಗೆ ತಿಲ ತರ್ಪಣ (ಶುಕ್ಲ ತಿಲದಿಂದ ದೇವಋಷಿ ತರ್ಪಣ, ಕೃಷ್ಣ ತಿಲದಿಂದ ಪಿತೃಗಳಿಗೆ ತರ್ಪಣ), ಮತ್ತು ತಿಲಭಕ್ಷಣ ಮಾಡಬೇಕು. ಸುವರ್ಣ ತಿಲಯುಕ್ತ ತಾಮ್ರಪಾತ್ರದಾನ, ವಸ್ತ್ರ ದಾನಗಳು ವಿಶೇಷ ಫಲಪ್ರದವಾಗಿವೆ.

**೬) ಮಾಘಸ್ನಾನ ಸಮಾಪ್ತಿ ( ಭಾರತ ಹುಣ್ಣಿಮೆ) -**

(i) ಈ ದಿನ ಮಾಘಸ್ನಾನ ಸಂಪೂರ್ಣ ಫಲಪ್ರಾಪ್ತಿಗಾಗಿ ದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ ಭೋಜನಮಾಡಿಸಬೇಕು.

(ii) ಕುಲಧರ್ಮವಿದ್ದವರು ಕುಲದೇವೀ ಪೂಜಾಮಾಡಿ ಕುಲಧರ್ಮವನ್ನು ಮಾಡಬೇಕು.

## ೧೨. ಫಾಲ್ಗುಣ ಮಾಸ -

೧) ಈ ಮಾಸದಲ್ಲಿ ಮಾಸನಿಯಾಮಕ ಶ್ರೀಗೋವಿಂದನ ಪ್ರಸಾದಕ್ಕಾಗಿ ಗೋವು, ಭತ್ತ ಮತ್ತು ವಸ್ತ್ರಗಳ ದಾನ ಮಾಡಬೇಕು.

**೨) ಪಯೋವ್ರತ -**

ಶ್ರೀಮದ್ಭಾಗವತದಲ್ಲಿ ಕಶ್ಯಪರು ತಮ್ಮ ಪತ್ನಿಯಾದ ಅದಿತಿಗೆ ಈ ಪಯೋವ್ರತವನ್ನು ಉಪದೇಶಿಸಿದ್ದಾರೆ (ಸ್ಕಂಧ - ೮, ಅಧ್ಯಾಯ - ೧೫, ಶ್ಲೋಕ ೨೪ - ೬೨). ಸಂತಾನ, ಸಂಪತ್ತು, ಕಳೆದು ಹೋದ ಅಧಿಕಾರ ಸ್ಥಾನಮಾನಗಳ ಪುನಃ ಪ್ರಾಪ್ತಿ, ಮುಂತಾದ ಫಲಗಳನ್ನು ಅಪೇಕ್ಷಿಸುವ ಸ್ತ್ರೀ ಪುರುಷರು ಫಾಲ್ಗುಣ ಶುದ್ಧ ಪ್ರತಿಪದೆಯಿಂದ ಶುದ್ಧ ದ್ವಾದಶೀ ವರೆಗೆ ೧೨ ದಿನಗಳ ವರೆಗೆ ಈ ವ್ರತವನ್ನು ಆಚರಿಸಿ ತ್ರಯೋದಶಿಯ ದಿನ ಉದ್ಯಾಪನೆ ಮಾಡಬೇಕು. ವ್ರತದ ವಿಧಾನವನ್ನು ಕಶ್ಯಪರು ಅದಿತಿಗೆ ಸ್ಪಷ್ಟವಾಗಿ ತಿಳಿಸಿದ್ದು ಅದರ ವಿವರವನ್ನು ಬಲ್ಲವರಿಂದ ಚೆನ್ನಾಗಿ ತಿಳಿದುಕೊಂಡು ವ್ರತಾನುಷ್ಠಾನ ಮಾಡಬೇಕು. ಪಯೋವ್ರತ ಧಾರಣ ಮಾಡಿದವರು ಭಾಗವತದಲ್ಲಿರುವ ಭಗವಂತನ ಕೆಳಗಿನ ಸ್ತುತಿಯನ್ನು ನಿತ್ಯ ಪಠಿಸಬೇಕು.

**ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।**
**ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ॥ ೧॥**

**ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।**
**ಚತುರ್ವಿಂಶದ್ಗುಣಜ್ಞಾಯ ಗುಣಸಂಸ್ಥಾನಹೇತವೇ ॥ ೨ ॥**

**ನಮೋ ದ್ವಿಶೀರ್ಷ್ಣೇ ತ್ರಿಪದೇ ಚತುಃಶೃಂಗಾಯ ತಂತವೇ ।**
**ಸಪ್ತಹಸ್ತಾಯ ಯಜ್ಞಾಯ ತ್ರಯೀವಿದ್ಯಾತ್ಮನೇ ನಮಃ ॥ ೩ ॥**

**ನಮಃ ಶಿವಾಯ ರುದ್ರಾಯ ನಮಃ ಶಕ್ತಿಧರಾಯ (ಸಾಧಾರಣಾಯ) ಚ ।**
**ಸರ್ವವಿದ್ಯಾಧಿಪತಯೇ ಭೂತಾನಾಂ ಪತಯೇ ನಮಃ ॥ ೪ ॥**

**ನಮೋ ಹಿರಣ್ಯಗರ್ಭಾಯ ಪ್ರಾಣಾಯ ಜಗದಾತ್ಮನೇ ।**
**ಯೋಗೈಶ್ವರ್ಯಶರೀರಾಯ ನಮಸ್ತೇ ಯೋಗಹೇತವೇ ॥ ೫ ॥**

**ನಮಸ್ತೇ ಆದಿದೇವಾಯ ದೇವದೇವಾಯ ತೇ ನಮಃ ।**
**ನಾರಾಯಣಾಯ ಋಷಯೇ ನರಾಯ ಹರಯೇ ನಮಃ ॥ ೬ ॥**

**ನಮೋ ಮರಕತಶ್ಯಾಮವಪುಷೇಽಧಿಗತಶ್ರಿಯೇ ।**
**ಕೇಶವಾಯ ನಮಸ್ತುಭ್ಯಂ ನಮಸ್ತೇ ಪೀತವಾಸಸೇ ॥ ೭॥**

**ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।**
**ಅತಸ್ತೇ ತಪಸಾ ಧೀರಾಃ ಪಾದರೇಣುಮುಪಾಸತೇ ॥ ೮ ॥**

**ಅನ್ವವರ್ತಂತ ಯಂ ದೇವಾಃ ಶ್ರೀವಿನಿರ್ಜಿತಪದ್ಮಯೋಃ ।**
**ಸ್ಪೃಹಯಂತ ಇವಾಮೋದಂ ಭಗವಾನ್ ಮೇ ಪ್ರಸೀದತಾಮ್ ॥ ೯ ॥**

**೩) ಹೋಳೀ ಹುಣ್ಣಿಮೆ** - ಈ ದಿನ ಸೂರ್ಯಾಸ್ತಾನಂತರದಲ್ಲಿ ಹೋಲಿಕೆಯನ್ನು ಸುಟ್ಟನಂತರ ಶ್ರೀಹರಿದಾಸರು ರಚಿಸಿದ ಹೋಳೀಹುಣ್ಣಿಮೆ ಹಾಡು ಹೇಳಬೇಕು.

**೪) ವಸಂತ ಪ್ರತಿಪತ್ (ಫಾಲ್ಗುಣ ಕೃಷ್ಣ ಪ್ರತಿಪದಾ)** - ಈ ದಿನದಲ್ಲಿ ಮನೆಯ ಅಂಗಳವನ್ನು ಗೋಮಯದಿಂದ ಸಾರಿಸಿ ಅಲಂಕರಿಸಿ ಅಲ್ಲಿ ಸುವಾಸಿನಿಯರು ಮನೆಯಲ್ಲಿಯ ಹಿರಿಯರನ್ನು ಹಾಗೂ ಚಿಕ್ಕವರನ್ನು ಪೂರ್ವಾಭಿಮುಖವಾಗಿ ಕೂಡಿಸಿ ಆರುತಿ ಮಾಡಬೇಕು. ಅನಂತರ ಎಲ್ಲರೂ ಗಂಧಯುತವಾದ ಮಾವಿನ ಹೂವನ್ನು '**ಚೂತಮಗ್ರ್ಯಂ ವಸಂತಸ್ಯ ಮಾಕಂದಕುಸುಮಂ ತವ I ಸಚಂದನಂ ಪಿಬಾಮ್ಯದ್ಯ ಸರ್ವಕಾಮ್ಯಾರ್ಥಸಿದ್ಧಯೇ II**' ಎಂದು ಹೇಳುತ್ತ ಪ್ರಾಶನ ಮಾಡಬೇಕು.

## ಆ) ವ್ರತಗಳು

**ಸೂಚನೆ** - ಸ್ತ್ರೀಯರು ಮಾಡುವ ಅನೇಕ ವ್ರತಗಳಲ್ಲಿ ಕೆಲವೇ ಪ್ರಮುಖ ವ್ರತಗಳನ್ನು ಆರಿಸಿ ಈ ಭಾಗದಲ್ಲಿ ಕೊಡಲಾಗಿದೆ. ಈ ವ್ರತಗಳ ಸಂಕ್ಷಿಪ್ತ ಪರಿಚಯ ಮತ್ತು ವ್ರತಸಂಕಲ್ಪ, ಅರ್ಘ್ಯ, ದಾನ, ವ್ರತದಲ್ಲಿ ಅನ್ನಬೇಕಾದ ಸ್ತೋತ್ರ ಇವೇ ಮೊದಲಾದ ವಿಷಯಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ.

ಯಾವುದೇ ವ್ರತಧಾರಣ ಮಾಡುವಾಗ, ವ್ರತದ ಅವಧಿಯಲ್ಲಿ ಮತ್ತು ಸಮರ್ಪಣೆಯಲ್ಲಿ ಶಾಸ್ತ್ರವಿಹಿತವಾದ ಪಾವಿತ್ರ್ಯವನ್ನು ಹಾಗೂ ಶುದ್ಧತೆಯನ್ನು ಕಾಪಾಡಿಕೊಳ್ಳಬೇಕು. ಆಹಾರ - ವಿಹಾರಗಳ ಸಂಯಮವಿರಬೇಕು. ವ್ರತಗ್ರಹಣದ ಸಂಕಲ್ಪ ವಿಧಿ, ದೇವತಾಪೂಜಾ, ದಾನಸಂಕಲ್ಪ, ಉದ್ಯಾಪನೆ ಇತ್ಯಾದಿಗಳನ್ನು ಮನೆಯಲ್ಲಿ ಹಿರಿಯರ ಅಥವಾ ಶ್ರೋತ್ರಿಯ ಪುರೋಹಿತರ-ಗುರುಗಳ ಮಾರ್ಗದರ್ಶನದಲ್ಲಿ ಅವರಿಂದ ಮಂತ್ರಗಳನ್ನು ಹೇಳಿಸಿಕೊಂಡು ಮಾಡಬೇಕು.

### ೧) ಏಕಾದಶೀವ್ರತ : -

**"ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ಭವತಿ ಪ್ರಭೋ I ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್ II ಉಪವಾಸವ್ರತಂ ಕುರ್ಯಾತ್ ತ್ರಿಕಾಲಂ ಚಾರ್ಚಯಂಸ್ತು ಮಾಮ್ I ಸರ್ವಕ್ರತುಫಲಂ ಲಬ್ಧ್ವಾ ಮಮ ಲೋಕೇ ಮಹೀಯತೇ II"** -
ಏಕಾದಶೀವ್ರತವು ಸಂಧ್ಯಾವಂದನಾದಿ ಕ್ರಿಯೆಗಳಂತೆ ನಿತ್ಯವಾಗಿದೆ. ಈ ವ್ರತದ ಅನುಷ್ಠಾನದಿಂದ ಮನುಷ್ಯನು ತನ್ನ ಏಕಾದಶೇಂದ್ರಿಯಗಳಿಂದ ಮಾಡಿದ ಎಲ್ಲ ಪಾಪಗಳಿಂದ ಮುಕ್ತನಾಗಿ ಸರ್ವಯಜ್ಞಗಳ ಫಲವನ್ನು ಪಡೆದು ವಿಷ್ಣುಸಾನ್ನಿಧ್ಯವನ್ನು ಹೊಂದುವನು. '**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ I ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ II ಅಭರ್ತೃಕಾ ತಥಾಽನ್ಯೇ ಚ ಸೂತವೈದೇಹಕಾದಯಃ I ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ II**" - ನಾಲ್ಕು ಆಶ್ರಮದವರೂ, ನಾಲ್ಕು ವರ್ಣದವರೂ, ಎಲ್ಲಾ ಸ್ತ್ರೀಯರೂ (ಅವಿವಾಹಿತರು, ಮುತ್ತೈದೆಯರು. ವಿಧವೆಯರು), ಮಿಶ್ರಜಾತಿಯವರೂ ಎಲ್ಲರೂ ಮಾಸದ ಎರಡು ಪಕ್ಷಗಳಲ್ಲಿ ಬರುವ ಏಕಾದಶೀತಿಥಿಗಳಂದು ಭೋಜನ ಮಾಡಬಾರದು. ನಿರಾಹಾರಿಗಳಾಗಿರಬೇಕು. **"ಸೂತಕೇ ಮೃತಕೇ ವಾಪಿ ಏಕಾದಶ್ಯಾಂ ನ ಭೋಜನಂ I ಕುರ್ಯಾದ್ರಜೋದರ್ಶನೇಽಪಿ ನಾರೀ ವಾಪಿ ನರೋಽಪಿ ವಾ II ಏಕಾದಶ್ಯಾಂ ನ**

**ಭುಂಜೀತ ಪಕ್ಷಯೋರುಭಯೋರಪಿ । ನ ಶ್ರಾದ್ಧಹೋಮೌ ಕುರ್ವೀತ ದೇವಾದೀನ್ನ ತು ತರ್ಪಯೇತ್ ॥"** - ಜಾತಾಶೌಚ, ಮೃತಾಶೌಚಗಳಲ್ಲಿ ಮತ್ತು ಸ್ತ್ರೀಯರು ರಜಸ್ವಲೆಯರಾದಾಗ ಏಕಾದಶೀ ಭೋಜನವಿಲ್ಲ. ಆ ದಿನ ಶ್ರಾದ್ಧಹೋಮಗಳನ್ನು ಮಾಡಕೂಡದು. ಮತ್ತು ದೇವತೆ ಪಿತೃಗಳು ಮೊದಲಾದವರಿಗೆ ತರ್ಪಣ ಕೊಡಕೂಡದು.

**ಪೃಥಿವ್ಯಾಂ ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ । ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ॥** -- ಜಗತ್ತಿನಲ್ಲಿ ಪ್ರಸಿದ್ಧವಿರುವ ಬ್ರಹ್ಮಹತ್ಯಾದಿ ಪಾತಕಗಳು ಏನಿವೆಯೋ ಅವು ಏಕಾದಶಿಯ ದಿನ ಅನ್ನವನ್ನು ಆಶ್ರಯಿಸಿ ಕೊಂಡಿರುತ್ತವೆ. ಆದ್ದರಿಂದ ಅಂದು ಆಹಾರ ಸೇವನೆ ನಿಷಿದ್ಧವಾಗಿದೆ.

**ಭುಂಕ್ಷ್ವ ಭುಂಕ್ಷ್ವೇತಿ ಯೋ ಬ್ರೂಯಾತ್ ಯೋ ಭುಂಕ್ತೇ ಹರಿವಾಸರೇ। ತಾವುಭೌ ನರಕಂ ಯಾತೋ ಯಾವದಾಭೂತಸಂಪ್ಲವಮ್ ॥** - ಹರಿದಿನದಂದು ಇನ್ನೊಬ್ಬರಿಗೆ 'ತಿನ್ನು' 'ತಿನ್ನು' ಎಂದು ಹೇಳುವವರು ಮತ್ತು ಸ್ವಯಂ ಊಟ ಮಾಡುವವರು ಈ ಇಬ್ಬರೂ ಪ್ರಳಯ ಕಾಲಪರ್ಯಂತ ನರಕದಲ್ಲಿ ನೆಲೆಸಬೇಕಾಗುತ್ತದೆ.

**ಸಂಕಲ್ಪ -**

೧) **ಏಕಾದಶ್ಯಾಂ ನಿರಾಹಾರಃ (ರಾ) ಸ್ಥಿತ್ವಾಽಹನಿ ಪರೇ ಹ್ಯಹಮ್ ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥**

- ಹೇ ಪುಂಡರೀಕಾಕ್ಷ । ಏಕಾದಶಿಯ ದಿನ ಉಪವಾಸದಿಂದ ಇದ್ದು ಮರುದಿನ ಪಾರಣೆ ಮಾಡುತ್ತೇನೆ. ಹೇ ಅಚ್ಯುತ ! ನನ್ನನ್ನು ರಕ್ಷಿಸು.

೨) ಎರಡು ಉಪವಾಸಗಳು ಬಂದಾಗ ಮಾಡಬೇಕಾದ ಸಂಕಲ್ಪ-
**ಅದ್ಯ ಶ್ವಶ್ಚ ನಿರಾಹಾರೋ ಭೂತ್ವಾಹಂ ದ್ವಾದಶೀದಿನೇ ।**
**ವಿಧಾಸ್ಯೇ ಪಾರಣಂ ದೇವ ಪ್ರೀತೋ ಭವ ಮಮಾನಿಶಮ್ ॥**

- ಹೇ ದೇವಾ ಶ್ರೀ ಹರೇ । ಇಂದು ಮತ್ತು ನಾಳೆ ಉಪವಾಸದಿಂದ ಇದ್ದು ದ್ವಾದಶೀ ದಿನ ಪಾರಣೆ ಮಾಡುವೆನು. ನನ್ನಲ್ಲಿ ಸದಾ ಪ್ರಸನ್ನನಾಗಿರು.

**ಏಕಾದಶೀ ದಿನದ ಮುಖ್ಯ ಕರ್ತವ್ಯಗಳು -**

**ತಜ್ಜಾಪ್ಯಂ ತದ್ಗತಂ ಧ್ಯಾನಂ ತತ್ಕಥಾಶ್ರವಣಾದಿಕಮ್।**
**ತದರ್ಚನಂ ಚ ತನ್ನಾಮ ಕೀರ್ತನಶ್ರವಣಾದಯಃ॥**
**ಉಪವಾಸಕೃತಾವೇತೇ ಗುಣಾಃ ಪ್ರೋಕ್ತಾಃ ಮನೀಷಿಭಿಃ ॥**

-- ವಿಷ್ಣುಧರ್ಮೋತ್ತರ ಪುರಾಣ.

ಪರಮಾತ್ಮನ ಜಪ, ಧ್ಯಾನ ,ಕಥಾಶ್ರವಣ ಮನನಾದಿಗಳು, ಅರ್ಚನೆ, ನಾಮ ಸಂಕೀರ್ತನ, ನಾಮಶ್ರವಣಾದಿಗಳು, ಉಪವಾಸದ ದಿನ ಮಾಡಬೇಕಾದ ಮುಖ್ಯ ಕರ್ತವ್ಯಗಳೆಂದು ಜ್ಞಾನಿಗಳ ಮತವಾಗಿದೆ.

**೨) ಚಾತುರ್ಮಾಸ್ಯ ವ್ರತಗಳು – ಸಂಕಲ್ಪ , ದಾನ ಹಾಗೂ ವಿಶೇಷ ಧರ್ಮಗಳು :**

೧) ಶಾಕ ವ್ರತ ೨) ದಧಿವ್ರತ ೩) ಕ್ಷೀರವ್ರತ ೪) ದ್ವಿದಲವ್ರತ ೫) ಏಕಾದಶೀವ್ರತ ೬)ದಿನತ್ರಯ ವ್ರತ ೭) ಧಾರಣ ಪಾರಣವ್ರತ ೮) ಷಷ್ಠಕಾಲವ್ರತ ೯) ಲಕ್ಷಬತ್ತಿವ್ರತ ೧೦) ಲಕ್ಷಪ್ರದಕ್ಷಿಣೆ ಹಾಗೂ ಲಕ್ಷ ನಮಸ್ಕಾರವ್ರತ ೧೧) ಲಕ್ಷ ಕಮಲಾರ್ಚನೆವ್ರತ ೧೨) ಲಕ್ಷ ತುಳಸೀಅರ್ಚನೆವ್ರತ ೧೩) ಲಕ್ಷ ಪುಷ್ಪಾರ್ಚನೆವ್ರತ ೧೪)ಭೀಷ್ಮ-ಪಂಚಕವ್ರತ (ಕಾರ್ತೀಕ ಶುದ್ಧ ಏಕಾದಶೀಯಿಂದ ಪೌರ್ಣಿಮೆ ಪೂರ್ತಿ). ೧೫)ವಿಷ್ಣುಪಂಚಕವ್ರತ ೧೬) ಚಾಂದ್ರಾಯಣವ್ರತ ೧೭) ಕೃಚ್ಛ್ರವ್ರತ ೧೮) ಪರಾಕವ್ರತ ೧೯)ಪ್ರಾಜಾಪತ್ಯವ್ರತ ೨೦) ಲಕ್ಷಹೋಮವ್ರತ ೨೧) ಮೌನವ್ರತ ೨೨) ಧಾತ್ರೀಹೋಮವ್ರತ ೨೩)ಕೃಷ್ಣಾಷ್ಟಮೀಜಯಂತೀವ್ರತ ೨೪) ಮಾಸವ್ರತ.

**೧) ಶಾಕವ್ರತ : ಆಷಾಢ ಶು. ೧೧ ರಿಂದ ಶ್ರಾವಣ ಶುದ್ಧ ೧೦.**

**ಸಂಕಲ್ಪ :** ಆಚಮ್ಯ, ಪ್ರಾಣಾನಾಯಾಮ್ಯ, ದೇಶಕಾಲಾದಿ ಸಂಕೀರ್ತ್ಯ,

**ವಾಸುದೇವ ಶುಚೌ ಮಾಸೇ ಶಾಕವ್ರತಮನುತ್ತಮಮ್ ।**
**ತ್ವತ್ಪ್ರೀತ್ಯರ್ಥಂ ಕರಿಷ್ಯೇऽಹಂ ನಿರ್ವಿಘ್ನಂ ಕುರು ಮಾಧವ ॥**

**ಸಮರ್ಪಣೆ :** **ವಾಸುದೇವ ನಮಸ್ತುಭ್ಯಂ ಪ್ರಥಮೇ ಮಾಸಿ ಮತ್ಕೃತಮ್ ।**
**ಶಾಕವ್ರತಂ ಮಯಾ ತೇನ ಸಂತುಷ್ಟೋ ಭವ ಮಾಧವ ॥**

**೨) ದಧಿವ್ರತ : ಶ್ರಾವಣ ಶು. ೧೧ ರಿಂದ ಭಾದ್ರಪದ ಶು ೧೦.**

**ಸಂಕಲ್ಪ :** **ಸಂಕರ್ಷಣಾರವಿಂದಾಕ್ಷ ಕರಿಷ್ಯೇऽಹಂ ದಧಿವ್ರತಮ್ ।**
**ದ್ವಿತೀಯೇ ಮಾಸಿ ದೇವೇಶ ನಿರ್ವಿಘ್ನಂ ಕುರು ಮೇ ಪ್ರಭೋ ॥**

**ಸಮರ್ಪಣೆ :** **ಸಂಕರ್ಷಣ ನಮಸ್ತುಭ್ಯಂ ಶ್ರವಣೇ ಮತ್ಕೃತೇನ ಚ ।**
**ದಧಿವ್ರತೇನ ದೇವೇಶ ತುಷ್ಟೋ ಭವ ಜನಾರ್ದನ ॥**

**೩) ಕ್ಷೀರವ್ರತ : ಭಾದ್ರಪದ ಶು. ೧೧ ರಿಂದ ಆಶ್ವೀನ ಶು. ೧೦.**

**ಸಂಕಲ್ಪ :** **ಪ್ರದ್ಯುಮ್ನ ತವ ತುಷ್ಟ್ಯರ್ಥಂ ಪ್ರೋಷ್ಠಪದ್ಯಾಂ ತೃತೀಯಕೇ ।**
**ನಿರ್ವಿಘ್ನಂ ಕುರು ದೇವೇಶ ಕರಿಷ್ಯೇऽಹಂ ಪಯೋವ್ರತಂ ॥**

**ಸಮರ್ಪಣೆ :** **ಶ್ರೀಪ್ರದ್ಯುಮ್ನ ನಮಸ್ತುಭ್ಯಂ ಮಾಸಮಾರಭ್ಯ ಯತ್ಕೃತಂ ।**
**ಇಷ್ಟದೋ ಭವ ಸರ್ವೇಶ ಗೃಹೀತ್ವಾ ತು ಪಯೋವ್ರತಂ ॥**

**೪) ದ್ವಿದಲ ವ್ರತ : ಆಶ್ವೀನ ಶು. ೧೧ ರಿಂದ ಕಾರ್ತೀಕ ಶು. ೧೦.**

**ಸಂಕಲ್ಪ :** **ಅನಿರುದ್ಧ ಸುರೈರ್ವಂದ್ಯ ದ್ವಿದಳವ್ರತಮುತ್ತಮಮ್ ।**
**ಕರೋಮ್ಯಹಮಿಷೇ ಮಾಸೇ ನಿರ್ವಿಘ್ನಂ ಕುರು ಮೇ ಪ್ರಭೋ ॥**

**ಸಮರ್ಪಣೆ :** **ಅನಿರುದ್ಧ ನಮಸ್ತುಭ್ಯಂ ದ್ವಿದಳಾಖ್ಯವ್ರತೇನ ಚ ।**
**ಮತ್ಕೃತೇನಾಶ್ವಿನೇ ಮಾಸೇ ಪ್ರೀತ್ಯರ್ಥಂ ಫಲದೋ ಭವ ॥**

## ಚಾತುರ್ಮಾಸ್ಯದಲ್ಲಿಯ ವಿಶೇಷ ಧರ್ಮಗಳು

ಸ್ತ್ರೀಯರು ಹರಿಕಥಾಮೃತಸಾರ ಮತ್ತು ಹರಿದಾಸರ ಕೀರ್ತನೆಗಳನ್ನು ತಾರತಮ್ಯಾನುಸಾರ ಪಠಿಸಬೇಕು.

**ದಾನಗಳು :** ಗ್ರಂಥದಾನ, ಪ್ರತಿಮಾದಾನ, ಭೂದಾನ, ಸುವರ್ಣದಾನ, ದ್ರವ್ಯದಾನ. ಧನದಾನ, ಧಾನ್ಯದಾನ, ತಿಲದಾನ, ಕೊಡ, ಪಾದರಕ್ಷೆ, ಉಪ್ಪು, ನೆಲ್ಲಿ(ಧಾತ್ರೀ) ದಾನ, ಘೃತದಾನ, ಧೇನುದಾನ, ದೀಪದಾನ, ಶಾಕದಾನ. ದಧಿದಾನ, ಕ್ಷೀರದಾನ, ದ್ವಿದಳಧಾನ್ಯದಾನ, ಶಯ್ಯಾದಾನ, ಮುಂತಾದವುಗಳು.

### ೩) ಶ್ರೀಕೃಷ್ಣಜಯಂತೀ ವ್ರತ -

ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮೀ ದಿನವು ಶ್ರೀ ಕೃಷ್ಣ ಜನ್ಮಾಷ್ಟಮೀ ಎಂದು ಪ್ರಸಿದ್ಧವಾಗಿದೆ. ಇದು ಮಹಾಪಾತಕಗಳನ್ನು ಕಳೆಯುತ್ತದೆ. ಆ ದಿನ ಅರ್ಧರಾತ್ರಿಯಲ್ಲಿ ರೋಹಿಣೀ ನಕ್ಷತ್ರವು ಇದ್ದರೆ ಆ ದಿನವು 'ಜಯಂತೀ' ಎಂದು ಕರೆಯಲ್ಪಡುತ್ತದೆ.

**ಸಂಪ್ರಾಪ್ತೇ ಶ್ರಾವಣೇ ಮಾಸಿ ಕೃಷ್ಣಪಕ್ಷೇ ಯದಾ ಭವೇತ್ । ಕೃಷ್ಣಜನ್ಮಾಷ್ಟಮೀ ಜ್ಞೇಯಾ ಮಹಾಪಾತಕನಾಶನೀ ॥ ರೋಹಿಣೀ ಸಹಿತಾ ಸಾ ಚೇತ್ ಜಯಂತೀ ನಾಮ ಸಾ ತಿಥಿಃ ॥**

(-ಸನತ್ಕುಮಾರಸಂಹಿತಾ)

ಶ್ರೀ ರಾಮ, ನರಸಿಂಹ, ವೇದವ್ಯಾಸ ಮೊದಲಾದ ಇತರ ಎಲ್ಲಾ ಜಯಂತಿಗಳಿಗಿಂತಲೂ ಶ್ರೀಕೃಷ್ಣಜಯಂತಿಯೇ ಶ್ರೇಷ್ಠ. ಈ ಜಯಂತಿಯು ನಮಗೆಲ್ಲ ಕಾಲದೃಷ್ಟಿಯಿಂದಲೂ ಹತ್ತಿರವಾಗಿದೆ. ಆದ್ದರಿಂದ ಆ ದಿನ ಉಪವಾಸ ಮಾಡಬೇಕು.

**ವರ್ಷೇ ವರ್ಷೇ ತು ಯಾ ನಾರೀ ಕೃಷ್ಣಜನ್ಮಾಷ್ಟಮೀವ್ರತಮ್ । ನ ಕರೋತಿ ಮಹಾವ್ಯಾಲೀ ಭವತೀಹ ಚ ಕಾನನೇ** (-ಭವಿಷ್ಯೋತ್ತರ ಪುರಾಣ)

ಪ್ರತಿವರ್ಷ ಬರುವ ಶ್ರೀ ಕೃಷ್ಣಜನ್ಮಾಷ್ಟಮಿಯ ದಿನ ಸ್ತ್ರೀಯರೂ ಉಪವಾಸ ಮಾಡಬೇಕು. ಹಾಗೆ ಮಾಡದಿದ್ದವರು ಮರುಜನ್ಮದಲ್ಲಿ ಕಾನನದಲ್ಲಿ ಕ್ರೂರ ಪ್ರಾಣಿಗಳಾಗಿ ಹುಟ್ಟುತ್ತಾರೆ.

ಈ ವ್ರತವನ್ನು ಆಚರಿಸುವವರಿಗೆ ಎಂದೂ ದೌರ್ಭಾಗ್ಯವಿಲ್ಲ, ವೈಧವ್ಯವಿಲ್ಲ, ಮನೆಯಲ್ಲಿ ಕಲಹವಾಗುವದಿಲ್ಲ, ಸಂತತಿ ನಾಶವಾಗುವದಿಲ್ಲ, ಯಮಲೋಕದ ದರ್ಶನವಿಲ್ಲ, ಏಳು ಜನ್ಮಗಳಲ್ಲಿಯೂ ಅಪೇಕ್ಷಿತವಾದುದೆಲ್ಲವೂ ಸಿದ್ಧಿಸುತ್ತದೆ. ಈ ವ್ರತವನ್ನು ವಿಧ್ಯುಕ್ತವಾಗಿ ಆಚರಿಸುವ ಸ್ತ್ರೀ ಪುರುಷರಿಗೆ ಮಹಾವಿಷ್ಣುವು ಪ್ರಸನ್ನನಾಗುವನು. ಅವರಿಗೆ ವಿಷ್ಣುಲೋಕವು ಲಭಿಸುವುದು (ಭವಿಷ್ಯೋತ್ತರ ಪುರಾಣ). ಶ್ರೀ ಕೃಷ್ಣಜಯಂತಿಯ ಸ್ಮರಣ ಕೀರ್ತನೆಗಳೂ ಸಹ ಪುಣ್ಯಪ್ರಾಪ್ತಿ ಮತ್ತು ಪಾಪನಾಶಕ್ಕೆ ಕಾರಣವಾಗುತ್ತವೆ.

ಶ್ರೀಕೃಷ್ಣಾಷ್ಟಮಿಯ ದಿನ ಅರುಣೋದಯದಲ್ಲಿ ಎಚ್ಚೆತ್ತು ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನವನ್ನು ಮಾಡಿ ನಿತ್ಯಾಹ್ನಿಕಗಳನ್ನು ಮಾಡಿಕೊಳ್ಳಬೇಕು. ಅನಂತರ "ಅದ್ಯ ಸ್ಥಿತ್ವಾ ನಿರಾಹಾರಃ **(ರಾ) ಶ್ವೋ ಭೂತೇ ಪರಮೇಶ್ವರ । ಭೋಕ್ಷ್ಯಾಮಿ ಪುಂಡರೀಕಾಕ್ಷ ಅಸ್ಮಿನ್ ಜನ್ಮಾಷ್ಟಮೀವ್ರತೇ॥**

-ಹೇ ಪರಮೇಶ್ವರ ! ಇಂದಿನ ಜನ್ಮಾಷ್ಟಮೀ ವ್ರತದಲ್ಲಿ ನಾನು ಇಂದು ಉಪವಾಸದಿಂದ ಇದ್ದು ನಾಳೆಗೆ ಪಾರಣೆ ಮಾಡುವೆನು, ಎಂದು ಶ್ರೀ ಕೃಷ್ಣಾಷ್ಟಮೀ ವ್ರತಸಂಕಲ್ಪವನ್ನು ಮಾಡಬೇಕು.

ಸಾಯಂಕಾಲ ಮತ್ತೆ ಸ್ನಾನಮಾಡಿ ನೈವೇದ್ಯಕ್ಕೆ ಅಂಟಿನ ಉಂಡಿ, ಪುಠಾಣಿ ಉಂಡಿ ಇವೇ ಮೊದಲಾದ ಉಂಡೆಗಳನ್ನು , ಬಾಣಂತೀ ಶುಂಠೀ ಖಾರ, ಮುಂತಾದವುಗಳನ್ನು ಸಿದ್ಧಪಡಿಸಿ ಇಡಬೇಕು. ಪೂಜೆಗಾಗಿ ಮಣ್ಣಿನಿಂದ ಗೋಕುಲ ಹಾಗೂ ತೊಟ್ಟಿಲನ್ನು ಮಾಡಿ ಒಳಗೆ ಶ್ರೀಕೃಷ್ಣ ಬಲರಾಮರ ಮೂರ್ತಿಗಳನ್ನು ಮಾಡಿ ಮಲಗಿಸಬೇಕು. ನಂದಗೋಪ ,ಯಶೋದೆ , ವಸುದೇವ, ದೇವಕೀ, ರೋಹಿಣೀ, ಸುಭದ್ರಾ, ಕಾಮಧೇನು, ಕಲ್ಪವೃಕ್ಷ, ಕತ್ತೆ, ಕಾಗಿ, ಗೋಪಿಯರು, ಪೌರಾಣಿಕ ಬ್ರಾಹ್ಮಣ ಇವರನ್ನು ಮಣ್ಣಿನಿಂದ ಮಾಡಿ ಆ ಮಣ್ಣಿನ ಗೋಕುಲದಲ್ಲಿ ಸರಿಯಾದ ಸ್ಥಳದಲ್ಲಿಡಬೇಕು. ಮನೆಯಲ್ಲಿ ಹಿರಿಯರು, ಮಧ್ಯರಾತ್ರಿಯಲ್ಲಿ ಶ್ರೀ ಕೃಷ್ಣನ ಜನ್ಮಸಮಯಕ್ಕೆ ಸರಿಯಾಗಿ ಗೋಕುಲದಲ್ಲಿ ಬಲರಾಮನೊಂದಿಗೆ ಮಲಗಿರುವ ಶ್ರೀಕೃಷ್ಣನ ಪೂಜೆ ಮಾಡಿದ ನಂತರ ಎಲ್ಲರೂ ಪೂಜಿಸಬೇಕು. ನಂತರ ಚಂದ್ರೋದಯವಾದ ಮೇಲೆ ಎಲ್ಲರೂ —

ಶ್ರೀಕೃಷ್ಣಾರ್ಘ್ಯಮಂತ್ರಃ

ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ ।
ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥
ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥

ಶ್ರೀ ಕೃಷ್ಣನಿಗೆ ಮೊದಲು ಅರ್ಘ್ಯವನ್ನು ಕೊಟ್ಟು ನಂತರ ಚಂದ್ರನಿಗೆ ಅರ್ಘ್ಯಕೊಡಬೇಕು.

ಚಂದ್ರಪ್ರಾರ್ಥನಾ ಮಂತ್ರಃ -

ಜೋತ್ಸ್ನಾಪತೇ ನಮಸ್ತುಭ್ಯಂ ನಮಸ್ತೇ ಜ್ಯೋತಿಷಾಂ ಪತೇ । ನಮಸ್ತೇ ರೋಹಿಣೀಕಾಂತ ಸುಧಾಕುಂಭ ನಮೋಽಸ್ತು ತೇ ॥ ಈ ಮಂತ್ರದಿಂದ ಚಂದ್ರನನ್ನು ಪ್ರಾರ್ಥಿಸಿ ಅರ್ಘ್ಯವನ್ನು ಕೊಡಬೇಕು.

ಚಂದ್ರಾರ್ಘ್ಯಮಂತ್ರಃ -

ಕ್ಷೀರೋದಾರ್ಣವಸಂಭೂತ ಅತ್ರಿಗೋತ್ರಸಮುದ್ಭವ । ಗೃಹಾಣಾರ್ಘ್ಯಂ ಮಯಾ ದತ್ತಂ ರೋಹಿಣ್ಯಾ ಸಹಿತೋ ಶಶಿನ್ ॥

ಈ ಮಂತ್ರದಿಂದ ಫಲ, ಪುಷ್ಪ, ಗಂಧಗಳ ಸಮೇತ ಶಂಖದಲ್ಲಿ ನೀರನ್ನು ತುಂಬಿಸಿಕೊಂಡು ಚಂದ್ರನಿಗೆ ಅರ್ಘ್ಯವನ್ನು ಕೊಟ್ಟು ಶ್ರೀ ಕೃಷ್ಣನನ್ನು ಸ್ತುತಿಸಬೇಕು.

## ಶ್ರೀಕೃಷ್ಣಸ್ತುತಿ - ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರಮ್

ಶ್ರೀಕೃಷ್ಣಃ ಕಮಲಾನಾಥೋ ವಾಸುದೇವಃ ಸನಾತನಃ । ವಸುದೇವಾತ್ಮಜಃ ಪುಣ್ಯೋ ಲೀಲಾಮಾನುಷವಿಗ್ರಹಃ ॥ ೧ ॥ ಶ್ರೀವತ್ಸಕೌಸ್ತುಭಧರೋ ಯಶೋದಾವತ್ಸಲೋ ಹರಿಃ । ಚತುರ್ಭುಜಾತ್ತಚಕ್ರಾಸಿಗದಾಶಂಖಾದ್ಯುದಾಯುಧಃ ॥ ೨ ॥ ದೇವಕೀನಂದನಃ ಶ್ರೀಶೋ ನಂದಗೋಪ ಪ್ರಿಯಾತ್ಮಜಃ । ಯಮುನಾವೇಗಸಂಹಾರೀ ಬಲಭದ್ರಪ್ರಿಯಾನುಜಃ ॥೩॥ ಪೂತನಾಜೀವಿತಾಹಾರೀ ಶಕಟಾಸುರಭಂಜನಃ । ನಂದವ್ರಜಜನಾನಂದಃ ಸಚ್ಚಿದಾನಂದವಿಗ್ರಹಃ ॥೪॥ ನವನೀತವಿಲಿಪ್ತಾಂಗೋ ನವನೀತನಟೋಽನಘಃ । ನವನೀತನವಾಹಾರೋ ಮುಚುಕುಂದಪ್ರಸಾದಕೃತ್ ॥ ೫॥ ಷೋಡಶಸ್ತ್ರೀಸಹಸ್ರೇಶಸ್ತ್ರಿಭಂಗೀ ಮಧುರಾಕೃತಿಃ । ಶುಕವಾಗಮೃತಾಬ್ಧೀಂದುರ್ಗೋವಿಂದೋ ಯೋಗಿನಾಂ ಪತಿಃ ॥ ೬॥ ವತ್ಸಪಾದಹರೋಽನಂತೋ ಧೇನುಕಾಸುರಭಂಜನಃ । ತೃಣೀಕೃತತೃಣಾವರ್ತೋ ಯಮಳಾರ್ಜುನಭಂಜನಃ ॥ ೭॥ ಉತ್ತಾಲತಾಲಭೇತ್ತಾ ಚ ತಮಾಲಶ್ಯಾಮಲಾಕೃತಿಃ । ಗೋಪಗೋಪೀಶ್ವರೋ ಯೋಗೀ ಕೋಟಿಸೂರ್ಯಸಮಪ್ರಭಃ ॥೮॥ ಇಳಾಪತಿಃ ಪರಂಜ್ಯೋತಿರ್ಯಾದವೇಂದ್ರೋ ಯದೂದ್ವಹ। ವನಮಾಲೀ ಪೀತವಾಸಾಃ ಪಾರಿಜಾತಾಪಹಾರಕಃ ॥ ೯॥ ಗೋವರ್ಧನಾಚಲೋದ್ಧರ್ತಾ ಗೋಪಾಲಃ ಸರ್ವಪಾಲಕಃ । ಅಜೋ ನಿರಂಜನಃ ಕಾಮಜನಕಃ ಕಂಜಲೋಚನಃ ॥ ೧೦॥ ಮಧುಹಾ ಮಧುರಾನಾಥೋ ದ್ವಾರಕಾನಾಯಕೋ ಬಲೀ । ವೃಂದಾವನಾಂತಃಸಂಚಾರೀ ತುಲಸೀದಾಮಭೂಷಣಃ ॥೧೧॥ ಸ್ಯಮಂತಕಮಣೇರ್ಹರ್ತಾ ನರನಾರಾಯಣಾತ್ಮಕಃ । ಕುಬ್ಜಾಗಂಧಾನುಲಿಪ್ತಾಂಗೋ ಮಾಯೀ ಪರಮಪೂರುಷಃ ॥೧೨॥ ಮುಷ್ಟಿಕಾಸುರಚಾಣೂರ ಮಲ್ಲಯುದ್ಧವಿಶಾರದಃ । ಸಂಸಾರವೈರೀ ಕಂಸಾರಿರ್ಮುರಾರಿರ್ನರಕಾಂತಕಃ ॥ ೧೩॥ ಅನಾದಿ ಬ್ರಹ್ಮಚಾರೀ ಚ ಕೃಷಾವ್ಯಸನಕರ್ಷಕಃ । ಶಿಶುಪಾಲಶಿರಚ್ಛೇತ್ತಾ ದುರ್ಯೋಧನಕುಲಾಂತಕಃ ॥೧೪॥ ವಿದುರಾಕ್ರೂರವರದೋ ವಿಶ್ವರೂಪಪ್ರದರ್ಶಕಃ । ಸತ್ಯವಾಕ್ ಸತ್ಯಸಂಕಲ್ಪಃ ಸತ್ಯಭಾಮಾರತೋ ಜಯೀ ॥೧೫॥ ಸುಭದ್ರಾಪೂರ್ವಜೋ ವಿಷ್ಣುರ್ಭೀಷ್ಮಮುಕ್ತಿಪ್ರದಾಯಕಃ । ಜಗದ್ಗುರುರ್ಜಗನ್ನಾಥೋ ವೇಣುನಾದವಿಶಾರದಃ ॥ ೧೬॥ ವೃಷಭಾಸುರವಿಧ್ವಂಸೀ ಬಾಣಾಸುರಕರಾಂತಕಃ । ಯುಧಿಷ್ಠಿರಪ್ರತಿಷ್ಠಾತಾ ಬರ್ಹಿಬರ್ಹಾವತಂಸಕಃ ॥ ೧೭॥ ಪಾರ್ಥಸಾರಥಿರವ್ಯಕ್ತೋ ಗೀತಾಮೃತ ಮಹೋದಧಿಃ। ಕಾಳೀಯಫಣಮಾಣಿಕ್ಯರಂಜಿತ ಶ್ರೀಪದಾಂಬುಜಃ ॥ ೧೮॥ ದಾಮೋದರೋ ಯಜ್ಞಭೋಕ್ತಾ ದಾನವೇಂದ್ರವಿನಾಶನಃ । ನಾರಾಯಣಃ ಪರಂ ಬ್ರಹ್ಮ ಪನ್ನಗಾಶನವಾಹನಃ ॥೧೯॥ ಜಲಕ್ರೀಡಾಸಮಾಸಕ್ತ ಗೋಪೀವಸ್ತ್ರಾಪಹಾರಕಃ। ಪುಣ್ಯಶ್ಲೋಕಸ್ತೀರ್ಥಪಾದೋ ವೇದವೇದ್ಯೋ ದಯಾನಿಧಿಃ ॥೨೦॥ ಸರ್ವತೀರ್ಥಾತ್ಮಕಃ ಸರ್ವಗ್ರಹರೂಪೀ ಪರಾತ್ಪರಃ। ಏವಂ ಕೃಷ್ಣಸ್ಯ ದೇವಸ್ಯ ನಾಮ್ನಾಮಷ್ಟೋತ್ತರಂ ಶತಮ್ ॥ ೨೧॥ ಕೃಷ್ಣೇನ ಕೃಷ್ಣಭಕ್ತಾನಾಂ ಗೀತಂ ಗೀತಾಮೃತಂ ಪುರಾ । ಸ್ತೋತ್ರಂ ಕೃಷ್ಣಪ್ರಿಯತಮಂ ಶ್ರುತಂ ತಸ್ಮಾನ್ಮಯಾ ಪರಮ್ ॥೨೨॥ ಕೃಷ್ಣನಾಮಾಮೃತಂ ನಾಮ ಪರಮಾನಂದಕಾರಣಮ್ । ಈತಿಬಾಧಾದಿ-ದುಃಖಘ್ನಂ ಪರಮಾಯುಷ್ಯವರ್ಧನಮ್

॥ ೨೩ ॥ ದಾನಂ ವ್ರತಂ ತಪಸ್ತೀರ್ಥಂ ಯತ್ಕೃತಂ ತ್ವಿಹ ಜನ್ಮನಿ । ಜಪತಾಂ ಶೃಣ್ವತಾಮೇತತ್ ಕೋಟಿಕೋಟಿಗುಣಂ ಭವೇತ್ ॥ ೨೪॥ ಪುತ್ರಪ್ರದಮಪುತ್ರಾಣಾಮಗತೀನಾಂ ಗತಿಪ್ರದಮ್ । ಧನಾವಹಂ ದರಿದ್ರಾಣಾಂ ಜಯೇಚ್ಛೂನಾಂ ಜಯಾವಹಮ್ ॥ ೨೫ ॥ ಶಿಶೂನಾಂ ಗೋಕುಲಾನಾಂ ಚ ಪುಷ್ಟಿದಂ ಪೂರ್ಣಪುಣ್ಯದಮ್ । ಬಾಲರೋಗಗ್ರಹಾದೀನಾಂ ಶಮನಂ ಶಾಂತಿಮುಕ್ತಿದಮ್ ॥೨೬॥ ಸಮಸ್ತಕಾಮದಂ ಸದ್ಯಃ ಕೋಟಿಜನ್ಮಾಘನಾಶನಮ್ । ಅಂತೇ ಕೃಷ್ಣಸ್ಮರಣದಂ ಭವತಾಪತ್ರಯಾಪಹಮ್ ॥ ೨೭॥ ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ । ನಾಥಾಯ ರುಗ್ಮಿಣೀಶಾಯ ನಮೋ ವೇದಾಂತವೇದಿನೇ ॥ ೨೮॥ ಇಮಂ ಮಂತ್ರಂ ಜಪನ್ ದೇವಿ ವ್ರಜಂಸ್ತಿಷ್ಠನ್ ದಿವಾನಿಶಿ । ಸರ್ವಗ್ರಹಾನುಗ್ರಹಭಾಕ್ ಸರ್ವಪ್ರಿಯತಮೋ ನರಃ ॥ ೨೯॥ ಪುತ್ರಪೌತ್ರೈಃ ಪರಿವೃತಃ ಸರ್ವಸಿದ್ಧಿಸಮೃದ್ಧಿಮಾನ್। ನಿರ್ವಿಶ್ಯ ಭೋಗಾನಂತೇಽಪಿ ಕೃಷ್ಣಸಾಯುಜ್ಯಮಾಪ್ನುಯಾತ್॥೩೦॥

॥ ಇತಿ ಶ್ರೀನಾರದಪಂಚರಾತ್ರೇ ಜ್ಞಾನಾಮೃತಸಾರೇ ಉಮಾಮಹೇಶ್ವರ-ಸಂವಾದೇ ಧರಣೀಶೇಷಸಂವಾದೇ ಶ್ರೀಕೃಷ್ಣಾಷ್ಟೋತ್ತರ ಶತನಾಮಸ್ತೋತ್ರಂ ಸಂಪೂರ್ಣಮ್ ॥ ಶ್ರೀಕೃಷ್ಣಾರ್ಪಣಮಸ್ತು॥

## ಶ್ರೀ ಕೃಷ್ಣಪ್ರಾರ್ಥನಾ ಮಂತ್ರ

ಅನಘಂ ವಾಮನಂ ಶೌರಿಂ ಗೋವಿಂದಂ ಪುರುಷೋತ್ತಮಮ್ ।
ವಾಸುದೇವಂ ಹೃಷೀಕೇಶಂ ಮಾಧವಂ ಮಧುಸೂದನಮ್ ॥ ೧ ॥
ದಾಮೋದರಂ ಪದ್ಮನಾಭಂ ಕೇಶವಂ ಗರುಡಧ್ವಜಮ್ ।
ಗೋವಿಂದಮಚ್ಯುತಂ ಕೃಷ್ಣಮನಂತಮಪರಾಜಿತಮ್ ॥ ೨॥
ಅಧೋಕ್ಷಜಂ ಜಗದ್ಬೀಜಂ ಸರ್ವಸ್ಥಿತ್ಯಂತಕಾರಿಣಮ್ ।
ಅನಾದಿನಿಧನಂ ವಿಷ್ಣುಂ ದೇವದೇವಂ ತ್ರಿವಿಕ್ರಮಮ್ ॥ ೩॥
ನಾರಾಯಣಂ ಚತುರ್ಬಾಹುಂ ಶಂಖಚಕ್ರಗದಾಧರಮ್ ।
ಪೀತಾಂಬರಧರಂ ಸೌಮ್ಯಂ ವನಮಾಲಾದಿಭೂಷಿತಮ್ ॥ ೪ ॥
ಶ್ರೀವತ್ಸವಕ್ಷಸಂ ಶ್ರೀಶಂ ಶ್ರೀಧರಂ ಶ್ರೀಪತಿಂ ಹರಿಮ್ ।
ಉಪೇಂದ್ರಂ ದೇವಕೀಸೂನುಂ ಪ್ರಣಮಾಮಿ ಪ್ರಜಾಪತಿಮ್ ॥ ೫॥
ನಾಮಾನ್ಯೇತಾನಿ ಸಂಕೀರ್ತ್ಯ ಪ್ರೀತ್ಯರ್ಥಂ ಪ್ರಾರ್ಥಯೇದ್ಬುಧಃ ।
ಪುಷ್ಕರಾಕ್ಷ ನಿಮಗ್ನೋಽಹಂ ಮಹತ್ಯಜ್ಞಾನಸಾಗರೇ ॥
ತ್ರಾಹಿ ಮಾಂ ದೇವದೇವೇಶ ಮಹಾಸಂಸಾರಸಾಗರಾತ್ ॥ ೬ ॥

॥ ಇತಿ ಶ್ರೀಭವಿಷ್ಯೋತ್ತರ ಪುರಾಣೇ ಶ್ರೀಕೃಷ್ಣಪ್ರಾರ್ಥನಾಮಂತ್ರಃ ಸಂಪೂರ್ಣಃ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಏಕಾದಶೀ ದಿನದಂತೆ ಶ್ರೀಕೃಷ್ಣಜಯಂತಿಯ ದಿನ ಒಂದು ಸಲ ಮಾತ್ರ ತೀರ್ಥಪ್ರಾಶನ ಮಾಡಬೇಕು. (ಯಥಾ ಪ್ರೋಕ್ತಂ ತೀರ್ಥಪಾನಮೇಕಾದಶ್ಯಾಂ ಪುರಾ ಮಯಾ । ತದ್ವತ್ತೀರ್ಥಂ ಪಿಬೇದ್ಭಕ್ತ್ಯಾ ಏಕವಾರಂ ನ ಸಂಶಯಃ ॥ -- ಪಾಂಚರಾತ್ರಾಗಮ ಅ. -೬೪)

ನಂತರ ಗೀತಾ, ಹರಿವಂಶ, ಭಾಗವತ, ಮೊದಲಾದ ಶಾಸ್ತ್ರ ಪುರಾಣಗಳ ಶ್ರವಣಾದಿಗಳನ್ನು ಮಾಡುತ್ತ ಸೂರ್ಯೋದಯವಾಗುವವರೆಗೂ ಜಾಗರಣ ಮಾಡಬೇಕು. ಆ ದಿನ ರಾತ್ರಿ ಪುರಾಣಶ್ರವಣದಿಂದ ಕೋಟಿಜನ್ಮಾರ್ಜಿತ ಪಾಪ ಪರಿಹಾರವಾಗುವದು.

ಮರುದಿನ ಪ್ರತಿದಿನದಂತೆ ನಿತ್ಯಾಹ್ನಿಕ ಕರ್ಮಗಳನ್ನು ಮಾಡಿ ದೇವರ ನೈವೇದ್ಯಕ್ಕೆ ಹಬ್ಬದ ಅಡಿಗೆ ಮಾಡಬೇಕು. ಪೂಜಾದಿಗಳ ನಂತರ ಹಿರಿಯರಿಂದ ತೀರ್ಥಸ್ವೀಕರಿಸಿ ಪಾರಣ ಮಾಡಬೇಕು. ಮರುದಿನ ಅಷ್ಟಮೀ ತಿಥಿ ಕಳೆದ ಮೇಲೆ ಪಾರಣ. ತಿಥಿ ನಕ್ಷತ್ರ ಎರಡೂ ಸೇರಿದ ಜಯಂತೀ ವ್ರತದಲ್ಲಿ ತಿಥಿ ಹಾಗೂ ನಕ್ಷತ್ರ ಎರಡೂ ಕಳೆದ ಮೇಲೆಯೇ ಪಾರಣ ಮಾಡಬೇಕು.

ಪ್ರತಿವರ್ಷ ಶ್ರೀ ಕೃಷ್ಣಜನ್ಮಾಷ್ಟಮೀ ವ್ರತವನ್ನು ವಿಧ್ಯುಕ್ತವಾಗಿ ಆಚರಿಸುವ ನರನಾರಿಯರಿಗೆ ಅತುಲ ಸೌಭಾಗ್ಯ ಲಭಿಸುವದು. ಮರಣಾನಂತರ ವೈಕುಂಠಲೋಕವೂ ದೊರೆಯುವುದು ಎಂದು ಪುರಾಣವಚನಗಳು ಸಾರುತ್ತಿವೆ.

**೪) ಶ್ರೀವಿಷ್ಣುಪಂಚಕವ್ರತ ಮತ್ತು ಅರ್ಘ್ಯ :**

ಶ್ರೀವಿಷ್ಣುಪ್ರೀತ್ಯರ್ಥವಾಗಿ ಪ್ರತಿ ತಿಂಗಳಿನಲ್ಲಿ ೫ ಉಪವಾಸಗಳಂತೆ ೧೨ ತಿಂಗಳು ಆಚರಿಸುವ ವ್ರತವು ವಿಷ್ಣು ಪಂಚಕವ್ರತವು . ಈ ವ್ರತವನ್ನು ಸ್ತ್ರೀ ಪುರುಷರಿಬ್ಬರೂ ಆಚರಿಸಬೇಕು.

**ವಿಷ್ಣುಪಂಚಕ ನಿರ್ಣಯ :**

ಪ್ರೋಷ್ಠಪದ್ಯಾ ಸಿತೇ ಪಕ್ಷೇ ದ್ವಾದಶ್ಯಾಂ ಶ್ರವಣಂ ಯದಾ । ತದಾರಭ್ಯ ವ್ರತಂ ಕಾರ್ಯಂ ಮಾರ್ಗಶೀರ್ಷೇಽಥವಾ ನೃಪ ॥ ಏಕಾದಶ್ಯಾಮುಪವಸೇತ್ ಪ್ರತಿಪಕ್ಷಂ ಚ ಪರ್ವಣಿ । ಶ್ರವಣೇ ಚ ತಥೋಪೋಷ್ಯ ಪೂಜಯೇದ್ಗರುಡಧ್ವಜಂ ॥ (ಭವಿಷ್ಯತ್ಪುರಾಣ)। ಮಾಸಿ ಭಾದ್ರಪದೇ ಶುಕ್ಲೇ ಶ್ರವಣೇನ ಯುತಾ ಯದಿ । ಏಕಾದಶೀ ತದಾ ಗ್ರಾಹ್ಯಂ ವ್ರತಂ ವರ್ಷಾತ್ಮಕಂ ಶುಭಮ್॥ ಪ್ರಾರಂಭದಿವಸೇ ಪ್ರಾಪ್ತೇ ಸ್ವಸ್ತಿವಾಚನಪೂರ್ವಕಂ। ಸಂಕಲ್ಪಂ ವಿಧಿವತ್ ಕುರ್ಯಾತ್ ವ್ರತಮಾವತ್ಸರಂ ಕ್ರಮಾತ್ ॥ ಮಾರ್ಗಶೀರ್ಷೇಽಥವಾ ಕುರ್ಯಾದೇಕಾದಶ್ಯಾಂ ಸಿತೇ ಶುಭೇ। ಹೀನಾಯಾಂ ವಿಷ್ಣುಭೇನಾಪಿ ವ್ರತಮೇತತ್ ಸಮಾಚರೇತ್ ॥

ಭಾದ್ರಪದ ಮಾಸ ಶುಕ್ಲಪಕ್ಷದಲ್ಲಿ ದ್ವಾದಶೀ ದಿನದಲ್ಲಿ ಶ್ರವಣ ನಕ್ಷತ್ರವು ಬಂದಾಗ ವಿಷ್ಣು ಪ್ರೀತ್ಯರ್ಥವಾಗಿ ವಿಷ್ಣುಪಂಚಕವ್ರತವನ್ನು ಆರಂಭಿಸಬೇಕು. ಅಥವಾ ಮಾರ್ಗಶಿರಮಾಸ ಶುಕ್ಲಪಕ್ಷ ಏಕಾದಶೀ ದಿನದಲ್ಲಿ ಶ್ರವಣ ನಕ್ಷತ್ರವು ಬರುವ ಸಂಭವವಿಲ್ಲದಿದ್ದರೂ ವಿಷ್ಣುಪಂಚಕವ್ರತವನ್ನು ಆರಂಭಿಸಬಹುದು. ಒಂದು ತಿಂಗಳಿನಲ್ಲಿ ಶುಕ್ಲಪಕ್ಷ ಏಕಾದಶೀ , ಪೂರ್ಣಿಮಾ, ಕೃಷ್ಣಪಕ್ಷ ಏಕಾದಶೀ, ಶ್ರವಣ ನಕ್ಷತ್ರ, ಅಮಾವಾಸ್ಯೆ ಹೀಗೆ ೫ ದಿನಗಳಲ್ಲಿ ೫

ಉಪೋಷಣೆಗಳಂತೆ ಒಂದು ವರ್ಷದಲ್ಲಿ ೬೦ ಉಪೋಷಣೆಗಳನ್ನು ಮಾಡಬೇಕು. ಆರಂಭಕಾಲದಲ್ಲಿ ಪುಣ್ಯಾಹವಾಚನವನ್ನು ಮಾಡಿ ಗುರುದೇವತೆಗಳನ್ನು ಪ್ರಾರ್ಥಿಸಿ ಈ ವ್ರತವನ್ನು ಆರಂಭಿಸಬೇಕು. **ತರ್ಪಣಂ :** ಏಕಾದಶ್ಯಾಂ ಸಿತೇ ಪಕ್ಷೇ ಕೃತ್ವೋಪೋಷ್ಯಂ ತನೂದ್ಭವ । ತರ್ಪಣಂ ತತ್ರ ಕರ್ತವ್ಯಂ ಮಂತ್ರೈರ್ದ್ವಾದಶಭಿಃ ಕ್ರಮಾತ್ ॥ ಏಕಾದಶ್ಯಾಂ ತಥಾ ಕೃಷ್ಣೇ ತಥಾ ಪರ್ವದ್ವಯೇಽಪಿ ಚ । ಶ್ರವಣೇಽಪಿ ಚ ತನ್ಮಂತ್ರೈಃ ಕುರ್ಯಾದ್‌ದ್ವಾದಶಭಿಃ ಕ್ರಮಾತ್॥ ಅಥವೋದ್ಯಾಪನೇ ಕಾಲೇ ತರ್ಪಣಂ ಸಕಲಂ ಚರೇತ್ ॥ -ಒಂದೊಂದು ಉಪವಾಸದಲ್ಲಿಯೂ ಗರುಡಧ್ವಜ ನಾಮಕನಾದ ನಾರಾಯಣನನ್ನು ಭಕ್ತಿಯಿಂದ ಪೂಜಿಸಿ ಕೇಶವಾದಿ ತತ್ತದ್ದೇವತಾ ದ್ವಾದಶ ನಾಮಗಳಿಂದ ತರ್ಪಣವನ್ನು ಕೊಡಬೇಕು. ಅಥವಾ ಉದ್ಯಾಪನೆಯ ಕಾಲದಲ್ಲಿ ಒಟ್ಟಿಗಾದರೂ ೬೦ ದೇವತೆಗಳನ್ನು ಉದ್ದೇಶಿಸಿ ತರ್ಪಣವನ್ನು ಕೊಡಬೇಕು.

**ವಿಷ್ಣುಪಂಚಕ ವ್ರತದ ದೇವತೆಗಳು ಮತ್ತು ತರ್ಪಣ —**

**(೧) ಶುಕ್ಲ ದ್ವಾದಶೀ :** ೧) ಕೇಶವಾಯ ನಮಃ, ಕೇಶವಂ ತರ್ಪಯಾಮಿ ---- ೧೨) ದಾಮೋದರಾಯ ನಮಃ , ದಾಮೋದರಂ ತರ್ಪಯಾಮಿ (೧೨ ನಾಮಗಳು). **(೨) ಕೃಷ್ಣ ದ್ವಾದಶೀ :** ೧) ಸಂಕರ್ಷಣಾಯ ನಮಃ, ಸಂಕರ್ಷಣಂ ತರ್ಪಯಾಮಿ. ---- ಶ್ರೀಕೃಷ್ಣಾಯ ನಮಃ ಶ್ರೀಕೃಷ್ಣಂ ತರ್ಪಯಾಮಿ (೧೨ ನಾಮಗಳು). **(೩) ಪೌರ್ಣಿಮಾ :** ೧) ವಿಧವೇ ನಮಃ ವಿಧುಂ ತರ್ಪಯಾಮಿ. ೨) ಶಶಿನೇ ನ. ಶಶಿನಂ ತ. ೩) ಶಶಾಂಕಾಯ ನ. ಶಶಾಂಕಂ ತ. ೪) ಚಂದ್ರಾಯ ನ. ಚಂದ್ರ ತ. ೫) ಸೋಮಾಯ ನ. ಸೋಮಂ ತ. ೬) ಉಡುಪಾಯ ನ. ಉಡುಪಂ ತ. ೭) ಅಮೃತಾಯ ನ. ಅಮೃತಂ ತ. ೮) ಮನೋಹರಾಯ ನ. ಮನೋಹರಂ ತಂ. ೯)ಪಾವನಾಯ ನ. ಪಾವನಂ ತ. ೧೦) ಹಿಮಕೃತೇ ನ. ಹಿಮಕೃತಂ ತ. ೧೧) ನಿಶಾಕೃತೇ ನಮಃ. ನಿಶಾಕೃತಂ ತ. ೧೨) ದೀಪ್ಯಮಾನಾಯ ನ. ದೀಪ್ಯಮಾನಂ ತ. **(೪) ಅಮಾವಾಸ್ಯಾ:** ೧) ಮಹೀಧರಾಯ ನ. ಮ.ತ. ೨) ಜಗನ್ನಾಥಾಯ ನ. ಜ.ತ. ೩) ದೇವೇಂದ್ರಾಯ ನ. ದೇ. ತ. ೪) ದೇವಕೀಸುತಾಯ ನ. ದೇ. ತ. ೫) ಚತು-ರ್ಭುಜಾಯ ನ. ಚ. ತ. ೬) ಗದಾಪಾಣಯೇ ನ. ಗದಾಪಾಣಿಂ ತ. ೭) ಸುರಮೀಢಾಯ ನ. ಸು. ತ. ೮) ಸುಲೋಚನಾಯ ನ. ಸು. ತ. ೯) ಚಾರ್ವಂಗಾಯ ನ ಚಾ. ತ. ೧೦) ಚಕ್ರಪಾಣಯೇ ನ. ಚಕ್ರಪಾಣಿಂ ತ. ೧೧) ಸುರಮಿತ್ರಾಯ ನ. ಸು.ತ. ೧೨) ಅಸುರಾಂತಕಾಯ ನ. ಅ. ತ. **೫) ಶ್ರವಣಾ :** ೧) ಪುರುಷೋತ್ತಮಾಯ ನ. ಪು.ತ. ೨) ಶಾರ್ಙ್ಗಧನ್ವಿನೇ ನ. ಶಾರ್ಙ್ಗಧನ್ವಾನಂ ತ. ೩) ಗರುಡಧ್ವಜಾಯ ನ. ಗ. ತ. ೪) ಅನಂತಾಯ ನ. ಅ. ತ. ೫) ಗೋವರ್ಧನಾಯ ನ. ಗೋ. ತ. ೬) ಪುಂಡರೀಕಾಕ್ಷಾಯ ನ. ಪು. ತ. ೭) ನಿತ್ಯಾಯ ನ. ನಿ. ತ. ೮) ವೇದಗರ್ಭಾಯ ನ. ವೇ. ತ. ೯) ಯಜ್ಞಪುರುಷಾಯ ನ. ಯ. ತ. ೧೦) ಸುಬ್ರಹ್ಮಣ್ಯಾಯ ನ. ಸು. ತ. ೧೧) ಜಯಾಯ ನ. ಜ.ತ. ೧೨) ಶೌರಯೇ ನ. ಶೌರಿಂ ತ.

**ನ. = ನಮಃ. ತ. = ತರ್ಪಯಾಮಿ.**

ಉಪವಾಸದ ದಿನ ಭಾಗವತಾದಿ ಪುರಾಣ ಶ್ರವಣ, ಶ್ರೀ ಹರಿಕಥಾಮೃತ-ಸಾರಾದಿ ಗ್ರಂಥ ಪಠಣ ಮಾಡುತ್ತ ಕಾಲ ಕಳೆದು ಮರುದಿನ ಪಾರಣೆಯ ದಿನ ಬ್ರಾಹ್ಮಣ ದಂಪತಿಗಳ ಭೋಜನ ಮಾಡಿಸಬೇಕು.

**ಉದ್ಯಾಪನೆ -**

ಉದ್ಯಾಪನಂ ತತಃ ಕಾರ್ಯಮಾದೌ ಮಧ್ಯೇ ಪ್ರಯತ್ನತಃ । ಅಂತೇ ವಾಪಿ ಪ್ರಕರ್ತವ್ಯಂ ವ್ರತಸಾದ್ಗುಣ್ಯಸಿದ್ಧಯೇ ॥ (ಭವಿಷ್ಯೋತ್ತರ ಪುರಾಣ) ಎಂಬ ವಚನದಂತೆ ಆರಂಭ, ಮಧ್ಯ ಅಥವಾ ಕೊನೆ ಈ ಮೂರರಲ್ಲಿ ಯಾವ ಕಾಲದಲ್ಲಿ ಅನುಕೂಲವೋ ಆಗ ಈ ವ್ರತದ ಉದ್ಯಾಪನೆಯನ್ನು ಮಾಡಬೇಕು. ಉದ್ಯಾಪನೆ ಮಾಡುವುದು ವ್ರತದ ಪೂರ್ಣಫಲಕ್ಕೆ ಕಾರಣವಾಗುತ್ತದೆ. ಉದ್ಯಾಪನೆಯ ದಿನ ೫ ಕ್ಕೆ ಕಡಿಮೆ ಇಲ್ಲದಷ್ಟು ಯಥಾಶಕ್ತಿ ದಂಪತಿಗಳನ್ನು ಆಮಂತ್ರಿಸಿ ಅವರಿಗೆ ಸೀರಿ, ಖಣ, ಧೋತರಗಳನ್ನು, ಕೊಟ್ಟು ಭೋಜನ ಮಾಡಿಸಬೇಕು.

ಯತ್ ಕೃತ್ವಾ ಮುಚ್ಯತೇ ಜಂತುರ್ಮಹತಃ ಪಂಚಪಾತಕಾತ್। (ಭವಿಷ್ಯೋತ್ತರ ಪುರಾಣ) ಎಂಬ ವಚನಾನುಸಾರ ವಿಷ್ಣುಪಂಚಕ ವ್ರತವನ್ನು ಆಚರಿಸುವವರು ಪಂಚ ಮಹಾಪಾತಕಗಳಿಂದಲೂ ಮುಕ್ತರಾಗುತ್ತಾರೆ.

**೫) ಧನುರ್ಮಾಸ ವ್ರತ :**

ಧನುರ್ಮಾಸದಲ್ಲಿ ದೇವತೆಗಳು ತಮ್ಮ ಅರುಣೋದಯಕಾಲದಲ್ಲಿ ದೇವರನ್ನು ಪೂಜಿಸಿದುದರಿಂದ ಮನುಷ್ಯರು ದೇವತೆಗಳ ಅರುಣೋದಯ ಕಾಲವಾದ ಧನುರ್ಮಾಸದಲ್ಲಿ ತಮ್ಮ ಅರುಣೋದಯ ಕಾಲದಲ್ಲಿ ದೇವರನ್ನು ಪೂಜಿಸಬೇಕು. ಅರುಣೋದಯ ಕಾಲದಲ್ಲಿ ಪೂಜೆಯನ್ನು ಮಾಡದವನು ಏಳು ಜನ್ಮಗಳಲ್ಲಿ ದರಿದ್ರನೂ ಕುಷ್ಠರೋಗಿಯೂ ಆಗುತ್ತಾನೆ. ಪೂಜಿಸುವವನು ನಿರೋಗಿಯೂ ಪ್ರತಿಜನ್ಮದಲ್ಲಿ ವೈಷ್ಣವನೂ ಆಗುತ್ತಾನೆ.

ಈ ಪೂಜೆ ನಿತ್ಯವೆನಿಸುತ್ತದೆ. ಧನುರ್ಮಾಸದ ಪೂಜೆಯನ್ನು ಮೊದಲು ಮಾಡಿ, ಆಮೇಲೆ ಅರ್ಘ್ಯ, ಗಾಯತ್ರಿಜಪ ಮತ್ತು ಸೂರ್ಯೋಪಸ್ಥಾನವನ್ನು ಮಾಡಬೇಕು. ಈ ಪೂಜೆಯಲ್ಲಿ ಅರುಣೋದಯ ಕಾಲ ಮುಖ್ಯ. ನಕ್ಷತ್ರಗಳು ಮರೆಯಾದ ಸಮಯ ಮಧ್ಯಮ. ಸೂರ್ಯೋದಯಾನಂತರ ಕಾಲ ಅಧಮ, ಮಧ್ಯಾಹ್ನಕಾಲ ನಿಷ್ಫಲವಾಗುತ್ತದೆ. ಮುದ್ಗಾನ್ನದಲ್ಲಿ (ಹುಗ್ಗಿ)ಅಕ್ಕಿಗೆ ಹೆಸರುಬೇಳೆ ದ್ವಿಗುಣವಾಗಿದ್ದರೆ ಉತ್ತಮೋತ್ತಮ, ಸಮವಾಗಿದ್ದರೆ ಉತ್ತಮ, ಅರ್ಧವಾಗಿದ್ದರೆ ಮಧ್ಯಮ, ಕಾಲುಭಾಗವಾಗಿದ್ದರೆ ಅಧಮವೆನಿಸುತ್ತದೆ.

ಅಕ್ಕಿಯ ಪ್ರಮಾಣಕ್ಕಿಂತ ಅರ್ಧಕ್ಕೆ ಕಡಿಮೆಯಿಲ್ಲದೆ ಅವರವರು ತಮ್ಮ ಶಕ್ತಿಯನ್ನು ಅನುಸರಿಸಿ ಹೆಸರುಬೆಳೆಯನ್ನು ಸೇರಿಸಬೇಕು. ಶುಂಠಿಮಿಶ್ರಿತ ಹುಗ್ಗಿಯನ್ನು ಧನುರ್ಮಾಸದಲ್ಲಿ ನಾರಾಯಣನಿಗೆ ಅರ್ಪಿಸಿ ಶಚೀದೇವಿಯು ದುಃಖದಿಂದ ಮುಕ್ತಳಾದಳು. ಮೊಸರು, ಬೆಲ್ಲ ಮತ್ತು ಶುಂಠಿ ಮಿಶ್ರಿತವಾದ ತ್ರಿವಿಧ ಮುದ್ಗಾನ್ನವನ್ನು ದೇವರಿಗೆ ಅರ್ಪಿಸಿ ಪ್ರಾತಃಕಾಲದಲ್ಲಿ ಬ್ರಾಹ್ಮಣಭೋಜನ ಮಾಡಿಸಬೇಕು.

ಪೂಜಾನಂತರದಲ್ಲಿ ಪಠಿಸಬೇಕಾದ

**॥ ಭದ್ರಲಕ್ಷ್ಮೀ ಸ್ತೋತ್ರಂ ॥**

**ಶ್ರೀದೇವೀ ಪ್ರಥಮಂ ನಾಮ ದ್ವಿತೀಯಮಮೃತೋದ್ಭವಾ ।**
**ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಲೋಕಸುಂದರೀ ॥**

ಪಂಚಮಂ ವಿಷ್ಣುಪತ್ನೀತಿ ಷಷ್ಠಂ ಶ್ರೀವೈಷ್ಣವೀತಿ ಚ ।
ಸಪ್ತಮಂ ತು ವರಾರೋಹಾ ಅಷ್ಟಮಂ ಹರಿವಲ್ಲಭಾ ॥
ನವಮಂ ಶಾರ್ಙ್ಗಿಣೀ ಪ್ರೋಕ್ತಾ ದಶಮಂ ದೇವದೇವಿಕಾ ।
ಏಕಾದಶಂ ಮಹಾಲಕ್ಷ್ಮೀರ್ದ್ವಾದಶಂ ಲೋಕಸುಂದರೀ ॥
ಶ್ರೀಃ ಪದ್ಮಾ ಕಮಲಾ ಮುಕುಂದಮಹಿಷೀ ಲಕ್ಷ್ಮೀಸ್ತ್ರಿಲೋಕೇಶ್ವರೀ ।
ಮಾ ಕ್ಷೀರಾಬ್ಧಿಸುತಾಽರವಿಂದಜನನೀ ವಿದ್ಯಾ ಸರೋಜಾತ್ಮಿಕಾ ॥
ಸರ್ವಾಭೀಷ್ಟಫಲಪ್ರದೇತಿ ಸತತಂ ನಾಮಾನಿ ಯೇ ದ್ವಾದಶ ।
ಪ್ರಾತಃ ಶುದ್ಧತರಾಃ ಪಠಂತಿ ಸತತಂ ಸರ್ವಾಂಲ್ಲಭಂತೇ ಶುಭಾನ್ ॥
ಭದ್ರಲಕ್ಷ್ಮೀಸ್ತವಂ ನಿತ್ಯಂ ಪುಣ್ಯಮೇತಚ್ಛುಭಾವಹಮ್ ।
ಕಾಲೇ ಸ್ನಾತ್ವಾಽಪಿ ಕಾವೇರ್ಯಾಂ ಜಪ ಶ್ರೀವೃಕ್ಷಸನ್ನಿಧೌ ॥
॥ಇತಿ ಶ್ರೀ ಭದ್ರಲಕ್ಷ್ಮೀಸ್ತೋತ್ರಂ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು ॥

ಎಂಬ ಭದ್ರಲಕ್ಷ್ಮೀ ಸ್ತುತಿಯನ್ನು ಪೂಜಾನಂತರದಲ್ಲಿ ಪಠಿಸಬೇಕು.

ಧನುರ್ಮಾಸದಲ್ಲಿ ವ್ಯತೀಪಾತಯೋಗದಲ್ಲಿ ಅರುಣೋದಯ ಕಾಲದಲ್ಲಿ ವಿಷ್ಣುವನ್ನು ಪೂಜಿಸಿ -

ವ್ಯತೀಪಾತ ಮಹಾಸತ್ವ ಸರ್ವಪಾಪಪ್ರಣಾಶನ ।
ಸಹಸ್ರಬಾಹೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ವ್ಯತೀಪಾತ ನಮಸ್ತೇಽಸ್ತು ನಮಸ್ತೇ ವಿಶ್ವಮಂಗಲ ।
ವಿಷ್ಣುಚಕ್ರಸ್ವರೂಪಾಯ ನಮಸ್ತೇ ದಿವ್ಯತೇಜಸೇ ॥

ಎಂಬ ಮಂತ್ರದಿಂದ ವಿಷ್ಣುಚಕ್ರರೂಪಿಯಾದ ವ್ಯತೀಪಾತ ದೇವತೆಗೆ ಅರ್ಘ್ಯವನ್ನು ಕೊಡಬೇಕು. ಆಮೇಲೆ ದಕ್ಷಿಣಾಭಿಮುಖವಾಗಿ ವಂಶದ್ವಯಪಿತೃಗಳ ತೃಪ್ತಿಗಾಗಿ ಅವರನ್ನು ಸ್ಮರಿಸುತ್ತಾ -

ವಿಷ್ಣುಪ್ರಿಯ ವ್ಯತೀಪಾತ ಪಿತೄಣಾಮನೃಣಪ್ರದ ।
ಪಿತೄಣಾಂ ಮಮ ವೈಕುಂಠಂ ಪ್ರಯಚ್ಛ ಭಗವನ್ ಹರೇ ॥
ತ್ವತ್ಪ್ರಸಾದೇನ ಮೇ ಭಕ್ತಿರಸ್ತ್ವೇವಮನಪಾಯಿನೀ ।
ಜ್ಞಾನವಿಜ್ಞಾನವೈರಾಗ್ಯಂ ಪ್ರಯಚ್ಛ ಭಗವನ್ಮಮ ॥

ಎಂಬ ಮಂತ್ರದಿಂದ ತರ್ಪಣವನ್ನು ಕೊಡಬೇಕು.

ಈ ವ್ಯತೀಪಾತ ದಿನದ ಪೂಜೆಯು ಅರ್ಧೋದಯಾದಿ ಮಹಾಪುಣ್ಯಕಾಲಕ್ಕಿಂತ ಸಹಸ್ರಪಾಲು ಅಧಿಕಪುಣ್ಯಪ್ರದವಾಗಿದೆ. ಸಾಧನದ್ವಾದಶೀದಿನದಲ್ಲಿ ಕರ್ಮಸಂಕೋಚವನ್ನು ಮಾಡಿಕೊಂಡು ಹರಿಯನ್ನು ಪೂಜಿಸಿ ಪಾರಣೆಯನ್ನು ಮಾಡಿದಂತೆ ಧನುರ್ಮಾಸದಲ್ಲಿಯೂ ಮಾಡಬೇಕು. ಈ ವಿಷಯವು -

**ಯಥಾ ಸಂಕೋಚ್ಯ ಸತ್ಕರ್ಮ ಭುಂಕ್ತೇऽಲ್ಪದ್ವಾದಶೀದಿನೇ ।**
**ತಥಾ ಪ್ರಾತರ್ಧನುರ್ಮಾಸೇ ಕೃತ್ವಾ ಕರ್ಮಾರ್ಚಯೇಚ್ಚ ಮಾಮ್ ॥**

ಇತ್ಯಾದಿ ಸ್ಮೃತಿಮುಕ್ತಾವಳಿಯಲ್ಲಿ ಉದಾಹೃತವಾದ ಪ್ರಮಾಣ ವಚನದಿಂದ ಸಿದ್ಧವಾಗುತ್ತದೆ. ಈ ಮಾಸದಲ್ಲಿ ಪೂಜೆಯು ಮುಖ್ಯವೇ ಹೊರತು ಭೋಜನವಲ್ಲ. ಆದ್ದರಿಂದ ಪೂಜೆಯನ್ನು ಮಾಡಿ ದೇವ, ಋಷಿ, ಪಿತೃತರ್ಪಣ ವೈಶ್ವದೇವಾದಿಕರ್ಮಗಳನ್ನು ಮುಗಿಸಿ ಬ್ರಾಹ್ಮಣ ಭೋಜನಾನಂತರದಲ್ಲಿ ತಾನೂ ಭೋಜನವನ್ನು ಪ್ರಾತಃಕಾಲದಲ್ಲಿಯೇ ಮಾಡಿದರೂ ಮಾಡಬಹುದು. ಅಥವಾ ಮಧ್ಯಾಹ್ನದಲ್ಲಿ ಪುನಃ ಪೂಜೆಯನ್ನು ಮಾಡಿ ಭೋಜನವನ್ನು ಮಾಡಿದರೂ ಮಾಡಬಹುದು. ಎರಡು ವಿಧವಾದ ಸಂಪ್ರದಾಯಗಳೂ ಲೋಕವ್ಯವಹಾರದಲ್ಲಿವೆ.

**೬) ಅಧಿಕಮಾಸ ವ್ರತ –**

ಯಾವ ಚಾಂದ್ರಮಾಸದಲ್ಲಿ ಒಂದೂ ರವಿಸಂಕ್ರಮಣವು ಸಂಭವಿಸುವುದಿಲ್ಲವೋ ಅಥವಾ ಎರಡು ಸಂಕ್ರಾಂತಿಗಳು ಬರುತ್ತವೆಯೋ ಅಂತಹ ಚಾಂದ್ರಮಾನ ಮಾಸಕ್ಕೆ ಅಧಿಕಮಾಸ ಅಥವಾ ಮಲಮಾಸ ಎಂದು ಹೆಸರು. 'ಪುರುಷೋತ್ತಮರೂಪೀ' ಶ್ರೀಹರಿಯು ಈ ಮಾಸಕ್ಕೆ ನಿಯಾಮಕನಾಗಿದ್ದರಿಂದ ಇದಕ್ಕೆ 'ಪುರುಷೋತ್ತಮ ಮಾಸ' ಎಂದೂ ಹೆಸರು. ಅನೇಕ ಮಂಗಳಕಾರ್ಯಗಳಿಗೆ ಈ ಮಾಸವು ನಿಷಿದ್ಧವಾಗಿರುವುದರಿಂದ ಇದಕ್ಕೆ ' ಮಲಮಾಸ' ಎಂದು ಹೆಸರು ಬಿದ್ದಿದೆ.

**ಅಧಿಕಮಾಸದ ಮುಖ್ಯ ಕರ್ತವ್ಯ -**

**ಅಧಿಮಾಸೇ ತು ಸಂಪ್ರಾಪ್ತೇ ಗುಡಸರ್ಪಿರ್ಯುತಾನಿ ಚ ।**
**ತ್ರಯಸ್ತ್ರಿಂಶದಪೂಪಾನಿ ದಾತವ್ಯಾನಿ ದಿನೇ ದಿನೇ ॥**
**ಯಾವಂತಿ ತತ್ರ ಛಿದ್ರಾಣ್ಯಪೂಪಸ್ಯ ಚ ಪಾರ್ಥಿವ ।**
**ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥**
**ಅಧಿಮಾಸೇ ತು ಸಂಪ್ರಾಪ್ತೇ ತ್ರಯಸ್ತ್ರಿಂಶತ್ತು ದೇವತಾಃ ।**
**ಉದ್ದಿಶ್ಯಾಪೂಪದಾನೇನ ಪೃಥ್ವೀದಾನಫಲಂ ಲಭೇತ್ ॥**
**ಮಾಸಾಧಿಕೇ ತು ಸಂಪ್ರಾಪ್ತೇ ಯಾವತ್ಸರ್ವಾನಪೂಪಕಾನ್ ।**
**ತಾವದ್ವರ್ಷಮವಾಪ್ನೋತಿ ವಿಷ್ಣುಲೋಕಂ ಸನಾತನಮ್ ॥**

ಅಧಿಕ ಮಾಸದಲ್ಲಿ ಪ್ರತಿದಿನ ಬೆಲ್ಲ, ತುಪ್ಪ, ಹಾಕಿ ತಯಾರಿಸಿದ ಮೂವತ್ತು-ಮೂರು ಅಪೂಪ (ಅನಾರಸ ಅಥವಾ ಅತಿರಸ) ಗಳನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಇದರಿಂದ ಆ ಅಪೂಪದಲ್ಲಿರುವ ಛಿದ್ರಗಳ ಸಂಖ್ಯೆಯಷ್ಟು ವರ್ಷಗಳ ವರೆಗೆ ಸ್ವರ್ಗಲೋಕವಾಸವು ಪ್ರಾಪ್ತವಾಗುತ್ತದೆ. ಮೂವತ್ತು ಮೂರು ದೇವತೆ-ಗಳನ್ನುದ್ದೇಶಿಸಿ ಕೊಡುವ ಅಪೂಪದಾನವು ಪೃಥ್ವೀದಾನದ ಫಲವನ್ನು ತಂದು ಕೊಡುತ್ತದೆ. ಈ ದಾನದಿಂದ ವಿಷ್ಣುಲೋಕವೂ ದೊರೆಯುವದು.

ಪ್ರತಿದಿನ ಮೂವತ್ತು ಮೂರು ಅಪೂಪಗಳನ್ನು ಕಂಚಿನ ಪಾತ್ರೆಯಲ್ಲಿಟ್ಟು ತುಪ್ಪ ಹಾಗೂ ಚಿನ್ನಗಳ ಸಮೇತ ಬ್ರಾಹ್ಮಣನಿಗೆ ಸಂಕಲ್ಪ ಪೂರ್ವಕ ಸಮರ್ಪಿಸಬೇಕು. ಬ್ರಾಹ್ಮಣನಿಂದ ಅಥವಾ ಮನೆಯಲ್ಲಿನ ಹಿರಿಯರಿಂದ ಸಂಕಲ್ಪ ಹೇಳಿಸಿಕೊಳ್ಳಬೇಕು. ನಿತ್ಯ ದಾನಶಕ್ತಿ ಇಲ್ಲದವರು ಒಂದು ದಿನವಾದರೂ ಕೊಡಬೇಕು. ದಾನಕ್ಕೆ ಶುಕ್ಲ, ಕೃಷ್ಣ ದ್ವಾದಶಿಗಳು, ಪೂರ್ಣಿಮಾ, ಅಮಾವಾಸ್ಯ, ಬಹುಳಾಷ್ಟಮೀ, ನವಮೀ, ಚತುರ್ದಶೀ, ವೈಧೃತಿ, ವ್ಯತೀಪಾತ ದಿನಗಳು ಶ್ರೇಷ್ಠ.

ಅಪೂಪ ದಾನವನ್ನು ಕೊಡುವಾಗ ಹೇಳಬೇಕಾದ ಮಂತ್ರ-

ವಿಷ್ಣುರೂಪೀ ಸಹಸ್ರಾಂಶುಃ ಸರ್ವಪಾಪಪ್ರಣಾಶನಃ ।
ಅಪೂಪಾನ್ನಪ್ರದಾನೇನ ಮಮ ಪಾಪಂ ವ್ಯಪೋಹತು ॥ ೧॥

ನಾರಾಯಣ ಜಗದ್ಬೀಜ ಭಾಸ್ಕರಪ್ರತಿರೂಪಧೃಕ್ ।
ವ್ರತೇನಾನೇನ ಪುತ್ರಾಂಶ್ಚ ಸಂಪದಂ ಚಾಭಿವರ್ಧಯ ॥ ೨॥

ಯಸ್ಯ ಹಸ್ತೇ ಗದಾಚಕ್ರೇ ಗರುಡೋ ಯಸ್ಯ ವಾಹನಮ್ ।
ಶಂಖಃ ಕರತಲೇ ಯಸ್ಯ ಸ ಮೇ ವಿಷ್ಣುಃ ಪ್ರಸೀದತು ॥ ೩॥

ಕಲಾಕಾಷ್ಠಾದಿರೂಪೇಣ ನಿಮೇಷಘಟಿಕಾದಿನಾ ।
ಯೋ ವಂಚಯತಿ ಭೂತಾನಿ ತಸ್ಮೈ ಕಾಲಾತ್ಮನೇ ನಮಃ ॥ ೪॥

ಕುರುಕ್ಷೇತ್ರಮಯೋ ದೇಶಃ ಕಾಲಃ ಪರ್ವಃ ದ್ವಿಜೋ ಹರಿಃ ।
ಪೃಥ್ವೀಸಮಮಿದಂ ದಾನಂ ಗೃಹಾಣ ಪುರುಷೋತ್ತಮ ॥ ೫॥

ಮಲಾನಾಂ ಚ ವಿಶುದ್ಧ್ಯರ್ಥಂ ಪಾಪಪ್ರಶಮನಾಯ ಚ ।
ಪುತ್ರಪೌತ್ರಾಭಿವೃದ್ಧ್ಯರ್ಥಂ ತೇನ ದಾಸ್ಯಾಮಿ ಭಾಸ್ಕರ ॥ ೬॥

ಅಪೂಪದಾನಕಾಲದಲ್ಲಿ ಚಿಂತ್ಯ ಭಗವದ್ರೂಪಗಳು-

ವಿಷ್ಣುಂ ಜಿಷ್ಣುಂ ಮಹಾವಿಷ್ಣುಂ ಹರಿಂ ಕೃಷ್ಣಮಧೋಕ್ಷಜಮ್ ।
ಕೇಶವಂ ಮಾಧವಂ ರಾಮಮಚ್ಯುತಂ ಪುರುಷೋತ್ತಮಮ್ ॥ ೧॥

ಗೋವಿಂದಂ ವಾಮನಂ ಶ್ರೀಶಂ ಶ್ರೀಕಂಠಂ ವಿಶ್ವಸಾಕ್ಷಿಣಮ್ ।
ನಾರಾಯಣಂ ಮಧುರಿಪುಂ ಅನಿರುದ್ಧಂ ತ್ರಿವಿಕ್ರಮಮ್ ॥ ೨॥

ವಾಸುದೇವಂ ಜಗದ್ಯೋನಿಂ ಅನಂತಂ ಶೇಷಶಾಯಿನಮ್ ।
ಸಂಕರ್ಷಣಂ ಚ ಪ್ರದ್ಯುಮ್ನಂ ದೈತ್ಯಾರಿಂ ವಿಶ್ವತೋಮುಖಮ್ ॥ ೩॥

ಜನಾರ್ದನಂ ಧರಾವಾಸಂ ದಾಮೋದರಂ ಅಘಾರ್ದನಮ್ ।
ಶ್ರೀಪತಿಂ ಚ ತ್ರಯಸ್ತ್ರಿಂಶದುದ್ದಿಶ್ಯ ಪ್ರತಿನಾಮಭಿಃ ॥ ೪॥

ಮಂತ್ರೈರೇತೈಶ್ಚ ಯೋ ದದ್ಯಾತ್ ತ್ರಯಸ್ತ್ರಿಂಶದಪೂಪಕಮ್ ।
ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರಪೌತ್ರಾದಿಸಂತತಿಮ್ ॥ ೫॥

ಈ ಭಗವದ್ರೂಪಗಳನ್ನು ಚಿಂತಿಸುತ್ತ ೩೩ ಅಪೂಪಗಳನ್ನು ದಾನಕೊಡುವುದರಿಂದ ವಿಪುಲವಾದ ಸಂಪತ್ತು ಹಾಗೂ ಪುತ್ರಪೌತ್ರಾದಿ ಸಂತತಿಯು ಲಭಿಸುವದು. ಪ್ರತಿಯೊಂದು ಭಗವದ್ರೂಪ ಚಿಂತನೆಯ ಕ್ರಮವನ್ನು ಕೆಳಗೆ ಕೊಡಲಾಗಿದೆ.

**ಅಧಿಕಮಾಸದ ಅಪೂಪದಾನದಲ್ಲಿ ಸ್ಮರಿಸಬೇಕಾದ ೩೩ ಭಗವದ್ರೂಪಗಳು.**

**ಶ್ರೀವತ್ಸವಕ್ಷಸಂ ಶಾಂತಂ ನೀಲೋತ್ಪಲದಲಚ್ಛವಿಮ್ ।**
**ತ್ರಿಭಂಗಲಲಿತಂ ಧ್ಯಾಯೇತ್ ಸರಾಧಾಪುರುಷೋತ್ತಮಮ್ ॥**

೧) ದ್ರೋಣಾಂತರ್ಗತ ಶಕ್ತಿನಿಯಾಮಕ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ (ಭಾ.ಮು.) ಪದ್ಮಿನೀಪತಿ ವಿಷ್ಣವೇ ನಮಃ ॥

೨) ಧ್ರುವಾಂತರ್ಗತ ಜ್ಞಾನನಿಯಾಮಕ ಭಾ.ಮು. ಪದ್ಮಿನೀಪತಿ ವಿಷ್ಣವೇ ನಮಃ ॥

೩) ದೋಹಾಂತರ್ಗತ ಇಚ್ಛಾನಿಯಾಮಕ ಭಾ.ಮು. ಪದ್ಮಿನೀಪತಿ ಮಹಾವಿಷ್ಣವೇ ನಮ॥

೪) ಅರ್ಕಾಂತರ್ಗತ ಕ್ರಿಯಾನಿಯಾಮಕ ಭಾ.ಮು.ಶ್ರೀಸುಶೀಲಾಪತಿ ಹರಯೇ ನಮಃ ॥

೫) ಅಗ್ನ್ಯಂತರ್ಗತ ಭಾ.ಮು. ಪ್ರಕೃತ್ಯಭಿಮಾನಿ ಲಕ್ಷ್ಮ್ಯಂತರ್ಗತ ಸುಲಕ್ಷಣಾಪತಿ ಶ್ರೀಕೃಷ್ಣಾಯ ನಮಃ ॥

೬) ಪ್ರಾಣಾಂತರ್ಗತ ಭಾ.ಮು.ಸತ್ವಗುಣಾಭಿಮಾನಿ ಶ್ರೀಅಂತರ್ಗತ ಪ್ರಜ್ಞಾಪತಿ ಅಧೋಕ್ಷಜಾಯ ನಮಃ ॥

೭) ದ್ಯುಅಂತರ್ಗತ ಭಾ.ಮು. ರಜೋಗುಣಾಭಿಮಾನಿ ಭೂ ಅಂತರ್ಗತ ಶ್ರೀಪತಿ-ಕೇಶವಾಯ ನಮಃ ॥

೮) ವಿಭಾವಸ್ವಂತರ್ಗತ ಭಾ.ಮು. ತಮೋಗುಣಾಭಿಮಾನಿ ದುರ್ಗಾಂತರ್ಗತ ಕಮಲಾಪತಿ ಮಾಧವಾಯ ನಮಃ॥

೯) ಭೀಮಾಂತರ್ಗತ ಅವ್ಯಕ್ತತತ್ವಾಭಿಮಾನಿ ಸರಸ್ವತೀಭಾರತೀ ಅಂತರ್ಗತ ಭಾ.ಮು. ಶ್ರೀಸೀತಾಪತಿ ರಾಮಚಂದ್ರಾಯ ನಮಃ ॥

೧೦) ರೈವತಾಂತರ್ಗತ ಭಾ.ಮು.ಮಹತ್ತತ್ವಾಭಿಮಾನಿ ಸರಸ್ವತೀ ಭಾರತೀಪತಿ ಬ್ರಹ್ಮವಾಯ್ವಂತರ್ಗತ ಶ್ರೀಸುಗಂಧಾಧಿಪತಿ ಅಚ್ಯುತಾಯ ನಮಃ ॥

೧೧) ಓಜಾಂತರ್ಗತ ಅಹಂಕಾರತತ್ವಾಭಿಮಾನಿ ಸೌಪರ್ಣೀ ವಾರುಣೀ ಪಾರ್ವತೀಪತಿ ಗರುಡಶೇಷರುದ್ರಾಂತರ್ಗತ ಭಾ.ಮು. ಆನಂದಾಪತಿ ಪುರುಷೋತ್ತಮಾಯ ನಮಃ॥

೧೨) ಅಜೈಕಪಾದಾಂತರ್ಗತ ಮನಸ್ತತ್ವಾಭಿಮಾನಿ ಶಚಿರತಿಪತಿಇಂದ್ರಕಾಮಾಂತರ್ಗತ ಭಾ.ಮು. ಪದ್ಮಾಪತಿ ಗೋವಿಂದಾಯ ನಮಃ ॥

೧೩) ಮಹಾನಂತರ್ಗತ ಶ್ರೋತ್ರಾಭಿಮಾನಿ ದಿಗ್ದೇವತಾಂತರ್ಗತ ಭಾ.ಮು. ವೃಷಾಕಪಾಯೀಪತಿ ವಾಮನಾಯ ನಮಃ ॥

೧೪) ಬಹುರೂಪಾಂತರ್ಗತ ತ್ವಗಭಿಮಾನಿ ಅಹಂಕಾರ ಪ್ರಾಣಾಂತರ್ಗತ ಭಾ.ಮು. ಶ್ರೀಪತಿ ಶ್ರೀಶಾಯ ನಮಃ ॥

೧೫) ಭವಾಂತರ್ಗತ ಚಕ್ಷುರಭಿಮಾನಿ ಸಂಜ್ಞಾಪತಿ ಸೂರ್ಯಾಂತರ್ಗತ ಭಾ.ಮು. ಶ್ರೀಲಕ್ಷ್ಮೀಪತಿ ಶ್ರೀಕಂಠಾಯ ನಮಃ ॥

೧೬) ವಾಮಾಂತರ್ಗತ ಜಿಹ್ವಾಭಿಮಾನಿ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಶ್ರೀಲಕ್ಷ್ಮೀಪತಿ ಶ್ರೀವಿಶ್ವಸಾಕ್ಷಿಣೇ ನಮಃ ॥

೧೭) ಉಗ್ರಾಂತರ್ಗತ ಘ್ರಾಣಾಭಿಮಾನಿ ಉಷಾಪತಿ ಅಶ್ವಿನೀದೇವತಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀನಾರಾಯಣಾಯ ನಮಃ ॥

೧೮) ವೃಷಾಕಪ್ಯಂತರ್ಗತ ವಾಗಭಿಮಾನಿ ಸ್ವಾಹಾಪತಿ ಅಗ್ನ್ಯಂತರ್ಗತ ಭಾ.ಮು. ಕಮಲಾಲಯಾಪತಿ ಮಧುರಿಪವೇ ನಮಃ ॥

೧೯) ಅಹಿರ್ಬುಧ್ನ್ಯಂತರ್ಗತ ಪಾಣ್ಯಭಿಮಾನಿ ಪ್ರಸೂತಿಪತಿ ದಕ್ಷಾಂತರ್ಗತ ಭಾ.ಮು. ನಿತ್ಯಾಪತಿ ಅನಿರುದ್ಧಾಯ ನಮಃ ॥

೨೦) ವಿವಸ್ವಾನಂತರ್ಗತ ಪಾದಾಭಿಮಾನಿ ಜಯಂತಾಂತರ್ಗತ ಭಾ.ಮು. ಶ್ರೀರಮಾಪತಿ ತ್ರಿವಿಕ್ರಮಾಯ ನಮಃ ॥

೨೧) ಅರ್ಯಮಾಂತರ್ಗತ ಪಾಯ್ವಭಿಮಾನಿ ಮಿತ್ರಾಂತರ್ಗತ ಭಾ.ಮು. ಮಾಯಾಪತಿ ವಾಸುದೇವಾಯ ನಮಃ ॥

೨೨) ಪೂಷಾಂತರ್ಗತ ಉಪಸ್ಥಾಭಿಮಾನಿ ಶತರೂಪಾಪತಿ ಸ್ವಾಯಂಭುವ ಮನ್ವಂತರ್ಗತ ಭಾ.ಮು.ಲಕ್ಷ್ಮೀಪತಿ ಶ್ರೀಜಗದ್ಯೋನಯೇ ನಮಃ ॥

೨೩) ತ್ವಷ್ಟ್ರಾಂತರ್ಗತ ಶಬ್ದಾಭಿಮಾನಿ ತಾರಾಪತಿ ಬೃಹಸ್ಪತ್ಯಂತರ್ಗತ ಪ್ರಾಣಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀ ಅನಂತಾಯ ನಮಃ ॥

೨೪) ಸವಿತ್ರಂತರ್ಗತ ಸ್ಪರ್ಶಾಭಿಮಾನಿ ಅಪಾನಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀಶೇಷಶಾಯಿನೇ ನಮಃ ॥

೨೫) ಭಗಾಂತರ್ಗತ ರೂಪಾಭೀಮಾನಿ ವ್ಯಾನಾಂತರ್ಗತ ಭಾ.ಮು. ಶ್ರೀಹಿರಣ್ಯಾಪತಿ ಸಂಕರ್ಷಣಾಯ ನಮಃ ॥

೨೬) ಧಾತ್ರಂತರ್ಗತ ರಸಾಭಿಮಾನಿ ಉದಾನಾಂತರ್ಗತ ಭಾ.ಮು. ಶ್ರೀಸತ್ಯಾಪತಿ ಪ್ರದ್ಯುಮ್ನಾಯ ನಮಃ ॥

೨೭) ಪರ್ಜನ್ಯಾಂತರ್ಗತ ಗಂಧಾಭಿಮಾನಿ ಸಮಾನಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀದೈತ್ಯಾರಯೇ ನಮಃ॥

೨೮) ವರುಣಾಂತರ್ಗತ ಆಕಾಶಾಭಿಮಾನಿ ಗಣಪತ್ಯಂತರ್ಗತ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀವಿಶ್ವಾತ್ಮನೇ ನಮಃ ॥

೨೯) ಮಿತ್ರಾಂತರ್ಗತ ವಾಯ್ವಭಿಮಾನಿ ಪ್ರಾವಹಿಪತಿ ಪ್ರವಹವಾಯ್ವಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀಕಂಸದಮನಾಯ ನಮಃ ॥

೩೦) ಶಕ್ರಾಂತರ್ಗತ ತೇಜೋಭಿಮಾನಿ ಅಗ್ನ್ಯಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀ ವಿಶ್ವತೋಮುಖಾಯ ನಮಃ ॥

೩೧) ಉರುಕ್ರಮಾಭಿಧಂತರ್ಗತ ಅಬಭಿಮಾನಿ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಶ್ರೀಸುಂದರೀಪತಿ ಜನಾರ್ದನಾಯ ನಮಃ ||

೩೨) ಪ್ರಜಾಪತ್ಯಂತರ್ಗತ ಪೃಥ್ವ್ಯಭಿಮಾನಿ ಶನೀಶ್ವರ ಧರಾಂತರ್ಗತ ಭಾ.ಮು. ಧನ್ಯಾಪತಿ ಶ್ರೀಶ್ರೀಧರಾವಾಸಾಯ ನಮಃ ||

೩೩) ವಷಟ್ಕಾರಾಂತರ್ಗತ ಸರ್ವತತ್ವಾಭಿಮಾನಿ ಭಾ.ಮು.ಲಕ್ಷ್ಮೀಪತಿ ಶ್ರೀಪತಯೇ ನಮಃ||

|| ಇತಿ ಶ್ರೀ ಅಧಿಕಮಾಸ ರಾಧಾಪುರುಷೋತ್ತಮನಾಮ ಸಂಪೂರ್ಣಂ ||

|| ಶ್ರೀಕೃಷ್ಣಾರ್ಪಣಮಸ್ತು || ಶ್ರೀಮಧ್ವೇಶಾರ್ಪಣಮಸ್ತು ||

|| ಶ್ರೀ ಪುರುಷೋತ್ತಮಾಯ ನಮಃ ||ಅಥ ವಿಷ್ಣುಕೃತ ಪುರುಷೋತ್ತಮ ಸ್ತೋತ್ರಂ ||

ವಂದೇ ವಂದಾರುಮಂದಾರಂ ವೃಂದಾವನವಿನೋದಿನಂ ।
ವೃಂದಾವನಕಲಾನಾಥಂ ಪುರುಷೋತ್ತಮಮದ್ಭುತಂ ||೧||

ವಂದೇ ವಿಷ್ಣುಂ ಗುಣಾತೀತಂ ಗೋವಿಂದಮೇಕಮಕ್ಷರಂ ।
ಅವ್ಯಕ್ತಮವ್ಯಯಂ ವ್ಯಕ್ತಂ ಗೋಪವೇಷವಿಧಾಯಿನಂ ||೨||

ಕಿಶೋರವಯಸಂ ಶಾಂತಂ ಗೋಪೀಕಾಂತಂ ಮನೋಹರಂ ।
ನವೀನನೀರದಶ್ಯಾಮಂ ಕೋಟಿಕಂದರ್ಪಸುಂದರಂ ||೩||

ವೃಂದಾವನವನಾಭ್ಯಂತೇ ರಾಸಮಂಡಲಸಂಸ್ಥಿತಂ ।
ಲಸತ್ಪೀತಪಟಂ ಸೌಮ್ಯಂ ತ್ರಿಭಂಗಲಲಿತಾಕೃತಿಂ ||೪||

ರಾಸೇಶ್ವರಂ ರಾಸವಾಸಂ ರಾಸೋಲ್ಲಾಸಸಮುತ್ಸುಕಂ |
ದ್ವಿಭುಜಂ ಮುರಳೀಹಸ್ತಂ ಪೀತವಾಸಸಮಚ್ಯುತಂ ||೫||

ಇತಿ ವಿಷ್ಣುಕೃತಂ ಸ್ತೋತ್ರಂ ಪ್ರಾತರುತ್ಥಾಯ ಯಃ ಪಠೇತ್ ।
ಪಾಪಾನಿ ತಸ್ಯ ನಶ್ಯಂತಿ ದುಃಸ್ವಪ್ನಃ ಸತ್ಫಲಪ್ರದಃ ||೬||

ಭಕ್ತಿರ್ಭವತಿ ಗೋವಿಂದೇ ಪುತ್ರಪೌತ್ರವಿವರ್ಧಿನೀ|
ಅಕೀರ್ತಿಃ ಕ್ಷಯಮಾಪ್ನೋತಿ ಸತ್ಕೀರ್ತಿಃ ವರ್ಧತೇ ಚಿರಮ್ ||೭||

||ಇತಿ ಶ್ರೀವಿಷ್ಣುಕೃತಂ ಪುರುಷೋತ್ತಮಸ್ತೋತ್ರಂ ಸಂಪೂರ್ಣಂ ||

## ಅಧಿಕ ಮಾಸದಲ್ಲಿ ಮಾಡುವ ನೇಮಗಳು

೧. ಪ್ರತಿದಿನ ೩೩ ನಮಸ್ಕಾರಗಳು. ದಿನವೂ ೪ ಬಳೆ ದಾನ ಕೊಡುವುದು

೨. ೧೨ ಶಂಖ ೧೨ ಪದ್ಮ ಹಾಕಿ ೧೨ ಚಕ್ಕುಲಿ ೧೨ ಗಿಲಗಂಜಿ ಕೊಡುವುದು

೩. ದಿನವೂ ಒಂದು ತೆಂಗಿನಕಾಯಿ ಉಡಿ ತುಂಬುವುದು

೪. ದಿನವೂ ೧೨ ಕುಸುರು ಬತ್ತಿ ಹಾಗೂ ೧೫ ಹೂ ಬತ್ತಿ ದೇವರ ದೀಪ ಹಚ್ಚುವುದು
(೧) ದೇವರ ದೀಪ,(೨) ತುಳಸಿ ದೀಪ (೩) ಆಕಳ ದೀಪ (೪) ಒಂದು ಆಕಾಶ ದೀಪ

೫. ಒಂದು ನಕ್ಷತ್ರ ದೀಪ ೬. ಸಾಲಿನ ದೀಪ

೧೫) ಭವಾಂತರ್ಗತ ಚಕ್ಷುರಭಿಮಾನಿ ಸಂಜ್ಞಾಪತಿ ಸೂರ್ಯಾಂತರ್ಗತ ಭಾ.ಮು. ಶ್ರೀಲಕ್ಷ್ಮೀಪತಿ ಶ್ರೀಕಂಠಾಯ ನಮಃ ||

೧೬) ಪಾಮಾಂತರ್ಗತ ಜಿಹ್ವಾಭಿಮಾನಿ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಶ್ರೀಲಕ್ಷ್ಮೀಪತಿ ಶ್ರೀವಿಶ್ವಸಾಕ್ಷಿಣೇ ನಮಃ ||

೧೭) ಉಗ್ರಾಂತರ್ಗತ ಘ್ರಾಣಾಭಿಮಾನಿ ಉಷಾಪತಿ ಅಶ್ವಿನೀದೇವತಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀನಾರಾಯಣಾಯ ನಮಃ ||

೧೮) ವೃಷಾಕಪ್ಯಂತರ್ಗತ ವಾಗಭಿಮಾನಿ ಸ್ವಾಹಾಪತಿ ಅಗ್ನ್ಯಂತರ್ಗತ ಭಾ.ಮು. ಕಮಲಾಲಯಾಪತಿ ಮಧುರಿಪವೇ ನಮಃ ||

೧೯) ಅಹಿರ್ಬುಧ್ನ್ಯಂತರ್ಗತ ಪಾಣ್ಯಭಿಮಾನಿ ಪ್ರಸೂತಿಪತಿ ದಕ್ಷಾಂತರ್ಗತ ಭಾ.ಮು. ನಿತ್ಯಾಪತಿ ಅನಿರುದ್ಧಾಯ ನಮಃ ||

೨೦) ವಿವಸ್ವಾನಂತರ್ಗತ ಪಾದಾಭಿಮಾನಿ ಜಯಂತಾಂತರ್ಗತ ಭಾ.ಮು. ಶ್ರೀರಮಾಪತಿ ತ್ರಿವಿಕ್ರಮಾಯ ನಮಃ ||

೨೧) ಅರ್ಯಮಾಂತರ್ಗತ ಪಾಯ್ವಭಿಮಾನಿ ಮಿತ್ರಾಂತರ್ಗತ ಭಾ.ಮು. ಮಾಯಾಪತಿ ವಾಸುದೇವಾಯ ನಮಃ ||

೨೨) ಪೂಷಾಂತರ್ಗತ ಉಪಸ್ಥಾಭಿಮಾನಿ ಶತರೂಪಾಪತಿ ಸ್ವಾಯಂಭುವ ಮನ್ವಂತರ್ಗತ ಭಾ.ಮು.ಲಕ್ಷ್ಮೀಪತಿ ಶ್ರೀಜಗದ್ಯೋನಯೇ ನಮಃ ||

೨೩) ತ್ವಷ್ಟ್ರಾಂತರ್ಗತ ಶಬ್ದಾಭಿಮಾನಿ ತಾರಾಪತಿ ಬೃಹಸ್ಪತ್ಯಂತರ್ಗತ ಪ್ರಾಣಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀ ಅನಂತಾಯ ನಮಃ ||

೨೪) ಸವಿತ್ರಂತರ್ಗತ ಸ್ಪರ್ಶಾಭಿಮಾನಿ ಅಪಾನಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀಶೇಷಶಾಯಿನೇ ನಮಃ ||

೨೫) ಭಗಾಂತರ್ಗತ ರೂಪಾಭೀಮಾನಿ ವ್ಯಾನಾಂತರ್ಗತ ಭಾ.ಮು. ಶ್ರೀಹಿರಣ್ಯಾಪತಿ ಸಂಕರ್ಷಣಾಯ ನಮಃ ||

೨೬) ಧಾತ್ರಂತರ್ಗತ ರಸಾಭಿಮಾನಿ ಉದಾನಾಂತರ್ಗತ ಭಾ.ಮು. ಶ್ರೀಸತ್ಯಾಪತಿ ಪ್ರದ್ಯುಮ್ನಾಯ ನಮಃ ||

೨೭) ಪರ್ಜನ್ಯಾಂತರ್ಗತ ಗಂಧಾಭಿಮಾನಿ ಸಮಾನಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀದೈತ್ಯಾರಯೇ ನಮಃ||

೨೮) ವರುಣಾಂತರ್ಗತ ಆಕಾಶಾಭಿಮಾನಿ ಗಣಪತ್ಯಂತರ್ಗತ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀವಿಶ್ವಾತ್ಮನೇ ನಮಃ ||

೨೯) ಮಿತ್ರಾಂತರ್ಗತ ವಾಯ್ವಭಿಮಾನಿ ಪ್ರಾವಹಿಪತಿ ಪ್ರವಹವಾಯ್ವಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀಕಂಸದಮನಾಯ ನಮಃ ||

೩೦) ಶಕ್ರಾಂತರ್ಗತ ತೇಜೋಭಿಮಾನಿ ಅಗ್ನ್ಯಂತರ್ಗತ ಭಾ.ಮು. ಲಕ್ಷ್ಮೀಪತಿ ಶ್ರೀ ವಿಶ್ವತೋಮುಖಾಯ ನಮಃ ||

೩೧) ಉರುಕ್ರಮಾಭಿಧಂತರ್ಗತ ಅಬಭಿಮಾನಿ ಭಾಗೀರಥೀಪತಿ ವರುಣಾಂತರ್ಗತ ಭಾ.ಮು. ಶ್ರೀಸುಂದರೀಪತಿ ಜನಾರ್ದನಾಯ ನಮಃ ॥

೩೨) ಪ್ರಜಾಪತ್ಯಂತರ್ಗತ ಪೃಥ್ವ್ಯಭಿಮಾನಿ ಶನೀಶ್ವರ ಧರಾಂತರ್ಗತ ಭಾ.ಮು. ಧನ್ಯಾಪತಿ ಶ್ರೀಶ್ರೀಧರಾವಾಸಾಯ ನಮಃ ॥

೩೩) ವಷಟ್ಕಾರಾಂತರ್ಗತ ಸರ್ವತತ್ವಾಭಿಮಾನಿ ಭಾ.ಮು.ಲಕ್ಷ್ಮೀಪತಿ ಶ್ರೀಪತಯೇ ನಮಃ॥

॥ ಇತಿ ಶ್ರೀ ಅಧಿಕಮಾಸ ರಾಧಾಪುರುಷೋತ್ತಮನಾಮ ಸಂಪೂರ್ಣಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥ ಶ್ರೀಮಧ್ವೇಶಾರ್ಪಣಮಸ್ತು ॥

|| ಶ್ರೀ ಪುರುಷೋತ್ತಮಾಯ ನಮಃ ||ಅಥ ವಿಷ್ಣುಕೃತ ಪುರುಷೋತ್ತಮ ಸ್ತೋತ್ರಂ ॥

ವಂದೇ ವಂದಾರುಮಂದಾರಂ ವೃಂದಾವನವಿನೋದಿನಂ ।
ವೃಂದಾವನಕಲಾನಾಥಂ ಪುರುಷೋತ್ತಮಮದ್ಭುತಂ ॥೧॥

ವಂದೇ ವಿಷ್ಣುಂ ಗುಣಾತೀತಂ ಗೋವಿಂದಮೇಕಮಕ್ಷರಂ ।
ಅವ್ಯಕ್ತಮವ್ಯಯಂ ವ್ಯಕ್ತಂ ಗೋಪವೇಷವಿಧಾಯಿನಂ ॥೨॥

ಕಿಶೋರವಯಸಂ ಶಾಂತಂ ಗೋಪೀಕಾಂತಂ ಮನೋಹರಂ ।
ನವೀನನೀರದಶ್ಯಾಮಂ ಕೋಟಿಕಂದರ್ಪಸುಂದರಂ ॥೩॥

ವೃಂದಾವನವನಾಭ್ಯಂತೇ ರಾಸಮಂಡಲಸಂಸ್ಥಿತಂ ।
ಲಸತ್ಪೀತಪಟಂ ಸೌಮ್ಯಂ ತ್ರಿಭಂಗಲಲಿತಾಕೃತಿಂ ॥೪॥

ರಾಸೇಶ್ವರಂ ರಾಸವಾಸಂ ರಾಸೋಲ್ಲಾಸಸಮುತ್ಸುಕಂ |
ದ್ವಿಭುಜಂ ಮುರಳೀಹಸ್ತಂ ಪೀತವಾಸಸಮಚ್ಯುತಂ ॥೫॥

ಇತಿ ವಿಷ್ಣುಕೃತಂ ಸ್ತೋತ್ರಂ ಪ್ರಾತರುತ್ಥಾಯ ಯಃ ಪಠೇತ್ ।
ಪಾಪಾನಿ ತಸ್ಯ ನಶ್ಯಂತಿ ದುಃಸ್ವಪ್ನಃ ಸತ್ಫಲಪ್ರದಃ ॥೬॥

ಭಕ್ತಿರ್ಭವತಿ ಗೋವಿಂದೇ ಪುತ್ರಪೌತ್ರವಿವರ್ಧಿನೀ|
ಅಕೀರ್ತಿಃ ಕ್ಷಯಮಾಪ್ನೋತಿ ಸತ್ಕೀರ್ತಿಃ ವರ್ಧತೇ ಚಿರಮ್ ॥೭॥

॥ಇತಿ ಶ್ರೀವಿಷ್ಣುಕೃತಂ ಪುರುಷೋತ್ತಮಸ್ತೋತ್ರಂ ಸಂಪೂರ್ಣಂ ॥

## ಅಧಿಕ ಮಾಸದಲ್ಲಿ ಮಾಡುವ ನೇಮಗಳು

೧. ಪ್ರತಿದಿನ ೩೩ ನಮಸ್ಕಾರಗಳು. ದಿನವೂ ೪ ಬಳೆ ದಾನ ಕೊಡುವುದು

೨. ೧೨ ಶಂಖ ೧೨ ಪದ್ಮ ಹಾಕಿ ೧೨ ಚಕ್ಕುಲಿ ೧೨ ಗಿಲಗಂಜಿ ಕೊಡುವುದು

೩. ದಿನವೂ ಒಂದು ತೆಂಗಿನಕಾಯಿ ಉಡಿ ತುಂಬುವುದು

೪. ದಿನವೂ ೧೨ ಕುಸುರು ಬತ್ತಿ ಹಾಗೂ ೧೫ ಹೂ ಬತ್ತಿ ದೇವರ ದೀಪ ಹಚ್ಚುವುದು
(೧) ದೇವರ ದೀಪ,(೨) ತುಳಸಿ ದೀಪ (೩) ಆಕಳ ದೀಪ (೪) ಒಂದು ಆಕಾಶ ದೀಪ

೫. ಒಂದು ನಕ್ಷತ್ರ ದೀಪ ೬. ಸಾಲಿನ ದೀಪ

೭. ಬತ್ತಿ ಮಾಡುವ ವಿಧಾನ :-

೨೫ ಎಳೆಯಿಂದ ಬತ್ತಿಮಾಡಿ ೧ ಬತ್ತಿಗೆ ೬ ಕುಸುರು ಹಾಕಿ ಹೂಬತ್ತಿ ತರಹ ಮಾಡುವುದು, ಪ್ರತಿದಿನ ಈ ತರಹದ ೧೨ ಬತ್ತಿ ಹಚ್ಚುವುದು. ಕೊನೆಗೆ ೧ ಜೊತೆ ದೀಪದಾನ ಕೊಡುವುದು. ಇದು ಲಕ್ಷದೀಪ ಹಚ್ಚಿದಷ್ಟು ಫಲ ಕೊಡುತ್ತದೆ.

೮. ಅಧಿಕ ಮಾಸದಲ್ಲಿ ಮಂಗಳವಾರ ಶುಕ್ರವಾರ ಒಬ್ಬ ಮುತ್ತೈದೆಗೆ ಎಣ್ಣೆ ಅರಿಶಿನ ಕೊಟ್ಟು ಕೊನೆಗೆ ಕನ್ನಡಿ, ಹಣಿಗೆ ಪೆಟ್ಟಿಗೆ ದಾನ ಕೊಡುವುದು.

೯. ಹತ್ತಿಕಾಳು ೧ ಲಕ್ಷ ಎಣಿಸಿ ಗೋವಿಗೆ ಕೊಟ್ಟು, ಒಂದು ಬೆಳ್ಳಿ ಗೆಜ್ಜೆ ಕೊಡುವುದು

೧೦. ವೈಶಾಖ ಮಾಸದಲ್ಲಿ ದಿನವೂ ದೇವರಿಗೆ ೧ ತಂಬಿಗೆ ನೀರು ಕೊಟ್ಟು ಕಡೆಯಲ್ಲಿ ನೀರಿನ ಸಮೇತ ೧ ತಂಬಿಗೆ ದಾನ ಕೊಡುವುದು.

**ಅಧಿಕ ಮಾಸದಲ್ಲಿ ನಿತ್ಯದಾನ :**

| | | |
|---|---|---|
| ಪಾಡ್ಯ | - | ಅರಿಶಿನ ಕುಂಕುಮ ಎಲೆ ಅಡಿಕೆ ಎಲ್ಲದಕ್ಕೂ ದಕ್ಷಿಣೆ |
| ಬಿದಿಗೆ | - | ಕುಂಕುಮ ಅರಿಶಿನ ಎಲೆ ಅಡಿಕೆ |
| ತದಿಗೆ | - | ಕೊಬ್ಬರಿ ಸಕ್ಕರೆ |
| ಚೌತಿ | - | ನಿಂಬೆಹಣ್ಣು, ಸಕ್ಕರೆ, ಏಲಕ್ಕಿ |
| ಪಂಚಮಿ | - | ಅಕ್ಕಿ, ಎಲೆಯಡಿಕೆ |
| ಷಷ್ಠಿ | - | ಮೊಸರು |
| ಸಪ್ತಮಿ | - | ಹಣ್ಣು |
| ಅಷ್ಟಮಿ | - | ತೊಗರಿಬೇಳೆ |
| ನವಮಿ | - | ಗೋರೀಕಾಯಿ (ಚವಳೆ) |
| ದಶಮಿ | - | ಬೆಲ್ಲದ ೨ ಅಚ್ಚು |
| ದ್ವಾದಶಿ | - | ಹಾಲು |
| ತ್ರಯೋದಶಿ | - | ಗೋಧಿ ಹಿಟ್ಟು |
| ಚತುರ್ದಶಿ | - | ಮಲ್ಲಿಗೆ ಹೂ |
| ಹುಣ್ಣಿಮೆ | - | ಸೌತೆಕಾಯಿ |
| ಬಹುಳ ಪಾಡ್ಯ | - | ಹೀರೇಕಾಯಿ |
| ಬಿದಿಗೆ | - | ಗೆಡ್ಡೆ ಗೆಣಸು |
| ತದಿಗೆ | - | ಕುಪ್ಪಸ ಎಲೆ ಅಡಿಕೆ |
| ಚೌತಿ | - | ಹುರಿಗಡಲೆ |
| ಪಂಚಮಿ | - | ಕಡಲೇಕಾಯಿ ಬೀಜ |
| ಷಷ್ಠಿ | - | ರವೆ, ಎಲೆ, ಅಡಿಕೆ |

| | | |
|---|---|---|
| ಸಪ್ತಮಿ | - | ಶ್ರೀಕೃಷ್ಣ ಸಮೇತ ತುಳಸೀ ದಾನ |
| ಅಷ್ಟಮಿ | - | ಹತ್ತಿ |
| ನವಮಿ | - | ಕಡ್ಲೆಹಿಟ್ಟು |
| ದಶಮಿ | - | ಗಾಜಿನ ಬಳೆ |
| ದ್ವಾದಶಿ | - | ಹೆಸರು ಬೆಳೆ |
| ತ್ರಯೋದಶಿ | - | ಅವಲಕ್ಕಿ |
| ಚತುರ್ದಶಿ | - | ಒಳ್ಳೆ ಎಣ್ಣೆ (ಕಡಲೇಕಾಯಿ ಎಣ್ಣೆ) |
| ಅಮಾವಾಸ್ಯೆ | - | ಕಡ್ಲೇಬೆಳೆ |
| ಶುದ್ಧಪಾಡ್ಯ | - | ಕುಪ್ಪಸದ ಬಟ್ಟೆ, ಎಲೆ, ಅಡಿಕೆ |

ಅಧಿಕಮಾಸವು ಆರಂಭವಾಗುತ್ತಿದ್ದಂತೆಯೇ ಉಪವಾಸವ್ರತ, ಏಕಭುಕ್ತ, ನಕ್ತಭೋಜನ, ಧಾರಣ-ಪಾರಣ ಮುಂತಾದ ವ್ರತಗಳಲ್ಲಿ ಯಾವುದಾದರೂ ಒಂದನ್ನು ಧಾರಣಮಾಡಿ ಒಂದು ಮಾಸಪರ್ಯಂತ ಆಚರಿಸಬೇಕು. ನಿತ್ಯ ತಾಂಬೂಲ ದಾನದಿಂದ ಅಖಂಡ ಸೌಭಾಗ್ಯ ಪ್ರಾಪ್ತಿಯಾಗುವದು. ದೇವರ ಸನ್ನಿಧಿಯಲ್ಲಿ ಅಖಂಡ ದೀಪಸ್ಥಾಪನೆಯಿಂದ ಲಕ್ಷ್ಮೀ (ಸಂಪತ್ತು) ಪ್ರಾಪ್ತಿಯು. ಈ ಮಾಸದಲ್ಲಿ ಗಂಗಾ-ಕಾವೇರೀ ಮೊದಲಾದ ನದೀ ಸ್ನಾನದಿಂದ ಪಾಪನಾಶ.

ಅಧಿಕಮಾಸದಲ್ಲಿ ಮಾಡಬೇಕಾದ ವಿವಿಧ ವ್ರತಗಳು, ಕೊಡಬೇಕಾದ ದಾನಗಳು, ಅಧಿಕ ಮಾಸ ಮಹಾತ್ಮ್ಯೆ ಮುಂತಾದವುಗಳನ್ನು ವಿವಿಧ ಪೌರಾಣಿಕ ಕಥೆಗಳೊಂದಿಗೆ ತಿಳಿಸಿರುವ ಬೃಹನ್ನಾರದೀಯ ಪುರಾಣಾಂತರ್ಗತ **ಅಧಿಕಮಾಸ ಮಹಾತ್ಮ್ಯೆ** ಎಂಬ ನಮ್ಮ ಪ್ರಕಟಣೆಯನ್ನು ನೋಡಬೇಕು. ಈ ಮಾಸದಲ್ಲಿ ಈ ಪುಸ್ತಕವನ್ನು ಓದುವದು, ಬರೆಯುವುದು ಹಾಗೂ ಈ ಪುಸ್ತಕದ ೩೩ ಪ್ರತಿಗಳ ದಾನ ಇವೂ ಕೂಡ ವ್ರತಗಳೆಂದು ಪರಿಗಣಿಸಲ್ಪಟ್ಟಿವೆ. ಈ ಅಧಿಕ ಮಾಸ ಮಹಾತ್ಮ್ಯೆಯನ್ನು ಮೂಲ ಹಾಗೂ ಕನ್ನಡ ಅನುವಾದದೊಂದಿಗೆ ನಾವು ಪ್ರಕಟಿಸಿದ್ದೇವೆ.

**೭) ಧಾರಣ - ಪಾರಣ ವ್ರತ**

ಚಾತುರ್ಮಾಸ್ಯದಲ್ಲಿ ಧಾರಣ-ಪಾರಣ ವ್ರತವನ್ನು ಸ್ತ್ರೀ ಪುರುಷರಿಬ್ಬರೂ ಮಾಡಬೇಕೆಂದು ಭವಿಷ್ಯೋತ್ತರಪುರಾಣದಲ್ಲಿ ಹೇಳಲಾಗಿದೆ -

**ಶ್ರೀಭಗವಾನುವಾಚ -**

**ಶೃಣು ಕೌಂತೇಯ ವಕ್ಷ್ಯಾಮಿ ವ್ರತಂ ಧಾರಣಪಾರಣಮ್ ।**
**ಬಂಧ್ವಾದಿವಧದೋಷಘ್ನಂ ಸರ್ವೇಂದ್ರಿಯನಿಯಾಮಕಮ್ ॥**

**ಚಾತುರ್ಮಾಸ್ಯೇ ತಥಾ ಚಾದ್ಯೇ ಮಾಸಿ ಕೌಂತೇಯ ಸುವ್ರತಮ್ ।**
**ಪಶ್ಚಾತ್ಸಂಕಲ್ಪ್ಯ ರಾಜೇಂದ್ರ ತದಾರಭ್ಯ ಸಮಾಚರೇತ್ ॥**

**ಆದೌ ಮಾಸಿ ತಥಾ ಚಾಂತೇ ಚಾತುರ್ಮಾಸ್ಯೇ ತ್ವಥಾಪಿ ವಾ ।**
**ಏಕಸ್ಮಿನ್ ಧಾರಣಂ ಕಾರ್ಯಂ ಪಾರಣಂ ಚ ತಥಾಪರೇ ॥**

**ಉಪವಾಸೋ ಧಾರಣಂ ಸ್ಯಾತ್ ಪಾರಣಂ ಭೋಜನಂ ಭವೇತ್ ।**
**ಅಷ್ಟೋತ್ತರಶತಂ ದದ್ಯಾದರ್ಘ್ಯಾನ್ ದೇವಾಯ ತನ್ಮನಾಃ ॥**
**ಸಮಾಪ್ತೇ ಮಾಸಿ ರಾಜೇಂದ್ರ ಕುರ್ಯಾದುದ್ಯಾಪನಂ ಬುಧ : ।**

ಯುಧಿಷ್ಠಿರನನ್ನು ಕುರುತು ಭಗವಂತನು ಹೇಳುತ್ತಾನೆ - ಕುಂತೀಪುತ್ರನೇ ! ಕೇಳು ಬಂಧು ಮುಂತಾದವರ ಹತ್ಯಾದೋಷವನ್ನು ಪರಿಹರಿಸುವ, ಎಲ್ಲಾ ಇಂದ್ರಿಯಗಳ ನಿಗ್ರಹವನ್ನುಂಟು ಮಾಡುವ ಧಾರಣ-ಪಾರಣ ಎಂಬ ಒಂದು ಶ್ರೇಷ್ಠವಾದ ವ್ರತವಿದೆ. ಕುಂತೀಪುತ್ರನೇ ! ಈ ವ್ರತವನ್ನು ಮಾಡಲಿಚ್ಛಿಸುವವನು ಚಾತುರ್ಮಾಸ್ಯದ ಮೊದಲನೆಯ ತಿಂಗಳಿನಲ್ಲಿ ಸಂಕಲ್ಪವನ್ನು ಮಾಡಿ ಪ್ರಾರಂಭಿಸಬೇಕು. ಚಾತುರ್ಮಾಸ್ಯದ ಮೊದಲ ತಿಂಗಳಿನಲ್ಲಿ ಅಥವಾ ಕೊನೆಯ ತಿಂಗಳಿನಲ್ಲಿ ಅಥವಾ ನಾಲ್ಕೂ ತಿಂಗಳಲ್ಲಿ ಒಂದು ದಿನ ಉಪವಾಸ, ಮಾರನೇ ದಿನ ಪಾರಣವನ್ನು ಮಾಡುವ ವ್ರತವೇ 'ಧಾರಣ -ಪಾರಣ' ವ್ರತವಾಗಿದೆ. ಈ ವ್ರತದ ಕಾಲದಲ್ಲಿ ಪರಮಾತ್ಮನನ್ನು ಕುರಿತು ೧೦೮ ಅರ್ಘ್ಯಗಳನ್ನು ಕೊಡಬೇಕು. ಪ್ರತಿತಿಂಗಳು ಅಥವಾ ಕೊನೆಗೆ ಒಂದು ಸಲ ಉದ್ಯಾಪನೆಯನ್ನು ಮಾಡಬೇಕು.

ಅರ್ಘ್ಯ-ಪಾರಣೆಯ ದಿನ ಪಾರಣೆಯ ಪೂರ್ವದಲ್ಲಿ "॥ ಶ್ರೀಂ ನಾರಾಯಣಾಯ ನಮ। ಶ್ರೀನಾರಾಯಣಂ ತರ್ಪಯಾಮಿ ॥" ಎಂದು ಹೇಳುತ್ತ ೧೦೮ ಸಲ ಅರ್ಘ್ಯವನ್ನು ಕೊಡಬೇಕು.

**೮) ಲಕ್ಷಪ್ರದಕ್ಷಿಣೆ ವ್ರತ**

**ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕುರ್ಯಾಲ್ಲಕ್ಷಪ್ರದಕ್ಷಿಣಮ್ ।**
**ಸ್ವಕೃತಂ ಪಾಪಮುಚ್ಚಾರ್ಯ ಪಶ್ಚಾತ್ತಾಪಪುರಃಸರಃ ॥**
**ಆಷಾಢ್ಯಾಂ ಚ ಸಮಾರಭ್ಯ ಕಾರ್ತಿಕ್ಯಾಂ ತು ಜಿತೇಂದ್ರಿಯಃ ।**
**ಲಕ್ಷಂ ಸಮಾಪ್ಯ ಪಶ್ಚಾತ್ತು ಕುರ್ಯಾದುದ್ಯಾಪನಂ ವ್ರತೀ ॥**

**– ವಿಷ್ಣು ಧರ್ಮೋತ್ತರ ಪುರಾಣ.**

ಚಾತುರ್ಮಾಸ್ಯವು ಬಂದಾಗ ಲಕ್ಷಪ್ರದಕ್ಷಿಣ ವ್ರತವನ್ನು ಗ್ರಹಣಮಾಡಿ ಆಚರಿಸಬೇಕು. ಆಷಾಢಮಾಸದಲ್ಲಿ ಹುಣ್ಣಿಮೆಯ ದಿನ ಈ ವ್ರತವನ್ನು ಪ್ರಾರಂಭಿಸಿ ಕಾರ್ತಿಕ ಮಾಸದ ಹುಣ್ಣಿಮೆವರೆಗೆ ದೇವರಿಗೆ ಒಂದು ಲಕ್ಷ ಪ್ರದಕ್ಷಿಣೆ ಹಾಕಬೇಕು. ಪ್ರತಿದಿನ ತಾನು ಮಾಡಿರುವ ಪಾಪಗಳನ್ನು ಪಶ್ಚಾತ್ತಾಪ ಪೂರ್ವಕ ಹೇಳಿಕೊಂಡು ಲಕ್ಷಪ್ರದಕ್ಷಿಣವನ್ನು ಹಾಕಿ ಮುಗಿಸಿ ಅನಂತರ ಉದ್ಯಾಪನೆ ಮಾಡಬೇಕು.

ಪ್ರತಿದಿನ ಪ್ರದಕ್ಷಿಣೆ ಹಾಕುವಾಗ ಅನ್ನಬೇಕಾದ ಮಂತ್ರ -

**ಅನಂತಮವ್ಯಯಂ ವಿಷ್ಣುಂ ಲಕ್ಷ್ಮೀನಾರಾಯಣಂ ಹರಿಮ್ ।**
**ಜಗದೀಶ ನಮಸ್ತುಭ್ಯಂ ಪ್ರದಕ್ಷಿಣಪದೇ ಪದೇ ॥**

**೯) ಲಕ್ಷನಮಸ್ಕಾರ ವ್ರತ**

ಚಾತುರ್ಮಾಸ್ಯದಲ್ಲಿ ಮಾಡಬೇಕಾದ ವ್ರತಗಳಲ್ಲಿ ಲಕ್ಷನಮಸ್ಕಾರ ವ್ರತವೂ ಒಂದು. ಸುಮಂಗಲೆಯರು ಮತ್ತು ವಿಧವೆಯರು ಸಹ ಈ ವ್ರತಕ್ಕೆ ಅರ್ಹರೆನಿಸುತ್ತಾರೆ.

ಭವಿಷ್ಯೋತ್ತರಪುರಾಣದಲ್ಲಿ ವಸಿಷ್ಠ ಮಹರ್ಷಿಗಳು ಅಂಬರೀಷ ಮಹಾರಾಜನನ್ನು ಕುರಿತು ಹೇಳುತ್ತಾರೆ -

**ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕೇಶವೇ ಶಯನಂ ಗತೇ ।**

**ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ ॥**

-"ಚಾತುರ್ಮಾಸ್ಯದ ಕಾಲವು ಪ್ರಾಪ್ತವಾದಾಗ ಶ್ರೀಹರಿಯು ನಾಲ್ಕು ತಿಂಗಳು ಯೋಗನಿದ್ರಾಮುದ್ರೆಯಲ್ಲಿರುತ್ತಾನೆ. ಆಗ ಆಷಾಢಮಾಸದ ಶುಕ್ಲ ಪಕ್ಷ ಏಕಾದಶಿಯ ದಿನ ಮನಸ್ಸನ್ನುಏಕಾಗ್ರವಾಗಿಟ್ಟು, ಈ ಲಕ್ಷನಮಸ್ಕಾರ ವ್ರತವನ್ನು ಪ್ರಾರಂಭಿಸಬೇಕು. (ಇದೇ ವಿಷಯವು ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ । ಸಂಕಲ್ಪ್ಯ ದೇವದೇವಸ್ಯ ಪುರತಶ್ಚಕ್ರಪಾಣಿನಃ ॥ ಎಂದು ಬ್ರಹ್ಮಾಂಡ-ಪುರಾಣದಲ್ಲಿ ಹೇಳಲ್ಪಟ್ಟಿದೆ).

**ವ್ರತ ಸಂಕಲ್ಪ - ಮಮ ಲಕ್ಷನಮಸ್ಕಾರವ್ರತಸ್ಯ ಪುರುಷೋತ್ತಮ ।**

**ನಿರ್ವಿಘ್ನಂ ತದ್‌ವ್ರತಂ ಸಾಂಗಂ ಕುರು ತ್ವಂ ಕೃಪಯಾ ಹರೇ ॥**

-" ಹೇ ಪುರುಷೋತ್ತಮನೆ ! ಲಕ್ಷನಮಸ್ಕಾರ ವ್ರತವನ್ನುಮಾಡಬೇಕೆಂದು ಸಂಕಲ್ಪಿಸಿರುವ ನನಗೆ ಹೇ ಹರೇ ! ಆ ವ್ರತವು ಸಾಂಗವಾಗಿ ನಿರ್ವಿಘ್ನವಾಗಿ ನೆರವೇರುವಂತೆ ನೀನು ದಯಮಾಡಿ ಅನುಗ್ರಹಿಸು." ಹೀಗೆ ಸಂಕಲ್ಪಮಾಡಿ ಕಾರ್ತಿಕ ಮಾಸದ ಹುಣ್ಣಿಮೆಯ ವರೆಗೆ ಈ ವ್ರತವನ್ನು ಮಾಡಿ ಹುಣ್ಣಿಮೆ ಉದ್ಯಾಪನೆ ಮಾಡಬೇಕು.

**ಅರ್ಘ್ಯಮಂತ್ರ- ದೇವ ದೇವ ಜಗನ್ನಾಥ ಸರ್ವವ್ರತಫಲಪ್ರದ ।**

**ವ್ರತೇನಾನೇನ ಸುಪ್ರೀತೋ ಗೃಹಾಣಾರ್ಘ್ಯಂ ಮಯಾರ್ಪಿತಮ್ ॥**

ಈ ವ್ರತವು ಮಹಾಪುಣ್ಯಪ್ರದವಾದುದಾಗಿದೆ, ಪಾಪಾರಣ್ಯಗಳನ್ನುಸುಡಲು ಇದು ಕಾಡ್ಗಿಚ್ಚಿನಂತಿರುವ ವ್ರತ. ಪಾಪಗಳೆಂಬ ಪರ್ವತಕ್ಕೆ ವಜ್ರಾಯುಧದಂತಿರುವ ವ್ರತ. ಪಾಪಗಳೆಂಬ ಸಾಗರಕ್ಕೆ ನಾವೆಯಂತಿರುವ ವ್ರತ. ಎಲ್ಲ ಪಾಪಗಳನ್ನು ಕಳೆದು ಕೊನೆಗೆ ವಿಷ್ಣು ಪ್ರಸಾದಕ್ಕೂ ಸಾಧನವಾಗಿರುವ ವ್ರತವಿದು.

**೧೦) ಭೀಷ್ಮಪಂಚಕ ವ್ರತ**

**ವ್ರತಂ ಚೈತನ್ಮಹಾಪುಣ್ಯಂ ಮಹಾಪಾತಕನಾಶನಮ್ ।**

**ಅತೋ ವ್ರತಂ ಪ್ರಯತ್ನೇನ ಕರ್ತವ್ಯಂ ಭೀಷ್ಮಪಂಚಕಮ್ ॥**

**ಕಾರ್ತಿಕಸ್ಯಾಮಲೇ ಪಕ್ಷೇ ಸ್ನಾತ್ವಾ ಸಮ್ಯಗ್ವಿಧಾನತಃ ।**

**ಏಕಾದಶ್ಯಾಂ ತು ಗೃಹ್ಣೀಯಾದ್ ವ್ರತಂ ಪಂಚದಿನಾತ್ಮಕಮ್ ॥**

- ಪಂಚರಾತ್ರಾಗಮ

-ಈ ಭೀಷ್ಮಪಂಚಕವ್ರತವು ಮಹಾಪುಣ್ಯಪ್ರದವಾದುದು ಮತ್ತು ಮಹಾಪಾತಕ ನಾಶಕವಾದುದು. ಆದ್ದರಿಂದ ಪ್ರಯತ್ನಪೂರ್ವಕವಾಗಿ ಈ ವ್ರತವನ್ನು ಎಲ್ಲರೂ ಆಚರಿಸಬೇಕು. ಕಾರ್ತಿಕಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯ ದಿನ ವಿಧಿಪೂರ್ವಕವಾಗಿ ಸ್ನಾನ ಮಾಡಿ , ಅನಂತರ ಸಂಕಲ್ಪಪೂರ್ವಕವಾಗಿ ಈ ವ್ರತವನ್ನು ಧಾರಣಮಾಡಬೇಕು. ಇದು ಕಾರ್ತಿಕ ಶುದ್ಧ

ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶೀ ಮತ್ತು ಪೂರ್ಣಿಮಾ ಈ ಐದು ದಿನಗಳಲ್ಲಿ ಉಪವಾಸದಿಂದ ಆಚರಿಸಲ್ಪಡಬೇಕಾದ ವ್ರತವಾಗಿದೆ. ಕಾರ್ತಿಕ ಕೃಷ್ಣ ಪ್ರತಿಪದಾ ದಿನ ಪಾರಣೆ ಮಾಡಬೇಕು. ಪಾರಣೆ ದಿನ ಮಹಾವಿಷ್ಣುವನ್ನು ವಿಶೇಷವಾಗಿ ಪ್ರಾರ್ಥಿಸಬೇಕು.

ಪ್ರಾರ್ಥನಾ ಮಂತ್ರ-

ಯದನ್ಯಜನ್ಮನಿ ಕೃತಮಿಹ ಜನ್ಮನಿ ವಾ ಪುನಃ ।
ಪಾಪಂ ಪ್ರಶಮಮಾಯಾತು ತವ ಪಾದಪ್ರಸಾದತಃ ॥

ಭೀಷ್ಮಾಚಾರ್ಯರಿಗೆ ಅರ್ಘ್ಯವನ್ನುಕೊಡುವಾಗ ಅನ್ನಬೇಕಾದ ಮಂತ್ರ -

ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।
ಅರ್ಘ್ಯಂ ದದಾಮಿ ಭೀಷ್ಮಾಯ ಆಬಾಲ್ಯಬ್ರಹ್ಮಚಾರಿಣೇ ॥

ಭೀಷ್ಮಪಂಚಕ ವ್ರತದಲ್ಲಿ ಮುಖ್ಯ ಕರ್ತವ್ಯಗಳು -

ಸ್ನಾತ್ವಾ ಮೌನಂ ನರಃ ಕೃತ್ವಾ ಧೌತವಾಸಾ ದೃಢವ್ರತಃ ।
ಭೀಷ್ಮಾಯೋದಕದಾನಂ ಚ ಅರ್ಘ್ಯಂ ಚೈವ ಪ್ರಯತ್ನತಃ ॥
ಪೂಜಾ ಭೀಷ್ಮಸ್ಯ ಕರ್ತವ್ಯಾ ದಾನಂ ದದ್ಯಾತ್ಪ್ರಯತ್ನತಃ ।
ಪಂಚರತ್ನಂ ವಿಶೇಷೇಣ ದದ್ಯಾದ್ವಿಪ್ರಾಯ ಯತ್ನತಃ ॥
ವಾಸುದೇವೋऽಪಿ ಸಂಪೂಜ್ಯೋ ಲಕ್ಷ್ಮ್ಯಾ ಯುಕ್ತಃ ಸದಾ ಪ್ರಭುಃ ॥

-- ಸ್ಮೃತಿಕೌಸ್ತುಭ ॥

ಸ್ನಾನ, ಮೌನ, ಭೀಷ್ಮತರ್ಪಣ, ಭೀಷ್ಮಾರ್ಘ್ಯ, ಭೀಷ್ಮಪೂಜಾ, ವಿಪ್ರರಿಗೆ ಪಂಚರತ್ನ ದಾನ ಮತ್ತು ಲಕ್ಷ್ಮೀನಾರಾಯಣರ ವಿಶೇಷ ಪೂಜೆ ಇವು ಭೀಷ್ಮಪಂಚಕ ವ್ರತದ ಮುಖ್ಯ ಕರ್ತವ್ಯಗಳು.

೧೧) ಲಕ್ಷಬತ್ತಿವ್ರತ ಮತ್ತು ೧೨) ಲಕ್ಷದೀಪ ವ್ರತ

ಲಕ್ಷವರ್ತಿವ್ರತ ಎಂದರೆ ಒಂದು ಲಕ್ಷ ಬತ್ತಿಗಳನ್ನು ಮಾಡಿ ದೇವರಿಗೆ ಸಮರ್ಪಿಸುವ ವ್ರತ. ವೈಶಾಖ, ಕಾರ್ತಿಕ, ಮತ್ತು ಮಾಘಮಾಸಗಳು ಲಕ್ಷಬತ್ತಿ ವ್ರತಕ್ಕೆ ವಿಹಿತವಾದ ಕಾಲಗಳು. ಚಾತುರ್ಮಾಸ್ಯದಲ್ಲಿ ಶ್ರಾವಣ ಶುಕ್ಲ ಪ್ರತಿಪದೆಯಿಂದ ಪ್ರಾರಂಭಿಸಿ ಕಾರ್ತಿಕ ಪೂರ್ಣಿಮಾದ ವರೆಗೆ ಪ್ರತಿದಿನ ಒಂದು ಸಹಸ್ರ ಬತ್ತಿಗಳನ್ನು ದೇವರೆದುರಿನಲ್ಲಿ ಹಚ್ಚಬೇಕು. ಕೊನೆಗೆ ಉದ್ಯಾಪನೆಯನ್ನು ಮಾಡಬೇಕು.

ವಿಷ್ಣುರಹಸ್ಯದಲ್ಲಿ ಮತ್ತು ವಾಯುಪುರಾಣದಲ್ಲಿ ಈ ವ್ರತದ ಬಗ್ಗೆ ವಿಸ್ತಾರವಾಗಿ ತಿಳಿಸಲಾಗಿದೆ.

ಪ್ರತ್ಯೇಕಂ ಚೈಕದೀಪಂ ಚ ದೀಪಿತಂ ಗೋಘೃತೇನ ಚ ।
ತಿಲತೈಲೇನ ವಾ ಕುರ್ಯಾತ್ಕರ್ಪೂರೇಣ ಸಮನ್ವಿತಮ್ ॥

ಎಂದು ಹೇಳಿದಂತೆ ಬತ್ತಿಯನ್ನು ಆಕಳ ತುಪ್ಪದಲ್ಲಿ ಅಥವಾ ತಿಲತೈಲದಲ್ಲಿ ತೋಯಿಸಿ ಮೇಲೆ ಕರ್ಪೂರವನ್ನು ಹಾಕಿ ದೇವರೆದುರಿನಲ್ಲಿ ಹಚ್ಚಿಡಬೇಕು.

**ವ್ರತಸಮರ್ಪಣೆ ಮಂತ್ರ -**

**ಕ್ರಿಯಾಹೀನಂ ಭಕ್ತಿಹೀನಂ ದ್ರವ್ಯಹೀನಂ ತಥೈವ ಚ ।**
**ಮಂತ್ರಹೀನಂ ಕೃತಂ ಯಚ್ಚ ಪರಿಪೂರ್ಣಂ ತದಸ್ತು ಮೇ ॥**
**ಬಾಲ್ಯೇ ವಯಸಿ ಯತ್ಪಾಪಂ ಯೌವನೇ ವಾಪಿ ಯತ್ಕೃತಮ್ ।**
**ವಾರ್ಧಕೇऽಪಿ ಕೃತಂ ಪಾಪಂ ತತ್ಸರ್ವಂ ನಶ್ಯತಿ ಧ್ರುವಮ್ ॥**

**೧೩) ಚಾಂದ್ರಾಯಣ ವ್ರತ**

**ಚಂದ್ರವೃದ್ಧ್ಯಾ ಸಮಶ್ನೀಯಾತ್ ಕುಕ್ಕುಟಾಂಡಪ್ರಮಾಣತಃ ।**
**ದಿನೇ ದಿನೇ ಹವಿರ್ಗ್ರಾಹ್ಯಂ ಹಾನೌ ಹಾನಿಂ ಪ್ರಕಲ್ಪಯೇತ್ ॥ ೧೬ ॥**
**ಏವಂ ಮಾಸೇನ ಪೂರ್ಣಂ ಸ್ಯಾತ್ ಏತಚ್ಚಾಂದ್ರಾಯಣಂ ಸ್ಮೃತಮ್ ॥ ೧೭॥**

--ವರಾಹಪುರಾಣಾಂತರ್ಗತ ಚಾತುರ್ಮಾಸ್ಯ ಮಹಾತ್ಮೆ ಅ-೧೦

ಎಂಬ ವರಾಹ ಪುರಾಣದ ವಚನದಂತೆ ಶುಕ್ಲಪಕ್ಷದಲ್ಲಿ ಚಂದ್ರನು ಒಂದೊಂದು ಕಲೆಯಿಂದ ವರ್ಧಿಸುವಂತೆ ಕೋಳಿಯ ಅಂಡದ ಪ್ರಮಾಣದ ತುತ್ತನ್ನು ಶುಕ್ಲಪಕ್ಷದ ಪ್ರತಿಪದೆಯಂದು ಒಂದು ತುತ್ತು, ಬಿದಿಗೆಯಂದು ಎರಡು ತುತ್ತುಗಳು ಹೀಗೆ ಪ್ರತಿದಿನ ಒಂದೊಂದು ತುತ್ತನ್ನು ಹೆಚ್ಚಿಸಿ ತಿನ್ನುತ್ತಾ ಹುಣ್ಣಿಮೆಯಂದು ೧೫ ತುತ್ತುಗಳನ್ನು ತಿನ್ನಬೇಕು. ಮುಂದೆ ಕೃಷ್ಣಪಕ್ಷದಲ್ಲಿ ಚಂದ್ರನ ಕಲೆಗಳು ಕುಂದುತ್ತ ಹೋದಂತೆ ಒಂದೊಂದು ತುತ್ತನ್ನು ಕಡಿಮೆ ಮಾಡಿ ತಿನ್ನುತ್ತ ಚತುರ್ದಶಿಯಂದು ಒಂದೇ ತುತ್ತು ಸೇವಿಸಿ ಅಮಮಾಸ್ಯೆಯಂದು ಉಪವಾಸ ಮಾಡಬೇಕು. ಮರುದಿನ ಉದ್ಯಾಪನೆ ಮಾಡಬೇಕು. ಇದಕ್ಕೆ ಚಾಂದ್ರಾಯಣ ವ್ರತವೆನ್ನುವರು. ಇದನ್ನೇ

**ಏಕೈಕಂ ವರ್ಧಯೇತ್ಪಿಂಡಂ ಶುಕ್ಲೇ ಕೃಷ್ಣೇ ಚ ಹ್ರಾಸಯೇತ್ ।**
**ಇಂದುಕ್ಷಯೇ ನ ಭುಂಜೀತ ಚಾಂದ್ರಾಯಣವ್ರತಂ ಸ್ಮೃತಮ್ ॥** ಎಂದು ಪದ್ಮ ಪುರಾಣ (೪-೧೯-೨೮-೯) ಮತ್ತು ಗರುಡ ಪುರಾಣ (೨೧೪-೬೨) ಗಳಲ್ಲಿ ತಿಳಿಸಲಾಗಿದೆ. ಈ ವ್ರತದ ಇನ್ನೊಂದು ಕ್ರಮವು ಅಗ್ನಿಪುರಾಣದಲ್ಲಿ ಉಕ್ತವಾಗಿದೆ -

**ಪೌರ್ಣಮಾಸ್ಯಾಂ ಪಂಚದಶ ಗ್ರಾಸ್ಯಾಮಾಸ್ಯಾಮಭೋಜನಃ ।**
**ಏಕಾಪಾಯೇ ತತೋ ವೃದ್ಧೌ ಚಾಂದ್ರಾಯಣಮತೋऽನ್ಯಥಾ ॥**

— ಅಗ್ನಿಪುರಾಣ ೧೭೫-೨೩

ಈ ವ್ರತವನ್ನು ಪೌರ್ಣಿಮೆಯ ದಿನ ೧೫ ತುತ್ತುಗಳ ಆಹಾರವನ್ನು ಸ್ವೀಕರಿಸಿ ನಂತರ ಕೃಷ್ಣ ಪಕ್ಷದ ಪ್ರತಿಪದಾ ಮೊದಲಾದ ತಿಥಿಗಳಲ್ಲಿ ಕ್ರಮವಾಗಿ ಹಿಂದಿನ ತಿಥಿಗಿಂತ ಒಂದೊಂದು ತುತ್ತು ಕಡಿಮೆ ಸ್ವೀಕರಿಸುತ್ತ ಅಮಾವಾಸ್ಯೆ ಉಪವಾಸ, ಮುಂದೆ ಶುಕ್ಲಪಕ್ಷದ ಪ್ರತಿಪದಾದಿ ತಿಥಿಗಳಲ್ಲಿ ಒಂದೊಂದು ತುತ್ತು ಹೆಚ್ಚಿಸುತ್ತ ಹುಣ್ಣಿಮೆಯ ದಿನ ೧೫ ತುತ್ತುಗಳನ್ನು ಸ್ವೀಕರಿಸಿ ಉದ್ಯಾಪನೆ ಮಾಡುವದು ಈ ಚಾಂದ್ರಾಯಣ ವ್ರತದ ಇನ್ನೊಂದು ಕ್ರಮವಾಗಿದೆ.

ಈ ವ್ರತಾಚರಣೆಯಿಂದ ಮಹಾಪಾಪಗಳು, ಉಪಪಾತಕಗಳು, ಜ್ಞಾತಾಜ್ಞಾತ ದೋಷಗಳು ದೂರವಾಗುವವು.

ಗೌತಮರು ಅಹಲ್ಯೆಯ ಶುದ್ಧಿಗೋಸ್ಕರ ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸುವಂತೆ ಅವಳಿಗೆ ತಿಳಿಸಿದ್ದರು (ಸ್ಕಂದ ಪುರಾಣ ೬ - ೨೦೮ - ೩೧ - ೨)

ಆಶ್ವಿನ ಪೌರ್ಣಿಮೆಯಂದು ಪ್ರಾರಂಭಿಸಿ ಕಾರ್ತಿಕ ಪೌರ್ಣಿಮೆಯ ವರೆಗೆ ಈ ವ್ರತವನ್ನು ಮಾಡಬಹುದು.

**೧೪) ಏಕಭುಕ್ತ ವ್ರತ**

**ದಿನಾರ್ಧಸಮಯೇಽತೀತೇ ಭುಜ್ಯತೇ ನಿಯಮೇನ ಯತ್ ।**

**ಏಕಭುಕ್ತಮಿತಿ ಪ್ರೋಕ್ತಂ ಅತಸ್ತತ್ ಸ್ಯಾದ್ದಿವೈವ ಹಿ ॥ - ಸ್ಕಾಂದೇ**

- 'ಹಗಲಿನ ಅರ್ಧ ಭಾಗವು ಕಳೆದ ಮೇಲೆ ನಿಯಮದಿಂದ ಭೋಜನ ಮಾಡುವದನ್ನು ಏಕಭುಕ್ತವೆಂದು ಕರೆಯುತ್ತಾರೆ. ಈ ವ್ರತವು ಹಗಲು ಸಮಯದಲ್ಲೇ ಆಗತಕ್ಕದ್ದು'. ಇದನ್ನೇ ದೇವಲರು ಹೀಗೆ ಹೇಳಿದ್ದಾರೆ -

**ದಿನಾರ್ಧಸಮಯೇಽತೀತೇ ಭುಜ್ಯತೇ ನಿಯಮೇನ ಯತ್ ।**

**ಏಕಭುಕ್ತಮಿತಿ ಪ್ರೋಕ್ತಂ ನ್ಯೂನಂ ಗ್ರಾಸತ್ರಯೇಣ ತು ॥**

ಹಗಲಿನ ಅರ್ಧಸಮಯವು ಕಳೆದ ಮೇಲೆ ನಿಯಮದಿಂದ ಊಟ ಮಾಡುವದನ್ನು ಏಕಭುಕ್ತವೆಂದು ಹೇಳುತ್ತಾರೆ. ಆ ಭೋಜನವು ಮೂರು ತುತ್ತು ಕಡಿಮೆಯಾಗಿರಬೇಕು.

ಏಕಭುಕ್ತ ವ್ರತಕ್ಕೆ ಮಧ್ಯಾಹ್ನ ವ್ಯಾಪಿನಿಯಾದ ತಿಥಿಯನ್ನು ಸ್ವೀಕರಿಸಬೇಕೆಂದು ಬೋಧಾಯನ ಋಷಿಗಳು ತಿಳಿಸುತ್ತಾರೆ -

**"ಉದಯೇ ತೂಪವಾಸಸ್ಯ ನಕ್ತಸ್ಯಾಸ್ತಮಯೇ ತಿಥಿ : ।**

**ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ ಏಕಭುಕ್ತವ್ರತೇ ತಿಥಿಃ ॥"**

ಈ ವ್ರತವನ್ನು ಶ್ರಾವಣ ಶುದ್ಧ ಪ್ರತಿಪದೆಯಂದು ಪ್ರಾರಂಭಿಸಿ ಒಂದು ತಿಂಗಳು ಮಾಡಬೇಕು ಅಥವಾ ಮಾರ್ಗಶಿರ ಮಾಸದ ಶುಕ್ಲಪಕ್ಷದ ಪ್ರತಿಪದಾ ತಿಥಿಯು ಬಂದ ದಿನ ಪ್ರಾರಂಭಿಸಬಹುದು.

**೧೫) ನಕ್ತಭುಕ್ತವ್ರತ :**

ಶ್ರಾವಣ ಶುದ್ಧ ಪ್ರತಿಪದೆಯಂದು ಅಥವಾ ಮಾರ್ಗಶಿರ ಶುದ್ಧ ಪ್ರತಿಪದೆಯಿಂದ ಪ್ರಾರಂಭಿಸಿ ಒಂದು ತಿಂಗಳು ಈ ವ್ರತವನ್ನಾಚರಿಸಬೇಕು.

**ನಕ್ತಂ ನಿಶಾಯಾಂ ಕುರ್ವೀತ ಗೃಹಸ್ಥೋ ವಿಧಿಸಂಯುತಃ ।**

**ಯತಿಶ್ಚ ವಿಧವಾ ಚೈವ ಕುರ್ಯಾತ್ತತ್ ಸದಿವಾಕರಮ್ ॥**

ಗೃಹಸ್ಥ ಸ್ತ್ರೀಪುರುಷರು ನಕ್ತವ್ರತದಲ್ಲಿ ಭೋಜನವನ್ನು ರಾತ್ರಿಯಲ್ಲಿ ಮಾಡಬೇಕು. ಸನ್ಯಾಸಿ ಮತ್ತು ವಿಧವೆಯರು ಸಾಯಂಕಾಲ ಸೂರ್ಯನಿರುವಾಗಲೇ ಮಾಡಬೇಕು.

**ತ್ರಿಮುಹೂರ್ತಃ ಪ್ರದೋಷಃ ಸ್ಯಾದ್ಭಾನಾವಸ್ತಂ ಗತೇ ಸತಿ ।**

**ನಕ್ತಂ ತತ್ರ ತು ಕರ್ತವ್ಯಂ ಇತಿ ಶಾಸ್ತ್ರಸ್ಯ ನಿಶ್ಚಯಃ ॥** ಎಂಬ ವ್ಯಾಸಸ್ಮೃತಿಯಂತೆ

ಸೂರ್ಯನು ಅಸ್ತಂಗತನಾದ ಮೇಲೆ ಮೂರು ಮುಹೂರ್ತವು ಪ್ರದೋಷವು. ಆ ಸಮಯದಲ್ಲಿಯೇ ನಕ್ತವ್ರತವನ್ನು ಮಾಡಬೇಕು. ಗೃಹಸ್ಥರು ಭಾನುವಾರ, ಸಂಕ್ರಾಂತಿ ಇತ್ಯಾದಿ ದಿನಗಳಲ್ಲಿ ರಾತ್ರಿ ಭೋಜನಮಾಡಬಾರದೆಂದು ರಾತ್ರಿ ಭೋಜನಕ್ಕೆ ನಿಷೇಧವಿರುವದರಿಂದ ಅಂತಹ ದಿನಗಳಲ್ಲಿ ನಕ್ತವ್ರತವನ್ನು ಮಾಡುವಾಗಲೂ ಹಗಲು ಹೊತ್ತೇ ನಕ್ತವ್ರತಾಂಗ ಭೋಜನಮಾಡಬೇಕೆಂದು ಭವಿಷ್ಯತ್ಪುರಾಣದ ವಚನವಿದೆ---

**ಯೇ ತ್ವಾದಿತ್ಯದಿನೇ ಬ್ರಹ್ಮನ್ ನಕ್ತಂ ಕುರ್ವಂತಿ ಮಾನವಾಃ ।**

**ದಿನಾಂತೇ ತೇಽಪಿ ಭುಂಜೀರನ್ ನಿಷೇಧಾದ್ರಾತ್ರಿಭೋಜನೇ ॥**

ಏಕಭುಕ್ತ ಅಥವಾ ನಕ್ತಭುಕ್ತ ವ್ರತಾಚರಣೆಯಿಂದ ಸಂತಾನ, ಸಂಪತ್ತು, ಸನ್ಮಾನ, ಆರೋಗ್ಯ, ಆಯುಷ್ಯ ಇವುಗಳ ವೃದ್ಧಿಯಾಗುವದು.

(ಇತರ ವ್ರತಗಳನ್ನು ಹಿರಿಯರಿಂದ ತಿಳಿದು ಆಚರಿಸಬಹುದು.)

**॥ ಇಲ್ಲಿಗೆ ಮಾಸಧರ್ಮ ಮತ್ತು ವ್ರತಪ್ರಕರಣ ಸಮಾಪ್ತವಾಯಿತು ॥**

**॥ಶ್ರೀ ಕೃಷ್ಣಾರ್ಪಣಮಸ್ತು ॥**

I

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ।
ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ ॥ಪ॥

ಸತಿ ಅನುಕೂಲ ಬೇಕು ಸುತನಲ್ಲಿ ಗುಣ ಬೇಕು।
ಮತಿವಂತನಾಗಬೇಕು ಮತ ಒಂದಾಗಿರಬೇಕು ॥೧॥

ಜಪದ ಜಾಣುವೆ ಬೇಕು ತಪದ ನೇಮವೇ ಬೆಕು।
ಉಪವಾಸವ್ರತ ಬೇಕು ಉಪಶಾಂತವಿರಬೇಕು ॥೨॥

II

ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು।
ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು ॥೩॥
ಕರುಣದಿ ತನುಮನಧನಂಗಳೆಲ್ಲವೂ ।
ನಿನ್ನ ಚರಣಕಮಲಕೊಪ್ಪಿಸಿದ ಬಳಿಕ ।
ಮರಳಿ ಎನ್ನ ಮರುಳು ಮಾಡುವರೆ ।
ಸರಕು ಒಪ್ಪಿಸಿದ ಮ್ಯಾಲೆ ಸುಂಕವುಂಟೇ ದೇವಾ।
ಕರುಣಾಕರ ನಿನ್ನ ಚರಣದಡಿಯೊಳಿಟ್ಟು ಕಾಯೋ ರಂಗ ವಿಠಲ॥

# ೬. ಗುರೂಪದೇಶ ಪ್ರಕರಣ

ಮನೆಯಲ್ಲಿ ಸ್ತ್ರೀಯರು ಸದಾಚಾರಿಣಿಯರಾಗಿದ್ದರೆ ಅವರು ಗೃಹಿಣಿಯರೆಂದು ಗೌರವಿಸಲ್ಪಡುತ್ತಾರೆ, ಅಂಥ ಮನೆಯು ನಿಜವಾದ ಮನೆ ಎಂದು ಕರೆಸಿಕೊಳ್ಳುತ್ತದೆ. ಅಂತೆಯೇ **"ಗೃಹಿಣೀ ಗೃಹಮುಚ್ಯತೇ"** ಎಂದು ನಮ್ಮ ಹಿರಿಯರು ಹೇಳಿದರು. ಹರಿದಾಸರು ತಮ್ಮ ಅನೇಕ ಕೃತಿಗಳಲ್ಲಿ ಸ್ತ್ರೀಯರ ಸದಾಚಾರಗಳ ಬಗ್ಗೆ ಒತ್ತಿ ಹೇಳಿದ್ದಾರೆ ಹಾಗೂ ಸ್ತ್ರೀಯು ದುಷ್ಟಳಾದರೆ ಗೃಹ, ಕುಟುಂಬ, ಸಂತಾನ ಹಾಗೂ ಸಮಾಜವು ಕೆಟ್ಟು ಅನರ್ಥಕ್ಕೀಡಾಗುವುದರಿಂದ ಸ್ತ್ರೀಯರು ದುರಾಚಾರಿಣಿ ಯರಾಗದಿರುವಂತೆ ಎಚ್ಚರಿಸಿದ್ದಾರೆ. ಈ ಪ್ರಕರಣದಲ್ಲಿ ಮೊದಲು ಸ್ತ್ರೀ ಪುರುಷರಿಬ್ಬರಿಗೂ ಕೆಲವು ಜ್ಞಾನಿಗಳ ಸಾರ್ವಜನಿಕ ಉಪದೇಶಗಳನ್ನು ಕೊಟ್ಟು ನಂತರ ಸ್ತ್ರೀಯರ ಸದಾಚಾರ, ಸದ್ವಿಚಾರಗಳನ್ನು ತಿಳಿಸುವ ಹಾಗೂ ದುರಾಚಾರಗಳನ್ನು ನಿಂದಿಸುವ ಶ್ರೀಹರಿದಾಸರ ಕೆಲ ಆಯ್ದ ಕೃತಿಗಳನ್ನು ಕೊಡಲಾಗಿದೆ. ಸದಾಚಾರಿಣಿ ಸ್ತ್ರೀಯು ಚಿರಕಾಲ ಸೌಮಾಂಗಲ್ಯ ಪ್ರಾಪ್ತಿಗಾಗಿ ಮತ್ತು ಸತ್ಸಂತಾನ ಪ್ರಾಪ್ತಿಗಾಗಿ ಜಪಿಸಬೇಕಾದ ೨ ಮಹಾ ಮಂತ್ರ ಗಳನ್ನು ಕೊಡಲಾಗಿದೆ. ಕೊನೆಯಲ್ಲಿ ಗ್ರಹಣಸಮಯದಲ್ಲಿ ಸ್ತ್ರೀ-ಪುರುಷರು ಅವಶ್ಯ ಮಾಡಬೇಕಾದ ಕೆಲವು ಆಚಾರಗಳ ಬಗ್ಗೆ ಸಂಕ್ಷೇಪದಲ್ಲಿ ತಿಳಿಸಲಾಗಿದೆ.

## ಅ) ಗುರೂಪದೇಶಗಳು

**೧) ರಾಗ - ಶಂಕರಾಭರಣ ಆದಿತಾಳ**

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ । ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವವಗೆ॥ ಪ.॥ ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು । ಮತಿವಂತನಾಗಬೇಕು ಮತ ಒಂದಾಗಿರಬೇಕು ॥೧॥ ಜಪದ ಜಾಣುವೆ ಬೇಕು ತಪದ ನೇಮವೆ ಬೇಕು । ಉಪವಾಸ ವ್ರತ ಬೇಕು ಉಪಶಾಂತವಿರಬೇಕು॥೨॥ ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು । ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು ॥೩॥

**೨) ರಾಗ - ಮೋಹನ ತಾಳ - ಅಟ್ಟ**

ಕೈಮೀರಿ ಹೋದ ಮಾತಿಗೆ ಮರುಗಬಾರದು । ಮೈಮೇಲೆ ಎಚ್ಚರವಿಲ್ಲದೆಲೆ ತಿರುಗಬಾರದು॥ಪ.॥ ತಂದೆ ತಾಯಿ ಮಾತು ಕೇಳದಾ ಮಕ್ಕಳಿರಲೇಬಾರದು । ಬಂಧು ಬಳಗದಲ್ಲಿ ಜಗಳವಾಡಬಾರದು॥೧॥ ನಡತೆಹೀನಳಾಗಿ ಹೆಣ್ಣು ಬಾಳಬಾರದು । ಕಡುವೈರತ್ವ ಮಾಡುವವನ ಮಾತು ಕೇಳಬಾರದು ॥೨॥ ಸತಿಸುತರಿಗೆ ಪುರುಷ ವಂಚನೆ ಮಾಡಬಾರದು । ಅತಿ ಉನ್ಮತ್ತನಾಗಿ ಧರ್ಮ ಹಳಿಯಬಾರದು ॥೩॥ ಆಚಾರವಿಲ್ಲದವರ ಮನೇ ಊಟ ಮಾಡಬಾರದು । ವಿಚಾರವಿಲ್ಲದಾ ಸಭೆಯಲ್ಲಿ ಕೂಡ್ರಬಾರದು॥೪॥ ಪಂಕ್ತಿಯೊಳಗೆ ಭೇದ ಮಾಡಿ ಬಡಿಸಬಾರದು।

ಬಿಂಕದಿಂದ ಪರರ ಮನಸು ನೋಯಿಸಬಾರದು॥೫॥ ಸಾವು ನೋವುಗಳಿಲ್ಲವೆಂದು ತಿಳಿಯ ಬಾರದು। ದೇವನೊಬ್ಬನಿರುವನೆಂದು ಮರೆಯಬಾರದು ॥೬॥ ಪರರ ಸಂಪತ್ತು ನೋಡಿ ಮನದಿ ಕೊರಗಬಾರದು । ಗುರು ಪುರಂದರ ವಿಠ್ಠಲರಾಯನ ಕೊಂಡಾಡದೆ ಇರಬಾರದು ॥ ೭ ॥

೩) ರಾಗ - ಪಂತುವರಾಳಿ ತಾಳ - ಅಟ್ಟ

ಮಾನವಜನ್ಮ ದೊಡ್ಡದು - ಇದ । ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ॥ ಪ.॥ ಕಣ್ಣು ಕೈಕಾಲ್ಕಿವಿ ನಾಲಗೆ ಇರಲಿಕ್ಕೆ ಮಣ್ಣು ಮುಕ್ಕಿ ಮರುಳಾಗುವರೆ । ಹೊನ್ನು ಹೆಣ್ಣಿಗಾಗಿ ಹರಿನಾಮಾಮೃತವನು ಉಣ್ಣದೆ ಉಪವಾಸವಿರುವರೇನೋ ॥ ೧ ॥ ಕಾಲನವರು ಬಂದು ಕರಪಿಡಿದೆಳೆವಾಗ ತಾಳು ತಾಳೆಂದರೆ ಕೇಳುವರೆ । ವೇಳೆ ಹೋಗದ ಮುನ್ನ ಧರ್ಮವ ಗಳಿಸಿರೊ ಸುಳ್ಳಿನ ಸಂಸಾರ ಸುಳಿಗೆ ಸಿಲುಕಬೇಡಿ ॥ ೨ ॥ ಏನು ಕಾರಣ ಯದುಪತಿಯನು ಮರೆತಿರಿ ಧಾನ್ಯ-ಧನ ಸತಿ-ಸುತರಿವು ನಿತ್ಯವೆ । ಇನ್ನಾದರು ಶ್ರೀಪುರಂದರ ವಿಠಲನ ಚೆನ್ನಾಗಿ ಭಜಿಸಿ ನೀವ್ ಸುಖಿಯಾಗಿರಯ್ಯ॥೩॥

೪) ರಾಗ - ಮೋಹನ ತಾಳ - ಅಟ್ಟ

ವಿಷಯದ ವಿಚಾರ ಬಿಡು ವಿಹಿತ ಕರ್ಮವ ಮಾಡು । ವೈರಾಗ್ಯ ಭಾಗ್ಯ ಬೇಡು ॥ ಪ.॥ ವಿಷವೆಂದು ಕಾಮಕ್ರೋಧಗಳೆಲ್ಲವೀಡಾಡು । ಮಸಣ ಮನವೇ ಮಾಧವನನು ಕೊಂಡಾಡು ॥ ಅ.ಪ.॥ ಅನುದಿನದಿ ಹರಿಕಥೆಯ ಕೇಳಿ ಸಂತೋಷಪಡು । ದಿನದಿನವು ಸಜ್ಜನರ ಕೂಡು । ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು । ಹಣ ಹೊನ್ನು ಪರಹೆಣ್ಣು ಹಂಚೆಂದು ನೋಡು ॥ ೧॥ ವೇದಶಾಸ್ತ್ರಾರ್ಥ ತತ್ವದ ವಿಚಾರವ ಮಾಡು । ಮಾಧವನ ಭಕ್ತಿ ಬೇಡು । ಪಾದದಿಂದಲಿ ತೀರ್ಥಯಾತ್ರೆಗಳ ನೀ ಮಾಡು । ಖೇದ ಪಡದನುದಿನದಿ ಸಂತೋಷ ಕೂಡು ॥ ೨ ॥ ನಂಬದಿರು ಈ ದೇಹ ಅಂಬುಗುಳ್ಳೆಯಂತೆ । ನಂಬೀ ನೀ ಕೆಡಲು ಬೇಡ । ಕೊಂಬುವರು ಬಂದರಾ ಕ್ಷಣಕೆ ಬೆಲೆಯಾಗುವುದು । ಅಂಬುಜಾಕ್ಷ ಪುರಂದರವಿಠಲನ್ನ ನೆನೆ ಮನವೆ ॥ ೩ ॥

## ಶ್ರೀವಿಷ್ಣುತೀರ್ಥ ವಿರಚಿತ
## ಆತ್ಮಸುಖಬೋಧಿನೀ ಪತ್ರಿಕಾ

ಆತ್ಮಸುಖಬೋಧಿನೀ ಪತ್ರಿಕೇತ್ಯಸ್ಯಾಯಮರ್ಥಃ - ತಂತ್ರನ್ಯಾಯೇನ ಆತ್ಮನೋ ಹರೇರನುಗ್ರಹಾತ್, ಆತ್ಮನಾಂ - ಜೀವಾನಾಂ ಸುಖಂ ಆತ್ಮಸುಖಂ ಸ್ವರೂಪಸುಖಂ ಬೋಧಯತೀತಿ ತಾದೃಶೀ ಪತ್ರಿಕಾ । **'ಪರಮಾತ್ಮಾನುಗ್ರಹಾತ್ ಜೀವಾನಾಂ ಸ್ವರೂಪಸುಖ ಸಾಧನಬೋಧಿನೀ ಪತ್ರಿಕಾ'** ಇತಿ ಭಾವಃ ।

ಈ ಜೀವರು ಭಗವದಿಚ್ಛಾಮೂಲಕ ಅನಾದಿಕರ್ಮದಿಂದ ಲಿಂಗ (ಶರೀರದಿಂದ) ಬದ್ಧರಾಗಿ ಬ್ರಹ್ಮಕಲ್ಪದಲ್ಲಿ ಸ್ಥೂಲಶರೀರವನ್ನು ಹೊಂದಿ, ಅನೇಕ ಕರ್ಮ(ವನ್ನು) ಮಾಡುತ್ತ, ಅದ್ಯಾಪಿ ನಾನಾ ಯೋನಿಗಳಲ್ಲಿ ಭ್ರಮಿಸುತ್ತ, ಅಕಸ್ಮಾತ್ ಈ ಪುಣ್ಯಭೂಮಿಯಾದ ಭರತಖಂಡದಲ್ಲಿ ಅತಿ ದುರ್ಲಭ(ವಾದ) ಮನುಷ್ಯ ಜನ್ಮವನ್ನು ಪಡೆಯುವರು. ಆಗ್ಗೆ ಅವರು ಆವಶ್ಯವಾಗಿ ಮಾಡತಕ್ಕ ಸಾಧ್ಯವಾದ ಸಾಧನವೇನೆಂದರೆ,

(ಒಂದು) ತೃಣ ಪ್ರಾರಂಭ ಮಾಡಿ (ಬ್ರಹ್ಮಲೋಕ) ಪರ್ಯಂತವಾಗಿ (ಇರುವ ಎಲ್ಲ) ವಿಷಯಗಳು ಅಸಾರವಾಗಿಯೂ, ಅನಿತ್ಯವಾಗಿಯೂ ಇರುವವು ಎಂಬುದನ್ನು (ಎಂತ) 'ಪ್ರತ್ಯಕ್ಷ, ಅನುಮಾನ, ಆಗಮ'ಗಳಿಂದ ನಿಶ್ಚಯಿಸಿ, ಶರೀರಾದಿಗಳಲ್ಲಿ ಅಹಂ ಮಮತಾದಿ ದುರಾಗ್ರಹ(ವನ್ನು) ಬಿಟ್ಟು, ಈ ಪುತ್ರಕಲತ್ರಾದಿ ಸಂಗ(ಮ)ವು ಪಥಿಕಸಂಗಮದಂತೆ ಕ್ಷಣಿಕವೆಂದು (ತಿಳಿದು- ಕೊಂಡು) ಈ ಪಂಚಭೂತಶರೀರನಿಮಿತ್ತ(ವಾಗಿ) ಅದೃಷ್ಟನಿಯಾಮಕ ಶ್ರೀಹರಿಯಿಂದ ಕ್ಲೃಪ್ತವಾದ ದುಃಖದಂತೆ, ಸುಖವಾದರೂ ಪ್ರಯತ್ನವಿಲ್ಲದೆ ಲಭ್ಯವಾಗುವುದು ಎಂದು ತಿಳಿದು ಅನುಭವಿಸುತ್ತಿರಬೇಕು. ಈ ಸಂಸಾರದಲ್ಲಿ ಉದರನಿರ್ವಾಹಕ್ಕಾಗಿ ಯಾವ ಲೌಕಿಕ ಕಾರ್ಯಗಳನ್ನು ಮಾಡಿದರೂ (ಸಹ) ಹರಿಸ್ಮರಣ, ತತ್ಸ್ವಾತಂತ್ರ್ಯಗಳಿಗೆ ಲೋಪ ಬರದಂತೆ ಪದ್ಮಪತ್ರದಂತೆ ನಿರ್ಲೇಪದಿಂದ ಇರಬೇಕು. ಕೇವಲ ಸ್ವಶರೀರರಕ್ಷಣ ಬುದ್ಧಿಯು, ನಾಯಿ, ಹಂದಿಗಳಿಗಾದರೂ ಇರುವುದರಿಂದ ಮನುಷ್ಯನಾದರೂ ಶರೀರರಕ್ಷಣ ಮಾತ್ರವನ್ನೇ ಮಾಡಹತ್ತಿದರೆ ಹಂದಿ - ನಾಯಿಗಳಿಗೂ ಮನುಷ್ಯರಿಗೂ ಭೇದವಿಲ್ಲದಂತೆ ಆಗುವುದಿಲ್ಲವೆ ? ಆದ್ದರಿಂದ ಈ ದಿವ್ಯವಾದ ಮನುಷ್ಯದೇಹ, ತತ್ರಾಪಿ ಜ್ಞಾನಾದಿ ಸರ್ವವಿಚಾರ, ಯೋಗ್ಯ ಬ್ರಾಹ್ಮಣಜನ್ಮ ಬಂದದ್ದಕ್ಕೆ ಸರ್ವತ್ರ ಸಾರಾಸಾರ ವಿಚಾರ ಮಾಡಿ ಪಶುಬುದ್ಧಿ(ಯನ್ನು) ಬಿಟ್ಟು, ಬಹಿರ್ವಿಷಯಗಳೆಲ್ಲವನ್ನು ಬಿಸಿಲ್ಗುದುರೆ (ಮೃಗತೃಷ್ಣಿಕಾ)ಯಂತೆ ತಿಳಿದು ವಿಷಯಗಳ ಮೋಹದಿಂದ ಧಾವಿಸುವ ಮನಸ್ಸನ್ನು ನಿಗ್ರಹ ಮಾಡಿ, ( ತನ್ನ ನಿಜವಾದ ಸ್ವರೂಪಸುಖವಿರಲು) ಯಾವನ ಅನುಗ್ರಹದಿಂದ ಆವರಕ ದೂರವಾಗಿ ಆ (ಮೋಕ್ಷ) ಸುಖವು ಹ್ಯಾಗೆ ಲಬ್ಧವಾದೀತೋ ಹಾಗೆ ಮಾಡಬೇಕು. ಅಲಭ್ಯವಾದರೂ ಪ್ರಯತ್ನ ಸಾಧ್ಯವಾಗಿರುವ ಸತ್ಸಹವಾಸದಿಂದ ಶ್ರೀನಾರಾಯಣ, ಲಕ್ಷ್ಮೀ, ವಾಯುದೇವರು ಮುಂತಾದವರ ತಾರತಮ್ಯ ತಿಳಿದು ಶ್ರೀಹರಿಯೇ ಸರ್ವಸಾರ ಸರ್ವೋತ್ತಮ, ಸರ್ವಗುಣ (ಪರಿ)ಪೂರ್ಣ, ದೋಷದೂರ, ಮುಕ್ತಾಮುಕ್ತ ಪ್ರಪಂಚೇಶ, ಸೃಷ್ಟ್ಯಾದ್ಯಷ್ಟಕರ್ತ,ಸಾತ್ವಿಕಾದಿ ತ್ರಿವಿಧಜೀವರಿಗೆ ತತ್ತದ್ಯೋಗ್ಯವಾದ ಗತಿಯೀವನೆಂದು ತಿಳಿದು ಆತನಲ್ಲಿ ಬಹುಮಾನಪುರಸ್ಸರ (ವಾಗಿಯೂ) ಅತಿಶಯ ಪ್ರೇಮಪೂರ್ವಕ(ವಾಗಿಯೂ), ಆ ಭಗವಂತನ ವಿಷಯವಾಗಿ ಶ್ರವಣ, ಕೀರ್ತನ, ಸ್ಮರಣ (ಧ್ಯಾನ), ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ(ಗಳನ್ನು) ಮಾಡುತ್ತ, 'ನಾನು ನಿನ್ನ ಭೃತ್ಯ, ಅಜ್ಞ, ಅಸ್ವತಂತ್ರ ನೀನು ಸರ್ವೇಶ, ಸರ್ವತಂತ್ರಸ್ವತಂತ್ರ (ಆದುದರಿಂದ ನೀನು) ಸರ್ವೇಂದ್ರಿಯ ಗಳಲ್ಲಿ ನಿಂತು ತತ್ತೇಶನಿಯಾಮಕನಾಗಿ ಸುಕರ್ಮ ದುಷ್ಕರ್ಮ ಮಾಡಿಸಿ ನೀನೇ ನಿನ್ನ ಪೂಜಾತ್ವೇನ ಸ್ವೀಕಾರಮಾಡು' ಎಂದು ಪ್ರಾರ್ಥಿಸುತ್ತ, ಮಾಡಿದ್ದನ್ನು ಪರಮಾತ್ಮನಿಗೆ ಸಮರ್ಪಣ ಮಾಡಬೇಕು. ಹೀಗೆ ಅನವರತ ಶ್ರೀಹರಿ(ಚರಣ) ಸ್ಮರಣ, ಧ್ಯಾನ, ಭಕ್ತಿಯಿಂದ ಅಪರೋಕ್ಷ ಜ್ಞಾನ ಸಂಪಾದನ ಮಾಡಿ, ಮುಂದೆ ಭಗವದನುಗ್ರಹರೂಪ ಪ್ರಸಾದದಿಂದ ಯಥಾಯೋಗ್ಯ- ಸ್ವರೂಪಸುಖಾವಿರ್ಭಾವಲಕ್ಷಣ(ವಾದ) ಮುಕ್ತಿ ಪಡೆಯುವುದೇ ಮಹಾ ವೈಭವವು (ಲಾಭ).

ಭಗವದ್ವಾರ್ತಾದಿಂದ ಕಾಲ (ವ್ಯಾಳ್ಯ) ಕಳೆದಲ್ಲಿ ಆಯುಷ್ಯ, ಜನ್ಮ, ಕರ್ಮ, ಕಾಲ(ಗಳು) ಸಾರ್ಥಕವಾಗಿ, ಗೃಹವಾಸವು ಬಂಧಕವಾಗುವುದಿಲ್ಲ. ಇದಲ್ಲದೇ ಗೃಹದಲ್ಲಿ ಕೇವಲ

ಕುಕ್ಷಿಂಭರನಾಗಿ ಭೋಗಾಸಕ್ತನಾಗಿ ಶ್ರೀಹರಿಯನ್ನು ಮರೆತುಬಿಟ್ಟರೆ, ಸರ್ವದೇಹ ಬುದ್ಧಿ ಇಂದ್ರಿಯಗಳನ್ನು ಕೊಟ್ಟ ಮೋಕ್ಷದಾಯಕನೂ ಆಗಿರುವ ಪರಮಾತ್ಮನ ದ್ರೋಹ, ತಜ್ಜನ್ಯ ಆತ್ಮದ್ರೋಹಗಳಿಂದ ತಮಸ್ಸೇ ಪ್ರಾಪ್ತವಾಗುವುದು; ಇದರ ಸಮಾನ ಹಾನಿ ಮತ್ತೊಂದಿಲ್ಲ. ಹರಿ - ವಿಸ್ಮರಣರೂಪ ವಿಪದಪೇಕ್ಷಯಾ ಮತ್ತೊಂದು ವಿಪತ್ತಿಲ್ಲ (ಹಾನಿಯಿಲ್ಲ). ಶ್ರೀಹರಿಸ್ಮರಣ (ರೂಪ) ಸಂಪದಪೇಕ್ಷಯಾ ಮತ್ತೊಂದು ಸಂಪತ್ತಿಲ್ಲ. ಸಂಸಾರದಲ್ಲಿರುವ ಸಂಪದ್ವಿಪತ್ತುಗಳು ಸಂಪದ್ವಿಪತ್ತುಗಳಲ್ಲ. (ಶ್ರೀಹರಿ- ಸ್ಮರಣವೇ ಸರ್ವೋತ್ತಮ ವಿಧಿಯು). ಹರಿವಿಸ್ಮರಣವೇ ಸರ್ವನಿಷೇಧ(ವು). ಸರ್ವವಿಧಿನಿಷೇಧಗಳು ಇದರ ಕಿಂಕರವಾಗಿರುತ್ತವೆ.

ಯಾವ ದೇಶ, ಕಾಲಸ್ಥಿತಿಗಳಲ್ಲಿ ಮನಃಪ್ರಸನ್ನವಾಗಿ ಭಗವತ್ಸ್ಮರಣೆಗೆ ಅನುಕೂಲವಾಗುವುದೋ ಅದೇ ದೇಶ, ಅದೇ ಕಾಲ, ಅದೇ ಅವಸ್ಥಾ ಸೇವನ ಮಾಡತಕ್ಕದ್ದು. ಹಿಂಗಲ್ಲದೆ ಪ್ರಯಾಗಾದಿ ತೀರ್ಥಯಾತ್ರೆ ವಸಂತಾದಿ ಕಾಲವ್ರತ ನಿಯಮಾದಿ ವ್ಯವಸ್ಥಾ ಲೋಕವಿಡಂಬನ ಮಾತ್ರವಾಗಿ ಪ್ರತ್ಯುತ ಶ್ರಮ ಜನಕವೇ ಆಗುವವು. ಪಾಠಪ್ರಚನಗಳು ಉಕ್ತಭಕ್ತಿರಹಿತವಾಗಿ ಕೇವಲ ವಾಕ್ಯಾರ್ಥ ಪರ್ಯವಸಾನವಾದರೆ ವಂಧ್ಯಾಗೋರಕ್ಷಣ ಮಾಡಿದಂತೆ ನಿಷ್ಪ್ರಯೋಜನ ವಾಗುತ್ತವೆ. ಇದು ಶ್ರೀಮದ್ಭಾಗವತಾದಿ ಸಕಲ (ಪುರಾಣ) ಶಾಸ್ತ್ರಸಾರವಿರುತ್ತದೆ(ವುದು). ಸಜ್ಜನರು ದಯಪಾಲಿಸಿ ಕ್ಷಣಮಾತ್ರ ಚಿತ್ತ ಕೊಟ್ಟು ಅವಲೋಕನ ಮಾಡಬೇಕು (ಎಂತ ಪ್ರಾರ್ಥನಾ) ॥

❖❖❖

## ಸಾಧಕರಿಗೆ ಶ್ರೀವಿಷ್ಣುತೀರ್ಥರ ಉಪದೇಶ ಪತ್ರ

**ಶ್ರೀಮದಾನಂದತೀರ್ಥಾರ್ಯಮೋಕ್ಷಶಾಸ್ತ್ರನಿಷೇವಕಾಃ ।**
**ಸದಾ ಭವಂತು ಗುರುರಾಡ್ವಿದ್ಯಾಸಂತತಿಧಾರಕಾಃ ॥**

ಚಿರಂಜೀವಕಾಸ್ಮದ್ವಿದ್ಯಾಕುಮಾರಕರಾದ ಶಿಷ್ಯರುಗಳಿಗೆ (ಗೋಕಾವಿ ಅನಂತಾದ್ರಿ ಭೀಮಾಚಾರ್ಯರಿಗೆ) ಕಳುಹಿಸಿದ ಉಪದೇಶಪತ್ರ (ಕ್ರಮದ ವಿವರ) ನೀವು ಪ್ರವರ್ತಿಸೋ ಪ್ರಕಾರ:

ಒಂದು ದಿವಸಕ್ಕೆ ೬೦ ಘಳಿಗಿ. ಅದರೊಳಗೆ ಪಶ್ಚಿಮರಾತ್ರಿಯಲ್ಲಿ ೬ ಘಳಿಗಿ ಇರಲಿಕ್ಕೆ ಎದ್ದು, ೪ ಘಳಿಗಿ ಶಾಸ್ತ್ರವಿಚಾರ ೨ ಘಳಿಗಿ ಉಪದಿಷ್ಟ ಮಾರ್ಗದಿಂದ ಶ್ರೀಹರಿ ವಿಚಾರ ಹಗಲು ೩೦ ಘಳಿಗಿ ವಳಗೆ ೨ ಘಳಿಗಿ ಸ್ನಾನ ೨ ಘಳಿಗಿ ಜಪ ೨ ಘಳಿಗಿ ದೇವತಾರ್ಚನೆ ೨ ಘಳಿಗಿ ಭೋಜನ ೨ ಘಳಿಗಿ ಆಲಸ್ಯ ಪರಿಹಾರ ಮಾಡಿಕೊಂಬೋಣ. ಉಳಿದ ೨೦ ಘಳಿಗಿ (ಶಾಸ್ತ್ರಶ್ರವಣ) ಪ್ರವಚನ, ಪೂರ್ವರಾತ್ರಿಯಲ್ಲಿ ೨ ಘಳಿಗಿ ಸಂಧ್ಯಾವಂದನ, ದೇವರ ಪೂಜೆಗಳು, ೮ ಘಳಿಗಿ ಪುಸ್ತಕಾವಲೋಕನಾದಿಗಳು, ೧೪ ಘಳಿಗಿ ನಿದ್ರಾ ಈ ಪ್ರಕಾರ ಪ್ರವರ್ತಿಸಬೇಕು.

ತಮ್ಮ ತಮ್ಮ ಶಕ್ತ್ಯನುಸಾರ ಯೋಗ್ಯತಾಭಿವ್ಯಕ್ತಿಕಾಲಾನುಸಾರ ಅಧಿಕವಾಗಿ ವ್ಯಾಸಂಗ ಮಾಡಬೇಕು. ಶ್ರೀಹರಿಯು ದಾರಿಗೆ ದಾವುದು ಮಾಡೋ ಅಧಿಕಾರ ಕೊಟ್ಟು ಹುಟ್ಟಿಸಿದ್ದಾನೋ ಅವರು ಅದನ್ನು ಮಾಡದೆ ಉಳಿದ ಸಹಸ್ರ ಸಾಧನ ಮಾಡಿದರೂ ಶ್ರೀಹರಿಯ ಆಜ್ಞಾ ಮೀರಿದವರೇ ಸರಿ. ಮುಂದೆ ಬಹಳ ಶ್ರಮ ಪಡುವವರೇ ಸರಿ. ನಿಮಗೆ ಯೋಗ್ಯತಾನುಸಾರ

ಸಾಧನ ಸಾಮಗ್ರಿ ಕೊಟ್ಟಿರಲಿಕ್ಕೆ ಮುಕ್ತಿಸಾಧನ ಮಾಡದೆ ಇದ್ದರೆ ಹ್ಯಾಗೆ ಶ್ರಮವಾಗದೆ ಹೋದೀತು ? -

ಪ್ರಾಪ್ಯಾ ನೃಜಾತಿಂ ತ್ವಿಹ ಯೇ ಚ ಜಂತವೋ
ಜ್ಞಾನಕ್ರಿಯಾದ್ರವ್ಯಕಲಾಪಸಂಭೃತಾಃ ।
ನ ಚೇದ್ ಯತೇರನ್ನಪುನರ್ಭವಾಯ
ಭೂಯೋ ವನೌಕಾ ಇವ ಯಾಂತಿ ಬಂಧನಮ್ ॥

ಇದೇ ವಿಷಯದಲ್ಲಿ ಸರ್ವದಾ ಉದ್ಯೋಗಿ ಆಗಿ ಇರಬೇಕು. ಲೌಕಿಕ ತನ್ನಿಂದ ತಾನೇ ಬಂದೀತು-

ತಸ್ಯೈವ ಹೇತೋಃ ಪ್ರಯತೇತ ಕೋವಿದೋ
ನ ಲಭ್ಯತೇ ಯದ್‌ಭ್ರಮತಾಮುಪರ್ಯಧಃ ।
ತಲ್ಲಭ್ಯತೇ ದುಃಖವದನ್ಯತಃ ಸುಖಂ
ಕಾಲೇನ ಸರ್ವತ್ರ ಗಭೀರರಂಹಸಾ ॥

ಯದೃಚ್ಛಾಲಾಭ(ಸಂ)ತುಷ್ಟನಾಗಿರುವುದೇ ಮುಖ್ಯವು. ಯಾಚನ ಮಾಡಿದರೂ ಪ್ರಾಣಪರಿಪಾಲನಮಾತ್ರೋಪಯುಕ್ತವೇ ಮಾಡಬೇಕು. ಹೆಚ್ಚು ಮಾಡಿದಾತನು ಶ್ರಮಬಟ್ಟಾನು-

ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್
ಸಿದ್ಧ್ಯತ್ಯದೂರಾನ್ನ ತಥೇಂದ್ರಿಯಪ್ರಿಯಃ ॥

ಈ ಭರತಖಂಡಸದೃಶ ಸಾಧನಸ್ಥಾನ, ಉಪದೇಶದಿಂದ ಬಂದ ಕಿಂಚಿತ್ ಪರತತ್ತ್ವಜ್ಞಾನ ಇವು ಎರಡೂ ಸರ್ವಥಾ ದೊರೆಯದಂಥಾವು. ಬಂದಾಗ್ಯೆ ಸ್ವಕಾರ್ಯ ಸಾಧಿಸಿಕೊಂಬೋದು ಬಿಟ್ಟು, ನಿಮ್ಮ ಅನರ್ಥ ನೀವೇ ಮಾಡಿಕೊಂಬೋಣ ಉಚಿತವಲ್ಲ. ಪಾಮರಜನರ ಕೈಯಿಂದ ಮಾನ, ಕಿಂಚಿದ್ಧನ, ಅವರ ಮನೆಯಲ್ಲಿ ನಾಲ್ಕು ದಿವಸ ಮೃಷ್ಟಾನ್ನ ಭ ೀಜನ, ವಸನಲಾಭವೇ ದೊಡ್ಡ ಪುರುಷಾರ್ಥ ಎಂತ ತಿಳಿದು, ಬಾಯಿ ಒಳಗೆ ಮೂರು ಭ ಗಸಿ ಮಣ್ಣು ಹಾಕಿಕೊಂಡು ಹೋಗೋ ವ್ಯಾಪಾರ ಮಾಡುತ್ತ "ಪ್ರೇಕ್ಷಾವಚ್ಛಿಖಾಮಣಿಗಳು ನಾವೇ, ನಾವೇ ಸಕಲ ಶಾಸ್ತ್ರಾರ್ಥ ಬಲ್ಲಿವಿ" ಎಂತ ಬೊಗಳುತ್ತ, ಅವಾಗ್ಗತಿಯಲ್ಲಿ ಬೀಳೋ ವ್ಯಾಪಾರ ಅನವರತ ಮಾಡಿ ಜನರ ಮುಂದೆ ಕೇವಲ ಮೋಕ್ಷ ಮಾರ್ಗನಿರತರು ಎಂತ ತೋರಿಸಿದಾಗ್ಯೂ ನಿಮ್ಮ ಮನಸ್ಸಿಗೆ ವಂಚಕತನ ಹ್ಯಾಗೆ ತೋರೋದಿಲ್ಲ? ತೋರಿ, ಪ್ರಾಜ್ಞಶಿರೋಮಣಿಗಳ ದೆಸೆಯಿಂದ ಲಜ್ಜಾ ಹ್ಯಾಗೆ ಹುಟ್ಟೋದಿಲ್ಲ ?

ಈ ಅಸಾರ ಸಂಸಾರಸಾಗರದಿಂದ ಕಡಿಗೆ ಬರಬೇಕಾದರೆ ಬಹಳ ಪ್ರತಿಬಂಧಕಗಳು. ಅವುಗಳ ವಿವರ - ಈ ಯುಗಾಧಿಪತಿ ಕಲಿಯು. ಯೋಗ್ಯ ಜನರಲ್ಲೇ ನಿವಿಷ್ಟನಾಗಿ ನೀವು ಹೋಗುವ ಮಾರ್ಗಕ್ಕೆ ಪ್ರತಿಬಂಧಕನಾದಾನು. ಆ ಕಲಿಯಿಂದ ಬಂದ ದುರುಕ್ತ್ಯಾದಿಗಳು ಅವರುಗಳಿಗೆ ಸಾಧನಾರ್ಥ. ಅವನು ದಾವ (ಯೋಗ್ಯ) ಅಧಿಷ್ಠಾನದಲ್ಲಿ ನಿಂತು ಉಪದ್ರವ ಮಾಡುತ್ತಾನೋ ಆ ಅಧಿಷ್ಠಾನರಾದ ಯೋಗ್ಯರಿಗೆ ಜನ್ಮಾಂತರಾರ್ಜಿತ ಪುಣ್ಯನಾಶಾರ್ಥ ಎಂತ ಅನುಸಂಧಾನಕ್ಕೆ

ತಂದು ಸ್ವನಿಂದಾ, ಸ್ತೋತ್ತಮನಿಂದಾಗಳ ಗಣನ ಮಾಡದೇ ತಾನು ಅವರಿಗೆ ಸಮಕ್ಷಮದಲ್ಲಿ ಚೆನ್ನಾಗಿ ನಡಕೋಬೇಕು. ಅದಕ್ಕೆ ಪಕ್ವತಾ ಸಾಲದೇ ಹೋದರೆ ದೂರನಾಗಿ ಇದ್ದು ಅವರಲ್ಲಿ ಸ್ನೇಹಾಭಿವೃದ್ಧಿ ಪ್ರಕಾರ ಪರೋಕ್ಷದಲ್ಲಿ ಸಂಪಾದಿಸಬೇಕು. ಆಮೇಲೆ ಪ್ರತ್ಯಕ್ಷದಲ್ಲೂ ಆದೀತು. ತನ್ನ ಪ್ರಯೋಜನ ತಾ ಸಾಧಿಸಿಕೊಳ್ಳಬೇಕು. ಹಾಗೂ ಅವನು ಪ್ರಾಣಪ್ರಿಯಳಲ್ಲಿ ಆವಿಷ್ಟನಾಗಿ ರಹಸ್ಯಕಾಲದಲ್ಲಿ 'ನೀವು ಈ ಪ್ರಕಾರ ಮಾಡೋಣ ಉಚಿತವಲ್ಲ, ಕೇವಲ ಯಃಕಶ್ಚಿತರೆಂಬುವರು ವಸ್ತ್ರಾಭರಣಗಳಿಂದ ನೆಟ್ಟಗಿದ್ದಾರೆ ನಿಮ್ಮಂಥಾ ಮಹಾತ್ಮರ ಕೈಹಿಡಿದೂ ನಾನು ಈ ಪ್ರಕಾರ ಇದ್ದರೆ ನಿಮ್ಮ ಮಾನಕ್ಕೆ ಕಡಿಮಿ. ನಮ್ಮ ಮೈದುನ ಮೊದಲಾದ ಬಹುಮಂದಿಗಳು ಅಪಹಾಸ ಮಾಡುತಾರೆ'. 'ಯಾಕೆ ಮಾಡವಲ್ಲರು?' ಎಂತ ಉತ್ತರ ಕೊಟ್ಟರೆ, ನನ್ನಿಂದ ಅಷ್ಟಕ್ಕೆ (ಕಷ್ಟ) ತಡಿಯೋಣ ಆಗೋದಿಲ್ಲ. ನಿಮಗೆ ಏನೆಂದರೂ ನಾಚಿಕೆಯಿಲ್ಲ. ನಮ್ಮ ನಾದಿನೀ, ನೆಘೆಣ್ಣೀ, ಅಕ್ಕ, ತಂಗಿ, ಮೊದಲಾದವರುಗಳ ಅಪಹಾಸ ಕೇಳೋಣವು ನನ್ನಿಂದ ಆಗೋಣಿಲ್ಲ. ನಾನು ಪ್ರಾಣತ್ಯಾಗವೆ ಮಾಡುತ್ತೇನೆ. ಇಂಥಾ ಬಾಳುವೆ ಮಾಡೋಣ ನನ್ನಿಂದ ಆಗದು,' ಎಂತ ಮಕ್ಕಳು ಹುಟ್ಟೋ ಪರ್ಯಂತ ಪೀಡಾ. ಆಮೇಲೆ ಮಕ್ಕಳಿಗೆ ಭಲೋ ಅನ್ನ ಅರಿವಿ, ವಸ್ತ್ರ ನಿಮಿತ್ತವಾಗಿ ತಾಡನ, ಭರ್ತ್ಸನ, ದುಷ್ಟಭಾಷಣಗಳಿಂದ (ಪೀಡಾ) ; ಅಲ್ಲಿಂದ ಉಪನಯನ ವಿವಾಹ ಪ್ರಯುಕ್ತ, ಬೀಗರ ಪ್ರಯುಕ್ತವಾಗಿ ಉಪದ್ರವ ಪರಂಪರೆಯಿಂದ ಗ್ರಸ್ತನಾಗಿ, ಮರಣಪರ್ಯಂತ ಚಿಂತಾಸಂತಾಪಯುಕ್ತನಾಗಿ ಪುನಃ ಪುನಃ ಜನನ ಮರಣ ಪಾತ್ರಂನ್ನ (ನನ್ನಾಗಿ) ಮಾಡುವಳು(ನು).

ಇನ್ನೂ ಗುರು, ಮಾತೃ, ಪಿತೃ, ಭ್ರಾತೃ, ಶ್ವಶುರ, ಬಂಧು, ಮಿತ್ರ, ಪುತ್ರಾದಿಗಳಲ್ಲಿ ನಿವಿಷ್ಟನಾಗಿ ಪರಮಾಪ್ತನಾಗಿ ಬಾಧಿಬಡಿಸ್ಯಾನು. ತಾನು ತನ್ನ ಮನೋಗ್ರಂಥಿಯನ್ನು ಬಿಡದೆ, ಇಷ್ಟು ಉಪದ್ರವಕ್ಕೆ ಶಿಲಾಸದೃಶನಾಗಿ ನಿಂತು ತನ್ನ ಉದ್ಧಾರ ಮಾಡಿಕೊಂಬವನೇ ಜಾಣ. ತನ್ನ ದೋಷ, ತನ್ನವರ ದೋಷ ತಾನೇ ತಿಳಿಯುವನಂತೂ ಬಲು ಜಾಣ -

**ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಂ ।**
**ಯದುಕ್ತ್ಯಾ ನ ಪ್ರಬುದ್ಧ್ಯೇತ ಸುಪ್ತಸ್ತ್ವಜ್ಞಾನನಿದ್ರಯಾ ॥**

**ನ ಶ್ರದ್ಧಧ್ಯಾನ್ಮತಂ ತಸ್ಯ ಯಥಾಂಧೋ ಹ್ಯಂಧನಾಯಕಃ ।**
**ಕೌಮಾರ ಆಚರೇತ್ಪ್ರಾಜ್ಞೋ ಧರ್ಮಾನ್ ಭಾಗವತಾನಿಹ ।**
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ॥**

**ಯದಾ ಹಿ ಪುರುಷಸ್ಯೇಹ ವಿಷ್ಣೋಃ ಪಾದೋಪಸರ್ಪಣಮ್ ।**
**ಯದ್ಯೈಷ ಸರ್ವಭೂತಾನಾಂ ಪ್ರಿಯ ಆತ್ಮೇಶ್ವರಃ ಸುಹೃತ್ ॥**

**ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಂ ವಾಜಿತಾತ್ಮನಃ ।**
**ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽಂಧಂ ಪ್ರಾಪಿತಸ್ತಮಃ ॥**

**ಮುಗ್ಧಸ್ಯ ಬಾಲ್ಯಕೌಮಾರ್ಯೈಃ ಕ್ರೀಡತೋ ಯಾತಿ ವಿಂಶತಿಃ ।**
**ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥**

ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ ।
ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯಾಪಯಾತಿ ಹಿ ॥

ಕೋ ಗೃಹೇಷು ಪುಮಾನ್ ಸಕ್ತಮಾತ್ಮಾನಮಜಿತೇಂದ್ರಿಯಃ ।
ಸ್ನೇಹಪಾಶೈರ್ದೃಢೈರ್ಬದ್ಧಮುತ್ಸಹೇತ ವಿಮೋಚಿತುಮ್ ॥

ಕೋನ್ವರ್ಥತೃಷ್ಣಾಂ ವಿಸೃಜೇತ್ ಪ್ರಾಣೇಭ್ಯೋಽಪಿ ಗರೀಯಸೀಮ್।
ಯಃ ಕ್ರೀಣಾತ್ಯಸುಭಿಃ ಪ್ರೇಷ್ಠೈಸ್ತಸ್ಕರಃ ಸೇವಕೋ ವಣಿಕ್ ॥

ಕಥಂ ಪ್ರಿಯಾಯಾ ಅನುಕಂಪಿತಾಯಾಃ ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ ।
ಸುಹೃತ್ಸುತಸ್ನೇಹವಶಃ ಶಿಶೂನಾಂ ಕಲಾಕ್ಷರಾಣಾಮನುರಕ್ತಚಿತ್ತಃ ॥

ಪುತ್ರಾನ್ ಸ್ಮರಂಸ್ತಾ ದುಹಿತೃರ್ಹೃದಯ್ಯಾ ಭ್ರಾತೄನ್ ಸ್ವಸ್ರೂರ್ವಾ ಪಿತರೌ ಚ ದೀನೌ।
ಗೃಹಾನ್ ಮನೋಜ್ಞಾನ್ ರುಚಿರಚ್ಛದಾಂಶ್ಚ ವೃತ್ತೀಶ್ಚ ಕುಲ್ಯಾಃ ಪಶುಭೃತ್ಯವರ್ಗಾನ್॥

ತ್ಯಜೇತ ಕೋಶಸ್ಕೃ ಇವೇಹಮಾನಃ ಕರ್ಮಾಣಿ ಲೋಭಾದವಿತೃಪ್ತಕಾಮಃ ।
ಔಪಸ್ಥ್ಯಜೈಹ್ವ್ಯಂ ಬಹು ಮನ್ಯಮಾನಃ ಕಥಂ ವಿರಜ್ಯೇತ ದುರಂತಮೋಹಃ ॥

ಕುಟುಂಬಪೋಷಾಯ ಯನ್ನಿಜಾಯುರ್ನ ಬುದ್ಧ್ಯತೇಽರ್ಥಂ ವಿಹತಂ ಪ್ರಮತ್ತಃ ।
ಸರ್ವತ್ರ ತಾಪತ್ರಯದುಃಖಿತಾತ್ಮಾ ನಿರ್ವಿದ್ಯತೇ ನ ಸ್ವಕುಟುಂಬರಾಮಃ ॥

ವಿತ್ತೇಷು ನಿತ್ಯಾಭಿನಿವಿಷ್ಟಚೇತಾ ವಿದ್ವಾಂಶ್ಚ ದೋಷಂ ಪರವಿತ್ತಹರ್ತುಃ ।
ಪ್ರೇತ್ಯೇಹ ಚಾಥಾಪ್ಯಜಿತೇಂದ್ರಿಯಸ್ತದಶಾಂತಕಾಮೋ ಹರತೇ ಕುಟುಂಬೀ ॥

ವಿದ್ವಾನಪೀತ್ಥಂ ದನುಜಾಃ ಕುಟುಂಬಂ ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।
ಯತ್ಸ್ವೀಯಪಾರಕ್ಯವಿಭಿನ್ನಭಾವಸ್ತಮಃ ಪ್ರಪದ್ಯೇತ ಯಥಾ ವಿಮೂಢಃ ॥

ನೈಷಾ ಮತಿಸ್ತಾವದುರುಕ್ರಮಾಂಘ್ರಿಂ ಸ್ಪೃಶತ್ಯನರ್ಥಾಪಗಮೋ ಯದುತ್ಥಃ ।
ಮಹೀಯಸಾಂ ಪಾದರಜೋಭಿಷೇಕಂ ನಿಷ್ಕಿಂಚನಾನಾಂ ನ ವೃಣೀತ ಯಾವತ್ ॥

ಸರ್ವಪ್ರಕಾರದಿಂದ ಶ್ರೀಹರಿಗುರುಭಕ್ತಿಪೂರ್ವಕ ಭಗವತ್ಪಾದೀಯಾಗವು ನಿರತರಾಗೋದು. ಅದರಿಂದಲೇ ಅಶೇಷಾನಿಷ್ಟನಿವೃತ್ತಿ, ಇಷ್ಟಪ್ರಾಪ್ತಿಗಳಾದಾವು. ನಾನಾರೂಪವಾದ ಕಲಿಬಾಧಾವೆಂಬೋ ರೋಗದಿಂದ ಬಂದ ಅರುಚಿ ಪರಿಹರಿಸಿ ಸರ್ವಜ್ಞ ಗ್ರಂಥವೆಂಬೋ ಮೃಷ್ಟಾನ್ನಭೋಜನದಿಂದ ತೃಪ್ತಿಯೈದಿಸೋದಕ್ಕೆ ಒಂದು ಮಾತ್ರಿ, ಒಂದು ರಸಾಯನ(ಗಳನ್ನು) ನಾವು ಸ್ವಲ್ಪ ದಿವಸದಾಗೇ ಕಳಿಸಿಕೊಡುತ್ತೇವೆ. ಅದನ್ನ ಆದರದಿಂದ ನಿರಂತರ ಸೇವಿಸೋದು. ॥ ಇತಿ ಸ್ವಸ್ತ್ಯಸ್ತು ॥

॥ ಇಲ್ಲಿಗೆ ಶ್ರೀವಿಷ್ಣುತೀರ್ಥವಿರಚಿತ ಉಪದೇಶ ಪತ್ರವು ಮುಗಿಯಿತು ॥

****

(ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರು)

## ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದರ ಸಂದೇಶ

ಶ್ರೀ ನಾರಾಯಣಾವತಾರನಾದ ಶ್ರೀಕೃಷ್ಣನು ಪರದೇವತೆಯು. ಇದು ಸತ್ಯ ಇದು ಸತ್ಯ ಇದು ಸತ್ಯ. ಈ ತತ್ವಜ್ಞಾನವನ್ನು ದೃಢಪಡಿಸಿಕೊಳ್ಳು. ಶ್ರೀ ನಾರಾಯಣ ಸ್ವರೂಪಿ ಶ್ರೀಕೃಷ್ಣನನ್ನು ಸ್ಮರಿಸು, ಭಜಿಸು, ನಮಿಸು, ಶರಣೆನ್ನು. ಶ್ರೀಕೃಷ್ಣನ ವಿಗ್ರಹವನ್ನು ನೋಡು, ಅವನ ಕಥೆಗಳನ್ನು ಕೇಳು. ಶ್ರೀಕೃಷ್ಣನ ಪಾದತುಳಸಿಯನ್ನು ಆಘ್ರಾಣಿಸು, ಅವನ ಪಾದಸ್ಪರ್ಶವನ್ನು ಮಾಡು, ಅವನಿಗೆ ಸಮರ್ಪಿತವಾದ ಪವಿತ್ರಾನ್ನವನ್ನೇ ಭುಂಜಿಸು. ಶ್ರೀಕೃಷ್ಣ ಮಂದಿರಕ್ಕೆ ಹೋಗು. ಪರೋಪಕಾರವನ್ನು ಮಾಡು. ಮೊರೆ ಹೊಂದುವ ಜನರನ್ನು ರಕ್ಷಿಸು. ಸತ್ಯ, ಪ್ರಿಯ ಮತ್ತು

ಹಿತ ನುಡಿಗಳನ್ನು ಆಡು. ಅರ್ಥಿಗಳು ಅಪೇಕ್ಷಿಸುವ ವಸ್ತುಗಳನ್ನು ಕೊಡು. ಸಜ್ಜನರ ಸಂಸರ್ಗವನ್ನು ಮಾಡು. ಭೂತದಯೆವುಳ್ಳವನಾಗು. ಮಾತಾಪಿತೃ ಭಕ್ತಿಮಾನ್ ಆಗು ದೊಡ್ಡವರಲ್ಲಿ ಗೌರವ ಬುದ್ಧಿಯುಳ್ಳವನಾಗು. ಶ್ರೀಕೃಷ್ಣನಲ್ಲಿ ಪರಮಭಕ್ತರಾಗಿ ಜ್ಞಾನಿಗಳೂ ಆಗಿ ಇರುವವರನ್ನೇ ಗುರುಗಳನ್ನಾಗಿ ಸ್ವೀಕರಿಸು. ಹೆಂಡತಿ ಮಕ್ಕಳುಗಳಿಗೆ ಹಿತೋಪದೇಶವನ್ನು ಮಾಡುತ್ತಾ ಇರು. ಗೋವುಗಳನ್ನು ರಕ್ಷಿಸು. ಬಹು ಸಜ್ಜನರ ಪಕ್ಷವನ್ನು ಸ್ವೀಕರಿಸು. ದೇಶ ಸೇವೆಯನ್ನು ದೇವರ ಸೇವೆ ಎಂಬ ಭಾವನೆಯಿಂದ ಮಾಡುತ್ತಿರು. ಸತ್ಸಿದ್ಧಾಂತವಿರುದ್ಧ ವಾದಗಳನ್ನು ಖಂಡಿಸು. ಕಾಮಕ್ರೋಧ ಲೋಭಗಳನ್ನು ಬಿಡು. ದೇವರಲ್ಲಿ ದೇವರ ಅನುಗ್ರಹವನ್ನು ಮಾತ್ರ ಕೇಳು. ತನ್ನಿಂದ ಇತರರಿಗೆ ನೋವು ಆಗದಂತೆ ಜಾಗರೂಕನಾಗಿರು. ಯಾವ ಪ್ರಾಣಿಯನ್ನೂ ಹಿಂಸಿಸಬೇಡ. ಸುರಾಪಾನ ಮೊದಲಾದ ದುಶ್ಚಟಗಳನ್ನು ಬಿಡು. ಧನಪ್ರಾಪ್ತಿಗಾಗಿ ನೀಚ ಕೆಲಸವನ್ನು ಮಾಡಬಾರದು. ಅತಿಥಿ ಸತ್ಕಾರವನ್ನು ಮಾಡು. ಜಲ, ಅನ್ನ, ಔಷಧಿಗಳ ದಾನವನ್ನು ಪಾತ್ರಾಪಾತ್ರ ವಿಚಾರವನ್ನು ಮಾಡದೇ ಮಾಡು. ಸ್ವರ್ಣ ಗೋ ಜ್ಞಾನದಾನಗಳನ್ನು ಸತ್ಪಾತ್ರಕ್ಕೇನೆ ಮಾಡು. ಸಂಸ್ಕೃತ ಭಾಷೆಯನ್ನು ಕಲಿಯುವವನಾಗು. ಗೀತಾ, ವಿಷ್ಣುಸಹಸ್ರನಾಮ ಪಾಠವನ್ನು ಬಿಡಬೇಡ. ರಾಮಾಯಣ ಭಾರತ ಭಾಗವತಗಳನ್ನು ಕೇಳುತ್ತಾ ಇರು. ದುರ್ಲಭವಾದ ಮನುಷ್ಯ ಜನ್ಮವನ್ನು ವ್ಯರ್ಥ ಮಾಡಿಕೊಳ್ಳಬೇಡ.

(ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು)

## ಗೃಹಿಣಿಯು ಅತ್ತೆಯ ಮನೆಯಲ್ಲಿ ಹೇಗಿರಬೇಕು
## ಶ್ರೀಕೃಷ್ಣ ಸುಭದ್ರೆಗೆ ನೀಡಿದ ಉಪದೇಶ

**ರಾಗ- ಕಾಂಭೋಜಿ** **ಝುಂಪೆ ತಾಳ**

ತಂಗಿಗ್ಹೇಳಿದ ಕೃಷ್ಣ ಚಂದದಿಂದಲಿ ಬುದ್ಧಿ ‖ ಪ‖ ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ‖ ಅ.ಪ. ‖ ಯಾರೇನು ಅಂದರೂ ಮೋರೆಯನು ತಿರುಹದಿರು। ಮೋರೆ ಮೇಲಕೆಯೆತ್ತಿ ಬಲ್ಲಳೆಂದೆನಿಸಿ ‖ ವಾರಿಗೇಯವರ ಕೂಡಿ ನೀರನ್ನು ತರುವಾಗ । ದಾರಿಗಣ್ಣಲ್ಲಿ ನೋಟ ನೋಡದಿರು ಕಂಡ್ಯ ‖ ೧‖ ಪರರ ಒಡವೆಯ ಕಂಡು ಮರುಳ ಮಾತಾಡದಿರು । ನೆರೆಹೊರೆಯವರಿಗೆ ನೀನು ತಲೆಬಾಗಿ ನಡೆಯೇ ‖ ಪರರ ಮಾತುಗಳಿಂದ ಮರುಳಳೆಂದೆನಿಸಬೇಡ। ನೆರೆಹೊರೆಯವರ ಕಂಡು ಬದುಕು ಮಾಡಮ್ಮ ‖ ೨‖ ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು । ಅಂಗನೇರಿಗೆ ಮಾನಭಂಗಾಗಿ ನಡೆಯೆ । ಅಂಗನೇರಿಗೆ ನಿನ್ನಂತರಂಗವ ಹೇಳದಿರು। ಬಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ ‖ ೩‖ ಹಾಕಿದ್ದು ನೀನುಂಡು ಬೇಕೆಂದು ಬೇಡದಿರು । ಸಾಕು ಸಾಕು ಎಂಬ ನಾಚಿಕೆಯ ಹಿಡಿಯೆ । ನಾಕು ಮಂದಿಯೊಡನೆ ಜೋಕೆ ಮಾತಾಡಿದರ । ಲೋಕದೊಳಿವಳೊಬ್ಬ ಮೂಕಿ ಯೆಂದೆನಿಸೆ ‖ ೪‖ ಇಷ್ಟರು ಅಂದರು ನಿಷ್ಠೂರ ಮಾಡದಿರು । ಘಟ್ಟಿ ಮಾಡಮ್ಮ ನಿನ್ನ ಮನಸು । ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ್ನ । ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸೆ ‖ ೫‖

## ಮಗಳಿಗೆ ತಂದೆತಾಯಿಯರ ಉಪದೇಶ

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ ।। ಮಗಳೆ।। ಮನ ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ।। ಪ।। ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ । ಮಗಳೆ । ಚಿತ್ತದೊಲ್ಲಭನಕ್ಕರೆಯನು ಪಡೆಯಬೇಕಮ್ಮ ।। ಹೊತ್ತು ಹೊತ್ತಿಗೆ ಮನೆಯಕೆಲಸ ಮಾಡಬೇಕಮ್ಮ । ಮಗಳೆ । ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ ।। ೧।। ಕೊಟ್ಟು ಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ । ಮಗಳೆ । ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ ।। ಹಟ್ಟಿ ಬಾಗಿ ಲಲ್ಲಿ ನೀನು ನಿಲ್ಲಬೇಡಮ್ಮ । ಮಗಳೆ । ಕಟ್ಟಿ ಆಳುವ ಗಂಡ ನೊಡನೆ ಸಿಟ್ಟು ಬೇಡಮ್ಮ ।। ೨।। ನೆರೆಹೊರೆಯವರಿಗೆ ನ್ಯಾಯವನ್ನು ಹೇಳ ಬೇಡಮ್ಮ । ಮಗಳೆ । ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ ।। ಪರರ ನಿಂದಿಪ ಹೆಂಗಳೊಡನೆ ಸೇರ ಬೇಡಮ್ಮ । ಮಗಳೆ । ಗುರುಪುರಂದರ ವಿಠಲನ ಸ್ಮರಣೆ ಮರೆಯ ಬೇಡಮ್ಮ।। ೩।।

## ಪತಿವ್ರತಾ ಸ್ತ್ರೀಯರ ಮಹಿಮೆ

ಪುಣ್ಯ ದೊರಕುವದೊ ಅನು । ಗುಣ್ಯವಾಗಿದ್ದ ಸತಿಯಿದ್ದ ಜನರಿಗೆ ।। ಪ।। ಬಡತನವಿದ್ದರು ನೆರೆಹೊರೆ ಮನೆಯಲ್ಲಿ ನುಡಿ ಬಿಚ್ಚಿ ಪೇಳದೆ ಸೌಮ್ಯಳಾಗಿ । ಬಿಡದೆ ಮಾಡುವ ಗೃಹಕೃತ್ಯಂಗಳು ಜಗ । ದೊಡಿಯಗರ್ಪಿತವೆಂದು ಹಿಗ್ಗುತ ಅನುದಿನ ।। ೧।। ವಿಪರೀತ ಕಾಲಗಳಟ್ಟಿದ ಕಾಲಕ್ಕು। ಸ್ವಪನಾದಿಯಪ ಕಳವಳಿಸದಲೇ । ದ್ವಿಪುತ ಪ್ರಾಕಾಶವಂತಳಾಗಿ ಪತಿಸೇವೆ । ಅಫಲದಲ್ಲಿ ಮಾಡಿ ಒಲಿದೊಲಿದಾಡುವ ।। ೨।। ಲಾವಣ್ಯ ಪುರುಷರ ಕಂಡರು ಮನದಲ್ಲಿ ಭಾವಿಸಬೇಕು ಸಹೋದರರು ಎಂದು । ದೇವದೇವೇಶನ್ನ ವಿಭೂತಿ ರೂಪವ । ಆವಾವ ಬಗೆಯಲ್ಲಿ ನೆನಿಸಿ ನೋಡುತ ನಿತ್ಯ ।। ೩।। ಒಂದು ತಂದರೆ ಸಾವಿರ ಮಾಡಿ ಚಿಂತಿಸಿ। ಇಂದಿರೇಶನೆ ಪತಿರೂಪವೆಂದು। ಅಂದದಲಿದ್ದ ವಿಭವಾನುಸಾರ । ಆನಂದವಾಗಿ ಸಂಸಾರದೊಳಗಿರೆ ।। ೪।। ಪತಿಯ ಜನಕ ಮಾತೃ ಮಿಗಿಲಾದ । ಜನರಿಗೆ । ಹಿತವಂತಳಾಗಿ ನುಡಿಸಿಕೊಳುತ । ಅತಿಶಯವಾಗಿ ತನ್ನಯ ಗಾತ್ರ ಸರ್ವದಾ । ಪ್ರತಿದಿನ ಸವಿಸುವಳಾನಾರಿ ಅಧಿಕಾರಿ ।। ೫।। ಚಕೋರ ಚಂದ್ರಮನಲ್ಲಿ ಮನಸು ಇಟ್ಟು । ಸುಖಬಡುವಂತೆ ನಾನಾ ಪ್ರಕಾರ । ಕಕುಲಾತಿಯಿಂದ ಕಾ । ಮುಕಳಾಗದೆ ಮಹಾ। ಭಕುತಿಯಿಂದಲಿ ಗುರುಹಿರಿಯರ ಸಮ್ಮತ ।। ೬।। ಸಂತಜನರೆಂಬ ಕ್ಷೀರಾಂಬುಧಿ ಮಧ್ಯ । ಸಂತತ ಮೀನಿನಂದದಿ ಬೀಳುತಾ । ಸಂತೋಷಮತಿಯಲ್ಲಿ ಪತಿಧರ್ಮ ವಹಿಸಿ । ಶ್ರೀ । ಕಾಂತನ ಗುಣಕಥೆ ಕೇಳಿ ಪೊಗಳಲಾಗಿ ।। ೭।। ನಾಮ ಮೊದಲು ಮಾಡಿ ಪ್ರಕೃತಿಯ ಪರಿಯಂತ । ಪ್ರೇಮದಿಂದಲಿ ಗುಣಗಳ ಗುಣಿಸೀ । ಕಾಮಾದಿ ಚತುರ್ವಿಧ ಪುರುಷಾರ್ಥ ತನ್ನಯ । ಸ್ವಾಮಿಯಲಿಂದಲಿ ಸಂಪಾದಿಸು ತಿಪ್ಪಾ ।।೮।। ಆವಾವ ಪ್ರಯೋಜನ ಮಾಡಲು ಸರ್ವದ ದೇವದೇವೇಶನಾಧೀನ ವೆಂದೂ । ಭಾವದಲಿ ತಿಳಿದನ್ಯಕರ್ಮವ ಬಿಟ್ಟು । ಪಾವನ ವಿಜಯವಿಠಲನ ಭಕುತಿಯಿಂದಾ ।। ೯।।

## ಮುತ್ತೈದೆಯರು ಧರಿಸಿಕೊಳ್ಳಬೇಕಾದ ಆಭರಣಗಳು

ಮುತ್ತೈದಾಗಿರಬೇಕು ಮುದದಿಂದಲಿ । ಹತ್ತು ನೂರುನಾಮದೊಡೆಯ ಹರಿನಾಮ ಪತಿಯೆಂದು ।। ಪ।। ಗುರುಮಧ್ವಶಾಸ್ತ್ರವನು ಒದುವುದೆ ಮಾಂಗಲ್ಯ । ವೈರಾಗ್ಯವೆಂಬ ಒಪ್ಪುವ

ಮೂಗುತಿ । ತಾರತಮ್ಯ ಜ್ಞಾನ ತಾಯಿತು ಮುತ್ತು ಸರ। ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ॥ ೧॥ ಹರಿಕಥೆ ಕೇಳುವುದು ಕಿವಿಗೆ ಮುತ್ತಿನ ಓಲೆ । ನಿರುತ ಸತ್ಕರ್ಮವು ನಿಜಕಾಂತಿಯು । ಹರಿದಾಸರ ಪಾದರಜ ಹೆರಳು ಬಂಗಾರ । ಗುರುಭಕುತಿ ಪಟ್ಟಾವಳಿಯನುಟ್ಟು ॥೨॥ ಕೊಡುವ ದಾನಗಳೆಂಬೋ ಕುಬಸ ತೊಟ್ಟು ॥ ಬಿಡದೆ ಎನ್ನೊಡೆಯ ಶ್ರೀಪುರಂದರವಿಠಲನ। ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು ॥ ೩॥

## ಪತಿತ ನಾರಿಯರು

೧) ಡಂಗುರ ಹೊಯಿಸಿದ ಯಮನು । ಪಾಪಿ ಹೆಂಗಳೆಯರ ತಂದು ಭಂಗಪಡಿಸಿರೆಂದು॥ ಪ॥ ಮೃತ್ತಿಕೆ ಶೌಚವ ಗಂಧ ಪೋಗುವಂತೆ । ನಿತ್ಯದಲಿ ಸ್ನಾನ ಮಾಡದೆ ಸುಮ್ಮನೆ ॥ ತೊತ್ತು ಬಡಕಿಯಾಗಿ ಮುಖವ ತೊಳಿಯದಿಪ್ಪ । ಕತ್ತೆ ಹೆಂಗಸರನು ಕಡಿದೋ ಕೊಲ್ಲಿರೋ ಎಂದು ॥೧॥ ಪತಿಗೆರಗದೆ ಗೃಹಕೃತ್ಯ ಮಾಡುವಳ । ಮತಿ ಏಕವಿರದೆ ಚಂಚಲದಿಪ್ಪಳ ॥ ವ್ರತಗೇಡಿ ಅನ್ಯರ ಮಾತಿಗೆ ಸೋಲುವ । ಪತಿತಳ ಎಳೆತಂದು ಹತವ ಮಾಡಿರೆಂದು ॥ ೨॥ ಒಬ್ಬರಿಬ್ಬರ ಕೂಡ ಸಖತನವ ಮಾಡುವಳ । ಒಬ್ಬೊಬ್ಬರಿಗೆ ಮೈಯಿತ್ತು ಪಾಡುವಳ ॥ ಅಬ್ಬರದ ಸೊಲ್ಲನು ವಿಸ್ತರಿಸುವಳ । ದಬ್ಬಿರೋ ವೃಶ್ಚಿಕದ ಕುಂಡದೊಳಗೆ ಎಂದು ॥ ೩॥ ವಸನವಿಲ್ಲದೆ ಮೈಯ ತೊಳಕೊಂಬೋ ಪಾಪಿಯ । ಹಸಿವೆಯಾದರೆ ಮಲಗಿ ಕೊಂಡಿಪ್ಪಳ ॥ ಅಶನ ಭಕ್ಷಿಸುವಾಗ ಅಳಲುವ ದುಃಖಿಯ । ಪೆಸರಿಯ ತಲೆ ಕೆಳಗಾಗಿ ಬಾಧಿಸಿರೆಂದು ॥ ೪॥ ಬಿಗಿದು ಪುಟವ ಹಾಕಿ ಬದಿಬಗಲ ಮುಚ್ಚದೆ । ನಗುವಳು ಅವರಿವರೆಂದರಿಯದೆ ॥ ಬಗೆಬಗೆ ವಯ್ಯಾರ ನಿಜವಾಗಿ ತೋರುವ । ಅಧಮ ನಾರಿಯ ತಂದು ಅರಿದು ಕೊಲ್ಲಿರೋ ಎಂದು ॥ ೫॥ ಪಾಕದ ಪದಾರ್ಥ ನೋಡಿ ಇಡದವಳ । ಲೋಕವಾರ್ತೆಗೆ ಮನೆಯ ಜರಿದು ಪತಿಗೆ । ಬೇಕಾದವರ ಜರಿದು ಬಹುಪುಷ್ಪ ಮುಡಿದಿಪ್ಪ । ಕಾಕಿಯ ಎಳೆತಂದು ಕಣ್ಣು ಕಳಚಿರೆಂದು ॥ ೬॥ ಪಂಕ್ತಿಭೇದವ ಮಾಡಿ ಬಡಿಸುವ ಪಾಪಿಯ । ಕಾಂತ ಕರೆದಾಗ ಪೋಗದವಳ ॥ ಸಂತರ ನೋಡಿ ಸ್ವೈರಿಸದಿಪ್ಪ ನಾರಿಯ । ದಂತಿಯ ಕೆಳಗೆ ಹಾಕಿ ತುಳಿಸಿಕೊಲ್ಲಿರೋ ಎಂದು ॥ ೭॥ ವಿಧವೆಯ ಸಂಗಡ ಇರುಳು - ಹಗಲು ಇದ್ದು । ರದನ ತೆಗೆದು ನೆರಳು ನೋಡುವಳ ॥ ಕದದ ಮುಂದೆ ಕುಳಿತು ತಲೆ ಬಾಚಿ ಕೊಂಬುವಳ । ಕುದಿಸಿ ಕಟಾಹದೊಳು ಮೆಟ್ಟಿ ಸೀಳಿರೋ ಎಂದು ॥ ೮॥ ಆವದಾದರು ತೊರೆದು ಪತಿದೈವವೆಂದರಿದು । ಸೇವೆಯ ಮಾಡಿ ಸುಜನರಿಗೆ ಬೇಗ ॥ ದೇವೇಶ ವಿಜಯವಿಠ್ಠಲ ತಿರುವೆಂಗಳ । ಕಾಯುವನು ದಯದಿಂದ ಕೈವಲ್ಯ ಕಲ್ಪಿಸಿ ॥ ೯॥

೨) ಸಾರಿದ ಡಂಗುರ ಯಮನು - ಅಘ ನಾರಿಯರೆಳೆದು ತಂದು ನರಕ ದೊಳಿಡು ಎಂದು ॥ ಅ.ಪ॥ ಹೊತ್ತಾರೆ ಎದ್ದು ಪತಿಗೆ ಎರಗದವಳ । ಮೃತ್ತಿಗೆ ಶೌಚ ಮಾಡದೆ ಇಪ್ಪಳ॥ ಹೊತ್ತಾಗಿ ಮೈತೊಳೆದತ್ತಿಗೆ ನಾದಿನಿ । ಅತ್ತೆ ಮಾವರ ಬೈವಳೆತ್ತಿ ತನ್ನಿರೋ ಎಂದು ॥೧॥ ತಿಲಕಾಯುಧವ ಬಿಟ್ಟು ಕುಂಕುಮವಿಡುವಳ। ಬೆಳಗಾದ ಕಾಲಕ್ಕು ಮಲಗಿಪ್ಪಳ ॥ ಮಲಿನ ವಸ್ತ್ರವನುಟ್ಟು ಪತಿಬಳಿ ಪೋಪಳ । ಕಲಹಕಾರಿಯ ಪಿಡಿದೆಳತನ್ನಿರೋ ಎಂದು ॥ ೨॥ ಉತ್ತಮ ಗುರುಹಿರಿಯರನು ನಿಂದಿಸುವಳ । ಹೆತ್ತ ಮಕ್ಕಳ ಮಾರಿ ಬದುಕುವಳ ॥ ಪ್ರತ್ಯೇಕ ಶಯ್ಯದಿ

ಮಲಗಿಪ್ಪಳ ನೀಚ । ವೃತ್ತಿಯಳ ಪಿಡಿದೊತ್ತಿ ತನ್ನಿರೊ ಎಂದು ॥ ೩॥ ಜಲಜಕ್ಕಿಸಾಳಿ ಕಂಬಳಿ ಬೋಳಿ ಬಕ್ಕಿ ಗೊಂ - । ದಲ ಮೊದಲಾದುವು ದೈವವೆಂದು ॥ ತಿಳಿದು ಪಿಶಾಚಿ ಎಂಜಲನುಂಡು ಹಿಗ್ಗುವ । ಲಲನೇರನಾಸಲ್ಯಗೊಳದೆ ತನ್ನಿರೋ ಎಂದು ॥ ೪॥ ಒಲುಮೆ ಔಷಧ ಮಾಡಿ ಪತಿಯ ನೊಲಿಸುವಳ । ಮಲಮಕ್ಕಳೊಳು ಮತ್ಸರಿಸು ತಿಪ್ಪಳ ॥ ಕಳುವಿಲಿ ಕಾಂತನ ಧನವ ವಂಚಿಸುವಳ । ಗಳಕೆ ಪಾಶವ ಸುತ್ತಿ ಎಳೆದು ತನ್ನಿರೋ ಎಂದು ॥ ೫॥ ನಾಗೇಂದ್ರಶಯನನ ದಿನದಲಿ ಉಪವಾಸ । ಜಾಗರ ಮಾಡದೆ ಮಲಗಿಪ್ಪಳ ॥ ಭಾಗವತಾದಿ ಶಾಸ್ತ್ರವ ಕೇಳದೆ ಮತ್ತ-। ಳಾಗಿ ತಿರುಗುವಳ ಎಳೆದು ತನ್ನಿರೋ ಎಂದು ॥ ೬॥ ಉಡಲಿಲ್ಲ ಉಣಲಿಲ್ಲ ಇಡಲಿಲ್ಲ ತೊಡಲಿಲ್ಲ । ಸುಡಲಿ ಗಂಡನ ಒಗತನವೆನ್ನುತ ॥ ಪಡೆದವರನು ನುಡಿನುಡಿಗೆ ಬೈಯ್ಯುವ ಇಂಥ । ಕಡುಪಾಪಿಗಳ ಹೆಡೆಮುಡಿಕಟ್ಟಿ ತಾ ಎಂದು ॥ ೭॥ ಗಂಡ ನಿರ್ಧನಿಕನೆಂದವಮಾನ ಮಾಳ್ಪಳ । ಉಂಡ ಶೇಷಾನ್ನವ ನುಣಿಸುವಳ ॥ ಕೊಂಡೆ ಮಾತುಗಳ್ಹೇಳಿ ಕಳವಳಗೊಳಿಪಳ । ಮಂಡೆ ಕೂದಲು ಹಿಡಿದೆಳೆದು ತನ್ನಿರೋ ಎಂದು ॥ ೮॥ ಸಾಲೆಡೆಯಲಿ ಭೇದ ಮಾಡಿ ಬಡಿಸುವಳ। ನೀಲಾಂಬರವನುಟ್ಟು ಮಡಿಯೆಂಬಳ ॥ ಬಾಲಕರನು ಬಡಿದಳಿಸುತಿಪ್ಪಳ ಹಿಂ-। ಗಾಲ ತೊಳೆಯದವಳ ಎಳೆದು ತನ್ನಿರೋ ಎಂದು ॥ ೯॥ ಮೀಸಲು ಮಡಿ ಎನ್ನದೆ ಭುಂಜಿಸುವಳ ಸ- । ಕ್ಕೇಶಿಯೊಡನೆ ಗೆಳೆತನ ಮಾಳ್ಪಳ ॥ ದಾಸೇರಿಂದಲಿ ಪಾಕಪಾತ್ರೆ ಮುಟ್ಟಿಸುವಳ । ಪಾಶಗಳನೆ ಹಾಕಿ ಎಳೆದು ತನ್ನಿರೋ ಎಂದು ॥ ೧೦॥ ಪತಿಗೆ ಬೇಕಾದವರೊಳು ಮತ್ಸರಿಸುವಳ । ಮೃತವತ್ಸಗೋವಿನ ಪಾಲುಂಬಳ ॥ ಹುತವಹನನು ಪಾದತಳದಿ ನೊಂದಿಸುವಳ । ಮತಿಗೇಡಿಯ ಹಿಡಿದೆಳೆದು ತನ್ನಿರೊ ಎಂದು ॥ ೧೧॥ ಅತ್ತೆ ಮಾವರ ಕೂಡೆ ಮತ್ಸರಿಸುವಳ। ಸತ್ತವರ ನೆನೆನೆನೆದಳುತಿಪ್ಪಳ ॥ ದತ್ತಾಪಹಾರವ ಮಾಡುತಿಪ್ಪಳ ಉ- । ನ್ಮತ್ತಳ ಹಿಡಿದೆಳೆದೆತ್ತಿ ತನ್ನಿರೋ ಎಂದು ॥ ೧೨॥ ಲಶುನ ವೃಂತಾಕಾದಿಗಳನು ಭಕ್ಷಿಸುವಳ। ಸೊಸೆಯರೊಡನೆ ಮತ್ಸರಿಸುತಿಹಳ॥ ಹಸಿದು ಬಂದವರಿಗೆ ಅಶನವಿಲ್ಲೆಂಬಳ । ಉಸಿರು ಬಿಡದ ಹಾಗೆ ಎಳೆದು ತನ್ನಿರೋ ಎಂದು ॥ ೧೩॥ ತುಲಸಿ ವೃಂದಾವನಕಭಿನಮಿಸದವಳ। ಜಲವ ಶೋಧಿಸದೆ ಪಾನವ ಮಾಳ್ಪಳ ॥ ಫಲಧಾನ್ಯಾದಿಗಳ ನೋಡದೆ ಪಾಕ ಮಾಳ್ಪಳ । ಮಳೆಗಾಳಿ ನಿಂದಿಪಳೆಳೆದು ತನ್ನಿರೋ ಎಂದು ॥೧೪॥ ಅರಸಿನ ಕುಂಕುಮ ಪುಷ್ಪಾಂಜನ ವಸ್ತ್ರಾ- । ಭರಣ ಭೂಷಿತಳಾಗಿ ಪತಿಯೊಡನೆ ॥ ಸರಸವಾಡುವ ಸುಖ ಹರಿಗೆ ಅರ್ಪಿತವೆಂಬ । ಗರತೇರೆಡೆಗೆ ಕರಮುಗಿದು ಬನ್ನಿರೊ ಎಂದು ॥೧೫॥ ಬಾಲಕರನು ತೊಟ್ಟಿಲೊಳಗಿಟ್ಟು ತೂಗುತ । ಪಾಲೆರೆವುತ ಹಾಡಿ ಪಾಡುತಲಿ ॥ ಆಲಯದೊಳು ಕೆಸಲಗಳ ಮಾಡುತ ಲಕ್ಷ್ಮೀ- । ಲೋಲನ ಸ್ಮರಿಸುವವರನು ಮುಟ್ಟದಿರೆಂದು ॥೧೬॥ ಅಗಣಿತ ಮಹಿಮ ಶ್ರೀಜಗನ್ನಾಥವಿಠ್ಠಲನ । ಹಗಲು - ಇರಳು ಬಗೆಬಗೆಯಿಂದಲಿ ॥ ಹೊಗಳುವ ದಾಸರ ಬಗೆಯವರೆನಿಸುವ । ಸುಗುಣೇರಿದ್ದೆಡೆಗೆ ಕೈಮುಗಿದು ಬನ್ನಿರೋ ಎಂದು॥೧೭॥

೩) ಸುಜ್ಞೆಯಿಂದಾಳ ಬೇಕಣ್ಣ ।। ಪ॥ ಗಂಡ । ನಾಜ್ಞೆಯ ಮೀರಿ ನಡೆವ ಲಂಡ ಹೆಣ್ಣು ॥ ಅ.ಪ.॥ ಅತ್ತೆಮಾವಗೆ ಅಂಜದವಳ । ತನ್ನ । ಉತ್ತಮ ಪುರುಷನ ಜರೆದು ನನುಡಿವವಳ। ಭಕ್ತರ ಕಂಡು ಬಂಧಿಪಳ । ನಡು । ನೆತ್ತಿಯ ಚರ್ಮವ ಕೆತ್ತಬೇಕವಳ ॥ ೧॥ ಕೂಳು ಕೊಬ್ಬಲಿ

ಉರಿವವಳ । ಗಂಡ । ಹೇಳಿದ ಮಾತ ಕೇಳದೆ ಮೀರುವವಳ ॥ ಸೂಳೆಯಂದದಿ ನಡೆವಳ । ತಲೆ । ಬೋಳಿಸಿ ಕಸಹೆಡಿಗೆ ಹೊರಿಸಬೇಕವಳ ॥ ೨॥ ಬಟ್ಟಕುಚವ ತೋರಿಸುವವಳ । ಹುಟ್ಟು। ಹುಟ್ಟಲಿ ಬಾಯೊಳು ಹೆಟ್ಟಬೇಕವಳ ॥ ೩॥ ನಲ್ಲರ ಕಂಡು ನಗುವವಳ । ತನ್ನ । ಬಲ್ಲಿದ ಗಂಡನ ಬೈದು ಕರೆವಳ ॥ ಮಲ್ಲರಂಧ್ರದಿ ಹೋರುವಳ । ಅವಳ । ಹಲ್ಲು ಮುರಿದು ಜಿಹ್ವೆ ಸೀಳಬೇಕವಳ ॥ ೪॥ ಎಂದೂ ಈ ಪರಿಯಲ್ಲಿರುವವಳ । ಅವಳ ಅಂದಮಾಡುವದೇಕೆ ಬಿಡಬೇಕಿನ್ನವಳ । ಒಂದಿಷ್ಟು ಗುಣವಿಲ್ಲದವಳ । ಶ್ರೀಪುರಂದರವಿಠಲ ರಾಯಗಲ್ಲದವಳ॥೫॥

೪) ನೆಚ್ಚಬೇಡಿ ಪತಿತ ನಾರಿಯ । ಕಚ್ಚುವ ಹಾವಿನ ಸಂಗವೆನ್ನಿ ॥ ಪ॥ ಮೆಚ್ಚುಗೊಳಿಪಳು ಗುಣಿಸಿ ನೋಡಿ ॥ ನಿಚ್ಚದಲಿ ಚಿತ್ತಚಂಚಲಳಾಗಿ ॥ ಅ.ಪ.॥ ಯುವ ತನಗೆ ಬರುವ ಪರಿಯಂತ। ಯಾವದನಿತು ಮೊಗವನೆತ್ತದಲೆ ॥ ಎವೆ ತೆಗೆದು ದಿಕ್ಕುಗಳ ನೋಡದೆ । ಅವನಿಗೆ ಬಾಗಿ ನಡೆಯುತ ॥ ತವರು ಮನೆಯವರನು ಹಳಿದು । ನವನವ ಪ್ರಾವರ್ತನವನು ತೋರುತ ॥ ಅವಗುಣಂಗಳಿಲ್ಲದೋಪಾದಿಲಿ । ಲವಕಾಲವನು ಕಳೆವ ನಾರಿಯ ॥ ೧॥ ಪ್ರಾಯಾವಸ್ಥೆ ಬಂದು ಪ್ರಾಪ್ತವಾಗಲು । ಆಯತಾಕ್ಷಿಗಳ ತಿರುಹಿ ಮೆಲ್ಲನೆ । ಬಾಯಲ್ಲಿ ಒಂದೊಂದು ಕ್ರಮಾಸಾರದಿ। ನೋಯ ನೋಯದಂತೆ ವಚನವ ॥ ದಾಯಿಗಳಂತೆ ಮತ್ಸರಿಸಿ ಬಯ್ಯದೆ । ಮಾಯಾವಿ ಕಲ್ಪಿಸಿ ಮುಸಿ ಮುಸಿ ನಗೆ । ಆಯಕೆ ತಗಲಿ ಕಂಡ ಜನರಿಗೆ। ಛಾಯ ಕಾಣಿಸದಂತೆ ಮಾಳ್ಪಳ ॥೨॥ ಅತ್ತೆ ಮಾವಗೆ ಅತ್ಯಂತವಾಗಿ ತಾನು । ಪ್ರತಿ ಉತ್ತರ ಪೇಳಲು ಅಂಜಿ ಅಂಜಿದಂತೆ ॥ ಉತ್ತಮರ ಮನೋರಥವ ಕೆಡಿಸಿ। ಅತ್ತಿಗೆ ನಾದುನಿ ಮಿಗಿಳಾದವರೆಲ್ಲ ॥ ಕತ್ತೆ ನಾಯಿ ನರಿಯೆಂಬೋ ಸೊಲ್ಲಲ್ಲಾದೆ। ಎತ್ತಲಾದರು ವಂಚಿಸಿ ಗಂಡನ್ನ । ತನ್ನಂತೆ ಮಾಡಿಕೊಂಡು ಹಗಲಿರುಳು ಥೈ । ತಥ್ಥಾ ಎಂದಾಡಿಸಿ ಕುಣಿಸುವ ಸತಿಯಳ ॥ ೩॥ ಮಿಥುನ ಭಾವಕೆ ಕೊಂಡ ತೆರದಿ । ಪತಿಯ ಸಮಯ ನೋಡದೆ ತಾನು । ಸಥೆಯಿಂದಲಿ ಸಂಸಾರದೊಳಗಿದ್ದು । ಸುತರ ಪಡೆದು ಹಮ್ಮಿಲಿ ॥ ಕಥನವೆಬ್ಬಿಸಿ ಗಂಡನ್ನ ಅಡವಿ । ಪಥವ ಹಿಡಿಸಿ ಹಣದಗೋಸುಗ ॥ ಸತತ ಮನೆಯೊಳಗಿದ್ದ ಬದುಕು । ಮಿತಿಯಿಲ್ಲದೆ ಭಕ್ಷಿಸುವ ನಾರಿಯ ॥ ೪॥ ಒಲಿಪಗೆ ನೀವು ಮೋಸಗೊಂಡು । ಒಲಿಯದಿರಿ ಸ್ತ್ರೀಯರಿಗೆ ಸೋತು ॥ ಕಲಿಗೆ ಪ್ರಥಮ ಪಟ್ಟದ ಗದ್ದಿಗೆ। ಸುಲಭವಲ್ಲವೋ ಸುಖವಿಲ್ಲಾ॥ ಕಲಿಕಾಲ ಮಹಾಕಾತುರದಿಂದಲಿ । ವಳಗಾಗದಿರು ಒಳಿತು ಪೇಳುವೆ । ಜಲಜಾಕ್ಷ ವಿಜಯವಿಠಲನ್ನ ನಂಬಿರೋ । ನಂಬಿರೋ ನಂಬಿರೋ ಚತುರರು ॥೫॥

ಮುಟ್ಟದಿರಚ್ಯುತಗರ್ಪಿತವಲ್ಲದುದನು ಕಂ-।
ಗೆಟ್ಟು ಸ್ತುತಿಸಬೇಡ ಹರಿಯಲ್ಲದನ್ಯತ್ರ।
ಕಷ್ಟಬೇಡ ಭೂಸುರರೊಳಗೆ ನೀನು।
ಕೊಟ್ಟಭಾಷೆ ತಪ್ಪಲು ಬೇಡ ಆರಿಗಾದರಾಗಲಿ।
ಶ್ರೀಪುರಂದರವಿಠಲನಂಘ್ರಿ ನೆನೆಯದೆ ಬಿಟ್ಟಿರಬೇಡ॥

## ೧) ॥ ಶ್ರೀದ್ವಾದಶಾಕ್ಷರ ತುಲಸೀ ಮಂತ್ರಃ ॥

(...... ಗುರುಮಂತ್ರದಲ್ಲಿದ್ದಂತೆ ಆಚಮನ ಸಂಕಲ್ಪ) ಶುಭತಿಥೌ ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ ಮಮ ಸೌಮಾಂಗಲ್ಯ ಪ್ರಾಪ್ತ್ಯರ್ಥಂ ಶ್ರೀತುಲಸೀಮಂತ್ರಜಪಮಹಂ ಕರಿಷ್ಯೇ॥

**ಗುರುನಮಸ್ಕಾರ :** ಶ್ರೀಂ ಶ್ರೀಗುರುಭ್ಯೋ ನಮಃ । ಶ್ರೀಂ ಪರಮ ಗುರುಭ್ಯೋ ನಮಃ । ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀ ವಾಯವೇ ನಮಃ । ಶ್ರೀಬ್ರಹ್ಮಣೇ ನಮಃ । ಶ್ರೀಲಕ್ಷ್ಮ್ಯೈ ನಮಃ । ಶ್ರೀನಾರಾಯಣಾಯ ನಮಃ । ಏಕಾದಶಸ್ಥಾನೇ ಶ್ರೀತುಳಸೀನಾಮಕ ಮಹಾಲಕ್ಷ್ಮ್ಯೈ ನಮಃ । ಶ್ರೀವಾಸುದೇವಾಯ ನಮಃ ॥

**"ಶ್ರೀಂ ಶ್ರೀಂ ಕ್ಲೀಂ ತುಲಸಿ ಸುರಸುಂದರಿ ಸ್ವಾಹಾ ಶ್ರೀಂ"** ಇತಿ ಮಂತ್ರೇಣ ಪ್ರಾಣಾಯಾಮಃ ।

**ಷಡಂಗನ್ಯಾಸ :** ಶ್ರೀಂ ಶ್ರೀಂ ಶ್ರೀಯೈ ಹೃದಯಾಯ ನಮಃ । ಶ್ರೀಂ ಕ್ಲೀಂ ಲಕ್ಷ್ಮ್ಯೈ ಶಿರಸೇ ಸ್ವಾಹಾ । ಶ್ರೀಂ ತುಲಸಿ ಮಾಯೈ ಶಿಖಾಯೈ ವೌಷಟ್ । ಶ್ರೀಂ ಸುರಸುಂದರಿ ಇಂದಿರಾಯೈ ನೇತ್ರಾಭ್ಯಾಂ ವಷಟ್ । ಶ್ರೀಂ ಶ್ರೀಂ ಸ್ವಾಹಾ ರಮಾಯೈ ಅಸ್ತ್ರಾಯ ಫಟ್ ॥ ಇತಿ ದಿಗ್ಬಂಧಃ ।

**ಋಷ್ಯಾದಿನ್ಯಾಸ :** ಅಸ್ಯ ಶ್ರೀದ್ವಾದಶಾಕ್ಷರ ತುಲಸೀ ನಾಮಕ ಮಹಾಲಕ್ಷ್ಮೀ ಮಂತ್ರಸ್ಯ ನಾರದ ಋಷಿಃ ಶಿರಸಿ । ಗಾಯತ್ರೀ ಛಂದಃ ಮುಖೇ। ತುಲಸೀ ರೂಪಿಣೀ ಶ್ರೀಮಹಾಲಕ್ಷ್ಮೀಃ ದೇವತಾ ಹೃದಯೇ । ಶ್ರೀಂ ಬೀಜಂ । ಕ್ಲೀಂ ಶಕ್ತಿಃ । ಶ್ರೀತುಲಸೀ ಪ್ರೇರಣಯಾ ಶ್ರೀತುಲಸೀ ಪ್ರೀತ್ಯರ್ಥಂ ಜಪೇ ವಿನಿಯೋಗಃ ।

**ಅಥಧ್ಯಾನಂ :** ಬೃಂದಾವನಸ್ಥಾಂ ವಿಧಿಶರ್ವವಂದಿತಾಂ । ವಿದ್ಯಾಧರಾದ್ಯರ್ಚಿತಪಾದ ಪಂಕಜಾಂ ॥ ವಿಷ್ಣುಪ್ರಿಯಾಂ ಶ್ಯಾಮಲಕೋಮಲಾಂಗೀಂ । ಭಜಾಮಿ ನಿತ್ಯಂ ತುಲಸೀಂ ಸುರೇಶ್ವರೀಂ ॥

**ಮಂತ್ರಜಪ : "ಶ್ರೀಂ ಶ್ರೀಂ ಕ್ಲೀಂ ತುಲಸಿ ಸುರಸುಂದರಿ ಸ್ವಾಹಾ ಶ್ರೀಂ"** ( ೧೦೮ ಸಲ ಈ ಮಂತ್ರವನ್ನು ಜಪಿಸಬೇಕು. ಜಪಿಸಿದ ಮೇಲೆ ಮತ್ತೆ ಮೊದಲಿನಂತೆ ಪ್ರಾಣಾಯಾಮ, ಷಡಂಗನ್ಯಾಸ, ಋಷ್ಯಾದಿನ್ಯಾಸ, ಮತ್ತು ಧ್ಯಾನ ಮಾಡಬೇಕು).

ಶ್ರೀತುಲಸೀ ಪ್ರೇರಣಯಾ ಶ್ರೀತುಲಸೀಪ್ರೀತ್ಯರ್ಥಂ ದ್ವಾದಶಾಕ್ಷರ ತುಲಸೀ ಮಂತ್ರಜಪಃ ಸಂಪೂರ್ಣಃ ॥

**ತರ್ಪಣಂ :** ಮಂತ್ರಮುಚ್ಚಾರ್ಯ ತರ್ಪಣಂ । **"ಶ್ರೀಂ ಶ್ರೀಂ ಕ್ಲೀಂ ತುಲಸೀ ಸುರಸುಂದರಿ ಸ್ವಾಹಾ ಶ್ರೀಂ ಇತಿ ತುಲಸೀಂ ಸುರಸುಂದರೀಂ ತರ್ಪಯಾಮಿ"** ಎಂದು ೧೦ ಜಪಕ್ಕೆ ಒಂದರಂತೆ ತರ್ಪಣ ಕೊಡಬೇಕು.

ಅನೇನ ದ್ವಾದಶಾಕ್ಷರ ಶ್ರೀತುಲಸೀ ಮಹಾಮಂತ್ರ ಜಪತರ್ಪಣಾಖ್ಯ ಕರ್ಮಣಾ ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀರಾಧಾದಾಮೋದರಃ ಪ್ರೀಯತಾಂ ಸುಪ್ರೀತೋ ವರದೋ ಭವತು ॥ಶ್ರೀಕೃಷ್ಣಾರ್ಪಣಮಸ್ತು ॥

## ೨) ಸಂತಾನ ಗೋಪಾಲಕೃಷ್ಣ ಮಂತ್ರಃ

(...... ಗುರುಮಂತ್ರದಲ್ಲಿದ್ದಂತೆ ಆಚಮನ ಸಂಕಲ್ಪ) ಶುಭತಿಥೌ ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಮಮ ಸತ್ಸಂತಾನಪ್ರಾಪ್ತ್ಯರ್ಥಂ ಶ್ರೀಸಂತಾನಗೋಪಾಲಕೃಷ್ಣ ಮಂತ್ರಜಪಮಹಂ ಕರಿಷ್ಯೇ ॥

**ಗುರುನಮಸ್ಕಾರ :** ಶ್ರೀಂ ಶ್ರೀಗುರುಭ್ಯೋ ನಮಃ । ಶ್ರೀಂ ಪರಮ ಗುರುಭ್ಯೋ ನಮಃ । ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀ ವಾಯವೇ ನಮಃ । ಶ್ರೀಬ್ರಹ್ಮಣೇ ನಮಃ । ಶ್ರೀಲಕ್ಷ್ಮ್ಯೈ ನಮಃ । ಶ್ರೀನಾರಾಯಣಾಯ ನಮಃ । ಏಕಾದಶಸ್ಥಾನೇ ಶ್ರೀಸಂತಾನಗೋಪಾಲಕೃಷ್ಣಾಯ ನಮಃ । ಶ್ರೀವಾಸುದೇವಾಯ ನಮಃ ॥

**ಪ್ರಾಣಾಯಾಮ : ।"ಶ್ರೀಂ । ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ । ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಾ॥"** ಎಂದು ಮೂರು ಬಾರಿ ಜಪಿಸಿ ಪ್ರಾಣಾಯಾಮ ಮಾಡಬೇಕು.

**ಷಡಂಗನ್ಯಾಸಃ :** । ಶ್ರೀಂ ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ । ಶ್ರೀಂ ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ । ಶ್ರೀಂ ಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ । ಶ್ರೀಂ ಪೂರ್ಣಾನಂದಾತ್ಮನೇ ಕವಚಾಯ ಹುಂ । ಶ್ರೀಂ ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವಷಟ್ । ಶ್ರೀಂ ಪೂರ್ಣ ಶಕ್ತ್ಯಾತ್ಮನೇ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ॥

**ಋಷ್ಯಾದಿನ್ಯಾಸಃ :** ಅಸ್ಯ ಶ್ರೀದ್ವಾತ್ರಿಂಶದಕ್ಷರ ಸಂತಾನ ಗೋಪಾಲಕೃಷ್ಣ ಮಂತ್ರಸ್ಯ ಶ್ರೀನಾರದಋಷಿಃ । ಶಿರಸಿ । (ತಲೆಯನ್ನು ಮುಟ್ಟಿಕೊಳ್ಳಬೇಕು). ಅನುಷ್ಟುಪ್ ಛಂದಃ । ಮುಖೇ । (ಮುಖವನ್ನು ಮುಟ್ಟಿಕೊಳ್ಳಬೇಕು). ಶ್ರೀಸಂತಾನಗೋಪಾಲಕೃಷ್ಣೋ ದೇವತಾ । ಹೃದಯೇ। (ಹೃದಯವನ್ನು ಮುಟ್ಟಿ ಕೊಳ್ಳಬೇಕು) । ಗಂ ಬೀಜಂ । ಸ್ವಾಹಾ ಶಕ್ತಿಃ । ಪುತ್ರಾರ್ಥೇ ಜಪೇ ವಿನಿಯೋಗಃ।

**ಧ್ಯಾನಂ :** ಶಂಖಚಕ್ರಧರಂ ಕೃಷ್ಣಂ ರಥಸ್ಥಂ ಚ ಚತುರ್ಭುಜಂ । ಸರ್ವಾಭರಣಸಂಯುಕ್ತಂ ಪೀತವಾಸಸಮುಚ್ಯುತಂ ॥ ದ್ವಿಜವರ್ಯಾರ್ಜುನಯುತಂ ವಿಷ್ಣುತೇಜೋಪಬೃಂಹಿತಂ । ಸಮರ್ಪಯಂತಂ ವಿಪ್ರಾಯ ನಷ್ಟಾನಾನೀಯ ಬಾಲಕಾನ್ ॥ ಕರುಣಾಮೃತ - ಸಂಪೂರ್ಣದೃಷ್ಟ್ಯೇಕ್ಷಂತಂ ಚ ತಂ ದ್ವಿಜಂ । ಧ್ಯಾತ್ವಾ ಜಪಾರ್ಚನಾದೀನಿ ಕುರ್ಯಾದ್ಭಕ್ತಿಪರಾಯಣಾ(ಣಃ) ॥ ಪುತ್ರಾರ್ಥೀ ಸ್ವಸ್ತಿಕೇ ನ್ಯಸ್ಯ ತತ್ರಸ್ಥಂ ಕೃಷ್ಣಮರ್ಚಯೇತ್॥

**ಸತ್ಸಂತಾನಫಲಪ್ರಾಪ್ತ್ಯರ್ಥಂ ಪತ್ಯಂತರ್ಗತ ಶ್ರೀಮಧ್ವಾಂತರ್ಗತ ಶ್ರೀಸಂತಾನ - ಗೋಪಾಲಕೃಷ್ಣ ಪ್ರೇರಣಯಾ ಶ್ರೀಸಂತಾನಗೋಪಾಲಕೃಷ್ಣ ಪ್ರೀತ್ಯರ್ಥಂ ದ್ವಾತ್ರಿಂಶದಕ್ಷರ ಶ್ರೀಸಂತಾನಗೋಪಾಲಕೃಷ್ಣ ಮಂತ್ರ ಜಪಂ ತರ್ಪಣಂ ಚ ಕರಿಷ್ಯೇ ॥**

**ಮೂಲಮಂತ್ರ : "ಶ್ರೀಂ । ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ । ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಾ॥"**

(ಈ ಮಂತ್ರವನ್ನು ಸಾಧ್ಯವಾದಷ್ಟು ಜಪಿಸಿ, ಹತ್ತು ಮಂತ್ರಗಳಿಗೆ ಒಂದರಂತೆ ಅರ್ಘ್ಯವನ್ನು ನೀಡಬೇಕು.)

**ಅರ್ಘ್ಯ : "ಶ್ರೀ ೦ । ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ । ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಾ (ತಃ)॥" ಇತಿ ಸಂತಾನಗೋಪಾಲಕೃಷ್ಣಂ ತರ್ಪಯಾಮಿ ।**

ನಂತರ ಹಿಂದಿನಂತೆಯೇ ಧ್ಯಾನ, ಅಂಗನ್ಯಾಸ, ಋಷಿಛಂದಸ್ಸು, ದೇವತೆಗಳ ಸ್ಮರಣೆ ಹಾಗೂ ಮೂರು ಬಾರಿ ಪ್ರಾಣಾಯಾಮ ಇವುಗಳನ್ನು ನಡೆಸಬೇಕು).

ಅನೇನ ಶ್ರೀಸಂತಾನ ಗೋಪಾಲಕೃಷ್ಣ ಮಹಾಮಂತ್ರ ಜಪತರ್ಪಣಾಖ್ಯಕರ್ಮಣಾ ಪತ್ಯಂತರ್ಗತಶ್ರೀಮಧ್ವಾಂತರ್ಗತ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್

**॥ಶ್ರೀಕೃಷ್ಣಾರ್ಪಣಮಸ್ತು॥**

**ಸೂಚನೆ : ಮೇಲಿನ ಮಂತ್ರಗಳನ್ನು ಗುರೂಪದೇಶ ಪೂರ್ವಕ ಪಡೆದು ಜಪಿಸಬೇಕು.**

## ಆ) ಗ್ರಹಣವಿಚಾರ

ವೇಧ ಬಂದ ಮೇಲೆ ಉಪಹಾರ ಭೋಜನಾದಿಗಳನ್ನು ಮಾಡಬಾರದು, ಸ್ನಾನ, ನಿತ್ಯ ಆಹ್ನಿಕ ಪೂಜಾ ಕೈಂಕರ್ಯಗಳನ್ನು ಕೈಗೊಳ್ಳಬಹುದು. ಗ್ರಹಣ ಪ್ರಾರಂಭವಾದ ತಕ್ಷಣ ಉಟ್ಟ ಬಟ್ಟೆ ಜೊತೆಗೇ ಸ್ನಾನ ಮಾಡಬೇಕು. ಉಟ್ಟ ಬಟ್ಟೆ ಬಿಚ್ಚಿ ಬೇರೆ ವಸ್ತ್ರದೊಂದಿಗೆ ಸ್ನಾನ ಮಾಡಬಾರದು. ಜನನಾಶೌಚ, ಮೃತಾಶೌಚ ಇದ್ದವರಿಗೂ, ಗ್ರಹಣ ಸಮಯದಲ್ಲಿ ತಾತ್ಕಾಲಿಕ ಶುದ್ಧಿ ಇರುತ್ತದೆ. ಅಂತಹವರೂ ಕೂಡಾ ಸ್ನಾನ ದಾನಾದಿಗಳನ್ನು ಮಾಡಬೇಕು. ಗ್ರಹಣ ಸಮಯದಲ್ಲಿ ತಿನ್ನುವ ಯಾವ ಪದಾರ್ಥವನ್ನೂ ತಯಾರಿಸಬಾರದು. ಒಂದು ವೇಳೆ ತಿಳಿಯದೇ ತಯಾರಿಸಿದ್ದರೆ ಆ ಪದಾರ್ಥಗಳನ್ನು ಗ್ರಹಣ ಸಮಯದಲ್ಲೂ, ಆ ನಂತರದಲ್ಲೂ ತಿನ್ನಬಾರದು.

ಗ್ರಹಣ ಸಮಯದಲ್ಲಿ ಸ್ನಾನ ಮಾಡದಿದ್ದರೆ ಆಯುಸ್ಸು ಕ್ಷೀಣವಾಗುತ್ತದೆ. ಗ್ರಹಣ ಸಮಯದಲ್ಲಿ ನಿದ್ರೆ ಮಾಡಿದರೆ ಜ್ವರಾದಿ ಪೀಡೆಯು, ಮೂತ್ರ ವಿಸರ್ಜನೆ ಮಾಡಿದರೆ ಮೂತ್ರ ರೋಗವು, ಮಲ ವಿಸರ್ಜನೆ ಮಾಡಿದರೆ ಕುಷ್ಠಾದಿ ರೋಗಗಳು, ಭೋಜನ ಮಾಡಿದರೆ ನರಕ ಪ್ರಾಪ್ತಿ ಎಂದು ಪ್ರಮಾಣವಿದೆ.

ಗ್ರಹಣ ಪ್ರಾರಂಭವಾಗುತ್ತಿದ್ದಂತೆ ಮತ್ತು ಬಿಟ್ಟ ಮೇಲೆ ಸ್ನಾನ, ಗ್ರಹಣ ಮಧ್ಯದವರೆಗೂ ತರ್ಪಣ ದಾನಗಳನ್ನು ಮಾಡಬೇಕು. ಹಿಂದೆ ಉಪದೇಶ ಪಡೆದ ಮಂತ್ರಗಳ ಜಪವನ್ನು ಗ್ರಹಣ ಸಮಯದಲ್ಲಿ ಮಾಡಬೇಕು. ಇಲ್ಲದಿದ್ದರೆ ಮಂತ್ರಗಳ ಪ್ರಭಾವವು ಕಡಿಮೆಯಾಗುವುದು. ಹೊಸ ಮಂತ್ರಗಳ ಉಪದೇಶ ಪಡೆಯಲು ಗ್ರಹಣ ಸಮಯವು ಅತ್ಯುತ್ತಮ ಕಾಲವಾಗಿದೆ. ಉಪದೇಶ ಪಡೆದ ಮಂತ್ರಗಳ ಜಪದಿಂದ ಮಂತ್ರಸಿದ್ಧಿಯಾಗುವುದು. ಸ್ಪರ್ಶ ಸಮಯದಲ್ಲಿ ಮಾಡುವ ಸ್ನಾನವು ಲಕ್ಷಸ್ನಾನಗಳ ಫಲವನ್ನೂ ಮೋಕ್ಷಾನಂತರ ಮಾಡುವ ಸ್ನಾನವು ಅನಂತ ಸ್ನಾನಗಳ ಫಲವನ್ನೂ ಉಂಟುಮಾಡುತ್ತದೆ. ಗ್ರಹಣ ಪ್ರಾರಂಭ ಸಮಯವು ದೇವ ಪಿತೃಗಳಿಗೂ, ಮಧ್ಯವು ಮನುಷ್ಯರಿಗೂ, ಅಂತ್ಯವು ರಾಕ್ಷಸರಿಗೂ ಶುಭದಾಯಕವು. ಗ್ರಹಣ ಸಮಯದಲ್ಲಿ ಸತ್ಪಾತ್ರರಾದ ಶ್ರೇಷ್ಠ ಬ್ರಾಹ್ಮಣರಿಗೆ ಶಕ್ತ್ಯನುಸಾರ ದಕ್ಷಿಣೆ ದಾನಾದಿಗಳನ್ನು ಕೊಡಬೇಕು. ಸತ್ಪಾತ್ರರ ಅಭಾವದಲ್ಲಿ ಉಪಲಬ್ಧರಾದ ಬ್ರಾಹ್ಮಣರಿಗೇ ದಾನಾದಿಗಳನ್ನು ಕೊಡಬೇಕು.

**೧. ಸೂರ್ಯಗ್ರಹಣ ಸಮಯದಲ್ಲಿ ಸ್ನಾನ, ದಾನ ಕ್ರಮ :-**

**ಸ್ನಾನಸಂಕಲ್ಪ :**

ಆಚಮ್ಯ, ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ .. .. ಏವಂಗುಣವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಸೂರ್ಯಗ್ರಹ ಪೀಡಾಪರಿಹಾರಾರ್ಥಂ ನದೀಸ್ನಾನಮಹಂ ಕರಿಷ್ಯೇ ಎಂದು ಹೇಳಿ ಸ್ನಾನ ಮಾಡಿ ಅರ್ಘ್ಯಾದಿಗಳನ್ನು ಕೊಟ್ಟನಂತರ ' **ನಾಗಪಾಶಧರೋ ದೇವೋ ವರುಣೋ ಮಕರವಾಹನಃ । ಸಜಲಾಧಿಪತಿಃ ಸೂರ್ಯಗ್ರಹಪೀಡಾಂ ವ್ಯಪೋಹತು ॥** ' ಎಂದು ಹೇಳಿ ವರುಣ ಪ್ರೀತಿಗಾಗಿ ಅರ್ಘ್ಯವನ್ನು ಕೊಡಬೇಕು. ಇದರಿಂದ ವರುಣ ದೇವನ ಪ್ರೀತಿಯಾಗಿ ತಮ್ಮ ರಾಶಿಗೆ ಬಂದಿರುವ ಗ್ರಹದೋಷ ನಿವಾರಣೆಯಾಗುವುದು.

**ತರ್ಪಣ ಸಂಕಲ್ಪ :** ಗಂಡಸರು ತಿಲತರ್ಪಣವನ್ನು ಕೊಡಬೇಕು.

**ಸಂಕಲ್ಪ :** ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣ ವಿಶಿಷ್ಟಾಯಾಂ ಶುಭ ಪುಣ್ಯತಿಥೌ ಸಮಸ್ತ ಪಿತ್ರಂತರ್ಯಾಮಿ ಶ್ರೀಮಧ್ವವಲ್ಲಭ ಶ್ರೀ ಮಜ್ಜನಾರ್ದನ ವಾಸುದೇವ ಪ್ರೀತ್ಯರ್ಥಂ ಸೂರ್ಯೋಪರಾಗ ಕಾಲೇ ತಿಲತರ್ಪಣಂ ಕರಿಷ್ಯೇ----- ಅನೇನ ತಿಲತರ್ಪಣೇನ ಸಮಸ್ತ ಪಿತ್ರಂತರ್ಯಾಮಿ ಶ್ರೀಮಧ್ವವಲ್ಲಭ ಶ್ರೀಮಜ್ಜನಾರ್ದನ ವಾಸುದೇವಃ ಪ್ರೀಯತಾಂ ಪ್ರೀತೋ ವರದೋ ಭವತು ಶ್ರೀ ಕೃಷ್ಣಾರ್ಪಣಮಸ್ತು.

**ಗ್ರಹಣ ಶಾಂತಿ : -**

ಗರ್ಗಾಚಾರ್ಯಾದಿಗಳು ಹೇಳಿದಂತೆ ಗ್ರಹಣ ಶಾಂತಿ ಮಾಡಬೇಕು. ಅಥವಾ ಬೆಳ್ಳಿಯ ಸೂರ್ಯಬಿಂಬ, ಸ್ವರ್ಣದ ನಾಗಬಿಂಬ ಮಾಡಿ ತುಪ್ಪ ತುಂಬಿದ ತಾಮ್ರ ಅಥವಾ ಕಂಚಿನ ಪಾತ್ರೆಯಲ್ಲಿಟ್ಟು ಪೂಜಿಸಿ **ಸೂರ್ಯಾಂತರ್ಯಾಮಿ ಶ್ರೀಲಕ್ಷ್ಮೀನರಸಿಂಹ-ಪ್ರೇರಣಯಾ ಶ್ರೀಲಕ್ಷ್ಮೀನರಸಿಂಹಪ್ರೀತ್ಯರ್ಥಂ ಸೂರ್ಯೋಪರಾಗ ಪೀಡಾಪರಿಹಾರಾರ್ಥಂ ಸನಾಗ ಸೂರ್ಯಬಿಂಬದಾನಮಹಂ ಕರಿಷ್ಯೇ** ಎಂದು ಹೇಳುತ್ತಾ ಅಕ್ಷತೆ ನೀರು ಬಿಟ್ಟು, " **ತಮೋಮಯ ಮಹಾಭೀಮ ಸೋಮ-ಸೂರ್ಯವಿಮರ್ದನ । ಹೇಮತಾರಾಪ್ರದಾನೇನ ಮಮ ಶಾಂತಿಪ್ರದೋ ಭವ ॥ ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯವಿಮರ್ದನಮ್ । ಸಿಂಹಿಕಾಗರ್ಭಸಂಭೂತಂ ತಂ ರಾಹುಂ ಪ್ರಣಮಾಮ್ಯಹಮ್ ॥ ವಿಧುಂತುದ ನಮಸ್ತುಭ್ಯಂ ಸಿಂಹಿಕಾನಂದನಾಚ್ಯುತ । ದಾನೇನಾನೇನ ನಾಗಸ್ಯ ರಕ್ಷ ಮಾಂ ವೇಧಜಾತ್ ಭಯಾತ್ ॥** ಎಂದು ದಕ್ಷಿಣಾ ಸಹಿತವಾಗಿ ದಾನ ಮಾಡಬೇಕು.

**೨. ಚಂದ್ರ ಗ್ರಹಣದಲ್ಲಿ ಸ್ನಾನ ಸಂಕಲ್ಪ**

ಆಚಮ್ಯ..ಪ್ರಾಣಾನಾಯಮ್ಯ...ಶ್ರೀಗೋವಿಂದ ಗೋವಿಂದ... ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭಪುಣ್ಯತಿಥೌ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಚಂದ್ರಗ್ರಹಪೀಡಾಪರಿಹಾರಾರ್ಥಂ ----- ನದೀಸ್ನಾನಮಹಂ ಕರಿಷ್ಯೇ ಎಂದು ಹೇಳಿ ಸ್ನಾನ ಮಾಡಿ ಅರ್ಘ್ಯಾದಿಗಳನ್ನು ಕೊಟ್ಟನಂತರ '

**ನಾಗಪಾಶಧರೋ ದೇವೋ ವರುಣೋ ಮಕರವಾಹನಃ । ಸಜಲಾಧಿಪತಿಃ ಚಂದ್ರಗ್ರಹಪೀಡಾಂ ವ್ಯಪೋಹತು ॥** ' ಎಂದು ಹೇಳಿ ವರುಣ ಪ್ರೀತಿಗಾಗಿ ಅರ್ಘ್ಯವನ್ನು ಕೊಡಬೇಕು. ಅರ್ಹರಾದ ಗಂಡಸರು ತಿಲತರ್ಪಣವನ್ನು ಕೊಡಬೇಕು. ತರ್ಪಣ ಸಂಕಲ್ಪ ಮೇಲಿನಂತಿದ್ದು ಇಲ್ಲಿ ಚಂದ್ರೋಪರಾಗ ಕಾಲೇ ಎಂದು ಹೇಳಬೇಕು.

**ಗ್ರಹಣ ಶಾಂತಿ**

ಗರ್ಗಾಚಾರ್ಯಾದಿಗಳು ಹೇಳಿದಂತೆ ಗ್ರಹಣ ಶಾಂತಿ ಮಾಡಬೇಕು. ಅಥವಾ ಬೆಳ್ಳಿಯ ಚಂದ್ರಬಿಂಬ, ಸ್ವರ್ಣದ ನಾಗಬಿಂಬ ಮಾಡಿ ತುಪ್ಪ ತುಂಬಿದ ತಾಮ್ರ ಅಥವಾ ಕಂಚಿನ ಪಾತ್ರೆಯಲ್ಲಿಟ್ಟು ಪೂಜಿಸಿ **ಚಂದ್ರಾಂತರ್ಯಾಮಿ ಶ್ರೀಲಕ್ಷ್ಮೀನರಸಿಂಹ-ಪ್ರೇರಣಯಾ ಶ್ರೀಲಕ್ಷ್ಮೀನರಸಿಂಹಪ್ರೀತ್ಯರ್ಥಂ ಚಂದ್ರೋಪರಾಗಪೀಡಾ ಪರಿಹಾರಾರ್ಥಂ ಸನಾಗ ಚಂದ್ರಬಿಂಬದಾನಮಹಂ ಕರಿಷ್ಯೇ** ಎಂದು ಹೇಳುತ್ತಾ ಅಕ್ಷತೆ ನೀರು ಬಿಟ್ಟು, "**ತವೋಮಯ ಮಹಾಭೀಮ ಸೋಮಸೂರ್ಯವಿಮರ್ದನ । ಹೇಮತಾರಾಪ್ರದಾನೇನ ಮಮ ಶಾಂತಿಪ್ರದೋ ಭವ ॥ ಪಲಾಶಪುಷ್ಪಸಂಕಾಶಂ ತಾರಕಾಗ್ರಹಮಸ್ತಕಮ್ । ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಮ್ ॥** " ಎಂದು ಹೇಳಿ ದಕ್ಷಿಣೆ ಸಹಿತವಾಗಿ ದಾನ ಮಾಡಬೇಕು.

**॥ಇಲ್ಲಿಗೆ ಗುರೂಪದೇಶ ಪ್ರಕರಣವು ಸಮಾಪ್ತವಾಯಿತು ॥**

**॥ಶ್ರೀ ಕೃಷ್ಣಾರ್ಪಣಮಸ್ತು ॥**

ಗುರು ಉಪದೇಶವಿಲ್ಲದ ಜ್ಞಾನವು । ಗುರು ಉಪದೇಶವಿಲ್ಲದ ಸ್ನಾನವು।
ಗುರು ಉಪದೇಶವಿಲ್ಲದ ಧ್ಯಾನವು । ಗುರು ಉಪದೇಶವಿಲ್ಲದ ಜಪವು।
ಗುರು ಉಪದೇಶವಿಲ್ಲದ ತಪವು । ಗುರು ಉಪದೇಶವಿಲ್ಲದ ಮಂತ್ರ।
ಗುರು ಉಪದೇಶವಿಲ್ಲದ ತಂತ್ರ । ಉರಗನ ಉಪವಾಸದಂತೆ ಕಾಣಿರೋ।
ಗುರುವ್ಯಾಸರಾಯರೆ ಕರುಣದಿಂದಲಿ ಎನಗೆ । ಪುರಂದರವಿಠಲನೇ
ಪರನೆಂದರುಹಿ। ದುರಿತ ಭಯವನೆಲ್ಲ ಪರಿಹರಿಸಿದರಾಗಿ।
ವರಮಹಾಮಂತ್ರ ಉಪದೇಶಿಸಿದರಾಗಿ॥

# ೭. ಮಂಗಳ ಪ್ರಕರಣ

'ಸಾಧನದೀಪಿಕಾ'ವನ್ನು ಸಮಾಪ್ತಿಗೊಳಿಸುತ್ತ ಈ ಗ್ರಂಥದ ಪಠಣ, ವಾಚನ ಮಾಡುವವರಿಗೆ ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಸಕಲ ಸನ್ಮಂಗಳಗಳುಂಟಾಗಲಿ ಎಂದು ಆಶಿಸುತ್ತ ಶ್ರೀಹರಿದಾಸಕೃತ ಕೆಲವು ಮಂಗಳ ಪದಗಳನ್ನು ಈ ಪ್ರಕರಣದಲ್ಲಿ ಸೇರಿಸಲಾಗಿದೆ.

ಮದುವೆ, ಮುಂಜಿವೆ, ದೀಪಾವಳಿ ಹಬ್ಬ, ಹುಣ್ಣಿವೆ ಮೊದಲಾದ ಮಂಗಳ ಕಾರ್ಯಗಳಿದ್ದಾಗ ಮನೆಯಲ್ಲಿ ಸ್ತ್ರೀಯರು ಎಲ್ಲರನ್ನೂ ಹಸೆಗೆ ಕರೆದು ಆರುತಿ ಮಾಡಿ ಎಣ್ಣೆ ಹಚ್ಚಿ ಹರಸುವ ಸಂಪ್ರದಾಯವಿದೆ. ಇಂಥ ಸಂದರ್ಭಕ್ಕೆ ಉಚಿತವಾದ ಕೆಲವೊಂದನ್ನಾದರೂ ಹಾಡುಗಳನ್ನು ಸ್ತ್ರೀಯರು ಕಲಿತುಕೊಂಡಿರಬೇಕು. ಈ ಉದ್ದೇಶದಿಂದ ಈ ಮಂಗಳ ಪ್ರಕರಣದಲ್ಲಿ ಸ್ತ್ರೀಯರಿಗೆ ಉಪಯುಕ್ತವಾಗುವ ಕೆಲವು ಹಾಡುಗಳನ್ನು ಸಂಗ್ರಹಿಸಿ ಕೊಡಲಾಗಿದೆ.

೧) ಮಂಗಳ ಮಾರಮಣಗೆ ಮಂಗಳ - ಜಯ । ಮಂಗಳ ಭೂರಮಣಗೆ ಮಂಗಳ ॥ ಪ॥ ಮುಕುಟಕೆ ಮಂಗಳ ಮತ್ಸ್ಯಾವತಾರಗೆ । ಮುಖಕೆ ಮಂಗಳ ಮುದ್ದು ಕೂರ್ಮನಿಗೆ ॥ ಸುಕಂಠಕೆ ಮಂಗಳ ಸೂಕರರೂಪಗೆ । ನಖಕೆ ಮಂಗಳ ಮುದ್ದು ನರಸಿಂಹಗೆ ॥ ೧॥ ವಕ್ಷಕೆ ಮಂಗಳ ವಟುವಾಮನನಿಗೆ । ಪಕ್ಷಕೆ ಮಂಗಳ ಭಾರ್ಗವಗೆ ॥ ಕಕ್ಷಕೆ ಮಂಗಳ ಕಾಕುತ್ಸ್ಥ ರಾಮನಿಗೆ । ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ ॥ ೨॥ ಊರುಗಳಿಗೆ ಮಂಗಳ ಉತ್ತಮ ಬುದ್ಧಗೆ । ಚರಣಕ್ಕೆ ಮಂಗಳ ಚೆಲ್ವ ಕಲ್ಕಿಗೆ॥ ಪರಿಪರಿ ರೂಪಗೆ ಪರಮ ಮಂಗಳ । ಪುರಂದರವಿಠಲಗೆ ಶುಭಮಂಗಳ ॥ ೩॥

೨) ಮಂಗಳಂ ಜಯ ಮಂಗಳಂ ॥ ಪ॥ ನಿಗಮವ ತಂದಾ ಮತ್ಸ್ಯನಿಗೆ ನಗವ ಬೆನ್ನಲಿ ಪೊತ್ತ ಕೂರ್ಮನಿಗೆ ॥ ಜಗವನುದ್ಧರಿಸಿದ ವರಹಾವತಾರಗೆ । ಮಗುವನು ಕಾಯ್ದ ಮುದ್ದು ನರಸಿಂಹಗೆ ॥ ೧॥ ಭೂಮಿಯ ದಾನವ ಬೇಡಿದಗೆ। ಆ ಮಹಾ ಕ್ಷತ್ರಿಯರ ಗೆಲಿದವಗೆ ॥ ರಾಮಚಂದ್ರನಾದ ಸ್ವಾಮಿಗೆ ಸತ್ಯ - । ಭಾಮೆಯರಸ ಗೋಪಾಲಕೃಷ್ಣಗೆ ॥ ೨॥ ಬತ್ತಲೆ ನಿಂತಿಹ ಬುದ್ಧನಿಗೆ । ಉತ್ತಮ ಹಯವೇರಿದ ಕಲ್ಕಿಗೆ ॥ ಹತ್ತವತಾರದಿ ಭಕ್ತರ ಸಲಹುವ ಸತ್ಯ ಶ್ರೀಪುರಂದರ ವಿಠಲನಿಗೆ ॥ ೩॥

೩) ಜಯಮಂಗಳಂ ನಿತ್ಯಶುಭಮಂಗಳಂ ॥ ಪ॥ ಇಂದೀವರಾಕ್ಷಗೆ ಇಭರಾಜವರದಗೆ । ಇಂದಿರಾರಮಣ ಗೋವಿಂದ ಹರಿಗೆ ॥ ನಂದನ ಕಂದಗೆ ನವನೀತ ಚೋರಗೆ । ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ ॥ ೧॥ ಕ್ಷೀರಾಬ್ಧಿ ವಾಸಗೆ ಕ್ಷಿತಿಜನ ಪಾಲಗೆ । ಮಾರನನು ಪಡೆದ ಮಂಗಲಮೂರ್ತಿಗೆ ॥ ಚಾರುಚರಣದಿಂದ ಚೆಲುವ ಗಂಗೆಯ ಪಡೆದ । ಕಾರುಣ್ಯಮೂರ್ತಿ

ಕೌಸ್ತುಭಧಾರಿಗೆ॥೨॥ ವ್ಯಾಸಾವತಾರಗೆ ವೇದ ಉದ್ಧಾರಗೆ । ವಾಸಿತಾನಂತಪದ ಸಕಲೇಶಗೆ ॥ ವಾಸು ದೇವನ ಮೂರ್ತಿ ಪುರಂದರವಿಠ್ಠಲಗೆ । ದಾಸರನು ಕಾಯ್ವ ರುಕ್ಮಿಣಿರಮಣಗೆ॥೩॥

೪) ಮಂಗಳಂ ಜಯಮಂಗಳಂ ॥ ಪ॥ ವಾತಸುತ ಹನುಮನ ಒಡೆಯಗೆ ಮಂಗಳ । ದಾತ ಶ್ರೀರಘುಪತಿಗೆ ಮಂಗಳ ॥ ಸೇತುವೆಗಟ್ಟಿದ ರಾಯಗೆ ಮಂಗಳ। ಸೀತಾರಮಣಗೆ ಶುಭಮಂಗಳ ॥ ೧॥ ಬಿಲ್ಲ ಹಿಡಿದು ಬಲು ಬಿಂಕದ ದೈತ್ಯರ । ಹಲ್ಲ ಮುರಿದವಗೆ ಮಂಗಳ ॥ ಕಲ್ಲಾದಹಲ್ಯೆಯನುದ್ಧಾರ ಮಾಡಿದ । ಬಲ್ಲಿದ ದಾಶರಥಿಗೆ ಮಂಗಳ ॥ ೨॥ ಹರಧನು ಮುರಿದ ವಿನೋದಿಗೆ ಮಂಗಳ । ವರದ ತಿಮ್ಮಪ್ಪಗೆ ಮಂಗಳ ॥ ಪುರಂದರವಿಟ್ಠಲರಾಯಗೆ ಮಂಗಳ । ಸರುವೋತ್ತಮನಿಗೆ ಶುಭಮಂಗಳ ॥ ೩॥

೫) ಜಯ ಮಂಗಳಂ ನಿತ್ಯಶುಭಮಂಗಳಂ ॥ ಪ॥ ತೊಳಸದಕ್ಕಿಯ ತಿಂಬ, ಕಿಲುಬು ತಳಿಗೆಯಲುಂಬ । ಕೊಳಗದಲಿ ಹಣಗಳನು ಅಳೆದುಕೊಂಬ ॥ ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ । ಎಲ್ಲವನು ಕಸಕೊಂಬ ಕಳ್ಳದೊರೆಗೆ ॥ ೧॥ ತನ್ನ ನೋಡೆನೆಂದು ಮುನ್ನೂರು ಗಾವುದ ಬರೆ । ತನ್ನ ಗುಡಿಯ ಪೊಕ್ಕ ಜನರಿಗೆಲ್ಲ ॥ ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ । ಬೆನ್ನೊಡೆಯ ಹೊಯ್ಸುವ ಅನ್ಯಾಯಕಾರಿಗೆ ॥ ೨॥ ಗಿಡ್ಡ ಹಾರವನಾಗಿ ಒಡ್ಡಿ ದಾನವ ಬೇಡಿ । ದುಡ್ಡು ಕಾಸುಗಳಿಗೆ ಕೈಯ್ಯ ನೀಡಿ ॥ ಅಡ್ಡ ಬಿದ್ದ ಜನರ ವಿಡ್ದೂರಗಳ ಕಳೆದು । ದೊಡ್ಡವರ ಮಾಳ್ಪ ಸಿರಿ ವಿಜಯವಿಠ್ಠಲಗೆ ॥ ೩॥

೬) ಮಂಗಳ ಮಹಿಮಗೆ ಮಂಗಳ । ಶುಭ ಮಂಗಳ ದೇವಿಗೆ ಮಂಗಳ ॥ಪ॥ ನಾರಾಯಣನರ್ಧಾಂಗಿಗೆ ಮಂಗಳ । ನುರುಸುಖಿನ ತಾಯಿಗೆ ಮಂಗಳ ॥ ಮೂರು ಅಂಬಕನಜ್ಜಿಗೆ ಮಂಗಳ । ಈರೇಳು ಲೋಕೇಶಳಿಗೆ ಮಂಗಳ ॥ ೧॥ ಅಗಣಿತ ಚಂದ್ರಾರ್ಕಾಭಿಗೆ ಮಂಗಳ । ನಗೆ ಮೊಗದರಸಿಗೆ ಮಂಗಳ ॥ ಸುಗುಣ ಗಣಾನಂತಾಭಿಗೆ ಮಂಗಳ । ಝಗಝಗಿವಾಭರಣೆಗೆ ಮಂಗಳ ॥ ೨॥ ಬೇಡಿದ ಭಾಗ್ಯ ಪ್ರದಾತ್ರಿಗೆ ಮಂಗಳ। ನಾಡೋಳರ್ಚಕನಾಥಿಗೆ ಮಂಗಳ ॥ ಪ್ರೌಢ ಜನೇಶ್ವರಿ ಪವಿತ್ರಗೆ ಮಂಗಳ । ಗೂಢ ಪ್ರಸನ್ವೇಂಕಟಿಗೆ ಮಂಗಳ ॥ ೩॥

೭) ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪ॥ ಹಾರುವಗೆ ಮರದ ಮೇಲಿರುವಗೆ ಮುದ್ರಿಕೆಯ । ತೋರುವಗೆ ವನಕೀರ್ತಿ ತೂರುವವಗೆ । ಹೀರುವವಗಾಕ್ಷಣದಿ ಚೀರುವಗೆ ಆರ್ಭಟಿಸಿ । ಸಾರುವಗೆ ರಾವಣನ ಮೀರಿದವಗೆ ॥ ೧॥ ವೃಕೋದರ ಭೀಮಗೆ ಅಶೋಕದೊಡಿಯಗೆ । ಬಕ ಜರಾಸಂಧ ಕೀಚಕ ವಧನಿಗೆ ॥ ಸಕಲ ದಳದೊಳಗೆ ನಾಯಕನೆನಿಸಿ ಕಲಿಯ ಬಂ - । ಧಕ ಶಕುತಿ ಗೆದ್ದಲೌಕಿಕ ಚದುರಗೆ ॥ ೨॥ ಒಂದೇ ಅಕ್ಷರದಿಂದ ಆನಂದ ಕೊಡುವವಗೆ । ಒಂದೆರಡು ಈರೈದು ಮುರಿದವನಿಗೆ ॥ ಒಂದೇ ದೇವಾ ನಮ್ಮ ವಿಜಯವಿಠ್ಠಲನಂಘ್ರಿ । ವಂದಿಸುವ ಶ್ರೀಮದಾನಂದ ಮುನಿಗೆ ॥ ೩॥

೮) ಮಂಗಳಂ ಶ್ರೀರಾಘವೇಂದ್ರಗೆ । ಶುಭ । ಮಂಗಳ ಸುಜನಾಂಬುಧಿ ಚಂದ್ರಗೆ ॥ ಪ॥ ಶ್ರೀಸುಧೀಂದ್ರ ಕುಮಾರಗೆ ಮಂಗಳ । ಭೂಸುರ ನುತ ಮಹಿಮಗೆ ಮಂಗಳ ॥ ದೇಶಿಕ ಕುಲ ವನಜಾರ್ಕಗೆ ಮಂಗಳ । ಭಾಸುರ ಕೀರ್ತಿಯ ಪಡೆದವಗೆ ॥ ೧॥ ವೃಂದಾವನ ಭುವಿಯೊಳಗೆ ಸುರದ್ರುಮ -। ದಂದದಿ ರಾಜಿಸುವಗೆ ಮಂಗಳ ॥ ಅಂಧ ಪಂಗು ಮೂಕ ಬಧಿರರೀಪ್ಸಿತ ।

ಸಂದೋಹ ಸಲಿಸುವ ಮುನಿವರಗೆ ॥೨॥ ಭೂತ ಪ್ರೇತ ವೇತಾಳ ಭಯವಿಪಿನ । ವೀತಿ ಹೋತ್ರ ನೆನಿಪಗೆ ಮಂಗಳ ॥ ವಾತ ಜನಕ ಜಗನ್ನಾಥವಿಠ್ಠಲನ । ದೂತರ ಸಲಹುವ ದಾತನಿಗೆ ॥ ೩॥

೯) ದಾಸೋऽಹಂ ತವ ದಾಸೋऽಹಂ ॥ ಪ॥ ವಾಸುದೇವ ವಿಗತಾಘಸಂಘ ತವ ॥ಅ.ಪ.॥ ಜೀವಾಂತರ್ಗತ ಜೀವನಿಯಾಮಕ । ಜೀವ ವಿಲಕ್ಷಣ ಜೀವನದ ॥ ಜೀವಾಧಾರಕ ಜೀವರೂಪ ರಾ - । ಜೀವ ಭವ ಜನಕ ಜೀವೇಶ್ವರ ತವ ॥ ೧॥ ಕರ್ಮಾಕರ್ಮ ಕೃತಕರ್ಮ ಕೃತಾಗಮ । ಕರ್ಮ ಫಲಪ್ರದ ಕರ್ಮಜಿತ ॥ ಕರ್ಮಬಂಧ ಮಹಕರ್ಮ ವಿಮೋಚಕ । ಕರ್ಮನಿಗ್ರಹ ಕರ್ಮಸಾಕ್ಷಿ ತವ ॥೨॥ ಕಾಲಾಹ್ವಯ ಮಹಕಾಲ ನಿಯಾಮಕ । ಕಾಲಾತೀತ ತ್ರಿಕಾಲಜ್ಞ ॥ ಕಾಲಪ್ರವರ್ತಕ ಕಾಲನಿವರ್ತಕ । ಕಾಲೋತ್ಪಾದಕ ಕಾಲಮೂರ್ತಿ ತವ ॥ ೩॥ ಧರ್ಮಯೂಪ ಮಹಾಧರ್ಮ-ವಿವರ್ಧನ । ಧರ್ಮವಿದುತ್ತಮ ಧರ್ಮನಿಧೇ ॥ ಧರ್ಮಸೂಕ್ಷ್ಮ ಮಹಧರ್ಮ ಸಂರಕ್ಷಕ । ಧರ್ಮಸಾಕ್ಷಿ ಯಮಧರ್ಮಪುತ್ರ ತವ ॥ ೪॥ ಮಂತ್ರ ಯಂತ್ರಮಯ ಮಂತ್ರಬೀಜಮಹ - । ಮಂತ್ರ ರಾಜಗುರು ಮಂತ್ರಜಿತ ॥ ಮಂತ್ರಮೇಯ ಮಹಾಮಂತ್ರಗಮ್ಯ ವರ - । ಮಂತ್ರದೇವ ಜಗನ್ನಾಥವಿಠಲ ತವ ॥ ೫॥

೧೦) ವಿಠಲಯ್ಯ ವಿಠಲಯ್ಯ । ತಟಿತ್ ಕೋಟಿ ನಿಭಕಾಯ ಜಗನ್ನಾಥ ॥ಪ॥ ಭಜಿಸುವೆ ನಿನ್ನನು । ಅಜಭವ ಸುರನುತ ॥ ಭಜಕಾಮರತರು । ಕುಜನ ಕುಠಾರ ॥ ೧॥ ನೀ ಕರುಣಿಸದೆ ನಿ- । ರಾಕರಿಸಲು ಎನ್ನ ॥ ಸಾಕವರಾರು ದ-। ಯಾಕರ ಮೂರುತಿ ॥ ೨॥ ಶರಣಾಗತರನು । ಪೊರೆವೆನೆಂಬ ತವ ॥ ಬಿರಿದು ಕಾಯೋ । ಕರಿವರದ ಜಗನ್ನಾಥ ॥ ೩॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಹಸೆಗೆ ಕರೆದ ಹಾಡುಗಳು

೧. ಹಾಸೆಗೆ ಬಾ ಶೇಷಾದ್ರಿವಾಸ ಹರುಷದಲಿ ಕರೆಯುವೆವೂ ॥ ಪ ॥ ಸುರಲೋಕಪಾಲ ಸುರರೊಡೆಯಶೀಲಾ । ಸರಸೀಜನಾಭ ಸರಸದಲಿ ॥ ೧ ॥ ಕಂದನ ನುಡಿಕೇಳಿ ಕಂಬದಿ ಜನಿಸಿದಿ। ಇಂದಿರೆ ರಮಣಾನಂದದಲಿ ॥ ೨ ॥ ವಿಭೀಷಣನಾಗ್ರಜ ವೈರಿ ರುಕ್ಮಿಯ ಪ್ರಾಣಹಾರಿ । ಕಷ್ಟವ ಪರಿಹರಿಪ ಶ್ರೀ ಕೃಷ್ಣಶೌರಿ ॥ ೩ ॥

೨. ಯದುನಂದನ ಬಾರೋ ಪೀಠಕೆ ಯದುನಂದನ ॥ ಪ ॥ ನಂದಗೋಪೀತನಯ ಹಸೆಗೆ ಇಂದಿರೆಯ ಪ್ರೀಯ ಬಾರೊ । ಇಂದು ತೋರೊ ಜಗಕೆ ನಿನ್ನ ಮಾಯಾ ॥ ೧ ॥ ಗೋವರ್ಧನೋದ್ಧಾರ । ಗೋಪೀ ಮನೋಹರ ಬಾರೊ । ಗೋಕುಲದಿ ಹಾಲು ಬೆಣ್ಣೆ ಚೋರ ॥೨॥ ಮಾಡಿ ಪ್ರಾಣೇಶನ ಧ್ಯಾನ ನೋಡು ಕರವೆ ಜಾನಕಿ ರಮಣಾ । ಬೇಡಿದೊರವ ಕೊಡುತ ಬೇಗ ಬಾರೋ ॥೩॥

(ಧ್ವನಿ ) ಆವರೊಗವು ಎನಗೆ

೩. ಹಸೆಗೆದ್ದು ಬಾರಯ್ಯ ಕುಸುಮಲೋಚನ ಬೇಗ । ವಸುಧಿ ಪಾಲನೆ ಬಾರೊ ಶ್ರೀ ಶ್ರೀನಿವಾಸ ॥ಪ॥ ಕಾಂತೆರುಕ್ಮಿಣಿಕಕೂಡಿ ಸಂತೋಷದಿಂದಲಿ । ಕಂತು ಜನಕನೆ ನೀನು ಶಾಂತಮೂರುತಿಯೇ ॥ ೧ ॥ ಕಂದನ ನುಡಿಕೇಳಿ ಕಂಬದಿಂದಲಿ ಬಂದಿ । ಇಂದಿರೆಯ ಒಡಗೂಡಿ

ಮಂದಹಾಸದಲಿ ॥೨॥ ಪರಿಮಳವ ರಚಿಸಿದ ಗುರುರಾಜರೀಗೊಲಿದು । ಕರುಣಸಾಗರ ಕೃಷ್ಣವೇಣುಗೋಪಾಲ ॥೩॥ ತರುಣಿಯರ ವಸ್ತ್ರವ ಹರಣ ಮಾಡಿದ ಕೃಷ್ಣ । ಶರಣರಕ್ಷಕ ಶ್ರೀಪ್ರಾಣೇಶನೊಡೆಯ ॥೪॥

**(ಧ್ವನಿ ) ಎಂದಿಗಾಗೋದು ನಿನ್ನ ದರುಶನ**

೪. ಬಾರೋ ಬೇಗನೆ ಸೀರೆ ಚೋರನೆ । ನಾರಿಯೇರು ಪೀಠಕೆ ಕರೆವರೋ ॥ ಪ ॥ ಗೋವು ಕಾಯುತ ಗೊಲ್ಲ ಬಾಲನೆ । ಕೊಳಲ ಪಿಡಿದು ನೀ ಕಾಳಿ ಮರ್ದನಾ ॥ ೧ ॥ ಪಡೆದ ತಾಯ ಶಿರವ ಕೆಡುಹಿದಿ । ಮಡದಿ ಸಹಿತ ನೀ ಉಡುಪಿವಾಸನೆ ॥ ೨ ॥ ಮುಷ್ಟಿ ಅವಲಕ್ಕಿಗೆ ಕೊಟ್ಟೆ ಭಾಗ್ಯವಾ । ಬೆಟ್ಟದೊಡೆಯ ಶ್ರೀವೆಂಕಟೇಶನೆ ॥ ೩ ॥

೫. ಹಸಿಗೆದ್ದು ಬಾರಮ್ಮ ಕುಸುಮಲೋಚನೆಯೆ । ರಾಮಾವತಾರದಿ ಭೂಮಿಗೆ ಮಗಳಾದಿ। ಹೇಮಾಂಬರಧರ ಭೂಷಿತಳಾಗಿ ॥ ೧ ॥ ಕೃಷ್ಣಾವತಾರದಿ ಪಟ್ಟದ ರಾಣಿಯಾಗಿ । ವಕ್ಷಸ್ಥಳದಲ್ಲಿ ಒಪ್ಪುವ ದೇವಿಯೆ ॥ ೨ ॥ ಜನಕನ ಸಭೆಯಲ್ಲಿ ಧನುಸ್ಸನೀಡ್ಯಾದಿ । ಕನಕ ಪುತ್ಥಳಿಯಂತೆ ಹೊಳೆಯುವ ದೇವಿಯೆ ॥ ೩ ॥

೬. ಹಸೆಗೆ ತರುಣಿಮಣಿಯಳೆ ಬಾ ಹಸೆಗೆ ॥ ಪ ॥ ಸುಂದರಿ ಮಣಿಯೆ ಚಲ್ವರ ಗಿಣಿಯೆ। ಪೂರ್ಣಚಂದ್ರವೇಣಿ ಬಾರೆ ನೀ ಜಾಣೆ ॥ ೧ ॥ ಮಂದಹಾಸದಿ ಅರವಿಂದನಯನನ ರಾಣಿ । ಚಂದದಿ ಕರೆಯುವೆ ಸುಂದರಾಂಗಿಯೆ ॥ ೨ ॥ ಕನಕ ಪುರೀಶನ ಭಾನು ಪ್ರಕಾಶನ । ಕನ್ನಿಕೆ ದಿನಮಣಿ ಅನುದಿನ ಸ್ಮರಿಸುತ ॥ ೩ ॥

೭. ನಗುತ ನಗುತ ಬಾರೆ ಪೀಠಕೆ ॥ ಪ ॥ ನಗುತ ನಗುತ ಬಾರೆ ನಾರೀ-ಶಿರೋಮಣಿ ನಗಧರನಾ ರಾಣಿ ಪನ್ನಂಗ ವೇಣಿ ॥ ೧ ॥ ಭಾಮಿನಿಯೇರು ಕರೆವರು ಪೀಠಕೆ । ಸ್ವಾಮಿ ಶ್ರೀಕೃಷ್ಣನ ಪ್ರೇಮದ ಭಾಮಿನಿ ॥ ೨ ॥ ಒಡೆಯ ವೆಂಕೋಬನ ಮಡದಿ ನೀ ತಡೆಯದೆ । ಬಡನಡು ಬಳಕುತ ಮುಡಿದ್ಹೂವುದುರಿಸುತ ॥ ೩॥ ಪ್ರಾಣೇಶನೊಡೆಯನ ಸ್ಮರಿಸುತ ಕರೆವರು ತರುಣಿಯರ್ ಮೇಲೆ ಕರುಣ ಕಟಾಕ್ಷದಿ ॥ ೪ ॥

**ಆರುತೀ ಹಾಡುಗಳು**

೧. ಬೆಳಗಿದರಾರುತಿಯಾ ಲಲನೆಯರ್ ॥ ಪ ॥ ನಳಿನ ಮುಖಿಯರೆಲ್ಲಾ ಕೂಡಿ ಹೊಳೆವ ಪೀಠದೊಳಿರುವ ಹರಿಗೆ । ಜಲಜನಯನ ಸಲಹೊ ನಮ್ಮ । ಬಾಲಲೀಲೆ ತೋರಿದಾತಗೆ ॥೧॥ ದ್ರುಪದ ಸುತೆಯ ಮೊರೆಯ ಕೇಳಿ ತಪಿಸುತಾಗ ವರವನಿತ್ತಾ । ಶಪಥದಿಂದ ಬಂದಾಸುರರ ಕುಪಿತನಾಗಿ ಕೊಂದ ಧೀರಗೆ ॥ ೨ ॥ ಕಡೆಯೊ ಸಮಯದಿ ಬಂದು । ಕಡೆಯೊ ಸತಿಯ ಕೈಯ ಪಿಡಿದು । ಕಡೆದ ಪಾಲುಬೆಣ್ಣೆ ಮೊಸರು । ಒಡನೆ ನುಂಗಿದ ಮೇಘಶ್ಯಾಮಗೆ ॥ ೩ ॥

೨. ಆರುತೀಯನು ಮಾಡುವೆ ನಾನು । ವೇದವಾ ತಂದಾತ । ಭಾರ ಪೊತ್ತನೀತ । ಮಣ್ಣುಮೆದ್ದನೀತ । ನಾರಸಿಂಹನಾಥಾಗಾರುತೀಯನು ॥೧॥ ವಾಮನಾವತಾರ ಪರಶುರಾಮಧೀರ। ರಾವಣ ಸಂಹಾರಾ। ಯಶೋದೆ ಕುಮಾರಾಗಾರುತೀಯನು॥೨॥ ಬೌದ್ಧರೂಪಿಯಾಗಿ ಮುದ್ದು ತೇಜನೇರಿ । ವೆಂಕಟೇಶ ಶೌರಿ । ವಿಠ್ಠಲಾ ಮುರಾರಿಗಾರುತೀಯನು॥೩॥

೩. ಆರುತೀಯ ಮಾಡುವೆವು ಮಾರಜನಕನಿಗೆ ಮುದದಿ । ಸಾರಸಾಕ್ಷಿಯೇರೆಲ್ಲಾ ಆನಂದದಿಂದಾ ಬೆಳಗುವೆವು ॥ ಪ ॥ ಗೋಕುಲದೊಳಗೆ ಪುಟ್ಟಿ । ಗೋವುಗಳ ಕಾಯ್ದು

ಗೋಪಾಲ । ತಾ ಕೊಳಲನೂದಿದ । ಗೋಪಾಲನೀಗೆ ಬೆಳಗುವೇವು ॥ ೧ ॥ ನಾರಿಯರ ಸೀರೆ ಸೆಳೆದು ಚೋರ ತನದಿ ಮರವನು । ಏರಿದ ನರಹರಿಗೀಗ ಬೆಳಗುವೇವು ಬೇಗ ಹರುಷದಿ ॥೨॥ ಹತ್ತಾವತಾರದಿ ಬಂದ ಭಕ್ತ ವತ್ಸಲಗೆ ಬೆಳಗುವೆವು । ಸತ್ಯಭಾಮೆಯ ಪ್ರೀಯನಿಗೆ । ಕೃಷ್ಣಮೂರುತಿಗೆ ಬೆಳಗುವೆವು ॥ ೩ ॥

## ಎಣ್ಣೆ ಹಚ್ಚಿದ ಹಾಡು

೧. ಬಣ್ಣಿಸಿ ಗೋಪಿ ತಾ ಹರಸಿದಳು ॥ ಪ. ॥ ಎಣ್ಣೆಯನೊತ್ತುತ ಯದುಕುಲ ತಿಲಕಗೆ ॥ ಅ.ಪ.॥ ಆಯುಷ್ಯವಂತನಾಗು ಅತಿ ಬಲ್ಲಿದನಾಗು । ಮಾಯಾವಿಖಳರ ದಮನನಾಗು । ರಾಯರ ಪಾಲಿಸು ರಕ್ಕಸರ ಸೋಲಿಸು। ವಾಯುಸುತಗೆ ನೀ ಒಡೆಯನಾಗೆನುತಲಿ ॥ ೧ ॥ ಧೀರನು ನೀನಾಗು ದಯಾಂಬುಧಿಯಾಗು । ಆ ರುಕ್ಮಿಣಿಗೆ ನೀನರಸನಾಗು । ಮಾರನಪಿತನಾಗು ಮಧುಸೂದನನಾಗು । ದ್ವಾರವತಿಗೆ ನೀ ದೊರೆಯಾಗೆನುತಲಿ ॥ ೨ ॥ ಆನಂದ ನೀನಾಗು ಅಚ್ಯುತ ನೀನಾಗು । ದಾನವಾಂತಕನಾಗು ದಯವಾಗು । ಶ್ರೀನಿವಾಸನನಾಗು ಶ್ರೀನಿಧಿ ನೀನಾಗು। ಜ್ಞಾನಿ ಪುರಂದರ ವಿಠಲನಾಗೆನುತಲಿ ॥ ೩ ॥

೨. ಜಯ ಜಯ ರಘುರಾಮಗೆ ವಿಜಯವಿರಲಿ ಪ್ರೇಮಗೆ ॥ ಪ ॥ ಭಜಕಜನ-ಧಾಮಗೆ ಅಜಮಿಳೋದ್ಧಾರಗೆ ರಾಜಾಧಿರಾಜಗೆ ॥ ಅ.ಪ.॥ ವಸುದೇವ ದೇವಕಿ ಜಾತಗೆ ದಶರಥಾದಿ ಪ್ರೀತಗೆ । ಅಸುರರ ವಿಘಾತಗೆ ಕುಸುಮಸಂಜಾತಗೆ ॥ ೧ ॥ ತರಳನನ್ನು ಪೊರೆದವ್ಗೆ ಶ್ರೀಹರಿ ರಾಮಚಂದ್ರಗೆ । ಜಲಚರಾವತಾರಗೆ ಪರಮಾತ್ಮ ಮೂರ್ತಿಗೆ ॥ ೨॥ ಪಾಂಡವರನ್ನ ಪೊರೆದವ್ಗೆ ಶ್ರೀ ಪುಂಡರೀಕವರದಗೆ । ಭಂಡನಕರಳು ಹಿಂಡಿದ ಮುಂಡರಗಿ ನರಸಿಂಹಗೆ ॥೩॥

## ಆಶೀರ್ವಾದದ ಹಾಡು

ರಾಗ- ಕಾಂಭೋದಿ ತಾಳ - ಝಂಪೆ

೩) ಚಿರಕಾಲ ಬದುಕೆಲೋ ಚಿನ್ನ ನೀನು । ಗುರುರಾಯರನುಗ್ರಹದಿ ಪೇಳಿದೆನೊ ನಾನೂ ॥ ಪ.॥ ಅನ್ನ ಆರೋಗ್ಯ ಆಯುಸ್ಸು ಸಂತಾನವು । ಮುನ್ನ ಸೌಭಾಗ್ಯ ಜ್ಞಾನಾದಿ ಭಕುತೀ ॥ ಮುನ್ನ ವೈರಾಗ್ಯ ಸಜ್ಜನರ ಕೂಡ್ಯಾಡಿ । ಘನ್ನ ಗುರುರಾಘವೇಂದ್ರ ಭಜಕನೆಂದೆನಿಸೀ ॥ ೧॥ ಹರಿಯು ಸರ್ವೋತ್ತಮನು ಶಿರಿಯು ಆತನ ರಾಣಿ । ಪರಮೇಷ್ಠಿಮರುತರು ಸಮರು ಎಂದೂ ॥ ಗರುಡಶೇಷಾರುದ್ರ ಸಮರಿಂದ್ರಕಾಮರೆಂ। ದರಿವ ಈ ವರತಾರತಮ್ಯಜ್ಞಾನದಿಂದ ॥ ೨॥ ಈಶಗೀ ಜಗವೆಲ್ಲ ವಾಸಯೋಗ್ಯವೆಂದಿದರ । ಲಾಸೆ ಮಾಡದೆ ನಿರುತ ಆತನಿಂದಾ ॥ ಲೇಶವಾಗೀ ದೊರೆತ ಕಂಬಳಿ ಕದನ್ನ ಸು - । ವಾಸ ಷಡ್ರಸಗಳೆಂದವನ ಭಜಿಸುತಲೀ ॥ ೩॥ ಬರಿಲಿಲ್ಲ ಬರಹವನು ಬರವಲ್ಲದೆನಗೆಂದು । ಮರುಗಿ ಚಿಂತಿಸಬ್ಯಾಡ ಮನದೊಳಗೆ ನೀ ॥ ಪರಮಕಾರುಣಿಕ ಶ್ರೀಗುರುರಾಯ ನಿನ್ನೊಳಗೆ । ಪರಮ ಚರಿಯವ ತೋರಿ ಪರಿಪಾಲಿಪನು ನಿನ್ನ॥ ೪॥ ಧಾತ ಬರೆದಿಹನು ಈ ರೀತಿ ನಿನ ಪಣೆಯಲ್ಲಿ । ಯಾತಕ್‌ದರಾಸೆ ಲೌಕಿಕವೆಂದು ॥ ವಾತಪಿತ ಗುರುಜಗನ್ನಾಥವಿಠಲ ಪಾದ । ಪ್ರೀತಿಯಿಂದಲಿ ಭಜಿಪ ದೂತನೆಂದೆನಿಸೀ ॥ ೫॥

## ಶ್ರೀಸತ್ಯನಾರಾಯಣ ಕಥಾ ಹಾಡು

**( ಪ್ರತಿ ಹುಣ್ಣಿವೆ ಶ್ರೀಸತ್ಯನಾರಾಯಣ ಕಥಾ ಹಾಡು ಹೇಳಬೇಕು)**

ಶ್ರೀಗಣಪತಿಯ ಪದಾಂಬುಜಕೆರಗಿಯೆ, ಭೋಗಿಭೂಷಣನನ್ನು ಸಂಸ್ತುತಿಸಿ। ನಾಗಶಯನ ಸತ್ಯದೇವನ ಕಥೆಯನು ಈಗಲೆ ಪೇಳ್ವೆ ಸಂಕ್ಷೇಪದಲಿ ॥ ಪ॥ ಮಂಗಳಂ ಜಯ ಮಂಗಳಂ ॥ ಅ.ಪ.॥ ಮಂಗಲಂ ಸತ್ಯನಾರಾಯಣ ದೇವಗೆ ಮಂಗಲಂ ನಿತ್ಯನಿರಂಜನಗೆ । ಮಂಗಲಂ ಪ್ರತ್ಯಕ್ಷ ಪರಮ ಪಾವನನಿಗೆ ಮಂಗಲಂ ಭೃತ್ಯುಭಾರ್ಗೋದರಗೆ ॥ ಮಂಗಳಂ ॥ ೧॥ ಲೋಕುಪಕಾರದಿ ನಾರದನೀ ವ್ರತ ವೈಕುಂಠಪತಿಯೊಳು ಕೇಳುತಲಿ । ತಾ ಕರುಣದಿ ಸೂತಗರುಹಲು ಈ ಕಥೆ ಪೇಳುವೆ ನಿಮಿಷದಲಿ ॥ ಮಂಗಳಂ ॥ ೨॥ ಕಾಶಿದೇಶದಿ ಸತ್ಯಸಂಧ ಬ್ರಾಹ್ಮಣನೊಬ್ಬ ದೋಷ ದರಿದ್ರದಿ ತಿರುಗುತಿರೆ । ಕೇಶವ ವೃದ್ಧ ಬ್ರಾಹ್ಮಣನಾಗಿ ಬಂದು ಉಪದೇಶಿಸಿದನು ಸತ್ಯವ್ರತಗಳನು ॥ ಮಂಗಳಂ ॥ ೩॥ ಎಂದು ನುಡಿಯೆ ಸತ್ಯವೆಂದು ಬ್ರಾಹ್ಮಣನಾಗ ಮಿಂದು ಮಡಿಯನುಟ್ಟು ನಿಶಿಯೊಳಗೆ । ಅಂದು ಕೂಡಿಸಿ ವಿಪ್ರ ಬಂಧು ವರ್ಗವನೆಲ್ಲ ತಂದನು ಪೂಜಾ ದ್ರವ್ಯಗಳ ॥೪॥ ಗೋದುಮ ಪೀಠವು ಘೃತವು ಸಕ್ಕರೆ ಮೊದಲಾದ ಕದಳೀ ಗೋವು ಕ್ಷೀರಗಳು । ಸಾಧಿಸಿ ಚೂರ್ಣವ ಗೈದು ಮಾಧವಗೆ ಸಪಾದ ಭಕ್ಷಣವ ನೈವೇದ್ದಿಸಿದ ॥ ಮಂಗಳಂ ॥ ೫॥ ಆಜ್ಯದಿ ತೋಯಿಸಿ ನಾಲ್ಕು ವೃತ್ತಿಗಳಲಿ ನೀಲಾಂಜನವನ್ನು ಬೆಳಗುತಲೆ । ಪೂಜೆ ಸಮರ್ಪಣೆ ಮಾಡಿ ಪ್ರಸಾದವ ಭೋಜನ ಗೈದಾರು ಭಕ್ತಿಯಲಿ ॥ ಮಂಗಳಂ॥ ೬॥ ಕಷ್ಟ ದರಿದ್ರವ ಛೇದಿಸಿ ದಿನದಿನ ಇಷ್ಟ ಸಂಪದವನ್ನು ಪಡೆಯುತಿರೆ । ಸೃಷ್ಟಿಗೀಶ ಸತ್ಯದೇವನ ಕಥೆಯನು ತನ್ನಿಷ್ಟೆಯಿಂ ಗೈದನು ಪ್ರತಿಮಾಸದಿ ॥ ಮಂಗಳಂ ॥ ೭॥ ಕಾಷ್ಠವಿಕ್ರಯ ಗೈದು ಜೀವಿಪನೊಬ್ಬನು ಕಷ್ಟಕೆ ತನ್ನ ಹೊರೆ ಇಳಹುತಲೆ । ಹೊಟ್ಟೆ ಒಣಗಿ ತೃಷೆ ಕುಡಿವೆನೆಂದೆನುತಲೆ ಶ್ರೇಷ್ಠ ವಿಪ್ರನ ಮನೆಗೈದಿದನು ॥ ಮಂಗಳಂ ॥ ೮॥ ಅಲ್ಲಿ ವಿಪ್ರರು ಕೂಡಿ ಪೂರ್ವೋಕ್ತದಿಂದಲೆ ಫುಲ್ಲನಾಭನ ವ್ರತ ನಡಿಸುತಲೆ । ಮೆಲ್ಲನೆ ಬದಿಯೊಳು ಕುಳಿತು ತಾನೆಲ್ಲವ ಉಲ್ಲಾಸದಿಂದಲೆ ಕೇಳಿದನು ॥ ಮಂಗಳಂ ॥ ೯॥ ಹರಿಯ ಪ್ರಸಾದವ ತಿಂದು ನೀರ್ಕುಡಿಯುತ ಕರವನ್ನು ಮುಗಿಯುತ ಭಕ್ತಿಯಲಿ। ಭರದಿಂದಲೀ ವ್ರತ ನಡಿಸುವೆ ತಾನೆಂದು ಹೊರೆಯ ಹೊತ್ತಾಗ ನಡೆತಂದನು ॥ ಮಂಗಳಂ ॥೧೦॥ ನಿತ್ಯದಂದದಿ ಕಾಷ್ಠಕ್ರೇತನು ಕ್ರಯಗೆಯೆ, ಅತ್ಯಂತ ದ್ರವ್ಯವು ದೊರಕಿದುದು । ಸತ್ಯನಾರಾಯಣನ ಮಹಿಮೆ ಇದೆನುತಲೆ ಉತ್ತಮ ವ್ರತವ ತಾ ಮಾಡಿದನು ॥ ಮಂಗಳಂ ॥೧೧॥ ವ್ರತವ ಮಾಡಿ ಕಾಷ್ಠಕ್ರೇತನು ತಾನಾಗ ಅತಿಶಯ ಸಂಪದ ಪಡೆಯುತಲೆ । ಮತಿಯು ತಾನೆನಸಿ ಅನಂತ ಕಾಲದೊಳು ಸದ್ಗತಿಗೆ ಸಾಗಿದನವನು ಹರುಷದಲಿ ॥ ಮಂಗಳಂ ॥ ೧೨॥ ಕನ್ಯಮಣಿ ಸತಿ ಸಹಿತ ವಲ್ಕಾಮುಖ ಪುಣ್ಯ ಭದ್ರಾಶೀಲ ನದಿ ತಟದಿ । ಎಣ್ಣೆದಿಷ್ಟಾರ್ಥವ ಕೊಡುತಿಹನಾ ವಿಷ್ಣು ವ್ರತವ ತಾನಂದು ಮಾಡುತಿರೆ ॥ ಮಂಗಳಂ ॥ ೧೩॥ ಆ ಸಮಯದಿ ಸಾಧು ವೈಶ್ಯನೆಂಬುವನೊಬ್ಬ ಭಾಸುರಂಬರ ರತ್ನ ಸರಗಳನು । ತೋಷದಿ ನಾವೆಯ ತುಂಬಿಯೆ ಬಂದಲ್ಲೆ ವಾಸುದೇವನ ವ್ರತ ನೋಡಿದನು ॥ ಮಂಗಳಂ ॥ ೧೪॥ ಭೂಪತಿಯೊಳು ವ್ರತಮಹಿಮೆಯ ಕೇಳಲು ಶ್ರೀಪತಿ ಎಲ್ಲವನರುಹಿದನು । ಶ್ರೀಪತಿ ವ್ರತವನು ಮಾಡಿದ ಜನರು ತಾನಿ । ಪ್ಪಾಪದಿಂದೀಪ್ಸಿತ ಪಡೆವರೆಂದು ॥ ಮಂಗಳಂ ॥ ೧೫॥ ತನಯರಾದರೆ ತನಗೆ

ಈ ವ್ರತ ಮಾಡಿಸುವೆ ಜನಪ ನೀನಾಗೆಂದು ಮನದೊಳಗೆ । ಎನುತಲಪ್ಪಣೆಕೊಂಡು ಬಂದಾಗ ತನ್ನಯ ವನಿತೆ ಲೀಲಾವತಿಗರುಹಿದನು ॥ ಮಂಗಳಂ॥೧೭॥ ಮಿತ್ರೆ ಲೀಲಾವತಿ ಕೇಳುತ ಮನದೊಳಗೆ ಅತ್ಯಂತ ಹರುಷವ ತಾಳಿದಳು । ಪುತ್ರರಾದರೆ ಕಲ್ಪೋತ್ತುಮ ಈ ದಿನದಿ ಸತ್ಯವ್ರತವ ತಾ ಮಾಡಿಸುವೆ ॥ ಮಂಗಳಂ ॥ ೧೭॥ ಏಂದು ಸಂಕಲ್ಪಿಸೆ ಗರ್ಭಿಣಿಯಾದಳು ಸುಂದರಿ ಪುತ್ರಿಯ ಜನಿಸಿದಳು । ಚಂದದಿ ನಾಮಕರಣಂಗಳ ಮಾಡಿಯೆ ಅಂದು ಕಲಾವತಿ ಎಂದೆನುತ ॥ ಮಂಗಳಂ ॥೧೮॥ ಮೊದಲು ಸಂಕಲ್ಪವ ಮಾಡಿದ ಪರಿಯೊಳು ಪದುಮನಾಭನ ವ್ರತ ನಡಿಸೆನುತ । ಸುದತಿ ಲೀಲಾವತಿ ಪೇಳಲು ವೈಶ್ಯನು ಮದುವೆ ಲಗ್ನದಿ ವ್ರತ ಮಾಡಿಸುವೆ ॥ ಮಂಗಳಂ ॥ ೧೯॥ ಎನುತ ಸಾಧು ತನ್ನ ವಾಣಿಜ್ಯ ವೃತ್ತಿಯ ದಿನ ದಿನ ನಡಿಸುತ ಇರುತಿರಲು । ತನುಜೆಗೆ ವಿವಾಹದ ಪ್ರಾಯ ಬಂದುದರಿಂದ ವಿನಯದಿ ದೂತರ ಕರೆದೆಂದನು ॥ ಮಂಗಳಂ ॥೨೦॥ ಮಗಳಿಗೆ ಯೋಗ್ಯನಾಗಿರುತಿಹ ವರನನ್ನು ಜಗದೊಳಗಾರಿಸಿಯೆ ತಾ ಯೆನುತ । ಸೊಗಸಿನಿಂ ದೇಶವ ತಿರುಗಿಯೆ ಕಾಂಚನ ನಗರದೊಳಂತಿರ್ದ ವಾಣಿಜನ ॥ ಮಂಗಳಂ ॥ ೨೧॥ ಸುಂದರ ವರನನ್ನು ಕರತಂದು ವೈಶ್ಯನ ಮುಂದೆ ತೋರಲು ನೋಡಿ ಸಂತೋಷದಿ ॥ ಬಂಧು ಬಾಂಧವರನ್ನು ಕೂಡಿಯೆ ವಿಧಿಯುಕ್ತದಿಂದ ಕಲ್ಯಾಣವ ಮಾಡಿದನು ॥ ೨೨॥ ಮದುವೆ ವೈಭವದಲ್ಲಿ ಮರೆತನು ವ್ರತವನು ಒದಗಿ ನಾವೆಯ ತುಂಬ ವಸ್ತುಗಳ । ಚದುರ ಜಾಮಾತ್ರ ಸಹಿತ ಸಿಂಧುವಿನಲ್ಲಿ ಬದಲು ದೇಶಕೆ ತಾ ನಡೆದನಾಗ ॥ ಮಂಗಳಂ ॥೨೩॥ ಪೊತ್ತುವಿಳಿದು ರತ್ನಸಾರಪುರದಿ ದ್ವಿಜ ಜಾಮಾತ್ರ ಸಹಿತಲ್ಲಿಗೆ ನಡೆತರಲು। ಧಾತ್ರಿಪನಾ ಚಂದ್ರಕೇತನ ನಗರದೊಳ್ ರಾತ್ರಿಯೊಳ್ ಸಿಬಿರದೊಳಿರುತಿರಲು ॥ ಮಂಗಳಂ ॥ ೨೪॥ ದುಷ್ಟ ವೈಶ್ಯನು ವ್ರತ ಮಾಡಲೊಲ್ಲೆನುತಲೆ ಭ್ರಷ್ಟ ಪ್ರತಿಜ್ಞೆಯ ಮಾಡಿದನು । ಕಷ್ಟ ಬಂಧನ ದುಃಖ ಒದಗಲೆಂದೆನುತಲೆ ಸಿಟ್ಟಿನಿಂ ದೇವರು ಶಪಿಸಿದರು ॥ ಮಂಗಳಂ ॥ ೨೫॥ ಚೋರರಾ ದಿವಸದಿ ರಾಜ ಭಂಡಾರವ ಸೂರೆಯ ಮಾಡಿಯೆ ಬರುತಿರಲು । ಚಾರರು ಬೆನ್ನಟ್ಟಿ ಬರಲು ವಾಣಿಕರ ಬಿಡಾರದೊಳಿರಿಸಿ ತಾವಡಗಿದರು ॥ ಮಂಗಳಂ॥ ೨೬॥ ಬಂದ ದೂತರು ಕಂಡು ವಾಣಿಜರನ್ನು ಬಂಧನ ಗೈಯುತ ದೊರೆಯೆಡೆಗೆ । ತಂದೆವು ಚೋರರವೆನುತ ಗ್ರಹಾಕಾರ ಬಂದು ತಾನವರನ್ನು ನೂಕಿಸಿದಾ ॥ ಮಂಗಳಂ ॥ ೨೭॥ ಇತ್ತ ತಸ್ಕರರಾಗ ಸಾಧು ಮಂದಿರ ಪೊಕ್ಕು ಮುತ್ತು ರತ್ನವನೆಲ್ಲ ಕದ್ದೊಯ್ದರು । ಮಿತ್ರೆ ಲೀಲಾವತಿ ಕನ್ನೆ ಕಲಾವತಿ ಸುತ್ತಣ ಮನೆಮನೆ ತಿರದುಂಡರು ॥ ಮಂಗಳಂ ॥೨೮॥ ವಿಪ್ರ ಕೇರಿಯೋಳ್ ಭಿಕ್ಷೆ ಬೇಡಲೆಂದೆನುತಲೆ ಕ್ಷಿಪ್ರದಿಂದೈದೆ ಕಲಾವತಿಯು । ಸುಪ್ರಸಂಧಾನ ವ್ರತ ಮಾಡುತಿರಲಲ್ಲೆ ಪ್ರೀತಿಯಿಂದೆಲ್ಲವ ನೋಡಿದಳು ॥ ಮಂಗಳಂ ॥ ೨೯॥ ಸತ್ಯ ಪ್ರಸಾದವ ಭಕ್ಷಿಸಿ ತಾಯೆಡೆ ಅತ್ಯಂತ ಹರುಷದಿ ನಡೆತರಲು । ರಾತ್ರಿಯೊಳೆಲ್ಲಿ ತಡೆದೆ ಎಂದು ಗರ್ಜಿಸಿ ಪುತ್ರಿಯ ಕೇಳೆ ಲೀಲಾವತಿಯು ॥ ಮಂಗಳಂ ॥ ೩೦॥ ತಾಯಿಯೆ ಕೇಳ್ ದ್ವಿಜರ ಮಂದಿರದೊಳು ಸತ್ಯನಾರಾಯಣ ವ್ರತವನು ಮಾಡಿದರು । ಆಯಾಸ ದರಿದ್ರ ದುಃಖ ಪರಿಹಾರ ಅಕ್ಕು ಸಿರಿಯರಸನ ಕಥೆ ಕೇಳಿದೆನು ॥ ಮಂಗಳಂ ॥ ೩೧॥ ಸುತೆಯ ಮಾತನು ಕೇಳುತಾಗ ಲೀಲಾವತಿ ವ್ರತವ ಮಾಡಿದಳತಿ ಭಕ್ತಿಯಲಿ । ಪತಿ ಜಾಮಾತ್ರ ವರದಾ ಕ್ಷಮಿಸಿಲ್ಲಿ ಅತಿ ಬೇಗ ತರಿಸಿಯೆ ಕೊಡಿರೆಂದಳು ॥ ಮಂಗಳಂ ॥ ೩೨॥ ಸತ್ಯನಾರಾಯಣ ಸಂತುಷ್ಟನಾಗುತ ಇತ್ತ ವೈಶ್ಯನ ಸೆರೆ

ಬಿಡಿಸಲಿಕ್ಕೆ । ರತ್ನಸಾರಪುರದರಸಗೆ ನಿಶೆಯೊಳು ಮತ್ತೆ ದೃಷ್ಟಾಂತವನರುಹಿದನು ॥ ಮಂಗಳಂ ॥ ೩೩॥ ಕನಸು ಕಂಡನು ಚಂದ್ರಕೇತನು ದಿವಸದಿ, ವಣಿಕರ ಸೆರೆಯಿಂದ ಬಿಡದಿರಲು । ಧನಧಾನ್ಯ ಸತಿಸುತ ಸಕಲ ವೈಭವವೆಲ್ಲ ಕ್ಷಣದೊಳು ನಾಶಾಗಬಹುದೆನುತ ॥ ಮಂಗಳಂ ॥ ೩೪॥ ದಿನಪನುದಿಸೆ ಚಂದ್ರಕೇತನು ದಿವಸದಿ ವಣಿಕರ ಸೆರೆಯಿಂದ ತರಿಸಿದನು । ಮನದೊಳು ಬೆದರಿ ಕೈಮುಗಿದು ನಿಂದಿರಲಾಗ ಜನಪನಭಯವಿತ್ತು ಮನ್ನಿಸಿದಾ ॥ ಮಂಗಳಂ ॥ ೩೫॥ ನಿಗಳ ಬಂಧನ ಪ್ರಾಯಶ್ಚಿತ್ತಾಂಗವಪನವ ಸೊಗಸಿನಿಂದ ಮಾಡಿಸಿ ವಣಿಕರಿಗೆ । ದ್ವಿಗುಣದಾನವು ರತ್ನ ಭೂಷಣಂಗಳ ಕೊಟ್ಟು ನಗರಿಗೈದಿಹುದೆಂದು ಕಳುಹಿದನು ॥ ಮಂಗಳಂ॥೩೬॥ ತೀರ್ಥಯಾತ್ರೆಯ ಮಾಡಿ ಮಂಗಯನಾಸೋಮ ಮೂರ್ತವನೆ ಸಲುಹಿದ ದ್ವಿಜಜನಕೆ । ಸ್ವಾರ್ಥದಿಂದೈ ದಾನ ಧರ್ಮಂಗಳ ಮಾಡಿಯೆ ಪ್ರಾರ್ಥನೆ ಗೈದಾರು ವಣಿಕರಂದು ॥ ಮಂಗಳಂ ॥ ೩೭॥ ಮೊದಲಿನಂದದಿ ತಮ್ಮ ನಾವೆಯ ತುಂಬಿಯೆ ಮುದದಿಯೆ ಪಾತ್ರದೊಳ್ ಬರುತಿರಲು। ಪದುಮನಾಭನು ದಂಡಿ ವೇಷದಿಂದಲೆ ಬಂದು ಇದರೊಳು ತುಂಬಿಹುದೇನೆಂದನು ॥ ಮಂಗಳಂ ॥ ೩೮॥ ಒಣಗಿದ್ದ ತೃಣಲತೆ ಪತ್ರಗಳಿಹುದೆಂದು ವಣಿಕರು ಹುಸಿಮಾತನಾಡಿದರು । ಕುನಿಸಿಲಿ ದಂಡಿ ತಾ ಹಾಗಾಗಲೆಂದೆನುತಲೆ ಮುನಿದು ಶಾಪಿಸಿ ತಾ ನಡೆದನಾಗ ॥ ಮಂಗಳಂ ॥ ೩೯॥ ನಿತ್ಯ ಕರ್ಮವ ಮಾಡಿ ಇಳಿದು ನಾವೆಯ ಮತ್ತೆ ಹತ್ತಬೇಕೆನುತಲೆ ನೋಡಿದನು। ವಸ್ತುಗಳೆಲ್ಲವು ಪತ್ರ ಲತೆಗಳಾಗಿ ಕೃತ್ಯವ ಕಾಣುತ ಮೂರ್ಛಿಸಿದಾ ॥ ಮಂಗಳಂ ॥ ೪೦॥ ಬಹಳ ವಿಸ್ಮಯದಿಂದ ಸಾಧು ದುಃಖಿಸುತಿರೆ ದುಹಿತಕಾಂತನು ತಾ ತಿಳಿದೆಂದನು । ಮಹಿಮನಾಗಿಹ ದಂಡಿ ಶಾಪವೆಂದೆನೆ ಕೇಳಿ ಗ್ರಹಿಸಿ ದಂಡಿಯ ಕಾಣ ತೆರಳಿದರು ॥ ಮಂಗಳಂ ॥೪೧॥ ಕ್ಷಮಿಸಬೇಕಪರಾಧ ಎನುತಡಿಗಡಿಗೆ ತಾ ನಮಿಸಿದ ವೈಶ್ಯನಿಗರುಹಿದನು । ವಿಮುಖನಾಗುತ ಎನ್ನ ಪೂಜೆ ಮರೆತುದದಿಂದ ಅಮಿತ ದುಃಖವು ಬಂದುದನೆ ಕೇಳಿ ॥ ಮಂಗಳಂ ॥ ೪೨॥ ಕಮಲನಾಭನೆ ನಿನ್ನಾಪಾರ ಮಹಿಮೆಯನ್ನು ಕಮಲಜ ಮುಖಿಯರು ತಿಳಿಯಲೈಸೆ । ಅಮಿತ ಮೂಢನಿಗಿಂತು ತಿಳಿಯದೀ ಮಾಯವು ರಮೆಯರಸನೆ ನಿನ್ನ ವ್ರತಗಳನು ॥ ಮಂಗಳಂ ॥ ೪೩॥ ಸತ್ಯನುಸ್ವಾರ ವಿಸ್ತರದಿ ಮಾಡುವೆನೆಂದು ಭಕ್ತಿಯಿಂದೆರಗಲು ಪರಿತೋಷದಿ । ಯುಕ್ತವಾಗಿ ದ್ರವ್ಯ ಮೊದಲಿನಂದಾಗಲೆಂದು ಭಕ್ತವತ್ಸಲ ತಾನಡಗಿದನು ॥ ಮಂಗಳಂ ॥ ೪೪॥ ಭರಿತ ನಾವೆಯ ಕಾಣುತೇರಿ ವ್ರತವನು ಚರಿಸಿ ನಾವೆಯ ಮುದು ಮಡಿಸುತ್ತ । ಹರುಷದಿಂದೈ ಬಂದು ರತ್ನಪುರಿಯ ಕಂಡು ಚರನಿಗೊರೆದ ಸತಿಗರುಹೆನುತ ॥ ಮಂಗಳಂ ॥ ಬಂಧುವರ್ಗವ ಕೂಡಿ ಬಂದ ವಾರ್ತೆಯ ದೂತ ಅಂದು ಲೀಲಾವತಿಗರುಹೆನುತ। ಇಂದಿರೇಶನ ಪೂಜೆ ಮಾಡೆಂದು ಮಗಳಿಗೆ ಬಂದಳು ತಾ ಪತಿದರುಶನಕೆ ॥ ಮಂಗಳಂ ॥ ೪೬॥ ಪೂಜೆ ಸಮರ್ಪಣೆ ಮಾಡಿ ಪ್ರಸಾದವ ಭ ೇಜಿಸದಂದು ಕಲಾವತಿಯು । ರಾಜಿಸುತೈತರೆ ಪತಿದೋಣಿ ಮುಣುಗಿತು ಸೋಜಿಗವಾದುದಿನ್ನೇನೆಂಬೆನು ॥ ಮಂಗಳಂ ॥ ೪೭॥ ಏನಿದದ್ಭುತವೆಂದು ಸರ್ವರು ದುಃಖಿಸೆ ಕಾಣದೆ ಪತಿಯನು ಹಾಯೆನುತ । ಮಾನುನಿ ಪಾದುಕೆಯನು ಕೊಂಡು ಜಲಧಿಯೊಳ್ ತಾನು ಬೀಳುವೆನೆಂದು ಅನುವಾದಳು ॥ ಮಂಗಳಂ ॥ ೪೮॥ ಸುತೆಯ ಚರಿತ್ರವ ಮಾತಾಪಿತರು ಕಂಡು ಮನದೊಳು ಶ್ರೀಪತಿಗೆರಗುತಿರೆ । ವ್ರತವ ಸಂಕಲ್ಪಿಸಿ ಪರಿತುಷ್ಟನಾಗುತ ಪತಿತಪಾವನನಂದ ನಂಬರದಿ ॥ ಮಂಗಳಂ ॥ ೪೯॥ ನಿನ್ನ ಮಗಳು

ಪ್ರಸಾದ ಬಿಟ್ಟುದರಿಂದ ಉನ್ನತ ದುಃಖವು ಬಂದುದೀಗ । ಇನ್ನಾದರ್‍ಯೆದಿಯೆ ಭುಂಜಿಸಿ ಬಂದರೆ ಕನ್ಯಮಣಿಗೆ ವರ ದೊರಕುವನು ।। ಮಂಗಳಂ ।। ೫೦।। ಎನುತ ಅಂಬರವಾಣಿ ನುಡಿಯೆ ಕಲಾವತಿ ವಿನಯದಿ ಭಕ್ಷಣ ಮಾಡುತಲೆ । ಘನಬೇಗ ನಡೆತಂದು ಪತಿಯ ನಿರೀಕ್ಷಿಸಿ ಜನಕಗೆಂದಳು ಗೃಹಕ್ಕೈದೆನುತ ।। ಮಂಗಳಂ ।। ೫೧।। ತಡಮಾಡದೆಲ್ಲ ಸಹಿತ ಮನೆಗೆ ಬಂದು ಒಡೆಯ ಲಕ್ಷ್ಮೀಶನ ವ್ರತಗಳನು । ನಡಿಸುತಲಿಹಪರ ಸುಖವನು ಪಡೆದವ ನಡೆದನಂತ್ಯದಿ ಸತ್ಯಪುರಕವನು ।। ಮಂಗಳಂ ।। ೫೨।। ಗೋಪಗಾಣರು ವಟ ಮಾಲದಳೊಂದಿನ ಶ್ರೀಪುರುಷನ ವ್ರತವ ಮಾಡುತಿರೆ । ಭೂಪ ತುಂಗಧ್ವಿಜ ದರ್ಪದಿಂದಲೆ ನಾನಾರೂಪಿನ ಮೃಗಗಳ ಕೊಲ್ಲುತಲೆ ।। ಮಂಗಳಂ ।। ೫೩।। ಬಂದು ಕುಳಿತ ಭೂಪನಿದಿರು ಪ್ರಸಾದವ ತಂದಿಟ್ಟು ಗೋಪರು ಕೈಮುಗಿಯೆ। ಅಂದು ಭಕ್ಷಿಸದಿರೆ ನೂರು ಸುತರು ದ್ರವ್ಯ ಒಂದರಕ್ಷಣದಿ ನಾಶವಾದರು ।। ಮಂಗಳಂ ।। ೫೪।। ಸತ್ಯದೇವನ ಮಹಿಮೆ ಎಂದು ಚಿತ್ತದಿ ತಿಳಿದು ಯುಕ್ತಗೋಪರು ಕೂಡಿ ಪೂಜಿಸಲು । ಇತ್ತ ಪುತ್ರ ಸಂಮಿತ ನಾಗಿ ಸಂಪದವಾಳಿ ಸತ್ಯಪುರಕೆ ಸೇರಿದನಂತ್ಯದಲಿ ।। ಮಂಗಳಂ ।। ೫೫।। ಧರಣಿಯೊಳೀವ್ರತ ನಡೆಸಿದ ಜನರಿಗೆ ಪರಮ ವಾಂಛಿತಗಳು ದೊರಕುವವು । ತರುಣಿಯರಿಗೆ ಸೌಭಾಗ್ಯ ಸಂಪದವಕ್ಕು ಪರಲೋಕ ಗತಿ ಹಿತ ತರಲಹುದು ।। ಮಂಗಳಂ ।। ೫೬।। ಕಂತುಪಿತನ ನೆನದೀ ಸತ್ಯ ಕಥೆಯನು ಸ್ವಂತ ಗೋಪಾಲಕೃಷ್ಣ ವಿರಚಿಸಿದಾ। ಚಿಂತಿತ ತತ್ವದದಾಯಕ ನಿದಿರದಿ ಸ್ವಂತ ತಾ ನೆನೆದವರ ಸಲಹುವನು ।। ಮಂಗಳಂ ।। ೫೭।। ಮಂಗಲಂ ಸತ್ಯನಾರಾಯಣದೇವಗೆ ಮಂಗಲಂ ನಿತ್ಯ ನಿರಂಜನಗೆ । ಮಂಗಲಂ ಪ್ರತ್ಯಕ್ಷ ಪರಮ ಪಾವನನಿಗೆ ಮಂಗಲಂ ಭೃತ್ಯು ಭಾರ್ಗೋದರನಿಗೆ ।। ಮಂಗಲಂ ಜಯ ಮಂಗಲಂ ।। ೫೮।।

ಪಾಲಿಸೋ ಶ್ರೀವರನೇ ಪ್ರಸಾದವ .... ಎಂಬ ಆರುತಿ ಹಾಡನ್ನು ಅನ್ನಬೇಕು

।। ಇಲ್ಲಿಗೆ ಮಂಗಳ ಪ್ರಕರಣವು ಸಮಾಪ್ತವಾಯಿತು ।।

।। ಶ್ರೀಕೃಷ್ಣಾರ್ಪಣಮಸ್ತು ।।



# ಪರಿಶಿಷ್ಟ - ೧*

## ಸ್ತ್ರೀಧರ್ಮಗಳು

**೧. ಅಥ ಸ್ತ್ರೀಧರ್ಮಾಃ**

ಕುರೂಪೋ ವಾ ಕುವೃತ್ತೋ ವಾ ದುಃಸ್ವಭಾವೋऽಥವಾ ಪತಿಃ ।
ರೋಗಾನ್ವಿತಃ ಪಿಶಾಚೋ ವಾ ಮದ್ಯಪಃ ಕ್ರೋಧನೋऽಥವಾ ॥
ವೃದ್ಧೋ ವಾಥ ವಿದಗ್ಧೋ ವಾ ಮೂಕೋऽಂಧೋ ಬಧಿರೋऽಪಿ ವಾ ।
ರೌದ್ರೋ ವಾಥ ದರಿದ್ರೋ ವಾ ಕದರ್ಯಃ ಕುತ್ಸಿತೋऽಥವಾ ॥
ಕಾತರಃ ಕಿತವೋ ವಾಪಿ ಲಲನಾಲಂಪಟೋऽಪಿ ವಾ ।
ಸತತಂ ದೇವವತ್ ಪೂಜ್ಯೋ ಮನೋವಾಕ್ಕಾಯಕರ್ಮಭಿಃ ॥
ಅಹಂಕಾರಂ ವಿಹಾಯಾಥ ಕಾಮಕ್ರೋಧೌ ಚ ಸರ್ವದಾ ।
ಮನಸೋರಂಜನಂ ಪತ್ಯುಃ ಕಾರ್ಯಮನ್ಯಸ್ಯ ವರ್ಜನಮ್ ॥

- ಇತಿ ವ್ಯಾಸಸ್ಮೃತಿಃ ॥

### ಸ್ತ್ರೀಧರ್ಮಗಳ ನಿರೂಪಣವು

**ತಾತ್ಪರ್ಯ** : ವ್ಯಾಸರು ಹೇಳುತ್ತಾರೆ. ಕುರೂಪಿಯಾದರೂ, ಕೆಟ್ಟ ನಡತೆಯವನಾದರೂ, ಕೆಟ್ಟ ಸ್ವಭಾವದವನಾದರೂ, ಪತಿಯು ಹೇಗಿದ್ದರೂ ಪತ್ನಿಯಾದವಳು ಅವನನ್ನು ದೇವರಂತೇ ಪೂಜಿಸಬೇಕು. ಪತಿಯು ಅಪರಿಹಾರ್ಯವಾದ ರೋಗ ಪೀಡಿತನಾಗಿದ್ದರೂ, ಸರ್ವದಾ ರೋಗಗ್ರಸ್ತನಾಗಿದ್ದರೂ ಕೈಹಿಡಿದ ಪತ್ನಿಯಾದವಳು ಅವನನ್ನು ದೇವರಂತೆ ಪೂಜಿಸಬೇಕು. ಪಿಶಾಚದಂತೆ ಕಾಡುವವನಾದರೂ ಅಂತಹ ಪತಿಯನ್ನು ದೇವರಂತೆ ಪೂಜಿಸಬೇಕು. ಯಾವಾಗಲೂ ಸಿಡಿಮಿಡಿಗೊಳ್ಳುವವನೇ ಆದರೂ, ತುಂಬಾ ಸಿಟ್ಟುಗಾರನೇ ಆದರೂ ಅಂತಹ ಗಂಡನನ್ನು ದೇವರಂತೆ ಉಪಚರಿಸಬೇಕು. ವೃದ್ಧನನ್ನೇ ಮದುವೆಯಾದರೂ ಮದುವೆಯಾದ ಮೇಲೆ ಅವನು ವೃದ್ಧನಂತೆ ಕಂಡರೂ, ಅವನಲ್ಲಿ ಬೇಗನೇ ಮುಪ್ಪಿನ ಲಕ್ಷಣಗಳು ಕಂಡುಬಂದು ಅವನು ವೃದ್ಧನಂತೆ ಕಂಡರೂ ಕೈಹಿಡಿದ ಸ್ತ್ರೀಯು ಅವನನ್ನು ತಿರಸ್ಕರಿಸಬಾರದು. ದೇವರಂತೆ ಉಪಚರಿಸಬೇಕು. ಪತಿಯು ಪಂಡಿತನೇ ಆಗಿರಲಿ ಮೂರ್ಖನೇ ಆಗಿರಲಿ ಪತಿಯನ್ನು ದೇವರಂತೆ ಗೌರವಿಸಬೇಕು. ಪತಿಯು ಮೂಕನೇ ಆಗಿರಲಿ, ವಾಚಾಳನೇ ಆಗಿರಲಿ ಅವನನ್ನು ಗೌರವಿಸಬೇಕು. ಕುರುಡನೇ ಆಗಿರಲಿ, ಕಿವುಡನೇ ಆಗಿರಲಿ ಪತಿಯನ್ನು ಗೌರವದಿಂದ ಕಾಣುವುದು ಪತ್ನಿಯ ಕರ್ತವ್ಯವು. ಪತಿಯು ಭಯಂಕರವಾದ ಆಕಾರವುಳ್ಳವನಾಗಿರಲಿ, ಸೌಮ್ಯಾಕೃತಿಯವನೇ ಆಗಿರಲಿ, ಅವನನ್ನು ತನ್ನ ಪಾಲಿನ ಮನ್ಮಥನೆಂದೂ, ಸುಂದರ ಸೌಮ್ಯಾಕೃತಿಯವನೆಂದೂ ಭಾವಿಸಿ ಅವನನ್ನು ಸಂತೋಷದಿಂದ ಉಪಚರಿಸಬೇಕು. ಬಡವನೇ ಆಗಿರಲಿ, ಶ್ರೀಮಂತನೇ ಆಗಿರಲಿ ಪತಿಯು ಪತ್ನಿಯ ಪಾಲಿಗೆ ದೇವರೆಂದು ತಿಳಿಯಬೇಕು. ಶ್ರೀಮಂತನೆಂದು ಪತಿಯನ್ನು ಅಧಿಕವಾಗಿ ಓಲೈಸುವುದೂ, ಬಡವನೆಂದು ಹೀನೈಸುವುದೂ ಸಲ್ಲ. ಪತಿಯು ಪತ್ನಿಗೆ ಸ್ವತಃ ಒಂದು ಅಮಿತೈಶ್ವರ್ಯಸಮಾನನು. ಅವನ ಸಿರಿತನ ಬಡತನಗಳ

ಬಗ್ಗೆ ಕೈಹಿಡಿದ ಗೃಹಿಣಿಯು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಭಾಗ್ಯವು ಭಗವಂತನ ಅಧೀನ. ಅದನ್ನು ಬಯಸಿದರೆ ಬರುವುದಿಲ್ಲ. ಬಯಸದಿದ್ದರೂ ಬರುವುದು ಎಂದೂ ತಪ್ಪುವುದಿಲ್ಲ. ಪತಿಯು ಜಿಪುಣನಾಗಿರಲಿ, ಉದಾರಿಯಾಗಿರಲಿ, ಜುಗುಪ್ಸಾದಾಯಕವಾದ ಸ್ವಭಾವವುಳ್ಳವನೂ, ಹೊಲಸು ಮಾತಾಡುವವನೂ ಹೇಗಿದ್ದರೂ ಅವನನ್ನು ಪತ್ನಿಯಾದವಳು ನಿಂದಿಸಬಾರದು. ಪತಿಯು ಹೇಡಿಯಾಗಿರಲಿ, ಶೂರನಾಗಿರಲಿ, ಜೂಜುಕೋರನಾಗಿರಲಿ, ಪರನಾರಿಯಲ್ಲಿ ಆಸಕ್ತನಾಗಿರಲಿ, ಕೈಹಿಡಿದವಳಲ್ಲಿ ಮಾತ್ರ ಆಸಕ್ತನಾಗಿರಲಿ, ಸ್ತ್ರೀಯು ತನ್ನ ಗಂಡನನ್ನು ಮನಸ್ಸು ಮಾತು ಕೃತಿಗಳಿಂದ ಏಕರೀತಿಯಿಂದ ಪೂಜಿಸಬೇಕು. ಗೌರವಿಸಬೇಕು. ಅವಳು ಅಹಂಕಾರವನ್ನು ಬಿಟ್ಟು, ಕಾಮಕ್ರೋಧಗಳನ್ನು ಬಿಟ್ಟು ಯಾವಾಗಲೂ ಗಂಡನ ಮನಸ್ಸನ್ನು ಸಂತೋಷಪಡಿಸಬೇಕು. ಪತಿಗೆ ಅಸಂತೋಷಕರವಾದ ಬೇರೆ ಯಾವ ಕಾರ್ಯವನ್ನೂ ಮಾಡಬಾರದು. ಗಂಡನ ಮನಸ್ಸಿಗೆ ಒಲ್ಲದ ಯಾವ ಕಾರ್ಯವನ್ನು ಮಾಡಬಾರದು. ಎಂದು ವ್ಯಾಸರು ವಿಸ್ತಾರವಾಗಿ ಸ್ತ್ರೀಧರ್ಮಗಳನ್ನು ಹೇಳಿದ್ದಾರೆ.

(ಇಲ್ಲಿ ಹೇಳಿರುವ ಸ್ತ್ರೀಧರ್ಮಗಳ ಬಗ್ಗೆ ಒಂದು ವಿಷಯವನ್ನು ವಿವೇಚಿಸಬೇಕಾಗಿದೆ. ಸ್ತ್ರೀಪುರುಷರು ಸೇರಿ ಬಾಳುವ ಕುಟುಂಬಗಳೇ ಸಮಾಜದ ಇಡೀ ರಾಷ್ಟ್ರದ ಅಡಿಗಲ್ಲು. ಆ ಕುಟುಂಬ ಸಂಸ್ಥೆಯು ಭದ್ರವಾಗಿರಬೇಕೆಂಬ ದೃಷ್ಟಿಯಿಂದ ಪ್ರಾಚೀನರು ಮನೆಯ ಪೂರ್ತಿ ಹೊಣೆಗಾರಿಕೆಯನ್ನು ಹೆಣ್ಣಿಗೆ ಒಪ್ಪಿಸಿ, **ಗೃಹಿಣೀ ಗೃಹಮುಚ್ಯತೇ** ಎಂದರು. ಹೆಣ್ಣೇ ಮನೆಯ ಸರ್ವಸ್ವವೆಂದೂ, ಅವಳಿಂದಲೇ ಸಮಾಜವ್ಯವಸ್ಥೆಯು ಭದ್ರವಾಗಿರುತ್ತದೆಯೆಂದೂ ತಿಳಿದು ಸ್ತ್ರೀಯು ತನ್ನ ಸ್ವಾರ್ಥವನ್ನು ಸಂಪೂರ್ಣವಾಗಿ ಬದಿಗೊತ್ತಿ ಗಂಡನನ್ನು ಗೌರವಿಸಿ ಸಂಸಾರವನ್ನು ಸಾರಯುಕ್ತವನ್ನಾಗಿ ಮಾಡಬೇಕೆಂದು ಹಿಂದಿನ ಋಷಿಗಳು, ಮುನಿಗಳು, ಸ್ಮೃತಿಕಾರರು, ಸಮಾಜಸುಧಾರಕರು ಚಿಂತಿಸಿದರು. ಇದರಿಂದ ಹೆಣ್ಣು ಮುದುಕನನ್ನು ಕುರೂಪಿಯನ್ನು ಹೆಂಡಕುಡುಕನನ್ನು ಮದುವೆಯಾಗಬೇಕೆಂದು ಅರ್ಥವಲ್ಲ, ಹಿರಿಯರ ಆಯ್ಕೆಯಿಂದಲೋ, ತನ್ನದೇ ಆಯ್ಕೆಯಿಂದಲೋ ಒಮ್ಮೆ ಮದುವೆಯಾದ ಗಂಡನನ್ನು ತಿರಸ್ಕರಿಸದೆ ಪಾಲಿಗೆ ಬಂದದ್ದು ಪಂಚಾಮೃತ ಎಂದು ಭಾವಿಸಬೇಕು. ಭಾಗ್ಯವನ್ನು ನಾವು ತೆಗೆದುಕೊಂಡು ಬಂದಿರುವುದಿಲ್ಲ. ಸಮಾಜದ, ಕುಟುಂಬದ, ದೇಶದ ಒಳಿತಿಗಾಗಿ ತನ್ನ ಸ್ವಾರ್ಥವನ್ನು ಅಲಕ್ಷಿಸಿ, ಪತಿಯ ಮತ್ತು ಸಮಗ್ರ ಕುಟುಂಬ ವ್ಯವಸ್ಥೆಯ ರಾಷ್ಟ್ರದ ಹಿತವನ್ನು ಲಕ್ಷಿಸಬೇಕು. ಪಾರಲೌಕಿಕವಾದ ಪ್ರಯೋಜನಗಳನ್ನು ಗಮನಿಸಬೇಕು. ವಿವಾಹಕ್ಕೆ ಇಹಲೋಕದ ಕಾಮಸುಖವನ್ನು ಯಥೇಚ್ಛವಾಗಿ ಅನುಭವಿಸುವುದು ಒಂದೇ ಮುಖ್ಯ ಗುರಿಯಲ್ಲ. ಪರಲೋಕಸಾಧನೆಯೂ ಹೆಣ್ಣಿಗೆ ವಿವಾಹದ ಒಂದು ಪರಮೋದ್ದೇಶ್ಯವಾಗಿದೆ. ಪತಿಯ ಅಂತರ್ಯಾಮಿಯಾದ ವಾಯುಶ್ರೀಹರಿಯನ್ನು ಪೂಜಿಸಿಯೇ ಹೆಣ್ಣು ಪರಮಪುರುಷಾರ್ಥವನ್ನು ಪಡೆಯಲು ಸಾಧ್ಯ. ಈ ರಹಸ್ಯಾರ್ಥವನ್ನರಿಯದೆ, ಹೆಣ್ಣನ್ನು ಹಿಂದಿನವರೂ ಶೋಷಿಸಿದರು, ಇಂದಿಗೂ ಪ್ರಾಚೀನಕಂದಾಚಾರದವರಿಂದ ಹೆಣ್ಣಿನ ಶೋಷಣೆ ಮುಂದುವರಿಯುತ್ತಿದೆ ಎಂದು ಹೇಳುವುದು ದುಡುಕಿನ ಮಾತು. ಇಲ್ಲಿ ಮತ್ತೂ ಒಂದು ಮುಖ್ಯವಾದ ಅಂಶವನ್ನು ಗಮನಿಸಬೇಕು. ಹೆಣ್ಣಿಗೆ ಹೀಗೆಲ್ಲಾ ಉಪದೇಶಿಸಿದ ಸ್ಮೃತಿಕಾರರು, ಗಂಡನ್ನೂ ಅಲಕ್ಷಿಸಿಲ್ಲ.

ಅವನು ಹೆಣ್ಣನ್ನು ಲಕ್ಷ್ಮಿಯ ಸನ್ನಿಧಾನಪಾತ್ರಳೆಂದು ತಿಳಿದು ಮರ್ಯಾದೆಯಿಂದ ನಡೆಸಿಕೊಳ್ಳಬೇಕೆಂದೂ, ಗಂಡನೂ ಏಕಪತ್ನೀವ್ರತಸ್ಥನಾಗಿರಬೇಕೆಂದೂ, ಪರನಾರೀ ಸೋದರನಾಗಿರಬೇಕೆಂದೂ, ಹೆಂಡತಿಯ ವಿಯೋಗವುಂಟಾದರೆ ಅತ್ಯಂತ ಗೌಣಪಕ್ಷವೆಂದೂ ಬಹಳವಾಗಿ ಎಚ್ಚರಿಸಿದ್ದಾರೆ. ಗಂಡಸರು ಎರಡನೇ ಮದುವೆಯಾಗುವುದು ಮುಖ್ಯವಾಗಿ, ದೇವತಾ ಅತಿಥಿ ಪೂಜೆ, ಅಗ್ನಿ ಪೂಜೆ ಇವುಗಳಿಗೆ ತೊಂದರೆಯಾಗದಿರಲೆಂದು. ಇವುಗಳ ಮೂಲಕವಲ್ಲದಿದ್ದರೂ ಜ್ಞಾನಮಾರ್ಗದಿಂದ ನಾನು ಹರಿಯನ್ನು ಒಲಿಸಿಕೊಳ್ಳುತ್ತೇನೆಂಬ ಧೈರ್ಯವನ್ನು ತಾಳಿ ಪುರುಷನು ಒಮ್ಮೆ ಕೈಹಿಡಿದ ಸತಿಯು ಅಗಲಿದರೆ, ಶ್ರೀರಾಮನಂತೆ ಏಕಪತ್ನೀವ್ರತಸ್ಥನಾಗಿ ಆಯುಶ್ಶೇಷವನ್ನು ಕಳೆಯಬೇಕು. ಎಂಬ ವಿಷಯದ ಕಡೆಗೆ ಸೂತ್ರಕಾರರು, ಸ್ಮೃತಿಕಾರರು, ಪ್ರಾಚೀನ ಸಮಾಜಸುಧಾರಕರು ಇವರ ಒಲವು ಇದೆಯೆಂದು ನಮಗೆ ಭಾಸವಾಗುತ್ತಿದೆ).

**'ನಾಸ್ತಿ ಸ್ತ್ರೀಣಾಂ ಪೃಥಗ್ ಯಜ್ಞೋ ನ ವ್ರತಂ ನಾಪ್ಯುಪೋಷಣಮ್ ।**
**ಪತಿಂ ಶುಶ್ರೂಷತೇ ಯತ್ತು ತೇನ ಸ್ವರ್ಗೇ ಮಹೀಯತೇ ॥ ' - ಇತಿ ಮನುಃ ॥**

**॥ ಇತಿ ಸ್ತ್ರೀಧರ್ಮನಿರೂಪಣಂ ॥**

**ತಾತ್ಪರ್ಯ** : ಸ್ತ್ರೀಯರಿಗೆ ಸಮಂತ್ರಕವಾದ ಸಂಸ್ಕಾಗಳು ಬೇಕಾಗಿಲ್ಲವೆಂದು ಹೇಳುವ ಸಂದರ್ಭದಲ್ಲಿ ಮನುವು ಈ ರೀತಿ ಹೇಳುತ್ತಾರೆ.

"ಈ ಸ್ತ್ರೀಯರಿಗೆ ಜಾತಕರ್ಮಾದಿ ಸಂಸ್ಕಾರಗಳು ವೇದೋಕ್ತಮಂತ್ರಗಳಿಂದ ಆಗಬೇಕಾಗಿಲ್ಲ. ಇದು ಧರ್ಮಶಾಸ್ತ್ರದ ಮರ್ಯಾದೆಯು. ಶ್ರುತಿಸ್ಮೃತಿಗಳೆಂಬ ಧರ್ಮಪ್ರಮಾಣಗಳನ್ನು ಸ್ತ್ರೀಯರು ಅಧ್ಯಯನ ಮಾಡಬೇಕಾಗಿಲ್ಲ. ಅವರಿಗೆ ಪಾಪನಾಶಕವಾದ ವೇದೋಕ್ತವಾದ ಮಂತ್ರಗಳ ಮತ್ತು ಸೂಕ್ತಗಳ ಜಪವಿಲ್ಲ. ಪುರುಷರಂತೆ ಅವರು ಅಘಮರ್ಷಣಸೂಕ್ತವನ್ನು ಜಪಿಸಿಯೇ ಪಾಪನಿವೃತ್ತಿಯನ್ನು ಮಾಡಿಕೊಳ್ಳಬೇಕಾಗಿಲ್ಲ. ಅವರು ಪತಿಶುಶ್ರೂಷೆಯ ಹೊರತು ಬೇರೆ ಯಜ್ಞವನ್ನು ಮಾಡಬೇಕಾಗಿಲ್ಲ. ಪತಿಯ ಆಜ್ಞೆ ಇಲ್ಲದೆ ಅವರು ವ್ರತ ಉಪವಾಸಾದಿಗಳನ್ನು ಮಾಡಬೇಕಾಗಿಲ್ಲ. ಪತಿಸೇವೆಯೊಂದರಿಂದಲೇ ಸ್ತ್ರೀಯು ಇಷ್ಟವಾದ ಉತ್ತಮ ಲೋಕವನ್ನು ಪಡೆಯುತ್ತಾಳೆ. ಸ್ತ್ರೀಗೆ ಪತಿಸೇವೆಯೇ ಸರ್ವಸ್ವವು " ಎಂದು ಮನುವಚನದ ಅಭಿಪ್ರಾಯವು. (ಮನು ಅ.೫ ಶ್ಲೋಕ. ೧೫೫.)

**ಇಲ್ಲಿಗೆ ಸ್ತ್ರೀಧರ್ಮ ನಿರೂಪಣವು ಸಮಾಪ್ತವಾಯಿತು.**

**೨. ಗರ್ಭಿಣೀಧರ್ಮಾಃ**

**ಅಥ ಧರ್ಮಾ ನಿರೂಪ್ಯಂತೇ ಗರ್ಭಿಣ್ಯಾಸ್ತು ವಿಶೇಷತಃ ॥**

**ತಾತ್ಪರ್ಯ** : ಇನ್ನು ಮುಂದೆ ಗರ್ಭಿಣೀಸ್ತ್ರೀಯು ಅನುಸರಿಸಬೇಕಾದ ಕೆಲವು ವಿಶೇಷಧರ್ಮಗಳನ್ನು ನಿರೂಪಿಸುತ್ತೇವೆ.

**ಪದ್ಮ ಪುರಾಣೇ -**

ನಾವಸ್ಕರೇಷೂಪವಿಶೇನ್ಮುಸಲೋಲೂಖಲಾದಿಷು ।
ಜಲಂ ಚ ನಾವಗಾಹೇತ ಶೂನ್ಯಾಗಾರಂ ವಿವರ್ಜಯೇತ್ ॥

ವಲ್ಮೀಕಂ ನಾಧಿತಿಷ್ಠೇತ ನ ಚೋದ್ವಿಗ್ನಮನಾ ಭವೇತ್ ।
ವಿಲಿಖೇನ್ನ ನಖೈರ್ಭೂಮಿಂ ನಾಂಗಾರೇಣ ನ ಭಸ್ಮನಾ ॥
ನ ಶಯಾಲುಸ್ಸದಾ ತಿಷ್ಠೇದ್ ವ್ಯಾಯಾಮಂ ಚ ವಿವರ್ಜಯೇತ್ ।
ನ ತುಷಾಂಗಾರಭಸ್ಮಾಸ್ಥಿಕಪಾಲೇಷು ಸಮಾವಿಶೇತ್ ॥
ನ ಶಯೀತೋತ್ತರಶಿರಾ ನ ಚೈವಾಧಶ್ಶಿರಾಃ ಕ್ವಚಿತ್ ।
ನ ವಸ್ತ್ರಹೀನಾ ನೋದ್ವಿಗ್ನಾ ನ ಚಾರ್ದ್ರಚರಣಾ ಸತೀ ॥
ನಾಮಂಗಲ್ಯಂ ವದೇದ್ ವಾಕ್ಯಂ ನ ಚ ಹಾಸ್ಯಾಧಿಕಾ ಭವೇತ್ ।
ಕುರ್ಯಾತ್ ಶ್ವಶುರಯೋರ್ನಿತ್ಯಂ ಪೂಜಾಂ ಮಾಂಗಲ್ಯತತ್ಪರಾ ॥
ತಿಷ್ಠೇತ್ ಪ್ರಸನ್ನವದನಾ ಭರ್ತುಃ ಪ್ರಿಯಹಿತೇ ರತಾ ।
ಮಾತ್ಸ್ಯೇ ಪುರಾಣೇಽಪಿ ತಥಾದಿತಿಂ ಪ್ರತ್ಯಾಹ ಕಾಶ್ಯಪಃ ॥
ಸಂಧ್ಯಾಯಾಂ ನೈವ ಭ ೀಕ್ತವ್ಯಂ ಗರ್ಭಿಣ್ಯಾ ವರವರ್ಣಿನಿ ।
ನ ಸ್ನಾತವ್ಯಂ ನ ಗಂತವ್ಯಂ ವೃಕ್ಷಮೂಲೇಷು ಸರ್ವದಾ ॥
ನ ಶಯಾಲುಃ ಸದಾ ತಿಷ್ಠೇತ್ ಖಟ್ವಾಶಯ್ಯಾಂ (ಛಾಯಾಂ ) ವಿವರ್ಜಯೇತ್ ।
ಸರ್ವೌಷಧೀಭಿಶ್ಚೋಷ್ಣೇನ (ಕೋಷ್ಣೇನ) ವಾರಿಣಾ ಸ್ನಾನಮಾಚರೇತ್ ॥
ಕೃತರಕ್ಷಾ ಸುಭೂಷಾ ಚ ವಾಸ್ತುಪೂಜನತತ್ಪರಾ ।
ದಾನಶೀಲಾ ತೃತೀಯಾಯಾಂ ಪಾರ್ವತ್ಯಾಂ ಸಕ್ತಿಮಾಚರೇತ್ ॥
ಪತಿವ್ರತಾ ಭವೇನ್ನಾರೀ ವಿಶೇಷೇಣ ತು ಗರ್ಭಿಣೀ ।
ಯಸ್ತು ತಸ್ಯಾ ಭವೇತ್ ಪುತ್ರಃ ಸ್ಥಿರಾಯುರ್ಬುದ್ಧಿಸಂಯುತಃ ॥
ಅನ್ಯಥಾ ಗರ್ಭಪತನಮವಾಪ್ನೋತಿ ನ ಸಂಶಯಃ ॥

**ತಾತ್ಪರ್ಯ** : - ೧) ಗರ್ಭಿಣಿಯಾದ ಸ್ತ್ರೀಯು ಕಸಕಡ್ಡಿಗಳ ಮೇಲೆ ಕುಳಿತುಕೊಳ್ಳಬಾರದು. ೨)ಒನಕೆ ಒರಳು ಮುಂತಾದವುಗಳ ಮೇಲೂ ಕುಳಿತುಕೊಳ್ಳಬಾರದು. ೩) ನೀರಿನಲ್ಲಿ ಮುಳುಗಿ ಸ್ನಾನ ಮಾಡಬಾರದು. ಆಳವಾದ ನೀರಿಗಿಳಿಯಬಾರದು. ೪) ಶೂನ್ಯಗೃಹವನ್ನು ( ನಿರ್ಜನವಾದ ಮನೆಯನ್ನು) ಬಿಡಬೇಕು. ಒಬ್ಬಂಟಿಗಳಾಗಿ ಇರಬಾರದು. ೫) ಹುತ್ತವನ್ನು ಹತ್ತಿ ನಿಲ್ಲಬಾರದು ಏರಬಾರದು ೬)ಮನಸ್ಸಿನಲ್ಲಿ ಕಳವಳಪಡಬಾರದು. ೭) ಉಗುರುಗಳಿಂದ ಭೂಮಿಯನ್ನು ಕೆರೆಯಬಾರದು. ೮)ಬೂದಿಯಿಂದ ನೆಲದ ಮೇಲೆ ಬರೆಯಬಾರದು. ೯) ಯಾವಾಗಲೂ ಮಲಗಿಕೊಂಡಿರಬಾರದು.೧೦) ಗರ್ಭಿಣಿಯಾದ ಹೆಂಗಸು ವ್ಯಾಯಾಮವನ್ನು ಮಾಡಬಾರದು. ೧೧) ಹೊಟ್ಟು ಇದ್ದಲು, ಬೂದಿ, ಎಲಬು, ಮಡಿಕೆಚೂರು ಇವುಗಳನ್ನು ತುಳಿಯಬಾರದು, ಅವುಗಳ ಮೇಲೆ ಕುಳಿತುಕೊಳ್ಳಬಾರದು.೧೨)ಯಾರ ಜತೆಗೂ ಜಗಳವಾಡಬಾರದು. ೧೩) ಎಲ್ಲರ ಎದುರಿಗೆ ಮೈಮುರಿಯುತ್ತಾ ಇರಬಾರದು. ೧೪) ತಲೆಕೂದಲನ್ನು ಬಿಚ್ಚಿ ಹರವಿ

ಹಾಕಿ ಕುಳಿತುಕೊಳ್ಳಬಾರದು. ೧೫) ಎಂದೂ ಅಶುಚಿಯಾಗಿ (ಎಂಜಲು, ಮುಸುರೆ ಇಟ್ಟುಕೊಂಡು) ಇರಬಾರದು.. ೧೬) ಉತ್ತರದಿಕ್ಕಿಗೆ ತಲೆ ಹಾಕಿ ಮಲಗಬಾರದು. ೧೭) ತಲೆಕೆಳಗೆ ಮಾಡಿ (ದಿಂಬಿಲ್ಲದೇ, ಬೋರಲಾಗಿ) ಮಲಗಬಾರದು. ೧೮) ವಸ್ತ್ರಹೀನಳಾಗಿ (ಬತ್ತಲೆಯಾಗಿ) ಮಲಗಬಾರದು. ೧೯) ಉದ್ವೇಗ ಪಡುತ್ತಾ ಇರಬಾರದು ಹಾಗೆಯೇ ಮಲಗಬಾರದು. ೨೦) ಒದ್ದೆಕಾಲಲ್ಲಿ ಮಲಗಬಾರದು. (ಕಾಲುಗಳನ್ನು ಒರೆಸಿಕೊಂಡು ಮಲಗಬೇಕು). ೨೧) ಅಮಂಗಳಕರವಾದ ಮಾತನ್ನು ಆಡಬಾರದು. ೨೨) ಹೆಚ್ಚಾಗಿ ನಗಬಾರದು. (ಅಟ್ಟಹಾಸ ಮಾಡಿ ನಗಬಾರದು). ೨೩) ಯಾವಾಗಲೂ ಮಂಗಳವಸ್ತುಗಳನ್ನು ಧರಿಸಿ ಅತ್ತೆ ಮಾವಂದಿರ ಸೇವೆಯನ್ನು ಮಾಡುತ್ತಾ ಇರಬೇಕು. ೨೪) ಯಾವಾಗಲೂ ಮುಖದಲ್ಲಿ ಪ್ರಸನ್ನಳಾಗಿದ್ದು ಪತಿಗೆ ಪ್ರಿಯವಾದ ಮತ್ತು ಹಿತವಾದ ಕಾರ್ಯವನ್ನೇ ಮಾಡುತ್ತಾ ಇರಬೇಕು. ೨೫) ಇನ್ನು ಮಾತ್ಸ್ಯಪುರಾಣದಲ್ಲಿ ಅದಿತಿಯನ್ನು ಕುರಿತು ಕಾಶ್ಯಪರು ಗರ್ಭಿಣಿಯ ಧರ್ಮಗಳನ್ನು ಹೇಳಿರುತ್ತಾರೆ. ಅವು ಹೀಗಿವೆ - ಎಲೈ ಉತ್ತಮಾಂಗನೆಯಾದ ಅದಿತಿಯೇ ! ಗರ್ಭಿಣಿಸ್ತ್ರೀಯು ಸಂಧ್ಯಾಕಾಲದಲ್ಲಿ ಊಟ ಮಾಡಲೇಬಾರದು. ೨೬) ಸಂಜೆಯ ಹೊತ್ತು ಸ್ನಾನ ಮಾಡಬಾರದು. ೨೭) ಗರ್ಭಿಣಿಯು ಸಂಜೆಯ ಹೊತ್ತಿನಲ್ಲಿ ಮರದ ಬುಡದಲ್ಲಿ ಕುಳಿತುಕೊಳ್ಳಬಾರದು. ೨೮)ಯಾವಾಗಲೂ ಮಲಗಿಕೊಂಡಿರಬಾರದು. ೨೯) ಮಂಚದ ಮೇಲೆ ಮಲಗಬಾರದು (ಮಂಚದ ನೆರಳು ಬೀಳುವಲ್ಲಿ ಮಲಗಬಾರದು). ೩೦)ಎಲ್ಲಾ ಗಿಡಮೂಲಿಕೆಗಳನ್ನು ಸೇರಿಸಿದ ಬಿಸಿ ನೀರಿನಿಂದ (ಉಗುರು ಬೆಚ್ಚಗಿನ ನೀರಿನಿಂದ) ಸ್ನಾನ ಮಾಡಬೇಕು. ೩೧) ಮಂತ್ರಗಳಿಂದ, ಯಂತ್ರಗಳಿಂದ ತನಗೂ ಗರ್ಭಕ್ಕೂ ರಕ್ಷಣೆ ಮಾಡಿಕೊಳ್ಳಬೇಕು. ೩೨) ಒಳ್ಳೆಯ ವಸ್ತ್ರಾಭರಣಗಳಿಂದ ಅಲಂಕೃತಳಾಗಿರಬೇಕು. ೩೩) ಮನೆಯ ವಾಸ್ತು ದೇವತೆಗಳು, ದ್ವಾರದೇವತೆಗಳು ಮುಂತಾದವರ ಪೂಜೆಯನ್ನು ಮಾಡುತ್ತಿರಬೇಕು. ೩೪) ಯಾವಾಗಲು ದಾನ ಕೊಡುತ್ತಾ ಇರಬೇಕು. ೩೫ ) ತದಿಗೆಯ ದಿನ ಭಕ್ತಿಯಿಂದ ಗೌರಿಯನ್ನು ಪೂಜಿಸಬೇಕು. ೩೬) ಸ್ತ್ರೀಯು ಯಾವಾಗಲೂ ಪಾತಿವ್ರತ್ಯಧರ್ಮವನ್ನು ಕಾಪಾಡಿಕೊಂಡಿರಬೇಕು. ಗರ್ಭಿಣಿಯಾದ ಸ್ತ್ರೀಯಾದರೋ ವಿಶೇಷ ರೀತಿಯಿಂದ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕು.

ಈ ರೀತಿ ಗರ್ಭಿಣೀಧರ್ಮಗಳನ್ನು ಆಚರಿಸಿದ ಪರಿಶುದ್ಧಳಾದ ಸ್ತ್ರೀಯ ಪುತ್ರನು ಬುದ್ಧಿವಂತನೂ ದೀರ್ಘಾಯುಷ್ಮಂತನೂ ಆಗುತ್ತಾನೆ ಮತ್ತು ಪ್ರತಿದಿನವೂ ಅಭಿವೃದ್ಧಿ ಹೊಂದುತ್ತಾನೆ. ಗರ್ಭಿಣಿಯು ಮೇಲೆ ಹೇಳಿದ ಧರ್ಮಗಳನ್ನು ಆಚರಿಸದಿದ್ದರೆ ಗರ್ಭಪತನವಾಗುತ್ತದೆ, ಸಂಶಯವಿಲ್ಲ.

**ತಥಾ ಸ್ಕಾಂದೇ ಅದಿತಿಂ ಪ್ರತಿ ಕಾಶ್ಯಪಃ ಆಹ -**

ಗರ್ಭಗ್ರಹಣಮಾರಭ್ಯ ವ್ಯಾಯಾಮವ್ಯಸನಾನಿ ಚ ।
ತತ್ಕ್ಷಣಂ ಚ ದಿವಾಸ್ವಾಪಂ ರಾತ್ರೌ ಜಾಗರಣಂ ತಥಾ ॥

ಗಜಾಶ್ವಾರೋಹಣಂ ಶೋಕಂ ವೇಗಧಾವನಮೇವ ಚ ।
ಕುಕ್ಕುಟಸ್ಯಾಸನಂ ಚೈವ ಶೋಣಿತಸ್ಯ ಚ ಮೋಕ್ಷಣಮ್ ॥

ವಿರೇಚನಂ ನೈವ ಕುರ್ಯಾತ್ ಕ್ಷಾರಾದ್ಯನ್ನಂ ಚ ವರ್ಜಯೇತ್ ॥ ಇತಿ ॥

**ತಾತ್ಪರ್ಯ** : ಹಾಗೇಯೇ ಸ್ಕಾಂದ ಪುರಾಣದಲ್ಲಿ ಅದಿತಿದೇವಿಯನ್ನು ಕುರಿತು ಕಾಶ್ಯಪರು ಹೇಳುತ್ತಾರೆ — ಸ್ತ್ರೀಯು ಗರ್ಭವನ್ನು ಧರಿಸಿರುವುದು ತಿಳಿದಂದಿನಿಂದ ವ್ಯಾಯಾಮವನ್ನು, ಹಂಬಲಗಳನ್ನು ಬಿಡಬೇಕು. ಗರ್ಭಿಣಿಯೆಂದು ತಿಳಿದ ದಿವಸದಿಂದ ಹಗಲು ನಿದ್ದೆಯನ್ನು ಬಿಡಬೇಕು. ರಾತ್ರಿಯ ವೇಳೆ ಜಾಗರಣ ಮಾಡಬಾರದು, ಆನೆಯ ಮೇಲೆ ಹತ್ತಬಾರದು, ಕುದುರೆ ಸವಾರಿಯನ್ನು ಮಾಡಬಾರದು. ಶೋಕಿಸಬಾರದು, ವೇಗವಾಗಿ ಓಡಬಾರದು. ಕುಕ್ಕರಗಾಲಿನಲ್ಲಿ ಕುಳಿತುಕೊಳ್ಳಬಾರದು. ಮೈಯಲ್ಲಿ ಗಾಯ ಮುಂತಾದವುಗಳು ಆಗಿ ರಕ್ತಹೋಗದಂತೆ ನೋಡಿಕೊಳ್ಳಬೇಕು. ಭೇದಿ ಮುಂತಾದ್ದು ಆಗದಂತೆ ನೋಡಿಕೊಳ್ಳಬೇಕು. ಭೇದಿ ಔಷಧಿಯನ್ನು ತೆಗೆದುಕೊಳ್ಳಬಾರದು. ಬಹಳ ತೀಕ್ಷ್ಣವಾದ ಅನ್ನ ಮುಂತಾದುದನ್ನು ಸ್ವೀಕರಿಸಬಾರದು. ಇವೇ ವೊದಲಾದ ಗರ್ಭಿಣಿಯ ಧರ್ಮಗಳನ್ನು ಕಾಶ್ಯಪರು ತಮ್ಮ ಪತ್ನಿಯಾದ ಅದಿತಿಗೆ ಹೇಳಿದರೆಂದು ಸ್ಕಾಂದಪುರಾಣದಲ್ಲಿ ಕಂಡುಬರುತ್ತಿದೆ.

**ಗರ್ಭಜ್ಞಾನಂ ಶ್ರಮಾದಿಲಿಂಗೈರವಗಂತವ್ಯಂ, ತಾನಿ ಲಿಂಗಾನಿ ಸುಶ್ರುತಗ್ರಂಥೇ ಪ್ರತಿಪಾದಿತಾನಿ-**

**'ಸದ್ಯೋ ಗೃಹೀತಗರ್ಭಾಯಾಂ ಶ್ರಮೋ ಗ್ಲಾನಿಃ ಪಿಪಾಸಾ ಸಕ್ಥಿಸ್ಪಂದನಂ**

**ಶುಕ್ರಶೋಣಿತಯೋಃ ಸಂಬಂಧೇ ಸ್ಫುರಣಂ ಚ ಯೋನ್ಯಾಃ' ಇತಿ ॥**

**ತಾತ್ಪರ್ಯ** : ಆಯಾಸವಾಗುತ್ತಿರುವುದು ಮುಂತಾದ ಚಿಹ್ನೆಗಳಿಂದ ಇವಳು ಗರ್ಭಿಣಿಯಾಗಿದ್ದಾಳೆ ಎಂದು ತಿಳಿಯಬೇಕು. ಗರ್ಭವನ್ನು ಸೂಚಿಸುವ ಚಿಹ್ನೆಗಳನ್ನು ಸುಶ್ರುತ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

'ಸ್ತ್ರೀಯು ಆಗ ತಾನೇ ಗರ್ಭಗ್ರಹಣ ಮಾಡಿದ್ದರೆ ಅವಳಿಗೆ ಆಯಾಸವಾಗಿರುತ್ತದೆ, ಮುಖದಲ್ಲಿ ಸಂತೋಷವಿರುವುದಿಲ್ಲ. ಬಾಯಾರಿಕೆಯಾಗುತ್ತಾ ಇರುತ್ತದೆ. ತೊಡೆಗಳು ಅದರುತ್ತವೆ. ಶುಕ್ರ (ಪುರುಷ ವೀರ್ಯ) ಶೋಣಿತ (ಸ್ತ್ರೀಯ ಗರ್ಭಗ್ರಹಣ ಯೋಗ್ಯವಾದ ರಕ್ತ) ಇವೆರಡೂ ಸೇರಿ ಗರ್ಭವಾಗುವ ಸಂದರ್ಭವಿದ್ದಾಗ ಸ್ತ್ರೀಯ ಗುಹ್ಯೇಂದ್ರಿಯವು ಕಂಪಿಸಲಾರಂಭಿಸುತ್ತದೆ.

**ಗರ್ಭಿಣ್ಯಾ ಯದಭಿಲಷಿತಂ ತದ್ದದ್ಯಾತ್, ಅನ್ಯಥಾ ಗರ್ಭಹಾನಿಃ ಸ್ಯಾತ್ ತಥಾ ಚ ಯಾಜ್ಞವಲ್ಕ್ಯಃ-**

**ದೌಹೃದಸ್ಯಾಪ್ರದಾನೇನ ಗರ್ಭೋ ದೋಷಮವಾಪ್ನುಯಾತ್ ।**

**ವೈರೂಪ್ಯಂ ಮರಣಂ ವಾಪಿ ತಸ್ಮಾತ್ ಕಾರ್ಯಂ ಪ್ರಿಯಂ ಸ್ತ್ರಿಯಃ ॥ ಇತಿ ॥**

**॥ಇತಿ ಗರ್ಭಿಣೀಧರ್ಮನಿರೂಪಣಂ॥**

**ತಾತ್ಪರ್ಯ** : ಗರ್ಭಿಣಿಯ ಹೆಂಗಸು ಏನನ್ನು ಬಯಸುತ್ತಾಳೋ ಅದನ್ನು ಅವಳಿಗೆ ಕೊಡಬೇಕು. ಗರ್ಭಿಣಿಯ ಬಯಕೆಯನ್ನು ಪೂರೈಸದಿದ್ದರೆ ಗರ್ಭಹಾನಿಯುಂಟಾಗುತ್ತದೆ. ಈ ವಿಷಯವನ್ನು ಯಾಜ್ಞವಲ್ಕ್ಯರು ಹೀಗೆ ಹೇಳಿದ್ದಾರೆ.

ಗರ್ಭಿಣಿಯು ಬಯಸಿದ ವಸ್ತುವನ್ನು ಕೊಡದಿದ್ದರೆ ಗರ್ಭಕ್ಕೆ ದೋಷವುಂಟಾಗುತ್ತದೆ. ಗರ್ಭಸ್ಥ ಶಿಶುವಿಗೆ ಅಂಗಹೀನತೆ ಮುಂತಾದ ವಿಕಾರ ಉಂಟಾಗಬಹುದು. ಅದು ಸಾಯಲೂಬಹುದು. ಆದ್ದರಿಂದ ಬಸುರಿಯಾದ ಸ್ತ್ರೀಯು ಬಯಸಿದ್ದನ್ನು ತಂದುಕೊಟ್ಟು ಅವಳನ್ನು ಸಂತೋಷಪಡಿಸಬೇಕು ಎಂದು ಯಾಜ್ಞವಲ್ಕ್ಯರ ಮಾತಿನ ಅಭಿಪ್ರಾಯ.

**೩. ಅಥ ವಿಧವಾಧರ್ಮಾಃ**

'ಪತ್ಯೌ ಮೃತೇ ತು ಯಾ ಯೋಷಿದ್ ವೈಧವ್ಯಂ ಪಾಲಯೇತ್ ಕ್ವಚಿತ್ ।
ಸಾ ಪುನಃ ಪ್ರಾಪ್ಯ ಭರ್ತಾರಂ ಸ್ವರ್ಗಭೋಗಾನ್ ಸಮಶ್ನುತೇ ॥

ವಿಧವಾಕಬರೀಬಂಧೋ ಭರ್ತುರ್ಬಂಧಾಯ ಜಾಯತೇ ।
ಶಿರಸೋ ವಪನಂ ತಸ್ಮಾತ್ ಕಾರ್ಯಂ ವಿಧವಯಾ ತಥಾ॥

ಏಕಾಹಾರಃ ಸದಾ ಕಾರ್ಯೋ ನ ದ್ವಿತೀಯಃ ಕದಾಚನ ।
ತ್ರಿರಾತ್ರಂ ಪಂಚರಾತ್ರಂ ವಾ ಪಕ್ಷವ್ರತಮಥಾಪಿ ವಾ ॥

ಮಾಸೋಪವಾಸಂ ವಾ ಕುರ್ಯಾಚ್ಚಾಂದ್ರಾಯಣಮಥಾಪಿ ವಾ ।
ಕುರ್ಯಾತ್ ಕೃಚ್ಛ್ರಂ ಪರಾಕಂ ವಾ ತಪ್ತಕೃಚ್ಛ್ರಮಥಾಪಿ ವಾ ॥

ಯವಾನ್ನೈರ್ವಾ ಫಲಾಹಾರೈಃ ಶಾಕಾಹಾರೈಃ ಪಯೋಘೃತೈಃ ।
ಪ್ರಾಣಯಾತ್ರಾಂ ಪ್ರಕುರ್ವೀತ ಯಾವತ್ ಪ್ರಾಣಃ ಸ್ವಯಂ ವ್ರಜೇತ್ ॥

ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ ಪತಿಂ ।
ತಸ್ಮಾದ್ ಭೂಶಯನಂ ಕಾರ್ಯಂ ಪತಿಸೌಖ್ಯಸಮೀಹಯಾ ॥

ನ ಹ್ಯಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ ।
ಗಂಧದ್ರವ್ಯಸ್ಯ ಸಂಬಂಧೋ ನೈವ ಕಾರ್ಯಸ್ತಥಾ ಕ್ವಚಿತ್ ॥

**ವಿಧವಾಧರ್ಮನಿರೂಪಣವು**

**ತಾತ್ಪರ್ಯ** : ವ್ಯಾಸರು ವಿಧವಾಧರ್ಮಗಳನ್ನು ಈ ರೀತಿ ಹೇಳುತ್ತಾರೆ. ಪತಿಯು ಮೃತನಾದ ನಂತರ ಯಾವ ಸ್ತ್ರೀಯು ಎಷ್ಟು ಕಷ್ಟದಿಂದಾದರೂ ವಿಧವಾಧರ್ಮವನ್ನು ಪಾಲಿಸುತ್ತಾಳೋ ಅವಳು ಮೃತನಾದ ತನ್ನ ಪತಿಯನ್ನೇ ಪುನಃ ಹೊಂದಿ ಸ್ವರ್ಗಾದಿಲೋಕಗಳಲ್ಲಿ ದಿವ್ಯಭ ೀಗಗಳನ್ನು ಅನುಭವಿಸುತ್ತಾಳೆ. ಆದುದರಿಂದ ನಾರಿಯು ಪತಿಯ ಮರಣಾನಂತರದಲ್ಲಿ ವಿಧವಾಧರ್ಮಗಳನ್ನು ಅವಶ್ಯಕವಾಗಿ ಪಾಲಿಸಬೇಕು.

ಪತಿಯು ಮೃತನಾದ ಅನಂತರ ಮಾಂಗಲ್ಯಸೂತ್ರ, ಅರಸಿನ, ಕುಂಕುಮ, ಪುಷ್ಪಧಾರಣ ಮುಂತಾದುವುಗಳನ್ನು ಅನೇಕ ಸ್ತ್ರೀಯರು ಬಿಡುತ್ತಾರೆ. ಆದರೆ ಇತ್ತೀಚೆಗೆ ಕೇಶಧಾರಣವನ್ನು ಮಾತ್ರ ಮಾಡುತ್ತಾರೆ. ಕೇಶವಪನವನ್ನು ಮಾಡಿಸುವುದಿಲ್ಲ. ಈ ವಿಷಯದಲ್ಲಿ ವ್ಯಾಸರು ತನ್ನ ಅಭಿಪ್ರಾಯವನ್ನು ಖಚಿತವಾಗಿ ಹೇಳುತ್ತಾರೆ. ವಿಧವೆಯಾದ ಸ್ತ್ರೀಯು ಕೇಶಧಾರಣವನ್ನು ಮಾಡಿ ,ಬಾಚಿ, ತುರುಬುಗಂಟು ಹಾಕಿಕೊಂಡು ಇರುವುದು ಅವಳ ಮೃತಪತಿಗೆ ತುಂಬಾ ಅನಿಷ್ಟಕಾರಿಯಾಗಿರುತ್ತದೆ. ವಿಧವೆಯ ಕಬರೀಬಂಧವು (ತಲೆಕೂದಲುಗಳನ್ನು ಗಂಟು ಹಾಕಿ ಅಲಂಕರಿಸಿಕೊಳ್ಳುವುದದು ) ಅವಳ ಪತಿಯ ಬಂಧಕ್ಕೆ ( ನರಕಬಂಧನಕ್ಕೆ) ಕಾರಣವಾಗುತ್ತದೆ. ಆದುದರಿಂದ ವಿಧವಾಸ್ತ್ರೀಯು ತನ್ನಶಿರಸ್ಸಿನಲ್ಲಿ ತಲೆಕೂದಲುಗಳನ್ನು ಧರಿಸಕೂಡದು. ಶಿರಸ್ಸಿನ ತಲೆಕೂದಲುಗಳ ಮುಂಡನ ಮಾಡಿಸಿಕೊಳ್ಳಬೇಕು ಎಂದು ವ್ಯಾಸರು ಖಚಿತವಾಗಿ ವಿಧವಾ-ಕೇಶಧಾರಣವು ಅಶಾಸ್ತ್ರೀಯವೆಂದು ಹೇಳುತ್ತಾರೆ.

ವಿಧವಾಸ್ತ್ರೀಯು ಒಂದು ಹೊತ್ತು ಮಾತ್ರ ಭೋಜನ ಮಾಡಬೇಕು. ಎರಡನೆಯ ಬಾರಿ ಊಟವನ್ನು ಮಾಡಲೇಬಾರದು. ತ್ರಿರಾತ್ರವ್ರತ, ಪಂಚರಾತ್ರ ವ್ರತ, ಪಕ್ಷವ್ರತ ಅಥವಾ ಮಾಸೋಪವಾಸ ಅಥವಾ ಚಾಂದ್ರಾಯಣ ಅಥವಾ ಕೃಚ್ಛ, ಪರಾಕ, ತಪ್ತಕೃಚ್ಛ, ಈ ವ್ರತಗಳಲ್ಲಿ ಯಾವುದಾದರೊಂದು ವ್ರತವನ್ನು ಮಾಡುತ್ತಲೇ ಇರಬೇಕು. (ಜವೆ) ಗೋಧಿಯ ಅನ್ನ ಅಥವಾ ಫಲಾಹಾರ ಅಥವಾ ಶಾಕಾಹಾರ, ಹಾಲು, ತುಪ್ಪ ಮುಂತಾದ ಹವಿಷ್ಯ ಪದಾರ್ಥಗಳನ್ನು ಉಪಯೋಗಿಸಬೇಕು. ಈ ರೀತಿ ತನ್ನ ಆಹಾರ ನಿಯಮವನ್ನು ಇಟ್ಟುಕೊಳ್ಳಬೇಕು. ಪ್ರತಿದಿನವೂ ದೇಹವನ್ನು ಕೃಶವನ್ನಾಗಿ ಮಾಡಿಕೊಳ್ಳುತ್ತಾ ರೋಗಾದಿ ಉಪದ್ರವವಿಲ್ಲದೇ ಅನಾಯಾಸದಿಂದ ಪ್ರಾಣವಿಯೋಗ ಉಂಟಾಗುವಂತೆ ಮಾಡಿಕೊಳ್ಳಬೇಕು. ಸುಖಮರಣದಿಂದ ದೇಹವನ್ನು ಬಿಟ್ಟು ಪತಿಲೋಕವನ್ನು ಪಡೆಯುವ ಪ್ರಯತ್ನ ಮಾಡುತ್ತಾ ಇರಬೇಕು. ವಿಧವೆಯಾದ ಸ್ತ್ರೀಯು ಮಂಚದಲ್ಲಿ(ಹಾಸಿಗೆಯಲ್ಲಿ) ಮಲಗಬಾರದು. ಹಾಗೆ ಮಾಡಿದರೆ ಅವಳು ತನ್ನ ಪತಿಯನ್ನು ನರಕಕ್ಕೆ ತಳ್ಳಿದಂತಾಗುತ್ತದೆ. ಮಂಚ ಹಾಸಿಗೆಗಳಲ್ಲಿ ಮಲಗುವ ಸ್ತ್ರೀಯು ತನ್ನ ಪತಿಗೆ ನರಕಪಾತವನ್ನುಂಟು ಮಾಡುತ್ತಾಳೆ. ಆದುದರಿಂದ ವಿಧವೆಯು ತನ್ನ ಪತಿಗೆ ಸುಖವುಂಟಾಗಲಿ ಎಂದು ಆಶಿಸುತ್ತಾ ತಾನು ಭೂಮಿಯಲ್ಲಿಯೇ ಮಲಗಬೇಕು. ತೈಲವನ್ನು ಹಚ್ಚಿಕೊಂಡು, ಸುಗಂಧದ್ರವ್ಯಚೂರ್ಣಗಳಿಂದ ಮೈ ಉಜ್ಜಿಕೊಂಡು ಬಿಸಿನೀರು ಸ್ನಾನ ಮಾಡಬಾರದು (ಅಭ್ಯಂಜನ ಸ್ನಾನ ಮಾಡಬಾರದು), ಯಾವ ಸಂದರ್ಭದಲ್ಲಿಯೂ ಸುಗಂಧ ದ್ರವ್ಯವನ್ನು ಉಪಯೋಗಿಸಬಾರದು.

**ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಃ ಕುಶತಿಲೋದಕೈ : ।**
**ತತ್ಪಿತುಸ್ತತ್ಪಿತುಶ್ಚಾಪಿ ನಾಮಗೋತ್ರಾದಿಪೂರ್ವಕಮ್ ॥**

**ತಾತ್ಪರ್ಯ** : ವಿಧವಾಸ್ತ್ರೀಯು ಪ್ರತಿದಿನವೂ ತನ್ನ ಗಂಡ, ಹಾಗೆಯೇ ಗಂಡನ ತಂದೆ, ಗಂಡನ ತಂದೆಯ ತಂದೆ, ( ತನ್ನ ಪತಿ, ಮಾವ, ಮಾವನ ತಂದೆ) ಇವರೆಲ್ಲರಿಗೂ ದರ್ಭಪತ್ರವನ್ನು ಧರಿಸಿ ದರ್ಭ ಮತ್ತು ಎಳ್ಳು ನೀರಿನಿಂದ ತರ್ಪಣವನ್ನು ಕೊಡಬೇಕು. ಅವರ ಹೆಸರು ಮತ್ತು ಗೋತ್ರಗಳನ್ನು ಹೇಳಿ ಅವರಿಗೆ ತರ್ಪಣವನ್ನು ಕೊಡಬೇಕು.

**ಶ್ರೀವಿಷ್ಣೋಃ ಪೂಜನಂ ಕಾರ್ಯಂ ಪತಿಬುದ್ಧ್ಯಾ ನ ಚಾನ್ಯಥಾ ।**
**ಪತಿಮೇವ ಸದಾ ಧ್ಯಾಯೇದ್ ವಿಷ್ಣುರೂಪಧರಂ ಹರಿಮ್ ॥**
**ಏವಂ ಧರ್ಮಪರಾ ನಿತ್ಯಂ ವಿಧವಾಪಿ ಪತಿವ್ರತಾ ॥ (ಶುಭಾ ಮತಾ ) ॥ ಇತಿ ॥**

**ಇತಿ ವಿಧವಾಧರ್ಮನಿರೂಪಣಂ**

**ತಾತ್ಪರ್ಯ** : ವಿಧವೆಯಾದ ನಾರಿಯು ತನ್ನ ಪತಿಯನ್ನೇ ಪೂಜಿಸುವೆನೆಂದು ಶ್ರೀಮನ್ನಾರಾಯಣನ ಪೂಜೆಯನ್ನು ಮಾಡಬೇಕು. ಯಾವಾಗಲೂ ತನ್ನ ಪತಿಯಲ್ಲಿ ಅಂತರ್ಗತನಾದ ಶ್ರೀಹರಿಯನ್ನೇ ಧ್ಯಾನಿಸಬೇಕು. ಹೀಗೆ ಧರ್ಮಮಾರ್ಗವನ್ನೇ ಅನುಸರಿಸಿರುವ ವಿಧವಾಸ್ತ್ರೀಯು ( ಮಂಗಳಸ್ವರೂಪಳೂ) ಪತಿವ್ರತೆಯು ಎಂದು ಪ್ರಶಂಸೆಗೆ ಪಾತ್ರಳಾಗುತ್ತಾಳೆ. ' ಈ ರೀತಿ ವ್ಯಾಸರು ಹೇಳುತ್ತಾರೆ.

**॥ ಇಲ್ಲಿಗೆ ವಿಧವಾ ಧರ್ಮನಿರೂಪಣವು ಸಮಾಪ್ತವಾಯಿತು ॥**

* ( ಮಂತ್ರಾಲಯದಿಂದ ಪ್ರಕಟಿತವಾದ (ಶ್ರೀಕೃಷ್ಣಾಚಾರ್ಯರ ಸ್ಮೃತಿ ಮುಕ್ತಾವಳಿ ಗ್ರಂಥದಿಂದ ಉದ್ಧೃತ.)

## ಪರಿಶಿಷ್ಟ -೨
## ರಜಸ್ವಲಾ ಧರ್ಮಗಳು

ರಾಗ - ಕಲ್ಯಾಣಿ ತ್ರಿವಿಡಿ - ತಾಳ

ನಾರಿಯರೆಲ್ಲಾ ಕೇಳಿ । ನಾರಿಯರೆಲ್ಲರು ಸಾರಾಂಶವನು ಕೇಳಿ । ಕ್ರೂರತನವ ಬಿಟ್ಟು ಕೀರುತಿ ಪಡಕೊಳ್ಳಿ ॥ ಪಲ್ಲ॥ ರಜಸ್ವಲೆಯಾಗಿದ್ದಾ ನಿಜ ಮಾನವಳು ನಿತ್ಯಾ । ಪ್ರಜೆಗಳೊಳಗೆ ಬಿಟ್ಟು ರಜದಲ್ಲಿ ಹೊರಳುತ್ತ । ಯಜಮಾನ ಸತಿಯೆಂಬಿ ಕುಜನತನವ ಬಿಟ್ಟು। ಸುಜನರ ಪಾದಕ್ಕೆ ರುಜುವಾಗಿ ತಡೆವುತ್ತ । ರಜನಿಚರರ ಬುದ್ಧಿ ಭಜಿಸದೆ ದೂರದಿ । ಗಜಬಿಜಿ ಮಾಡದೆ ಯೇಕಾಂತದಲಿಯಿದ್ದು । ದ್ವಿಜ-ಧಾವನವ ಬಿಟ್ಟು ಕಬರಿ ಕಟ್ಟದೆಯಿದ್ದು । ಗುಜುಗುಜು ಮಾತನಾಡಿ ತ್ರಿರಾತ್ರಿಲಿ । ಭುಜದಿರವಕಿಯ ನೋಡಿ ವಸನವನ್ನು। ತ್ಯಜಿಸದೆ ಮೌನ ಮಾಡಿಯೀ ಪರಿಯಿಂದಾ । ಗಜರಾಜ ವರದನ್ನ ಸ್ಮರಣೆ ಪ್ರೇರಣೆ ನೋಡಿ ॥ ೧ ॥ ಪಾತ್ರಿಯೊಳಗೆ ಭ ೀಜನ ಬಿಟ್ಟು ಅನ್ನವಾ । ಧಾತ್ರಿ ಮೇಲುಂಡು ನೈವೇದ್ಯವಾವುಣ್ಣದಲೆ । ಸ್ವಾರ್ತಕ ತೊರೆದು ಜಿಂಹಾಸ್ವಾದಳೆನಿಸದೆ । ಆರ್ತಳಾಗದೆ ಕಂಡಲ್ಲಿ ಸಂಚರಿಸದೆ । ಮೂತ್ರ-ವಿಸರ್ಜನೆ ವಂದೆ ಭಾರಿ। ಗಾತ್ರ ಮಲಿನವನ್ನು ತೊಳಿಯದೆ ಯಿರುತಿದುರ್ದ । ನೇತ್ರದಿವೊಬ್ಬರ ನೋಡದೆ ನೆಲ ನೋಡಿ । ಕ್ಷೇತ್ರ ತೀರ್ಥ ನದಿನದಗಳ ಮುಟ್ಟದೆ । ಗೋತ್ರವನುಚ್ಚರಿಸದೆ ಮನಿಯ ಕೆಲಸ । ಮಾತ್ರ ಲವಮಾಡದೆ ವಿರೂಪದಿ । ರಾತ್ರಿ ಹಗಲು ತಲೆದುರಬು ಬಿಚ್ಚದಲಿರಿ ॥ ೨ ॥ ಕಡಿಗೆ ಪೋದ ನಾರಿ ಕೇರಿಯೊಳಗೆ ಬಂದು । ಒಡನೆ ಸುಳಿಯೆ ಪುಣ್ಯ ವಾಚನೆ ಮಾಡಿ । ಕಡು ಲೇಸು ಯಿಲ್ಲವೆ ಪ್ರಾಯಶ್ಚಿತ್ತವೇ ಯಿಲ್ಲಾ ನೀ । ತುಡುಕಿ ತಾಕಲು ಒಂದು ನಿರ್ಜರಾ ನಿರಾಹಾರಾ । ಮಡಿಯಲ್ಲಿಯಿರೆ ನೋಡೆ ಪುನಃ ಮಜ್ಜನ ಮಾಡಿ । ಕುಡಿ ನೀರು ಕಾಣಲು ಚೆಲ್ಲಿ ಪೋಗಲಿಬೇಕು। ನಡುಮನಿಯೊಳು ಬಂದುನಿಂದರೆ ನೆಲವನ್ನು । ಕಡಿದು ಕೆತ್ತಲಿಬೇಕು ಶುದ್ಧ ಹವನ ಮಾಡಿ । ನುಡಿಸದೆಯಿರಬೇಕು ಚರುವ ಮಾಡಿ । ಬಡಿಸಿ ಆ ಪಾತ್ರಿಯನ್ನು ಕಡಿಯಲಿಟ್ಟು । ಕುಡಿಯೋಜಲ ಬ್ಯಾರೆ ನೀಡಿ ಅವಳ ಕಂಡು । ಮಡಿ ಮಾಡಿ ಜಲಮಿಂದು ಶುಚಿಯಾಗಿರಬೇಕು ॥ ೩ ॥ ಕಂಡು ಕಂಡು ನಾರಿ ಕಲಿಸಿಕೊಂಡರೆ ತಾನು । ರಂಡಿಯಾಗಿ ಭಂಗಬಡುವಳು ಆವಾಗ । ಗಂಡನಗೋಸುಗ ಬಳಲುತಲಿಪ್ಪಳು । ಚಾಂಡಾಲತಿಯಾಗಿ ಪುಟ್ಟಿ ಬಪ್ಪಳು ಮುಂದೆ । ಥಂಡ ಥಂಡದಿ ಯಮ ಕಟ್ಟಿ ಬಾಧಿಸುವನು । ಶೂಂಡಾಲಜನುಮದಿ ಮದದಲ್ಲಿಯಿಪ್ಪಳು । ಮಂಡಲದೊಳಗೆ ಅಪುತ್ರಳಾಗಿಯಿದ್ದು । ಭಂಡುಮಾನವಳಾಗಿ ವ್ಯಭಿಚಾರತನದಲ್ಲಿ । ತುಂಡು ಬುದ್ಧಿಯಲಿಂದ ಛೀಮಾರಿ ತಾನಾಗಿ । ಪಂಡಿತರ ಕೈಯ ವುಗಳಿಸಿಕೊಂಬೋಳು। ಹೆಂಡಗಾರಳಂತೆ ಸ್ಮರಣೆದಪ್ಪಿ ಮತ್ತೆ । ಕುಂಡಗೋಳಕ ಜಾತಿಪೊಂದಿಯಿಪ್ಪಳು ಹೀಗೆ । ಅಂಡೊಲಿದು ಬಾಳುವಳು ದಾರಿದ್ರದಿ। ಕಂಡವರ ಬೇಡುವಳು ಕೊಡದಿರೆ । ಹಿಂಡು ಕಳವು ಮಾಡೋಳು ಈ ದುಃಖದಿ । ಪಾಂಡವ ಪ್ರಿಯಗೆ ಸಲ್ಲಾದೆಯಿಪ್ಪಳು॥೪॥ ಮೊದಲುದಿನ ಚಂಡಾಲಿನಿ ಬದಿಯ ದಿನದಲ್ಲಿ । ವೊದಗಿ ಬ್ರಹ್ಮಘಾತಿ ತುದಿ ಮೂರನೆ ದಿನ । ರಜಕಿ ಚತುರ ದಿನ ಶೂದ್ರಿ ಇ -। ನ್ನಿವರ ತರುವಾಯಾ ಚದುರದಿನದಲ್ಲಿ । ಮುದದಿಂದ ಜಲದಲ್ಲಿ । ಸದಮಲ ಮನದಿಂದ ಸ್ನಾನ ಮಾಡಿ ತನ್ನ । ವದನ ಭೂಮಿಯ ನೋಡೀ ಬರುತಾ ಮಧ್ಯದಿಪರ। ಚದುರಿಯ ಪುರುಷನ್ನ ಕಾಣದಂತೆ

ಬಂದು । ತುದಿ ಮನಿಯೊಳು ನಿಂದು ಬಾಲಾರ ನೋಡದೆ । ಚೆದುರಿ ದೂರನೆ ಪೋಗೆಂದು ಗಂಡನ ನೋಡಿ । ಮುದುರಿಕೊಂಡು ಕೋಣೆಲಿ ಆ ದಿನಯಿದ್ದು । ಚದುರಾಂತರ್ಗತ ಹಯವದನ ವಿಠ್ಠಲನ ಕೂಡಿ ॥ ೫ ॥

**ರಜಸ್ವಲಾ ಶುದ್ಧಿ :** ೧) ಯಾವಾಗಲೂ ತಿಂಗಳಿಗೊಂದು ಸಾರಿ ರಜೋದರ್ಶನವಾಗತಕ್ಕವರು ಒಮ್ಮೆ ರಜೋದರ್ಶನವಾದಂದಿನಿಂದ ೧೭ ದಿನಗಳೊಳಗೆ ಪುನಃ ರಜಸ್ವಲೆಯಾದರೆ ಕೂಡಲೇ ಸ್ನಾನ ಮಾಡುವುದರಿಂದಲೂ, ೧೮ನೇ ದಿನ ರಜಸ್ವಲೆಯಾದರೆ ೧ ರಾತ್ರಿಯ ಅನಂತರವೂ ೧೯ನೇ ದಿನ ರಜಸ್ವಲೆಯಾದರೆ ೨ ರಾತ್ರಿಯ ಅನಂತರವೂ ೨೦ನೇ ದಿನ ಅಥವಾ ಅದರ ಅನಂತರದಲ್ಲಿ ರಜಸ್ವಲೆಯಾದರೆ ೩ ರಾತ್ರಿಗಳ ಅನಂತರದಲ್ಲಿಯೂ ಶುದ್ಧರಾಗುವರು. ೨) ಯಾವಾಗಲೂ ೨೦ ದಿನಗಳಿಗೊಮ್ಮೆ ರಜೋದರ್ಶನವಾಗತಕ್ಕವರು ೧೪ ದಿನಗಳೊಳಗೆ ರಜಸ್ವಲೆಯಾದರೆ ಕೂಡಲೇ ಸ್ನಾನಮಾಡುವುದರಿಂದಲೂ ೧೫ ನೇ ದಿನ ರಜಸ್ವಲೆಯಾದರೆ ಒಂದು ರಾತ್ರಿಯ ಅನಂತರವೂ ೧೬ನೇ ದಿನ ರಜಸ್ವಲೆಯಾದರೆ ೨ ರಾತ್ರಿಯ ಅನಂತರವೂ ೧೭ನೇ ದಿನ ಮೊದಲ್ಗೊಂಡು ರಜೋದರ್ಶನವಾದರೆ ೩ ರಾತ್ರಿಯ ಅನಂತರವೂ ಶುದ್ಧರಾಗುವರು. ೩) ಯಾವಾಗಲೂ ೧೫ ದಿನಗಳಿಗೊಮ್ಮೆ ರಜೋದರ್ಶನವಾಗತಕ್ಕವರು ೧೦ ದಿನಗಳೊಳಗೆ ರಜಸ್ವಲೆಯಾದರೆ ಕೂಡಲೇ ಸ್ನಾನ ಮಾಡುವುದರಿಂದಲೂ ೧೧ ಮತ್ತು ೧೨ ನೇ ದಿನಗಳಲ್ಲಿ ರಜಸ್ವಲೆಯಾದರೆ ಕ್ರಮವಾಗಿ ೧ ರಾತ್ರಿ ಮತ್ತು ೨ ರಾತ್ರಿ ಕಳೆದು ಸ್ನಾನ ಮಾಡುವುದರಿಂದಲೂ ೧೩ ನೆಯ ದಿನದಲ್ಲಿ ರಜಸ್ವಲೆಯಾದರೆ ೩ ರಾತ್ರಿ ಕಳೆದು ಸ್ನಾನ ಮಾಡುವುದರಿಂದಲೂ ಶುದ್ಧರಾಗುವರು. ೪) ಗರ್ಭಿಣಿಯರು ಪ್ರಸವದ ಮೊದಲು ರಜಸ್ವಲೆಯಾದರೆ ೩ದಿನ ಕಳೆದು ಸ್ನಾನ ಮಾಡಿದಲ್ಲಿ ಶುದ್ಧರಾಗುವರು.

## ರಜಸ್ವಲೆ - ವೈಜ್ಞಾನಿಕ ದೃಷ್ಟಿಕೋನ

**ವಿದ್ವಾನ್ ರಾ. ಅ. ಭಟ್, ಹೊನ್ನಾವರ. ( ೧೯೭೦ರ ಏಪ್ರಿಲ್ ತಿಂಗಳ ತತ್ತ್ವವಾದ ಮಾಸ ಪತ್ರಿಕೆಯಿಂದ ಕೃತಜ್ಞತೆಯೊಂದಿಗೆ ಭಾಗಶಃ ಉದ್ಧೃತ )**

ಕಲ್ಕತ್ತೆಯಿಂದ ಹೊರಡುವ "ಟ್ರೂಥ್" ಎಂಬ ಇಂಗ್ಲೀಷ ಪಾಕ್ಷಿಕ ಒಂದರ ೧೮-೧-೫೭ರ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ. - "೨೦ ಮೇ ೧೯೨೦ರ ವೀನಕ್ಲೀನವೋಕನ ಲೇಖನದಲ್ಲಿ ಪ್ರೊ. ಶೇಕನು ಸ್ವಾನುಭವದ ಆಧಾರದಿಂದ ತನ್ನ ವಿಚಾರಗಳನ್ನು ವ್ಯಕ್ತಪಡಿಸಿದ್ದಾನೆ. ಅವು ಹೀಗಿರುವವು- ರಜಸ್ವಲಾ ಸ್ತ್ರೀಯು ನಿಶ್ಚಯವಾಗಿ 'ಆಪಸ' ಎಂಬ ಹೆಸರಿನ ಗಿಡದ ಹಾಗೆ ವಿಷಯುಕ್ತ ಇರುವಳು. (ಆಪಸ ಎಂಬ ಹೆಸರುಳ್ಳ ಗಿಡ ಈಸ್ಟ ಇಂಡಿಯಾದಲ್ಲಿರುತ್ತದೆ. ಆ ಗಿಡದ ಸಹವಾಸದಿಂದ ಸಾವು ಬರುವಷ್ಟು ವಿಷದ ಪರಿಣಾಮವಾಗುತ್ತದೆ). ಒಂದು ಸಾರೆ ಅವನು ತನ್ನ ಸೇವಿಕೆಗೆ ಗುಲಾಬಿ ಹೂಗಳನ್ನು ನೀರಲ್ಲಿ ಇಡಲು ಹೇಳಿದನು. ಅವಳು ಹಾಗೆ ಮಾಡಿದಳು. ಆದರೆ ನೀರಲ್ಲಿಟ್ಟಿದ್ದರೂ ಮಾರನೆದಿನ ಆ ಹೂಗಳ ಎಸಳುಗಳು ಒಣಗಿ ಟೇಬಲಿನ ಮೇಲೆ ಉದರಿ ಬಿದ್ದುದ್ದು ಅವನು ಕಂಡನು. ಆಶ್ಚರ್ಯಪಟ್ಟು ಅವನು ಆ ಸೇವಿಕೆಗೆ ಕಾರಣ ಕೇಳಲಾಗಿ ಅವಳು ತನ್ನ ಮಾಸಿಕ ಋತುಕಾಲದ ಅವಸ್ಥೆಯಲ್ಲಿ ಯಾವಾಗಲೂ ಹೀಗೆಯೇ ಹೂವು ಒಣಗಿ ಹೋಗುತ್ತದೆ" ಎಂದಳು. ಆ ಮಹಿಳೆಯ ಅನುಭವದ ಮೇಲಿಂದ ಆಶ್ಚರ್ಯಪಟ್ಟು ಪ್ರೊ. ಶೇಕನು ಸಂಶೋಧನೆಗೆ ಪ್ರಾರಂಭ

ಮಾಡಿದನು. ಮತ್ತು ಈ ಅವಸ್ಥೆಯಲ್ಲಿ ಹೂವು ಅಥವಾ ವನಸ್ಪತಿಗಳ ಮೇಲೆ ಈ ವಿಷದ ಪರಿಣಾಮವು ಯಾವಾಗಲೂ ಆಗುತ್ತದೆ ಎಂದು ಅವನಿಗೆ ಕಂಡು ಬಂತು. ಹಾಗೂ ಈ ಪರಿಣಾಮ ಮೂರು - ನಾಲ್ಕು ದಿನದವರೆಗೆ ಬಾಳಿರುವುದಾಗಿಯೂ ಅವನಿಗೆ ಕಂಡುಬಂತು.

"ಋತುವಾದ ಎರಡನೆ ದಿನವಂತೂ ಹೀಗೆ ಕಂಡುಬಂತು. ಅವಳ ಕೈಯಲ್ಲಿದ್ದ ಹೂವು ಮೂರೇ ನಿಮಿಷಗಳಲ್ಲಿ ಒಣಗಹತ್ತಿದವು. ಮೂರನೆ ದಿವಸವೂ ಅವಳು ವಿಷದ ಪರಿಣಾಮವುಳ್ಳವಳಿದ್ದಳು. ಆದರೆ ಅದರ ತೀವ್ರತೆಸ್ವಲ್ಪ ಕಡಿಮೆಯಾಗಿತ್ತು."

ಕೊನೆಯಲ್ಲಿ ಪ್ರೊ. ಶೇಕನು ನಿರ್ಣಯಿಸಿದ್ದೇನೆಂದರೆ ಮಾಸಿಕ ಅವಸ್ಥೆಯಲ್ಲಿ ಸ್ತ್ರೀಯ ರೋಮರಂಧ್ರಗಳಿಂದ ಒಂದು ಪ್ರಕಾರದ ವಿಷಾರಿ ಕೀಟಾಣುಗಳು ಹೊರಬೀಳುತ್ತಿರುವವು. ಹಾಗೂ ಅದರ ಪರಿಣಾಮ ಹೂಗಳ ಮೇಲೆ ಮತ್ತು ವನಸ್ಪತಿಗಳ ಮೇಲೆ ಆಗುತ್ತದೆ. ಮತ್ತು ಆ ಸ್ತ್ರೀಯ ಹತ್ತಿರದ ಆಚೀಚಿನ ವಾತಾವರಣ ಕೂಡ ಅಶುದ್ಧವಾಗುತ್ತದೆ. ಇದೇ ವಿಷಯದ ತಪಾಸು ಮಾಡುವಾಗ ಅವನಿಗೆ ಹೀಗೆ ಕಂಡುಬಂತು. ಅಮೇರಿಕೆಯ ಅನೇಕ ಹಳ್ಳಿಪಳ್ಳಿಯಲ್ಲಿ ರಜಸ್ವಲಾ ಹೆಂಗಸರಿಗೆ ಹೂ - ಹಣ್ಣಿನ ತೋಟಗಳಲ್ಲಿ ಪ್ರವೇಶವನ್ನು ನಿಷೇಧಿಸಲಾಗುತ್ತದೆ. ಹಾಗೂ ಹಣ್ಣು ಕಾಯಿ ಗಿಡಗಳಿಗೆ ಅವರ ಸ್ಪರ್ಶವಾದಲ್ಲಿ ಕಾಯಿ ಉದುರುತ್ತವೆ.

"ಅನೇಕ ಹಳ್ಳಿಯಲ್ಲಿ ರಜಸ್ವಲಾ ಹೆಂಗಸರನ್ನು ಗಿಡ - ಮರಗಳ ಮೇಲೆ ಹತ್ತಲಿಕ್ಕೆ ಕೊಡುವುದಿಲ್ಲ. ಕಾರಣ ಗಿಡ-ಮರದಲ್ಲಿದ್ದ ಹಣ್ಣು -ಕಾಯಿ ಉದುರಿಬೀಳುತ್ತವೆ." ಈ ವಿಷಯದ ಅನುಭವ ನಮ್ಮಲ್ಲೂ ಯಾವಾಗಲೂ ಬರುತ್ತದೆ. ತುಲಸಿಯ ಗಿಡಗಳ ಮೇಲೆ ರಜಸ್ವಲೆಯ ನೆರಳು ಬಿದ್ದರೆ ತುಳಸಿ ಗಿಡಗಳು ಬಾಡಿ ಸಾಯುತ್ತವೆ. ಲಿಂಬೆ, ದಾಳಿಂಬ, ಕಿತ್ತಲೆ, ಮೋಸಂಬಿ, ವೀಳ್ಯದ ಎಲೆಬಳ್ಳಿ ಮುಂತಾದ ಕೆಲವು ವಿಶಿಷ್ಟ ಗಿಡಗಳ ಮೇಲೆಯೂ ಬರೆ ಅವರ ನೆರಳು ಬಿದ್ದರೂ ಕೂಡ ಅದರ ಕಾಯಿ ಹುಳಗೆಟ್ಟು ಕಳಚಿ ಬೀಳುತ್ತವೆ. ಹಾಗೂ ಗಿಡಗಳು ಬಾಡಿಹೋಗುತ್ತವೆ. ಹೀಗೆ ಅನುಭವವುಂಟು.

ಇಷ್ಟೇ ಅಲ್ಲ ಸಜೀವ ಪ್ರಾಣಿಗಳ ಮೇಲೂ ಈ ವಿಷಾರೀ ಪರಿಣಾಮವು ಪ್ರೊ. ಶೇಕನಿಗೆ ಕಂಡುಬಂತು.

"ರಜಸ್ವಲೆಯ ಸ್ಪರ್ಶ ಗಿಡಕ್ಕೆ ಆದರೆ ಕೆಲವು ಜಾತಿಯ ಸಜೀವ ಹುಳಗಳು ಪಟಪಟನೆ ಸತ್ತು ಕೆಳಗೆ ಬೀಳುತ್ತವೆ. ಕೆಲವು ಕಡೆಯಲ್ಲಂತೂ ಒಂದೊಂದು ಜಾತಿಯ ಹುಳಗಳು, ತೋಟದಲ್ಲಿ ಅವಳು ಬಂದರೆ, ಗಿಡಗಳ ಮೆಲಿಂದ ಹಾರಿ ಹೋಗುತ್ತವಾದ್ದರಿಂದ ಆ ಹುಳಹುಪ್ಪಟ್ಟಿಗಳನ್ನು ನಿವಾರಿಸಿಕೊಳ್ಳಲು ಈ ಹೆಂಗಸರ ಉಪಯೋಗವನ್ನು ಮಾಡಿಕೊಳ್ಳುತ್ತಾರೆ."

ಪ್ರೊ. ಶೇಕನ ಸಂಶೋಧನದ ಅನುಭವ ಓದುಗರಿಗೂ ಬರಬಹುದು. ಮನುಷ್ಯನ ಶರೀರಕ್ಕೆ ಮೂರುವರೆ ಕೋಟಿ ರೋಮರಂಧ್ರಗಳಿರುತ್ತವೆ. ಮಾನವನ ಶರೀರದೊಳಗಿನ ಅನಂತ ಅಶುದ್ಧ ವಿಷಾರಿದ್ರವ್ಯಗಳು ಈ ರೋಮ ರಂಧ್ರದೊಳಗಿಂದ ಹೊರಗೆ ಬಿದ್ದು ಹೊರಗಿನ ವಾತಾವರಣದಲ್ಲಿ ಬಿತ್ತರಿಸುತ್ತವೆ. ಹಾಗೂ ಅವುಗಳ ಪರಿಣಾಮ ಸಹವಾಸದಲ್ಲಿದ್ದ ಹೂಗಳು, ಫಲಗಳು, ಗಿಡಮರ, ಹುಳುಹುಪ್ಪಟಿ ಮಕ್ಕಳು -ಮಾನವರು ಇವುಗಳ ಮೇಲೆ ಆಗುತ್ತಿರುತ್ತದೆ. ರೋಗಗ್ರಸ್ತರ ಸಹವಾಸದಿಂದ ರೋಗ ಅಂಟುವ ಕಾರಣವೂ ಇದೆ. ಅಶುದ್ಧ ಅವಸ್ಥೆಯಲ್ಲಿರುವ

ಮನುಷ್ಯನ ಬೆವರು, ಅವರ ವಸ್ತ್ರಗಳು, ಅವರ ಉಗುಳು - ಮೂತ್ರ - ಮಲ, ಅವರು ಕೂತುಕೊಂಡ ಜಾಗ, ಹಾಗೂ ಅವನು ವಾಸವಾಗಿರುವ ಜಾಗದ ಸುತ್ತ-ಮುತ್ತಲಿನ ವಾತಾವರಣವೂ ಅಶುದ್ಧವಾಗುತ್ತದೆ. ಈ ಪರಿಣಾಮವು ಆ ಅಶುದ್ಧ ವ್ಯಕ್ತಿಯ ನೆರಳು ಎಲ್ಲಿಯವರೆಗೆ ಬೀಳುವುದೋ ಅಷ್ಟು ಪರಿಸರದಲ್ಲಿಯಂತು ಖಾತ್ರಿಯಿಂದ ಹಾಗೂ ಅಧಿಕಾಧಿಕವಾಗುತ್ತದೆ. ಇದರ ಪ್ರತ್ಯಕ್ಷ ಅನುಭವ ಅನೇಕ ಪ್ರಸಂಗದಲ್ಲಿ ಬರುತ್ತದೆ. ಯಾವದಾದರೊಂದು ದಷ್ಟಪುಷ್ಟ ಬಾಲಕನ ಮೇಲೆ ರಜಸ್ವಲೆಯ ನೆರಳು ಬಿದ್ದರೆ ಮುಟ್ಟುದೋಷದಿಂದ ಬಾಲೆಗೆ ಮುಡದುಸ್ (ರಿಕೆಟ್ಸ) ವಾಗುವುದು. ಬಹಿಷ್ಠೆ ತಾಯಿಯ ಮೈಹಾಲು ಕುಡಿದ ಬಾಲೆಗೆ ರೋಗರುಜಿನವಾಗುತ್ತದೆಯಾಗಿ ಅನುಭವವಿರುತ್ತದೆ.

ಎಷ್ಟು ದುಃಖದ ಸಂಗತಿಯಿದು, ಮುಂದಿನ ಪೀಳಿಗೆಯ ಜನ್ಮ ಕೊಡುವ ತಂದೆ-ತಾಯಂದಿರು ಅತ್ತ ಕಡೆಗೆ ಗಮನ ಕೊಡುವದಿಲ್ಲ. ಇಂಥ ನಮ್ಮ ಹಿರಿಯರು ಹಾಕಿಕೊಟ್ಟ ನಿಯಮವನ್ನು ಪಾಲಿಸುವುದಿಲ್ಲ. ಅದರಿಂದ ಸಮಾಜದಲ್ಲಿ ಬಹು ಸಂಖ್ಯ ಇಂಥ ವ್ಯಂಗ ಪಂಗು ಅವಲಕ್ಷಣವುಳ್ಳ ಬಾಲಕರ ಜನನ ಹೆಚ್ಚಾಗಿದ್ದು ಆ ಬಗ್ಗೆ ಹಿಂದಿನಿಂದ ಮಾತ್ರ ದೇವರಿಗೆ ದೂರುತ್ತಾರೆ. ಹಾಗೂ ಡಾಕ್ಟರರ, ವೈದ್ಯರ ಇಂಜಕ್ಷನ್ ಆಪರೇಷನ್ ಗುಳಿಗೆ ಟಾನಿಕುಗಳ ಬಿಲ್ಲು ತುಂಬುತ್ತ ಜರ್ಜರಿತ ಸಾಂಪತ್ತಿಕ ಸ್ಥಿತಿಗೆ ಬಂದು ಮುಟ್ಟುತ್ತಾರೆ. ತಾವು ಭುಂಜಿಸುವ ಪದಾರ್ಥಗಳ ಮೇಲೆ ಅವರ ದೃಷ್ಟಿ ಬೀಳಕೂಡದು. ಇಷ್ಟು ಅವರಲ್ಲಿ ಅಪವಿತ್ರತೆ ಇರುತ್ತದೆ. ಇವೆಲ್ಲ ಸಂಗತಿ ಅನುಭವ ಸಿದ್ಧ ಮತ್ತು ಪ್ರತ್ಯಕ್ಷವಿರುವಾಗ ರಜಸ್ವಲೆಯು ಪೃಥಕ್ ಕೂಡ್ರದಿರುವುದು ಹಾಗೂ ಅವಳ ಸ್ಪರ್ಶ, ಸಹವಾಸ, ಅವಳ ಕೈ ನೀರು, ಅಡಿಗೆ ಮುಂತಾದರ ಪರಿಣಾಮ ಎಷ್ಟು ಭಯಂಕರವಾಗಿರುತ್ತಿರಬಹುದು ಎಂಬುದರ ವಿಚಾರ ಓದುಗರೇ ಮಾಡಬೇಕು.

**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಽಫಲಾಃ ಕ್ರಿಯಾಃ ॥**



ಪರಿಶಿಷ್ಟ - ೩

# ತೀರ್ಥ ಕ್ಷೇತ್ರ ದರ್ಶನ



ಶ್ರೀ ಬದರೀಶ ಪಂಚಾಯತನ



ಶ್ರೀ ಬದರೀನಾಥ ಮಂದಿರ



ಲಕ್ಷ್ಮಣ ಝೂಲಾ, ಹೃಷೀಕೇಶ



ಗಂಗಾ ಆರುತಿ ದರ್ಶನ ಬ್ರಹ್ಮಕುಂಡ, ಹರಿದ್ವಾರ



ಶ್ರೀ ದ್ವಾರಕಾಧೀಶ - ಮಥುರಾ



ಶ್ರೀದ್ವಾರಕಾನಾಥ ಮಂದಿರ - ದ್ವಾರಕಾ



ಶ್ರೀ ದ್ವಾರಕಾನಾಥ ದರ್ಶನ - ದ್ವಾರಕಾ



ರುಕ್ಮಿಣೀ ಮಂದಿರ - ದ್ವಾರಕಾ



ಶ್ರೀ ರಾಮ ಜನ್ಮಭೂಮಿ - ಅಯೋಧ್ಯಾ



ಕನಕ ಭವನ - ಅಯೋಧ್ಯಾ



ಶ್ರೀ ವಿಷ್ಣುಪಾದ ದರ್ಶನ - ಗಯಾ



ಶ್ರೀ ಕೃಷ್ಣ ಪಾದುಕಾ ದರ್ಶನ - ಪ್ರಭಾಸ ಕ್ಷೇತ್ರ




ಶ್ರೀ ಗಯಾ ಕ್ಷೇತ್ರ ದರ್ಶನ



ಶ್ರೀ ಕಾಶೀ ವಿಶ್ವನಾಥ ದರ್ಶನ



ಶ್ರೀ ಅನ್ನಪೂರ್ಣಾ ದರ್ಶನ



**ಶ್ರೀ ಪುರೀ ಜಗನ್ನಾಥ ದರ್ಶನ**



**ಶ್ರೀ ಜಗನ್ನಾಥ ರಥಯಾತ್ರಾ**



ಶ್ರೀ ಪಂಚಮುಖ ಪ್ರಾಣದೇವರು - ಗಾಣಧಾಳ



ಶ್ರೀ ವೆಂಕಟೇಶ್ವರ ಸುವರ್ಣ ಮಂದಿರ - ತಿರುಮಲೈ



ತಿರುಪತಿ - ತಿರುಮಲೈ ದರ್ಶನ



ಶ್ರೀ ಮೀನಾಕ್ಷಿ ದರ್ಶನ - ಮಧುರೈ



ಶ್ರೀ ರಾಮೇಶ್ವರ ಮಂದಿರ




ಶ್ರೀ ದ್ವಾದಶ ಜ್ಯೋತಿರ್ಲಿಂಗ ದರ್ಶನ



ಶ್ರೀ ಅನಂತ ಪದ್ಮನಾಭ ದರ್ಶನ



ಶ್ರೀ ಅನಂತಪದ್ಮನಾಭ ಮಂದಿರ - ತಿರುವನಂತಪುರಂ



**ಶ್ರೀ ದೇವೀ ಕನ್ಯಾಕುಮಾರೀ**



**ಕನ್ಯಾಕುಮಾರೀ ಮಂದಿರ**



ಉಡುಪಿ ಶ್ರೀಕೃಷ್ಣ ದರ್ಶನ (ಮೂಲ ವಿಗ್ರಹ)



ಅಲಂಕಾರ



ವಜ್ರಕವಚಧಾರಿ

# ಅಷ್ಟ ವಿನಾಯಕ ದರ್ಶನ



# ಶ್ರೀಹರಿವಾಯು ಗುರುಗಳ ದರ್ಶನ


ಉಡುಪಿ ಶ್ರೀಕೃಷ್ಣ


ಕೊಲ್ಹಾಪೂರ ಮಹಾಲಕ್ಷ್ಮೀ


ಅವತಾರತ್ರಯ ಮುಖ್ಯಪ್ರಾಣದೇವರು


ಯಂತ್ರೋದ್ಧಾರ ಪ್ರಾಣದೇವರು


ಶ್ರೀ ಮಧ್ವಾಚಾರ್ಯರು


ಶ್ರೀ ಪದ್ಮನಾಭತೀರ್ಥರು


ಶ್ರೀ ನರಹರಿ ತೀರ್ಥರು


ಶ್ರೀ ಮಾಧವ ತೀರ್ಥರು


ಶ್ರೀ ಅಕ್ಷೋಭ್ಯತೀರ್ಥರು


ಶ್ರೀ ಜಯತೀರ್ಥರು


ಶ್ರೀ ಶ್ರೀಪಾದರಾಜರು


ಶ್ರೀ ವ್ಯಾಸರಾಜರು


ಶ್ರೀ ವಿಜಯೀಂದ್ರತೀರ್ಥರು


ಶ್ರೀ ವಾದಿರಾಜರು


ಶ್ರೀ ರಘೂತ್ತಮತೀರ್ಥರು


ಶ್ರೀ ರಾಘವೇಂದ್ರತೀರ್ಥರು


ಶ್ರೀ ವಾದೀಂದ್ರತೀರ್ಥರು


ಶ್ರೀ ವರದೇಂದ್ರತೀರ್ಥರು


ಶ್ರೀ ಧೀರೇಂದ್ರತೀರ್ಥರು


ಶ್ರೀ ಸತ್ಯಬೋಧತೀರ್ಥರು



ಶ್ರೀ ಪಂಚಮುಖಿ ವೆಂಕಟಾರ್ಯ ಕರಾರ್ಚಿತ ಪಂಚಮುಖಿ ಪ್ರಾಣದೇವರು

## ಪರಿಶಿಷ್ಟ - ೪

## ಶ್ರೀಹರಿಗುರುನಾಮ ಸಂಕೀರ್ತನೆ ಮತ್ತು ಗುರುಮಂತ್ರಪಠಣ

ಭಗವದ್ಭಕ್ತರೇ!

ಕಲಿಬಾಧೆಯಿಂದ ದೂರಾಗಲು ಪ್ರತಿಯೊಬ್ಬರೂ ಪ್ರತಿದಿನ ಶ್ರೀಹರಿಯ ನಾಮಗಳ ಮತ್ತು ಗುರುಗಳ ನಾಮಗಳ ಸಂಕೀರ್ತನೆಯನ್ನು ಹಾಗೂ ಗುರುಮಂತ್ರ ಜಪವನ್ನು ಮಾಡಬೇಕೆಂದು ಜ್ಞಾನಿಗಳು ಹೇಳುತ್ತಾರೆ. ಶ್ರೀ ಹರಿ ಹಾಗೂ ಗುರುಗಳ ನಾಮಗಳನ್ನು ಜಪಿಸಲು ಅನುಕೂಲವಾಗಲೆಂದು ಈ ನಾಮಗಳ ಸಂಕೀರ್ತನೆಯ ಬಗ್ಗೆ ಕೆಲವು ವಿಷಯಗಳನ್ನು ಈಗ ನಿರೂಪಿಸಲಾಗುವುದು. ಈ ನಾಮಗಳನ್ನು ಮತ್ತು ಮಂತ್ರವನ್ನು ಗುರುಗಳಿಂದ ಉಪದೇಶಪೂರ್ವಕ ಪಡೆದು ಪ್ರತಿದಿನ ಯಥಾವಕಾಶ ಜಪಿಸಿ ಶ್ರೀ ಹರಿವಾಯುಗುರುಗಳಲ್ಲಿ ಸಮರ್ಪಿಸಬೇಕು.

ಒಂದು ವಹಿಯಲ್ಲಿ ಪ್ರತಿದಿನದ ಸಂಕೀರ್ತನೆ ಹಾಗೂ ಮಂತ್ರಜಪದ ಸಂಖ್ಯೆಯನ್ನು ಬರೆದಿಡಬೇಕು. ಪ್ರಾರಂಭದ ದಿನ ಸಂಕಲ್ಪಿಸಿದಷ್ಟು ನಾಮಸಂಕೀರ್ತನೆ ಮತ್ತು ಜಪವನ್ನು ಮಾಡುವುದಾದ ಮೇಲೆ ಮನೆಯಲ್ಲಿ ವಿಶೇಷಪೂಜಾದಿಗಳನ್ನು ನಡೆಸಿ ಬ್ರಾಹ್ಮಣ ಸಮಾರಾಧನೆಯನ್ನು ನಡೆಸಬೇಕು.

೧. ಶ್ರೀಹರಿನಾಮ ಸಂಕೀರ್ತನೆ

**ಕೃತೇ ಯದ್ಧ್ಯಾಯತೋ ವಿಷ್ಣುಂ ತ್ರೇತಾಯಾಂ ಯಜತೋ ಮಖೈಃ ।**
**ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್ ॥೫೨॥**

(- ಭಾಗವತ ೧೨.೩)

- ಕೃತ ಯುಗದಲ್ಲಿ ಶ್ರೀಹರಿಯ ಅಖಂಡಧ್ಯಾನದಿಂದಲೂ, ತ್ರೇತಾಯುಗದಲ್ಲಿ ಶ್ರೀಹರಿಯನ್ನು ಉದ್ದೇಶಿಸಿ ಮಾಡುವ ವಿವಿಧ ಯಜ್ಞ ಯಾಗಾದಿಗಳಿಂದಲೂ, ದ್ವಾಪರದಲ್ಲಿ ಶ್ರೀ ಹರಿಯ ಷೋಡಶೋಪಚಾರ ಪೂಜೆಗಳಿಂದಲೂ ಆಯಾ ಯುಗದ ಜನರಿಗೆ ಯಾವ ಶ್ರೇಷ್ಠವಾದ ಮೋಕ್ಷಾಖ್ಯ ಫಲವನ್ನು ಹೊಂದಲು ಸಾಧ್ಯವಾಗುತ್ತಿದ್ದಿತೋ ಅದೇ ಫಲವನ್ನು ಕಲಿಯುಗದಲ್ಲಿ ಜನರು ಹರಿನಾಮಸಂಕೀರ್ತನೆ ಮಾತ್ರದಿಂದ ಹೊಂದಬಹುದಾಗಿದೆ ಎಂದು ಭಾಗವತದಲ್ಲಿ ಶ್ರೀ ಶುಕಾಚಾರ್ಯರು ಪರೀಕ್ಷಿತರಾಜನಿಗೆ ಹರಿನಾಮ ಸಂಕೀರ್ತನೆಯ ಮಹತ್ವವನ್ನು ತಿಳಿಸುತ್ತಾರೆ. ಇದೇ ವಿಷಯವನ್ನು ಶ್ರೀ ಶ್ರೀ ಪಾದರಾಯರು .........

**'ಧ್ಯಾನವು ಕೃತಯುಗದಿ । ಯಜನ ಯಜ್ಞವು ತ್ರೇತಾಯುಗದಿ । ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ । ಆ ಮಾನವರಿಗೆಷ್ಟು ಅಷ್ಟು ಫಲವು ಕಲಿಯುಗದಿ । ಗಾನದಲಿ ಕೇಶವ ಎನಲು ಕೈಗೂಡುವನು ರಂಗವಿಠ್ಠಲ'** ಎಂದು ಹೇಳಿದರೆ **"ಕಲಿಯುಗದೊಳು ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವೋ ರಂಗಾ"** ಎಂದು ದಾಸವರ್ಯ ಶ್ರೀಪುರಂದರದಾಸರು ಹರಿನಾಮ ಸ್ಮರಣೆಯ ಮಹತ್ವವನ್ನು ತಿಳಿಸಿದ್ದಾರೆ.'

**ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।**
**ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥**

- (ಪದ್ಮಪುರಾಣ ಉತ್ತರ ಖಂಡ ೯೪)

- "ಹೇ ನಾರದಾ ! ನಾನು ವೈಕುಂಠದಲ್ಲಾಗಲೀ, ಯೋಗಿಗಳ ಹೃದಯದಲ್ಲಾಗಲೀ ವಾಸಿಸುವುದಿಲ್ಲ. ಆದರೆ ನನ್ನ ಭಕ್ತರು ಎಲ್ಲಿ ನನ್ನ ನಾಮಗಳ ಸಂಕೀರ್ತನೆಯನ್ನು ಮಾಡುವರೋ ಅಲ್ಲಿ ನಿಶ್ಚಯವಾಗಿ ಸನ್ನಿಹಿತನಾಗಿರುವೆನು." ಎಂದು ಸ್ವತಃ ಶ್ರೀಹರಿಯೇ ಶ್ರೀಹರಿನಾಮ ಸಂಕೀರ್ತನೆಯ ಮಹತ್ವವನ್ನು ತಿಳಿಸಿದ್ದಾನೆ.

ಶ್ರೀ ಹರಿಯ ನಾಮಸಂಕೀರ್ತನೆಯಿಂದ ಆಗುವ ಪ್ರಯೋಜನಗಳು -

೧. **ಸರ್ವರೋಗೋಪಶಮನಂ ಸರ್ವೋಪದ್ರವನಾಶನಮ್ ।**
**ಶಾಂತಿದಂ ಸರ್ವಾರಿಷ್ಟಾನಾಂ ಹರೇರ್ನಾಮಾನುಕೀರ್ತನಮ್ ॥**

- (ಬೃಹನ್ನಾರದೀಯ ಪುರಾಣ)

- ಶ್ರೀಹರಿಯ ನಾಮಸ್ಮರಣೆಯಿಂದ ಸರ್ವರೋಗಗಳು ದೂರವಾಗುತ್ತವೆ. ಸರ್ವೋಪದ್ರವಗಳು ಇಲ್ಲವಾಗುತ್ತವೆ, ಸಕಲ ಅರಿಷ್ಟಗಳ ನಿವಾರಣೆಯಾಗುತ್ತದೆ.

೨. **ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।**
**ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿಲಭ್ಯತೇ ॥೩೬॥**

**ನ ಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ ।**
**ಯತೋ ವಿಂದೇತ ಪರಮಾಂ ಶಾಂತಿಂ ನಶ್ಯತಿ ಸಂಸೃತಿಃ ॥೩೭॥**

(ಭಾಗವತ ಪುರಾಣ ೧೧.೫)

- ಸಾರಾಸಾರವಿವೇಕಿಗಳಾದ ಜ್ಞಾನಿಗಳು ಕಲಿಯುಗವನ್ನು ಪ್ರಶಂಸಿಸುತ್ತಾರೆ. ಏಕೆಂದರೆ ಈ ಕಲಿಯುಗದಲ್ಲಿ ಶ್ರೀ ಹರಿನಾಮಸ್ಮರಣೆ ಮಾತ್ರದಿಂದ ಧರ್ಮಾರ್ಥಕಾಮಗಳು ಲಭಿಸುತ್ತವೆ. ಸಂಸಾರಬಂಧವು ನಾಶವಾಗಿ ಮುಕ್ತಿಯೂ ಲಭಿಸುತ್ತದೆ.

ಶ್ರೀಹರಿಯ ನಾಮಗಳು ಅನಂತವಾಗಿದ್ದು ಯಾವ ನಾಮದ ಸಂಕೀರ್ತನೆಯನ್ನು ಮಾಡಬೇಕು? ಸಂಕೀರ್ತನೆಯ ವಿಧಿ ವಿಧಾನಗಳೇನು? ಎಷ್ಟು ಸಲ ನಾಮ ಸಂಕೀರ್ತನೆಯನ್ನು ಮಾಡಬೇಕು? ಈ ನಾಮ ಸಂಕೀರ್ತನೆಯಿಂದಾಗುವ ಅನಿಷ್ಟ ನಿವಾರಣೆಗಳಾವುವು? ಮತ್ತು ಇಷ್ಟಾರ್ಥಪ್ರಾಪ್ತಿ ಯಾವುದು? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರವನ್ನು '**ಕಲಿಸಂತರಣೋಪನಿಷತ್**'ನಲ್ಲಿ ಕಾಣಬಹುದು.

## ಕಲಿಸಂತರಣೋಪನಿಷತ್

"ಓಂ ಸಹ ನಾವವತು ಇತ್ಯಾದಿ ಶಾಂತಿಃ॥"

॥ಹರಿಃ ಓಂ ॥ ದ್ವಾಪರಾಂತೇ ನಾರದೋ ಬ್ರಹ್ಮಾಣಂ ಜಗಾಮ ಕಥಂ ಭಗವನ್ ಗಾಂ ಪರ್ಯಟನ್ ಕಲಿಂ ಸಂತರೇಯಮಿತಿ । ಸ ಹೋವಾಚ ಬ್ರಹ್ಮಾಸಾಧು ಪೃಷ್ಟೋಽಸ್ಮಿ ಸರ್ವಶ್ರುತಿರಹಸ್ಯಂ ಗೋಪ್ಯಂ ತಚ್ಛೃಣು ಯೇನ ಕಲಿಸಂಸಾರಂ ತರಿಷ್ಯಸಿ । ಭಗವತ

ಆದಿಪುರುಷಸ್ಯ ನಾರಾಯಣಸ್ಯ ನಾಮೋಚ್ಚಾರಣಮಾತ್ರೇಣ ನಿರ್ಧೂತಕಲಿರ್ಭವತಿ । ನಾರದಃ ಪುನಃ ಪಪ್ರಚ್ಛ ತನ್ನಾಮ ಕಿಮಿತಿ । ಸ ಹೋವಾಚ ಹಿರಣ್ಯಗರ್ಭಃ -

**ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।**
**ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥೧॥**
**ಇತಿ ಷೋಡಶಕಂ ನಾಮ್ನಾಂ ಕಲಿಕಲ್ಮಷನಾಶನಮ್ ।**
**ನಾತಃ ಪರತರೋಪಾಯಃ ಸರ್ವವೇದೇಷು ದೃಶ್ಯತೇ ॥೨॥**

ಇತಿ ಷೋಡಶಕಲಾವೃತಸ್ಯ ಜೀವಸ್ಯಾವರಣವಿನಾಶನಮ್ । ತತಃ ಪ್ರಕಾಶತೇ ಪರಂ ಬ್ರಹ್ಮ ಮೇಘಾಪಾಯೇ ರವಿರಶ್ಮಿಮಂಡಲೀವೇತಿ । ಪುನರ್ನಾರದಃ ಪಪ್ರಚ್ಛ ಭಗವನ್ಕೋಽಸ್ಯ ವಿಧಿರಿತಿ । ತಂ ಹೋವಾಚ ನಾಸ್ಯ ವಿಧಿರಿತಿ ।ಸರ್ವದಾ ಶುಚಿರಶುಚಿಃ ವಾ ಪಠನ್ ಬ್ರಾಹ್ಮಣಃ ಸಲೋಕತಾಂ ಸಮೀಪತಾಂ ಸರೂಪತಾಂ ಸಾಯುಜ್ಯತಾಮೇತಿ । ಯದಾಽಸ್ಯ ಷೋಡಶೀಕಸ್ಯ ಸಾರ್ಧತ್ರಿಕೋಟೀರ್ಜಪತಿ ತದಾ ಬ್ರಹ್ಮಹತ್ಯಾಂ ತರತಿ। ತರತಿ ವೀರಹತ್ಯಾಮ್ । ಸ್ವರ್ಣಸ್ತೇಯಾತ್ಪೂತೋ ಭವತಿ । ಪಿತೃದೇವಮನುಷ್ಯಾಣಾಮಪಕಾರಾತ್ಪೂತೋ ಭವತಿ । ಸರ್ವಧರ್ಮಪರಿತ್ಯಾಗ ಪಾಪಾತ್ಸದ್ಯಃ ಶುಚಿತಾಮಾಪ್ನುಯಾತ್ । ಸದ್ಯೋ ಮುಚ್ಯತೇ ಸದ್ಯೋ ಮುಚ್ಯತೇ ಇತ್ಯುಪನಿಷತ್ ॥೩॥ ಹರಿಃ ಓಂ ತತ್ಸತ್ ॥ **॥ ಓಂ ಸಹ ನಾವವತು ಇತಿ ಶಾಂತಿಃ ॥**

**॥ ಇತಿ ಕಲಿಸಂತರಣೋಪನಿಷತ್ ಸಮಾಪ್ತಾ ॥**

**ಅರ್ಥ:** ದ್ವಾಪರಯುಗವು ಮುಗಿದಿದೆ. ಇನ್ನೇನು ಕಲಿಯುಗದ ಪ್ರಾರಂಭ. ಆಗ ನಾರದರು ತಂದೆಯಾದ ಚತುರ್ಮುಖ ಬ್ರಹ್ಮದೇವರಿದ್ದಲ್ಲಿ ಹೋಗಿ - 'ಭಗವನ್! ಸದಾ ಭೂಮಿ ಆಕಾಶ ಸ್ವರ್ಗಲೋಕ ಮೊದಲಾದೆಡೆ ಸಂಚರಿಸುತ್ತಿರುವ ನಾನು ಕಲಿಯ ಪ್ರಭಾವದಿಂದ ಹೇಗೆ ಮುಕ್ತನಾದೇನು?' ಎಂದು ಪ್ರಶ್ನಿಸಿದನು. ಆಗ ಬ್ರಹ್ಮದೇವರು ಹೇಳಿದರು. ' "ನಾರದಾ! ಬಹಳ ಶ್ರೇಷ್ಠವಾದ ಪ್ರಶ್ನೆಯನ್ನು ಮಾಡಿರುವಿ. ಯಾವುದರಿಂದ ಕಲಿಕಾಲದ ಬಾಧೆಯಿಂದ ಪಾರಾಗುವಿಯೋ ಅಂಥ ಪರಮ ಗೌಪ್ಯವಾದ ಸರ್ವಶ್ರುತಿ ರಹಸ್ಯವನ್ನು ತಿಳಿಸುವೆನು ಕೇಳು. ಆದಿಪುರುಷನಾದ ಭಗವಾನ್ ನಾರಾಯಣನ ನಾಮ ಸಂಕೀರ್ತನೆ ಮಾತ್ರದಿಂದ ಕಲಿಕಲ್ಮಷಗಳಿಂದ ಪಾರಾಗುವಿ." "ಭಗವಂತನ ಅನಂತನಾಮಗಳಲ್ಲಿ ಯಾವ ನಾಮದ ಸಂಕೀರ್ತನೆ ಮಾಡಬೇಕು?" ಎಂದು ನಾರದರು ಮತ್ತೆ ವಿಚಾರಿಸಲು ಹಿರಣ್ಯಗರ್ಭ ಬ್ರಹ್ಮದೇವರು ಹೇಳಿದರು." -

**"ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।**
**ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥"**

ಎಂಬ ಶ್ರೀ ಹರಿಯ ಹದಿನಾರು ನಾಮಗಳು ಕಲಿಕಲ್ಮಷವನ್ನು ಕಳೆಯುವವು. ಸಕಲವೇದಗಳನ್ನು ಶೋಧಿಸಿದರೂ ಕಲಿಕಲ್ಮಷಗಳಿಂದ ಪಾರಾಗಲು ಇದಕ್ಕಿಂತ ಶ್ರೇಷ್ಠವಾದ ಉಪಾಯವು ದೊರೆಯುವುದಿಲ್ಲ. ಈ ನಾಮಗಳ ಸಂಕೀರ್ತನೆಯಿಂದ ಷೋಡಶಕಲಾವೃತವಾದ ಜೀವನ ಆವರಣಗಳು ನಾಶವಾಗುವವು. ಜೀವನ ಆವರಣಗಳು ನಾಶವಾದ ನಂತರ ಆವೃತವಾದ ಮೇಘಗಳು ದೂರಾದಾಗ ಸೂರ್ಯಮಂಡಲವು ಪ್ರಕಾಶಿಸುವಂತೆ, ಪರಬ್ರಹ್ಮನು ದೃಷ್ಟಿಗೋಚರನಾಗುತ್ತಾನೆ.

"ಭಗವನ್! ಈ ಹದಿನಾರು ಹರಿನಾಮಗಳ ಸಂಕೀರ್ತನೆಯ ವಿಧಿ ಏನು?"ಎಂದು ನಾರದರು ಪ್ರಶ್ನಿಸಲು ಬ್ರಹ್ಮದೇವರು ಹೇಳಿದರು- "ನಾರದಾ ! ನಾಮ ಸಂಕೀರ್ತನೆಗೆ ಯಾವ ವಿಧಿಯೂ ಇಲ್ಲ. ಶುಚಿಯಾಗಿರಲಿ ಅಶುಚಿಯಾಗಿರಲಿ ಸರ್ವದಾ ಈ ನಾಮಗಳನ್ನು ಪಠಿಸುವ ಬ್ರಾಹ್ಮಣನು ಶ್ರೀಹರಿಯ ಸಾಲೋಕ್ಯವನ್ನಾಗಲೀ, ಸಾಮೀಪ್ಯವನ್ನಾಗಲೀ, ಸಾರೂಪ್ಯವನ್ನಾಗಲಿ ಅಥವಾ ಸಾಯುಜ್ಯವನ್ನಾಗಲಿ ಪಡೆಯುತ್ತಾನೆ. ಈ ಹದಿನಾರು ಭಗವನ್ನಾಮಗಳನ್ನು ಮೂರುವರಿ (೩.೫) ಕೋಟಿ ಸಲ ಜಪಿಸಿದರೆ ಬ್ರಹ್ಮಹತ್ಯಾಪಾಪದಿಂದ ಮತ್ತು ವೀರಹತ್ಯೆಯಿಂದ ಮುಕ್ತನಾಗುತ್ತಾನೆ. ಸ್ವರ್ಣಚೌರ್ಯದ ಪಾಪವನ್ನು ಕಳೆದುಕೊಂಡು ಪವಿತ್ರನಾಗುತ್ತಾನೆ. ಪಿತೃಗಳು, ದೇವತೆಗಳು ಹಾಗೂ ಮನುಷ್ಯರಿಗೆ ಮಾಡಿದ ಅಪಕಾರಗಳಿಂದಾದ ದೋಷಗಳಿಂದ ಮುಕ್ತನಾಗಿ ಶುದ್ಧನಾಗುತ್ತಾನೆ. ವರ್ಣಾಶ್ರಮೋಚಿತವಾದ ಸರ್ವಧರ್ಮಗಳ ಪರಿತ್ಯಾಗದಿಂದ ಬಂದ ಪಾಪಗಳಿಂದ ಕೂಡಲೇ ಮುಕ್ತನಾಗುತ್ತಾನೆ. ನಾಮಸಂಕೀರ್ತನೆಯಿಂದ ತಡವಿಲ್ಲದೇ ಸರ್ವ ಪಾಪಗಳಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುತ್ತಾನೆ." ।। ಇಲ್ಲಿಗೆ ಕಲಿ **ಸಂತರಣೋಪನಿಷತ್ತು** ಸಮಾಪ್ತವಾಯಿತು.।।

**೨. ಗುರುನಾಮ ಸಂಕೀರ್ತನೆ**

ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ಪಾಹಿ ಮಾಮ್ ।
ರಾಘವೇಂದ್ರ ರಾಘವೇಂದ್ರ ರಾಘವೇಂದ್ರ ರಕ್ಷ ಮಾಮ್ ।।

**೩. ಗುರುಮಂತ್ರ ಜಪ**

ಶ್ರೀ ರಾಘವೇಂದ್ರ ಅಷ್ಟಾಕ್ಷರಸ್ತೋತ್ರ:- ಶ್ರೀ ಗುರುಜಗನ್ನಾಥದಾಸ ವಿರಚಿತ ಸ್ತೋತ್ರದಲ್ಲಿ "ಶ್ರೀ ರಾಘವೇಂದ್ರಾಯ ನಮಃ"ಎಂಬ ಅಷ್ಟಾಕ್ಷರಿ ಮಂತ್ರದೊಳಗಿರುವ ರಕಾರ (ರೇಫ), ಘಕಾರ, ವಕಾರ, ದ್ರಕಾರ, ಯಕಾರ, ನಕಾರ ಮತ್ತು ಮಕಾರಗಳ ಉಚ್ಚಾರಣೆಯಿಂದ ಲಭಿಸುವ ಫಲಗಳನ್ನು ತಿಳಿಸಲಾಗಿದೆ.

ಶ್ರೀಕಾರೋಚ್ಚಾರಣೆಯಿಂದ ಜ್ಞಾನಭಕ್ತ್ಯಾದಿ ಸಂಪತ್ತು ಲಭಿಸುವದೆಂಬುದು ಪ್ರಸಿದ್ಧವಾಗಿರುವುದರಿಂದ ಅದನ್ನು ಈ ಸ್ತೋತ್ರದಲ್ಲಿ ಪ್ರತ್ಯೇಕವಾಗಿ ಕಾಣಿಸಿಲ್ಲ.

## ।। ಶ್ರೀ ರಾಘವೇಂದ್ರಾಷ್ಟಾಕ್ಷರಸ್ತೋತ್ರಂ ।।

ಗುರುರಾಜಾಷ್ಟಾಕ್ಷರಂ ಸ್ಯಾತ್ ಮಹಾಪಾತಕನಾಶನಮ್ ।
ಏಕೈಕಮಕ್ಷರಂ ಚಾತ್ರ ಸರ್ವಕಾಮ್ಯಾರ್ಥಸಿದ್ಧಿದಮ್ ।।೧।।

ರಕಾರೋಚ್ಚಾರಮಾತ್ರೇಣ ರೋಗಹಾನಿರ್ನ ಸಂಶಯಃ ।
ಘಕಾರೇಣ ಬಲಂ ಪುಷ್ಟಿಃ ಆಯುಃ ತೇಜಶ್ಚ ವರ್ಧತೇ ।।೨।।
ವಕಾರೇಣಾತ್ರ ಲಭತೇ ವಾಂಛಿತಾರ್ಥಾನ್ನ ಸಂಶಯಃ।
ದ್ರಕಾರೇಣಾಘರಾಶಿಸ್ತು ದ್ರಾವ್ಯತೇ ದ್ರುತಮೇವ ಹಿ ।।೩।।

ಯಕಾರೇಣ ಯಮಾದ್ಬಾಧೋ ವಾರ್ಯತೇ ನಾತ್ರ ಸಂಶಯಃ ।
ನಕಾರೇಣ ನರೇಂದ್ರಾಣಾಂ ಪದಮಾಪ್ನೋತಿ ಮಾನವಃ ॥೪॥

ಮಕಾರೇಣೈವ ಮಾಹೇಂದ್ರಮೈಶ್ವರ್ಯಂ ಯಾತಿ ಮಾನವಃ ।
ಗುರೋರ್ನಾಮ್ನಶ್ಚ ಮಾಹಾತ್ಮ್ಯಂ ಅಪೂರ್ವಂ ಪರಮಾದ್ಭುತಮ್ ॥೫॥

ತನ್ನಾಮಸ್ಮರಣಾದೇವ ಸರ್ವಾಭೀಷ್ಟಂ ಪ್ರಸಿಧ್ಯತಿ ।
ತಸ್ಮಾನ್ನಿತ್ಯಂ ಪಠೇದ್ಭಕ್ತ್ಯಾ ಗುರುಪಾದರತಸ್ಸದಾ ॥೬॥

ಶ್ರೀರಾಘವೇಂದ್ರಾಯ ನಮಃ ಇತ್ಯಷ್ಟಾಕ್ಷರಮಂತ್ರತಃ ।
ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೭॥

ಅಷ್ಟೋತ್ತರಶತಾವೃತ್ತಿಂ ಸ್ತೋತ್ರಸ್ಯಾಸ್ಯ ಕರೋತಿ ಯಃ ।
ತಸ್ಯ ಸರ್ವಾರ್ಥಸಿದ್ಧಿಸ್ಸ್ಯಾತ್ ಗುರುರಾಜಪ್ರಸಾದತಃ ॥೮॥

ಏತದಷ್ಟಾಕ್ಷರಸ್ಯಾತ್ರ ಮಾಹಾತ್ಮ್ಯಂ ವೇತ್ತಿ ಕಃ ಪುಮಾನ್ ।
ಪಠನಾದೇವ ಸರ್ವಾರ್ಥಸಿದ್ಧಿರ್ಭವತಿ ನಾನ್ಯಥಾ ॥೯॥

ಸ್ವಾಮಿನಾ ರಾಘವೇಂದ್ರಾಖ್ಯ ಗುರುಪಾದಾಬ್ಜಸೇವಿನಾ ।
ಕೃತಮಷ್ಟಾಕ್ಷರಸ್ತೋತ್ರಂ ಗುರುಪ್ರೀತಿಕರಂ ಶುಭಮ್ ॥೧೦॥

**॥ಇತಿ ಶ್ರೀ ಗುರುಜಗನ್ನಾಥದಾಸಾರ್ಯವಿರಚಿತ ಶ್ರೀ ರಾಘವೇಂದ್ರ ಅಷ್ಟಾಕ್ಷರ ಸ್ತೋತ್ರಂ ಸಂಪೂರ್ಣಂ ॥ ಶ್ರೀ ಕೃಷ್ಣಾರ್ಪಣಮಸ್ತು ॥**

ಶ್ರೀ ಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ "ಶ್ರೀರಾಘವೇಂದ್ರಾಯ ನಮಃ" ಎಂಬ ಅಷ್ಟಾಕ್ಷರ ಮಂತ್ರವು ಮಹಾಪಾತಕಗಳನ್ನು ಕಳೆಯುವಂಥದಾಗಿದೆ. ಇದರಲ್ಲಿರುವ ಒಂದೊಂದು ಅಕ್ಷರವೂ ಸರ್ವ ಕಾಮ್ಯಾರ್ಥಗಳನ್ನು ಕೊಡುವಂಥದಾಗಿದೆ. ॥೧॥ ರಕಾರದ ಉಚ್ಚಾರಣೆಯಿಂದ ರೋಗಹಾನಿಯಾಗುವಲ್ಲಿ ಸಂಶಯವಿಲ್ಲ. ಘಕಾರದ ಉಚ್ಚಾರದಿಂದ ಬಲ, ಪುಷ್ಟಿ, ಆಯುಷ್ಯ ಮತ್ತು ತೇಜಸ್ಸು (ಶರೀರದ ಕಾಂತಿ) ವರ್ಧಿಸುತ್ತವೆ. ॥೨॥ ವಕಾರೋಚ್ಚಾರದಿಂದ ಭಕ್ತನು ವಾಂಛಿತಾರ್ಥಗಳನ್ನೆಲ್ಲ ಪಡೆಯುತ್ತಾನೆ. ದ್ರಕಾರದ ಉಚ್ಚಾರಣದಿಂದ ಪಾಪಗಳ ರಾಶಿಯು ಕೂಡಲೇ ಓಡಿಸಲ್ಪಡುತ್ತದೆ. ॥೩॥ ಯಕಾರದ ಉಚ್ಚಾರದಿಂದ ಯಮ ಬಾಧೆಯು ನಿಶ್ಚಿತವಾಗಿ ನಿವಾರಿಸಲ್ಪಡುತ್ತದೆ. ನಕಾರದ ಉಚ್ಚಾರದಿಂದ ಭಕ್ತನು ರಾಜಪದವಿಯನ್ನು (ಉನ್ನತ ಅಧಿಕಾರಗಳ ಸ್ಥಾನವನ್ನು) ಹೊಂದುತ್ತಾನೆ. ॥೪॥ ಮಕಾರೋಚ್ಚಾರದಿಂದ ಇಂದ್ರನ ಐಶ್ವರ್ಯವನ್ನು ಪಡೆಯುವನು. ಈ ರೀತಿ ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ ಹೆಸರಿನ ಮಾಹಾತ್ಮ್ಯವು ಹಿಂದೆಂದೂ ಕಾಣದಂಥದೂ ಪರಮಾಶ್ಚರ್ಯ ಭರಿತವೂ ಆಗಿದೆ. ॥೫॥ ಇವರ ಹೆಸರನ್ನು (ಅಷ್ಟಾಕ್ಷರ ಮಂತ್ರವನ್ನು) ಉಚ್ಚಾರ ಮಾಡುವದಿರಲಿ ಸ್ಮರಣೆ ಮಾಡುವ ಮಾತ್ರದಿಂದಲೇ ಸರ್ವಾಭೀಷ್ಟವೂ

ಲಭಿಸುವುದು. ಆದ್ದರಿಂದ ಗುರುವರ್ಯರ ಪಾದಗಳನ್ನು ಆಶ್ರಯಿಸಿದ ಭಕ್ತನು ಈ ಮಂತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸಬೇಕು. ॥೬॥ ಶ್ರೀರಾಘವೇಂದ್ರಾಯ ನಮಃ (ಶ್ರೀ ರಾಘವೇಂದ್ರರಿಗೆ ನಮಸ್ಕಾರವು) ಎಂಬ ಅಷ್ಟಾಕ್ಷರ ಮಂತ್ರದ ಜಪಮಾಡುವುದರಿಂದ ಭಕ್ತನು ತನ್ನೆಲ್ಲ ಕಾಮನೆಗಳನ್ನು ಪಡೆಯುತ್ತಾನೆ ಎಂಬಲ್ಲಿ ಸಂದೇಹ ಬುದ್ಧಿಯನ್ನು ಮಾಡಕೂಡದು. ॥೭॥ ಯಾವನು ಶ್ರೀಗುರುವರ್ಯರ ಈ ಸ್ತೋತ್ರವನ್ನು ೧೦೮ ಸಲ ಪಠಿಸುವನೋ ಅವನಿಗೆ ಗುರುಸಾರ್ವಭೌಮರ ಅನುಗ್ರಹದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ. ॥೮॥ ಈ ಅಷ್ಟಾಕ್ಷರ ಮಂತ್ರದ ಮಹಾತ್ಮ್ಯೆಯನ್ನು ಯಾವ ಭಕ್ತನು ಸಂಪೂರ್ಣವಾಗಿ ತಿಳಿಯಲು ಸಮರ್ಥನಾದಾನು? ಈ ಅಷ್ಟಾಕ್ಷರ ಮಂತ್ರದ ಪಠಣ ಮಾಡುವ ಮಾತ್ರದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ. ಬೇರೇ ಮಾರ್ಗದಿಂದ ಆಗುವುದಿಲ್ಲ. ॥೯॥ ಶ್ರೀರಾಘವೇಂದ್ರತೀರ್ಥರೆಂಬ ಗುರುವರ್ಯರ ಪಾದಕಮಲಗಳನ್ನು ಸದಾ ಸೇವಿಸುತ್ತಿರುವ ಸ್ವಾಮಿರಾಯ ಎಂಬವರಿಂದ, ಗುರುಗಳಿಗೆ ಪ್ರೀತಿಯನ್ನುಂಟು ಮಾಡುವ ಶುಭಕರವಾದ ಈ ಅಷ್ಟಾಕ್ಷರ ಸ್ತೋತ್ರವು ವಿರಚಿಸಲ್ಪಟ್ಟಿದೆ. ॥೧೦॥

॥ ಇತಿ ಶ್ರೀ ಗುರುಜಗನ್ನಾಥದಾಸಾರ್ಯ ವಿರಚಿತ
ಶ್ರೀ ರಾಘವೇಂದ್ರಾಷ್ಟಾಕ್ಷರ ಸ್ತೋತ್ರವು ಸಮಾಪ್ತವಾಯಿತು ॥
॥ಶ್ರೀ ಕೃಷ್ಣಾರ್ಪಣಮಸ್ತು ॥



# ಪರಿಶಿಷ್ಟ - ೫

## ಚಕ್ರಾಬ್ಜ ಮಂಡಲ ಉಪಾಸನೆ

## ಕಂಕಣಾಕಾರ ಸುಳಾದಿ

### ಧ್ಯಾನೋಪಾಸನಕ್ಕೆ ಮೂಲಭೂತವಾದ ಚಕ್ರಾಬ್ಜಾದಿಮಂಡಲ ವಿವರ

ರಾಗ ಭೈರವಿ ಧ್ರುವತಾಳ

ಕಂಕಣಾಕಾರವನ್ನು ಬರೆದು ಅದಕ ಮಧ್ಯ । ಓಂಕಾರ ಎರಡು ಎಡಬಲದಿ ರಚಿಸಿ। ಶಂಕೆ ಇಲ್ಲದೆ ನಡುವೆ ಘೃಣಿ ಎಂದು ಲಿಪಿಸಿ ಮೀ । ನಾಂಕ ನಯ್ಯನ ಪೀಠಸ್ಥಳವಿದೆಂದು। ಬಿಂಕದಲಿ ಸ್ವರದೊಳಗೆ ಕಡಿಯಣ ಸ್ವರವೆ ಎರಡಾ । ಲಂಕಾರವನೆ ಮಾಡಿ ಅದರ ಬಳಿಯ। ಕಂಕಣಾಕಾರವನ್ನು ಒಳಗೆ ಮಾಡಿಕೊಂಡು । ಮಂಕುಮತಿಯ ತೊರೆದು ತ್ರಿಕೋಣಸುತ್ತಿಸಿ । ಶ್ರೀಂಕಾರ ಇಚ್ಛಾಶಕ್ತಿ ಕ್ಲೀಂಕಾರ ಕ್ರಿಯಾಶಕ್ತಿ । ಹ್ರೀಂಕಾರ ಜ್ಞಾನಶಕ್ತಿ ಮೂರು ಮೂಲಿಗೆ ಬರಿಯೊ। ಪಂಕಜಪಾಣಿಯ ಶ್ರೀ ಭೂ ದುರ್ಗಾನಾಮಕಳು। ಪಂಕಜಾಕ್ಷನ ರೂಪ ಮೂರು ಉಂಟು । ಕಂಕಣಾಕಾರ ಮರಳೆ ತ್ರಿಕೋಣ ಮೇಲೆ ಬರೆದು। ಸಂಕೋಚವಾಗಿ ಇದೆ ದ್ವಿತಿಯ ವಲಯ । ಪಂಕಜ ಮಿತ್ರ ಸೋಮ ಅಗ್ನಿ ಜನರ ನಾಗ । ಕಂಕಣ ಅನಲ ವರುಣ ದಿಕ್ಕಿಗೆ ರಚಿಸಿ। ಕಿಂಕರ ಜನಪಾಲ ವಿಜಯ ವಿಠ್ಠಲ ಅಕ । ಳಂಕನ ಭಜಿಸುವದು ಹೃದಯದಲ್ಲಿ ತಿಳದು॥೧॥

**ಮಟ್ಟತಾಳ**

ಕರಿ ಅಜ ರಥ ವೀಥಿ ಎಂದೆಂಬವೆ ಮೂರು । ಬರದು ಇದಕೆ ಹನ್ನೆರಡು ರಾಶಿಗಳು ವಿ। ಸ್ತರವಾಗಿ ಉಂಟು ಎರಡೆರಡೊಂದು ಕಡೆ । ಅರಿವದು ಸ್ಥಿಮಿತ ಸಮಗತಿ ತ್ವರಗತಿ ಸೂರ್ಯನ್ನ । ಎರಡು ನಾಲ್ಕು ಕೋಣೆ ವಿರಚಿಸೆದರ ಮೇಲೆ । ಮರಳೆ ಮಧು ಮಾಧವ ಕರಸುವ ಋತು ಒಂದು । ಬರೆದು ಪ್ರಣವ ವಿವರ ಹೃದಯದಲ್ಲಿ ನಮ ।ಸ್ಮರಿಸು ಜ್ಞಾನಾತ್ಮನೆಂದು। ಧರಿಸು ಈ ಪರಿ ಮೂರು ಎರಡುಕೋಣೆಯ ಮಧ್ಯ । ತರುವಾಯ ಮಾಸ ಋತು ವರುಷ ತಾರಕ ಸಂ। ಸ್ಮರಿಸಿ ಕ್ರಮ ವರ್ಣ ಹರಿ ಐಶ್ವರ್ಯಾದಿ। ಪರಮ ಮೂರ್ತಿಗಳನ್ನು ಶಿರಸು ಮೊದಲು ಮಾಡಿ ।ಕರತಳ ಪದತನಕ ಚರಿತೆಯಕೊಂಡಾಡು। ಗುರುತು ಆರು ಕೋಣೆ ಸರಿ ಉಪರಿಭಾಗ। ಎರಡರ ಮಧ್ಯ ವರಣಂಗಳು ಉಂಟು । ಅರಹುವೆ ಪ್ರಥಮದಲ್ಲಿ ಎರಡೆರಡು ನಾಲ್ಕು ೧. ಅ, ಆ, ಕ, ಖ, ಡ, ಢ, ಮ, ಯ। ೨. ಎರಡನೆ ಮನಿಯಲ್ಲಿ ವರಣಗಳಿಪ್ಪಯ್ಯಾ।ಇ, ಈ, ಉ,ಊ, ಗ, ಘ, ಣ, ತ, ರ, ಲ। ೩. ಸ್ಮರಿಸು ಮೂರನೆ ಮನಿಯಲ್ಲಿರುತಿಪ್ಪ ಮಾತ್ರ ಋ, ೠ, ಌ, ೡ, ಙ, ಚ, ಥ, ದ, ವ, ಶ; ।೪. ಕರಸಿಕೊಂಡವು ಇನಿತು ನಾಲ್ಕನೆ ಸ್ಥಾನದಲಿ। ಎ, ಐ, ಛ, ಜ, ಧ, ನ, ಷ, ಸ । ೫. ವರಣಂಗಳು ಗ್ರಹಿಸು ಐದನೆ ಮನಿಯಲ್ಲಿ ।ಒ, ಔ, ಝ, ಞ, ಪ, ಫ, ಹ, ಳ;। ೬. ನಿರುತ ಇಪ್ಪದು ಕೇಳಿ ಕಡಿಯಣ ಮನಿಯಲ್ಲಿ । ಅಂ, ಅಃ, ಟ, ಠ, ಬ, ಭ, ಕ್ಷ ಬರೆದು ಈ ಪರಿಯಲ್ಲಿ ಆರುಮನಿಯ ಮಧ್ಯ । ಸರಿ ಇಲ್ಲಿಗೆಯನ್ನಿ ತರುವಾಯ ನಾಲ್ಕು। ಎರಡೂ ವಲಯಾಕಾರ ಎರಡು ಕೋಣೆಯ ಗಣಿತ । ನಿರೀಕ್ಷಿಸಿ ಮನದಲ್ಲಿ ಪರಿಶುದ್ಧನಾಗಿ। ಪರಮ ಪುರುಷ ನಮ್ಮ ವಿಜಯ ವಿಠಲಮೂರ್ತಿಯ ।ಸ್ಮರಿಸು ಅಜ್ಯಾದಿಗಳ ನರಸಿಂಹ ಪರಿಯಂತ ॥೨॥

ಲಭಿಸುವುದು. ಆದ್ದರಿಂದ ಗುರುವರ್ಯರ ಪಾದಗಳನ್ನು ಆಶ್ರಯಿಸಿದ ಭಕ್ತನು ಈ ಮಂತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸಬೇಕು. ॥೬॥ ಶ್ರೀರಾಘವೇಂದ್ರಾಯ ನಮಃ (ಶ್ರೀ ರಾಘವೇಂದ್ರರಿಗೆ ನಮಸ್ಕಾರವು) ಎಂಬ ಅಷ್ಟಾಕ್ಷರ ಮಂತ್ರದ ಜಪಮಾಡುವುದರಿಂದ ಭಕ್ತನು ತನ್ನೆಲ್ಲ ಕಾಮನೆಗಳನ್ನು ಪಡೆಯುತ್ತಾನೆ ಎಂಬಲ್ಲಿ ಸಂದೇಹ ಬುದ್ಧಿಯನ್ನು ಮಾಡಕೂಡದು. ॥೭॥ ಯಾವನು ಶ್ರೀಗುರುವರ್ಯರ ಈ ಸ್ತೋತ್ರವನ್ನು ೧೦೮ ಸಲ ಪಠಿಸುವನೋ ಅವನಿಗೆ ಗುರುಸಾರ್ವಭೌಮರ ಅನುಗ್ರಹದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ. ॥೮॥ ಈ ಅಷ್ಟಾಕ್ಷರ ಮಂತ್ರದ ಮಹಾತ್ಮೆಯನ್ನು ಯಾವ ಭಕ್ತನು ಸಂಪೂರ್ಣವಾಗಿ ತಿಳಿಯಲು ಸಮರ್ಥನಾದಾನು? ಈ ಅಷ್ಟಾಕ್ಷರ ಮಂತ್ರದ ಪಠಣ ಮಾಡುವ ಮಾತ್ರದಿಂದ ಸರ್ವಾರ್ಥಗಳ ಸಿದ್ಧಿಯಾಗುತ್ತದೆ. ಬೇರೇ ಮಾರ್ಗದಿಂದ ಆಗುವುದಿಲ್ಲ. ॥೯॥ ಶ್ರೀರಾಘವೇಂದ್ರತೀರ್ಥರೆಂಬ ಗುರುವರ್ಯರ ಪಾದಕಮಲಗಳನ್ನು ಸದಾ ಸೇವಿಸುತ್ತಿರುವ ಸ್ವಾಮಿರಾಯ ಎಂಬವರಿಂದ, ಗುರುಗಳಿಗೆ ಪ್ರೀತಿಯನ್ನುಂಟು ಮಾಡುವ ಶುಭಕರವಾದ ಈ ಅಷ್ಟಾಕ್ಷರ ಸ್ತೋತ್ರವು ವಿರಚಿಸಲ್ಪಟ್ಟಿದೆ. ॥೧೦॥

॥ ಇತಿ ಶ್ರೀ ಗುರುಜಗನ್ನಾಥದಾಸಾರ್ಯ ವಿರಚಿತ
ಶ್ರೀ ರಾಘವೇಂದ್ರಾಷ್ಟಾಕ್ಷರ ಸ್ತೋತ್ರವು ಸಮಾಪ್ತವಾಯಿತು ॥
॥ಶ್ರೀ ಕೃಷ್ಣಾರ್ಪಣಮಸ್ತು ॥



# ಪರಿಶಿಷ್ಟ - ೫

## ಚಕ್ರಾಬ್ಜ ಮಂಡಲ ಉಪಾಸನೆ

## ಕಂಕಣಾಕಾರ ಸುಳಾದಿ

### ಧ್ಯಾನೋಪಾಸನಕ್ಕೆ ಮೂಲಭೂತವಾದ ಚಕ್ರಾಬ್ಜಾದಿಮಂಡಲ ವಿವರ

ರಾಗ ಭೈರವಿ ಧ್ರುವತಾಳ

ಕಂಕಣಾಕಾರವನ್ನು ಬರೆದು ಅದಕ ಮಧ್ಯ । ಓಂಕಾರ ಎರಡು ಎಡಬಲದಿ ರಚಿಸಿ। ಶಂಕೆ ಇಲ್ಲದೆ ನಡುವೆ ಘೃಣಿ ಎಂದು ಲಿಪಿಸಿ ಮೀ । ನಾಂಕ ನಯ್ಯನ ಪೀಠಸ್ಥಳವಿದೆಂದು। ಬಿಂಕದಲಿ ಸ್ವರದೊಳಗೆ ಕಡಿಯಣ ಸ್ವರವೆ ಎರಡಾ । ಲಂಕಾರವನೆ ಮಾಡಿ ಅದರ ಬಳಿಯ। ಕಂಕಣಾಕಾರವನ್ನು ಒಳಗೆ ಮಾಡಿಕೊಂಡು । ಮಂಕುಮತಿಯ ತೊರೆದು ತ್ರಿಕೋಣಸುತ್ತಿಸಿ । ಶ್ರೀಂಕಾರ ಇಚ್ಛಾಶಕ್ತಿ ಕ್ಲೀಂಕಾರ ಕ್ರಿಯಾಶಕ್ತಿ । ಹ್ರೀಂಕಾರ ಜ್ಞಾನಶಕ್ತಿ ಮೂರು ಮೂಲಿಗೆ ಬರಿಯೊ। ಪಂಕಜಪಾಣಿಯ ಶ್ರೀ ಭೂ ದುರ್ಗಾನಾಮಕಳು। ಪಂಕಜಾಕ್ಷನ ರೂಪ ಮೂರು ಉಂಟು । ಕಂಕಣಾಕಾರ ಮರಳೆ ತ್ರಿಕೋಣ ಮೇಲೆ ಬರೆದು। ಸಂಕೋಚವಾಗಿ ಇದೆ ದ್ವಿತಿಯ ವಲಯ । ಪಂಕಜ ಮಿತ್ರ ಸೋಮ ಅಗ್ನಿ ಜನರ ನಾಗ । ಕಂಕಣ ಅನಲ ವರುಣ ದಿಕ್ಕಿಗೆ ರಚಿಸಿ। ಕಿಂಕರ ಜನಪಾಲ ವಿಜಯ ವಿಠ್ಠಲ ಅಕ । ಳಂಕನ ಭಜಿಸುವದು ಹೃದಯದಲ್ಲಿ ತಿಳದು॥೧॥

**ಮಟ್ಟತಾಳ**

ಕರಿ ಅಜ ರಥ ವೀಥಿ ಎಂದೆಂಬವೆ ಮೂರು । ಬರದು ಇದಕೆ ಹನ್ನೆರಡು ರಾಶಿಗಳು ವಿ। ಸ್ತರವಾಗಿ ಉಂಟು ಎರಡೆರಡೊಂದು ಕಡೆ । ಅರಿವದು ಸ್ಥಿಮಿತ ಸಮಗತಿ ತ್ವರಗತಿ ಸೂರ್ಯನ್ನ । ಎರಡು ನಾಲ್ಕು ಕೋಣೆ ವಿರಚಿಸೆದರ ಮೇಲೆ । ಮರಳೆ ಮಧು ಮಾಧವ ಕರಸುವ ಋತು ಒಂದು । ಬರೆದು ಪ್ರಣವ ವಿವರ ಹೃದಯದಲ್ಲಿ ನಮು ।ಸ್ಮರಿಸು ಜ್ಞಾನಾತ್ಮನೆಂದು। ಧರಿಸು ಈ ಪರಿ ಮೂರು ಎರಡುಕೋಣೆಯ ಮಧ್ಯ । ತರುವಾಯ ಮಾಸ ಋತು ವರುಷ ತಾರಕ ಸಂ। ಸ್ಮರಿಸಿ ಕ್ರಮ ವರ್ಣ ಹರಿ ಐಶ್ವರ್ಯಾದಿ। ಪರಮ ಮೂರ್ತಿಗಳನ್ನು ಶಿರಸು ಮೊದಲು ಮಾಡಿ ।ಕರತಳ ಪದತನಕ ಚರಿತೆಯಕೊಂಡಾಡು। ಗುರುತು ಆರು ಕೋಣೆ ಸರಿ ಉಪರಿಭಾಗ। ಎರಡರ ಮಧ್ಯ ವರಣಂಗಳು ಉಂಟು । ಅರಹುವೆ ಪ್ರಥಮದಲ್ಲಿ ಎರಡೆರಡು ನಾಲ್ಕು ೧. ಅ, ಆ, ಕ, ಖ, ಡ, ಢ, ಮ, ಯ। ೨. ಎರಡನೆ ಮನಿಯಲ್ಲಿ ವರಣಗಳಿಪ್ಪಯ್ಯಾ।ಇ, ಈ, ಉ,ಊ, ಗ, ಘ, ಣ, ತ, ರ, ಲ। ೩. ಸ್ಮರಿಸು ಮೂರನೆ ಮನಿಯಲ್ಲಿರುತಿಪ್ಪ ಮಾತ್ರ ಋ, ೠ, ಌ, ೡ, ಙ, ಚ, ಥ, ದ, ವ, ಶ; ।೪. ಕರಸಿಕೊಂಡವು ಇನಿತು ನಾಲ್ಕನೆ ಸ್ಥಾನದಲಿ। ಎ, ಐ, ಛ, ಜ, ಧ, ನ, ಷ, ಸ । ೫. ವರಣಂಗಳು ಗ್ರಹಿಸು ಐದನೆ ಮನಿಯಲ್ಲಿ ।ಒ, ಔ, ಝ, ಞ, ಪ, ಫ, ಹ, ಳ;। ೬. ನಿರುತ ಇಪ್ಪದು ಕೇಳಿ ಕಡಿಯಣ ಮನಿಯಲ್ಲಿ । ಅಂ, ಅಃ, ಟ, ಠ, ಬ, ಭ, ಕ್ಷ ಬರೆದು ಈ ಪರಿಯಲ್ಲಿ ಆರುಮನಿಯ ಮಧ್ಯ । ಸರಿ ಇಲ್ಲಿಗೆಯನ್ನಿ ತರುವಾಯ ನಾಲ್ಕು। ಎರಡೂ ವಲಯಾಕಾರ ಎರಡು ಕೋಣೆಯ ಗಣಿತ । ನಿರೀಕ್ಷಿಸಿ ಮನದಲ್ಲಿ ಪರಿಶುದ್ಧನಾಗಿ। ಪರಮ ಪುರುಷ ನಮ್ಮ ವಿಜಯ ವಿಠಲಮೂರ್ತಿಯ ।ಸ್ಮರಿಸು ಆಜ್ಯಾದಿಗಳ ನರಸಿಂಹ ಪರಿಯಂತ ॥೨॥

**ರೂಪಕತಾಳ**

ಆರು ಕೋಣೆಯ ಮೇಲೆ ವರ್ತುಳಾಕಾರವನ್ನು । ಚಾರುವಾಗಿ ಬರೆದು ಅದರ ಸುತ್ತಲು ಎಂಟು । ವಾರಿಜದಳವನ್ನುರಚಿಸಿ ರಮ್ಯವಾಗಿ। ಸೌರಿ ಸ್ವರ್ಭಾನು ಗುರು ಬುಧ ಶುಕ್ರ ಚಂದ್ರಮ। ಧಾರುಣಿಸುತ ಕೇತು ಇವರನ್ನ ಮಧ್ಯ ।ಹಾರೈಸಿ ಬರೆದು ಇವರಿವರ ಬಳಿಯಲ್ಲಿ ಓಂ । ಕಾರ ಸಹಿತವಾಗಿ ನಮೋ ನಾರಾಯಣನೆಂಬೊ । ಈರೆರಡು ನಾಲ್ಕು ವರ್ಣಗಳು ಒಂದೊಂದರಲ್ಲಿ । ಆರಾಧಿಸಿ ಬರೆದು ಬೀಜಾಕ್ಷರವನ್ನು । ಸಾರವನ್ನು ತಿಳಿ ಎಂಟು ವರ್ಣಮಿಳಿತ ।ತಾರ ಮಂತ್ರವೆ ಸತ್ಯ ಇದರ ನಿಯಾಮಕ ವಿಶ್ವ । ಮೂರುತಿ ಮೊದಲಾದ ಅಷ್ಟರೂಪಂಗಳುಂಟು । ಸೌರಿ ರಾಹು ಮಧ್ಯ ಆದಿ ವರ್ಣವೆ ಲಿಪಿಸಿ। ದ್ವಿರಷ್ಟ ಮಾತ್ರಾ ವರ್ಗವ ಇದಕೆ ಇಂದಿರಾ। ಮಾರುತ ದೇವನ್ನ ಬರೆದು ಶ್ರುತಿ ಕಾಲಗಳ। ಈ ರೀತಿಯಿಂದಲಿ ವಿಶ್ವನ್ನ ಸ್ಮರಿಸೆ। ಕಾರುಣ್ಯ ಮಾಡುವನು ಮುಂದೆ ಕ ವರ್ಗ ಉ । ಕಾರ ತೈಜಸ ದೇವನ ಬರೆದು ಕ ವರ್ಗಕ್ಕೆ । ಧಾರುಣಿ ಉದಕಾಗ್ನಿ ವಾಯು ಗಗನ ಭೂತ। ಮೂರೆರಡು ಸ್ಥಾಪಿಸಿ ಅಲ್ಲಿ ಮಾನಿಗಳನ್ನು । ತಾರೇಶ ಸ್ವರ್ಭಾನು ಮಧ್ಯದಲ್ಲಿ ಸಿದ್ಧಾ । ಆರೋಹಿಣೆಯ ಗುರು ಈರ್ವರ ನಡುವೆ ಮ । ಕಾರ ಪ್ರಾಜ್ಞ ಮೂರುತಿ ಚ ವರ್ಗ ಒಂದೊಂದಕೆ। ಈರೆರಡು ಮೇಲೊಂದು ಜ್ಞಾನೇಂದ್ರಿಯಗಳುಂಟು ।ವಾರ ವಾರಕೆ ಬಿಡದೆ ತತ್ವೇಶರುಗಳ ವಾಸ । ತೋರುವ ತುರ್ಯದೇವನು ಟ ವರ್ಗಕೈದು। ಮೀರದೆ ಕರ್ಮೇಂದ್ರಿಯು ಪಾಣಿ ಪಾದದಿ ಪಂಚ । ಕಾರಣಿಕರಲ್ಲಿ ವಸ್ವಾದಿ ನಿರ್ಜರರೂ । ಸಾರಿರೈ ಬುಧ ಶುಕ್ರ ಅಂತರಾಳದಲ್ಲಿ ವಿ । ಸ್ತಾರ ಇದನೆ ತಿಳಿದು ಶುಕ್ರಚಂದ್ರನ ನಡುವೆ । ಭೋರನ್ನ ಆತ್ಮಾಮೂರುತಿ ಬಿಂದು ತ ವರ್ಗ । ಪೂರೈಸು ಪಂಚ ತನ್ಮಾತ್ರಗಳು ಶಬ್ದಾದಿ। ಮಾರುತಗಳೈದು ಪ್ರಾಣಾದಿ ನಾಮದಲ್ಲಿ । ಸೇರಿಕೊಂಡಿಪ್ಪರೈ ಮುಂದೆ ಲಾಲಿಸಿ ಕೇಳಿ । ಗೌರೀಶನ ಶಿರದಲ್ಲಿ ಇಪ್ಪ ಕುಜನ ನಡುವೆ । ಮೂರುತಿ ಅಂತರಾತ್ಮನು ಘೋಷ ಪ ವರ್ಗ । ಆರನೆ ಮನೆ ಎನ್ನಿ ಇಲ್ಲಿಪ್ಪದು ಅಹಂ । ಕಾರ ಬುದ್ಧಿ ಚಿತ್ತ ಮನಸು ಚೇತನ ತತ್ವ । ಮಾರಾರಿ ಮಿಗಿಲಾದ ದೇವತಿಗಳಕ್ಕು ।ಧಾರುಣಿಸುತ ಕೇತು ಇವರ ಮಧ್ಯದಲ್ಲಿ । ಶ್ರೀರಮಣ ಪರಮಾತ್ಮ ಶಾಂತವೆಂಬೋದು ಓಂ। ಕಾರದೊಳಗಿನ ವರ್ಣ ಯ ವರ್ಗ ಚತುರ್ವಿಧಾ । ಆರೊಂದು ಧಾತುಗಳು ತ್ವಕುಚರ್ಮ ರಕ್ತಾದಿ । ವಾರಿಜ ಮಿತ್ರನ್ನ ಮುಸುಕುವನ ಶನಿಮಧ್ಯ । ಬೀರುವೆನು ಜ್ಞಾನಾತ್ಮ ಅತಿಶಾಂತ ಶ ವರ್ಗ ।ಕ್ಷಾರ ಸತ್ವ ರಜ ತಮ ತ್ರಯಾವಸ್ಥಿಗಳು । ತಾರ ನವೋ ನಾರಾಯಣವೆಂಬೊವೆಂಟು । ಸೌರಿ ಮಿಕ್ಕಾದೆಂಟು ದಳದಲ್ಲಿ ಲಿಖಿಸೋದು । ವಾರಿಜ ಭವನಯ್ಯಾ ವಿಜಯ ವಿಠ್ಠಲರೇಯಾ। ಶರೀರದೊಳಗಿದ್ದು ತನ್ನವಂಗೆ ತಿಳಿಪುವಾ ।।೩।।

**ಝಂಪೆತಾಳ**

ಹನ್ನೆರಡು ದಳವುಳ್ಳ ಕಮಲ ವಲಯಾಕಾರ । ಚನ್ನಾಗಿ ಬರೆವದು ಇದರ ಮೇಲೆ। ಇನ್ನು ಒಂದೊಂದು ದಳದೊಳಗೆ ಲಿಖಿಸಲಿಬೇಕು । ಮನ್ನಿಪದು ಜ್ಞಾನಿಗಳು ಬಾಲಬೋಧ। ಮುನ್ನಾದಿದಳದಲ್ಲಿ ಮೇಷರಾಶಿಯ ಬರೆದು । ಬಿನ್ನಣದಿ ಓಂ ಓಂ ಇದಕೆ ಕೇಶವಮೂರ್ತಿ । ಭಿನ್ನ ವರ್ಣಗಳು (ಅ, ಕ, ಡ, ಮ)ವೆಂಬವು ನಾಲ್ಕು । ಇನ್ನಿತು ರಚಿಸಿ ಎರಡನೇ ದಳದಲ್ಲಿ । ಸನ್ನುತಿಸು ವೃಷಭ(ಆ, ಖ, ಢ,ಯ) ಚತುರವರ್ಣಗಳು । ಓಂ ನಂ ನಾರಾಯಣಮೂರ್ತಿನೆನೆದು।

ಘನ್ನ ಮೂರನೆಯ ದಳದಿ ಮಿಥುನ ರಾಶಿಯ ಬಳಿಯ । ವರ್ಣಿಸಿ ಓಂ ಮೋಂ ಮಾಧವದೇವನ್ನ। ಗಣ್ಯ (ಇ, ಗ, ಙ, ರ) ನಾಲ್ಕು ಮಾತ್ರಗಳ ಬರೆದು ನಿಜ । ವೆನ್ನಿ ನಾಲ್ಕನೆದಳಕೆ ಮನಸು ಮಾಡಿ। ಪುಣ್ಯವೆ ಉಂಟು ಕರ್ಕರಾಶಿ (ಈ, ಘ, ತ, ಲ)। ವನ್ನು ಓಂ ಭಂ ವರ್ಣ ಗೋವಿಂದನು । ನಿನ್ನೊಳಗೆ ತಿಳಿವದು ಐದನೆ ಪತ್ರದಲ್ಲಿ । ಪೆಣ್ಣುಗಳ ಮಧ್ಯದಾ ಪೆಸರಿನರಾಶಿ । (ಉ, ಊ, ಙ, ಥ, ವ) ಓಂ ಗಂ ಇದಕೆ ವಿಷ್ಣುಮೂರ್ತಿ । ಕನ್ಯಯಲಿ (ಋ, ೠ, ಚ, ದ, ಶ) ಓಂ ವಂ ವರ್ಣ ಮಧುಸೂ । ದನ ದೇವನ ಭಜಿಸು ಷಡ್‌ದಳದಲ್ಲಿ । ಸನ್ಮತ ವಹುದು ತುಲರಾಶಿ (ಌ, ೡ, ಛ, ಧ, ಷ) ಗಳು । ಇನ್ನು ತ್ರಿವಿಕ್ರಮ ಓಂ ತೇಂ (ಓಷ್ಟಾ) ಸಪ್ತದಳದಿ। ಮಣ್ಣು ಭಕ್ಷಿಪ ಕ್ರಿಮಿ (ಎ, ಐ, ಜ, ನ, ಸ) ವರ್ಣ । ವನ್ನು ಓಂ ವಾಂ ವಾಮನ ಅಷ್ಟದಳದಿ । ಹೊನ್ನಿನಂಥ ಮಾತು ಧನುರಾಶಿ ಲಿಪಿಸೆ ಸಂ । ಪನ್ನ (ಓ, ಝ, ಪ, ಹ) ಓಂ ಸುಂ ಶ್ರೀಧರ । ಇನ್ನು ನೋಡು ಪತ್ರ ನವಮದಲಿ ಈ ಪರಿ । ಎನ್ನು ಗ್ರಹಿಸುವದು ಹತ್ತುದಳದಿ। ಇನ್ನಿತಾದರು ಸತ್ಯ ಮಕರ (ಜ, ಞ, ಫ, ಳ) ಓಂ ದೇಂ । ಅನಂತರೂಪಾತ್ಮಕ ಹೃಷಿಕೇಶ । ಹನ್ನೊಂದನೆ ದಳದಲ್ಲಿ ಕುಂಭ। (ಅಂ, ಟ, ಭ, ಕ್ಷ) ಓಂ ಎನ್ನು ವಾಂ ಇದಕೆ ಶ್ರೀ ಪದ್ಮನಾಭ । ಹನ್ನೆರಡನೆ ದಳದಿ ಮೀನ (ಅ, ಠ, ಭ) ವರ್ಣ । ಚನ್ನಾಗಿ ರಚಿಸಿ ಓಂ ಯಂ ದಾಮೋದರ । ಹನ್ನೆರಡು ದಳದೊಳಗೆ ಇಷ್ಟೆ ಭಗವದ್ರೂಪ । ಹನ್ನೆರಡು ಮಾತ್ರಕಾ ಕೂಡಿಸಲು । "ಓಂ ನಮೋ ಭಗವತೆ ವಾಸುದೇವಾಯ" ಪ್ರ । ಸನ್ನ ದೇವನ್ನ ನೋಡಿ ಏಕ ಪಂಚಾಶ । ದ್ವರ್ಣ ಒಂದೊಂದರಲಿ ಹಂಚಿಹಾಕಿ । ಹನ್ನೆರಡು ರಾಶಿಗಳ ಬರೆದು ಸ್ತುತಿಸಿ। ಧನ್ಯನಾಗೆಲೊ ಮುಂದೆ ದಳದ ಸಂಧಿಗಳಲ್ಲಿ । ರನ್ನ ತಾರ ಯೋಗ ಒಂಭತ್ತು ಪದದಂತೆ। ಹನ್ನೆರಡು ರಾಶಿಗೆ ವಿಭಾಗ ಮಾಡಿ । ಪನ್ನಗಶಾಯಿ ಸಿರಿವಿಜಯ ವಿಠ್ಠಲನ್ನ ಕಾ । ರುಣ್ಯವನು ಪಡದು ಚಿಂತಿಸು ಸುಹೃದಯದೊಳಗೆ ॥೪॥

**ತ್ರಿವಿಡಿತಾಳ**

ದ್ವಾದಶದಳವುಳ್ಳ ಕಮಲದ ಮೇಲೆ । ದ್ವಿದ್ವಾದಶ ಪತ್ರದ ಕಮಲ ಬರೆದು। ಸಾಧಿಸು ಒಂದೊಂದು ದಳದ ಮಧ್ಯದಲ್ಲಿವೀ । ನೋದ ಚತುರ ವಿಂಶತಿ ವರ್ಣಂಗಳ । ವೇದ ಮಾತಾ ಮಂತ್ರ ಇದೆ ಎನ್ನು ಕೇಶವ । ಮಾಧವಾದಿ ವರ್ಣ ಮೂರ್ತಿಗಳ । ಪಾದವೆ ಸ್ಮರಿಸುತ್ತ ಮತ್ತೆ ಸೂರ್ಯನ ಗಮನ ।ಭೇದದಿಂದಲಿ ತಿಳಿ ನವ ವಿಥೀಯ । ಐದಿಸು ಒಂದೊಂದು ಕಡೆ ಮೂರರ ಪ್ರಕಾರ । ಆದಾವಿಲ್ಲಿಗೆ ತಾರೆ ಇಪ್ಪತ್ತೇಳು । ಐದೇಳು ರಾಶಿಗಳು ಹಂಚಿಹಾಕಲಾಗಿ । ಪಾದ ಪಾದಾರ್ಧ ತ್ರಿಪಾದವಾಹದು। ಪಾದ ತ್ರಿಮಂತ್ರ ತತ್ಸವಿತುಃ ವರೇಣ್ಯಂ ಭ।ರ್ಗೋ ದೇವಸ್ಯ ಧೀಮಹಿ ಧೀಯೋ ಯೋ ನಃ ಪ್ರಚೋದಯಾ ।ಆದಿ ಮೂರುತಿ ನಮ್ಮ ವಿಜಯ ವಿಠಲನ ಶ್ರೀ। ಪಾದವ ನೆರೆನಂಬು ಓಂಕಾರ ನುಡಿಯುತ್ತಾ॥೫॥

**ಅಟ್ಟತಾಳ**

ಇದರ ಮೇಲೆ ಏಕ ಪಂಚಾಶದ್ದಳವುಳ್ಳ । ಪದುಮವ ಬರೆದು ಪ್ರದಕ್ಷಿಣೆ ಮಾಡಿ। ಮುದದಿಂದ ದ್ವಿರಷ್ಟ ಮಿಕ್ಕ ಮೂವತ್ತೈದು । ಇದೆ ಇದೆ ದಳದೊಳು ಲಿಪಿಸಿ ಅಜಾದಿಯ। ವೊದಗಿ ಸ್ತೋತ್ರವ ಮಾಡು ವರ್ಣದೇವತವೆಂದು । ತುದಿ ಮೊದಲಿದರ ವಿಸ್ತಾರವೆ ಈ ಪರಿ। ಇದೆ ಚಕ್ರಾಂಬುಜವೆಂದು ಕರೆಸುತಿಪ್ಪದು । ಹೃದಯಾಕಾಶ ವಾರಿ ಸ್ಥಂಡಿಲ ಗಗನ ಸೂರ್ಯ ।

ವಿಧು ಮಂಡಲ ಸಮಸ್ತ ಉತ್ತಮಸ್ಥಾನ । ಇದೆ ನಿರ್ಮಾಣ ಮಾಡಿ ಸತ್ಕರ್ಮದಲಿ ನಿತ್ಯ । ಪದೋಪದಿಗೆ ಶ್ರೀ ಹರಿಯ ಧ್ಯಾನ ಮಾಡಲಿಬೇಕು । ಇದರೊಳು ಏಳು ಕೋಟಿ ಮಂತ್ರಾರ್ಥವೆ ಉಂಟು। ಅಧಿದೈವ ಅಧಿಭೂತ ಆಧ್ಯಾತ್ಮವೇ ಉಂಟು । ಅಧಿಕಾರತನಭೇದ ತಿಳಕೊಂಬ ಜೀವಿಗಳಿಗೆ। ಸದಮಲಾನಂದ ನಮ್ಮ ವಿಜಯ ವಿಠ್ಠಲರೇಯಾ । ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜಬಲ್ಲವನಿಗೆ ॥

**ಆದಿ ತಾಳ**

ಸ್ನಾನ ಉದಕ ಆಚಮನಿಯ ಸಂಧ್ಯಾರ್ಘ್ಯ ತ್ರಿಪದ । ಎಣಿಸುವಾಗ ನಾನಾಮಂತ್ರ ಜಪಿಸುವಾಗ । ಮೇಣು ಅರ್ಚಾ ಅರ್ಚನೆ ಪಾವಕಾಹುತಿ ಯಜ್ಞ । ಕ್ಷೋಣಿ ಸುರರ ಪೂಜೆ ಆತ್ಮಸಂತೋಷ ಅನ್ನ । ಪಾನಾದಿ ಕೊಡುವಾಗ ಇದನೆ ಚಿಂತಿಸಬೇಕು । ಏನೆಂಬೆನಯ್ಯಾ ಅವ ಅಪರೋಕ್ಷಿ ಎಂದಿಗೆ । ಧ್ಯಾನ ಸಂಪೂರ್ಣ ಸಿದ್ಧ ಜ್ಞಾನವಂತನಾಹಾ। ಪ್ರಾಣರಾಗಿ ಇಪ್ಪರು ಹರಿ ಸಿರಿ ಪ್ರಾಣಾದ್ಯರು। ಕಾಣಿಸಿ ಕೊಂಬರು ಒಂದೊಂದು ಮಂಡಲದಲ್ಲಿ । ಆನಂದಗತಿಗೆ ಸಾಧನ ಬೇಕಾದರೆ । ಮಾನವಾ ಇದನೆ ಕೈಕೊಂಡು ಆಲೋಚಿಸು । ಸ್ಥಾನ ಸ್ಥಾನಕೆ ನಿನಗೆ ಶುಭವಕ್ಕು ಪುಸಿ ಅಲ್ಲ । ದೀನನಾಥನಾದ ವಿಜಯ ವಿಠ್ಠಲರೇಯನ್ನ । ಗಾನವ ಮಾಡಿರೊ ಗ್ರಹಿಸಿ ಈ ಪರಿಯಿಂದ ॥೭॥

**ಜತೆ**

ಸಿದ್ಧ ಸಾಧನವಿದು ಬಿಂಬ ಕಾಣುವುದಕ್ಕೆ । ಪದ್ಮಿವಲ್ಲಭ ನಮ್ಮ ವಿಜಯ ವಿಠ್ಠಲಪ್ರಾಪ್ತಿ ॥೮॥

## ಹಂಸಮಂತ್ರ ಸುಳಾದಿ

(ಪುರುಷ, ಕಾಲರೂಪಗಳ ದ್ವಿವಿಧ ಉಪಾಸನೆ ಅಧ್ಯಾತ್ಮದಲ್ಲಿ ಚಕ್ರಾಬ್ಜಾದಿ ಮಂಡಲ)

**ರಾಗ ಭೈರವಿ** **ಧ್ರುವತಾಳ**

ಚೇತನಾ ಚೇತನಾಂತರ್ಗತ ಭಗವದ್ರೂಪ । ಚಾತುರ್ಯದಿಂದ ಉಂಟು ಅಣು ಮಹತ್ತು। ಆತುಮದೊಳು ನೆನಸಿ ನಾನಾಬಗೆಯಿಂದ । ಗಾತುರ ಇಂದ್ರಿಯಂಗಳ ಕಾರ್ಯ ತಿಳಿದು । ಭೌತಿಕ ನೆಚ್ಚದಿರು ಕಾಯ ನಿಂದಿರದು ಜೀ । ಮೂತ (ಭವ) ಛಾಯವೆನ್ನು ಇಹದ ಸೌಖ್ಯ। ಮಾತು ಈ ಪರಿ ತಿಳಿದು ಮುದದಿಂದ ಪುಣ್ಯಕ್ಕೆ ಸಂ । ಕೇತ ಮಾಡುವೆ ಮಾಳ್ಪ ಮಂತ್ರಗಳಿಗೆ। ಶ್ವೇತದ್ವೀಪವಾಸಿ ವಾಸುದೇವ ಮುಖ್ಯ। ವಾತ ಖದ್ಯೋತಗುರು ಇವರಲ್ಲಿಟ್ಟು । ಆ ತರುವಾಯ ತನ್ನ ಹೃತ್ಕಮಲದಲ್ಲಿದ್ದ । ಶ್ರೀ ತರುಣೇಶನ್ನ ಧ್ಯಾನಗೈದು। ಈತನು ಮಧ್ಯದಲ್ಲಿ ಅನಂತ ಅಂಶಾತ್ಮಕ । ಆತನ್ನ ತಂದು ಏಕ ಚಿಂತನೆಗೈದು । ವಾತ ಸ್ಪರಶವಿಲ್ಲದ ದೀಪದಂತೆ ಕುಳಿತು । ಜ್ಞಾತಾನುಷ್ಠಾನದಿಂದ ಗಮನಾಗಮನವ ನೋಡು। ಕೌತುಕ ವೆನಿಸುತಿದೆ ಈ ಮಂತ್ರವೊ।ಪೋತತನಾರಭ್ಯ ಯೌವ್ವನಜರಠಾವಿಡಿದು । ಪ್ರೇತ ಯಾತನಾ ದೇಹ ನರಕ ಸ್ವರ್ಗ। ಜ್ಯೋತಿರ್ಮಯ ಶರೀರ ಪುನರ್ಜನನ ಮರಣ । ಈ ತೆರದಲ್ಲಿ ಬಲು ಜನುಮ ಬರಲು । ಭೂತದೊಳು ನಾಲ್ಕು ಎಂಭತ್ತು ಲಕ್ಷಯೋನಿ । ಜಾತನಾದ ಕಾಲಕ್ಕೂ ವೊಳಗಿಪ್ಪದು। ಭೂತಿ ಕೊಡುವದಿದು ಅಪ್ರಯತ್ನ ಮಂತ್ರ । ತಾ ತೋರಗೊಡದಯ್ಯಾ ಅಜ್ಞಾನಿಗೆ । ಪ್ರಾತಃಕಾಲಾರಭ್ಯ ಅಪರೋದಯ ಪರಿಯಂತ । ಆತುಮದೊಳು ಸಿದ್ಧಾ ಸ್ವೇಚ್ಛಾವೃತ್ತಿ । ಜ್ಞಾತ ಕಾಲಾದಿಯಿಂದ ಗತ ಜನ್ಮಗಳು ಮಿಶ್ರ । ಮಾತೃಗರ್ಭಾದಿ ಸ್ಥಾನ ಶೇಷಾರಬ್ಧ । ಧೌತವಾಗುವ ತನಕ ಇದೆ

ಪ್ರಾಣಮಂತ್ರವೆಂದು। ಪ್ರೀತಿಯಿಂದಲಿ ಜಪಿಸು ಧ್ಯಾನೋಕ್ತದಿ । ಪಾತಕ ನಿನಗಿಲ್ಲ ಕಾಲಕಾಲಕ್ಕೆ ಪುಣ್ಯ । ವ್ರಾತ ಬಂದೊದಗುವದು ಆನಂದಕ್ಕೆ ಶಿತಾಂಶು ರವಿ। ಹಸ್ತ ವಿಜಯ ವಿಠ್ಠಲರೇಯ । ಭೀತರಹಿತನ್ನ ಮಾಳ್ಪ ಮಂತ್ರಾನುಸಂಧಾನಕ್ಕೆ ॥೧॥

**ಮಟ್ಟತಾಳ**

ಮಂತ್ರ ಮಾಡುವ ಬಗೆ ತಿಳಿವದು ಚೆನ್ನಾಗಿ । ತಂತ್ರಸಾರದಿಂದ ಅಂಗಾಂಗುಲಿನ್ಯಾಸ। ಸಂತೋಷದಲ್ಲಿಮಾಡು ಧೃಡತರ ಮನಸಿನಲಿ। ಅಂತರಂಗದಲಿ ಸರ್ವ ರೂಪಾತ್ಮಕ । ಮಂತ್ರದೇವತೆ ಮುಖ್ಯ ಪ್ರಣವ ಮೂರುತಿಯ ಏ। ಕಾಂತದಲ್ಲಿ ಹೃತ್ಕಮಲ ಕರ್ನಿಕೆಯ ಮಧ್ಯ। ಇಂತಿಹ ಕಮಲಕ್ಕೆ ಚತುರಷ್ಟ ದ್ವಾದಶ । ಮುಂತೆ ಚತುರ್ವಿಂಶತಿ ಐವತ್ತೊಂದು। ಚಿಂತಿಸು ದಳಸಂಖ್ಯೆ ತ್ರಿಕೋಣ ಬೀಜಗಳು । ಯಂತ್ರವಾಹಕ ನಮ್ಮ ವಿಜಯ ವಿಠ್ಠಲ ಸ್ವ । ತಂತ್ರ ಪುರುಷ ಸರ್ವ ಮಂತ್ರ ನಿಯಾಮಕನೊ ॥೨॥

**ತ್ರಿವಿಡಿತಾಳ**

ಮನವೆ ಲಾಲಿಸಿ ಕೇಳು ಲಬ್ಧ ಮಂತ್ರಕೆ ಜಿತಾ । ಸನನಾಗು ಜಯವೆಂದು ಹರಿಯ ಸ್ತುತಿಸಿ। ಎಣಿಕೆಯಿಂದಲಿ ನೋಡು ಒಂದೊಂದು ಮಂತ್ರಕ್ಕೆ । ಘನವಾಗಿ ವರ್ಣಗಳು ಇಪ್ಪವೇಸೂ। ಎಣಿಸು ಒಂದೊಂದು ದಳದಲ್ಲೊಂದೊಂದು ವರ್ಣ । ಮಿನುಗುವ ಮತಿಯಿಂದ ಇಡಲಾಬಟ್ಟು । ಇನಿತು ಗ್ರಹಿಸು ಇವಕೆ ಒಂದೊಂದು ಹರಿರೂಪ । ಚಿನುಮಯ ಮೂರುತಿ ಸರ್ವಾಭಿನ್ನ । ಗುಣವಂತ ಮಂತ್ರಾತ್ಮಕನನ್ನು ಕೂಡಿಸಿ । ಮಣಿಗಣದಿಂದ ಜಪಿಸುವಾಗಲಿ । ಅನುಭವವಿರಲಿ ಮಂತ್ರದೇವತೆ ಸಹಿತ । ಕ್ಷಣ ಕ್ಷಣಕೆ ನಿನ್ನೊಳು ವಲಯಾಕಾರ । ಗುಣಿಸು ವರ್ಣಾಖ್ಯರ ಆದ್ಯ(ಂತ) ಮೂರುತಿಯಲ್ಲಿ । ಗಣನೆ ಮಾಡುತ ನಿತ್ಯ ಜಿಹ್ವಾಗ್ರದಿ । ಕೊನೆಯಿಂದ ವಾಕ್ಯಯೋಗ ಮಾಳ್ಪದರೊಳು ಮಣಿಯಿಂದ ಮಣಿಗೆ ಬೆರಳಚಾಚುವದು । ಅನ ಭಾರತಿ ಪ್ರೀಯ ವಿಜಯವಿಠ್ಠಲ ಸ । ದ್ಗುಣಮಣಿ ಖಣಿಯೆಂದು ಅನುದಿನ ನೆನೆ ನೆನೆ ॥೩॥

ಇದೆ ಮಂತ್ರ ಸಾರ್ಥಕ ಇದೆ ಮಂತ್ರ ಸಿದ್ಧಿಯೊ । ಇದೆ ಇದೆ ಮಂತ್ರವೊ ಇದೆ ಪ್ರಕಾರದಿಂದ ತತ್ತತ್ತು ಮಂತ್ರವ । ವಿಧಿಯಿಂದ ಜಪಿಸುವುದು ಹೃದಯದಲ್ಲಿಯಿಟ್ಟು । ಪದೊ ಪದಿಗೆ ಬಲು ವೊದಗಿ (ರಿ) ಮಾಡುವದೇಕೆ । ಮುದ ಭಕುತಿಯಿಂದಲಿದರಂತೆ ಒಂದೆ ಸಾ । ರಿದರೆ ಸತ್ಪುಣ್ಯದ ಉದಧಿ ಸೂಸುವದಯ್ಯಾ । ಮಧುಸೂದನ ಹರಿ ವಿಜಯ ವಿಠ್ಠಲರೇಯ । ಪ್ರಧಾನವ ಕೊಡುವನೋ ಒಂದೇ ಉಚ್ಚಾರಣೆಗೆ ॥೪॥

**ಆದಿತಾಳ**

ಮಧ್ಯ ಮೂರುತಿ ಸುತ್ತ ಸೇವಕ ರೂಪದಿಂದ। ಪೊದ್ದಿಕೊಂಡಿಪ್ಪವು ಸ್ವ ಮೂರ್ತಿ ಪರಿವಾರ । ಸಿದ್ಧವಾದುದೆ ಕೇಳು ಜಪಿಸಿ ತಿಳಿಯಬೇಕು । ಹೃದ್ಗುಹಾದಲ್ಲಿ ಇನಿತು ಚಕ್ರಾಬ್ಜ ಮಂಡಲ। ಪದ್ಮ ಸುದರ್ಶನದಳದ ವಿಚಾರ ತಿಳಿದು। ಪದ್ಧತಿ ತಪ್ಪದಲೆ ಪರಿಭ್ರಮಣವಾಗುವುದು। ಪದ್ಮಬಾಂಧವ ನಮ್ಮ ವಿಜಯ ವಿಠ್ಠಲರೇಯ। ಉದ್ಧರಿಸುವ ಬಿಡದೆ ಉನ್ನತ ಗತಿಯಿತ್ತು ॥೫॥

**ಜತೆ**

ಜನುಮದೊಳಗೆ ಒಮ್ಮೆ ಈ ಪರಿ ಜಪಿಸಲು । ಗುಣತ್ರಯ ನಾಶನ ವಿಜಯ ವಿಠ್ಠಲ ಪೊಳೆವ ॥೬॥

## ಸುಳಾದಿ

(ಚಕ್ರಾಬ್ಜಾದಿ ಮಂಡಲ ವಿವರ, ಕಾಲರೂಪ ಹರಿಯ ವರ್ಣನಾತ್ಮಕ ಆಧ್ಯಾತ್ಮ ಉಪಾಸನೆ)

ರಾಗ ಸಾರಂಗ ಧ್ರುವತಾಳ

ಅಜ ಅಣಿಮಾ ಯಜ್ಞ ಅಚ್ಯುತ ಹಯವದನ । ಕೇಶವ ಈಶ ಈಶ ವೆಂಕಟೇಶ। ಭೂ (ಭು) ಜ ಸ್ಥಿತ ವಿಷ್ಣು ಉರುಕ್ರಮ ಶರಚಕ್ರ ಗದಾಧರ ಧನುರ್ಧಾರಿ ವೆಂಕಟೇಶ । ರಜದೂರ ಉರಗಾಯ ಉಪೇಂದ್ರ ತಾರ್ಕ್ಷ್ಯ। ಹಲಧರ ಪುರುಷಾಖ್ಯ ವೆಂಕಟೇಶ । ಕುಜನಹರ ಯೋಗೀಶ್ವರ ಪ್ರಶ್ನಿಗರ್ಭ । ಪರಮಪುರುಷ ಗೋವಿಂದ ವೆಂಕಟೇಶ । ಅಜನಪಿತ ಮಾಧವ ವೈಕುಂಠ ಶ್ರೀಪತಿ ಯಜ್ಞ । ಭೋಕ್ತ ವಿಶ್ವ ವೆಂಕಟೇಶ । ಪ್ರಜನುತ ಇಂದ್ರ ಪ್ರಾದೇಶ ಅಂಗುಟ ಮಾತ್ರ । ಶ್ಯಾಮ ಶಬಲವರ್ಣ ವೆಂಕಟೇಶ । ಪ್ರಜಗಳ ನೋಳ್ಪ ಚಕ್ಷುಸ್ಥ ಲೋಹಿತವರ್ಣ । ಜೀವಗತ ರೂಪ ಸಿರಿವೆಂಕಟೇಶ । ಭುಜಗಾದ್ರಿನಿಲಯ ಎನ್ನಪ್ಪ ತಿಮ್ಮಪ್ಪ ಜಗದಪ್ಪ । ವಿಜಯವಿಠ್ಠಲ ವೆಂಕಟೇಶ॥೧॥

ಮಟ್ಟತಾಳ

ಅನಿರುದ್ಧ ಪ್ರದ್ಯುಮ್ನ ಸಂಕರುಷಣ ವಾಸುದೇ। ವಾನಂದಾ ವುತ್ಪಪ್ಪಾ ಜ್ಞಾನರೂಪ । ಪ್ರಣವಮೂರುತಿ ಅಶೇಷ । ಗುಣಾಧಾರ ಪೂರ್ಣೈಶ್ವರ್ಯ । ಅನಂತ ಸುಖವನಧಿ ತಿರುವೆಂಗಳೇಶ। ವಿಜಯ ವಿಠ್ಠಲರೇಯನು ಪರಮಪದವಿ ಕೊಡುವ ಈ ಪರಿ ನೆನಿಸಲು ॥೨॥

ತ್ರಿವಿಡಿತಾಳ

ಪ್ರಣವ ನಾರಾಯಣ ಹರಿ ವಾಸದೇವ ದ್ರು । ಹಿಣ ಗಾಯಿತ್ರಿ ಮಾತೃಕಾಪುರುಷ ವಿಷ್ಣು । ಇನಿತು ಮಂತ್ರ ವರ್ಣದೇವತೆಗಳು ಸಂ । ದಣಿಸಿ ಇಪ್ಪರು ಎಂಟು ದಿಕ್ಕಿನಲಿ । ವನಜ ಕರ್ನಿಕೆ ದಳ ಇಂದ್ರಾದಿಗಳ ಬಳಿಯ । ಮಿನಗುವ ನಾನಾರೂಪವನೆ ಧರಿಸಿ । ಗುಣಿಸು ಈ ಪರಿಯಲ್ಲಿ ಚಕ್ರಾಬ್ಜಮಂಡಲ । ಎಣಿಕೆ ಮಾಡು ಮೇಲು ಅಧಿಕವಾಗಿ । ಗುಣ ಸಂಪೂರ್ಣ ನಮ್ಮ ವಿಜಯ ವಿಠ್ಠಲರೇಯ । ತನುವಿನೊಳಗೆ ಇಂತು ನಿಂತು ಪರಿಪಾಲಿಪ ॥೩॥

ಅಟ್ಟತಾಳ

ಕಾಯದೊಳಗೆ ಇದ್ದು ಸರ್ವ ವ್ಯಾಪಾರವ । ಆಯಾಸವಿಲ್ಲದೆ ನಡೆಸುವ ಲಕುಮಿ। ನಾಯಕಗೆ ನಿರ್ಗುಣ ಸೋಹಂ ಉತ್ಪತ್ತಿ। ಸಾಯಕದಿಂದಲಿ ಭೇದ ಭೇದಾದಿ ಶ್ರೀ । ವಿಯೋಗ ತನುಕ್ಲೇಶ ಶೋಕಾದಿ ವಿಪ್ರ । ರಾಯತ್ತ ಅಂತರಾವೇಶ ಪರಾಭವ । ಜಾಯಾದ್ಯಗೋಸುಗ ಶಿವಪೂಜೆ ದೇಹ ವಿ । ಹಾಯ ಪಲಾಯನ ಲಿಂಗಸ್ಥಾಪನ ಅ । ನ್ಯಾಯ ವಿಕಾರಾಂತರವು ಭೌತಿಕ । ಕಾಯ ಸ್ವಯಂವ್ಯಕ್ತ ಸ್ಥಳದಲ್ಲಿ ಚಿದ್ರೂಪ । ತಾಯಿ ತಂದೆ ಗುರು ಚತುರಾವರ್ಣ ಜಾತಿ । ನಾಯಿಗಳೆ ಸಾಕ್ಷಾತ್ ಭಗವಂತ । ತೋಯಜ ಭವ ರುದ್ರ ಮಿಗಿಲಾದವರಿಗೆ ನಾ । ರಾಯಣನ ಕೂಡ ಐಕ್ಯ ಸಮಾಧಿಕ್ಯ । ಮಾಯಾ ಗುಣ ಕರ್ಮ ಕಾಲಕ್ಕೆ ಕರ್ತೃತ್ವ । ವಾಯು ಪ್ರತಿಮೆ ವಿನಾ ಹರಿಗೆ ನಮಸ್ಕಾರ । ಈ ಯವನಿಯಲ್ಲಿ ಅಶ್ವತ್ಥ ತುಲಸಿ ವಿ ।ನಾಯಕ ಲಿಂಗ ಸ್ವಯಂವ್ಯಕ್ತ ನಿಧಿ ಪುಣ್ಯ । ತೋಯಗಳಲ್ಲಿ ಗಂಡಕಿ ಶಿಲಾ ರಹಿತಾದಿ । ಬಾಯಿ ಲಂಬುವದಲ್ಲ ಶೂದ್ರಾದಿಗಳ ಪೂಜೆ । ವಾಯು ವಿಷ್ಣು ಲಿಂಗ ಪ್ರತೀಕದಲ್ಲಿ । ಸ್ಥಾಯವಾಗಿದ್ದುದು ವಂದನೆ ಮಾಡಸಲ್ಲ । ಈ ಯವನಿಯೊಳು ಶೂದ್ರಾದಿ ಪ್ರತಿಷ್ಠೆ । ಅಯತಾರ್ಥಕ್ಕೆ ಪೋಗಿ ಸಾಗಿ ಬಾಗಸಲ್ಲ।

ಈಯರ್ಥದಲಿ ನಿಶ್ಚಯವೆಂದವನು ಆತ । ತಾಯಿ ವೆಂದೆಂಬೋದು ಸಿದ್ಧವಯ್ಯ ಕೇಳಿ। ಕಾಯಜಪಿತನಿಗೆ ಇಂತು ನುಡಿವ ವಾಕ್ಯ । ನ್ಯಾಯವಲ್ಲವೋ ಸರ್ವವು ಹರಿನಿಂದ್ಯವೋ। ಮಾಯಾವರ್ಜಿತ ನಮ್ಮ ವಿಜಯವಿಠ್ಠಲರೇಯನ ಗಾಯನ ಮಾಡಲು ನವಭಕುತಿಯನೀವಾ॥೪॥

**ಆದಿ ತಾಳ**

ಜೀವಾದಿ ಭೇದ ಚಿದ್ಗುಣಗಣ ಪೂರ್ಣ ಪರಿ । ಪಾವನ್ನ ಸಾಮ್ಯಾಧಿಕ ರಹಿತ ತದ್ಗತ ಭೇದ । ದೇವ ಪ್ರಾದುರ್ಭಾವ ವಿಪರೀತ ಶೂನ್ಯ ವೇ । ದಾವಳಿ ಪ್ರಮಾಣಸಿದ್ಧ ಪ್ರಮೇಯಾವಸ್ಥ । ಕೋವಿದ ಹರಿಪಾದಭಜಕರ ಸೇವಾಸಕ್ತ । ಆವಾವಕಾಲಕ್ಕೆ ನಡಕೊಂಡ ಯೋಗ್ಯಗೆ । ಈ ವಿಧ ತಿಳುವಳಿಕೆ ಭಗವದ್ರೂಪಗಳೆಲ್ಲ । ಲಾವಣ್ಯ ಕಾಯದಲ್ಲಿ ಸುಳಿದಾಡುವ ಸುಖದಿ । ದೇವಕ್ಕಿನಂದನ ವಿಜಯವಿಠ್ಠಲರೇಯ । ಕಾವ ಸರ್ವದಾ ನಮ್ಮ ಬಳಿಯಲಿ ಯಿದ್ದು ನೋಡಿ॥೫॥

**ಜತೆ**

ಸಕಲಾಭರಣದಿಂದ ಒಪ್ಪುವ ಸಿರಿಕಾಂತ । ನಿಖಿಳೇಶ ವಿಜಯವಿಠ್ಠಲ ಶೇಷಗಿರಿಯರಾಯ ॥೬॥

## ಸುಳಾದಿ

(ಸಪ್ತ (ಸಾಮ) ಕಾಲ ವಿವರ ತತ್ಪ್ರೇರಕ, ತನ್ನಿಯಾಮಕ ಕಾಲರೂಪಿ ಹರಿಯ ಉಪಾಸನೆ, ಚಕ್ರಾಬ್ಜಾದಿಕ ಆಧ್ಯಾತ್ಮಿಕ ವಿಚಾರ)

**ರಾಗ ರೇಗುಪ್ತಿ** **ಧ್ರುವತಾಳ**

ಸಾಮೋಪಾಸನೆ ಮಾಡು ಶುದ್ಧಾಂತಃಕರಣದಲ್ಲಿ । ಸ್ವಮಸ್ತ ಬ್ರೊಮ್ಮಾಂಡವನ್ನೆ ತಿಳಿದು। ಶ್ಯಾಮ ಶಬಲವರ್ಣ ಇದ್ದ ಬಿಂಬ ಮೂರ್ತಿಯ । ಭೂಮಾದಿ ಗುಣಗಳಿಂದ ಹರಿಯವೊಲಿಸೊ। ನೇಮ ನಿತ್ಯದಲ್ಲಿ ನಿಸ್ಸಂಗನಾಗಿ ಇದೆ । ಕಾಮಿಸು ಕಾಲಕಾಲಕೆ ಯೋಗಮಾರ್ಗ । ಕಾಮಿನಿ ಮೊದಲಾದ ಭೋಗ ಭಾಗ್ಯಗಳೆಲ್ಲ । ಶ್ರೀಮನೋಹರ ವಿಷ್ಣು ಸರ್ವೋತ್ತಮ । ರೋಮ ರೋಮಾಂತರದಿ ಮುಕ್ತಾಮುಕ್ತರನಿಟ್ಟು । ಸ್ವಾಮಿ ಮಮ ಸ್ವಾಮಿ ಸರ್ವಸ್ವಾಮಿ । ತಾಮಸ ತಾಮಸ ನಿರ್ಲೇಪ ಸಾತ್ವಿಕ ಸಾತ್ವಿಕ । ಸಾಮಗಾಯನ ಪ್ರಿಯ ಭೂತಸ್ಥನೆ । ಪ್ರೇಮ ಪರಮನೆಂದು ಹಿಂಕಾರಾದಿ ಪಂಚ । ಸಾಮಾದಿ ಉಪದ್ರವ ಇಂತು ಗ್ರಹಿಸೊ । ಈ ಮಾತಿಗೆ ಪ್ರದ್ಯುಮ್ನ ವಾಸುದೇವ ನಾರಾಯಣ । ನಾಮಾ ಅನಿರುದ್ಧ ಸಂಕರುಷಣ ವರಾಹಾ । ನೃ ಮೃಗ ಸಪ್ತ ಭಗವದ್ರೂಪಗಳು ಅಲ್ಲಿಗಲ್ಲಿ । ನೀ ಮುದದಲ್ಲಿ ಧ್ಯಾನವ ಮಾಡೋ । ಧೂಮರಹಿತ ಅಗ್ನಿಯಂತಾಹನೊ । ಕಾಮಕ್ರೋಧಗಳೆಲ್ಲಾ ದಹಿಸಿ ಭಸ್ಮ ಮಾಡುವ । ಆ ಮೃತ್ಯು ಮಾರಿಗಳೆಲ್ಲ ಭೃತ್ಯರಾಹರೊ । ಹೇಮ ವರ್ಣದಂತೆ ಪೊಳೆವ ಸಜ್ಜನರೊಡನೆ । ಭೂಮಿಯೊಳಗೆ ಅಪ್ರತಿಮಾನವಾ। ಭೀಮ ಭವವಾರಿಧಿ ಆವಾಗೆ ಗೋವತ್ಸಪಾದೋದಕ। ಸಾಮೀಪ್ಯದಲ್ಲಿ ಕಾಣಿಸುತಿಪ್ಪದೊ । ಶ್ಯಾಮ ಶಬಲವರ್ಣ ದೇವನೆ ಅತ್ಯಣು ನಿ। ಸ್ಸೀಮ ಇಂದ್ರಿಯಗಳಿಗಾಗೋಚರ ಪುರುಷ । ವ್ಯಾಮೋಹ ಪುಟ್ಟಿಸುವ ಈತನೆ ಇಷ್ಟ ದೈವ । ಕೋಮಲಗಾತುರ ಬಲು ಸುಲಭ । ಸಾಮಸ್ತ ವ್ಯಾಪ್ತ ವಿಶಿಷ್ಟಾವರಣ ಲಕುಮಿ ಮೀರಿ । ಸ್ವಾಮಿಯ ದಯದಿಂದಲಿ (ಸಾಮದಿಂದಲಿ) ಸ್ವಮಹಿಮ ಕಾಣೊ । ವ್ಯೋಮ ಕಾಲ ವೇದ ಗುಣ ಜೀವರಾಶಿ ತ್ರಿವಿಧ । ಈ ಮಾತಿನಂತೆ ಸರ್ವದಾ ಎಣಿಸೊ । ಸಾಮೋಪಾಸನೆ ಇದೆ ಮಾಡೊ ಮನುಜಾ। ಸಾಮವಂದಿತ ನಮ್ಮ ವಿಜಯವಿಠ್ಠಲರೇಯಾ । ಕಾಮಿಸಿದಂತೆ ಫಲವ ಕೊಡುತಿಪ್ಪನೊ ॥೧॥

## ಸುಳಾದಿ

(ಚಕ್ರಾಬ್ಜಾದಿ ಮಂಡಲ ವಿವರ, ಕಾಲರೂಪ ಹರಿಯ ವರ್ಣಾತ್ಮಕ ಆಧ್ಯಾತ್ಮ ಉಪಾಸನೆ)

ರಾಗ ಸಾರಂಗ ಧ್ರುವತಾಳ

ಅಜ ಅಣಿಮಾ ಯಜ್ಞ ಅಚ್ಯುತ ಹಯವದನ । ಕೇಶವ ಈಶ ಈಶ ವೆಂಕಟೇಶ। ಭೂ (ಭು) ಜ ಸ್ಥಿತ ವಿಷ್ಣು ಉರುಕ್ರಮ ಶರಚಕ್ರ ಗದಾಧರ ಧನುರ್ಧಾರಿ ವೆಂಕಟೇಶ । ರಜದೂರ ಉರಗಾಯ ಉಪೇಂದ್ರ ತಾರ್ಕ್ಷ್ಯ। ಹಲಧರ ಪುರುಷಾಖ್ಯ ವೆಂಕಟೇಶ । ಕುಜನಹರ ಯೋಗೀಶ್ವರ ಪ್ರಶ್ನಿಗರ್ಭ । ಪರಮಪುರುಷ ಗೋವಿಂದ ವೆಂಕಟೇಶ । ಅಜನಪಿತ ಮಾಧವ ವೈಕುಂಠ ಶ್ರೀಪತಿ ಯಜ್ಞ । ಭೋಕ್ತ ವಿಶ್ವ ವೆಂಕಟೇಶ । ಪ್ರಜನುತ ಇಂದ್ರ ಪ್ರಾದೇಶ ಅಂಗುಟ ಮಾತ್ರ । ಶ್ಯಾಮ ಶಬಲವರ್ಣ ವೆಂಕಟೇಶ । ಪ್ರಜಗಳ ನೋಳ್ಪ ಚಕ್ಷುಸ್ಥ ಲೋಹಿತವರ್ಣ । ಜೀವಗತ ರೂಪ ಸಿರಿವೆಂಕಟೇಶ । ಭುಜಗಾದ್ರಿನಿಲಯ ಎನ್ನಪ್ಪ ತಿಮ್ಮಪ್ಪ ಜಗದಪ್ಪ । ವಿಜಯವಿಠ್ಠಲ ವೆಂಕಟೇಶ॥೧॥

ಮಟ್ಟತಾಳ

ಅನಿರುದ್ಧ ಪ್ರದ್ಯುಮ್ನ ಸಂಕರುಷಣ ವಾಸುದೇ। ವಾನಂದಾ ವುತ್ಸೃಷ್ಟಾ ಜ್ಞಾನರೂಪ । ಪ್ರಣವಮೂರುತಿ ಅಶೇಷ । ಗುಣಾಧಾರ ಪೂರ್ಣೈಶ್ವರ್ಯ । ಅನಂತ ಸುಖವನಧಿ ತಿರುವೆಂಗಳೇಶ। ವಿಜಯ ವಿಠ್ಠಲರೇಯನು ಪರಮಪದವಿ ಕೊಡುವ ಈ ಪರಿ ನೆನಿಸಲು ॥೨॥

ತ್ರಿವಿಡಿತಾಳ

ಪ್ರಣವ ನಾರಾಯಣ ಹರಿ ವಾಸದೇವ ದ್ರು । ಹಿಣ ಗಾಯಿತ್ರಿ ಮಾತೃಕಾಪುರುಷ ವಿಷ್ಣು । ಇನಿತು ಮಂತ್ರ ವರ್ಣದೇವತೆಗಳು ಸಂ । ದಣಿಸಿ ಇಪ್ಪರು ಎಂಟು ದಿಕ್ಕಿನಲಿ । ವನಜ ಕರ್ಣಿಕೆ ದಳ ಇಂದ್ರಾದಿಗಳ ಬಳಿಯ । ಮಿನಗುವ ನಾನಾರೂಪವನೆ ಧರಿಸಿ । ಗುಣಿಸು ಈ ಪರಿಯಲ್ಲಿ ಚಕ್ರಾಬ್ಜಮಂಡಲ । ಎಣಿಕೆ ಮಾಡು ಮೇಲು ಅಧಿಕವಾಗಿ । ಗುಣ ಸಂಪೂರ್ಣ ನಮ್ಮ ವಿಜಯ ವಿಠ್ಠಲರೇಯ । ತನುವಿನೊಳಗೆ ಇಂತು ನಿಂತು ಪರಿಪಾಲಿಪ ॥೩॥

ಅಟ್ಟತಾಳ

ಕಾಯದೊಳಗೆ ಇದ್ದು ಸರ್ವ ವ್ಯಾಪಾರವ । ಆಯಾಸವಿಲ್ಲದೆ ನಡೆಸುವ ಲಕುಮಿ। ನಾಯಕಗೆ ನಿರ್ಗುಣ ಸೋಹಂ ಉತ್ಪತ್ತಿ। ಸಾಯಕದಿಂದಲಿ ಭೇದ ಭೇದಾದಿ ಶ್ರೀ । ವಿಯೋಗ ತನುಕ್ಲೇಶ ಶೋಕಾದಿ ವಿಪ್ರ । ರಾಯತ್ತ ಅಂತರಾವೇಶ ಪರಾಭವ । ಜಾಯಾದ್ಯಗೋಸುಗ ಶಿವಪೂಜೆ ದೇಹ ವಿ । ಹಾಯ ಪಲಾಯನ ಲಿಂಗಸ್ಥಾಪನ ಅ । ನ್ಯಾಯ ವಿಕಾರಾಂತರವು ಭೌತಿಕ । ಕಾಯ ಸ್ವಯಂವ್ಯಕ್ತ ಸ್ಥಳದಲ್ಲಿ ಚಿದ್ರೂಪ । ತಾಯಿ ತಂದೆ ಗುರು ಚತುರಾವರ್ಣ ಜಾತಿ । ನಾಯಿಗಳೆ ಸಾಕ್ಷಾತ್ ಭಗವಂತ । ತೋಯಜ ಭವ ರುದ್ರ ಮಿಗಿಲಾದವರಿಗೆ ನಾ । ರಾಯಣನ ಕೂಡ ಐಕ್ಯ ಸಮಾಧಿಕ್ಯ । ಮಾಯಾ ಗುಣ ಕರ್ಮ ಕಾಲಕ್ಕೆ ಕರ್ತೃತ್ವ । ವಾಯು ಪ್ರತಿಮೆ ವಿನಾ ಹರಿಗೆ ನಮಸ್ಕಾರ । ಈ ಯವನಿಯಲ್ಲಿ ಅಶ್ವತ್ಥ ತುಲಸಿ ವಿ ।ನಾಯಕ ಲಿಂಗ ಸ್ವಯಂವ್ಯಕ್ತ ನಿಧಿ ಪುಣ್ಯ । ತೋಯಗಳಲ್ಲಿ ಗಂಡಕಿ ಶಿಲಾ ರಹಿತಾದಿ । ಬಾಯಿ ಲಂಬುವದಲ್ಲ ಶೂದ್ರಾದಿಗಳ ಪೂಜೆ । ವಾಯು ವಿಷ್ಣು ಲಿಂಗ ಪ್ರತೀಕದಲ್ಲಿ । ಸ್ಥಾಯವಾಗಿದ್ದುದು ವಂದನೆ ಮಾಡಸಲ್ಲ । ಈ ಯವನಿಯೊಳು ಶೂದ್ರಾದಿ ಪ್ರತಿಷ್ಠೆ । ಅಯತಾರ್ಥಕ್ಕೆ ಪೋಗಿ ಸಾಗಿ ಬಾಗಸಲ್ಲ।

ಈಯರ್ಥದಲಿ ನಿಶ್ಚಯವೆಂದವನು ಆತ । ತಾಯಿ ವೆಂದೆಂಬೋದು ಸಿದ್ಧವಯ್ಯ ಕೇಳಿ। ಕಾಯಜಪಿತನಿಗೆ ಇಂತು ನುಡಿವ ವಾಕ್ಯ । ನ್ಯಾಯವಲ್ಲವೋ ಸರ್ವವು ಹರಿನಿಂದ್ಯವೋ। ಮಾಯಾವರ್ಜಿತ ನಮ್ಮ ವಿಜಯವಿಠ್ಠಲರೇಯನ ಗಾಯನ ಮಾಡಲು ನವಭಕುತಿಯನೀವಾ॥೪॥

**ಆದಿ ತಾಳ**

ಜೀವಾದಿ ಭೇದ ಚಿದ್ಗುಣಗಣ ಪೂರ್ಣ ಪರಿ । ಪಾವನ್ನ ಸಾಮ್ಯಾಧಿಕ ರಹಿತ ತದ್ಗತ ಭೇದ । ದೇವ ಪ್ರಾದುರ್ಭಾವ ವಿಪರೀತ ಶೂನ್ಯ ವೇ । ದಾವಳಿ ಪ್ರಮಾಣಸಿದ್ಧ ಪ್ರಮೇಯಾವಸ್ಥ । ಕೋವಿದ ಹರಿಪಾದಭಜಕರ ಸೇವಾಸಕ್ತ । ಆವಾವಕಾಲಕ್ಕೆ ನಡಕೊಂಡ ಯೋಗ್ಯಗೆ । ಈ ವಿಧ ತಿಳುವಳಿಕೆ ಭಗವದ್ರೂಪಗಳೆಲ್ಲ । ಲಾವಣ್ಯ ಕಾಯದಲ್ಲಿ ಸುಳಿದಾಡುವ ಸುಖದಿ । ದೇವಕ್ಕಿನಂದನ ವಿಜಯವಿಠ್ಠಲರೇಯ । ಕಾವ ಸರ್ವದಾ ನಮ್ಮ ಬಳಿಯಲಿ ಯಿದ್ದು ನೋಡಿ॥೫॥

**ಜತೆ**

ಸಕಲಾಭರಣದಿಂದ ಒಪ್ಪುವ ಸಿರಿಕಾಂತ । ನಿಖಿಳೇಶ ವಿಜಯವಿಠ್ಠಲ ಶೇಷಗಿರಿಯರಾಯ ॥೬॥

**ಸುಳಾದಿ**

(ಸಪ್ತ (ಸಾಮ) ಕಾಲ ವಿವರ ತತ್ಪ್ರೇರಕ, ತನ್ನಿಯಾಮಕ ಕಾಲರೂಪಿ ಹರಿಯ ಉಪಾಸನೆ, ಚಕ್ರಾಬ್ಜಾದಿಕ ಆಧ್ಯಾತ್ಮಿಕ ವಿಚಾರ)

**ರಾಗ ರೇಗುಪ್ತಿ** **ಧ್ರುವತಾಳ**

ಸಾಮೋಪಾಸನೆ ಮಾಡು ಶುದ್ಧಾಂತಃಕರಣದಲ್ಲಿ । ಸಮಸ್ತ ಬೊಮ್ಮಾಂಡವನ್ನೆ ತಿಳಿದು। ಶ್ಯಾಮ ಶಬಲವರ್ಣ ಇದ್ದ ಬಿಂಬ ಮೂರ್ತಿಯ । ಭೂಮಾದಿ ಗುಣಗಳಿಂದ ಹರಿಯವೊಲಿಸೊ। ನೇಮ ನಿತ್ಯದಲ್ಲಿ ನಿಸ್ಸಂಗನಾಗಿ ಇದೆ । ಕಾಮಿಸು ಕಾಲಕಾಲಕೆ ಯೋಗಮಾರ್ಗ । ಕಾಮಿನಿ ಮೊದಲಾದ ಭೋಗ ಭಾಗ್ಯಗಳೆಲ್ಲ । ಶ್ರೀಮನೋಹರ ವಿಷ್ಣು ಸರ್ವೋತ್ತಮ । ರೋಮ ರೋಮಾಂತರದಿ ಮುಕ್ತಾಮುಕ್ತರನಿಟ್ಟು । ಸ್ವಾಮಿ ಮಮ ಸ್ವಾಮಿ ಸರ್ವಸ್ವಾಮಿ । ತಾಮಸ ತಾಮಸ ನಿರ್ಲೇಪ ಸಾತ್ವಿಕ ಸಾತ್ವಿಕ । ಸಾಮಗಾಯನ ಪ್ರಿಯ ಭೂತಸ್ಥನೆ । ಪ್ರೇಮ ಪರಮನೆಂದು ಹಿಂಕಾರಾದಿ ಪಂಚ । ಸಾಮಾದಿ ಉಪದ್ರವ ಇಂತು ಗ್ರಹಿಸೊ । ಈ ಮಾತಿಗೆ ಪ್ರದ್ಯುಮ್ನ ವಾಸುದೇವ ನಾರಾಯಣ । ನಾಮಾ ಅನಿರುದ್ಧ ಸಂಕರುಷಣ ವರಾಹಾ । ನೃ ಮೃಗ ಸಪ್ತ ಭಗವದ್ರೂಪಗಳು ಅಲ್ಲಿಗಲ್ಲಿ । ನೀ ಮುದದಲ್ಲಿ ಧ್ಯಾನವ ಮಾಡೋ । ಧೂಮರಹಿತ ಅಗ್ನಿಯಂತಾಹನೊ । ಕಾಮಕ್ರೋಧಗಳೆಲ್ಲಾ ದಹಿಸಿ ಭಸ್ಮ ಮಾಡುವ । ಆ ಮೃತ್ಯು ಮಾರಿಗಳೆಲ್ಲ ಭೃತ್ಯರಾಹರೊ । ಹೇಮ ವರ್ಣದಂತೆ ಪೊಳೆವ ಸಜ್ಜನರೊಡನೆ । ಭೂಮಿಯೊಳಗೆ ಅಪ್ರತಿಮಾನವಾ। ಭೀಮ ಭವವಾರಿಧಿ ಆವಾಗೆ ಗೋವತ್ಸಪಾದೋದಕ। ಸಾಮೀಪ್ಯದಲ್ಲಿ ಕಾಣಿಸುತಿಪ್ಪದೊ । ಶ್ಯಾಮ ಶಬಲವರ್ಣ ದೇವನೆ ಅತ್ಯಣು ನಿ। ಸ್ಸೀಮ ಇಂದ್ರಿಯಗಳಿಗಾಗೋಚರ ಪುರುಷ । ವ್ಯಾಮೋಹ ಪುಟ್ಟಿಸುವ ಈತನೆ ಇಷ್ಟ ದೈವ । ಕೋಮಲಗಾತುರ ಬಲು ಸುಲಭ । ಸಾಮಸ್ತ ವ್ಯಾಪ್ತ ವಿಶಿಷ್ಟಾವರಣ ಲಕುಮಿ ಮೀರಿ । ಸ್ವಾಮಿಯ ದಯದಿಂದಲಿ (ಸಾಮದಿಂದಲಿ) ಸ್ವಮಹಿಮ ಕಾಣೊ । ವ್ಯೋಮ ಕಾಲ ವೇದ ಗುಣ ಜೀವರಾಶಿ ತ್ರಿವಿಧ । ಈ ಮಾತಿನಂತೆ ಸರ್ವದಾ ಎಣಿಸೊ । ಸಾಮೋಪಾಸನೆ ಇದೆ ಮಾಡೊ ಮನುಜಾ। ಸಾಮವಂದಿತ ನಮ್ಮ ವಿಜಯವಿಠ್ಠಲರೇಯಾ । ಕಾಮಿಸಿದಂತೆ ಫಲವ ಕೊಡುತಿಪ್ಪನೊ ॥೧॥

**ಮಟ್ಟತಾಳ**

ಹಿಂಕಾರ ಪ್ರದ್ಯುಮ್ನ ಪ್ರಸ್ತಾವ ವಾಸುದೇವ। ಉದ್ಗೀಥ ನಾರಾಯಣ ಪ್ರತಿಹಾರ ಅನಿರುದ್ಧ । ಸಂಕರುಷಣ ನಿಧನ ಈ ಪರಿ ಪಂಚ ಸಾಮ । ಶಂಕೆ ಇಲ್ಲದೆ ಜನರು ಕೊಂಡಾಡಿ ಭಕುತಿಯಲಿ । ಮಂಕು ಬುದ್ಧಿ ಬಲು ದೂರಾಗಿ ಪೋಗುವದು । ಸಂಕಟ ತೊಲಗುವದು ದೇಹದೊಳಗಿದ್ದ । ಓಂಕಾರ ಮೂರ್ತಿ ವಿಜಯವಿಠ್ಠಲನಲ್ಲಿ ಅ । ಲಂಕಾರನಾಗಿ ಪೂಜಿಪ ಜೀವ ಹೃದ್ಗತನಾ ॥೨॥

**ತ್ರಿವಿಡಿತಾಳ**

ಬಿಂಬೋಪಾಸನೆ ಮಾಡು ಭಕುತಿ ಪೂರ್ವಕದಿಂದ । ಡಂಬಕವನೆ ತೊರೆದು ತೀವ್ರದಲ್ಲಿ। ಡಿಂಬಾದೊಳಗೆ ಇದ್ದ ಹೃದಯಸ್ಥ ಮೂರ್ತಿಯ। ಬೆಂಬಿಡದೆ ನೋಡುವದು ಬಹು ಪ್ರಕಾರ । ನಂಬು ಸಂತತ ಸಂಯೋಗ ಮೊದಲಾವರ್ತಿಲಿ । ಹೊಂಬಂಣ ವರ್ಣನು ಆ ತರುವಾಯ । ಕಾಂಬ ಮೂರ್ತಿಗಳ ಪೆಸರು ಕೇಳು ಶ್ರೀ ವಿಷ್ಣು । ಅಂಬುಜ ಸಂಭವ ರುದ್ರನಾಮಾ । ಇಂಬಾಗಿ ಇಪ್ಪುದು ಪರಿಚ್ಛೇದ ತ್ರಯದಲ್ಲಿ । ಅಂಬುಧಿ ನಂದನೆ ಲಕುಮಿವಾಣಿ । ಅಂಬಿಕ ನಾಮಾದಲ್ಲಿ ತತ್ತತ್‌ಸ್ಥಾನದೆಡಿಯಾ । ಬೆಂಬಲವಾಗಿ ಪಾಲಿಸು ತಿಪ್ಪಳು । ತುಂಬಿದ ಪ್ರಕೃತಿ ಗುಣ ಸಾಮ್ಯ ಪರಮಾಣುಗಳು । ಎಂಬೋವು ಒಂದೊಂದಾನಂತ ಮಿಳಿತ । ಇಂಬುಗೊಂಡಿಹವು ಅವ್ಯಕ್ತದಿ ಮನ । ಅಂಬಕ ಮಿಕ್ಕಾದ ದಶ ಕರಣ। ಅಂಬರಾದಿಭೂತ ಪಂಚ ತನ್ಮಾತ್ರಗಳು । ಎಂಬ ತತ್ವಗಳು ಇಪ್ಪತ್ತುನಾಲ್ಕು । ತುಂಬಿದ ಚಿತ್ತದಲ್ಲಿ ವಿಚಾರಿಸಿ ಹರು । ಷಾಂಬುಧಿಯೊಳಗಿರು ಹಗಲಿರಳು । ಶಂಬರಾರಿ ಜನಕ ವಿಜಯವಿಠ್ಠಲರೇಯ । ನಂಬಿದ ಭಕ್ತರಿಗೆ ನಾನಾಪರಿ ಪೊಳೆವ ॥೩॥

**ಅಟ್ಟತಾಳ**

ಗುಣ ಕಾಲ ದೇಶವು ಕರ್ಮ ನಾನಾ ಜೀವಾ । ನೆನೆಸೋದು ಅನಾದಿಯಿಂದ ಸಿದ್ಧವೆಂದು। ಎಣಿಸಿ ಕಾರ್ಯಗಳೆಲ್ಲ ಸೂಕ್ಷ್ಮ ಸ್ಥೂಲ ಬಹು । ಗಣನೆ ಇಲ್ಲದೆ ಬೊಮ್ಮಾಂಡ ಬಾಹ್ಯಾಂತರ। ಕ್ಷಣ ಬಿಡದಲೆ ಸಾಮವಿದ್ಯವನು ಗ್ರಹಿಸಿ । ಇನ ಮಂಡಲದಲ್ಲಿ ಉಪಾಸನೆ ಹೃ । ದ್ವನಜದಲ್ಲಿ ಇದೆ ಈ ವಿಧದಲ್ಲಿ ತಿಳಿದು । ಗುಣವಂತನಾಗು ಭವ ಬೀಜವ ನೀಗು । ತೃಣ ಮೊದಲಾದ ದ್ರವ್ಯದಲ್ಲಿ ಯೋಚಿಸು । ಗುಣಗಣ ಪೂರ್ಣ ಶ್ರೀವಿಜಯವಿಠ್ಠಲನ್ನ । ಮನಮೆಚ್ಚಾ ಭಜಿಸಿ ಮಹಾತ್ಮರ ಸೇರೋ॥೪॥

**ಆದಿತಾಳ**

ಒಂದೆರಡು ಮೂರು ನಾಲ್ಕು । ಮುಂದೈದು ಆರೇಳೆಂಟು । ನಂದಾನ ಹತ್ತು ಹನ್ನೊಂದು ಹನ್ನೆರಡು ಇಪ್ಪ-। ತ್ತೊಂದು (ಪಾ. ಇಂತೆಂದು) ಈ ಪರಿ ಇಪ್ಪತ್ತೆರಡರ ಪರಿಯಂತ ಸು । ನಂದದಿಂದಲಿ ಎಣಿಸಿ ಸಾಮೋಪಾಸನೆಮಾಡು । ಕುಂದದಲೆ ಕೇಶವಾದಿ ಮತ್ಸ್ಯಾದಿ ವಾಸುದೇವ। ವಂದಿಸಿ ಇನಿತು ನಿತ್ಯ ಕೊಂಡಾಡಿ ಕಂಡಲ್ಲಿ । ನಿಂದಲ್ಲಿ ಧ್ಯಾನಮಾಡು ಸ್ಮರಿಸು ವಿವೇಕನಾಗಿ । ಎಂದೆಂದಿಗೆ ಕೇಳು ಪಾಪಲೇಪವೆ ಇಲ್ಲಾ । ಬಂಧನ ಪರಿಹಾರ ಭಕುತಿ ಮಾತುರ ಮಾಡು । ನಂದಮೂರುತಿ ನಮ್ಮ ವಿಜಯವಿಠ್ಠಲರೇಯ । ಬಂದು ಹೃತ್ಕಮಲದಲ್ಲಿ ಸುಳಿದಾಡುವ ನಲಿದು ॥೫॥

**ಜತೆ**

ಸಕಲಬಗೆಯಿಂದ ಸಾಮವಂತನಾಗು । ರುಕುಮಿಣಿಪತಿ ವಿಜಯವಿಠ್ಠಲನ್ನ ಸ್ಮರಿಸು॥೬॥

## ಪರಿಶಿಷ್ಟ - ೬

## ಯಕ್ಷಪ್ರಶ್ನೆಗಳು - ಧರ್ಮೋತ್ತರಗಳು

## (ಮಹಾಭಾರತ-ಆರಣ್ಯಕ ಪರ್ವ - ೨೯೭ ನೇ ಅಧ್ಯಾಯ)

೧. ಹೇ ಧರ್ಮರಾಜನೇ ! ಸೂರ್ಯನು ಉದಯಿಸುವಂತೆ ಮಾಡುವರಾರು?- ಬ್ರಹ್ಮನು ಸೂರ್ಯನನ್ನು ಉದಯಿಸುವಂತೆ ಮಾಡುತ್ತಾನೆ.

೨. ಸೂರ್ಯನ ಸುತ್ತಲೂ ಸಂಚರಿಸುವವರಾರು? - ದೇವತೆಗಳು ಅವನ ಸುತ್ತಲೂ ಸಂಚರಿಸುತ್ತಾರೆ.

೩. ಸೂರ್ಯನು ಮುಳುಗುವಂತೆ ಮಾಡುವವರಾರು? - ಕಾಲ ಧರ್ಮವು ಸೂರ್ಯನನ್ನು ಮುಳುಗುವಂತೆ ಮಾಡುತ್ತದೆ.

೪. ಧರ್ಮವು ಎಲ್ಲಿ ಪ್ರತಿಷ್ಠಿತವಾಗಿದೆ? - ಧರ್ಮವು ಸತ್ಯದಲ್ಲಿ ಪ್ರತಿಷ್ಠಿತವಾಗಿದೆ.

೫. ಮನುಷ್ಯನು ಯಾವುದರಿಂದ ಶ್ರೋತ್ರಿಯನಾಗುತ್ತಾನೆ? - ವೇದಾಧ್ಯಯನದಿಂದ ಶ್ರೋತ್ರಿಯನಾಗುತ್ತಾನೆ.

೬. ಮನುಷ್ಯನು ಯಾವುದರಿಂದ ಮಹತ್ತನ್ನು ಸಾಧಿಸಬಲ್ಲನು? - ತಪಸ್ಸಿನಿಂದ ಮಹತ್ತನ್ನು ಸಾಧಿಸಬಲ್ಲನು.

೭. ಮನುಷ್ಯನು ಯಾವುದರಿಂದ ಇನ್ನೊಬ್ಬನ ಸಹಾಯ ಪಡೆಯಬಲ್ಲನು? -ಧೈರ್ಯದಿಂದ ಸಹಾಯಬಲವುಳ್ಳವನಾಗುತ್ತಾನೆ.

೮. ಮನುಷ್ಯನು ಯಾವುದರಿಂದ ಬುದ್ಧಿವಂತನಾಗುತ್ತಾನೆ? - ಜ್ಞಾನವೃದ್ಧರ ಹಾಗೂ ವಯೋವೃದ್ಧರ ಸೇವೆ ಮಾಡುವುದರಿಂದ ಬುದ್ಧಿವಂತನಾಗುತ್ತಾನೆ.

೯. ಬ್ರಾಹ್ಮಣರ ದೇವತ್ವವು ಯಾವುದು ? (ಬ್ರಾಹ್ಮಣರಿಗೆ ಯಾವುದರಿಂದ ದೇವತ್ವವು ಅಂದರೆ ಪೂಜ್ಯತ್ವವು ಪ್ರಾಪ್ತವಾಗುತ್ತದೆ?) - ಸ್ವಾಧ್ಯಾಯವೇ ಬ್ರಾಹ್ಮಣರಿಗೆ ದೇವತ್ವವು.

೧೦. ಸಜ್ಜನರ ಧರ್ಮವಾವುದು? - ತಪಸ್ಸೇ ಸಜ್ಜನರ ಧರ್ಮವು.

೧೧. ಇವರಿಗೆ ಮಾನವ ಸಂಬಂಧಿಯಾದ ಭಾವವು ಯಾವುದು ? - ಮರಣವೇ ಮನುಷ್ಯತ್ವವು.

೧೨. ಸಜ್ಜನರ ಯಾವ ಕಾರ್ಯವು ದುಷ್ಟರ ಅಸತ್ಕಾರ್ಯಕ್ಕೆ ಸಮಾನವಾಗಿರುತ್ತದೆ?- ಪರನಿಂದೆಯು.

೧೩. ಕ್ಷತ್ರಿಯರಿಗೆ ದೇವತ್ವಪ್ರಾಪ್ತಿ ಯಾವುದರಿಂದ? - ಶಸ್ತ್ರಾಸ್ತ್ರವಿದ್ಯೆಯಿಂದ.

೧೪. ಕ್ಷತ್ರಿಯರ ಸದ್ಧರ್ಮ ಯಾವುದು ? - ಯಜ್ಞಾನುಷ್ಠಾನವು.

೧೫. ಕ್ಷತ್ರಿಯರ ಮನುಷ್ಯಭಾವವು ಯಾವುದು? - ಭಯವೆಂಬುದು ಕ್ಷತ್ರಿಯರ ಮನುಷ್ಯತ್ವವು.

೧೬. ಕ್ಷತ್ರಿಯರ ಅಸದ್ಧರ್ಮವಾವುದು? - ಆಶ್ರಿತರ ಪರಿತ್ಯಾಗ.

೧೭. ಯಜ್ಞಕ್ಕೆ ಮುಖ್ಯವಾದ ಸಾಧನವು ಯಾವುದು? - ಪ್ರಾಣ.
೧೮. ಯಜ್ಞಕ್ಕೆ ಯೋಗ್ಯವಾದ ಯಜುಸ್ಸು ಯಾವುದು ? - ಮನಸ್ಸು.
೧೯. ಯಜ್ಞಕ್ಕೆ ಆಧಾರಭೂತವಾದುದು ಯಾವುದು? - ಋಗ್ವೇದ.
೨೦. ಯಾವುದಿಲ್ಲದೆ ಯಜ್ಞದ ಅಸ್ತಿತ್ವವು ಉಳಿಯುವುದಿಲ್ಲ? - ಋಗ್ವೇದವಿಲ್ಲದೆ.

೨೧. ದೇವತರ್ಪಣವೀಯುವವರಿಗೆ ದೊರೆಯುವ ಶ್ರೇಷ್ಠ ಫಲವಾವುದು? - ಮಳೆ.
೨೨. ಪಿತೃತರ್ಪಣ ಕೊಡುವವರಿಗೆ ದೊರೆಯುವ ಶ್ರೇಷ್ಠ ಫಲ ಯಾವುದು? -ಬೀಜ.
೨೩. ಸುಖವನ್ನು ಬಯಸುವವರಿಗೆ ಶ್ರೇಷ್ಠ ಸಾಧನವಾವುದು? - ಗೋವುಗಳು.
೨೪. ಸಂತತಿಯನ್ನು ಅಪೇಕ್ಷಿಸುವವರಿಗೆ ಉತ್ತಮವಾದ ಫಲ ಯಾವುದು? - ಪುತ್ರ ಸಂತಾನ.

೨೫. ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುತ್ತ, ಬುದ್ಧಿವಂತನಾಗಿದ್ದು ಲೋಕದಲ್ಲಿ ಎಲ್ಲ ಜನರಿಂದ ಗೌರವಿಸಲ್ಪಡುತ್ತ, ಎಲ್ಲ ಜೀವಿಗಳ ಮೆಚ್ಚುಗೆಗೆ ಪಾತ್ರನಾಗಿದ್ದ ಯಾವನು ಉಸಿರಾಡಿಸುತ್ತಿದ್ದರೂ ಮೃತನೆಂದು ತಿಳಿಯಲ್ಪಡುತ್ತಾನೆ? (ಯಾವ ಪುರುಷನು ಜೀವಂತನಾಗಿದ್ದರೂ ಮೃತನಾದವನಂತಿರುವನು?) - ದೇವಯಜ್ಞ, ಅತಿಥಿಯಜ್ಞ, ಭೂತಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ ಎಂಬ ಈ ಪಂಚಯಜ್ಞಗಳನ್ನು ಮಾಡದ ಮನುಷ್ಯನು ಬದುಕಿದ್ದರೂ ಸತ್ತಂತೆ ಇರುತ್ತಾನೆ. (ದೇವತೆ, ಅತಿಥಿ, ಸೇವಕರು, ಪಿತೃಗಳು, ಮತ್ತು ಪರಮಾತ್ಮ ಇವರನ್ನು ತೃಪ್ತಿಪಡಿಸದವನು ಬದುಕಿದ್ದರೂ ಮೃತನಾದವನಂತಿರುವನು.)

೨೬. ಭೂಮಿಗಿಂತ ಶ್ರೇಷ್ಠವಾದುದು ಯಾವುದು? - ಹೆತ್ತತಾಯಿ.
೨೭. ಆಕಾಶಕ್ಕಿಂತ ಎತ್ತರದಲ್ಲಿರುವುದು ಯಾವುದು? - ತಂದೆ.
೨೮. ವಾಯುವಿಗಿಂತ ಹೆಚ್ಚು ವೇಗವುಳ್ಳದ್ದು ಯಾವುದು? - ಮನಸ್ಸು.
೨೯. ಹುಲ್ಲಿಗಿಂತ ಹೆಚ್ಚಾಗಿ ಬೆಳೆಯುವುದು ಯಾವುದು? - ಮನುಷ್ಯನ ಚಿಂತೆಗಳು (ಆಲೋಚನೆಗಳು).

೩೦. ಯಾವ ಜೀವಿಯು ನಿದ್ರಿಸುತ್ತಿರುವಾಗಲೂ ಕಣ್ಣು ಮುಚ್ಚಿರುವುದಿಲ್ಲ?- ಮೀನು.
೩೧. ಯಾವುದು ಜನಿಸಿದ ನಂತರವೂ ಚಲನೆ ಇಲ್ಲದೇ ಇರುತ್ತದೆ? -ಮೊಟ್ಟೆ, ತತ್ತಿ.
೩೨. ಯಾವುದಕ್ಕೆ ಹೃದಯವಿರುವುದಿಲ್ಲ? - ಕಲ್ಲಿಗೆ ಹೃದಯವಿಲ್ಲ.
೩೩. ಯಾವುದು ವೇಗದಿಂದ ವರ್ಧಿಸುತ್ತದೆ? - ನದೀ.

೩೪. ಪ್ರವಾಸಿಗೆ ಮಿತ್ರನಾರು ? - ಸಹಪ್ರವಾಸಿಗರೇ ಮಿತ್ರರು.
೩೫. ಮನೆಯಲ್ಲಿರುವಾಗ ಮಿತ್ರನಾರು ? - ಹೆಂಡತಿ.
೩೬. ರೋಗಿಗೆ ಸ್ನೇಹಿತನಾರು? - ವೈದ್ಯನೇ ಸ್ನೇಹಿತನು.
೩೭. ಸಾಯಲಿರುವವನಿಗೆ (ಮರಣ ಸಮೀಪಿಸಿರುವವನ) ಮಿತ್ರನಾರು? - ದಾನ.

೩೮. ಹೇ ಧರ್ಮರಾಜಾ! ಎಲ್ಲ ಜೀವಿಗಳಿಗೆ ಅತಿಥಿ ಯಾರು? - ಅಗ್ನಿ.

೩೯. ಸನಾತನ ಧರ್ಮ ಯಾವುದು? - ಮೋಕ್ಷ ಮಾರ್ಗವನ್ನು ತೋರಿಸುವ ಮತ್ತು ವಿನಾಶವಿಲ್ಲದ ಸದ್ಧರ್ಮವೇ ಸನಾತನ ಧರ್ಮವು.

೪೦. ಅಮೃತವು ಯಾವುದು ? - ಗೋಕ್ಷೀರ ಮತ್ತು ಸೋಮವೆಂಬ ಹವಿಸ್ಸಿನ ಹಾಲು ಅಮೃತವು.

೪೧. ಈ ಸಕಲ ಜಗತ್ತು ಏನು ? -ಸರ್ವಲೋಕಗಳಲ್ಲಿಯೂ ವಾಯುವು ವ್ಯಾಪಿಸಿರುವುದರಿಂದ ಈ ಜಗತ್ತು ವಾಯುರೂಪವಾಗಿದೆ.

೪೨. ಒಂಟಿಯಾಗಿ ಸಂಚರಿಸುವವರಾರು? - ಸೂರ್ಯ.

೪೩. ಮತ್ತೆ ಮತ್ತೆ ಜನಿಸುವವನಾರು ? - ಚಂದ್ರ.

೪೪. ಹಿಮ ಅಥವಾ ಮಂಜಿಗೆ ಯಾವುದು ಔಷಧವಾಗಿದೆ? - ಬೆಂಕಿ.

೪೫. ಎಲ್ಲವನ್ನು ಒಳಗೆ ಅಡಗಿಸಿಕೊಳ್ಳುವ ಹಿರಿದಾದ ಪಾತ್ರೆ ಯಾವುದು ? -ಭೂಮಿ.

೪೬. ಧರ್ಮವು ನೆಲೆಗೊಂಡಿರುವುದೆಲ್ಲಿ? -ದಕ್ಷತೆ, ಋಜುತ್ವಗಳಲ್ಲಿ ಧರ್ಮವು ನೆಲೆಗೊಂಡಿರುವುದು.

೪೭. ಯಶಸ್ಸಿಗೆ ಮೂಲ ಕಾರಣ ಯಾವುದು? - ದಾನ.

೪೮. ಸ್ವರ್ಗಪ್ರಾಪ್ತಿಗೆ ಮುಖ್ಯ ಕಾರಣವಾವುದು? - ಸತ್ಯ ವಚನ.

೪೯. ಸುಖಕ್ಕೆ ಕಾರಣ ಯಾವುದು? - ಶೀಲ.

೫೦. ಯಾರು ಮನುಷ್ಯನ ಆತ್ಮನೆಂದೆನಿಸುವರು? - ಮಗ.

೫೧. ಮಾನವನಿಗೆ ದೇವರಿಂದ ಕೊಡಲ್ಪಟ್ಟ ಗೆಳೆಯನಾರು? - ಕೈ ಹಿಡಿದ ಪತ್ನಿ.

೫೨. ಮನುಷ್ಯನ ಜೀವನಕ್ಕೆ ಮುಖ್ಯ ಸಾಧನವು ಯಾವುದು? - ಮಳೆ.

೫೩. ಮನುಷ್ಯನ ಮುಖ್ಯ ಕರ್ತವ್ಯವೇನು ? - ದಾನ.

೫೪. ಶ್ರೇಷ್ಠ ಪುರುಷರಲ್ಲಿರುವ ಶ್ರೇಷ್ಠ ಗುಣವಾವುದು? - ದಕ್ಷತೆ (ಸಾಮರ್ಥ್ಯ).

೫೫. ಧನಗಳಲ್ಲಿ ಉತ್ತಮವಾದ ಧನವು ಯಾವುದು? - ವಿದ್ಯೆ (ಶಾಸ್ತ್ರಜ್ಞಾನ).

೫೬. ಲಾಭಗಳಲ್ಲಿ ಶ್ರೇಷ್ಠವಾದ ಲಾಭವು ಯಾವುದು? - ಶ್ರೇಷ್ಠವಾದ ಆರೋಗ್ಯ.

೫೭. ಸುಖಗಳಲ್ಲಿ ಉತ್ತಮವಾದ ಸುಖವು ಯಾವುದು? - ಸಂತೃಪ್ತಿಯೇ ಪರಮ ಸುಖವು.

೫೮. ಲೋಕದಲ್ಲಿ ಶ್ರೇಷ್ಠವಾದ ಧರ್ಮವು ಯಾವುದು? - ಸರ್ವಭೂತದಯೆ.

೫೯. ನಿರಂತರ ಸತ್ಫಲವನ್ನು ಕೊಡುವ ಧರ್ಮವು ಯಾವುದು? - ವೇದೋಕ್ತ ಧರ್ಮಗಳು (ಈ ಧರ್ಮಗಳ ಪಾಲನೆಯು ಸದಾ ಸತ್ಫಲಗಳನ್ನು ಕೊಡುತ್ತದೆ).

೬೦. ಯಾವುದನ್ನು ನಿಗ್ರಹಿಸಿದರೆ ದುಃಖಕ್ಕೆ ಒಳಗಾಗುವುದಿಲ್ಲ ? - ಮನಸ್ಸನ್ನು.

೬೧. ಯಾರೊಡನೆ ಮಾಡಿದ ಸ್ನೇಹವು ನಾಶವಾಗುವುದಿಲ್ಲ? - ಸಜ್ಜನರ ಸ್ನೇಹ.

೬೨. ಯಾವುದರ ತ್ಯಾಗದಿಂದ ಮನುಷ್ಯನು ಜನಪ್ರಿಯನಾಗಬಲ್ಲನು? - ದುರಭಿಮಾನ.
೬೩. ಯಾವುದನ್ನು ತ್ಯಜಿಸಿದರೆ ಮನುಷ್ಯನು ದುಃಖಿಯಾಗುವದಿಲ್ಲ? - ಕ್ರೋಧ.
೬೪. ಯಾವುದನ್ನು ದೂರೀಕರಿಸಿದಾಗ ಮನುಷ್ಯನು ಸಿರಿವಂತನಾಗಬಲ್ಲನು? - ಆಶೆ.
೬೫. ಯಾವುದರ ತ್ಯಾಗದಿಂದ ಮನುಷ್ಯನು ಸುಖಿಯಾಗಬಲ್ಲನು? - ಲೋಭ.

೬೬. ಏತಕ್ಕಾಗಿ ಬ್ರಾಹ್ಮಣರಿಗೆ ದಾನ ಧರ್ಮಗಳನ್ನು ಮಾಡಬೇಕು? - ಪುಣ್ಯ ಪ್ರಾಪ್ತಿಗಾಗಿ.
೬೭. ಏತಕ್ಕಾಗಿ ನಟ ನರ್ತಕಿಯರಿಗೆ, ಕಲಾವಿದರಿಗೆ ಪಾರಿತೋಷಕಗಳನ್ನು ಕೊಡಬೇಕು? - ಅವರ ಪ್ರತಿಭೆಯ ಪುರಸ್ಕಾರ ಹಾಗೂ ಕೀರ್ತಿಗಾಗಿ.
೬೮. ಭೃತ್ಯರಿಗೆ ಏತಕ್ಕೆ ವೇತನವನ್ನು ಕೊಡಬೇಕು ? - ಭೃತ್ಯರ ಪೋಷಣೆಗಾಗಿ.
೬೯. ರಾಜರಿಗೆ ಕಪ್ಪು ಕಾಣಿಕೆ ಕೊಡುವುದೇಕೆ? - ರಾಜಾಗ್ರಹಕ್ಕೆ ಗುರಿಯಾಗಕೂಡದೆಂದು ಮತ್ತು ದುರ್ಜನರ ಭಯದಿಂದ ರಾಜನ ರಕ್ಷಣೆ ಪಡೆಯಲು.

೭೦. ಈ ಲೋಕವು ಯಾವುದರಿಂದ ಆವರಿಸಲ್ಪಟ್ಟಿದೆ? - ಅಜ್ಞಾನದಿಂದ.
೭೧. ವಸ್ತುವು ಯಾವುದರಿಂದ ಪ್ರಕಾಶಿಸುವುದಿಲ್ಲ? - ಕತ್ತಲೆಯಿಂದ.
೭೨. ಮನುಷ್ಯನು ತನ್ನ ಸ್ನೇಹಿತರನ್ನು ದೂರ ಮಾಡಲು ಕಾರಣವೇನು? - ಲೋಭ.
೭೩. ಯಾವ ಕಾರಣದಿಂದ ಸ್ವರ್ಗಪ್ರಾಪ್ತಿಯಾಗುವುದಿಲ್ಲ? - ದುರ್ಜನರ ಸಂಗ ಮತ್ತು ವಿಷಯ ಸಂಗ.

೭೪. ಮನುಷ್ಯನು ಮೃತನಾಗುವುದು ಹೇಗೆ ? -ಅತಿ ದರಿದ್ರನಾಗಿದ್ದರೆ ಇದ್ದೂ ಮೃತನಾದಂತೆ.
೭೫. ರಾಷ್ಟ್ರವು ಮೃತವಾಗುವುದು ಹೇಗೆ? - ಅರಾಜಕತೆಯಿಂದ.
೭೬. ಮಾಡಿದ ಶ್ರಾದ್ಧವು ನಿಷ್ಫಲವಾಗುವುದು ಹೇಗೆ? - ಶ್ರೋತ್ರಿಯರಾದ ಬ್ರಾಹ್ಮಣರು ಇಲ್ಲದಿದ್ದರೆ.
೭೭. ಮಾಡಿದ ಯಜ್ಞವು ನಿಷ್ಫಲವಾಗುವುದು ಯಾವಾಗ? - ದಕ್ಷಿಣೆ ಕೊಡದಿದ್ದಾಗ.

೭೮. ದಿಕ್ಕುಗಳಲ್ಲಿ ಶ್ರೇಷ್ಠವಾದುದು ಯಾವುದು? - ಸತ್ಪುರುಷರೇ ಶ್ರೇಷ್ಠದಿಕ್ಕು (ಆಶ್ರಯ).
೭೯. ಯಾವುದು 'ನೀರು' ಎಂದು ಕರೆಯಲ್ಪಡುತ್ತದೆ ? - ಆಕಾಶ (ನೀರು ತುಂಬಿದ ಮೋಡಗಳಿಗೆ ಆಶ್ರಯವಾಗಿರುವುದರಿಂದ).
೮೦. ಅನ್ನ ಯಾವುದು ? - ಗೋಮಾತೆ (ಹಾಲನ್ನು ಕರೆಯುವುದರಿಂದ).
೮೧. ವಿಷ ಯಾವುದು? - ಇನ್ನೊಬ್ಬರಲ್ಲಿ ಯಾಚನೆ ಮಾಡುವುದೇ ವಿಷವು.
೮೨. ಶ್ರಾದ್ಧಕ್ಕೆ ಯೋಗ್ಯವಾದ ಕಾಲವು ಯಾವುದು? - ಯೋಗ್ಯ ಬ್ರಾಹ್ಮಣನು ಸಿಕ್ಕ ಕಾಲವೇ ಶ್ರಾದ್ಧಕ್ಕೆ ಯೋಗ್ಯವಾದ ಸಮಯವು.

೮೩. ತಪಸ್ಸಿನ ಲಕ್ಷಣವೇನು ? - ತನಗೆ ವಿಹಿತವಾದ ಧರ್ಮಾಚರಣೆಯಲ್ಲಿರುವುದೇ ತಪಸ್ಸು.
೮೪. ಯಾವುದಕ್ಕೆ ದಮ ಎನ್ನಬೇಕು ? - ಮನಸ್ಸಿನ ನಿಗ್ರಹವೇ ದಮವು.
೮೫. ಸ್ಥೈರಣೆಯಲ್ಲಿ ಅತಿಶ್ರೇಷ್ಠವಾದದ್ದು ಯಾವುದು? - ಶಿತೋಷ್ಣ ಸುಖದುಃಖಾದಿ ದ್ವಂದ್ವಗಳನ್ನು ಸಹಿಸುವುದು.
೮೬. ಯಾವುದಕ್ಕೆ ಲಜ್ಜೆ ಎನ್ನಬೇಕು ? - ಕೆಟ್ಟ ಕೆಲಸದಿಂದ ಹಿಂದೆ ಅಡಿ ಇಡುವುದು.

೮೭. ಹೇ ಮಾಹಾರಾಜಾ! ಜ್ಞಾನವೆಂದರೇನು ? - ಯಥಾರ್ಥವಾದ ವಿಷಯವನ್ನು ಸರಿಯಾಗಿ ತಿಳಿಯುವುದೇ ಜ್ಞಾನವು.

೮೮. ಯಾವುದಕ್ಕೆ ಶಮ ಎನ್ನಬೇಕು ? - ಮನಶ್ಶಾಂತಿಯೇ ಶಮವು.

೮೯. ಶ್ರೇಷ್ಠವಾದ ದಯೆ ಎಂದರೇನು? - ಎಲ್ಲ ಸಜ್ಜನರಿಗೆ ಸುಖವನ್ನು ಬಯಸುವದು.

೯೦. ಯಾವುದಕ್ಕೆ ಆರ್ಜವವೆನ್ನಬೇಕು? - ಸಮತ್ವದಿಂದ ಕಾಣುವ ಬುದ್ಧಿಯು ಆರ್ಜವವು.

೯೧. ಮಾನವನಿಗೆ ಗೆಲ್ಲಲು ಅಸಾಧ್ಯವಾದ ಶತ್ರು ಯಾರು ? - ಕ್ರೋಧ.

೯೨. ಕೊನೆಯಿಲ್ಲದ ವ್ಯಾಧಿ ಯಾವುದು ?- ಲೋಭವು.

೯೩. ಸಾಧು ಸಂತನು ಯಾರು ? - ಎಲ್ಲ ಪ್ರಾಣಿಗಳಿಗೆ ಹಿತವನ್ನು ಬಯಸುವವನು.

೯೪. ಅಸಾಧು ಯಾರು ?- ದಯಾಭಾವ ರಹಿತನಾದವನು ಅಸಾಧುವೆಂದೆನಿಸುತ್ತಾನೆ.

೯೫. ಹೇ ರಾಜನೇ! ಯಾವುದಕ್ಕೆ ಮೋಹ ಎಂದೆನ್ನಬೇಕು ? - ಧರ್ಮ ವಿಚಾರದಲ್ಲಿಯ ಅಜ್ಞಾನವೇ ಮೋಹವು.

೯೬. ಮಾನವೆಂದರೇನು? - ಆತ್ಮಾಭಿಮಾನವೇ ಮಾನವು.

೯೭. ಆಲಸ್ಯ ಯಾವುದು? - ಧರ್ಮಾಚರಣೆ ಇಲ್ಲದಿರುವುದೇ ಆಲಸ್ಯವು.

೯೮. ಯಾವುದಕ್ಕೆ ದುಃಖವೆನ್ನುತ್ತಾರೆ ? - ಅಜ್ಞಾನವೇ ಶೋಕವಾಗಿರುತ್ತದೆ.

೯೯. ಋಷಿಗಳು ಯಾವುದನ್ನು ಸ್ಥೈರ್ಯವೆಂದು ಕರೆದಿದ್ದಾರೆ? - ವರ್ಣಾಶ್ರಮೋಚಿತ ಸ್ವಧರ್ಮಾಚರಣೆಯಲ್ಲಿರುವ ದಾರ್ಢ್ಯಕ್ಕೆ ಸ್ಥೈರ್ಯವೆಂದಿದ್ದಾರೆ.

೧೦೦. ಯಾವುದಕ್ಕೆ ಧೈರ್ಯ ಎಂದು ಹೇಳುತ್ತಾರೆ ? - ಇಂದ್ರಿಯ ನಿಗ್ರಹಕ್ಕೆ.

೧೦೧. ಅತ್ಯುತ್ತಮವಾದ ಸ್ನಾನವು ಯಾವುದು ? - ಮನಸ್ಸಿನ ಕೊಳಚೆಯನ್ನು ತೊಳೆಯುವುದು ಅತ್ಯುತ್ತಮ ಸ್ನಾನವು.

೧೦೨. ದಾನವೆಂದರೆ ಯಾವುದು? - ಸಕಲ ಪ್ರಾಣಿಗಳ ಸಂರಕ್ಷಣೆಯೇ ದಾನವು.

೧೦೩. ಪಂಡಿತನಾದ ಪುರುಷನಾರು ? - ಧರ್ಮಗಳನ್ನು ಅರಿತವನು.

೧೦೪. ಯಾವನು ನಾಸ್ತಿಕನು? - ಅತೀಂದ್ರಿಯವಾದ ಸ್ವರ್ಗ, ನರಕ, ಪುಣ್ಯ, ಪಾಪ, ಪರಮಾತ್ಮ ಮುಂತಾದವುಗಳ ಅಸ್ತಿತ್ವವನ್ನು ನಿರಾಕರಿಸುವವನೇ ನಾಸ್ತಿಕ.

೧೦೫. ಮೂರ್ಖನಾರು ? - ನಾಸ್ತಿಕನೇ ಮೂರ್ಖನು.

೧೦೬. ಕಾಮ ಯಾವುದು? - ಸಂಸಾರಕ್ಕೆ ಕಾರಣವಾದದ್ದು ಕಾಮವು.

೧೦೭. ಮತ್ಸರವು ಯಾವುದು? - ಹೃದಯದ ತಾಪವೇ ಮತ್ಸರವು.

೧೦೮. ಅಹಂಕಾರ ಯಾವುದು? - ಅಜ್ಞಾನದ ಪರಮಾವಧಿಯೇ ಅಹಂಕಾರವು.

೧೦೯. ಯಾವುದನ್ನು ದಂಭ ಎಂಬುದಾಗಿ ಹೇಳುತ್ತಾರೆ ? - ಧ್ವಜದಂತೆ ಕೈ ಎತ್ತಿ ಜಗತ್ತಿಗೆ ತೋರಿಸಿಕೊಳ್ಳುವ ಧರ್ಮವೇ ದಂಭವು.

೧೧೦. ಯಾವುದು ಉತ್ತಮವಾದ ದೈವವೆಂದು ಹೇಳಲ್ಪಡುತ್ತದೆ ? - ದಾನದ ಫಲ

೧೧೧. ಪೈಶುನ್ಯ ಎಂದರೇನು ? - ಪರನಿಂದೆ.

**೧೧೨. ಧರ್ಮ, ಅರ್ಥ, ಕಾಮ ಈ ಮೂರೂ ಪರಸ್ಪರ ವಿರೋಧಿಗಳಾಗಿರುತ್ತವೆ. ಯಾವಾಗಲೂ ವಿರೋಧಿಗಳಾದ ಈ ಮೂರು ಒಂದೆಡೆ ಸೇರುವುದು ಹೇಗೆ ಸಾಧ್ಯ?**- ಧರ್ಮ ಮತ್ತು ಹೆಂಡತಿ ಇವರಿಬ್ಬರೂ ಯಾವಾಗ ಪರಸ್ಪರ ಹೊಂದಿಕೊಂಡಿರುತ್ತಾರೋ ಆಗ ಧರ್ಮ, ಅರ್ಥ, ಕಾಮ ಈ ಮೂರು ಪರಸ್ಪರ ವಿರೋಧಿಗಳಾದರೂ ಕೂಡಿಕೊಂಡು ಬೆಳೆಯಲು ಸಾಧ್ಯವಾಗುತ್ತದೆ.

**೧೧೩. ಭರತಕುಲ ಶ್ರೇಷ್ಠನಾದ ಧರ್ಮರಾಜಾ ! ಯಾವ ಪಾಪದಿಂದ ಮನುಷ್ಯನಿಗೆ ಅಕ್ಷಯವಾದ ನರಕವಾಸವು ಉಂಟಾಗುವುದೆಂಬ ನನ್ನ ಪ್ರಶ್ನೆಗೆ ಶೀಘ್ರದಲ್ಲಿ ಉತ್ತರಿಸು?**-
೧. ಯಾಚಕನಾದ ಬಡಬ್ರಾಹ್ಮಣನಿಗೆ ದಾನ ಕೊಡುವುದಾಗಿ ಹೇಳಿ ಅವನನ್ನು ಮನೆಗೆ ಕರೆಸಿ ಏನೂ ಇಲ್ಲ, ಹಿಂತಿರುಗಿ ಹೋಗು ಎಂದು ಹೇಳುವವನು ಶಾಶ್ವತವಾದ ನರಕವಾಸವನ್ನು ಹೊಂದುತ್ತಾನೆ.
೨. ವೇದಗಳು, ಧರ್ಮಶಾಸ್ತ್ರಗಳು, ಸದಾಚಾರಿಗಳಾದ ಬ್ರಾಹ್ಮಣರು, ದೇವತೆಗಳು, ಪಿತೃ ಕಾರ್ಯಗಳು, ಇವೆಲ್ಲವುಗಳಲ್ಲಿ ವಿಶ್ವಾಸವಿಲ್ಲದೇ ಅವುಗಳನ್ನು ನಿಂದಿಸುವವನು ನರಕಭಾಗಿಯಾಗುವನು.
೩. ಸಾಕಷ್ಟು ಧನವಿದ್ದರೂ ಲೋಭದಿಂದ ದಾನವೂ ಇಲ್ಲ, ಸ್ವಂತ ಭೋಗವೂ ಇಲ್ಲದೇ ಇರುವವನು ಮತ್ತು ದಾನ ಕೊಡುವುದಾಗಿ ಮಾತುಕೊಟ್ಟು ನಂತರ ಇಲ್ಲವೆಂದು ಹೇಳುವವನು ನಿತ್ಯ ನರಕಗಳನ್ನು ಹೊಂದುತ್ತಾರೆ.

**೧೧೪. ಮಹಾರಾಜನೇ ! ಬ್ರಾಹ್ಮಣ್ಯವು ಯಾವುದರಿಂದ ಸಿದ್ಧಿಸುತ್ತದೆ? ಕುಲದಿಂದಲೋ, ನಡತೆಯಿಂದಲೋ, ವೇದಾಧ್ಯಯನ ಮಾಡಿದ್ದರಿಂದಲೋ ಅಥ'ವಾ ಜ್ಞಾನಾರ್ಜನೆಯಿಂದಲೋ?** - ೧. ಯಕ್ಷನೇ, ಸ್ವಾಧ್ಯಾಯ, ವಿದ್ಯೆ ಇದಾವುದೂ ಬ್ರಾಹ್ಮಣ್ಯಸಿದ್ಧಿಗೆ ಕಾರಣವಲ್ಲ. ಸದಾಚಾರವೇ (ನಡತೆಯೇ) ಬ್ರಾಹ್ಮಣ್ಯಕ್ಕೆ ಮುಖ್ಯ ಕಾರಣವಾಗಿರುತ್ತದೆ. ೨. ಬ್ರಾಹ್ಮಣನು ಯತ್ನ ಪೂರ್ವಕ ಸದಾಚಾರಿಯಾಗಿರಬೇಕು. ಸದಾಚರಣೆಯಲ್ಲಿ ಕಡಿಮೆಯಾದರೂ ತೊಂದರೆ ಇಲ್ಲ, ಆದರೆ ಸದಾಚಾರವನ್ನೇ ಬಿಟ್ಟವನು ಮೃತಪ್ರಾಯನು. ೩. ಪಾಠ ಪ್ರವಚನ ಮಾಡುವವನು, ವೇದಾಧ್ಯಯನ ಮಾಡುವವನು, ಇತರ ಶಾಸ್ತ್ರಗಳನ್ನು ಪ್ರವಚನ ಮಾಡುವವರು ಎಲ್ಲರೂ ವ್ಯಸನಿಗಳು ಮತ್ತು ಮೂರ್ಖರು. ಆದರೆ ಸದಾಚಾರಿಯಾಗಿರುವವನೊಬ್ಬನೇ ಪಂಡಿತನು. ೪. ನಾಲ್ಕು ವೇದಗಳನ್ನು ಬಲ್ಲ ಬ್ರಾಹ್ಮಣನು ದುರಾಚಾರಿಯಾಗಿದ್ದರೆ ಅವನು ಶೂದ್ರನಿಗಿಂತಲೂ ಕಡೆ. ಅಗ್ನಿ ಹೋತ್ರವನ್ನು ಇಟ್ಟವನು ಮತ್ತು ಇಂದ್ರಿಯ ನಿಗ್ರಹವುಳ್ಳವನು ಬ್ರಾಹ್ಮಣನೆಂದು ತಿಳಿಯಲ್ಪಡುತ್ತಾನೆ.

**೧೧೫. ಪ್ರಿಯವಾಗಿ ಮಾತನಾಡುವವನಿಗೆ ಆಗುವ ಲಾಭವೇನು?** - ಪ್ರಿಯವಾಗಿ ಮಾತನಾಡುವವನು ಸರ್ವರಿಗೂ ಪ್ರಿಯನಾಗುತ್ತಾನೆ.

**೧೧೬. ವಿಮರ್ಶಿಸಿ ಕಾರ್ಯಮಾಡುವವನಿಗೆ ಆಗುವ ಲಾಭವೇನು?** - ವಿಮರ್ಶಿಸಿ ಕಾರ್ಯ ಮಾಡುವವನು ಹೆಚ್ಚು ಜಯವನ್ನು ಪಡೆಯುತ್ತಾನೆ.

೧೧೭. ಅಧಿಕ ಸಂಖ್ಯೆಯಲ್ಲಿ ಮಿತ್ರರನ್ನು ಸಂಪಾದಿಸಿದವನು ಏನನ್ನು ಹೊಂದುತ್ತಾನೆ? - ಹಲವಾರು ಮಿತ್ರರನ್ನು ಹೊಂದಿದವನು ಸುಖವಾಗಿರುತ್ತಾನೆ.

೧೧೮. ಧಾರ್ಮಿಕನಾಗಿರುವವನಿಗೆ ಬರುವ ಲಾಭವೇನು? - ಧಾರ್ಮಿಕನಾಗಿರುವವನು ಉತ್ತಮ ಗತಿಯನ್ನು ಹೊಂದುತ್ತಾನೆ.

೧೧೯. ಯಾರು ಆನಂದದಿಂದ ಇರುತ್ತಾರೆ? - ಯಾವನು ಹಗಲಿನ ಐದನೇ ಅಥವಾ ಆರನೇ ಯಾಮದಲ್ಲಿ ಅರ್ಥಾತ್ ಮಧ್ಯಾಹ್ನ ಸಮಯದಲ್ಲಿ ಪರಾನ್ನಕ್ಕಾಗಿ ಮನೆ ಮನೆಗೆ ಅಲಿಯದೆ ಸ್ವಗೃಹದಲ್ಲಿಯೇ ಶಾಕ-ಪಾಕವನ್ನು ತಯಾರಿಸಿ ಊಟ ಮಾಡುತ್ತಾನೆಯೋ, ಯಾವನು ಸಾಲಗಾರನಲ್ಲವೋ, ಮತ್ತು ತಿರುಗಾಡುವ ಸ್ವಭಾವದವನಲ್ಲವೋ ಅವನು ಪರಮ ಸುಖಿಯಾಗಿರುತ್ತಾನೆ.

೧೨೦. ಜಗತ್ತಿನಲ್ಲಿ ಆಶ್ಚರ್ಯಕರವಾದುದು ಯಾವುದು? - ಈ ಭೂಲೋಕದಲ್ಲಿ ಬದುಕಿರುವ ಜೀವಿಗಳು ಮರಣಾ ನಂತರ ಯಮಲೋಕಕ್ಕೆ ಹೋಗುತ್ತಿರುತ್ತಾರೆ. ಬದುಕಿ ಉಳಿದ ಜೀವರು ಇದನ್ನೆಲ್ಲ ಕಂಡರೂ ತಾವು ಮಾತ್ರ ಶಾಶ್ವತವಾಗಿ (ಸಾವಿಲ್ಲದವರಾಗಿ)ಇರಬೇಕೆಂದು ಬಯಸುತ್ತಾರೆ. ಇದಕ್ಕಿಂತ ಹೆಚ್ಚಿನ ಆಶ್ಚರ್ಯಕರವಾದದ್ದು ಯಾವುದಿದೆ?

೧೨೧. ಉತ್ತಮವಾದ ಮಾರ್ಗವು ಯಾವುದು? - ಯೋಗ್ಯವಾದ ಮಾರ್ಗವು ತರ್ಕದಿಂದ ನಿಶ್ಚಿತವಾಗಲಾರದು. ಜ್ಞಾನಭಂಡಾರವಾಗಿರುವ ವೇದ ವಾಕ್ಯಗಳಿಗೆ ಒಬ್ಬೊಬ್ಬರು ಒಂದೊಂದು ಅರ್ಥವನ್ನು ಹೇಳುತ್ತಾರೆ. ವೇದ ಪಾರಂಗತನಾದ ಯಾವನೇ ಒಬ್ಬ ಋಷಿಯ ವಾಕ್ಯವನ್ನು ಪ್ರಮಾಣವೆಂದು ಎಲ್ಲರೂ ಒಪ್ಪುವುದಿಲ್ಲ. ಧರ್ಮದ ತತ್ತ್ವವು ನಿಗೂಢವಾಗಿದೆ. ಆದ್ದರಿಂದ ಸಜ್ಜನರು ಯಾವ ಮಾರ್ಗದಲ್ಲಿ ಹೋಗುತ್ತಾರೆಯೋ ಅದೇ ಉತ್ತಮವಾದ ಮಾರ್ಗವು.

೧೨೨. ವರ್ತಮಾನದಲ್ಲಿ ನಡೆಯುತ್ತಿರುವ ಮುಖ್ಯ ವಾರ್ತೆ ಯಾವುದು? - ಕಾಲನೆಂಬ ಪುರುಷನು ಅಜ್ಞಾನ, ಮಿಥ್ಯಾಜ್ಞಾನವೆಂಬ ಬ್ರಹ್ಮಾಂಡ ಕಟಾಹದಲ್ಲಿ ಜಗತ್ತಿನಲ್ಲಿಯ ಎಲ್ಲಾ ಜೀವಿಗಳನ್ನು ತುಂಬಿ, ಹಗಲು - ರಾತ್ರಿ ಎಂಬ ಇಂಧನವನ್ನು ರವಿಯೆಂಬ ಅಗ್ನಿಸ್ಪರ್ಶದಿಂದ ಉರಿಸುತ್ತ, ಮಾಸ, ಋತು, ದಿವಸಗಳೆಂಬ ಸೌಟುಗಳಿಂದ ಕೈಯಾಡಿಸಿ ತಿರುಗಿಸುತ್ತ ಆ ಎಲ್ಲ ಜೀವಿಗಳನ್ನು ಬೇಯಿಸುತ್ತಾನೆ ಎಂಬುದೇ ಪ್ರತಿದಿನದ ಮುಖ್ಯವಾರ್ತೆಯು.

೧೨೩. ಪುರುಷನೆಂದರೆ ಯಾರು ? - ಪುಣ್ಯ ಕರ್ಮಗಳನ್ನು ಮಾಡಿರುವ ಯಾವನ ಜಯ ಕೀರ್ತಿಯು ಭೂಲೋಕ ದೇವಲೋಕಗಳಲ್ಲಿ ವ್ಯಾಪಿಸಿರುವುದೋ ಅವನೇ ಪುರುಷನು.

೧೨೪. ಸರ್ವರಲ್ಲಿ ಶ್ರೇಷ್ಠ ಧನಿಕನಾರು? - ಪ್ರಿಯ ಮತ್ತು ಅಪ್ರಿಯ ವಿಷಯಗಳನ್ನು ಸುಖ ದುಃಖಗಳನ್ನು, ಭೂತ ಭವಿಷ್ಯತ್ತುಗಳನ್ನು ಯಾವನು ಸಮದೃಷ್ಟಿಯಿಂದ ನೋಡುವನೋ ಅವನೇ ಶ್ರೇಷ್ಠ ಧನಿಕನು.

## ಪರಿಶಿಷ್ಟ - ೭

## ಸಂಖ್ಯಾ ಸಂಕೇತ ಪ್ರಮೇಯ ಕೋಶ

### (ಸಾಧಕ ಸಾಧಕಿಯರು ತಿಳಿದಿರಬೇಕಾದ ಕೆಲವು ಪ್ರಮೇಯ ವಿಷಯಗಳು)

**ಶೂನ್ಯಂ** = ಪರಬ್ರಹ್ಮ (ಶಂ ಊನಂ ಯಾಪಯತಿ ದೈತ್ಯಾದೇರಿತಿ) - ಭಾಗ ೧೨.೬.೫.

**ಶೂನ್ಯಃ** = ಸುಖಲೇಶವೂ ಇಲ್ಲದ ತಮೋಯೋಗ್ಯನು (ಸದಾ ಶಮೂನಭಾವೇನ ಶೂನ್ಯ ಇತ್ಯುಚ್ಯತೇ ನರಃ) - ಭಾಗ. ತಾ. ನಿ. ೧೧. ೨೧. ೨೧.

**ಶೂನ್ಯಕಾಲ** = ಮಧ್ಯಾಹ್ನ, ಸಂಧ್ಯಾಕಾಲ, ಮಧ್ಯರಾತ್ರಿ

**ಶೂನ್ಯದೃಕ್** = ಅಪರೋಕ್ಷಜ್ಞಾನಿ (ಭಾಗ ೧೨.೬.೫)

### ೧. ಏಕ (ಒಂದು)

**ಏಕ** = ಶ್ರೀಹರಿ, ವಿಷ್ಣು (ಭಾಗ ೫.೧೨.೧೧, ೬.೪.೩೦, ೬.೧೬.೯, ೭.೭.೧೯, ೧೦.೯೪.೨೮,
ಭಾಗ ತಾ.ನಿ. ೬.೧೩.೩೦, ೧೧.೧೯.೨೭. ೧೧.೨೮.೩೬.)

**ಏಕಃ** - ವಿಷ್ಣು ಏಕೋ ನೈಕಃ ಸವಃ ಕಃ ಕಿಂ (ವಿಷ್ಣು ಸಹಸ್ರನಾಮ)
ತಸ್ಯಾಽಪಿ ಪರೋ ವಿಷ್ಣುರ್ಗುಣೈಃ ಸರ್ವೈರದೋಷವಾನ್
ಏಕ ಇತ್ಯುಚ್ಯತೇ ನಿತ್ಯಂ ಯಸ್ಮಾನ್ನಾನ್ಯಸ್ತಥಾ ವಿಧಃ - ಬೃ. ಭಾಷ್ಯ.

**ಏಕಾಕ್ಷರೀ ಮಂತ್ರ** - ಓಂ, ಶ್ರೀಂ

### ೨. ಎರಡು (ದ್ವಿ)

**ಎರಡು ವಿದ್ಯೆಗಳು** - ಪರವಿದ್ಯೆ, ಅಪರವಿದ್ಯೆ (ಪರಾ ವಿದ್ಯಾ, ಅಪರಾ ವಿದ್ಯಾ)

**ತತ್ತ್ವಗಳು ಎರಡು** - i) ಸ್ವತಂತ್ರ ತತ್ತ್ವ (ವಿಷ್ಣು) ii) ಅಸ್ವತಂತ್ರ ತತ್ತ್ವ (ರಮಾ ಬ್ರಹ್ಮಾದಿ ಜೀವ ಪರ್ಯಂತ).

### ೩. ಮೂರು (ತ್ರಿ)

**ಮೂರು ಗುರುಗಳು** - ತಾಯಿ, ತಂದೆ, ಆಚಾರ್ಯ. ಉಪದೇಶಗುರು, ಕುಲಗುರು, ಜಗದ್ಗುರು.

**ಮೂರು ಋಣಗಳು** - ದೇವಋಣ, ಋಷಿಋಣ, ಪಿತೃಋಣ.

**ಮೂರು ದುಃಖಗಳು** - ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ.

**ಜ್ಞಾನ ಪ್ರಾಪ್ತಿಯ ಮೂರು ಸಾಧನಗಳು (ಮೂರು ಪ್ರಮಾಣಗಳು)** - ಪ್ರತ್ಯಕ್ಷ, ಅನುಮಾನ, ಆಗಮ.

**ಮೋಕ್ಷದ ಮೂರು ಮಾರ್ಗಗಳು** - ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ

**ಮೂರು ಪ್ರಕಾರದ ಕರ್ಮಗಳು** - ನಿತ್ಯ, ನೈಮಿತ್ತಿಕ, ಕಾಮ್ಯ

**ಅಧ್ಯಯನದ ಮೂರು ಹಂತಗಳು** - ಶ್ರವಣ, ಮನನ, ನಿಧಿಧ್ಯಾಸನ.

**ಪರಮಾತ್ಮನ ಮೂರು ಧಾಮಗಳು** - ಶ್ವೇತದ್ವೀಪ, ಅನಂತಾಸನ, ವೈಕುಂಠ.

**ಸಾಧನ ತ್ರಯ** - ಜ್ಞಾನ, ಭಕ್ತಿ, ವೈರಾಗ್ಯ,

**ಮೂರು ಗುಣಗಳು** - ಸತ್ವಗುಣ, ರಾಜಸಗುಣ, ತಮೋಗುಣ.

**ತ್ರಿದಶ** - ದೇವತೆ. ತೃತೀಯಾ ದಶಾ ಯೌವನಂ ಏಷಾಂ ತೇ ತ್ರಿದಶಾಃ, ಭಾಗ ೮.೫.೩೯.

**ತ್ರಿದಶಾಧ್ಯಕ್ಷ** - ಸೃಷ್ಟಿ, ಸ್ಥಿತಿ, ಸಂಹಾರ ಎಂಬ ಮೂರಕ್ಕೆ ಅಥವಾ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸ್ವಾಮಿಯಾದವನು. ಶ್ರೀ ಹರಿ.

**ತ್ರಿದಂಡೀ** - ಯತಿ (ಮೌನದಿಂದ ವಾಗ್ದಂಡ, ನಿಷಿದ್ಧಾಚರಣೆ ತ್ಯಾಗದಿಂದ ದೇಹದಂಡ ಮತ್ತು ಪ್ರಾಣಾಯಾಮದಿಂದ ಮನೋದಂಡ ಈ ಮೂರು ದಂಡವುಳ್ಳವನು ಯತಿ, ಭಾಗ.೧೧.೧೮.೧೭.)

**ತ್ರಿನೇತ್ರ** - ನರಸಿಂಹ

**ತ್ರಿಯುಗ** - ಕೃತ, ತ್ರೇತಾ, ದ್ವಾಪರ ಈ ಮೂರು ಯುಗಗಳಲ್ಲಿ ಮಾತ್ರ ಭೂಮಿಯ ಮೇಲೆ ಅವತರಿಸಿರುವ ಶ್ರೀ ಹರಿ.

**೪. ನಾಲ್ಕು (ಚತುರ್)**

**ಚಾತುರ್ವರ್ಣ** - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ.

**ನಾಲ್ಕು ಆಶ್ರಮಗಳು** - ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ.

**ಜ್ಞಾನಪ್ರಾಪ್ತಿಯ ನಾಲ್ಕು ಸಾಧನಗಳು** -ಶ್ರದ್ಧಾ, ತತ್ಪರತಾ, ಇಂದ್ರಿಯ ಸಂಯಮ, ಯೋಗಸಂಸಿದ್ಧಿ.

**ನಾಲ್ಕು ವರ್ಜ್ಯಗಳು** - ಆತ್ಮನಿಂದಾ, ಆತ್ಮಸ್ತುತಿ, ಪರನಿಂದಾ, ಪರಸ್ತುತಿ.

**ಶಿಷ್ಟಾಚಾರದ ನಾಲ್ಕು ಲಕ್ಷಣಗಳು** - ಗುರುಶುಶ್ರೂಷಾ, ಸತ್ಯ, ಅಕ್ರೋಧ, ದಾನ.

**ನಾಲ್ಕು ಪ್ರಕಾರದ ಪುರುಷಾರ್ಥಗಳು** - ಧರ್ಮ, ಅರ್ಥ, ಕಾಮ, ಮೋಕ್ಷ.

**ನಾಲ್ಕು ಪ್ರಕಾರದ ಮುಕ್ತಿಗಳು** - ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ.

**ನಾಲ್ಕು ವೇದಗಳು** - ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ.

**ಚತುರಾತ್ಮಾ** = ವಿಷ್ಣುಃ. ಉತ್ತಮತ್ವ, ಸಹನಶಕ್ತಿ, ತೇಜಸ್ಸು ಮತ್ತು ಸುಖ ಈ ನಾಲ್ಕು ವಸ್ತುಗಳನ್ನು ಬೇಡುವವನಿಗೆ ಅವುಗಳನ್ನು ಕೊಡುವ ಪರಮಾತ್ಮ (ಹ.ಕ.ಸಾ)

**ಚತುರ್ವಿಧನಾಶ** = ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬುವ ನಾಲ್ಕು ನಾಶಗಳು. - ಭಗವದ್ಗೀತಾ. ಅ. ೨.೪.

**ಚತುರ್ವಿಧ ಭೂತದೇಹ** = ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಯ.

**೫. ಐದು (ಪಂಚ)**

**ಪ್ರಾತಃ ಸ್ಮರಣೀಯ ಐದು ಸ್ತ್ರೀಯರು** - ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ.

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥

**ಪಂಚಕೋಶ** - ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ.

**ಪಂಚಾಮೃತ** - ಆಕಳಿನ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ.

ದುಗ್ಧಂ ಚ ಶರ್ಕರಾ ಚೈವ ಘೃತಂ ದಧಿ ತಥಾ ಮಧು ।
ಪಂಚಾಮೃತಮಿದಂ ಪ್ರೋಕ್ತಂ...... ॥

**ಪಂಚಗವ್ಯ** - (ಆಕಳಿನಿಂದ ದೊರೆಯುವ ಐದು ಪದಾರ್ಥಗಳು. ಇವುಗಳನ್ನು ಒಂದು ಪ್ರಮಾಣದಲ್ಲಿ ಮಿಶ್ರಣ ಮಾಡುವುದರಿಂದ ಪಂಚಗವ್ಯ ಎಂಬುದು ಸಿದ್ಧವಾಗುವುದು)

ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಸ್ತಥೈವ ಚ ।
ಗವಾಂ ಪಂಚ ಪವಿತ್ರಾಣಿ ಪುನಂತಿ ಸಕಲಂ ಜಗತ್ ॥

-ಸ್ಕಂದ ಪುರಾಣ ರೇವಾಖಂಡ

ಗೋಮೂತ್ರ, ಗೋಮಯ, ಗೋಕ್ಷೀರ, ಮೊಸರು ಮತ್ತು ತುಪ್ಪ ಇವುಗಳ ಮಿಶ್ರಣದಿಂದಾದ ಪಂಚಗವ್ಯವನ್ನು ಸೇವಿಸುವಾಗ ಕೆಳಗಿನ ಶ್ಲೋಕವನ್ನು ಪಠಿಸಬೇಕು.

ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಾತ್ ಪಂಚಗವ್ಯಸ್ಯ ದಹತ್ಯಗ್ನಿರಿವೇಂಧನಮ್ ॥

**ಪಂಚಮುಖ, ಪಂಚಾಸ್ಯ** = ಕಪಿ, ನಾರಸಿಂಹ, ಗರುಡ, ಸೂಕರ ಮತ್ತು ಹಯವದನ ಮುಖಗಳುಳ್ಳ ವಾಯುಪುತ್ರ. ಶಿವ, ರುದ್ರ, ಪರಮಾತ್ಮ.

**ಪಂಚ ಪ್ರಾಣ** = ಶರೀರದೊಳಗಿನ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ಪಂಚ ಪ್ರಾಣ ವಾಯುಗಳು. ಇವುಗಳ ಸ್ಥಾನಗಳು- ಹೃದಯ, ಗುದ, ನಾಭಿ, ಕಂಠ, ಇಡೀ ಶರೀರ .

**ಪಂಚ ಸಂಸ್ಕಾರ** = ವೈಷ್ಣವರಿಗೆ ನಡೆಯಬೇಕಾದ ಐದು ವಿಧ ಸಂಸ್ಕಾರಗಳು.

**ತಾಪ** = ತಪ್ತ ಸುದರ್ಶನ ಮತ್ತು ಪಾಂಚಜನ್ಯ ಧರಿಸುವುದು.

**ಪುಂಡ್ರ** = ಊರ್ಧ್ವಪುಂಡ್ರಧಾರಣೆ

**ನಾಮ** = ಗುರುಗಳಿಂದ ಮಾಡಲ್ಪಟ್ಟ ದಾಸಾಂತ ನಾಮಕರಣ,

**ಮಂತ್ರ** = ಆಚಾರ್ಯರಿಂದ ಮಂತ್ರೋಪದೇಶ ಪಡೆಯುವುದು.

**ಯಾಗ** = ಆಚಾರ್ಯರಿಂದ ಅನುಗ್ರಹಿಸಲ್ಪಟ್ಟ ದೇವತಾ ಪೂಜಾಧಿಕಾರ.

**ಪಂಚವಿಧ ಜೀವರು** = ಸುರ, ನರ, ಪಿತೃ, ಗಂಧರ್ವ, ಅಸುರರು (ಭಾಗ ೧೧.೧೩..೨೩.)

**ಪಂಚಶೀಲ** = ದಾನ, ಮಿತಾಹಾರ, ಇಂದ್ರಿಯ ನಿಗ್ರಹ, ಪಾಪಕರ್ಮತ್ಯಾಗ, ತೀರ್ಥಕ್ಷೇತ್ರ ಯಾತ್ರೆ (ಆಗ್ನೇಯ ಪುರಾಣ).

**ಪಂಚಸೂನಾ** = ಪ್ರಾಣಿಗಳ ೫ ಹಿಂಸಾ ಸ್ಥಾನಗಳು

ಪಂಚ ಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ ।
ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥ -ಮನು ೩.೬೮.

**ಪರಮಾತ್ಮನ ಮೂರು ಧಾಮಗಳು** - ಶ್ವೇತದ್ವೀಪ, ಅನಂತಾಸನ, ವೈಕುಂಠ.

**ಸಾಧನ ತ್ರಯ** - ಜ್ಞಾನ, ಭಕ್ತಿ, ವೈರಾಗ್ಯ,

**ಮೂರು ಗುಣಗಳು** - ಸತ್ವಗುಣ, ರಾಜಸಗುಣ, ತಮೋಗುಣ.

**ತ್ರಿದಶ** - ದೇವತೆ. ತೃತೀಯಾ ದಶಾ ಯೌವನಂ ಏಷಾಂ ತೇ ತ್ರಿದಶಾಃ, ಭಾಗ ೮.೫.೩೯.

**ತ್ರಿದಶಾಧ್ಯಕ್ಷ** - ಸೃಷ್ಟಿ, ಸ್ಥಿತಿ, ಸಂಹಾರ ಎಂಬ ಮೂರಕ್ಕೆ ಅಥವಾ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸ್ವಾಮಿಯಾದವನು. ಶ್ರೀ ಹರಿ.

**ತ್ರಿದಂಡೀ** - ಯತಿ (ಮೌನದಿಂದ ವಾಗ್ದಂಡ, ನಿಷಿದ್ಧಾಚರಣೆ ತ್ಯಾಗದಿಂದ ದೇಹದಂಡ ಮತ್ತು ಪ್ರಾಣಾಯಾಮದಿಂದ ಮನೋದಂಡ ಈ ಮೂರು ದಂಡವುಳ್ಳವನು ಯತಿ, ಭಾಗ.೧೧.೧೮.೧೭.)

**ತ್ರಿನೇತ್ರ** - ನರಸಿಂಹ

**ತ್ರಿಯುಗ** - ಕೃತ, ತ್ರೇತಾ, ದ್ವಾಪರ ಈ ಮೂರು ಯುಗಗಳಲ್ಲಿ ಮಾತ್ರ ಭೂಮಿಯ ಮೇಲೆ ಅವತರಿಸಿರುವ ಶ್ರೀ ಹರಿ.

### ೪. ನಾಲ್ಕು (ಚತುರ್)

**ಚಾತುರ್ವರ್ಣ** - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ.

**ನಾಲ್ಕು ಆಶ್ರಮಗಳು** - ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ.

**ಜ್ಞಾನಪ್ರಾಪ್ತಿಯ ನಾಲ್ಕು ಸಾಧನಗಳು** -ಶ್ರದ್ಧಾ, ತತ್ಪರತಾ, ಇಂದ್ರಿಯ ಸಂಯಮ, ಯೋಗಸಂಸಿದ್ಧಿ.

**ನಾಲ್ಕು ವರ್ಜ್ಯಗಳು** - ಆತ್ಮನಿಂದಾ, ಆತ್ಮಸ್ತುತಿ, ಪರನಿಂದಾ, ಪರಸ್ತುತಿ.

**ಶಿಷ್ಟಾಚಾರದ ನಾಲ್ಕು ಲಕ್ಷಣಗಳು** - ಗುರುಶುಶ್ರೂಷಾ, ಸತ್ಯ, ಅಕ್ರೋಧ, ದಾನ.

**ನಾಲ್ಕು ಪ್ರಕಾರದ ಪುರುಷಾರ್ಥಗಳು** - ಧರ್ಮ, ಅರ್ಥ, ಕಾಮ, ಮೋಕ್ಷ.

**ನಾಲ್ಕು ಪ್ರಕಾರದ ಮುಕ್ತಿಗಳು** - ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ.

**ನಾಲ್ಕು ವೇದಗಳು** - ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ.

**ಚತುರಾತ್ಮಾ** = ವಿಷ್ಣುಃ. ಉತ್ತಮತ್ವ, ಸಹನಶಕ್ತಿ, ತೇಜಸ್ಸು ಮತ್ತು ಸುಖ ಈ ನಾಲ್ಕು ವಸ್ತುಗಳನ್ನು ಬೇಡುವವನಿಗೆ ಅವುಗಳನ್ನು ಕೊಡುವ ಪರಮಾತ್ಮ (ಹ.ಕ.ಸಾ)

**ಚತುರ್ವಿಧನಾಶ** = ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬುವ ನಾಲ್ಕು ನಾಶಗಳು. - ಭಗವದ್ಗೀತಾ. ಅ. ೨.೪.

**ಚತುರ್ವಿಧ ಭೂತದೇಹ** = ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಯ.

### ೫. ಐದು (ಪಂಚ)

**ಪ್ರಾತಃ ಸ್ಮರಣೀಯ ಐದು ಸ್ತ್ರೀಯರು** - ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ.

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ ।
ಪಂಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥

**ಪಂಚಕೋಶ** - ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ.

**ಪಂಚಾಮೃತ** - ಆಕಳಿನ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ.

ದುಗ್ಧಂ ಚ ಶರ್ಕರಾ ಚೈವ ಘೃತಂ ದಧಿ ತಥಾ ಮಧು ।
ಪಂಚಾಮೃತಮಿದಂ ಪ್ರೋಕ್ತಂ...... ॥

**ಪಂಚಗವ್ಯ** - (ಆಕಳಿನಿಂದ ದೊರೆಯುವ ಐದು ಪದಾರ್ಥಗಳು. ಇವುಗಳನ್ನು ಒಂದು ಪ್ರಮಾಣದಲ್ಲಿ ಮಿಶ್ರಣ ಮಾಡುವುದರಿಂದ ಪಂಚಗವ್ಯ ಎಂಬುದು ಸಿದ್ಧವಾಗುವುದು)

ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಸ್ತಥೈವ ಚ ।
ಗವಾಂ ಪಂಚ ಪವಿತ್ರಾಣಿ ಪುನಂತಿ ಸಕಲಂ ಜಗತ್ ॥

-ಸ್ಕಂದ ಪುರಾಣ ರೇವಾಖಂಡ

ಗೋಮೂತ್ರ, ಗೋಮಯ, ಗೋಕ್ಷೀರ, ಮೊಸರು ಮತ್ತು ತುಪ್ಪ ಇವುಗಳ ಮಿಶ್ರಣದಿಂದಾದ ಪಂಚಗವ್ಯವನ್ನು ಸೇವಿಸುವಾಗ ಕೆಳಗಿನ ಶ್ಲೋಕವನ್ನು ಪಠಿಸಬೇಕು.

ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಾತ್ ಪಂಚಗವ್ಯಸ್ಯ ದಹತ್ಯಗ್ನಿರಿವೇಂಧನಮ್ ॥

**ಪಂಚಮುಖ, ಪಂಚಾಸ್ಯ** = ಕಪಿ, ನಾರಸಿಂಹ, ಗರುಡ, ಸೂಕರ ಮತ್ತು ಹಯವದನ ಮುಖಗಳುಳ್ಳ ವಾಯುಪುತ್ರ. ಶಿವ, ರುದ್ರ, ಪರಮಾತ್ಮ.

**ಪಂಚ ಪ್ರಾಣ** = ಶರೀರದೊಳಗಿನ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ಪಂಚ ಪ್ರಾಣ ವಾಯುಗಳು. ಇವುಗಳ ಸ್ಥಾನಗಳು- ಹೃದಯ, ಗುದ, ನಾಭಿ, ಕಂಠ, ಇಡೀ ಶರೀರ .

**ಪಂಚ ಸಂಸ್ಕಾರ** = ವೈಷ್ಣವರಿಗೆ ನಡೆಯಬೇಕಾದ ಐದು ವಿಧ ಸಂಸ್ಕಾರಗಳು.

**ತಾಪ** = ತಪ್ತ ಸುದರ್ಶನ ಮತ್ತು ಪಾಂಚಜನ್ಯ ಧರಿಸುವುದು.
**ಪುಂಡ್ರ** = ಊರ್ಧ್ವಪುಂಡ್ರಧಾರಣೆ
**ನಾಮ** = ಗುರುಗಳಿಂದ ಮಾಡಲ್ಪಟ್ಟ ದಾಸಾಂತ ನಾಮಕರಣ,
**ಮಂತ್ರ** = ಆಚಾರ್ಯರಿಂದ ಮಂತ್ರೋಪದೇಶ ಪಡೆಯುವುದು.
**ಯಾಗ** = ಆಚಾರ್ಯರಿಂದ ಅನುಗ್ರಹಿಸಲ್ಪಟ್ಟ ದೇವತಾ ಪೂಜಾಧಿಕಾರ.

**ಪಂಚವಿಧ ಜೀವರು** = ಸುರ, ನರ, ಪಿತೃ, ಗಂಧರ್ವ, ಅಸುರರು (ಭಾಗ ೧೧.೧೩.೨೩.)

**ಪಂಚಶೀಲ** = ದಾನ, ಮಿತಾಹಾರ, ಇಂದ್ರಿಯ ನಿಗ್ರಹ, ಪಾಪಕರ್ಮತ್ಯಾಗ, ತೀರ್ಥಕ್ಷೇತ್ರ ಯಾತ್ರೆ (ಆಗ್ನೇಯ ಪುರಾಣ).

**ಪಂಚಸೂನಾ** = ಪ್ರಾಣಿಗಳ ೫ ಹಿಂಸಾ ಸ್ಥಾನಗಳು

ಪಂಚ ಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ ।
ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥ -ಮನು ೩.೬೮.

ಒಲೆ, ಅರೆಯುವ ಕಲ್ಲು, ಗೃಹಕೃತ್ಯಕ್ಕೆ ಬೇಕಾಗುವ ವಸ್ತುಗಳು, ಒರಳು, ನೀರಿನ ಕಲಶ.

ಖಂಡನೀ ಪೇಷಣೀ, ಚುಲ್ಲೀ, ಉದಕುಂಭೀ ಚ ಮಾರ್ಜನೀ ।
ಪಂಚ ಸೂನಾ ಗೃಹಸ್ಥಸ್ಯ ತಾಭಿಃ ಸ್ವರ್ಗಂ ನ ವಿಂದತಿ ॥

- ಗೀತಾ ವಿವೃತಿ ೩.೧೩.

ಧಾನ್ಯಗಳನ್ನು ಕತ್ತರಿಸುವುದು, ಬಡಿಯುವುದು, ಕುಟ್ಟುವುದು, ಬೇಯಿಸುವುದು, ಕಾಯಿಸುವುದು, ನೀರು ತರುವುದು, ಕಸಗುಡಿಸುವುದು, ಸಾರಿಸುವುದು, ಈ ೫ ಕೆಲಸಗಳನ್ನು ಮಾಡುವಾಗ ಕ್ರಿಮಿಗಳಿಗೆ ಹಿಂಸೆಯಾಗುವುದರಿಂದ ಈ ೫ ಕೆಲಸಗಳಿಗೆ ಕ್ರಿಮಿಗಳ ಹಿಂಸಾ ಸ್ಥಾನ (=ಸೂನಾ) ಎಂದು ಹೇಳುವರು. ಈ ೫ ಕೆಲಸಗಳನ್ನು ಮಾಡುವಾಗ ಉಂಟಾದ ಕ್ರಿಮಿಹಿಂಸೆಗಳಿಂದ ಪ್ರಾಪ್ತವಾಗುವ ಪಾಪಗಳ ನಿವಾರಣೆಗಾಗಿ ಗೃಹಸ್ಥನಿಗೆ ಪ್ರತಿದಿನವೂ ಪಂಚಮಹಾಯಜ್ಞಗಳು ವಿಹಿತವಾಗಿವೆ.

**ಪಂಚ ಮಹಾಯಜ್ಞಗಳು** = ಬ್ರಹ್ಮಯಜ್ಞ - ವೇದಾಧ್ಯಯನ, ಅಧ್ಯಾಪನ; ಪಿತೃಯಜ್ಞ - ತರ್ಪಣ; ದೇವಯಜ್ಞ - ವೈಶ್ವದೇವ, ಹೋಮ; ಭೂತಯಜ್ಞ - ಬಲಿಹರಣ; ಮನುಷ್ಯಯಜ್ಞ - ಅತಿಥಿ ಸತ್ಕಾರ, ವಿಪ್ರರಿಗೆ ಅನ್ನದಾನ.

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಶ್ಚ ತರ್ಪಣಮ್ ।
ಹೋಮೋ ದೈವೋ ಬಲಿರ್ಭೂತೋ ನೃಯಜ್ಞೋऽತಿಥಿಪೂಜನಮ್॥ -ಮನು.೩.೭೦.

**ಪಂಚರಾತ್ರಾಗಮ** = ಪರಮಾತ್ಮನು ಬ್ರಹ್ಮ, ರುದ್ರ, ಇಂದ್ರ, ಮತ್ತು ಸೂರ್ಯ ಇವರಿಗೆ ೫ ರಾತ್ರಿ ಉಪದೇಶಿಸಿದ ಆಗಮ.

**ಪಂಚಾಕ್ಷರೀ ಮಂತ್ರ** = ಅಕಾರ, ಉಕಾರ, ಮಕಾರ, ನಾದ, ಬಿಂದು ಈ ಐದರಿಂದ ಕೂಡಿದ ಓಂ ಎಂಬ ಪ್ರಣವ ಮಂತ್ರ.

**ಪಂಚಮಹಾ ಪಾತಕಗಳು** - ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ, ತತ್ಸಂಗ (ಬ್ರಹ್ಮಹತ್ಯಾದಿ ಪಾತಕಿಗಳ ಸಂಗ)

**ಪಂಚಾಗ್ನಿಗಳು** - ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ ಮತ್ತು ಆವಸಥ್ಯ ಎಂಬ ೫ ಯಾಗಾಗ್ನಿಗಳು. (ವಾಯು. ಪು. ೧೦೬. ೪೧.೨.)

**ಪಂಚಾಂಗ ಪ್ರಣಾಮ** : ಬಾಹುಭ್ಯಾಂ ಚೈವ ಜಾನುಭ್ಯಾಂ ಶಿರಸಾ ವಕ್ಷಸಾ ದೃಶಾ । ಪಂಚಾಂಗೋऽಯಂ ಪ್ರಣಾಮಃ ಸ್ಯಾತ್....॥ ಸ್ತ್ರೀಯರು ಪಂಚ ಅಂಗಗಳಿಂದ ಮಾತ್ರ ನಮಸ್ಕರಿಸಬೇಕು. ಅವು ತಲೆ, ಕಣ್ಣು (ದೃಷ್ಟಿ), ಮನಸ್ಸು, ಕೈ, ಮೊಣಕಾಲು.

**ಸಂಧ್ಯಾಕಾಲದಲ್ಲಿ ನಿಷಿದ್ಧವಾದ ಐದು ವಿಷಯಗಳು** - ಭೋಜನ, ಮೈಥುನ, ನಿದ್ರಾ, ವೇದಪಠಣ, ಮಾರ್ಗಕ್ರಮಣ.

**ಐದು ಪ್ರಕಾರದ ಶುದ್ಧಿಗಳು** - ಸತ್ಯಶೌಚಂ ಮನಃಶೌಚಂ ಶೌಚಮಿಂದ್ರಿಯನಿಗ್ರಹಃ ।
ಸರ್ವಭೂತೇ ದಯಾಶೌಚಂ ಜಲಶೌಚಂ ಚ ಪಂಚಮಮ್ ॥ - ಗರುಡ ಪು.
ಸತ್ಯಮಾತನಾಡುವುದು, ಮನಶ್ಶುದ್ಧಿ, ಇಂದ್ರಿಯ ನಿಗ್ರಹ, ಭೂತದಯಾ, ಜಲಶುದ್ಧಿ.

**ಐದು ಜನರನ್ನು ಹೆಸರಿನಿಂದ ಕರೆಯಬಾರದು -**

ಆತ್ಮನಾಮ ಗುರೋರ್ನಾಮ ನಾಮಾತಿಕೃಪಣಸ್ಯ ಚ ।
ಶ್ರೇಯಃಕಾಮೋ ನ ಗೃಹ್ಣೀಯಾತ್ ಜ್ಯೇಷ್ಠಾಪತ್ಯಕಲತ್ರಯೋಃ ॥
ತನ್ನ ಹೆಸರು, ಗುರುಗಳ ಹೆಸರು, ಅತಿಕೃಪಣನಾದ ಮನುಷ್ಯನ ಹೆಸರು, ಜ್ಯೇಷ್ಠಪುತ್ರನ ಹೆಸರು, ಹೆಂಡತಿಯ ಹೆಸರು.

[ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾ ಪತೇರಪಿ - ಎಂಬ ವಚನದಂತೆ ಹೆಂಡತಿಯು ತನ್ನ ಗಂಡನನ್ನು ಹೆಸರಿನಿಂದ ಕರೆಯಬಾರದು.]

**ಪಂಚಾಂಗ** = ತಿಥಿರ್ವಾರಶ್ಚ ನಕ್ಷತ್ರಂ ಯೋಗಃ ಕರಣಮೇವ ಚ ।
ಪಂಚಾಂಗಮೇತದುದ್ದಿಷ್ಟಂ........॥
ಪ್ರತಿದಿನದ ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣ ಇವು ಜ್ಯೋತಿಷ್ಯದ ೫ ಅಂಗಗಳು. ಈ ೫ ಅಂಗಗಳನ್ನು ಹೇಳುವುದರಿಂದ ಲಭಿಸುವ ಫಲಗಳು ಕೆಳಗಿನಂತಿವೆ.
ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಂ ।
ನಕ್ಷತ್ರಾತ್ ಹರತೇ ಪಾಪಂ ಯೋಗಾದ್ ರೋಗ ನಿವಾರಣಂ।
ಕರಣಾತ್ ಕಾರ್ಯಸಿದ್ಧಿಃ ಸ್ಯಾತ್ ಪಂಚಾಂಗಫಲಮುತ್ತಮಮ್॥

**ಪಂಚ ಭೇದಗಳು** - ಈಶ-ಜೀವ, ಈಶ-ಜಡ, ಜೀವ-ಜೀವ, ಜೀವ-ಜಡ, ಜಡ-ಜಡ

**ಪಂಚ ಮಹಾಭೂತಗಳು ಹಾಗೂ ಪಂಚ ತನ್ಮಾತ್ರಾಗಳು -**

| ಭೂಮಿ, | ಜಲ, | ಅಗ್ನಿ, | ವಾಯು, | ಆಕಾಶ, |
|---|---|---|---|---|
| ಗಂಧ, | ರಸ, | ರೂಪ, | ಸ್ಪರ್ಶ, | ಶಬ್ದ. |

**ಪಂಚ ಜ್ಞಾನೇಂದ್ರಿಯಗಳು** - ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ.

**ಪಂಚ ಕರ್ಮೇಂದ್ರಿಯಗಳು** - ಕೈ, ಕಾಲು, ಬಾಯಿ, ಪಾಯು, ಉಪಸ್ಥ.

**ಪಂಚಘೋಷ** - ಪಟಹ, ಢಕ್ಕೆ, ಮೃದಂಗ, ಕೊಳಲು ಮತ್ತು ಶಂಖ ಎಂಬ ಐದು ವಾದ್ಯಗಳು.

## ೬. ಆರು (ಷಟ್)

**ಷಡಕ್ಷರೀ ಮಂತ್ರ** - ಓಂ ಕ್ಲೀಂ ಕೃಷ್ಣಾಯ ನಮಃ, ಶ್ರೀಂ ಕ್ಲೀಂ ಕೃಷ್ಣಾಯ ನಮಃ (ಸ್ತ್ರೀಯರಿಗೆ). ಓಂ ವಿಷ್ಣವೇ ನಮಃ.

**ಷಡ್ವಿಧ ಅನ್ನ** - ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ಲೇಹ್ಯಂ ಚೋಷ್ಯಂ ಚ ಪಿಚ್ಛಿಲಮ್।
ಇತಿ ಭೇದಃ ಷಡನ್ನಸ್ಯ ಮಧುರಾದ್ಯಾಶ್ಚ ಷಡ್ರಸಾಃ ॥ - ಸುಶ್ರುತ.
ಭಕ್ಷ್ಯಂ = ಹೋಳಿಗೆ, ಪುರಿ, ಚಪಾತಿ, ಭಕ್ಕರಿ ಇತ್ಯಾದಿ, ಭೋಜ್ಯ= ಅನ್ನ ಇ.
ಪೇಯ = ನೀರು, ಪಾನಕ ಇ. ಲೇಹ್ಯ = ನಾಲಿಗೆಯಿಂದ ನೆಕ್ಕಿ ತಿನ್ನುವ ಉಪ್ಪಿನಕಾಯಿ, ಪಂಚಾಮೃತ, ಜೇನುತುಪ್ಪ, ಇ. ಚೋಷ್ಯ = ನಾಲಿಗೆಯಿಂದ ಎಳೆದುಕೊಂಡು ಕುಡಿಯಲ್ಪಡುವ ಒಂದು ದ್ರವಾಹಾರ (ಮಜ್ಜಿಗೆ, ಸೀಕರಣಿ) ಪಿಚ್ಛಿಲಂ = ಚಟ್ನಿ, ಕೋಸಂಬರಿ ಇ,

**ರೋಗೋತ್ಪತ್ತಿಯ ಆರು ಕಾರಣಗಳು -**

ಅತ್ಯಂಬುಪಾನಂ ಕಠಿನಾಶನಶ್ಚ ಧಾತುಕ್ಷಯೋ ವೇಗವಿಧಾರಣಂ ಚ।
ದಿವಾಶಯೋ ಜಾಗರಣಂ ಚ ರಾತ್ರೌ ಷಡ್ಭಿರ್ನರಾಣಾಂ ಪ್ರಭವಂತಿ ರೋಗಾಃ॥ -ಸುಶ್ರುತ

**ಷಡ್ವಿಧ ಐಶ್ವರ್ಯ** = ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥
-ಬ್ರಹನ್ನಾರದೀಯ. ಪು.

**ಷಡ್ವಿಧ ವಿಕಾರಗಳು** = ಜನನ, ವೃದ್ಧಿ, ಹಸಿವು, ಬಾಯಾರಿಕೆ, ಹ್ರಾಸ ಮತ್ತು ಸಾವು ಇವು ದೇಹದ ಆರು ವಿಕಾರಗಳು. (ಸು. ವಿ. ೭.೭.)

**ಷಟ್ ಕರ್ಮಗಳು** = ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಶ್ಚೈವ ಷಟ್ ಕರ್ಮಾಣ್ಯಗ್ರಜನ್ಮನಃ ॥ - ಮನು.೧೦.೭೫.
ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಇವು ಬ್ರಾಹ್ಮಣನ ಆರು ಕರ್ಮಗಳು.

**ಷಡ್ ದೋಷಗಳು** = ಷಡ್ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।
ನಿದ್ರಾ ತಂದ್ರಾ ಭಯಂ ಕ್ರೋಧಃ ಆಲಸ್ಯಂ ದೀರ್ಘಸೂತ್ರತಾ ॥
-ಹಿತೋಪದೇಶ ಮಿತ್ರಲಾಭ
ಅಭಿವೃದ್ಧಿಯನ್ನು ಬಯಸುವ ಪುರುಷನು, ನಿದ್ರೆ, ತೂಕಡಿಕೆ, ಭಯ, ಕ್ರೋಧ, ಆಲಸ್ಯತನ, ತಡವಾಗಿ ಕೆಲಸ ಮಾಡುವುದು. ಈ ಆರು ದೋಷಗಳನ್ನು ಬಿಡಬೇಕು.

**ಷಡ್ಗುಣಗಳು :** ಉದ್ಯಮಂ ಸಾಹಸಂ ಧೈರ್ಯಂ ಬುದ್ಧಿಃ ಶಕ್ತಿಃ ಪರಾಕ್ರಮಃ ।
ಷಡೇತೇ ಯತ್ರ ವರ್ತಂತೇ ತತ್ರ ದೇವಃ ಸಹಾಯಕೃತ್ ॥
ಉದ್ಯೋಗ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ ಮತ್ತು ಪರಾಕ್ರಮ ಈ ಆರು ಗುಣಗಳು ಇರುವ ಮನುಷ್ಯನಿಗೆ ದೇವತೆಗಳೂ ಸಹಾಯ ಮಾಡುತ್ತಾರೆ.

**ನಿತ್ಯದ ಆರು ಕರ್ಮಗಳು :** ಸಂಧ್ಯಾ ಸ್ನಾನಂ ಜಪೋ ಹೋಮಃ ದೇವತಾನಾಂ ಚ ಪೂಜನಂ ।
ಆತಿಥ್ಯಂ ವೈಶ್ವದೇವಂ ಚ ಷಟ್‌ಕರ್ಮಾಣಿ ದಿನೇ ದಿನೇ ॥-ಪಾರಾಶರಸ್ಮೃತಿ. ೧.೩೯.
ಸ್ನಾನ, ಸಂಧ್ಯೋಪಾಸನೆ, ಜಪ, ಹೋಮ, ದೇವಪೂಜೆ, ವೈಶ್ವದೇವ ಮತ್ತು ಅತಿಥಿ ಸತ್ಕಾರ ಇವು ಗೃಹಸ್ಥನ ನಿತ್ಯದ ಆರು ಕರ್ಮಗಳು.

**ಷಡೂರ್ಮಿಗಳು** = ಮನುಷ್ಯನ ಪ್ರಾಣ, ಮನಸ್ಸು ಮತ್ತು ಶರೀರಗಳ ೬ ವಿಧ ಪೀಡೆಗಳು
**ಆರು ಧರ್ಮಗಳು :**

ಬುಭುಕ್ಷಾ ಚ ಪಿಪಾಸಾ ಚ ಪ್ರಾಣಸ್ಯ ಮನಸಃ ಸ್ಮೃತೌ ।
ಶೋಕಮೋಹೌ ಶರೀರಸ್ಯ ಜರಾಮೃತ್ಯೂ ಷಡೂರ್ಮಯಃ ॥
ಹಸಿವು - ಬಾಯಾರಿಕೆಗಳು ಪ್ರಾಣ ಧರ್ಮಗಳು, ಶೋಕ-ಮೋಹಗಳು ಮನೋಧರ್ಮಗಳು, ಮುಪ್ಪು- ಮೃತ್ಯು ಇವು ಶರೀರ ಧರ್ಮಗಳು.

**ಮನುಷ್ಯನ ಕ್ಷೀಣತೆಗೆ ಆರು ಕಾರಣಗಳು :**

ಶುಷ್ಕಮಾಂಸಂ ಸ್ತ್ರಿಯೋ ವೃದ್ಧಾ ಬಾಲಾರ್ಕಸ್ತರುಣಂ ದಧಿ ।
ಪ್ರಭಾತೇ ಮೈಥುನಂ ನಿದ್ರಾ ಸದ್ಯಃ ಪ್ರಾಣಹರಾಣಿ ಷಟ್ ॥ - ಶಾ. ನಿ.

ಒಣಗಿದ ಮಾಂಸ, ವೃದ್ಧಸ್ತ್ರೀ, ಬೆಳಗಿನ ಸೂರ್ಯನ ಬಿಸಿಲು, ಚೆನ್ನಾಗಿ ಹೆತ್ತಿರದ ಮೊಸರು, ಪ್ರಾತಃಕಾಲದಲ್ಲಿ ಮೈಥುನ ಮತ್ತು ನಿದ್ರೆ ಈ ಆರು ಮನುಷ್ಯನನ್ನು ತತ್ಕಾಲದಲ್ಲಿ ಕ್ಷೀಣಿಸುತ್ತವೆ.

**ಬಲವರ್ಧನೆಯ ಆರು ಕಾರಣಗಳು :**

ಸದ್ಯೋ ಮಾಂಸಂ ನವಾನ್ನಂ ಚ ಬಾಲಾ ಸ್ತ್ರೀ ಕ್ಷೀರಭೋಜನಮ್ ।
ಘೃತಮುಷ್ಣೋದಕಂ ಚೈವ ಸದ್ಯಃ ಪ್ರಾಣಕರಾಣಿ ಷಟ್ ॥ -ಶಾ. ನಿ.

ತಾಜಾ ಮಾಂಸ, ಬಿಸಿ ಅನ್ನ, ತರುಣಿ ಸ್ತ್ರೀ, ಹಾಲಿನಿಂದ ತಯಾರಿಸಿದ ಪದಾರ್ಥಗಳು, ತುಪ್ಪ ಮತ್ತು ಬಿಸಿನೀರು, ಇವುಗಳ ಸೇವನೆ ಬಲವರ್ಧನೆಯ ಆರು ಕಾರಣಗಳು.

**ಬ್ರಹ್ಮಚಾರಿಯ ಆರು ವರ್ಜ್ಯಗಳು :**

ಸುಖಶಯ್ಯಾಸನಂ ವಸ್ತ್ರಂ ತಾಂಬೂಲಂ ಸ್ನಾನಮಜ್ಜನಮ್ ।
ದಂತಕಾಷ್ಠಂ ಸುಗಂಧಂ ಚ ಬ್ರಹ್ಮಚರ್ಯಸ್ಯ ದೋಷಣಮ್॥ -ಶಿವಪು.

೧. ಮೆತ್ತಗಿನ ಹಾಸಿಗೆಯ ಮೇಲೆ ಮಲಗುವುದು, ೨. ಆಡಂಬರದ ವೇಷ ಭೂಷಣಗಳು, ೩. ತಾಂಬೂಲ ಸೇವನೆ, ೪. ಅಭ್ಯಂಗಸ್ನಾನ, (ತಲೆಯ ಮೇಲೆ ನೀರು ಹಾಕಿಕೊಂಡು ಎರದು ಕೊಳ್ಳುವುದು) ೫. ಹಲ್ಲುಜ್ಜಲು ದಂತಕಾಷ್ಠ ಉಪಯೋಗ ಮತ್ತು ೬.ಸುಗಂಧಯುಕ್ತ ಪದಾರ್ಥಗಳು (ಪರಿಮಳದ ಪದಾರ್ಥಗಳು) ಈ ಆರನ್ನು ಬ್ರಹ್ಮಚಾರಿಯು ತ್ಯಜಿಸಬೇಕು.

**ಮೌನದಿಂದ ಇರಬೇಕಾದ ಆರು ಸಮಯಗಳು :-**

ಉಚ್ಚಾರೇ ಮೈಥುನೇ ಚೈವ ಪ್ರಸ್ರಾವೇ ದಂತಧಾವನೇ ।
ಶ್ರಾದ್ಧೇ ಚ ಭೋಜನೇ ಚೈವ ಷಟ್ಸು ಮೌನಂ ಸಮಾಚರೇತ್ ॥ - ಹಾರೀತ.

- ಶೌಚ, ವಿಷಯ ಸೇವನೆ (ಮೈಥುನ), ಮೂತ್ರ ವಿಸರ್ಜನೆ, ಹಲ್ಲುತಿಕ್ಕುವಾಗ, ಶ್ರಾದ್ಧಕಾಲ ಮತ್ತು ಭೋಜನ ಸಮಯಗಳಲ್ಲಿ ಮೌನದಿಂದ ಇರಬೇಕು.

**ಆರು ತೀರ್ಥಗಳು -** ಭಕ್ತಿತೀರ್ಥ, ಗುರುತೀರ್ಥ, ಆಚಾರ್ಯತೀರ್ಥ, ಪಿತೃತೀರ್ಥ, ಪತಿತೀರ್ಥ, ಪತ್ನೀತೀರ್ಥ ಇವು ಮನುಷ್ಯನನ್ನು ಪವಿತ್ರಗೊಳಿಸುವ ಆರು ತೀರ್ಥಗಳು. (ಪದ್ಮಪು. ಭೂಮಿ ಖಂಡ)

**ಸ್ತ್ರೀಯರ ವಿಷಯದಲ್ಲಿಯ ಆರು ದೋಷಗಳು -** ಮದ್ಯಪಾನ, ದುರ್ಜನ ಸಂಗ, ಗಂಡನಿಂದ ದೂರದಲ್ಲಿರುವುದು, ಅಲ್ಲಿ ಇಲ್ಲಿ ತಿರುಗಾಡುವುದು, ಇನ್ನೊಬ್ಬರ ಮನೆಯಲ್ಲಿ ಮಲಗುವುದು ಮತ್ತು ಪರಗೃಹವಾಸ. (ಮನು ೯.೩೩.)

**ಸಂಧ್ಯಾವಂದನೆಯಲ್ಲಿಯ ಆರು ಪ್ರಮುಖ ಅಂಗಗಳು -** ಆಸನ, ಆಚಮನ, ಪ್ರಾಣಾಯಾಮ, ಮಾರ್ಜನ, ಅರ್ಘ್ಯಪ್ರದಾನ, ಜಪ ಮತ್ತು ಉಪಸ್ಥಾನ.

**ಅಧ್ಯಯನಕ್ಕೆ ಉಂಟಾಗುವ ಆರು ವಿಘ್ನಗಳು :**

ದ್ಯೂತಂ ಪುಸ್ತಕಶುಶ್ರೂಷಾ ನಾಟಕಾಸಕ್ತಿರೇವ ಚ ।
ಸ್ತ್ರಿಯಸ್ತಂದ್ರೀ ಚ ನಿದ್ರಾ ಚ ವಿದ್ಯಾವಿಘ್ನಕರಾಣಿ ಷಟ್ ॥ - ಸು.

ದ್ಯೂತ, ಪುಸ್ತಕ ಶೂಶ್ರೂಷೆ, ಸಿನೇಮಾ, ನಾಟಕಗಳಲ್ಲಿ ಆಸಕ್ತಿ, ಪರಸ್ತ್ರೀ ಧ್ಯಾನ, ಆಲಸ್ಯ ಮತ್ತು ನಿದ್ದೆ ಬಡಕತನ (ಅಧಿಕ ನಿದ್ದೆ).

**ಕನ್ಯಾದಾನಕ್ಕೆ ಅಯೋಗ್ಯರಾದ ಆರು ಪುರುಷರು :**

ಅತ್ಯಾಸನ್ನೇ ಚಾತಿದೂರೇ ಅತ್ಯಾಢ್ಯೇ ಧನವರ್ಜಿತೇ ।
ವೃತ್ತಿಹೀನೇ ಚ ಮೂರ್ಖೇ ಚ ಕನ್ಯಾದಾನಂ ನ ಶಸ್ಯತೇ ॥

- ಸ್ಕಂದ ಪು. ಮಾಹೇಶ್ವರ ಖಂಡ ೨೩.೮.

ಅತಿಸಮೀಪವಿರುವ, ಅತಿ ದೂರ ಇರುವ, ಅತಿ ಶ್ರೀಮಂತನಾದ, ಅತಿ ಬಡವನಾದ, ಉಪಜೀವನದ ವೃತ್ತಿ ಇಲ್ಲದ ಮತ್ತು ಮೂರ್ಖನಾದ ವರನಿಗೆ (ಪುರುಷನಿಗೆ) ಕನ್ಯಾದಾನ ಮಾಡಬಾರದು.

**ತಾಯಿಗೆ ಸಮಾನರಾದ ಆರು ಜನ :**

ರಾಜಪತ್ನೀ ಗುರೋಃ ಪತ್ನೀ ಮಿತ್ರಪತ್ನೀ ಸತೀ ತಥಾ ।
ಪತ್ನೀಮಾತಾ ಸ್ವಮಾತಾ ಚ ಸರ್ವಾಸ್ತಾಃ ಮಾತರಃ ಸ್ಮೃತಾಃ ॥ - ಸು.

ರಾಜಪತ್ನೀ, ಗುರುಪತ್ನೀ, ಮಿತ್ರಪತ್ನೀ, ಸ್ವಾಧ್ವೀಸ್ತ್ರೀ, ಹೆಂಡತಿಯ ತಾಯಿ (ಅತ್ತೆ) ಮತ್ತು ಸ್ವಮಾತೆ.

**ಆರು ವೇದಾಂಗಗಳು -** ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ, ಕಲ್ಪ.

**ಆರು ರಸಗಳು -** ಸಿಹಿ, ಖಾರ, ಹುಳಿ, ಒಗರು, ಕಹಿ, ಉಪ್ಪು.

**ಅರಿಷಡ್ವರ್ಗ (ಆರು ಶತ್ರುಗಳು) -** ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.

## ೭. ಏಳು (ಸಪ್ತ)

**ಸಪ್ತರ್ಷಿಗಳು :** ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ವಶಿಷ್ಠಶ್ಚ ಇತಿ ಸಪ್ತರ್ಷಯಃ ಸ್ಮೃತಾಃ ॥

ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ವಶಿಷ್ಠ.

**ಸಪ್ತಗಂಗಾ :** ಜಾಹ್ನವೀ ವೃದ್ಧಗಂಗಾ ಚ ಕಾಲಿಂದೀ ಚ ಸರಸ್ವತೀ।
ಕಾವೇರೀ ನರ್ಮದಾ ವೇಣೀ ಸಪ್ತ ಗಂಗಾಃ ಪ್ರಕೀರ್ತಿತಾಃ ॥

- ಸ್ಕಂದ. ಪು. ವೈಷ್ಣವಖಂಡ ४.೧೫.

ಜಾಹ್ನವೀ, ವೃದ್ಧಗಂಗಾ (ಗೋದಾವರೀ), ಕಾಲಿಂದೀ (ಯಮುನಾ), ಸರಸ್ವತೀ, ಕಾವೇರೀ, ನರ್ಮದಾ, ಕೃಷ್ಣವೇಣೀ.

**ಸಪ್ತ ಚಿರಂಜೀವಿಗಳು :**

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥

ಸಪ್ತೈತಾನ್ ಸಂಸ್ಮರೇನ್ನಿತ್ಯಂ ಮಾರ್ಕಂಡೇಯಮಥಾಷ್ಟಮಮ್ ॥

ಅಶ್ವತ್ಥಾಮಾ, ಬಲಿಚಕ್ರವರ್ತೀ, ವ್ಯಾಸ ಮಹರ್ಷಿ, ಹನುಮಂತ, ವಿಭೀಷಣ, ಕೃಪ ಮತ್ತು ಪರಶುರಾಮ. (ಎಂಟನೆಯವನು ಮಾರ್ಕಾಂಡೇಯ ಋಷಿ).

**ಸಪ್ತ ಮುಕ್ತಿಪ್ರದ ಕ್ಷೇತ್ರಗಳು :** ಅಯೋಧ್ಯಾ, ಮಥುರಾ, ಮಾಯಾ (ಹರಿದ್ವಾರ), ಕಾಶೀ, ಕಾಂಚೀ, ಅವಂತಿಕಾ (ಉಜ್ಜಯನೀ) ಮತ್ತು ದ್ವಾರಕಾ.

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।

ಪುರೀ ದ್ವಾರಾವತೀ ಚೈವ ಸಪ್ತೈತೇ ಮೋಕ್ಷದಾಯಿಕಾಃ ॥ - ಗರುಡ ೧೬.೧೧೪.

**ಸಪ್ತ ಸ್ನಾನಗಳು :-** ಮಂತ್ರಪೂರ್ವಕ ಜಲಪ್ರೋಕ್ಷಣೆ, ಮೃತ್ತಿಕಾಸ್ನಾನ, ಭಸ್ಮಸ್ನಾನ, ಗೋಧೂಲೀ ಸ್ಪರ್ಶಸ್ನಾನ, ಮಳೆ ನೀರಿನ ಸ್ನಾನ, ಜಲಸ್ನಾನ ಮತ್ತು ಮಾನಸ ಸ್ನಾನ (ಪರಮಾತ್ಮನ/ ಪುಂಡರೀಕಾಕ್ಷನ ನಾಮ ಸ್ಮರಣೆ).

ಮಾಂತ್ರಂ ಭೌಮಂ ತಥಾಗ್ನೇಯಂ ವಾಯವ್ಯಂ ದಿವ್ಯಮೇವ ಚ ।

ವಾರುಣಂ ಮಾನಸಂ ಚೈವ ಸಪ್ತಸ್ನಾನಂ ಪ್ರಕೀರ್ತಿತಮ್ ॥ - ಯಾಜ್ಞ ಸ್ಮೃತಿ.

**ವರನಲ್ಲಿರಬೇಕಾದ ಸಪ್ತ ಗುಣಗಳು :-** ಕುಲ, ಶೀಲ, ವಯಸ್ಸು, ರೂಪ, ವಿದ್ಯಾ, ದ್ರವ್ಯ ಮತ್ತು ಸನಾಥತೆ (ಮನೆಯಲ್ಲಿ ಪಾಲಕರಾದ ತಂದೆ ತಾಯಿ ಹಿರಿಯರು ಇರೋಣ).

ಕುಲಂ ಚ ಶೀಲಂ ಚ ವಯಶ್ಚ ರೂಪಂ ವಿದ್ಯಾಂ ಚ ವಿತ್ತಂ ಚ ಸನಾಥತಾಂ ಚ ।

ಏತಾನ್ ಗುಣಾನ್ ಸಪ್ತ ಪರೀಕ್ಷ್ಯ ದೇಯಾ ಕನ್ಯಾ ಬುಧೈಃ ಶೇಷಮನಂತನೀಯಮ್॥

- ಯಮಸ್ಮೃತಿ.

**ಸ್ತ್ರೀಯರಲ್ಲಿರುವ ಏಳು ಸ್ವಾಭಾವಿಕ ದೋಷಗಳು :** ಸುಳ್ಳು ಹೇಳುವುದು, ಸಾಹಸ, ಮಾಯಾ, ಮೂರ್ಖತ್ವ, ಅತ್ಯಾಶೆ, ಅಶುದ್ಧಿ ಮತ್ತು ನಿರ್ದಯತೆ.

ಅನೃತಂ ಸಾಹಸಂ ಮಾಯಾ ಮೂರ್ಖತ್ವಮತಿಲೋಭತಾ ।

ಅಶೌಚಂ ನಿರ್ದಯತ್ವಂ ಚ ಸ್ತ್ರೀಣಾಂ ದೋಷಾಃ ಸ್ವಭಾವಜಾಃ ॥

- ದೇವೀ ಭಾಗ.

**ಸದಾ ಪವಿತ್ರವಾಗಿರುವ ಸಪ್ತ ಪದಾರ್ಥಗಳು :** ತರಕಾರಿ, ಕಟ್ಟಿಗೆ, ಹುಲ್ಲು, ಉಪ್ಪು, ಹಾಲು, ಧಾನ್ಯ ಮತ್ತು ಕೃಷ್ಣಾಜಿನ.

**ಸಪ್ತ ಮಹಾನರಕಗಳು** - ರೌರವ, ಮಹಾರೌರವ, ವಹ್ನಿ, ವೈತರಣಿ, ಕುಂಭೀಪಾಕ, ತಾಮಿಸ್ರ, ಅಂಧತಾಮಿಸ್ರ.

## ೮. ಎಂಟು (ಅಷ್ಟ)

**ಶ್ರೀವಿಷ್ಣುವಿನ ವೈಕುಂಠದಲ್ಲಿಯ ಅಷ್ಟ ದ್ವಾರಪಾಲಕರು -**

ಜಯ, ವಿಜಯ, (ಪೂರ್ವದ್ವಾರದಲ್ಲಿ), ಬಲ, ಪ್ರಬಲ (ದಕ್ಷಿಣ ದ್ವಾರಕ್ಕೆ), ನಂದ, ಸುನಂದ, (ಪಶ್ಚಿಮದ್ವಾರಕ್ಕೆ), ಕುಮುದ, ಕುಮುದಾಕ್ಷ (ಉತ್ತರದ್ವಾರಕ್ಕೆ)

**ಅಷ್ಟಸಿದ್ಧಿ :** ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ.

**ಅಷ್ಟಾಕ್ಷರೀ ಮಂತ್ರ :** ॥ ಓಂ ನಮೋ ನಾರಾಯಣಾಯ ॥

**ಪ್ರಣಾಮದ ಎಂಟು ಅಂಗಗಳು :** ಶಿರಸ್ಸು, ಎದೆ, ದೃಷ್ಟಿ, ಮನಸ್ಸು, ಮಾತು, ಕಾಲು, ಕೈ, ಮೊಣಕಾಲುಗಳು.

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥

**ಪಾತ್ರತೆಯ ಅಷ್ಟಾಂಗಗಳು :** ಕ್ಷಮೆ, ನಿರಿಚ್ಛತಾ, ಸತ್ಯಭಾಷಣ, ದಾನ, ಸದಾಚಾರ (ಶೀಲ), ಸುಸ್ವಭಾವ, ತಪಸ್ಸು, ಮತ್ತು ಶಾಸ್ತ್ರಜ್ಞಾನ.

ಕ್ಷಾಂತ್ಯಸ್ಪೃಹಾ ತಥಾ ಸತ್ಯಂ ದಾನಂ ಶೀಲಂ ತಪಃ ಶ್ರುತಮ್ ।
ಏತದಷ್ಟಾಂಗಮುದ್ದಿಷ್ಟಂ ಪರಂ ಪಾತ್ರಸ್ಯ ಲಕ್ಷಣಮ್ ॥

- ಬ್ರಾಹ್ಮ ೧೭೨.೩೩.

**ಹನುಮಂತನ ಸ್ಮರಣೆಯಿಂದ ಪ್ರಾಪ್ತವಾಗುವ ಎಂಟು ಫಲಗಳು :**

ಬುದ್ಧಿ, ಬಲ, ಕೀರ್ತಿ, ಧೈರ್ಯ, ನಿರ್ಭಯತೆ, ನಿರೋಗತೆ, ಅಜಾಡ್ಯ ಮತ್ತು ವಾಕ್ಪಟುತಾ.

ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।
ಅಜಾಡ್ಯಂ ವಾಕ್ಪಟುತ್ವಂ ಚ ಹನೂಮತ್ ಸ್ಮರಣಾದ್ ಭವೇತ್ ॥

- ವಾಯುಸ್ತುತಿ.

**ವಿದ್ಯಾರ್ಥಿಯು ತ್ಯಜಿಸಬೇಕಾದ ಎಂಟು ವಿಷಯಗಳು :**

ಕಾಮ, ಕ್ರೋಧ, ಲೋಭ, ಜಿಹ್ವಾಚಾಪಲ್ಯ, ಶೃಂಗಾರಗಳಲ್ಲಿ ಆಸಕ್ತಿ, ಉತ್ಸವ ಸಮಾರಂಭ, ಅತಿನಿದ್ರೆ, ಅತಿಸೇವಾ.

ಕಾಮಂ ಕ್ರೋಧಂ ತಥಾ ಲೋಭಂ ಸ್ವಾದುಶೃಂಗಾರಕೌತುಕಮ್ ।
ಅತಿನಿದ್ರಾತಿಸೇವಾ ಚ ವಿದ್ಯಾರ್ಥೀ ಹ್ಯಷ್ಟ ವರ್ಜಯೇತ್ ॥ -ವ್ಯ. ಚಾ. ೧೧.೯.

**ಸ್ವೀಕರಿಸಿದರೆ ವ್ರತಭಂಗವಾಗದ ಎಂಟು ವಿಷಯಗಳು :** ನೀರು, ಗಡ್ಡೆ, ತುಪ್ಪ, ಹಾಲು, ಹೋಮದ ದ್ರವ್ಯ (ಸಕ್ತು), ಬ್ರಾಹ್ಮಣರ ಇಚ್ಛೆ, ಗುರುಗಳ ಆಜ್ಞೆ, ಮತ್ತು ಔಷಧ,

ಅಷ್ಟೌ ತಾನ್ಯವ್ರತಘ್ನಾನಿ ಆಪೋ ಮೂಲಂ ಘೃತಂ ಪಯಃ ।
ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಂ ॥

-ಕೃಷ್ಣಾಚಾರ್ಯ ಸ್ಮೃತಿಮು.

**ಎಂಟು ಮಂಗಲ ವಸ್ತುಗಳು :** ಅ) ಬ್ರಾಹ್ಮಣ, ಆಕಳು, ಅಗ್ನಿ, ಬಂಗಾರ, ಘೃತ, ಸೂರ್ಯ, ನೀರು ಮತ್ತು ರಾಜಾ.

ಲೋಕೇಽಸ್ಮಿನ್ ಮಂಗಲಾನ್ಯಷ್ಟೌ ಬ್ರಾಹ್ಮಣೋ ಗೌರ್ಹುತಾಶನಃ ।
ಹಿರಣ್ಯಂ ಸರ್ಪಿರಾದಿತ್ಯಃ ಆಪೋ ರಾಜಾ ತಥಾಷ್ಟಮಃ ॥

ಆ) ಸಿಂಹ, ಎತ್ತು, ಆನೆ, ಪೂರ್ಣಕುಂಭ, ಬೀಸಣಿಕೆ, ವೈಜಯಂತೀ, ನಗಾರಿ ಮತ್ತು ದೀಪ.

ಮೃಗರಾಜೋ ವೃಷೋ ನಾಗಃ ಕಲಶೋ ವ್ಯಜನಂ ತಥಾ ।
ವೈಜಯಂತೀ ತಥಾ ಭೇರೀ ದೀಪ ಇತ್ಯಷ್ಟ ಮಂಗಲಮ್ ॥

**ಶಿಷ್ಟಾಚಾರದ ಎಂಟು ಲಕ್ಷಣಗಳು :** ದಾನ, ಸತ್ಯಭಾಷಣ, ತಪಸ್ಸು, ಜ್ಞಾನ, ವಿದ್ಯಾ, ಸ್ವಾರ್ಥತ್ಯಾಗ, ಪೂಜಾ ಮತ್ತು ಇಂದ್ರಿಯನಿಗ್ರಹ.

ದಾನಂ ಸತ್ಯಂ ತಪೋ ಲೋಕೋ ವಿದ್ಯೇಜ್ಯಾ ಪೂಜನಂ ದಮಃ ।
ಅಷ್ಟೌ ತಾನಿ ಚರಿತ್ರಾಣಿ ಶಿಷ್ಟಾಚಾರಸ್ಯ ಲಕ್ಷಣಮ್ ॥

- ಮತ್ಸ್ಯ ಅ. ೧೪೪.

**ಅಷ್ಟಾವಧಾನಗಳು -** ಋಗ್ವೇದಾದಿ ಚತುರ್ವೇದಗಳು, ಉಪವೇದಗಳು, ಪುರಾಣ, ಇತಿಹಾಸ, ಸಂಗೀತ.

**ಎಂಟು ಯೋಗಗಳು (ಅಷ್ಟಾಂಗ ಯೋಗ) -** ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ.

**ಎಂಟು ಮದಗಳು (ಅಷ್ಟಮದ) -** ಧನಮದ, ಕುಲಮದ, ವಿದ್ಯಾಮದ, ರೂಪಮದ, ಯೌವನಮದ, ಬಲಮದ, ಪರಿವಾರಮದ, ಅಧಿಕಾರಮದ.

**ಅಷ್ಟ ವಸುಗಳು -** ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು, ವಿಭಾವಸು (ದ್ಯು).

**ಅಷ್ಟ ದಿಕ್ಕುಗಳು ಹಾಗೂ ದಿಕ್ಪಾಲರು -** ಪೂರ್ವ - ಇಂದ್ರ, ಆಗ್ನೇಯ - ಅಗ್ನಿ, ದಕ್ಷಿಣ - ಯಮ, ನೈಋತ್ಯ - ನಿರ್ಋತಿ, ಪಶ್ಚಿಮ - ವರುಣ, ವಾಯವ್ಯ - ವಾಯು, ಉತ್ತರ - ಚಂದ್ರ, ಕುಬೇರ, ಈಶಾನ್ಯ -ಈಶಾನ.

**ಅಷ್ಟಗುಣ :** ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ಮತ್ತು ವಶಿತ್ವ.

**ಅಷ್ಟಭಾವ ಪುಷ್ಪಗಳು :** ೧. ಅಹಿಂಸಾ, ೨. ಇಂದ್ರಿಯ ನಿಗ್ರಹ, ೩. ಸರ್ವ ಭೂತ ದಯೆ, ೪.ಕ್ಷಮಾ, ೫. ಜ್ಞಾನ, ೬. ತಪಸ್ಸು, ೭. ಧ್ಯಾನ, ೮. ಸತ್ಯ

ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ ।
ಸರ್ವಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ವಿಶಿಷ್ಯತೇ ॥
ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತು ಸಪ್ತಮಂ ।
ಸತ್ಯಂ ಚೈವಾಷ್ಟಮಂ ಪುಷ್ಪಂ ಏಭಿಸ್ತುಷ್ಯತಿ ಕೇಶವಃ ॥ - ಸು. ವಿ. ೧೪.೩೭.

## ೯. ಒಂಬತ್ತು (ನವ)

ಮಧ್ವ ಸಿದ್ಧಾಂತದ ನವ ಪ್ರಮೇಯಗಳು : ಹರಿಸರ್ವೋತ್ತಮ, ಜಗತ್ತು ಸತ್ಯ, ಜೀವರು ಪಾರಮಾರ್ಥಿಕವಾಗಿ ಭಿನ್ನರು, ಜೀವರು ಶ್ರೀಹರಿಯ ಅನುಚರರು, ನೀಚೋಚ್ಚಭಾವವನ್ನು ಹೊಂದಿದವರು, ನೈಜ ಸುಖಾನುಭೂತಿಯೇ ಮುಕ್ತಿ, ಶುದ್ಧಭಕ್ತಿಯು ಮುಕ್ತಿಗೆ ಸಾಧನ, ಪ್ರತ್ಯಕ್ಷ- ಅನುಮಾನ- ಆಗಮಗಳು ಪ್ರಮಾಣಗಳು ಮತ್ತು ಹರಿಯು ವೇದ್ಯೈಕವೇದ್ಯ.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯ ಜಗತ್ ತತ್ವತೋ ।
ಭಿನ್ನಾ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ॥
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

- ಶ್ರೀ ವ್ಯಾಸತೀರ್ಥರು.

ಭಕ್ತಿಯ ನವ ಲಕ್ಷಣಗಳು : ವಿಷ್ಣುವಿನ ಕಥಾ ಶ್ರವಣ, ನಾಮಸಂಕೀರ್ತನ, ನಾಮಸ್ಮರಣೆ, ಪಾದಸೇವನೆ, ಅರ್ಚನೆ, ವಂದನ, ದಾಸ್ಯ ಮತ್ತು ಆತ್ಮ ನಿವೇದನೆ.

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ॥ -ಭಾಗ ೭.೫.೨೩.

ನವವಿಧ ಭಕ್ತರು : ಶ್ರವಣ - ಪರೀಕ್ಷಿತ, ಕೀರ್ತನ -ಶುಕಾಚಾರ್ಯ, ಸ್ಮರಣ - ಪ್ರಹ್ಲಾದ, ಪಾದಸೇವನಂ - ಲಕ್ಷ್ಮೀ, ಅರ್ಚನ - ಪೃಥುರಾಜಾ, ವಂದನ - ಅಕ್ರೂರ, ದಾಸ್ಯ - ಹನುಮಾನ್, ಸಖ್ಯ - ಅರ್ಜುನ, ಆತ್ಮನಿವೇದನೆ - ಬಲಿ ಚಕ್ರವರ್ತಿ.

ನವವಿಧ ದ್ವೇಷಗಳು - ೧. ಪರಮಾತ್ಮನಲ್ಲಿ ಜೀವಾಭೇದಜ್ಞಾನ (ಜೀವ ಬ್ರಹ್ಮ ಐಕ್ಯಜ್ಞಾನ), ೨.ನಿರ್ಗುಣತ್ವ ಜ್ಞಾನ, ೩.ಅಪೂರ್ಣಗುಣಯುಕ್ತತ್ವಜ್ಞಾನ, ೪.ಬ್ರಹ್ಮಾದಿಗಳೊಂದಿಗೆ ಸಾಮ್ಯಜ್ಞಾನ, ೫.ಬ್ರಹ್ಮಾದಿಗಳೇ ಹರಿಗಿಂತ ಅಧಿಕರು ಎಂಬ ಜ್ಞಾನ, ೬. ಶ್ರೀಹರಿಯ ಅವಯವಗಳಲ್ಲೂ ಅವನ ಅವತಾರ ರೂಪಗಳಲ್ಲಿಯೂ ಗುಣ ಕ್ರಿಯಾದಿಗಳಲ್ಲೂ ಭೇದ ಜ್ಞಾನ, ೭. ಶ್ರೀ ಹರಿಯ ಅವತಾರಗಳಲ್ಲಿ ಹುಟ್ಟು ಸಾವುಗಳನ್ನು ತಿಳಿಯುವ ಮಿಥ್ಯಾಜ್ಞಾನ, ೮. ವಿಷ್ಣುಭಕ್ತರಲ್ಲಿ ದ್ವೇಷ, ೯. ವಿಷ್ಣು ಸರ್ವೋತ್ತಮತ್ವಾದಿ ಪ್ರಮೇಯಗಳನ್ನು ತಿಳಿಸುವ ವೇದಾದಿ ಪ್ರಮಾಣಗಳನ್ನು ನಿಂದಿಸುವುದು.

ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥೧೦೯॥
ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥೧೧೦॥

- ಮ. ಭಾ. ತಾ. ನಿ. ೮.೧.

**ಬ್ರಾಹ್ಮಣನ ಒಂಬತ್ತು ನಿತ್ಯ ಕರ್ಮಗಳು :** ಸ್ನಾನ, ಸಂಧ್ಯಾ, ಜಪ, ಹೋಮ, ಸ್ವಾಧ್ಯಾಯ, ದೇವಪೂಜಾ, ವೈಶ್ವದೇವ, ಅತಿಥಿ ಪೂಜಾ, ಮತ್ತು ಪಿತೃತರ್ಪಣ.

ಸ್ನಾನಂ ಸಂಧ್ಯಾ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಮ್ ।
ವೈಶ್ವದೇವಸ್ತಥಾಽಽತಿಥ್ಯಂ ನವಮಂ ಪಿತೃತರ್ಪಣಮ್ ॥

-ಸ್ಕಂದ.ಪು. ಕಾಶೀಖಂಡ.

**ನವ ಸಾಕ್ಷಿ ದೇವತೆಗಳು :** ಸೂರ್ಯ, ಚಂದ್ರ, ಯಮ, ಕಾಲ, ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಈ ಪಂಚ ಮಹಾಭೂತಗಳ ಅಭಿಮಾನಿ ದೇವತೆಗಳು.

ಸೂರ್ಯಃ ಸೋಮೋ ಯಮಃ ಕಾಲೋ ಮಹಾಭೂತಾನಿ ಪಂಚ ಚ ।
ಏತೇ ಶುಭಾಶುಭಾಖ್ಯಾನಾಂ ಕರ್ಮಣಾಂ ನವ ಸಾಕ್ಷಿಣಃ ॥ -ಸು.

**ನವ ದ್ವಾರಗಳು :** ಎರಡು ಕಣ್ಣುಗಳು, ಎರಡು ಕಿವಿಗಳು, ಮೂಗಿನ ಎರಡು ಹೊರಳೆಗಳು, ಬಾಯಿ, ಗುದದ್ವಾರ, ಮೂತ್ರದ್ವಾರ. (ತಲೆಯ ಮಿದುಳಿನಲ್ಲಿರುವ ಸಹಸ್ರದಲ ಕಮಲಕ್ಕೆ ಬ್ರಹ್ಮರಂಧ್ರ ಅಥವಾ ದಶಮದ್ವಾರ ಎಂದು ಹೇಳುತ್ತಾರೆ.)

## ೧೦. ಹತ್ತು (ದಶ)

**ದಶಾವತಾರಗಳು :** ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ.

ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಽಥ ವಾಮನಃ ।
ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕಿಶ್ಚ ತೇ ದಶ ॥೨೭॥
ಏತೇ ದಶಾವತಾರಾಶ್ಚ ಪೃಥಿವ್ಯಾಂ ಪರಿಕೀರ್ತಿತಾಃ ।
ಏತೇಷಾಂ ನಾಮಮಾತ್ರೇಣ ಬ್ರಹ್ಮಣಾ ಶುಧ್ಯತೇ ಸದಾ ॥೨೮॥ - ಪದ್ಮ ಉತ್ತರ ೭೧.

**ಪರಮಾತ್ಮನ ದಶಾವತಾರಗಳು - ಹಾಗೂ ಆಗಿನ ರಮಾ ರೂಪಗಳು -** ಮತ್ಸ್ಯ-ವೇದಾ, ಕೂರ್ಮ-ವೇದವತೀ, ವರಾಹ -ಧಾತ್ರೀ, ನರಸಿಂಹ - ಮಹಾಲಕ್ಷ್ಮೀ, ವಾಮನ-ಸುಖಾಲಯಾ, ಪರಶುರಾಮ - ಹರಿಣೀ, ರಾಮ - ಸೀತಾ, ಕೃಷ್ಣ - ರುಕ್ಮಿಣೀ, ಬುದ್ಧ - ರೇವತೀ, ಕಲ್ಕಿ - ಪ್ರಭಾ.

**ದಶೇಂದ್ರಿಯಗಳು : ಪಂಚಕರ್ಮೇಂದ್ರಿಯಗಳು -** ಕೈ, ಕಾಲು, ಬಾಯಿ, ಜನನೇಂದ್ರಿಯ, ಮಲದ್ವಾರ. **ಪಂಚಜ್ಞಾನೇಂದ್ರಿಯಗಳು :** ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ.

**ದಶಾಂಗ :** ಬೆಲ್ಲ, ರಾಳ, ಗುಗ್ಗುಳ, ಗಂಧ, ಧೂಪ, ಚಂದನ, ಕಚೋರ, ವಜ್ರನಖಿ, ಘೃತ, ತುಂಗಿ.

ಜಾತಿಪುಷ್ಪಮಥೈಲಾ ಚ ಗುಗ್ಗುಲಶ್ಚ ಹರೀತಕೀ।
ಕೂಟಸರ್ಜನಸಶ್ಚೈವ ಗುಡಃ ಶೈಲಚ್ಛಟಸ್ತಥಾ ।
ನಖಿಯುಕ್ತಾನಿ ಚೈತಾಸಿ ದಶಾಂಗೋ ಧೂಪ ಉಚ್ಯತೇ॥ - ಸ್ಕಂದ. ಪು.

## ೯. ಒಂಬತ್ತು (ನವ)

ಮಧ್ವ ಸಿದ್ಧಾಂತದ ನವ ಪ್ರಮೇಯಗಳು : ಹರಿಸರ್ವೋತ್ತಮ, ಜಗತ್ತು ಸತ್ಯ, ಜೀವರು ಪಾರಮಾರ್ಥಿಕವಾಗಿ ಭಿನ್ನರು, ಜೀವರು ಶ್ರೀಹರಿಯ ಅನುಚರರು, ನೀಚೋಚ್ಚಭಾವವನ್ನು ಹೊಂದಿದವರು, ನೈಜ ಸುಖಾನುಭೂತಿಯೇ ಮುಕ್ತಿ, ಶುದ್ಧಭಕ್ತಿಯು ಮುಕ್ತಿಗೆ ಸಾಧನ, ಪ್ರತ್ಯಕ್ಷ- ಅನುಮಾನ- ಆಗಮಗಳು ಪ್ರಮಾಣಗಳು ಮತ್ತು ಹರಿಯು ವೇದ್ಯೈಕವೇದ್ಯ.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯ ಜಗತ್ ತತ್ವತೋ ।
ಭಿನ್ನಾ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ॥
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

- ಶ್ರೀ ವ್ಯಾಸತೀರ್ಥರು.

ಭಕ್ತಿಯ ನವ ಲಕ್ಷಣಗಳು : ವಿಷ್ಣುವಿನ ಕಥಾ ಶ್ರವಣ, ನಾಮಸಂಕೀರ್ತನ, ನಾಮಸ್ಮರಣೆ, ಪಾದಸೇವನೆ, ಅರ್ಚನೆ, ವಂದನ, ದಾಸ್ಯ ಮತ್ತು ಆತ್ಮ ನಿವೇದನೆ.

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ॥ -ಭಾಗ ೭.೫.೨೩.

ನವವಿಧ ಭಕ್ತರು : ಶ್ರವಣ - ಪರೀಕ್ಷಿತ, ಕೀರ್ತನ -ಶುಕಾಚಾರ್ಯ, ಸ್ಮರಣ - ಪ್ರಹ್ಲಾದ, ಪಾದಸೇವನಂ - ಲಕ್ಷ್ಮೀ, ಅರ್ಚನ - ಪೃಥುರಾಜಾ, ವಂದನ - ಅಕ್ರೂರ, ದಾಸ್ಯ - ಹನುಮಾನ್, ಸಖ್ಯ - ಅರ್ಜುನ, ಆತ್ಮನಿವೇದನೆ - ಬಲಿ ಚಕ್ರವರ್ತಿ.

ನವವಿಧ ದ್ವೇಷಗಳು - ೧. ಪರಮಾತ್ಮನಲ್ಲಿ ಜೀವಾಭೇದಜ್ಞಾನ (ಜೀವ ಬ್ರಹ್ಮ ಐಕ್ಯಜ್ಞಾನ), ೨.ನಿರ್ಗುಣತ್ವ ಜ್ಞಾನ, ೩.ಅಪೂರ್ಣಗುಣಯುಕ್ತತ್ವಜ್ಞಾನ, ೪.ಬ್ರಹ್ಮಾದಿಗಳೊಂದಿಗೆ ಸಾಮ್ಯಜ್ಞಾನ, ೫.ಬ್ರಹ್ಮಾದಿಗಳೇ ಹರಿಗಿಂತ ಅಧಿಕರು ಎಂಬ ಜ್ಞಾನ, ೬. ಶ್ರೀಹರಿಯ ಅವಯವಗಳಲ್ಲೂ ಅವನ ಅವತಾರ ರೂಪಗಳಲ್ಲಿಯೂ ಗುಣ ಕ್ರಿಯಾದಿಗಳಲ್ಲೂ ಭೇದ ಜ್ಞಾನ, ೭. ಶ್ರೀ ಹರಿಯ ಅವತಾರಗಳಲ್ಲಿ ಹುಟ್ಟು ಸಾವುಗಳನ್ನು ತಿಳಿಯುವ ಮಿಥ್ಯಾಜ್ಞಾನ, ೮. ವಿಷ್ಣುಭಕ್ತರಲ್ಲಿ ದ್ವೇಷ, ೯. ವಿಷ್ಣು ಸರ್ವೋತ್ತಮತ್ವಾದಿ ಪ್ರಮೇಯಗಳನ್ನು ತಿಳಿಸುವ ವೇದಾದಿ ಪ್ರಮಾಣಗಳನ್ನು ನಿಂದಿಸುವುದು.

ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥೧೦೯॥
ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥೧೧೦॥

- ಮ. ಭಾ. ತಾ. ನಿ. ೮.೧.

**ಬ್ರಾಹ್ಮಣನ ಒಂಬತ್ತು ನಿತ್ಯ ಕರ್ಮಗಳು :** ಸ್ನಾನ, ಸಂಧ್ಯಾ, ಜಪ, ಹೋಮ, ಸ್ವಾಧ್ಯಾಯ, ದೇವಪೂಜಾ, ವೈಶ್ವದೇವ, ಅತಿಥಿ ಪೂಜಾ, ಮತ್ತು ಪಿತೃತರ್ಪಣ.

ಸ್ನಾನಂ ಸಂಧ್ಯಾ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಮ್ ।
ವೈಶ್ವದೇವಸ್ತಥಾಽಽತಿಥ್ಯಂ ನವಮಂ ಪಿತೃತರ್ಪಣಮ್ ॥

-ಸ್ಕಂದ.ಪು. ಕಾಶೀಖಂಡ.

**ನವ ಸಾಕ್ಷಿ ದೇವತೆಗಳು :** ಸೂರ್ಯ, ಚಂದ್ರ, ಯಮ, ಕಾಲ, ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಈ ಪಂಚ ಮಹಾಭೂತಗಳ ಅಭಿಮಾನಿ ದೇವತೆಗಳು.

ಸೂರ್ಯಃ ಸೋಮೋ ಯಮಃ ಕಾಲೋ ಮಹಾಭೂತಾನಿ ಪಂಚ ಚ ।
ಏತೇ ಶುಭಾಶುಭಾಖ್ಯಾನಾಂ ಕರ್ಮಣಾಂ ನವ ಸಾಕ್ಷಿಣಃ ॥ -ಸು.

**ನವ ದ್ವಾರಗಳು :** ಎರಡು ಕಣ್ಣುಗಳು, ಎರಡು ಕಿವಿಗಳು, ಮೂಗಿನ ಎರಡು ಹೊರಳೆಗಳು, ಬಾಯಿ, ಗುದದ್ವಾರ, ಮೂತ್ರದ್ವಾರ. (ತಲೆಯ ಮಿದುಳಿನಲ್ಲಿರುವ ಸಹಸ್ರದಲ ಕಮಲಕ್ಕೆ ಬ್ರಹ್ಮರಂಧ್ರ ಅಥವಾ ದಶಮದ್ವಾರ ಎಂದು ಹೇಳುತ್ತಾರೆ.)

## ೧೦. ಹತ್ತು (ದಶ)

**ದಶಾವತಾರಗಳು :** ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ.

ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಽಥ ವಾಮನಃ ।
ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕಿಶ್ಚ ತೇ ದಶ ॥೨೭॥
ಏತೇ ದಶಾವತಾರಾಶ್ಚ ಪೃಥಿವ್ಯಾಂ ಪರಿಕೀರ್ತಿತಾಃ ।
ಏತೇಷಾಂ ನಾಮಮಾತ್ರೇಣ ಬ್ರಹ್ಮಣಾ ಶುಧ್ಯತೇ ಸದಾ ॥೨೮॥ - ಪದ್ಮ ಉತ್ತರ ೭೧.

**ಪರಮಾತ್ಮನ ದಶಾವತಾರಗಳು - ಹಾಗೂ ಆಗಿನ ರಮಾ ರೂಪಗಳು** - ಮತ್ಸ್ಯ-ವೇದಾ, ಕೂರ್ಮ-ವೇದವತೀ, ವರಾಹ -ಧಾತ್ರೀ, ನರಸಿಂಹ - ಮಹಾಲಕ್ಷ್ಮೀ, ವಾಮನ-ಸುಖಾಲಯಾ, ಪರಶುರಾಮ - ಹರಿಣೀ, ರಾಮ - ಸೀತಾ, ಕೃಷ್ಣ - ರುಕ್ಮಿಣೀ, ಬುದ್ಧ - ರೇವತೀ, ಕಲ್ಕಿ - ಪ್ರಭಾ.

**ದಶೇಂದ್ರಿಯಗಳು : ಪಂಚಕರ್ಮೇಂದ್ರಿಯಗಳು** - ಕೈ, ಕಾಲು, ಬಾಯಿ, ಜನನೇಂದ್ರಿಯ, ಮಲದ್ವಾರ. **ಪಂಚಜ್ಞಾನೇಂದ್ರಿಯಗಳು :** ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ.

**ದಶಾಂಗ :** ಬೆಲ್ಲ, ರಾಳ, ಗುಗ್ಗುಳ, ಗಂಧ, ಧೂಪ, ಚಂದನ, ಕಚೋರ, ವಜ್ರನಖಿ, ಘೃತ, ತುಂಗಿ.

ಜಾತಿಪುಷ್ಪಮಥೈಲಾ ಚ ಗುಗ್ಗುಲಶ್ಚ ಹರೀತಕೀ।
ಕೂಟಸರ್ಜನಸಶ್ಚೈವ ಗುಡಃ ಶೈಲಚ್ಛಟಸ್ತಥಾ ।
ನಖಯುಕ್ತಾನಿ ಚೈತಾಸಿ ದಶಾಂಗೋ ಧೂಪ ಉಚ್ಯತೇ॥ - ಸ್ಕಂದ. ಪು.

**ದಶ ಮಹಾದಾನಗಳು :** ಸುವರ್ಣ, ಅಶ್ವ, ತಿಲ, ಆನೆ, ದಾಸೀ, ರಥ, ಭೂಮಿ, ಮನೆ, ಕನ್ಯಾ ಮತ್ತು ಕಪಿಲಾ ಗೋವು.

ಕನಕಾಶ್ವತಿಲಾ ನಾಗದಾಸೀರಥಮಹೀಗೃಹಾಃ ।
ಕನ್ಯಾ ಚ ಕಪಿಲಾ ಧೇನುರ್ಮಹಾದಾನಾನಿ ವೈ ದಶ ॥ - ಅಗ್ನಿ ಪು. ೨೦೯.೨೪.

**ಸಾತ್ವಿಕ ಆಹಾರದ ಹತ್ತು ಗುಣಗಳು :** ಆಯುಷ್ಯ, ಸತ್ವ, ಬಲ, ಆರೋಗ್ಯ, ಸುಖ, ಪ್ರೀತಿವರ್ಧನೆ, ರಸ್ಯ, ಸ್ನಿಗ್ಧತೆ, ಸ್ಥಿರತೆ ಮತ್ತು ಹೃದ್ಯತೆ.

ಆಯುಸ್ಸತ್ವ ಬಲಾರೋಗ್ಯ ಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ॥ -ಭ. ಗೀ. ೧೭.೮.

**ಪೋಷಿಸಲ್ಪಡಲು ಅರ್ಹರಾದ ಹತ್ತು ಜನ :** ತಾಯಿ, ತಂದೆ, ಗುರು, ಪತ್ನೀ, ಪ್ರಜಾ, ದೀನ, ಆಶ್ರಿತ, ಅಭ್ಯಾಗತ, ಅತಿಥಿ ಮತ್ತು ಅಗ್ನಿ.

ಪಿತಾ ಮಾತಾ ಗುರುರ್ಭಾರ್ಯಾ ಪ್ರಜಾ ದೀನಃ ಸಮಾಶ್ರಿತಃ ।
ಅಭ್ಯಾಗತೋಽತಿಥಿಶ್ಚಾಗ್ನಿಃ ಪೋಷ್ಯವರ್ಗ ಉದಾಹೃತಃ ॥
-ದಕ್ಷಸ್ಮೃತಿ; ದೇವೀ ಭಾಗ.೧೧.೧೨.೨೦.

**ಹತ್ತು (ಜನರ)ಕಡೆ ಬರಿಗೈಯಿಂದ ಹೋಗಬಾರದು :** ಅಗ್ನಿ ಹೋತ್ರ, ಗೃಹ, ಕ್ಷೇತ್ರ, ಮಿತ್ರ, ಭಾರ್ಯಾ, ಸುತ, ಶಿಶು, ರಾಜಾ, ದೇವತೆ ಮತ್ತು ಗುರು. ಅಗ್ನಿಹೋತ್ರಂ ಗೃಹಂ ಕ್ಷೇತ್ರಂ ಸುತಂ ಭಾರ್ಯಾಂ, ಶಿಶುಂ ತಥಾ। ರಿಕ್ತಪಾಣಿರ್ನ ಗಚ್ಛೇತ್ ರಾಜಾನಂ ದೇವತಾಂ ಗುರುಮ್॥ -ಸು.

**ದಶಪ್ರಾಣ -** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಮತ್ತು ಧನಂಜಯ I - ಭಾಗ ೭.೧೬.೪೨.

## ೧೧. ಹನ್ನೊಂದು (ಏಕಾದಶ)

**ಹನ್ನೊಂದು ಪ್ರಕಾರದ ಆನಂದಗಳು :** ಮಾನುಷಾನಂದ, ಮನುಷ್ಯಗಂಧರ್ವರ ಆನಂದ, ದೇವಗಂಧರ್ವರ ಆನಂದ, ಪಿತೃಲೋಕದ ಆನಂದ, ಆಜಾನಜನಾಮಕ ದೇವತೆಗಳ ಆನಂದ, ಕರ್ಮದೇವತೆಗಳ ಆನಂದ, ದೇವತೆಗಳ ಆನಂದ, ಇಂದ್ರನ ಆನಂದ, ಬೃಹಸ್ಪತಿಯ ಆನಂದ, ಪ್ರಜಾಪತಿಯ ಆನಂದ ಮತ್ತು ಬ್ರಹ್ಮಾನಂದ (-ತೈತ್ತಿರೀಯ ಉಪನಿಷದ್ ಆನಂದವಲ್ಲೀ).

**ಏಕಾದಶ ಇಂದ್ರಿಯಗಳು :** ದಶೇಂದ್ರಿಯಗಳು (ಪಂಚ ಕರ್ಮೇಂದ್ರಿಯ + ಪಂಚ ಜ್ಞಾನೇಂದ್ರಿಯಗಳು) ಮತ್ತು ಮನಸ್ಸು

ಇಂದ್ರಿಯಾಣಿ ದಶೈಕಂ ಚ । -ಭ.ಗೀ. ೧೩.೫.

**ಭಗವಂತನ ಹನ್ನೊಂದು ಪೂಜಾಸ್ಥಾನಗಳು :** ಸೂರ್ಯ, ಅಗ್ನಿ, ಬ್ರಾಹ್ಮಣ, ಆಕಳು, ವೈಷ್ಣವ, ಆಕಾಶ, ವಾಯು, ಜಲ, ಭೂಮಿ, ಆತ್ಮಾ ಮತ್ತು ಸರ್ವ ಪ್ರಾಣಿ.

ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಮ್ ।
ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥ -ಭಾಗ ೧೧.೧೧.೪೨.

**ಸುಪ್ರಸಿದ್ಧರಾದ ಹನ್ನೊಂದು ಪತಿವ್ರತೆಯರು :** ಸುವರ್ಚಲಾ, ಶಚೀ, ಅರುಂಧತೀ, ರೋಹಿಣೀ, ಲೋಪಾಮುದ್ರಾ, ಸುಕನ್ಯಾ, ಸಾವಿತ್ರೀ, ಶ್ರೀಮತೀ, ಮದಯಂತೀ, ಕೇಶಿನೀ ಮತ್ತು ದಮಯಂತೀ.

## ೧೨. ಹನ್ನೆರಡು (ದ್ವಾದಶ)

**ದ್ವಾದಶಾಕ್ಷರೀ ಮಂತ್ರ :** 'ಓಂ ನಮೋ ಭಗವತೇ ವಾಸುದೇವಾಯ'

**ದ್ವಾದಶ ಪುಂಡ್ರ ಸ್ಥಾನಗಳು :** ಹಣೆ, ಉದರ, ಹೃದಯ, ಕುತ್ತಿಗೆ, ಉದರದ ಮೇಲಿನ ಮಧ್ಯನಾಮದ ಬಲಗಡೆ ಮತ್ತು ಎಡಗಡೆ, ಎರಡು ಬಾಹುಗಳು, ಕುತ್ತಿಗೆಯ ಬಲ ಹಾಗೂ ಎಡ, ಬೆನ್ನು ಮತ್ತು ಕುತ್ತಿಗೆಯ ಹಿಂದೆ.

**ಶಕ್ತ್ಯಾದಿ ಭಗವಂತನ ದ್ವಾದಶ ರೂಪಗಳು**

| ದ್ವಾದಶ ರೂಪ | ಇಂದ್ರಿಯಗಳು | ಅಭಿಮಾನಿ ದೇವತೆಗಳು |
|---|---|---|
| ಶಕ್ತಿ | ಮನಸ್ಸು | ಗರುಡ, ಇಂದ್ರ, ಕಾಮ |
| ಪ್ರತಿಷ್ಠಾ | ಕಿವಿ | ಚಂದ್ರ |
| ಸಂವಿತ್ | ಕಣ್ಣು | ಸೂರ್ಯ |
| ಸ್ಫೂರ್ತಿಚರ್ಮ | ಅಹಂಕಾರಿಕ | ಪ್ರಾಣದೇವರು |
| ಪ್ರಕೃತಿ | ನಾಲಿಗೆ | ವರುಣ ದೇವರು |
| ಕಲಾ | ಮೂಗು | ಅಶ್ವಿನೀ ದೇವತೆಗಳು |
| ವಿದ್ಯಾ | ಬಾಯಿ | ಅಗ್ನಿ |
| ಮತಿ | ಕೈ | ದಕ್ಷಪ್ರಜಾಪತಿ |
| ನೀತಿ | ಕಾಲು | ಜಯಂತ |
| ಮಾಯಾ | ಪಾಯು | ಮಿತ್ರನಾಮಕ ಸೂರ್ಯ |
| ಕಾಲ | ಉಪಸ್ಥ | ಸ್ವಾಯಂಭುವ ಮನು |
| ಪುರುಷ | ಸಾಕಾರದೇಹ | ವಾಯುದೇವರು |

## ೧೪. ಹದಿನಾಲ್ಕು (ಚತುರ್ದಶ)

**ಹದಿನಾಲ್ಕು ಭಾಗವತೋತ್ತಮರು :** ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ, ಅಂಬರೀಷ, ಶುಕ, ಶೌನಕ, ಭೀಷ್ಮ, ದಾಲ್ಭ್ಯ, ಅರ್ಜುನ, ರುಕ್ಮಾಂಗದ, ವಸಿಷ್ಠ ಮತ್ತು ವಿಭೀಷಣ.

**ವಿಷ್ಣುವಿನ ಹದಿನಾಲ್ಕು ದ್ವಾರಪಾಲಕರು :** ನಂದ, ಸುನಂದ, ಬಲ, ಪ್ರಬಲ, ಅರ್ಹಣ, ವಿಧಾತಾ, ಜಯ, ವಿಜಯ, ಚಂಡ, ಪ್ರಚಂಡ, ಭದ್ರ, ಸುಭದ್ರ, ಕುಮುದ, ಕುಮುದಾಕ್ಷ.

**ಹದಿನಾಲ್ಕು ಮನುಗಳು :** ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ.

ವೈವಸ್ವತ, ಸಾವರ್ಣೀ, ದಕ್ಷಸಾವರ್ಣೀ, ಬ್ರಹ್ಮಸಾವರ್ಣೀ, ಧರ್ಮ ಸಾವರ್ಣೀ, ರುದ್ರಸಾವರ್ಣೀ, ದೇವಸಾವರ್ಣೀ ಮತ್ತು ಇಂದ್ರಸಾವರ್ಣೀ.

-ಭಾಗ. ಸ್ಕಂಧ. ೮.ಅ.೧೩.

**ಹದಿನಾಲ್ಕು ವಿದ್ಯೆಗಳು :** ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ವ್ಯಾಕರಣ, ಛಂದಶ್ಶಾಸ್ತ್ರ, ನಿರುಕ್ತ, ಜ್ಯೋತಿಷ, ಕಲ್ಪ, ನ್ಯಾಯ, ಮೀಮಾಂಸಾ, ಪುರಾಣ ಮತ್ತು ಧರ್ಮಶಾಸ್ತ್ರ.

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಸ್ತ್ವೇತಾ ಚತುರ್ದಶ ॥ -ಭ. ಬ್ರಾಹ್ಮ. ೨.೬.

**ಚತುರ್ದಶ ಲೋಕಗಳು -** ಊರ್ಧ್ವಲೋಕಗಳು - ಭೂರ್ಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ.

ಅಧೋ ಲೋಕಗಳು - ಅತಲಲೋಕ, ವಿತಲಲೋಕ, ಸುತಲಲೋಕ, ರಸಾತಲಲೋಕ, ತಲಾತಲಲೋಕ, ಮಹಾತಲಲೋಕ, ಪಾತಾಲಲೋಕ.

### ೧೫. ಹದಿನೈದು (ಪಂಚದಶ)

**ಯೋಗದ ಹದಿನೈದು ಅಂಗಗಳು :** ಯಮ, ನಿಯಮ, ತ್ಯಾಗ, ಮೌನ, ದೇಶ, ಕಾಲ, ಆಸನ, ಮೂಲಬಂಧ, ದೇಹದ ಸಮತಾ, ದೃಷ್ಟಿಯ ಸ್ಥಿರತೆ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಆತ್ಮಧ್ಯಾನ ಮತ್ತು ಸಮಾಧಿ.

**ದ್ರವ್ಯದಿಂದಾಗುವ ಹದಿನೈದು ಅನರ್ಥ ಕಾರಣಗಳು :** ಚೌರ್ಯ, ಹಿಂಸೆ, ಅಸತ್ಯ ನುಡಿಯುವುದು ಅಥವಾ ಮೋಸದಿಂದ ದ್ರವ್ಯ ವ್ಯವಹಾರ, ದಂಭ, ಕಾಮ, ಕ್ರೋಧ, ಗರ್ವ, ಮದ, ಭೇದ, ವೈರ, ಅವಿಶ್ವಾಸ, ಸ್ಪರ್ಧೆ, ಸ್ತ್ರೀ, ದ್ಯೂತ, ಮತ್ತು ಮದ್ಯಪಾನ. - (ಭಾಗ. ೧೧.೨೩.೧೯.)

ಸ್ತೇಯಂ ಹಿಂಸಾಽನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।
ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥೧೮॥
ಏತೇ ಪಂಚದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಮ್ ॥೧೯॥ - (ಭಾಗ ೧೧.೨೩)

### ೧೬. ಹದಿನಾರು (ಷೋಡಶ)

**ಷೋಡಶಾಕ್ಷರೀ ಮಂತ್ರ :** ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥

**ಪೂಜೆಯಲ್ಲಿ ಷೋಡಶೋಪಚಾರಗಳು :** ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಯಜ್ಞೋಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಮಸ್ಕಾರ, ಪ್ರದಕ್ಷಿಣೆ ಮತ್ತು ಮಂತ್ರಪುಷ್ಪ.

ಆಸನಂ ಸ್ವಾಗತಂ ಪಾದ್ಯಮರ್ಘ್ಯಮಾಚಮನೀಯಕಮ್ । ಮಧುಪರ್ಕಾಚ ಮಸ್ನಾನಂ ವಸನಾಭರಣಾನಿ ಚ ॥ ಗಂಧಪುಷ್ಪೇ ಧೂಪದೀಪೌ ನೈವೇದ್ಯಂ ವಂದನಂ ತಥಾ ॥ ಪ್ರದಕ್ಷಿಣಂ ಮಂತ್ರಪುಷ್ಪಂ.......॥

**ಹದಿನಾರು ತಿಥಿಗಳು ಮತ್ತು ಅವುಗಳ ಅಧಿಪತಿಗಳು :**

ಪ್ರತಿಪದಾ - ಅಗ್ನಿ, ದ್ವಿತೀಯಾ - ಬ್ರಹ್ಮಾ, ತೃತೀಯಾ - ಯಕ್ಷರಾಜ, ಚತುರ್ಥೀ ಗಣೇಶ, ಪಂಚಮೀ - ನಾಗರಾಜ, ಷಷ್ಠೀ - ಕಾರ್ತಿಕೇಯ (ಸ್ಕಂದ), ಸಪ್ತಮೀ - ಸೂರ್ಯ, ಅಷ್ಟಮೀ - ರುದ್ರ, ನವಮೀ - ದುರ್ಗಾ, ದಶಮೀ - ಯಮರಾಜ, ಏಕಾದಶೀ - ವಿಶ್ವೇಶ್ವರ, ದ್ವಾದಶೀ - ವಿಷ್ಣು, ತ್ರಯೋದಶೀ - ಮದನ, ಚತುರ್ದಶೀ - ಶಂಕರ, ಪೌರ್ಣಿಮಾ - ಚಂದ್ರ, ಅಮಾವಾಸ್ಯಾ-ಪಿತೃಗಳು.

ದೇವೇಭ್ಯಸ್ತಿಥಯೋ ದತ್ತಾ ಭಾಸ್ಕರೇಣ ಮಹಾತ್ಮನಾ ।
ಯಸ್ಯೈವ ಯದ್ದಿನಂ ದತ್ತಂ ಸ ತಸ್ಯೈವಾಧಿಪಃ ಸ್ಮೃತಃ ॥

**ಹದಿನಾರು ಸಂಸ್ಕಾರಗಳು :** ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಉಪನಯನ, ಮಹಾನಾಮ್ನೀ ವ್ರತ, ಮಹಾವ್ರತ, ಉಪನಿಷದವ್ರತ, ಗೋದಾನ, ಕೇಶಾಂತ, ಸಮಾವರ್ತನ ಮತ್ತು ವಿವಾಹ.

**ಸ್ತ್ರೀಯರ ಹದಿನಾರು ಆಂತರ ಶೃಂಗಾರಗಳು :** ದಯಾ, ಕ್ಷಮಾ, ಶಾಂತಿ, ಪ್ರೀತಿ, ನೀತಿ, ಭಕ್ತಿ, ಚಾತುರ್ಯ, ಧೈರ್ಯ, ಪಾತಿವ್ರತ್ಯ, ಪರೋಪಕಾರ, ಹೊಂದಿಕೊಂಡಿರುವುದು, ಸಮಾಧಾನ, ಸತ್ಯವಚನ, ನಮ್ರತೆ, ಸಹಿಷ್ಣುತೆ ಮತ್ತು ಜ್ಞಾನಲಾಲಸೆ.

**ಸ್ತ್ರೀಯರ ಹದಿನಾರು ಬಾಹ್ಯ ಶೃಂಗಾರಗಳು :** ಚೋಳೀ, ಮುಖದ ಮೇಲೆ ಸೆರಗು, ಆಭರಣಗಳನ್ನು ಧರಿಸುವುದು, ಮಂದ ಗಮನ, ಹರಿಣಾಕ್ಷಿ, ನಿತ್ಯ ಹೆರಳು ಹಾಕಿಕೊಳ್ಳುವುದು, ವ್ಯವಸ್ಥಿತವಾಗಿ ವಸ್ತ್ರಧಾರಣ, ಕಾಡಿಗೆ ಹಚ್ಚಿಕೊಳ್ಳುವುದು, ಕುಂಕುಮ ಧಾರಣೆ, ಬಳಕುವ ಸೊಂಟ, ಕೆಂಪು ವರ್ಣ, ಅಲ್ಪ ನಿದ್ರೆ, ಹಸನ್ಮುಖಿ, ಮಧುರ ಭಾಷಣ, ಮಿತವ್ಯಯ ಮತ್ತು ಆದರಾತಿಥ್ಯಕರಣ.

-ಬ್ರಹ್ಮವೈವರ್ತ, ಶ್ರೀಕೃಷ್ಣಖಂಡ, ೩೮,೧೧೦.

## ೧೭. ಹದಿನೇಳು (ಸಪ್ತದಶ)

**ಹದಿನೇಳು ಜನ ಮೂರ್ಖರು :** ೧. ಅಯೋಗ್ಯನಿಗೆ ಉಪದೇಶ ಮಾಡುವವನು. ೨.ಅಲ್ಪ ಲಾಭದಿಂದ ಸಂತುಷ್ಟನಾಗುವವನು, ೩. ತನ್ನನ್ನು ದ್ವೇಷಿಸುವವನೊಂದಿಗೆ ಬಹುಕಾಲ ವ್ಯವಹರಿಸುವವನು, ೪. ಹೆಂಡತಿಯ ಹೆಸರಿನ ಮೇಲೆ ಗೌರವವನ್ನು ಪಡೆಯುವವನು, ೫. ಬೇಡಬಾರದ ವಸ್ತುವನ್ನು ಬೇಡುವವನು, ೬. ಆತ್ಮಸ್ತುತಿ ಮಾಡಿಕೊಳ್ಳುವವನು. ೭.ಶ್ರೇಷ್ಠ ಕುಲದಲ್ಲಿ ಹುಟ್ಟಿದ್ದರೂ ನಿಂದ್ಯ ಕರ್ಮ ಮಾಡುವವನು. ೮. ತಾನು ದುರ್ಬಲನಾಗಿದ್ದರೂ ಬಲಿಷ್ಠರೊಂದಿಗೆ ವೈರ ಕಟ್ಟಿಕೊಳ್ಳುವವನು. ೯. ಶ್ರದ್ಧೆ ಇಲ್ಲದವನಿಗೆ ಉಪದೇಶ ಮಾಡುವವನು. ೧೦. ಅತಿಯಾಶೆ ಮಾಡುವವನು. ೧೧. ಸೊಸೆಯ ಅಥವಾ ಅತ್ತೆಯ ಮನೆಯವರ ಸಹಾಯದಿಂದ ದೊಡ್ಡ ಸಂಕಟದಿಂದ ಪಾರಾಗಿ ಆ ಮನೆಗಳಲ್ಲಿಯೇ ತನ್ನ ದೊಡ್ಡಸ್ತಿಕೆಗೆ ಹಾತೊರೆಯುವವನು. ೧೨.

ಸೊಸೆಯನ್ನು ಭೇಡಿಸುವ ಮಾವ, ೧೩. ಪರಸ್ತ್ರೀ ಗಮನ ಮಾಡುವವನು, ೧೪. ಸಮಯಾಸಮಯದಲ್ಲಿ ಪತ್ನಿಯನ್ನು ನಿಂದಿಸುವವನು, ೧೫.ಗೊತ್ತಿದ್ದರೂ ವಿಷಯ ಗೊತ್ತಿಲ್ಲವೆಂದು ಹೇಳುವವನು,' ೧೬. ಭಿಕ್ಷೆ ಬೇಡಿದ ನಂತರ ಆತ್ಮಪ್ರಶಂಸೆ ಮಾಡಿಕೊಳ್ಳುವವನು. ಮತ್ತು ೧೭. ಅಸತ್ಯ ವಿಷಯವನ್ನು ಸತ್ಯವೆಂದು ಪ್ರತಿಪಾದಿಸುವವನು.

### ೧೮.ಹದಿನೆಂಟು (ಅಷ್ಟಾದಶ)

**ಹದಿನೆಂಟು ಪುರಾಣಗಳು :** **ಆರು ಸಾತ್ವಿಕ ಪುರಾಣಗಳು** - ವೈಷ್ಣವ, ನಾರದೀಯ, ಭಾಗವತ, ಗರುಡ, ಪದ್ಮ, ವಾರಾಹ. **ಆರು ರಾಜಸ ಪುರಾಣಗಳು** - ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ, ಬ್ರಾಹ್ಮ. **ಆರು ತಾಮಸ ಪುರಾಣಗಳು :** ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಂದ, ಅಗ್ನಿ.

**ಹದಿನೆಂಟು ವಿದ್ಯೆಗಳು** - ಹದಿನಾಲ್ಕು ವಿದ್ಯೆಗಳು (ಹದಿನಾಲ್ಕನೆಯ ಅಂಕಿಯಲ್ಲಿ ಕೊಟ್ಟಿದೆ) + ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ.

ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೈವ ತೇ ತ್ರಯಃ।
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತು ॥

-ವಾಯು ಪೂರ್ವಾರ್ಧ೩.೬೧.

**ಹದಿನೆಂಟು ಸಿದ್ಧಿಗಳು :** ಎಂಟು ಸ್ವಾಭಾವಿಕ ಸಿದ್ಧಿಗಳು - ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತಾ, ವಶಿತ್ವ + ಹತ್ತು ಗುಣ ಮೂಲಕ ಸಿದ್ಧಿಗಳು : ಅನೂರ್ಮಿಮತ್ವ, ದೂರಶ್ರವಣ, ದೂರದರ್ಶನ, ಮನೋಜವ, ಕಾಮನಾಸಿದ್ಧಿ, ಪರಕಾಯ ಪ್ರವೇಶ, ಸ್ವೇಚ್ಛಾಮರಣ, ಸುರಕ್ರೀಡಾ ದರ್ಶನ, ಸಂಕಲ್ಪಸಿದ್ಧಿ, ಅಕುಂಠಿತತಾ.

ಸಿದ್ಧಯೋಽಷ್ಟಾದಶ ಪ್ರೋಕ್ತಾ ಧಾರಣಾ ಯೋಗಪಾರಗೈಃ ।
ತಾಸಾಮಷ್ಟೌ ಮತ್ ಪ್ರಧಾನಾ ದಶೈವ ಗುಣಹೇತವಃ ॥ -ಭಾಗ ೧೧.೧೫.೩.

### ೨೪. ಇಪ್ಪತ್ತು ನಾಲ್ಕು (ಚತ್ವಾರಿಂಶತ್)

೨೪ ಅಕ್ಷರಗಳ ಗಾಯಿತ್ರೀ : ಓಂ, ತ, ತ್ಸ, ವಿ, ತು, ವ, ರೇ, ಣ್ಯಂ
ಭ, ರ್ಗೋ, ದೇ, ವ, ಸ್ಯ, ಧೀ, ಮ, ಹೀ ಧಿ,
ಯೋ, ಯೋ ನಃ ಪ್ರಚೋದಯಾತ್ ।

**ಪರಮಾತ್ಮನ ೨೪ ಲೀಲಾವತಾರಗಳು :** ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ನಾರಾಯಣ, ಶೌನಕ, ನಾರದ, ಸ್ವಾಯಂಭೂ, ಕಪಿಲ, ದತ್ತಾತ್ರೇಯ, ಋಷಭದೇವ, ಹಂಸ, ಹಯಗ್ರೀವ, ಪೃಥುರಾಜಾ, ಧ್ರುವ, ಧನ್ವಂತರೀ, ಮೋಹಿನೀ, ಮತ್ತು ವ್ಯಾಸ. -(ಭಾಗ ೧.೩.)

**೨೪ ಏಕಾದಶಿಗಳು :** ಕಾಮದಾ, ವರೂಥಿನೀ (ಚೈತ್ರಮಾಸದಲ್ಲಿ); ಮೋಹಿನೀ, ಅಪರಾಜಿತಾ (ವೈಶಾಖ ಮಾಸದಲ್ಲಿ); ನಿರ್ಜಲಾ, ಯೋಗಿನೀ (ಜ್ಯೇಷ್ಠದಲ್ಲಿ); ಶಯನೀ, ಕಾಮಿಕಾ (ಆಷಾಢ ಮಾಸ); ಪುತ್ರದಾ, ಅಜಾ (ಶ್ರಾವಣಮಾಸ); ಪರಿವರ್ತಿನೀ, ಇಂದಿರಾ (ಭಾದ್ರಪದ ಮಾಸ); ಪಾಶಾಂಕುಶಾ, ರಮಾ (ಅಶ್ವೀನ ಮಾಸ); ಪ್ರಬೋಧಿನೀ, ಉತ್ಪತ್ತಿ (ಕಾರ್ತಿಕಮಾಸ); ಮೋಕ್ಷದಾ, ಸಫಲಾ (ಮಾರ್ಗಶೀರ್ಷ); ಪುತ್ರದಾ, ಷಟ್ತಿಲಾ (ಪುಷ್ಯ); ಜಯಾ, ವಿಜಯಾ (ಮಾಘ); ಆಮಲಕೀ, ಪಾಪ ಮೋಚನೀ (ಫಾಲ್ಗುಣ).

**೨೪ ಗುರುಗಳು ಮತ್ತು ಅನ್ಯರಿಂದ ಪಡೆಯಬಹುದಾದ ಗುಣ :**

**ಪೃಥ್ವೀ** - ಕ್ಷಮಾಗುಣ ಮತ್ತು ಪರೋಪಕಾರಿತ್ವ, **ವಾಯು** - ನಿರ್ಲೇಪತಾ, **ಆಕಾಶ** - ಎಲ್ಲೆಡೆ ವ್ಯಾಪಿಸಿದ್ದರೂ ಸಂಗವಿಲ್ಲದಂತಿರುವುದು, **ಉದಕ** - ಸ್ವಚ್ಛತೆ ಮತ್ತು ಪಾವಿತ್ರ್ಯ, **ಅಗ್ನಿ** - ತೇಜಸ್ವಿತಾ, **ಚಂದ್ರ** - ಆತ್ಮನು ಅವಿನಾಶಿ ಮತ್ತು ವಿಕಾರವು ದೇಹಕ್ಕಿರುವುದು ಎಂಬ ಜ್ಞಾನ, **ಸೂರ್ಯ** - ಪರಮಾತ್ಮನಿಂದ ಜೀವ ಭಿನ್ನ. **ಕಪೋತ** - ಅತ್ಯಾಸಕ್ತಿಯು ನಾಶಕ್ಕೆ ಕಾರಣ, **ಅಜಗರ** - ನಿರಾಲಸ್ಯ ಉದಾಸೀನತೆ, **ಸಮುದ್ರ** - ಸದಾ ಸ್ಥಿರ, **ಪತಂಗ** - ಬಾಹ್ಯ ಸ್ವರೂಪಕ್ಕೆ ಮರುಳಾಗದಿರುವುದು. **ಮಧುಕರ** - ಗುಣಕ್ಕೆ ಮರುಳಾದರೆ ನಾಶ ನಿಶ್ಚಿತ, **ಆನೆ** - ವಿಷಯ ಲಂಪಟರಾದರೆ ನಾಶ ನಿಶ್ಚಿತ, **ಮಧುಮಕ್ಷಿಕಾ** - ಉಪಭೋಗಿಸದೆ ಸಂಗ್ರಹಿಸಲ್ಪಟ್ಟಿದ್ದು ನಾಶವಾಗುವುದು, **ಚಿಗರಿ** - ನಾದಕ್ಕೆ ಮೋಹಿತರಾದರೆ ನಾಶ ನಿಶ್ಚಿತ, **ಮೀನ** - ರಸನೇಂದ್ರಿಯವನ್ನು ನಿಗ್ರಹಿಸದಿದ್ದರೆ ಮರಣ ನಿಶ್ಚಿತ, **ಪಿಂಗಲಾ ವೇಶ್ಯಾ** - ಆಶೆಯಿಂದ ದುಃಖ, ನಿರಾಶೆಯಿಂದ ಸುಖ. **ಕುರರ ಪಕ್ಷೀ** - ಪ್ರಿಯ ವಸ್ತುವಿನ ತ್ಯಾಗ. **ಬಾಲಕ** - ಚಿಂತಾ ಶೂನ್ಯತೆ. **ಕುಮಾರೀ** - ಒಬ್ಬಂಟಿಗಳಾಗಿರುವುದು. **ಶರಕೃತ** - ಮನಸ್ಸಿನ ಏಕಾಗ್ರತೆ. **ಸರ್ಪ** - ಸಂಗರಾಹಿತ್ಯ, ಒಂಟಿಯಾಗಿ ಸಂಚರಿಸುವುದು. **ಜೇಡರ ಹುಳ** - ಏಕಾಂಗಿಯಾಗಿರುವುದು ಮತ್ತು ಪರಮಾತ್ಮನು ಸೃಷ್ಟಿ ಸಂಹಾರಗಳನ್ನು ಮಾಡುವ ಜ್ಞಾನ. **ಕುರುಡೀ ಕುಟಾರ ಹುಳ** - ಧ್ಯಾನಸಾಮರ್ಥ್ಯ - (ಭಾಗ. ೧೧. ಅ.೭.೩೪.)

**ವಿಷ್ಣುವಿನ ೨೪ ನಾಮಗಳು** - ಕೇಶವನಿಂದ ಶ್ರೀಕೃಷ್ಣನವರೆಗಿನ ೨೪ ಹೆಸರುಗಳು.

**ಮಂತ್ರಗಳ ೨೪ ಭೇದಗಳು :** ಪ್ರಶಂಸಾ, ಸ್ತುತಿ, ಆಕ್ರೋಶ, ನಿಂದಾ, ಪರಿದೇವನಾ, ಅಭಿಶಾಪ, ವಿಶಾಪ, ಪ್ರಶ್ನ, ಪ್ರತಿವಚನ, ಆಶೀ, ಯಜ್ಞ, ಆಕ್ಷೇಪ, ಅರ್ಥಾಖ್ಯಾನ, ಸಂಕಥಾ, ವಿಯೋಗ, ಅಭಿಯೋಗ, ಕಥಾ, ಸಂಖ್ಯಾ, ವರಪ್ರದಾನ, ಪ್ರತಿಬಂಧ, ಉಪದೇಶ, ನಮಸ್ಕಾರ, ಸ್ಪೃಹಾ ಮತ್ತು ವಿಲಾಪ - (ಬ್ರಹ್ಮಾಂಡ ಪು.ಅ. ೩೩.೩೪)

## ೨೫. ಇಪ್ಪತ್ತೈದು (ಪಂಚವಿಂಶತಿ)

**೨೫ ತತ್ತ್ವಗಳು :**

### ೨೬. ಇಪ್ಪತ್ತಾರು (ಷಟ್ತ್ರಿಂಶತಿ)

**ದೈವೀ ಸಂಪತ್ತಿನ ಇಪ್ಪತ್ತಾರು ಲಕ್ಷಣಗಳು :** ಅಭಯ, ಚಿತ್ತ ಪ್ರಸನ್ನತೆ, ಜ್ಞಾನೋಪಾಯ ನಿಷ್ಠೆ, ಸತ್ಪಾತ್ರರಲ್ಲಿ ದಾನ, ಇಂದ್ರಿಯ ನಿಗ್ರಹ, ಯಜ್ಞ, ವೇದಾಧ್ಯಯನ, ಬ್ರಹ್ಮಚರ್ಯಾದಿ ತಪ, ಮನೋ ವಾಕ್ ಕರ್ಮಗಳಲ್ಲಿ ಏಕರೂಪತೆ, ಅಹಿಂಸಾ, ಸತ್ಯವಚನ, ಅಕ್ರೋಧ, ಔದಾರ್ಯ (ತ್ಯಾಗ), ಶಾಂತಿ (ಭಗವನ್ನಿಷ್ಠತಾ), ಅಪೈಶುನ (ಚಾಡಿ ಹೇಳದಿರುವುದು), ದಯಾ, ವಿಷಯಗಳಲ್ಲಿ ರಾಗಾಭಾವ (ನಿರ್ಲೋಭತಾ), ಮಾರ್ದವ, ಅಕಾರ್ಯಕರಣದಲ್ಲಿ ಲಜ್ಜಾ, ಸ್ಥೈರ್ಯ, ತೇಜಸ್ವಿತಾ, ಕ್ಷಮಾ, ಧೃತಿ, ಅಂತರ ಬಾಹ್ಯ ಶೌಚ, ಅದ್ರೋಹ, ಮತ್ತು ಅಹಂಕಾರ ರಾಹಿತ್ಯ.

- ಭಗ. ಗೀತಾ. ಅ. ೧೬.೧.೩.

### ೨೭. ಇಪ್ಪತ್ತೇಳು (ಸಪ್ತ ವಿಶಂತಿ)

**೨೭ ನಕ್ಷತ್ರಗಳು :** ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಘಾ, ಪೂರ್ವಾ, ಉತ್ತರಾ, ಹಸ್ತಾ, ಚಿತ್ತಾ, ಸ್ವಾತೀ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ, ಶ್ರವಣಾ, ಧನಿಷ್ಠಾ, ಶತತಾರಕಾ, ಪೂರ್ವಾಭಾದ್ರಪದಾ, ಉತ್ತರಾಭಾದ್ರಪದಾ, ಮತ್ತು ರೇವತಿ.

**ಅಭೀಷ್ಟ ಸಿದ್ಧಿಗಾಗಿ ಭಜಿಸಬೇಕಾದ ೨೭ ದೇವತೆಗಳು**

೧. ಬ್ರಹ್ಮವರ್ಚಸ್ಸು - ಬ್ರಹ್ಮದೇವರು
೨. ಇಂದ್ರಿಯ ಪಟುತ್ವ - ಇಂದ್ರದೇವರು
೩. ಪ್ರಜಾಕಾಯ - ದಕ್ಷಾದಿ ಪ್ರಜಾಪತಿಗಳು
೪. ಭೋಜನಕಾಮ - ದಿತಿದೇವಿಯರು
೫. ವರ್ಣಕಾಮ - ಆದಿತ್ಯ
೬. ರಾಜ್ಯಕಾಮ - ವಿಶ್ವೇದೇವತೆಗಳು, ಮನುಗಳು
೭. ದೇಶ, ಪ್ರಜಾಸ್ವಾಧೀನ - ಸಾಧ್ಯರು
೮. ಶ್ರೀಕಾಮ (ಸಂಪತ್ತು) - ದುರ್ಗಾದೇವಿ
೯. ತೇಜಃ ಕಾಮ - ಅಗ್ನಿದೇವರು
೧೦. ಧನಕಾಮ - ಅಷ್ಟವಸುಗಳು
೧೧. ವೀರ್ಯಕಾಮ - ರುದ್ರ ದೇವರು
೧೨. ಆಯುಷ್ಯ - ಅಶ್ವಿನೀ ದೇವತೆಗಳು
೧೩. ಪುಷ್ಟಿಕಾಮ - ಭೂದೇವೀ
೧೪. ಪ್ರತಿಷ್ಠಾಕಾಮ - ಗಗನ, ಭೂದೇವತೆಗಳು
೧೫. ಸರ್ವಾಧಿಪತ್ಯ - ಬ್ರಹ್ಮದೇವರು

೧೬. ಕೀರ್ತಿಕಾಮ - ಶ್ರೀವಿಷ್ಣು
೧೭. ಆಸ್ತಿ ಕಾಮ - ಪ್ರಚೇತಸರು
೧೮. ವಿದ್ಯಾಕಾಮ - ಉಮಾಪತಿ ರುದ್ರದೇವರು
೧೯. ದಾಂಪತ್ಯ ಪ್ರೀತಿಕಾಮ - ಉಮಾದೇವಿಯರು
೨೦. ಧರ್ಮಕಾಮ - ಶ್ರೀವಿಷ್ಣು
೨೧. ಸಂತಾನಕಾಮ - ಪಿತೃದೇವತೆಗಳು
೨೨. ರಕ್ಷಕಾಮ - ಯಕ್ಷರು
೨೩. ಸೌಂದರ್ಯಕಾಮ - ಗಂಧರ್ವರು
೨೪. ಸ್ತ್ರೀ ಕಾಮ - ಊರ್ವಶ್ಯಾದಿ ಅಪ್ಸರಾ ಸ್ತ್ರೀಯರು
೨೫. ಬಲರಾಮ - ಮರುದ್ಗಣಗಳು
೨೬. ಶತ್ರು ಮರಣ - ಗೋಪಾಲ
೨೭. ಭೋಗಕಾಮ - ಚಂದ್ರ

### ೩೨. ಮೂವತ್ತೆರಡು (ದ್ವಾತ್ರಿಂಶತ್)

**ಮನುಷ್ಯ ಶರೀರದ ಮೂವತ್ತೆರಡು ಲಕ್ಷಣಗಳು :**

ಪಂಚಸೂಕ್ಷ್ಮಃ ಪಂಚ ದೀರ್ಘಃ ಸಪ್ತ ರಕ್ತಃ ಷಡುನ್ನತಃ ।
ತ್ರಿಃ ಪೃಥುರ್ಲಘು ಗಂಭೀರೋ ದ್ವಾತ್ರಿಂಶಲ್ಲಕ್ಷಣಃ ಪುಮಾನ್ ॥

**ಮೂವತ್ತೆರಡು ಅಪರಾಧಗಳು :** ೧. ಊಟ ಮಾಡಿ ಪೂಜೆ, ೨. ನೀರು ಕುಡಿದು ಪೂಜೆ, ೩.ಹಲ್ಲುಜ್ಜದೇ ದೇವರ ಮನೆಗೆ ಹೋಗುವುದು, ೪. ಭೋಗಿಸಿದ ಮೇಲೆ ಪೂಜೆ, ೫. ಶವಸ್ಪರ್ಶ ಮಾಡಿ ಹಾಗೆಯೇ ದೇವರ ಪೂಜೆ, ೬. ಪೂಜೆ ಮಧ್ಯೆ ಮಲವಿಸರ್ಜನೆ, ೭.ಮೂತ್ರ ವಿಸರ್ಜನೆ, ೮. ಕಣ್ಣೀರು ಸುರಿಸುತ್ತ ಮಾತನಾಡುವುದು, ೯.ಕಪ್ಪುಬಟ್ಟೆ ಉಟ್ಟುಕೊಂಡು ದೇವರ ಪೂಜೆ, ೧೦. ರಾಜಾನ್ನ ಭೋಜನ, ೧೧. ದೂರ ನಿಂತು ಪೂಜೆ, ೧೨. ಆಚಮನ ಮಾಡದೆ ಪೂಜೆ, ೧೩. ಕೋಪಿಸುವುದು, ೧೪. ನಿಷಿದ್ಧ ಪುಷ್ಪಗಳಿಂದ (ಬಿಂದಿಗೆ ಹೂವು ಇತ್ಯಾದಿ) ಪೂಜೆ, ೧೫. ಕಾವೀಬಟ್ಟೆ, ಕೌಪೀನ ಧಾರಣೆ, ೧೬. ಕರೀ ಬಟ್ಟೆ, ಕೌಪೀನ ಧಾರಣೆ, ೧೭. ಕತ್ತಲೆಯಲ್ಲಿ ಪ್ರತಿಮಾದಿ ಸ್ಪರ್ಶ ಮಾಡುವುದು, ೧೮. ಕಾಮುಕತೆ, ೧೯. ಕರಿವಸ್ತ್ರ ಉಪಯೋಗ, ೨೦.ನಾಯಿಯನ್ನು ಮುಟ್ಟುವುದು, ೨೧. ಹಂದಿ ಮಾಂಸ ಭಕ್ಷಣೆ, ೨೨. ತುದಿಕಾಲಿನ ಆಸನ, ೨೩. ಕೆಸರು ತುಳಿದ ಕಾಲಿನಿಂದ ದೇವರ ಮನೆಯೊಳಗೆ ಹೋಗುವುದು, ೨೪.ಚಿತಾಸ್ಪರ್ಶ ಮಾಡಿ ಸ್ನಾನವನ್ನು ಮಾಡದಿರುವುದು, ೨೫. ಹಿಂಡಿಯನ್ನು ತಿನ್ನುವುದು, ೨೬.ಹಂದಿ ಮಾಂಸವನ್ನು ದೇವರಿಗೆ ಅರ್ಪಿಸುವುದು, ೨೭. ಮದ್ಯಪಾನ, ೨೮. ಕುಸುಂಬೆ ಹೂವನ್ನು ತಿನ್ನುವುದು, ೨೯. ಪುಷ್ಪವನ್ನು ಅರ್ಪಿಸದೆ ಧೂಪಾರತಿ ಮಾಡುವುದು. ೩೦. ಪಾದರಕ್ಷೆ

ಹಾಕಿಕೊಂಡು ಉತ್ಸವ ಮೂರ್ತಿಯನ್ನು ಹೊರುವುದು. ೩೧. ನಗಾರಿ ಬಾರಿಸುವವನಲ್ಲದೇ ಇತರ ಶೂದ್ರಾದಿಗಳನ್ನು ದೇವರ ಬಳಿಗೆ ಬಿಡುವುದು. ೩೨. ಜೀರ್ಣಸದ ಅನ್ನದ ನಿವೇದನೆ. (ಸುಮಧ್ವ ವಿಜಯ ಸರ್ಗ ೧೪)

### ೩೩. ಮೂವತ್ತು ಮೂರು (ತ್ರಯಸ್ತ್ರಿಂಶತ್)

ಮೂವತ್ತು ಮೂರು ದೇವತೆಗಳು : ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಅದಿತ್ಯರು, ಒಬ್ಬ ಇಂದ್ರ ಮತ್ತು ಒಬ್ಬ ಪ್ರಜಾಪತಿ.

ಈ ಮೂವತ್ತು ಮೂರು ದೇವತೆಗಳಲ್ಲಿ ಒಬ್ಬೊಬ್ಬ ದೇವತೆಯ ಒಂದೊಂದು ಕೋಟಿ ಸಮುದಾಯವೆಂದು ಪರಿಗಣಿಸಿ ಪುರಾಣಗಳಲ್ಲಿ ಮೂವತ್ತು ಮೂರು ಕೋಟಿ ದೇವತೆಗಳೆಂದು ಹೇಳಲಾಗುತ್ತದೆ.

### ೩೬. ಮೂವತ್ತಾರು (ಷಡ್ ತ್ರಿಂಶತ್)

ಭಕ್ತನ ಮೂವತ್ತಾರು ಲಕ್ಷಣಗಳು :

ಅದ್ವೇಷ್ಟಾ, ಎಲ್ಲರ ಮಿತ್ರ, ಕೃಪಾಳು, ಮಮತ್ವಶೂನ್ಯ, ನಿರಹಂಕಾರೀ, ಸುಖ ದುಃಖ ಸಮಾನ, ಕ್ಷಮಾಶೀಲ, ಸಂತುಷ್ಟ, ಯೋಗೀ, ಸಂಯಮೀ, ದೃಢನಿಶ್ಚಯೀ, ಮನಸ್ಸು ಮತ್ತು ಬುದ್ಧಿಯನ್ನು ಈಶ್ವರಾರ್ಪಣೆ ಮಾಡಿದವ, ಜನರಿಂದ ಉದ್ವೇಗ ಹೊಂದದವ, ಜನರನ್ನು ಉದ್ವೇಗಗೊಳಿಸದವ, ಹರ್ಷ - ಕ್ರೋಧ - ಭಯ - ವಿಷಾದಗಳಿಂದ ಅಲಿಪ್ತ, ನಿರಪೇಕ್ಷ, ಶುಚಿರ್ಭೂತ, ದಕ್ಷ, ಫಲ ವಿಷಯದಲ್ಲಿ ಉದಾಸೀನ, ವ್ಯಥಾರಹಿತ, ಸಕಾಮಕರ್ಮ ಮಾಡದವ, ದ್ವೇಷ ಮಾಡದವ, ದುಃಖಿಸದವ, ಫಲೇಚ್ಛಾ ರಹಿತ, ಶುಭಾಶುಭತ್ಯಾಗೀ, ಭಕ್ತಿಮಾನ್, ಶತ್ರುಮಿತ್ರ ಸಮಾನ, ಮಾನಾಪಮಾನ ಸಮಾನ, ಶೀತೋಷ್ಣ ಸುಖದುಃಖ ಸಮಾನ, ಅನಾಸಕ್ತ, ನಿಂದಾ ಸ್ತುತಿ ಸಮಾನ, ಮಿತಭಾಷೀ, ಸಿಕ್ಕದ್ದರಲ್ಲೇ ಸಂತುಷ್ಟ, ಕರ್ಮಫಲಾಶಾ ರಹಿತ, ಸ್ಥಿರಮತಿ.

- ಭ. ಗೀ. ಅ. ೧೨.

### ೩೭. ಮೂವತ್ತೇಳು (ಸಪ್ತತ್ರಿಂಶತ್)

ಮೂವತ್ತೇಳು ಸರ್ವಮೂಲಗ್ರಂಥಗಳು

### ೪೯. ನಾಲ್ವತ್ತೊಂಬತ್ತು - ೪೯ ಮರುದ್ಗಣಗಳು

### ೫೧. ಐವತ್ತೊಂದು

'ಅ'ಜಾದಿ ಭಗವಂತನ ೫೧ ರೂಪಗಳು

| | | | | | |
|---|---|---|---|---|---|
| ಅ | - ಅಜ | ಊ | - ಊರ್ಜ | ಏ | - ಏಕಾತ್ಮ |
| ಆ | - ಆನಂದ | ಋ | - ಋತುಂಭರ | ಐ | - ಐರ |
| ಇ | - ಇಂದ್ರ | ೠ | - ೠಘ | ಓ | - ಓಜೋಭೃತ |
| ಈ | - ಈಶಾನ | ಌ | - ಌಶ | ಔ | - ಔರದ |
| ಉ | - ಉಗ್ರ | ೡ | - ೡಜ | ಅಂ | - ಅನಂತ |

| | | | | | |
|---|---|---|---|---|---|
| ಅಃ | - ಅರ್ಧಗರ್ಭ | ಠ | - ಠಲಕ | ಭ | - ಭಗ |
| ಕ | - ಕಪಿಲ | ಡ | - ಡರಕ | ಮ | - ಮನ |
| ಖ | - ಖಪತಿ | ಢ | - ಢರಿಣ | ಯ | - ಯಜ್ಞ |
| ಗ | - ಗರುಡಾಸನ | ಣ | - ಣಾತ್ಮ | ರ | - ರಾಮ |
| ಘ | - ಘರ್ಮ | ತ | - ತಾರ | ಲ | - ಲಕ್ಷ್ಮೀಪತಿ |
| ಙ | - ಙಸಾರ | ಥ | - ಥಬ | ವ | - ವರಾಹ |
| ಚ | - ಚಾರ್ವಾಂಗ | ದ | - ದಂಡಿ | ಶ | - ಶಾಂತಸವಿತ್ |
| ಛ | - ಛಂದೋಗಮ್ಯ | ಧ | - ಧನ್ವಿ | ಷ | - ಷಡ್ಗುತಾತ್ಮ |
| ಜ | - ಜನಾರ್ದನ | ನ | - ನಮ್ಯ | ಸ | - ಸಾರಾತ್ಮ |
| ಝ | - ಝಟತಾರ | ಪ | - ಪರ | ಹ | - ಹಂಸ |
| ಞ | - ಯಮ | ಫ | - ಫಲಿ | ಳ | - ಳಾಳುಕ |
| ಟ | - ಟಂಕಿ | ಬ | - ಬಲಿ | ಕ್ಷ | - ಶ್ರೀಲಕ್ಷ್ಮೀನರಸಿಂಹ |

**೬೦. ಅರವತ್ತು (ಷಷ್ಟಿ)** - ಅರವತ್ತು ಸಂವತ್ಸರಗಳು.

**೬೪. ಅರವತ್ನಾಲ್ಕು (ಚೌಷಷ್ಟಿ)**

ಅರವತ್ನಾಲ್ಕು ಕಲೆಗಳು

**೬೮. ಅರವತ್ತೆಂಟು (ಅಷ್ಟಷಷ್ಟಿ)**

ಅಖಿಲ ಭಾರತದಲ್ಲಿರುವ ಅರವತ್ತೆಂಟು ತೀರ್ಥಕ್ಷೇತ್ರಗಳು

**೧೦೦. ನೂರು (ಶತ)**-ಮನುಷ್ಯನ ಆಯುಷ್ಯ ನೂರು ವರ್ಷ (ಶತಾಯುರ್ವೈ ಪುರುಷಃ)

**೧೦೮. ನೂರೆಂಟು** - ಉಪನಿಷತ್ತುಗಳು

**೧೦೦೦. ಸಾವಿರ (ಸಹಸ್ರ)**- ವಿಷ್ಣುವಿನ ಸಹಸ್ರ ನಾಮಗಳು

**೨೧೬೦೦** - ಮನುಷ್ಯನು ಪ್ರತಿನಿತ್ಯ ಮಾಡುವ ಶ್ವಾಸೋಚ್ಛ್ವಾಸದ ಸಂಖ್ಯೆಗಳು

೭೨೦೦೦ ನಾಡಿಗಳು

೮೪ ಲಕ್ಷ ಯೋನಿಗಳು

**೩.೫ ಕೋಟಿ** ರೋಮಗಳು

(ತಿಸ್ರಃ ಕೋಟ್ಯರ್ಧ ಕೋಟೀ ಚ ಯಾನಿ ಲೋಮಾನಿ ಮಾನವೇ!)

ಅನಂತ - ಪರಮಾತ್ಮ, ಪರಮಾತ್ಮನ ನಾಮ, ಗುಣ ಮಹಿಮಾದಿಗಳು

## ಪರಿಶಿಷ್ಟ - ೮

## ಪಂಚಗವ್ಯಮೇಲನಂ, ಪ್ರಾಶನಂ ಚ

**ಪಂಚಗವ್ಯಮೇಲನಂ ಪ್ರಾಶನಂ ಚ** – ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ । ಶರೀರ ಶುದ್ಧ್ಯರ್ಥಂ ಶ್ರೀವಿಷ್ಣುಪ್ರೀತ್ಯರ್ಥಂ ಪಂಚಗವ್ಯಮೇಲನಂ ಪ್ರಾಶನಂ ಚ ಕರಿಷ್ಯೇ । **ಗಾಯತ್ರ್ಯಾ ಗೋಮೂತ್ರಂ** ॥ ಓಂ ಭೂರ್ಭುವಃ ಸ್ವಃ, ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ॥ ಧಿಯೋ ಯೋ ನಃ ಪ್ರಚೋದಯಾತ್ ॥ **ಗಂಧದ್ವಾರಾಮಿತಿ ಗೋಮಯಂ** ॥ ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ॥ ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥ **ಆಪ್ಯಾಯಸ್ವಸಮೇತಿ ಪಯಃ** ॥ ಓಂ ಅಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ । ಭವಾ ವಾಜಸ್ಯ ಸಂಗಥೇ ॥ **ದಧಿಕ್ರಾವ್ಣ ಇತಿ ದಧಿ** ॥ ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋ ರಶ್ವಸ್ಯ ವಾಜಿನಃ । ಸುರಭಿ ನೋ ಮುಖಾಕರತ್ ಪ್ರಣ ಆಯೂಂಷಿತಾರಿಷತ್ ॥ **ಶುಕ್ರಮಸೀತಿ ಘೃತಂ** ॥ ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ॥ ಓಂ ದೇವಸ್ಯತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ॥ **ಇತಿ ಕುಶೋದಕಂ** ॥ ಓಂ ಇತಿ ಪ್ರಣವೇನಾಲೋಡನಂ, ದಿಕ್ಷು ವಿಕ್ಷೇಪಶ್ಚ ॥ ಆಪೋಹಿಷ್ಠೇತಿ ತೃಚೇನಾಭಿಮಥ್ನೀಯಾತ್ ॥

***

**ಮರದ ಬಾಗಿನ ಕೊಡುವಾಗ ಹೇಳುವ ಮಂತ್ರ**

ರಾಮಪತ್ನಿ ಮಹಾಭಾಗೇ ಪುಣ್ಯಮೂರ್ತೇ ನಿರಾಮಯೇ ।
ಗ್ರಹಾಣೇಮಾನಿ ಶೂರ್ಪಾಣಿ ಮಯಾ ದತ್ತಾನಿ ಜಾನಕಿ ॥

## ಪರಿಶಿಷ್ಟ - ೬

# ಸಂಕ್ಷಿಪ್ತ ಯಜ್ಞೋಪವೀತಧಾರಣವಿಧಿಃ

**ಸಂಕಲ್ಪಃ**

(ದ್ವಿರಾಚಮ್ಯ, ಪ್ರಾಣಾನಾಯಮ್ಯ, ದೇಶಕಾಲಾದೀನುಚ್ಚಾರ್ಯ) ಶ್ರೌತಸ್ಮಾರ್ತ ಕರ್ಮಾನುಷ್ಠಾನಯೋಗ್ಯತಾಸಿದ್ಧ್ಯರ್ಥಂ [ಜಾತಾಽಶೌಚಮೃತಾಽಶೌಚಾದಿಶುದ್ಧ್ಯರ್ಥಂ] ಯಜ್ಞೋಪವೀತಧಾರಣಮಹಂ ಕರಿಷ್ಯೇ ॥ (ಇತಿ ಸಂಕಲ್ಪ್ಯ, ದೇವಾರ್ಪಿತಂ ಉಪವೀತಂ ಗೃಹೀತ್ವಾ ದಶವಾರಂ ಗಾಯತ್ರೀಂ ಜಪೇತ್ ॥)

ಓಂ ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ ॥ ಓಮ್ ॥ (ಇತಿ ಮಂತ್ರೇಣ ಭೂಮೌ ಮಂಡಲೋಪರಿ ನಿಕ್ಷಿಪ್ಯ)

**ತಂತುದೇವತಾಽಽವಾಹನಮ್**

ಓಂಕಾರೋಽಗ್ನಿಶ್ಚ ನಾಗಶ್ಚ ಸೋಮಃ ಪಿತೃಪ್ರಜಾಪತೀ । ವಾಯುಸೂರ್ಯೌ ವಿಶ್ವೇದೇವಾ ಇತ್ಯೇತಾಸ್ತಂತುದೇವತಾಃ । ತಂತುದೇವತಾ ಆವಾಹಯಾಮಿ ॥ (ಇತಿ ತಂತುದೇವತಾ ಆವಾಹ್ಯ ಷೋಡಶೋಪಚಾರಾನ್ ಕುರ್ಯಾತ್ । 'ಅಪೋಹಿಷ್ಠೇ'ತಿ ತಿಸೃಭಿಃ ಪ್ರೋಕ್ಷ್ಯ, ದಶವಾರಂ ಗಾಯತ್ರೀಂ ಜಪೇತ್ ॥)

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್ ॥ ಓಮ್ ॥ (ಇತಿ ಮಂತ್ರೇಣ ಉದ್ಧೃತ್ಯ)

**ಸೂರ್ಯೋಪಸ್ಥಾನಮ್**

ಓಂ ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥ ಓಮ್ ॥ (ಇತಿ ಪೂರ್ವಾಭಿಮುಖಸ್ತಿಷ್ಠನ್ ಪ್ರಾಂಜಲಿರ್ಭೂತ್ವಾ ಜಪೇತ್ ॥)

**ಧಾರಣಮ್**

ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥ ಓಂ ॥ (ಇತಿ ತ್ರಿವಾರಮುಕ್ತ್ವಾ ಧಾರಯೇತ್ । ಆಚಮ್ಯ, ದಶವಾರಂ ಗಾಯತ್ರೀಂ ಜಪೇತ್ ॥) (ಯಜ್ಞೋಪವೀತವನ್ನು ಒಂದಕ್ಕಿಂತ ಹೆಚ್ಚು ಧಾರಣ ಮಾಡುವವರು ಪ್ರತಿಯೊಂದನ್ನು ಧರಿಸುವಾಗಲೂ ಆಚಮನ ಮಾಡಿ ಈ ಮಂತ್ರ ಹೇಳುತ್ತ ಧರಿಸತಕ್ಕದ್ದು.)

**ಜೀರ್ಣೋಪವೀತವಿಸರ್ಜನಮ್**

ಉಪವೀತಂ ಭಿನ್ನತಂತುಂ ಜೀರ್ಣಂ ಕಶ್ಮಲದೂಷಿತಮ್ । ವಿಸೃಜಾಮಿ ಜಲೇ ಬ್ರಹ್ಮವರ್ಚೋ ದೀರ್ಘಾಯುರಸ್ತು ಮೇ ॥ (ಇತಿ ಜೀರ್ಣೋಪವೀತಂ ವಿಸೃಜ್ಯ ಆಚಾಮೇತ್ । ನಾಮತ್ರಯಂ ಜಪೇತ್ ॥)

॥ ಇತಿ ಸಂಕ್ಷಿಪ್ತಯಜ್ಞೋಪವೀತಧಾರಣ ವಿಧಿಃ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಪರಿಶಿಷ್ಟ - ೧೦

## ಗ್ರಂಥಋಣ

೧) ಶ್ರೀವಿಜಯದಾಸರ ತೀರ್ಥಕ್ಷೇತ್ರ ಮಹಿಮಾ ೨)ತಾರತಮ್ಯಸಾರ ೩)ಶ್ರೀವಿಜಯದಾಸರ ಪದಗಳು ಭಾಗ-೨. ೪) ಶ್ರೀವಿಜಯದಾಸಾರ್ಯಾದಿಗಳ ಉಪಾಸನಾ ಭಾಗ. ೫) ಶ್ರೀಹರಿಭಜನಾಮೃತಸಾರ (೧-೫ ಶ್ರೀವರದೇಂದ್ರ ಹರಿದಾಸಸಾಹಿತ್ಯ ಮಂಡಲ ಲಿಂಗಸುಗೂರು). ೬) ಕನ್ನಡ ಭಾಮಿನಿ ಶ್ರೀಮದಣುಮಧ್ವವಿಜಯ.- ಶ್ರೀಹನುಮಂತರಾವ ವಕೀಲ ಗೋರಾಬಾಳ. ೭) ತಾರತಮ್ಯೋಕ್ತ ಉದಯ ರಾಗ - ಶ್ರೀನಿವಾಸಾಚಾರ್ಯ ಹೊಂಬಾಳಿ ಗದಗ, ೮) ಶ್ರೀಪುರಂದರ-ದಾಸರ ಸಾಹಿತ್ಯ ಭಾಗ (೧-೫)- ಶ್ರೀಪುರಂದರದಾಸರ ೪೦೦ನೆಯ ವರ್ಷದ ಉತ್ಸವಮಂಡಳ, ಧಾರವಾಡ. ೯) ಶ್ರೀಜಗನ್ನಾಥದಾಸರ ತತ್ತ್ವಸುವ್ವಾಲಿ. ೧೦) ಶ್ರೀಲಕ್ಷ್ಮೀಶೋಭಾನ ಹಾಡು - ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ. ೧೧) ಶ್ರೀಲಕ್ಷ್ಮೀಶೋಭನ ಪದ - ಶ್ರೀ ಕೆ. ಹಯವದನ ಪುರಾಣಿಕ, ಬೆಂಗಳೂರು. ೧೨) ಶ್ರೀಸುಮಧ್ವವಿಜಯಸುಳಾದಿ- ವ್ಯಾಸಾಶ್ರಮ ಬೆಂಗಳೂರು. ೧೩) ಶ್ರೀರಾಮ-ಚರಿತಾಮೃತ ಸುಂದರಕಾಂಡ. ೧೪) ಶ್ರೀಶ್ರೀಪಾದರಾಜರ ಕೃತಿಗಳು. ೧೫)ಶ್ರೀವಾದಿರಾಜರ ಕೃತಿಗಳು. ೧೬) ಶ್ರೀಗೋಪಾಲದಾಸರ ಕೃತಿಗಳು. ೧೭) ಶ್ರೀಜಗನ್ನಾಥದಾಸರ ಕೃತಿಗಳು. ೧೮) ಹರಪನಹಳ್ಳಿ ಭೀಮವ್ವನ ಹಾಡುಗಳು. (೧೪-೧೮ ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆಗಳು). ೧೯) ಶ್ರೀಮೊದಲುಕಲ್ಲು ಶೇಷದಾಸರು - ಶ್ರೀಗುರುಮಧ್ವರಾವ ಉಸ್ಸಲಿ. ೨೦)ಮಧ್ವಮಂತ್ರರತ್ನಾಕರಃ - ಕುಂಭಕೋಣ. ೨೧) ಶ್ರೀ ಕರ್ನಾಟಕ ಭಕ್ತವಿಜಯ - ಶ್ರೀಬೇಲೂರ ಶ್ರೀಕೇಶವ-ದಾಸರು. ೨೨) ಶ್ರೀಜಗನ್ನಾಥದಾಸರು - ಶ್ರೀ ಟಿ.ಕೆ. ವೇಣು ಗೋಪಾಲದಾಸರು. ೨೩)ಕರ್ನಾಟಕದ ಹರಿದಾಸ ಸಾಹಿತ್ಯ - ವಿದ್ಯಾರತ್ನ ಶ್ರೀ. ರಾ.ಸ್ವಾ. ಪಂಚಮುಖಿ, ಧಾರವಾಡ. ೨೪)ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ - ಶ್ರೀಸುಬೋಧ ರಾಮರಾವ್. ೨೫)ತಾರತಮ್ಯೋಕ್ತಭಜನಾಮೃತ ಕಲಶ - ಶ್ರೀಗುರುರಾಜ ಭಜನಾಮಂಡಳಿ ಕೋಟೆ, ರಾಯಚೂರು. ೨೬) ಭಜನಮಂಜರಿ - ಶ್ರೀಸೋಸಲೆ ನಾರಾಯಣಾಚಾರ್ಯ. ೨೭) ಪಾತಿವ್ರತ್ಯ ಪ್ರದೀಪಿಕಾ - ಪರವಿದ್ಯಾ ಪ್ರಕಾಶನ ಸಗ್ರೀ ರಾಘುವೇಂದ್ರ ಉಪಾಧ್ಯಾಯ ಮೂಡುಸಗ್ರಿ. ೨೮) ವೈಷ್ಣವೀಯ ಸ್ತ್ರೀಧರ್ಮಗಳು- ವಿದ್ವಾನ್ ಕೆ. ಪುಷ್ಕರಾಚಾರ್ಯ. ೨೯) ಸ್ತ್ರೀಯರು ಪಾಲಿಸತಕ್ಕ ಕ್ರಮಗಳು - ದಾಸಮ್ಮಾ ಧಾರವಾಡ. ೩೦) ಸಾಧ್ವೀಸಾಧನಾದರ್ಶ - ಶ್ರೀಮತಿ ಫಲ್ಗೂಬಾಯಿ ಕೃ. ಉಪಾಧ್ಯೆ, ಧಾರವಾಡ. ೩೧) ಸಾಧ್ವೀಸಾಧನಸೋಪಾನ- ಶ್ರೀವಾರಿಧಿ ಪ್ರಕಾಶನ, ಬೆಂಗಳೂರು. ೩೨) ಧರ್ಮಸಿಂಧು. ೩೩) ನಿರ್ಣಯ ಸಿಂಧು. ೩೪) ಶ್ರೀಕೃಷ್ಣಾಚಾರ್ಯರ ಸ್ಮೃತಿ ಮುಕ್ತಾವಳಿ. ೩೫) ಶ್ರೀಹರಿಕಥಾಮೃತಸಾರ. ೩೬) ಶ್ರೀಗುರುಜಗನ್ನಾಥ ದಾಸರ ಕೃತಿಗಳು (ತಿರುಮಲ ತಿರುಪತಿ ದೇವಸ್ಥಾನ ಪ್ರಕಟಣೆ).